K-ಕೇಶವಮೂರ್ತಿ.
M=9481019654.



Vol. VII.] [ಸಂಚಿಕೆ ೭

॥ ಶ್ರೀ ಮಧ್ವನಾಥೋ ವಿಜಯತೇ ॥

ಶ್ರೀಮನ್ಮಧ್ವಾಚಾರ್ಯರ

ಮೂಲಗ್ರಂಥಗಳ ಮಾಲಿಕೆಯ ಸಪ್ತಮಗುಚ್ಛದಲ್ಲಿ

ಭಾರತಗೀತಾ ಪ್ರಸ್ಥಾನದಲ್ಲಿ ಅನೇದಾದ

# ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯ ಸಹಿತ

# ಶ್ರೀಮದ್ಭಗವದ್ಗೀತೆಯು

ದ್ವೈತವೇದಾಂತ ವಿದ್ವಾನ್, ದ್ವೈತವೇದಾಂತ ಶಿರೋಮಣಿ

ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಮಹಾಪಾಠಶಾಲಾ ಪಂಡಿತ

ಅಗ್ರಹಾರ ನಾರಾಯಣ ತಂತ್ರಿಗಳಿಂದ ವಿರಚಿತವಾದ

**ಕನ್ನಡ ಟೀಕಾ ಭಾಷಾಂತರವು.**

ಶ್ರೀ ಶ್ರೀ ೧೦೮ ಶ್ರೀ ಶೀರೂರು ಮಠದ ಶ್ರೀಮಲ್ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರ

ಕನ್ನಡ ಮುನ್ನುಡಿಯು.

ENGLISH INTRODUCTION

*By*

**Vidyabhushana, Dr. B. N. Krishnamoorthi Sarma,** *M. A., Ph. D.*

*Professor of Sanskrit.*

RUPAREL COLLEGE, BOMBAY.




1860ನೇ ಇಸವಿಯ 21ನೇ ಆಕ್ಟಿನ ಮೇರೆಗೆ ರಿಜಿಸ್ಟ್ರಿಯಾಗಿರುವ

ಶ್ರೀ ಮಧ್ವಮುನಿ ಸೇವಾ ಸಂಘ, ಉಡುಪಿ,

ಇವರಿಂದ ಪ್ರಕಾಶಿಸಲ್ಪಟ್ಟಿತು.

ಉಡುಪಿ ಮೆಜೆಸ್ಟಿಕ್ ಪ್ರೆಸ್ಸಿನಲ್ಲಿ ಮುದ್ರಿತವಾಯಿತು.



1954

ಚಂದಾ: (3 ಭಾಗಗಳು ಸೇರಿ) ರೂ. 15-0-0 (ಟಪ್ಪಾಲು ಖರ್ಚು ವಿನಹ)



॥ ಶ್ರೀ ಮಧ್ವನಾಥೋ ವಿಜಯತೇ ॥

ಶ್ರೀಮನ್ಮಧ್ವಾಚಾರ್ಯರ

ಮೂಲಗ್ರಂಥಗಳ ಮಾಲಿಕೆಯ ಸಪ್ತಮಗುಚ್ಛದಲ್ಲಿ

ಭಾರತಗೀತಾ ಪ್ರಸ್ಥಾನದಲ್ಲಿ ಅನೇದಾದ

## ಗೀತಾಭಾಷ್ಯ ಮತ್ತು ಗೀತಾತಾತ್ಪರ್ಯ ಸಹಿತ

# ಶ್ರೀಮದ್ಭಗವದ್ಗೀತೆಯು

---

ದ್ವೈತವೇದಾಂತ ವಿದ್ವಾನ್, ದ್ವೈತವೇದಾಂತ ಶಿರೋಮಣಿ

ಶ್ರೀಮನ್ಮಧ್ವಸಿದ್ಧಾಂತ ಪ್ರಬೋಧಿನೀ ಸಂಸ್ಕೃತ ಮಹಾಪಾಠಶಾಲಾ ಪಂಡಿತ

ಅಗ್ರಹಾರ ನಾರಾಯಣ ತಂತ್ರಿಗಳಿಂದ ವಿರಚಿತವಾದ

ಕನ್ನಡ ಟೀಕಾ ಭಾಷಾಂತರವು.

ಶ್ರೀ ಶ್ರೀ ೧೦೮ ಶ್ರೀ ಶೀರೂರು ಮಠದ ಶ್ರೀಮಲ್ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರ

ಕನ್ನಡ ಮುನ್ನುಡಿಯು.

ENGLISH INTRODUCTION

*By*

**Vidyabhushana, Dr. B. N. Krishnamoorthi Sarma,** *M. A., Ph. D.*

*Professor of Sanskrit,*

RUPAREL COLLEGE, BOMBAY.



1860ನೇ ಇಸವಿಯ 21ನೇ ಆಕ್ಟಿನ ಮೇರೆಗೆ ರಿಜಿಸ್ಟ್ರಿಯಾಗಿರುವ

ಶ್ರೀ ಮಧ್ವಮುನಿ ಸೇವಾ ಸಂಘ, ಉಡುಪಿ,

ಇವರಿಂದ ಪ್ರಕಾಶಿಸಲ್ಪಟ್ಟಿತು.

ಉಡುಪಿ ಮೆಜಿಸ್ಟಿಕ್ ಪ್ರೆಸ್ಸಿನಲ್ಲಿ ಮುದ್ರಿತವಾಯಿತು.



1954

ಚಂದಾ: (3 ಭಾಗಗಳು ಸೇರಿ) ರೂ. 15-0-0 (ಟಪ್ಪಾಲು ಖರ್ಚು ಬಿನಹ)

॥ ಶ್ರೀಃ ॥

# ಸಭಾಷ್ಯಸತಾತ್ಪರ್ಯ ಶ್ರೀಮದ್ಭಗವದ್ಗೀತೆಯ

# ಮುನ್ನುಡಿ.

---

**ಸುಲಲಿತವೇಣುನಿನಾದವಿಲಾಸೀ ಸುರುಚಿರವಲ್ಲವಿಕಾಪರಿಲಾಸೀ ।**
**ಯದುಪತಿಮಾನಸಸಾರಸವಾಸೀ ಭವತು ಮುದೇ ಮಮ ಕಂಸನಿರಾಸೀ ॥**

★

ಕಾಲಗತಿಯಿಂದ ಮತ್ತು ಕಲಿಯ ಮಹಿಮೆಯಿಂದಲೂ ಪರಾಪರತತ್ತ್ವಜ್ಞಾನಸೂರ್ಯನು ಕ್ಷೀಣನಾಗುತ್ತಿರಲು, ಸಜ್ಜನರು ಜ್ಞಾನಾಂಧರಾದದ್ದನ್ನು ನೋಡಿ ಮಹಾಕರುಣಾಳುಗಳಾದ ಬ್ರಹ್ಮಾದಿ ದೇವತೆಗಳು ಆದಿದೇವನಾದ ಶ್ರೀ ನಾರಾಯಣನನ್ನು ಮೊರೆಯಿಡಲು, ಶ್ರೀಪತಿಯಾದರೂ ಈ ಕಲಿಯುಗದಲ್ಲಿ ತಾನು ಅವತರಿಸಲು ಸಂಕಲ್ಪಮಾಡದೆ, ತನ್ನ ನಂತರದ ಸರ್ವಜ್ಞ ಮತ್ತು ಕಾರ್ಯಧುರಂಧರರಾದ ಚತುರ್ಮುಖರು ಸ್ವಯಂ ಅವತಾರರಹಿತರಾದ ಕಾರಣ ಆ ಚತುರ್ಮುಖರ ಸಮರಾದ ಭಾರತೀಪತಿ ಮುಖ್ಯಪ್ರಾಣದೇವರನ್ನು ಹಸನ್ಮುಖನಾಗಿ ವೇದಾಂತವಿಜ್ಞಾನ ಲೋಪದಿಂದ ಖಿನ್ನರಾದ ಸಜ್ಜನರನ್ನು ನನ್ನ ಸವಿಶೇಷಗುಣನಿರ್ಣಾಯಕ ಶಾಸ್ತ್ರಾದಿನಿರ್ಮಿತಿಯಿಂದ ಸಂತೋಷಗೊಳಿಸುವ ಸಲುವಾಗಿ ಅವತರಿಸೆಂಬ ಆಜ್ಞೆಯನು ಕೊಡಲು, ಆ ಶ್ರೀ ಮುಖ್ಯಪ್ರಾಣದೇವರು ಮಹಾಪ್ರಸಾದರೂಪ ಆಜ್ಞೆಯನ್ನು ಶಿರಸಾ ವಹಿಸಿದರು. ಇತ್ತ ಪವಿತ್ರ ಪಾಜಕಕ್ಷೇತ್ರದಲ್ಲಿ ಮಧ್ಯಗೇಹಭಟ್ಟರೆಂಬ ಬ್ರಾಹ್ಮಣೋತ್ತಮರು ಪುತ್ರೇಚ್ಛೆಯಿಂದ ಶ್ರೀ ರಜತಪೀಠಪುರದ ಶ್ರೀಮದನಂತಪದ್ಮನಾಭದೇವರನ್ನು ನಾನಾವ್ರತಗಳಿಂದ ಅದಿತಿ-ಕಶ್ಯಪರಂತೆ ಸತಿಯಿಂದೊಡಗೂಡಿ ಸೇವಿಸುತ್ತಿರಲು, ಶ್ರೀ ಪರಮಾತ್ಮನ ಸಂಕಲ್ಪವನ್ನರಿತ ಶ್ರೀ ಪ್ರಾಣದೇವರಾದರೂ ಆ ಸೇವಾಫಲರೂಪವಾಗಿ ಅವರ ಸತೀಜಠರದಲ್ಲಿ ಅವತರಿಸಿದರು. ಪ್ರಾಣದೇವರಿಗೆ ಅವತಾರದೆಶೆಯಲ್ಲಿಯೂ ಜ್ಞಾನಲೋಪವಿಲ್ಲದ ಕಾರಣ ಮಧ್ಯಗೇಹರ ಪುತ್ರ, ವಾಸುದೇವಸುಗೃಹೀತನಾಮರು ಈಗ ಜ್ಞಾನಲೋಪಕಾರಕರಾದ ದುರ್ಜನರಿಗೆ ಭೀಮಾದಿರೂಪಗಳಂತೆ ಶಿಕ್ಷಿಸುವುದು ಈಶಸಂಕಲ್ಪವಲ್ಲ. ಆ ಬಗ್ಗೆ ಶ್ರೀ ಜಗನ್ಮಾತೆ ದುರ್ಗೆಯು ಸನ್ನ ಅವತರಿಸುವ ಕಾರಣ ಯತಿಧರ್ಮವನ್ನು ಸ್ವೀಕರಿಸಿ ಜ್ಞಾನೋಪದೇಶಮಾಡುವ ನಿರ್ಧಾರದಿಂದ ಉಪನಯನಯೋಗ್ಯ ಕಾಲದಲ್ಲಿ ತಂದೆಯಿಂದ ಉಪನಯನ ಹೊಂದಿದರು. ಇತ್ತ ಅನಂತಪದ್ಮನಾಭದೇವರ ಸನ್ನಿಧಿಯಲ್ಲಿ ಶ್ರೀ ಭಗವದ್ಭಕ್ತರೂ ವೈರಾಗ್ಯಾದಿ ಸಕಲಗುಣಭರಿತರೂ ಆದ ಅಚ್ಯುತಪ್ರೇಕ್ಷರೆಂಬ ಯತೀಶ್ವರರು ಸಮ್ಯಗ್ಜ್ಞಾನಪ್ರಾಪ್ತಿಗಾಗಿ ಅನವರತ ಸೇವಾನಿರತರಾಗಿರಲು, ಶ್ರೀ ದೇವರು ಒಬ್ಬ ಪುರುಷನಲ್ಲಾವಿಷ್ಟರಾಗಿ ಮುಂದೆ ಲಭಿಸುವ ಶಿಷ್ಯದ್ವಾರಾ ಜ್ಞಾನಲಾಭದ ಅಪೇಕ್ಷೆಯನ್ನೀಯಲು ಚಾತಕಪಕ್ಷಿಯಂತೆ ಆ ಕಾಲ ನಿರೀಕ್ಷಕರಾದ ಯತಿವರ್ಯರನ್ನು ಸ್ವಯಂ ಸರ್ವಜ್ಞರಾದ ವಾಸುದೇವಾಚಾರ್ಯರು ಸನ್ಯಾಸದೀಕ್ಷೆಗಾಗಿ ಸೇವಾದಿಂದೊಲಿಸಿ, ಸನ್ಯಾಸ ದೀಕ್ಷೆ ಪಡೆದು, ಸರ್ವಜನಸಮಕ್ಷಮದಲ್ಲಿ ಪುರುಷಾವಿಷ್ಟರಾದ ಶ್ರೀ ದೇವರಿಂದ-"ನೀನೇನು ಜ್ಞಾನೇಚ್ಛೆಯಿಂದ ನನ್ನ ಸೇವಾ ಬಹು ಮಾಡಿದೆ, ಅದಕ್ಕೆ ಫಲರೂಪವಾಗಿ ಈತನನ್ನು ಕೊಡುವೆ. ಈತನಿಂದ ಜ್ಞಾನಲಾಭವಾಗುವುದು" ಎಂಬುದಾಗಿ ಆಜ್ಞೆ ಹೊಂದಿದ ಅಚ್ಯುತಪ್ರೇಕ್ಷರು ಸಂತೋಷದಿಂದ ದೇವರಿಗೆವಂದಿಸಿ ಈ ಶಿಷ್ಯರತ್ನವನ್ನು ಹೊಂದಿ ಇವರ ಉಪದೇಶದಿಂದ ಜ್ಞಾನವನ್ನು ಹೊಂದಿ ಕೃತಕೃತ್ಯನೆಂದು ಭಾವಿಸಿದರು.

ಅಚ್ಯುತಪ್ರೇಕ್ಷರ ಮುಖದಿಂದ ಶ್ರೀಮದಾನಂದತೀರ್ಥರು ಸನ್ಯಾಸ ಹೊಂದಿದವರಾಗಿ ಯದ್ಯಪಿ ಗಂಗಾ ಜನಕನಾಜ್ಞೆಯಂತೆ ಗಂಗೆ ತಾನಿದ್ದಲ್ಲಿಗೆ ಬಂದರೂ, "ಪ್ರಾಪ್ತೇ ನರೇಷು ಜನನೇ ನರವತ್ಪ್ರವೃತ್ತಿಃ" ಎಂದು ಇರುವ ಕಾರಣ "ತೀರ್ಥಯಾತ್ರೆಯು ಯತಿಧರ್ಮ" ಎಂದು ತಿಳಿಸುವ ಉದ್ದಿಶ್ಯ ತೀರ್ಥಯಾತ್ರಾ ಕ್ರಮೇಣ ಬದರಿಕಾಶ್ರಮಕ್ಕೆ ಬಂದು, ಶ್ರೀ ನಾರಾಯಣದೇವರ ಸಮಕ್ಷ ಶ್ರೀ ಗೀತಾಭಾಷ್ಯ ನೂತನವಾಗಿ ತಾನು ರಚಿಸಿದ್ದನ್ನು ಕಾಣಿಕೆಯಾಗಿ ಅರ್ಪಿಸಲು, ಅದರ ಆದಿಪದ್ಯದಲ್ಲಿ "ಗೀತಾರ್ಥಂ ವಕ್ಷ್ಯಾಮಿ ಶಕ್ತಿತಃ" ಎಂದಿರಲು, "ನೀನು ಸಮಗ್ರಾರ್ಥವ್ಯಾಖ್ಯಾನದಲ್ಲಿ ಶಕ್ತನೇ. ಆದರೂ ಈಗಿನ ಜನರು ಸಮಗ್ರಾರ್ಥ ತಿಳಿಯಲು ಅಶಕ್ತರಾದ ಕಾರಣ 'ಲೇಶತಃ' ಎಂದಿರಲೆಂದು ಹಸ್ತಾಸ್ಫಾಲನಪೂರ್ವಕ ಶ್ರೀ ದೇವರು ಆಜ್ಞಾಪಿಸಲು, ಆದಿಮ ಶ್ಲೋಕದಲ್ಲಿ 'ಶಕ್ತಿತಃ' ಎಂಬ ಪದ ತಿದ್ದಿ 'ಲೇಶತಃ' ಎಂದು ಮಾಡಿದ ರೆಂಬುದೂ. ಈ ಗೀತಾರ್ಪಣರೂಪ ಸೇವೆಯನ್ನು ಶ್ರೀ ದೇವರು, ಮೂರ್ತಿಮತ್ತಾಗಿ ಸ್ವೀಕರಿಸಿದರೆಂಬುದೂ ಈ ಎಲ್ಲಾ ವಿಷಯವು ಶ್ರೀ ಸುಮಧ್ವವಿಜಯದ್ರಷ್ಟೃಗಳಿಗೆ ವಿದಿತವು.

ಇಲ್ಲಿ ಯಥಾಶ್ರುತವಾಗಿ ಈ ರೀತಿ ಶಂಕಾ ಬರಬಹುದು. ಏನೆಂದರೆ— ಶ್ರೀ ಬ್ರಹ್ಮಸೂತ್ರಭಾಷ್ಯಾದಿ ಗ್ರಂಥಗಳ ರಚನೆಯನ್ನು ಮುಂದಿಟ್ಟು. ಅಲ್ಲದೆ ಈ ಗೀತೆಯು ಯಾವ ಭಾರತದಲ್ಲಿ ಏಕದೇಶವೋ, ಅಂಥಾ ಮಹಾಭಾರತದ ವ್ಯಾಖ್ಯಾನರೂಪವಾದ ಮಹಾಭಾರತತಾತ್ಪರ್ಯನಿರ್ಣಯಾಖ್ಯ ಗ್ರಂಥದ ರಚನೆಯನ್ನೇ ಮುಂದಿಟ್ಟು ಈ ಗೀತಾಭಾಷ್ಯವನ್ನು ಪ್ರಥಮ ಮಾಡಲು ಏನು ಕಾರಣವಿರಬಹುದೆಂದು ಇಲ್ಲಿ ಮಹಾಭಾರತಕ್ಕೇನೇ ಸಮಗ್ರ ವ್ಯಾಖ್ಯಾನದ ಉದ್ದೇಶವಿಲ್ಲದ ಕಾರಣ ಸ್ಥಾಲೀಪುಲಾಕನ್ಯಾಯೇನ ಏಕದೇಶ ವ್ಯಾಖ್ಯಾನ ಮಾಡುವುದರಿಂದ ಅದನ್ನೇ ಪ್ರಥಮದಲ್ಲಿ ಮಾಡಿದರೆಂದು ಹೇಳಲೂ ಬರುವುದಿಲ್ಲ. ಮುಂದೆ ಭಾರತಕ್ಕೇನೇ ಸಮಗ್ರ ವ್ಯಾಖ್ಯಾನರೂಪವಾಗಿ ತಾತ್ಪರ್ಯನಿರ್ಣಯಾಖ್ಯ ಗ್ರಂಥವನ್ನು ಮಾಡಿದ್ರಿಂದ ಈ ವಿಷಯದಲ್ಲಿ ಯೋಗ್ಯವಾದ ಬೇರೆಯೇ ಕಾರಣ ತಿಳಿಯತಕ್ಕದ್ದು.

ಜಗತ್ತಿನಲ್ಲಿ ಯಾರಾದರೂ ವ್ಯಾಖ್ಯಾನಕಾರರು ವ್ಯಾಖ್ಯಾನಮಾಡಲು ಉದ್ದೇಶಪಟ್ಟಿರುವ ಗ್ರಂಥವು ಪ್ರಮಾಣವಾಗಿ ಪ್ರಾಜ್ಞಸಮ್ಮತವೋ ಎಂದು ವಿಚಾರಮಾಡಿ ಪ್ರಮಾಣವೆಂದು ಸಮ್ಮತವಾದದ್ದಕ್ಕೇನೇ ವ್ಯಾಖ್ಯಾನಮಾಡುವರು. ಇದು ಸರ್ವಸಮ್ಮತವು. ಹೀಗೆ ಪ್ರಮಾಣಗಳಾಗಿ ವ್ಯಾಖ್ಯಾನಯೋಗ್ಯ ಗ್ರಂಥಗಳು ಬಹು ಇದ್ದಲ್ಲಿ ಎಲ್ಲದಕ್ಕೂ ವ್ಯಾಖ್ಯಾನಮಾಡಲು ಹೆಚ್ಚಾಗಿ ಯಾರೂ ಹೋಗುವುದಿಲ್ಲ. ಮತ್ತೆ ಆ ಗ್ರಂಥಗಳ ಪೈಕಿ ಯಾವವು ಶ್ರೇಷ್ಠ ಪ್ರಮಾಣವೆಂದೆನಿಸಿಕೊಳ್ಳುವವೋ, ಅದಕ್ಕೇನೇ ವ್ಯಾಖ್ಯಾನ ಮಾಡುವುದು ರೂಢಿಯಲ್ಲಿದೆ. ಹೀಗಿದ್ದ ಕಾರಣ ಪ್ರಕೃತ ಮಹಾಭಾರತಕ್ಕೆ ಶ್ರೀಮದಾಚಾರ್ಯರು ೨ ವ್ಯಾಖ್ಯಾನ ಮಾಡಲು ಹೊರಟದ್ದು ಮಹಾಭಾರತವು ಪ್ರಮಾಣವೆಂತಲೂ. ಇತರಾಪೇಕ್ಷಯಾ ಶ್ರೇಷ್ಠ ಪ್ರಮಾಣವೆಂತಲೂ ತಿಳಿದೇ ಪ್ರವೃತ್ತಿಮಾಡಿದ್ದೆಂದು ಸಹಜವಾಗಿ ಎಲ್ಲರಿಗೂ ತೋರುವ ವಿಷಯವು. ಹಾಗಾದರೆ ಮಹಾಭಾರತವು ಪ್ರಮಾಣವೆಂತಲೂ. ಇತರಗ್ರಂಥಗಳ ಅಪೇಕ್ಷಯಾ ಶ್ರೇಷ್ಠವೆಂತಲೂ ನಾವು ಹೇಳಿದರೆ ಹಿಂದಿನ ಆಶಂಕೆಗೆ ಸಮಾಧಾನ ಕೊಟ್ಟಂತಾಯಿತು. ಯಾವುದಾದರೊಂದು ವಾಕ್ಯವು ಪ್ರಮಾಣವಾಗಬೇಕಾದರೆ ಅದು ಆಪ್ತನ ವಾಕ್ಯವಾಗಬೇಕು ಆಪ್ತನು ಯಾರೆಂದರೆ-ಯಾರು ಯಾವ ವಾಕ್ಯದಿಂದ ಯಾವ ಪ್ರಮೇಯವನ್ನು ನಿರೂಪಿಸಲು ಹೊರಟಿರುವನೋ. ಆತನು ಆ ಪ್ರಮೇಯವನ್ನೂ ಯಥಾರ್ಥವಾಗಿ ತಿಳಿದವನಿರಬೇಕು. ಅಷ್ಟೇ ಅಲ್ಲ. ಯಾರ ಉದ್ದಿಶ್ಯ ಆ ವಾಕ್ಯವನ್ನು ರಚಿಸುವನೋ, ಆತಗೆ ಆ ಜ್ಞಾನ ಬರಬೇಕೆಂಬ ಉದ್ದೇಶವು ಈತನಲ್ಲಿರಬೇಕು. ಈ ಉದ್ದೇಶಪೂರ್ವಕ ಈ ವಾಕ್ಯ ರಚಿತವಾಗಿರಬೇಕು. ಅದೂ ಸಾಲದೆ ಆ ವಾಕ್ಯಕರ್ತನಿಗೆ ವಂಚಕತ್ವ ಇರಬಾರದು ಇಂತಹವನೇ ಆಪ್ತನು. ಇಂತಹವನ ವಾಕ್ಯವು ಪ್ರಮಾಣವು. ಆಪ್ತನಲ್ಲಿ ಯಾಕಿಷ್ಟು ಗುಣಗಳನ್ನೊಪ್ಪಬೇಕೆಂದರೆ— ಯಾರು ಯಾವ ವಾಕ್ಯದಿಂದ ಯಾವ ಪ್ರಮೇಯವನ್ನು ನಿರೂಪಿಸಲು ಹೊರಡುವನೋ, ಆತನೆ ತಾನು ನಿರೂಪಿಸುವ ವಿಷಯದ ಯಥಾರ್ಥಜ್ಞಾನವಿರಬೇಕೆಂಬುವುದು ಎಲ್ಲರಿಗೂ

ತಿಳಿಯುವುದೇ ತಾನು ತಿಳಿಯದ ವಿಷಯವನ್ನು ಇತರರಿಗೆ ಹೇಗೆ ನಿರೂಪಿಸಲು ಬರುವುದು? ಆದುದರಿಂದ ಅದನ್ನು ನಿರೂಪಿಸುವ ಅಗತ್ಯವಿಲ್ಲ. ಇನ್ನು ವಾಕ್ಯರಚನಾ ಮಾಡುವವನಲ್ಲಿ ಕೇಳುವವನನ್ನು ಕುರಿತು ಹೇಳುವ ಇಚ್ಛೆಯಿರಬೇಕು, ಯಾಕೆಂದರೆ—ಆತನೆಲ್ಲಾದರೂ ವಿನೋದಗೋಷ್ಠಿಯಲ್ಲಿ ಇಲ್ಲವೆ ಏನಾದರೂ ವ್ಯಗ್ರಚಿತ್ತನಾಗಿರುವಾಗ ಯಾರಾದರೂ ಏನಾದರೂ ವಿಷಯವನ್ನು ಕೇಳಿದರೂ ತಮಾಷೆಗೆ ಏನಾದರೊಂದು ಹೇಳುವುದುಂಟು. ಶ್ರೋತೃವಿಗೂ ಹಾಗೆ ಹೇಳಬಹುದೋ, ಎಂದರೆ—"ನ ನರ್ಮಯುಕ್ತಂ ಹ್ಯನೃತಂ ಹಿನಸ್ತಿ ನ ಸ್ತ್ರೀಷು ರಾಜನ್ನ ವಿವಾಹಕಾಲೇ । ಪ್ರಾಣಾತ್ಯಯೇ ಸರ್ವಧನಾಪಹಾರೇ ಪಂಚಾನೃತಾನ್ಯಾಹುರಪಾತಕಾನಿ" ಎಂದು ಭಾರತಾದಿಗಳಲ್ಲಿದ್ದ ಕಾರಣ ವಿನೋದಾರ್ಥವಾಗಿ ಸುಳ್ಳಾಡುವುದು ದೋಷವಲ್ಲ. ಆದುದರಿಂದ ಕೇಳುವವನಿಗೆ ವಿಷಯವನ್ನು ನಿರೂಪಿಸಬೇಕೆಂಬ ಇಚ್ಛಾ ಅಂದರೆ "ವಿವಕ್ಷಾ" ವಾಕ್ಯಕರ್ತನಲ್ಲಿರಬೇಕು. ಇನ್ನು ಕೇಳುವವನಿಗೆ ವಂಚನೆ ಮಾಡಬಾರದೆಂಬ ಅವಂಚಕತ್ವವೂ ಆಪ್ತನಾದವನಲ್ಲಿರಬೇಕು. ಅದು ಯಾಕೆಂದರೆ—ಬುದ್ಧದೇವರು ಸರ್ವಜ್ಞರಾದಕಾರಣ ಎಲ್ಲಾ ಪ್ರಮೇಯವನ್ನು ತಿಳಿದಿದ್ದರೂ ಹೇಳಬೇಕೆಂಬ ಇಚ್ಛೆಯಿದ್ದರೂ ಅವಂಚಕತ್ವವಿಲ್ಲದ ಕಾರಣ ಜಿನಾದಿಗಳನ್ನು ಕುರಿತು ಉಪದೇಶಕೊಟ್ಟ ಪ್ರಮೇಯವು ಯಥಾರ್ಥವಾಗಲಿಲ್ಲ. ಬುದ್ಧನ ಅವತಾರವೇ ಅಯೋಗ್ಯರಾದ ಅಸುರರು ವೇದೋಕ್ತ ಕರ್ಮಾದಿಗಳನ್ನಾಚರಿಸಿ ಅವರಿಗಯೋಗ್ಯವಾದ ಮೋಕ್ಷಮಾರ್ಗಾವಲಂಬಿಗಳಾಗೋಣ, ಅವರನ್ನು ಆ ಮಾರ್ಗಭ್ರಷ್ಟರನ್ನಾಗಿ ಮಾಡಲು ಉದ್ದಿಶ್ಯವಾಗಿದೆ. ಶ್ರೀ ನಾರಾಯಣನೇ ಬುದ್ಧನಾಗಿ ಅವತರಿಸಿದ್ದು. ಆದುದರಿಂದ ಆಪ್ತನಾದವನಲ್ಲಿ ಯಾವುದು ನಿರೂಪಿಸಲು ಇಚ್ಛಿತವೋ, ಅದರ ಯಥಾರ್ಥಜ್ಞಾನ ಹೇಳಬೇಕೆಂಬ ಇಚ್ಛಾ, ಅವಂಚಕತ್ವ ಇಷ್ಟಿರಬೇಕು. ಇದರಲ್ಲಿ ವಂಚಕತ್ವ ಬರುವುದು ಒಂದೋ ವಕ್ತನು ಅಯೋಗ್ಯನಾದರೆ, ಅಥವಾ ಶ್ರೋತೃ ಹೇಳುವವನ ಪ್ರೀತಿಪಾತ್ರನಾಗದೆ ಅಯೋಗ್ಯನಾಗಿದ್ದರೆ. ಇಲ್ಲಿ ಶ್ರೀ ವ್ಯಾಸದೇವರು ವಕ್ತರು. ಶ್ರೀ ನಾರಾಯಣಾವತಾರರು. ಆದ ಕಾರಣ ಆ ದೋಷವಿರಲು ಶಕ್ಯವಿಲ್ಲ. ಶ್ರೋತೃಗಳು ಸಮಸ್ತ ಬ್ರಹ್ಮಾದಿ ದೇವತೆಗಳು. ಆ ದೇವತೆಗಳು ತತ್ತ್ವಜ್ಞಾನಯೋಗ್ಯರೂ, ಶ್ರೀದೇವರ ಪರಮ ಪ್ರೇಮಾಸ್ಪದರೂ ಎಂಬುವುದು ಸರ್ವಶಾಸ್ತ್ರಸಮ್ಮತವಾದ ಕಾರಣ ಆ ವಂಚಕತ್ವಕ್ಕೆ ಯಾವ ಕಾರಣವೂ ಇಲ್ಲ. ಈ ವಿಷಯದಲ್ಲಿ—"ದ್ವಾಪರೇ ಸರ್ವತ್ರ ಜ್ಞಾನ ಆಕುಲೀಭೂತೇ ಬ್ರಹ್ಮರುದ್ರೇಂದ್ರಾದಿಭಿರರ್ಥಿತೋ ಭಗವಾನ್ನಾರಾಯಣೋ ವ್ಯಾಸತ್ವೇನಾವತತಾರ" ಇತ್ಯಾದಿ ಆಗಮವು ಪ್ರಮಾಣವು. "ನಾರಾಯಣಾದ್ವಿನಿಷ್ಪನ್ನಂ ಜ್ಞಾನಂ ಕೃತಯುಗೇ ಸ್ಥಿತಂ । ಕಿಂಚಿತ್ತದನ್ಯಥಾ ಜಾತಂ ತ್ರೇತಾಯಾಂ ದ್ವಾಪರೇಽಖಿಲಂ ॥ ಗೌತಮಸ್ಯ ಋಷೇಃ ಶಾಪಾಜ್ಜ್ಞಾನೇ ತ್ವಜ್ಞಾನತಾಂ ಗತೇ । ಸಂಕೀರ್ಣಬುದ್ಧಯೋ ದೇವಾಃ ಬ್ರಹ್ಮರುದ್ರಪುರಸ್ಸರಾಃ ॥ ಶರಣ್ಯಂ ಶರಣಂ ಜಗ್ಮುರ್ನಾರಾಯಣಮನಾಮಯಂ ॥ ತೈರ್ವಿಜ್ಞಾಪಿತಕಾರ್ಯಸ್ತು ಭಗವಾನ್ಪುರುಷೋತ್ತಮಃ । ಅವತೀರ್ಣೋ ಮಹಾಯೋಗೀ ಸತ್ಯವತ್ಯಾಂ ಪರಾಶರಾತ್" ಇತ್ಯಾದಿ ಸ್ಕಾಂದವಚನವೂ ಪ್ರಮಾಣವು. ಇಂತಹ ಆಪ್ತರಲ್ಲಿರಬೇಕಾದ ಗುಣಗಳು ಶ್ರೀ ವ್ಯಾಸರಲ್ಲಿದ್ದ ಕಾರಣ ಇವರ ವಾಕ್ಯವು ಆಪ್ತವಾಕ್ಯವು. ಈ ವಿಷಯದಲ್ಲಿ ವಾಕ್ಯಪ್ರಯೋಗವನ್ನು ಮಾಡುವವರಲ್ಲಿ ಹಿಂದಿನ ಮೂರು ಗುಣಗಳಲ್ಲಿ ಯಾವಯಾವ ಗುಣಗಳು ಯಾರ್ಯಾರಲ್ಲಿ ಎಷ್ಟೆಷ್ಟು ಜಾಸ್ತಿ ಇರುವವೋ, ಅಂತಹವರು ಅಪಪ್ತ ಆಪ್ತರಲ್ಲಿ ಶ್ರೇಷ್ಠರೆಂದೂ, ಅವರವರ ವಾಕ್ಯವು ಪ್ರಮಾಣಗಳಲ್ಲಿ ಉತ್ತಮವೆಂದೂ ಅನಿಸಿಕೊಳ್ಳುವವು. ಇಂತಹ ವಾಕ್ಯಗಳ ಸಮೂಹವೇ ಗ್ರಂಥವೆಂದೆನಿಸಿಕೊಳ್ಳುತ್ತದೆ.

ಪ್ರಕೃತ ನಮ್ಮ ಶ್ರೀಮದಾಚಾರ್ಯರಿಂದ ವ್ಯಾಖ್ಯಾತವಾದ ಭಾರತಾಂತರ್ಗತವಾದ ಶ್ರೀಮದ್ಭಗವದ್ಗೀತೆಯ ಕರ್ತರು ಶ್ರೀಮದ್ವೇದವ್ಯಾಸರು. ಅವರು ಸರ್ವಜ್ಞತಮರಾದ ಕಾರಣ ಅವರಲ್ಲಿ ಇತರರಿಂದ ತತ್ತ್ವಜ್ಞಾನವಥಿಕವೆಂಬುದು ಪ್ರತ್ಯೇಕ ಹೇಳಬೇಕಾಗಿಲ್ಲ. "ಯಃ ಸರ್ವಜ್ಞಸ್ಸರ್ವವಿತ್, ನಿರನಿಷ್ಟೋ

ನಿರವದ್ಯಃ" ಇತ್ಯಾದಿ ಶ್ರುತಿಗಳಿಂದ ಜಗಜ್ಜ್ಯೇಷ್ಠರಾದ ಮಾನರಾದ ಅವರಲ್ಲಿ ಯಾವ ದೋಷವೂ ಇಲ್ಲದಿರಲು ವಂಚಕತ್ವದೋಷವಿಲ್ಲವೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಇನ್ನು ಪರಮದಯಾಸಾಗರರಾದ ಅವರಿಗೆ ನಮಗೆ ಪರಮಮೋಕ್ಷಸಾಧನವನ್ನು ತಿಳಿಸಬೇಕೆಂಬ ಇಚ್ಛೆಯೂ ಉಂಟೆಂದು ಈ ಗ್ರಂಥರಚನೆಯಿಂದಲೇ ತಿಳಿಯುವುದು.

ಹೀಗೆ ಕರ್ತೃವಿಚಾರ ಮಾಡುವಾಗಲೂ ಆಪ್ತತ್ವವಿವರಲ್ಲಿದ್ದಷ್ಟು ಬೇರೆಲ್ಲಿಯೂ ಇಲ್ಲದ್ದರಿಂದ ಈ ಗ್ರಂಥವು ಇತರ ಗ್ರಂಥಗಳಿಂದ ಶ್ರೇಷ್ಠವೆಂದಾಗುತ್ತದೆ. ಇಷ್ಟು ಮಾತ್ರವಲ್ಲ, ಈ ಗ್ರಂಥದ ವಿಷಯವನ್ನು ವಿಚಾರಮಾಡಿದರೂ ಈ ಗ್ರಂಥವು ಶ್ರೇಷ್ಠತಮವೆಂದೆನಲು ಯಾವ ಅಭ್ಯಂತರವೂ ಇಲ್ಲ. ಅದೇನೆಂದರೆ—ಶ್ರೀಮದಾಚಾರ್ಯರೇ ಮಹಾಭಾರತದ ಮಹತ್ವವನ್ನು ತಿಳಿಸಲೋಸುಗ ಹೇಳಿದ ಮಾತೇನೆಂದರೆ ಭಾರತವಲ್ಲಿ ಸಕಲ ವೇದಾರ್ಥವನ್ನು ಹೇಳಿದ್ದಲ್ಲದೆ. ವೇದಾದಿಗಳಲ್ಲಿ ಹೇಳದಿದ್ದ ಅರ್ಥವನ್ನೂ ಹೇಳುವ ಕಾರಣ ಇದು ವೇದಕ್ಕಿಂತಲೂ ಉತ್ತಮವೆಂದು 'ವೇದಾದಪಿ ಪರಂ ಚಕ್ರೇ' ಎಂದು ನಿರೂಪಿಸಿರುವ ಕಾರಣ ವೇದಕ್ಕಿಂತಲೂ ಆಧಿಕ್ಯವು ಲಭಿಸುವುದು. ಇಲ್ಲಿ ವೇದದಲ್ಲಿ ಹೇಳದಿದ್ದ ಅರ್ಥವನ್ನು ಹೇಳಿರುವರೆಂದರೆ ಅದು ಅಪ್ರಾಮಾಣಿಕವಾಗಿ ಜ್ಞಟಿತಿ ತೋರಬಹುದು. ಇದಕ್ಕೆ ಹೇಳುವುದು ಈ ಭಾರತವನ್ನು ಮಾಡಿದ್ದು ಶ್ರೀಮನ್ನಾರಾಯಣಾವತಾರರಾದ ಶ್ರೀ ವ್ಯಾಸರು. ಅವರು ಸರ್ವಜ್ಞರೂ, ಆಪ್ತರಲ್ಲಿ ಪ್ರಥಮ ಗಣನೀಯರೂ, ಶ್ರೇಷ್ಠರೂ ಎಂದು ಹೇಳಿದ್ದು. ಇದೇ ಅಭಿಪ್ರಾಯದಿಂದ ಅಂದರೆ ಆಪ್ತರಾಗಲು ಬೇಕಾದ ನಾವು ಹಿಂದೆ ಹೇಳಿದ ತತ್ವಜ್ಞಾನಾದಿರೂಪಗಳಾದ ಗುಣಗಳು ಅವರಲ್ಲಿ ಅಪರಿಮಿತ ಇರುವುದರಿಂದ ಅರ್ಥಗಳನ್ನು ಅವರು ತಮ್ಮ ಅಲೌಕಿಕ ಪ್ರತ್ಯಕ್ಷರೂಪ ತತ್ವಜ್ಞಾನದಿಂದ ತಿಳಿದು ತಾನು ಮಾಡಿದ ಗ್ರಂಥದಲ್ಲಿ ಆ ವಿಷಯಗಳನ್ನು ನಿರೂಪಿಸಿರುವರು. ಆದ ಕಾರಣ ವೇದದಲ್ಲಿ ಹೇಳದಿದ್ದರೂ ಆ ವಿಷಯಗಳು ವ್ಯಾಸದೇವರ ಪ್ರತ್ಯಕ್ಷಪ್ರಮಾಣಕ್ಕೆ ವಿಷಯಗಳಾದ ಪ್ರಯುಕ್ತ ಅಪ್ರಾಮಾಣಿಕವಲ್ಲ ಮಾತ್ರವಲ್ಲ ಕೇವಲ ಶಬ್ದದಲ್ಲಿ ಹೇಳುವುದಕ್ಕಿಂತಲೂ ಕಣ್ಣಿನಲ್ಲಿ ನೋಡಿದ್ದನು ತಿಳಿಸುವುದು ಅತಿವಿಶ್ವಾಸಜನಕವಾದ ಕಾರಣ ಆ ವಿಷಯಗಳು ಅತಿಪ್ರಾಮಾಣಿಕವೆಂದೆನ್ನಬೇಕು. ಅತ ಏವ ಊರಲ್ಲಿ ಯಾರಾದರೂ ಏನಾದರೂ ಪ್ರಮೇಯವನ್ನು ಹೇಳುವಲ್ಲಿ-"ಏವಮೇವ ವದಸಿ, ದೃಷ್ಟ್ವಾ ವಾ ವದಸಿ?" ಎನ್ನುವರು ಅತ ಏವ "ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್" ಎಂದು ಇರುವುದು. ಇನ್ನು ನಮಗೆ ಶ್ರೇಯಸ್ಸಾಧನವಾಗಿ ವೇದ ತದುಪಕರಣ ಬ್ರಹ್ಮವಿಚಾರಮೀಮಾಂಸಾದಿ ಶಾಸ್ತ್ರಗಳಿದ್ದರೂ "ಸ್ತ್ರೀಶೂದ್ರಬ್ರಹ್ಮಬಂಧೂನಾಂ ತ್ರಯೀ ನ ಶ್ರುತಿಗೋಚರಾ" ಎಂದಿರುವ ಕಾರಣ ವೇದೋಕ್ತಪ್ರಮೇಯಜ್ಞಾನ ಮತ್ತು ತದಧ್ಯಯನಾದಿಗಳಲ್ಲಿ ಸರ್ವರಿಗಧಿಕಾರವಿಲ್ಲದ ಕಾರಣ ಪರಮದಯಾಳುಗಳಾದ ಶ್ರೀ ವ್ಯಾಸದೇವರು ಸರ್ವರೂ ಪರಮಮೋಕ್ಷರೂಪ ಪುರುಷಾರ್ಥಭಾಗಿಗಳಾಗಲೆಂಬ ಮಹೋದ್ದೇಶದಿಂದ ಈ ಮಹಾಭಾರತವನ್ನು ರಚಿಸಿದ್ದು. ಆದುದರಿಂದ ಇದು ಸರ್ವಾಧಿಕಾರಿಕವು ಅತೋಽಪಿ ಈ ಗ್ರಂಥವು ಶ್ರೇಷ್ಠವು. ಈ ಅಭಿಪ್ರಾಯದಿಂದಲೂ 'ವೇದಾದಪಿ ಪರಂ ಚಕ್ರೇ' ಎಂದು ಶ್ರೀಮದಾಚಾರ್ಯರು ನಿರೂಪಿಸಿದ್ದು.

ಇನ್ನು ಈ ಮಹಾಭಾರತದ ಮಹತ್ವವನ್ನು ನಾವು ಹೆಚ್ಚಿಗೆ ನಿರೂಪಿಸಬೇಕಾಗಿಲ್ಲ. ಮತ್ತೆ ಇದಕ್ಕೆ ಮಾಡಿದ ಮಹಾಭಾರತವೆಂಬ ನಾಮನಿರ್ದೇಶವೇ ಇದರ ಮಹತ್ವವನ್ನು ಹೇಳುತ್ತದೆ. ಈ ಪದವು ಬೇರೆಯಾವ ಗ್ರಂಥಕ್ಕೂ ಇಲ್ಲದೆ ಇದಕ್ಕೆ ಮಾತ್ರ ಬರಲು ವಿಶೇಷ ಕಾರಣವಿರಬೇಕು. ಅವರಲ್ಲಿಯೂ ಇದು ಯೌಗಿಕನಾಮ. ಅಂದರೆ ಶಬ್ದದ ಶಕ್ತಿಯೊಂದೂ ವಿಶದೀಕವ ಅರ್ಥ ಅಪೇಕ್ಷಿಸಿ ಬರುವುದು. ಹಿಂದೆ ಬ್ರಹ್ಮಾದಿ ದೇವತೆಗಳೂ ಋಷಿಗಳೂ ಸೇರಿ ಎರಡು ಸಮಭಾರದ ಮಣೆಗಳಲ್ಲಿ ಒಂದನ್ನು ಸರ್ವವೇದಶಾಸ್ತ್ರಗಳೆಂದು ಸರ್ವವೇದಶಾಸ್ತ್ರಗಳನ್ನು ಆ ಮಣೆಯಲ್ಲಿ ಆರೋಪಿಸಿ, ಇನ್ನೊಂದರಲ್ಲಿ ಭಾರತವನ್ನು ಆರೋಪಿಸಿ ತುಲಾದಲ್ಲಿ ತೂಕೆತ್ತಿದಾಗ ಈ ಭಾರತವನ್ನು ಆರೋಪಿಸಿದ ಮಣೆಯು ಭಾರವತ್ತಾಗಿರಲು ಇದಕ್ಕೆ ಮಹಾ

ಭಾರತವೆಂದು ನಾಮಧೇಯವನ್ನು ಇಟ್ಟರು. ಮಹತ್ತ್ವ ಮತ್ತು ಭಾರವಿಶಿಷ್ಟವಾದ್ರಿಂದ ಮಹಾಭಾರತವೆಂದು ಅನ್ವರ್ಥನಾಮ ಬಂದುದೆಂದು "ಭಾರತಂ ಸರ್ವವೇದಾಶ್ಚ ತುಲಾಮಾರೋಪಿತಾಃ ಪುರಾ । ದೇವೈರ್ಬ್ರಹ್ಮಾದಿಭಿಃ ಸರ್ವೈಃ ಋಷಿಭಿಶ್ಚ ಸಮನ್ವಿತೈಃ । ಮಹತ್ತ್ವಾದ್ಭಾರವತ್ತ್ವಾಚ್ಚ ಮಹಾಭಾರತಮುಚ್ಯತೇ" ಇತ್ಯಾದಿ ಪ್ರಮಾಣಪ್ರಸಿದ್ಧವು.

ಇನ್ನೂ ಭಾರತಕ್ಕೆ ಶ್ರೇಷ್ಠತ್ವದಲ್ಲಿ ಸರ್ವಶಾಸ್ತ್ರಪ್ರಮೇಯವನ್ನು ದೃಷ್ಟಾಂತಸಹಿತವಾಗಿ ಇಲ್ಲಿ ನಿರೂಪಿಸಿದ್ದೂ ಕಾರಣವು. ಅದು ಹೇಗೆಂದರೆ ಸಮಸ್ತ ರಾಜನ್ಯಮಂಡಲದಿಂದ ತುಂಬಿರುವ ಧರ್ಮರಾಜನ ರಾಜಸೂಯ ಯಾಗದಲ್ಲಿ ಅಗ್ರಪೂಜೆಯು ಶ್ರೀ ಕೃಷ್ಣಪರಮಾತ್ಮನಿಗಲ್ಲವೇ ಸಂದದ್ದು. ಇದು ಅನ್ಯಾಯವೆಂದು ಕೇಳಿದ ಚೈದ್ಯನ ದುರವಸ್ಥೆಯಿಂದ ಇದು ನ್ಯಾಯವೆಂದು ಸಮರ್ಥಿತವೂ ಆಯಿತಲ್ಲವೆ? ಇದರಲ್ಲಿ ಯಾವಾಗ ವ್ಯಾಸ ಪರಶುರಾಮಾದಿ ಋಷಿಗಳ ಭೀಷ್ಮ ದ್ರೋಣಾದಿ ಜ್ಞಾನಿಗಳ ಸಮ್ಮತಿಯಿಂದ ನಡೆದ ಈ ಅಗ್ರಪೂಜೆಯಿಂದ ವಿಷ್ಣುಸರ್ವೋತ್ತಮತ್ವವು ಪ್ರಕಟಿತವಾಯಿತಲ್ಲವೆ?

ಇನ್ನು ಭೀಮಸೇನದೇವರು ಜೀವೋತ್ತಮರೆಂಬುವುದು ಸರ್ವಶ್ರೇಷ್ಠತ್ವ ಸಂಪಾದಕ ಬಲಾಧಿಕ್ಯದಿಂದ ವ್ಯಕ್ತವಾಗಿಯದೆ. ಬಲಾಧಿಕ್ಯವಾದರೂ ರಾಜನ್ಯಮುಕುಟರಂತಿದ್ದ ಜರಾಸಂಧಾದಿಗಳ ವಧದಿಂದ ವ್ಯಕ್ತಮಾಡಲ್ಪಟ್ಟಿತು. ಕ್ಷತ್ರಿಯರಲ್ಲಿ ಬಲವೇ ವೈಶಿಷ್ಟ್ಯಸಂಪಾದಕವು. ಲಕ್ಷ್ಮಿಯನಂತರದ ಸ್ತ್ರೀಯರಲ್ಲಿ ಉತ್ತಮತ್ವವು ದ್ರೌಪದೀ ದೇವಿಯರಿಗೆ ಲಾವಣ್ಯಾಧಿಕ್ಯದಿಂದ ಭಾರತದಲ್ಲಿ ನಿರೂಪಿತವಾಗಿದೆ. ಇನ್ನು ವಿಷ್ಣುಭಕ್ತರ ಸೌಭಾಗ್ಯದಲ್ಲಿ ಧರ್ಮರಾಜನ ರಾಜಸೂಯಯಾಗಾದಿ ಮಹಾ ಕಾರ್ಯಕಾರಿತ್ವಾದಿಗಳಿಂದ ಕೂಡಿದ ಇವರ ಸಾಮ್ರಾಜ್ಯವೇ ದೃಷ್ಟಾಂತವಾಗಿ ನಿರೂಪಿತವಾಗಿಯದೆ. ವಿಷ್ಣುದ್ವೇಷಿಗಳು ದುರ್ಭಾಗ್ಯರೆಂಬುವುದಕ್ಕೂ ನೂರು ಜನ ದುರ್ಯೋಧನಾದಿಗಳ ಅಧಃಪತನವನ್ನೇ ನಿರೂಪಿಸಿರುವರು. ಭೀಮಾದಿಗಳು ಬ್ರಹ್ಮಾದಿ ದೇವತಾ ಸಮೂಹದವರೆಂಬುವುದೂ ದುರ್ಯೋಧನಾದಿಗಳು ಅಸುರವರ್ಗದವರೆಂಬುವುದೂ ಪ್ರಸಿದ್ಧ. ಈ ಎಲ್ಲಾ ಪ್ರಮೇಯವೂ "ನಿರ್ಣಯಃ ಸರ್ವಶಾಸ್ತ್ರಾಣಾಂ ಸದೃಷ್ಟಾಂತೋ ಹಿ ಭಾರತೇ" ಎಂಬ ಬ್ರಹ್ಮಾಂಡಪುರಾಣವಾಕ್ಯದಿಂದ ತಿಳಿದದೆ

ಇನ್ನು ಈ ಭಾರತಾಖ್ಯ ಗ್ರಂಥವು ಸಂಖ್ಯಾತಃ ಲಕ್ಷಾಧಿಕ ಪರಿಮಾಣವುಳ್ಳದ್ರಿಂದ ಇದಕ್ಕೆ ಮಹತ್ತ್ವವಾಗಲೀ ಇಂತಹ ಲಕ್ಷಾಧಿಕ ಸಂಖ್ಯಾಕ ಶ್ಲೋಕರಚನ ಮಾತ್ರದಿಂದ ಶ್ರೀವ್ಯಾಸರಿಗೆ ಸಾಕ್ಷಾತ್ ನಾರಾಯಣಾವತಾರತ್ವವಾಗಲೀ ಹೇಗೆ ಸಿದ್ಧಿಸುವದೆಂದು ಶಂಕಿಸಬಾರದು. ಕುರುಗಳ ಮತ್ತು ಪಾಂಡವರ ವಂಶೋತ್ಪತ್ತಿಯ ಪೂರ್ವದಲ್ಲಿಯೇ ಈ ಎರಡು ವಂಶಗಳ ಉತ್ಪತ್ತಿ ಪ್ರಕಾರವನ್ನೂ, ಮುಂದೆ ನಡೆಯುವ ರಾಜಸೂಯಾಶ್ವಮೇಧಾದಿ ಯಾಗಗಳ ಮಹಾ ಮಹಿಮೆಯನ್ನೂ, ತದುದ್ದೇಶವಾಗಿ ಮಾಡಿದ ಸಮಸ್ತ ಲೋಕದ ದಿಗ್ವಿಜಯದ ರೀತಿಯನ್ನೂ. ದುರ್ಯೋಧನಾದಿಗಳು ನಡಿಸಿದ ಅರಗಿನ ಮನೆಯ ನಿರ್ಮಾಣ ಪ್ರಯಾಸವನ್ನೂ. ಅದರಿಂದ ಸಪರಿವಾರರಾಗಿ ಪಾಂಡವರು ತಪ್ಪಿಸಿಕೊಂಡು ಸುಖಿಗಳಾಗಿ ಪಾರಾದ ಕೌಶಲವನ್ನೂ. ಇತರರಿಂದ ಸಂಹರಿಸಲು ಅಸಾಧ್ಯರಾದ ಬಕ ಹಿಡಿಂಬ ಕೀಚಕಾದಿಗಳ ನಿರಾಯುಧರಾದ ಭೀಮಸೇನ ದೇವರಿಂದ ಸಂಹಾರ ನಡೆದ ಚಾತುರ್ಯವನ್ನೂ, ದ್ರೌಪದೀದೇವಿಯವರ ವಿವಾಹನಿರ್ವಾಹಕಕ್ರಿಯನ್ನೂ. ದುರ್ದ್ಯೂತದ ಉದ್ಯೋಗವನ್ನೂ. ತದನಂತರ ವನವಾಸ ಅಜ್ಞಾತವಾಸ ಗೋಗ್ರಹಣಾದಿ ಬಹುತರ ಕಥಾಸಂದರ್ಭಗಳನ್ನೂ, ಅಷ್ಟಾದಶ ಅಕ್ಷೌಹಿಣೀ ಸೇನೆಗಳಲ್ಲಿ ಅನ್ಯೋನ್ಯವಾಗಿ ನಡೆದ ಉಕ್ತಿ ಪ್ರತ್ಯುಕ್ತಿಗಳ ಪ್ರಕಾರವನ್ನೂ. ಶರಪ್ರತಿಶರಗಳ ಸಂಖ್ಯೆಯನ್ನೂ. ಬಂಧನಾದಿ ಚಾತುರ್ಯವನ್ನೂ. ವ್ಯೂಹ ಪ್ರತಿವ್ಯೂಹರಚನ ಕೌಶಲವನ್ನೂ. ಅಸ್ತ್ರ ಪ್ರತ್ಯಸ್ತ್ರಗಳ ಪ್ರಯೋಗ ಪರಿಪಾಟಿಯನ್ನೂ ಭೀಮಾರ್ಜುನ ಭೀಷ್ಮ ದ್ರೋಣಾದಿಗಳಿಂದ ಪ್ರತಿದಿನದಲ್ಲಿಯೂ ಸಂಹರಿಸಲ್ಪಟ್ಟ, ಗಜಾಶ್ವಾದಿ ಸೇನಾ ಸಂಖ್ಯಾದಿಗಳನ್ನೂ, ಕರತಲದಲ್ಲಿರುವ ಆಮಲಕೋಪಾದಿಯಲ್ಲಿ ನೋಡಿ ತನ್ನ

ಮಹಾಭಾರತಾಖ್ಯ ಗ್ರಂಥದಲ್ಲಿ ಸಂಘಟಿಸಿ ಹೇಳುವ ಶ್ರೀ ವ್ಯಾಸದೇವರಿಗೆ ಸಕಲ ಜಗನ್ನಿರ್ಮಾತೃ ಶ್ರೀ ನಾರಾಯಣದೇವರಂತೆ ಸಾರ್ವಜ್ಞ್ಯವೂ ಸಾಕ್ಷಾತ್ತದವತಾರತ್ವವೂ ಜ್ಞಾನಿಗಳಿಂದ ಊಹಿಸಲ್ಪಡಲು ಬರುವುದಿಲ್ಲವೇ. ಹಾಗಲ್ಲದಿದ್ದರೆ ಮತ್ಸ್ಯ ಕೂರ್ಮಾದಿ ಹೀನ ಯೋನಿಗಳಲ್ಲಿ ಅವತರಿಸಿದ ದೇವರನ್ನು ಸಾಕ್ಷಾತ್ ನಾರಾಯಣದೇವರೆಂದು ಹೇಗೆ ತಾನೇ ಊಹಿಸಬೇಕು. ಒಬ್ಬರ ಲಕ್ಷಣವು ಇನ್ನೊಬ್ಬರಲ್ಲಿ ಪೂರ್ಣ ನೋಡಲು ಸಿಕ್ಕಿದರೆ ಇವರೇ ಅವರೆಂದು ವ್ಯವಸ್ಥಾಮಾಡುವುದು ವಿಚಾರದ ಮಾರ್ಗವಷ್ಟೇ. ಇಷ್ಟೆಲ್ಲಾ ಪ್ರಮೇಯಗಳನ್ನು ಮನಸಾ ವಿಚಾರಮಾಡಿಯೇ **"ಕೋ ಹ್ಯನ್ಯಃ ಪುಂಡರೀಕಾಕ್ಷಾನ್ಮಹಾಭಾರತಕೃದ್ಭವೇತ್"** ಎಂಬ ದಿವ್ಯ ವಾಣಿಯು ಹೊರಟಿದೆ.

ಒಂದು ಗ್ರಂಥಕ್ಕೆ ಆದಿಭಾಗದಲ್ಲಿ ಅಂದರೆ ಉಪಕ್ರಮದಲ್ಲಿ ಹೇಳಿದ ಅರ್ಥವನ್ನೇ ಅನುಸರಿಸಿ ಅಂತ್ಯದ ವರೆಗೂ ಬೇರೆಬೇರೆ ಪ್ರಮೇಯವನ್ನು ಅಮುಖ್ಯವಾಗಿ ಅಲ್ಪಸ್ವಲ್ಪ ಹೇಳಿದರೂ ಮುಖ್ಯವಾಗಿ ಗ್ರಂಥ ಪ್ರತಿಪಾದ್ಯವಾದದ್ದು ಆರಬ್ಧವಾದ ಪ್ರಮೇಯವೇ. ಹಾಗಿದ್ದರೇನೇ ಇಡೀ ಗ್ರಂಥಕ್ಕೆ ಏಕಾರ್ಥಕತ್ವವು ಬರುತ್ತದೆ. "ಆರಬ್ಧಸ್ಯಾಂತಗಾಮಿತ್ವಂ" ಎಂಬ ಲೋಕ ನ್ಯಾಯಸಿದ್ಧವೂ ಹೌದು. ಆದಕಾರಣ ಭಾರತದಲ್ಲಿ ಮಂಗಲಾಚರಣರೂಪವಾಗಿ ಹೊರಟ ಆದಿ ಪದ್ಯದ ಅರ್ಥವನ್ನು ವಿಚಾರ ಮಾಡಿದರೆ ಸಕಲ ಭಾರತಾರ್ಥವೂ ಮನಸ್ಸಿಗೆ ತಿಳಿಯುವ ಕಾರಣ ಆದಿಮ ಮಂಗಳ ಶ್ಲೋಕದ ಅರ್ಥವನ್ನು ನಾವು ಸಂಕ್ಷೇಪವಾಗಿ ವಿವರಿಸಿದರೆ ಅದು ಅಪ್ರಸ್ತುತವಾಗಲಿಕ್ಕಿಲ್ಲ. **"ನಾರಾಯಣಂ (1) ಸುರಗುರುಂ (2) ಜಗದೇಕನಾಥಂ (3) ಭಕ್ತಪ್ರಿಯಂ (4) ಸಕಲಲೋಕನಮಸ್ಕೃತಂ ಚ । (5) ತ್ರೈಗುಣ್ಯವರ್ಜಿತ(6)ಮಜಂ (7)ವಿಭು(8)ಮಾದ್ಯ(9)ಮೀಶಂ ವಂದೇ (10)ಭವಘ್ನ(11)ಮಮರಾಸುರಸಿದ್ಧವಂದ್ಯಂ"** ಇದು ಭಾರತದ ಆದಿಮಶ್ಲೋಕವು ಇದರಲ್ಲಿ ಕೊಟ್ಟ ಹನ್ನೊಂದು ವಿಶೇಷಣಗಳೂ ಅರ್ಥಗರ್ಭಿತಗಳೂ, ಸಾಕೂತಗಳೂ ಆಗಿವೆ. ಈ ಭಾರತಕ್ಕೆ ಮಹಾಭಾರತವೆಂತ ನಾಮವು ನಾರಾಯಣನೆಂಬ ಸರ್ವೋತ್ತಮ ವಸ್ತುವನ್ನು ನಿರೂಪಿಸಿದ ಪ್ರಯುಕ್ತವೆಂತ ಹಿಂದೆ ಸೂಚಿಸಿರುವೆವು. ಆ ನಾರಾಯಣನು ಸರ್ವೋತ್ತಮನೆಂದು ಈ ಪದ್ಯದಲ್ಲಿ ಹೇಳಿದೆ. ಈ ವಿಷಯವು ವಿಶೇಷಣಗಳ ಅರ್ಥವಿಚಾರದಿಂದ ಸಿದ್ಧವಾಗುತ್ತದೆ. **"ಸುರಗುರುಂ"** ಎಂದು ಆದಿಮವಿಶೇಷಣವು. ಇಲ್ಲಿ ಸುರಶಬ್ದದಿಂದ ಹೇಳಲ್ಪಡುವವರು ಇಂಥವರೇ ಎಂದು ಹೇಳದಿದ್ದುದರಿಂದ ಲಕ್ಷ್ಮೀಬ್ರಹ್ಮರುದ್ರೇಂದ್ರಾದಿ ಸಕಲ ಸುರರಿಗೂ ಗುರು. ಅಂದರೆ ಜ್ಞಾನಪ್ರದನೆಂದು ಅರ್ಥವಾಗುತ್ತದೆ. "ಸುಷ್ಟು ರಮಯತಿ"ಎಂಬುವ ಸಂಸ್ಕೃತ ವ್ಯುತ್ಪತ್ತಿಯಿಂದ ಶ್ರೀರೂಪ ಲಕ್ಷ್ಮೀಗೆ ಸುರಶಬ್ದವಾಚ್ಯತ್ವವನ್ನು ಪ್ರಾಜ್ಞರು ಹೇಳುವರು. ಇವನೇ ಸರ್ವ ಸುರರಿಗೂ ಜ್ಞಾನಪ್ರದನು ಏಕೆ ಎಂಬ ಶಂಕೆಗೆ **"ಜಗದೇಕನಾಥಂ"** ಎಂಬ ವಿಶೇಷಣವು ಉತ್ತರವಾಗಿ ಹೊರಟಿದೆ. ಸರ್ವರಿಂದಲೂ ಉತ್ತಮನು. ಆದುದರಿಂದಲೇ ಸರ್ವರಿಗೂ ಏಕನಾಥ ಅಂದರೆ ಮುಖ್ಯಸ್ವಾಮಿಯು. ಎಂತ. ಈ ಪದದಲ್ಲಿ ಹೇಳಿದ ಪ್ರಯುಕ್ತ ಇಂಥಾ ಜ್ಞಾನಪ್ರದನು ಬೇರೆಯಿಲ್ಲ. ಈತನೇ ಮಹಾಜ್ಞಾನಿಯೆಂಬುವುದು ಸಹಜವಾಗಿ ತೋರುತ್ತದೆ. ಇಂಥವನನ್ನು ಪ್ರಸನ್ನನನ್ನಾಗಿ ಮಾಡುವುದು ಬಹಳ ಸುಲಭವಲ್ಲವೆಂದು ಶಂಕಿಸಿದರೆ ಹಾಗಿಲ್ಲವೆಂಬ ಅರ್ಥವನ್ನು ಸೂಚಿಸಲಿಕ್ಕೆ 'ಭಕ್ತಪ್ರಿಯಂ' ಎಂಬ ಮೂರನೇ ವಿಶೇಷಣವು ಕೊಡಲ್ಪಟ್ಟಿತು. ಇಲ್ಲಿ **"ಭಕ್ತ್ಯೈವ ತುಷ್ಟಿಮಭ್ಯೇತಿ ವಿಷ್ಣುರ್ನಾನ್ಯೇನ ಕೇನಚಿತ್"**ಎಂದು ಪ್ರಮಾಣವಿರುವುದರಿಂದಲೂ **'ಸರ್ವಂ ವಾಕ್ಯಂ ಸಾವಧಾರಣಂ'** ಎಂತ ನ್ಯಾಯವಿರುವುದರಿಂದಲೂ ಭಕ್ತಿಯೇ ಆತನ ಪ್ರೀತಿಗೆ ಪ್ರಧಾನವಾದ ಸಾಧನವೆಂದು ಲಭಿಸುತ್ತದೆ. ಅಂತಹ ಭಕ್ತಿಯು ನಮ್ಮಲ್ಲಂತೂ ಇಲ್ಲವೆಂದು ತಿಳಿಯುವುದು ಕಷ್ಟವಲ್ಲ. ಬ್ರಹ್ಮಾದಿಗಳಲ್ಲಿ ಉಂಟೆಂದು ನಮಗೆ ಹೇಗೆ ತಿಳಿಯುವುದು? ಪರರ ಮನೋಗತವಾದದ್ದನ್ನು ತಿಳಿಯುವುದು ಕಷ್ಟವಷ್ಟೇ? ಎಂಬ ಶಂಕೆಗೂ ಸಮರ್ಪಕವಾದ ಉತ್ತರರೂಪವಾಗಿ **'ಸಕಲಲೋಕನಮಸ್ಕೃತಂ ಚ'** ಎಂಬ ನಾಲ್ಕನೇ ವಿಶೇಷಣವನ್ನು ಕೊಟ್ಟಿರುವರು. ಇದರಿಂದ ದೇವರಲ್ಲಿ ಬ್ರಹ್ಮಾದಿಗಳಿಗೆ ಪರಮಭಕ್ತಿಯು ಇದೆ

ಎಂಬುವುದು ಸ್ಪಷ್ಟವಾಗುತ್ತದೆ. ದೇವರಿಗೆ ಸುತ್ತಲೂ ಪರಿವಾರರೂಪದಿಂದ ಬ್ರಹ್ಮಾದಿ ದೇವತೆಗಳು ಕೈ ಜೋಡಿಸಿಕೊಂಡು ಶಿರಸ್ಸಿನಿಂದ ನಮಸ್ಕಾರಮಾಡುತ್ತಾ ಸ್ತುತಿಸಿಕೊಂಡು ಒಂದು ದಿನವಲ್ಲ, ಒಂದು ಕ್ಷಣ ವಲ್ಲ, ಪ್ರತಿದಿನಗಳಲ್ಲಿಯೂ ಪ್ರತಿಕ್ಷಣಗಳಲ್ಲಿಯೂ ಇದೇ ರೀತಿಯಲ್ಲಿರಬೇಕಾಗಿದ್ದರೆ ಪರಮಭಕ್ತಿಯೊಂದು ಅಲ್ಲದೆ ಬೇರೆ ಯಾವ ಕಾರಣದಿಂದಲೂ ಸಾಧ್ಯವಿಲ್ಲ. ಲೋಕದಲ್ಲಿಯೂ ಸಹ ರಾಜರಲ್ಲಿ ಪರಮಾದರವುಳ್ಳ ಭೃತ್ಯರು ಹಗಲೂರಾತ್ರಿ ತಮ್ಮ ಪ್ರಭುವಿನ ಸೇವಾ ಮಾಡಿಕೊಂಡಿದ್ದಂತೆ ಬೇರೆ ಯಾವ ಭೃತ್ಯರೂ ಇರುವುದಿಲ್ಲವೆಂಬುವುದು ಸರ್ವಸಮ್ಮತವಾದುದು. ಆದಕಾರಣ ಈ ಬ್ರಹ್ಮಾದಿಗಳಲ್ಲಿಯೂ ಭಕ್ತಿಯುಂಟೆಂಬುವುದಕ್ಕೆ ಇತರ ಪ್ರಮಾಣಾನ್ವೇಷಣದ ಅಗತ್ಯವಿಲ್ಲ. ಈ ಹರಿನಮನವೆಂಬುವುದು ಸಂಧ್ಯಾದಿಕರ್ಮಗಳಂತೆ ಮಾಡದಿದ್ದರೆ ಪ್ರತ್ಯವಾಯವುಳ್ಳದಾಗಿಯೂ, ಮಾಡಿದರೆ ಮಹಾಫಲವುಳ್ಳದಾಗಿಯೂ ಶ್ರುತಿವಿಹಿತವಾದ ಕಾರಣ ಪ್ರತಿದಿನದಲ್ಲಿಯೂ ಅನುಷ್ಠೇಯವೆಂತ ತಿಳಿಯುತ್ತದೆ. ಇಷ್ಟು ತೋರಿಸಲಿಕ್ಕೆ 'ನತಂ' ಎಂದಿಷ್ಟು ಹೇಳದೆ ಕರ್ತವ್ಯತ್ವಬೋಧಕವಾದ 'ನಮಸ್ಕೃತಂ' ಎಂಬುವ ಪದವನ್ನು ವ್ಯಾಸರು ನಿರೂಪಿಸಿರುವರು. ಇನ್ನೊಂದು ಶಂಕಾ ಬರಬಹುದು. ಸಂಧ್ಯಾವಂದನಾದಿಗಳು "ಅಹರಹಃ ಸಂಧ್ಯಾಮುಪಾಸೀತ" ಎಂಬ ಶ್ರುತಿವಿಹಿತವಾದ ಪ್ರಯುಕ್ತ ನಮಗದು ಧರ್ಮವು. ಅದನ್ನಾಚರಿಸದಿದ್ದರೆ ನಮಗೆ ಪಾಪವು ಬರುವುದು ನ್ಯಾಯ್ಯವಾದುದು. ನಮನಕ್ಕೆ ಯಾವ ಶ್ರುತಿಯು ಬೋಧಕವೆಂದು. ಈ ಶಂಕೆಗೂ "ಭೂಯಿಷ್ಠಾಂ ತೇ ನಮಉಕ್ತಿಂ ವಿಧೇಮ" ಎಂಬ ಶ್ರುತಿಯು ಇರುವ ಕಾರಣ ನಾವು ಹೇಳಿದ್ದು ವಸ್ತುಸ್ಥಿತಿಯೇ. ಯಾಗಾದಿಗಳಂತೆ ಈ ಹರಿನಮನವೂ ಅಧಿಕಾರಿವಿಶೇಷನಿಯತವಲ್ಲ. ಸ್ತ್ರೀ ಶೂದ್ರ ಚಂಡಾಲಾದಿಗಳಿಗೂ ಕರ್ತವ್ಯವೇ ಎಂಬೀ ಅಭಿಪ್ರಾಯದಿಂದ ಇದು ಸರ್ವಧರ್ಮವೆಂದು ತಿಳಿಸಲು 'ಸಕಲಲೋಕನಮಸ್ಕೃತಂ ಚ' ಎಂಬ ಈ ಒಂದುಸಣ್ಣ ಪದದಲ್ಲಿ ಇಷ್ಟೆಲ್ಲಾ ಅಭಿಪ್ರಾಯವನ್ನು ತುಂಬಿಸಿಟ್ಟಿದ್ದಾರೆ. ಈ ರೀತಿ ವಿಚಾರ ಮಾಡಲು ಹೊರಟರೆ ವ್ಯಾಸರ ಅಪಾರ ಮಹಿಮೆಯೂ, ಸಾರ್ವಜ್ಞ್ಯವೂ ಪ್ರಕಟವಾಗುತ್ತದೆ. ಶ್ರೀ ಹರಿಗೆ ಸಕಲಗುಣಪರಿಪೂರ್ಣತ್ವವು ಬರಬೇಕಾದರೆ ಸರ್ವದೋಷವಿದೂರತ್ವವು ಅಗತ್ಯವಾದುದು. ಅದನ್ನು ನಿರೂಪಿಸಲು 'ತ್ರೈಗುಣ್ಯವರ್ಜಿತಂ' ಎಂಬ ಐದನೇ ವಿಶೇಷಣವನು ಕೊಟ್ಟಿರುವರು. ಲೋಕದಲ್ಲಿ ಅಜ್ಞಾನ ರಾಗ, ನಿದ್ರಾ, ಆಲಸ್ಯ, ದುಃಖ, ಪಾರತಂತ್ರ್ಯ, ಅಲ್ಪಶಕ್ತಿ, ಬಂಧಾದಿ ದೋಷಗಳು ಸತ್ವರಜಸ್ತಮೋರೂಪ ಗುಣತ್ರಯಮೂಲಕಗಳು. ಆದುದರಿಂದ ದೋಷವಿಲ್ಲವೆಂದೆನ್ನುವ ಬಗ್ಗೆ, ಮೂಲಕಾರಣವಾದ ಗುಣತ್ರಯವೇ ಇಲ್ಲವೆಂಬ ಅಭಿಪ್ರಾಯದಿಂದ 'ತ್ರೈಗುಣ್ಯವರ್ಜಿತಂ' ಎಂದು ಹೇಳಿದ್ದು. ನಿರ್ದೋಷತ್ವವೇ ಅದರ ಅಭಿಪ್ರಾಯವು. ಕಾರಣವೇ ಇಲ್ಲದಲ್ಲಿ ಕಾರ್ಯವಿಲ್ಲವೆಂಬುವುದು ಕೈಮುತ್ಯ ನ್ಯಾಯಸಿದ್ಧವು. 'ಅಜಂ' ಎಂಬುವುದು ಆರನೇ ವಿಶೇಷಣವು. ಅದರಲ್ಲಿ ಜ ಎಂದರೆ ಜನನವು. ಅದೇ ಬಹುಸಲವಾದರೆ ಪುನಃಪುನಃ ಜನನವು ಸಂಸಾರವೆಂದೆನಿಸಿಕೊಳ್ಳುತ್ತದೆ. ನಮ್ಮಂತೆ ಸಂಸಾರಶೂನ್ಯನು 'ಅಜ' ಎಂದರ್ಥವು. 'ಭೂ' ಎಂಬ ಧಾತುವು ಪ್ರಾಪ್ತಿಯೆಂಬ ಅರ್ಥದಲ್ಲಿದೆ. ಆದ್ದರಿಂದ ಪ್ರಾಪ್ತಿಯುಳ್ಳವನು ಎಂದು ವಿಭುವೆಂಬ ಪದದಿಂದ ಲಭ್ಯವಾದ ಅರ್ಥವು. ಪ್ರಾಪ್ತಿಯೆಂದರೂ ಜ್ಞಾನವೆಂದರೂ ಒಂದೇ ಅರ್ಥವು. ಆದ್ದರಿಂದ ಭೂ ಎಂದರೆ ಜ್ಞಾನ, ವಿ ಎಂಬ ಉಪಸರ್ಗದಿಂದ ವಿಶಿಷ್ಟಜ್ಞಾನ ಅಂದರೆ ಸರ್ವಜ್ಞನೆಂದು ವಿಭುಪದದ ಅರ್ಥವಾಗುತ್ತದೆ. ಹೀಗೆ ಭೂ ಎಂದರೆ ಭೂಮಿ ಅಂದರೆ ಆಶ್ರಯ, ವಿಶೇಷತಃ ಭೂ ಎಂದರೆ ಸರ್ವಾಶ್ರಯ ಎಂತಲೂ. ಭವನಂ ದೀಪ್ತಿಃ ವಿಶಿಷ್ಟಕಾಂತಿಃ ವಿಭವನಂ ಅಂದರೆ ಸೂರ್ಯಾದಿಗಳನ್ನು ತಿರಸ್ಕರಿಸುವ ಕಾಂತಿ, ಅಥವಾ ಭವನಂ ಅಭಿಭವನಂ ಅಂದರೆ ಶತ್ರುಗಳಿಗೆ ಪರಾಭವವು. ಅಥವಾ "ಭೂ ಸತ್ತಾಯಾಂ" ಎಂಬ ಧಾತುವಿನಿಂದ ಭವನಂ ಎಂದರೆ ಇರುವುದು, ವಿಶಿಷ್ಟ ಇರೋಣವೇ ವಿಭವನ, ಅಂದರೆ ಸರ್ವದಾ ಇರುವುದು ನಿತ್ಯತ್ವವು — ಅಥವಾ ವಿ=ವಿಶಿಷ್ಟ ಅಂದರೆ ಸರ್ವತ್ರ ಭವನಂ=ಇರೋಣವು ವ್ಯಾಪ್ತಿಃ ಯದ್ವಾ ಭವನ=ತಿರೋಭವನ ಅಂದರೆ ಅದೃಶ್ಯತ್ವವು. ವಿಶಿಷ್ಟ ಭವನವೆಂದರೆ ತನ್ನ ಅನುಗ್ರಹವಿಲ್ಲದೆ ಯಾರ ಪ್ರಯತ್ನದಿಂದಲೂ ತೋರದಿರೋಣ. ವಿ ಅಂದರೆ ಉತ್ಕೃಷ್ಟಗಳೂ, ಸರ್ವೋತ್ತಮಗಳೂ,

ಪೂರ್ಣಗಳೂ ಆದ ಜ್ಞಾನ, ಸರ್ವಾಧಾರತ್ವ ಸರ್ವಪ್ರಕಾಶಕತ್ವ, ಸರ್ವಾಭಿಭಾವಕತ್ವ, ಸರ್ವದಾ ವಿದ್ಯಮಾನತ್ವ, ಸರ್ವದೇಶ ಸರ್ವಕಾಲಗಳಲ್ಲಿ ವ್ಯಾಪ್ತತ್ವ, ಸರ್ವಪ್ರಯತ್ನದಿಂದಲೂ ತನ್ನ ಅನುಗ್ರಹವಿಲ್ಲದೆ ಅದೃಶ್ಯತ್ವ ಇತ್ಯಾದಿ ಗುಣಗಳುಳ್ಳವನೆಂತ ಏಳನೇ ವಿಶೇಷಣವಾದ ವಿಭುಪದದ ಅರ್ಥವು. ಸೃಷ್ಟಿಯ ಆದಿಯಲ್ಲಿ ತನ್ನ ಉದರಲ್ಲಿದ್ದ ಜಗತ್ತನ್ನು ಹೊರಗೆ ಪ್ರಕಟಿಸಿದುವರಿಂದ ಆದೌ ಯಾಪಯತಿ ಎಂಬ ವ್ಯುತ್ಪತ್ತಿಯಿಂದ ಆದ್ಯಂ ಎಂಬ ಎಂಟನೇ ವಿಶೇಷಣಕ್ಕೆ ಸಕಲಜಗತ್ತಿನ ಪ್ರಾಥಮಿಕ ಸೃಷ್ಟಿಕರ್ತನೆಂಬ ಅರ್ಥವು ಸಿಗುತ್ತದೆ. ಈಶಂ ಎಂಬ ಒಂಭತ್ತನೇ ವಿಶೇಷಣಕ್ಕೆ 'ಈಶ್ಲ್ವ ಶಕ್ತೌ' ಎಂಬ ಧಾತುವಿನಿಂದ ಹುಟ್ಟಿದ ಈಶಪದಕ್ಕೆ ಸರ್ವಶಕ್ತನೆಂದರ್ಥವು. ಇನ್ನು ಭವಘ್ನಂ ಎಂಬ ಹತ್ತನೇ ವಿಶೇಷಣಕ್ಕೆ ಭವವೆಂದರೆ ಸಂಸಾರ ಅದನ್ನು ಘ್ನ ಎಂದರೆ ನಾಶಪಡಿಸುವವನು. ಅಂದರೆ ಸಂಸಾರನಿವೃತ್ತಿರೂಪ ಮೋಕ್ಷದಾತನೆಂದಾಗುತ್ತದೆ. ಅಮರಾಸುರಸಿದ್ಧವಂದ್ಯಂ ಎಂಬ ಹನ್ನೊಂದನೇ ವಿಶೇಷಣಕ್ಕೆ ಸ್ವಲ್ಪ ವಿಚಾರಮಾಡಿ ಅರ್ಥವನ್ನು ವಿವರಿಸಬೇಕು. ಇಲ್ಲಿ ಅಮರರು, ಅಸುರರು, ಸಿದ್ಧರು ಇವರಿಂದ ವಂದ್ಯನೆಂದು ಯಥಾಶ್ರುತವಾಗಿ ಅರ್ಥ ತೋರುತ್ತದೆ. ಇದು ಶಾಸ್ತ್ರವಿರುದ್ಧವು. ಶಾಸ್ತ್ರದಲ್ಲಿ ದೇವರಿಗೆ ಅಸುರವಂದ್ಯತ್ವವನ್ನು ಹೇಳಲಿಲ್ಲ. ಆದಕಾರಣ ಇಲ್ಲಿಯ ಅಸುರಪದಕ್ಕೆ ಯಥಾಶ್ರುತವಾಗಿ ತೋರುವ ಅರ್ಥವು ವಿವಕ್ಷಿತವಲ್ಲ. ಮತ್ತೆ ಅಸು ಎಂದರೆ ಪ್ರಾಣ. ಅವುಗಳನ್ನು ರಮಯಂತಿ ಅಂದರೆ ಸಂತೋಷಪಡಿಸುತ್ತಾರೆ, ಎಂತ ಅಸುರಾಃ ಅಂದರೆ ತತ್ತ್ವಾಭಿಮಾನಿ ದೇವತೆಗಳು. ನಮ್ಮ ಅಸುಗಳಿಗೆ ಅನ್ನಪಾನಾದಿಗಳನ್ನು ಕೊಟ್ಟು, ನಡಿಸಿದರೆ ಅವುಗಳು ಸಂತೋಷದಿಂದ ಇರುತ್ತವೆ. ಹಾಗೆ ದೇವತೆಗಳು ಅನುಗ್ರಹಿಸದಿದರೆ ದೌರ್ಬಲ್ಯ ಮಾಂದ್ಯ ಕಾಸಾದಿರೂಪದಿಂದ ಅವುಗಳ ಸಂಚಾರಕ್ಕೆ ಬಹಳ ಕಷ್ಟ ಬಂದು ಅವುಗಳು ನಮಗೆ ದುಃಖದಾಯಕಗಳಾಗುತ್ತವೆ. ಆದಕಾರಣ ನಮ್ಮ ಶ್ವಾಸಾದಿ ವಾಯುಗಳಿಗೆ ಸುಖದಾಯಕರಾದ ತತ್ತ್ವಾಭಿಮಾನಿ ದೇವತೆಗಳೇ ಇಲ್ಲಿ ಅಸುರಪದವಾಚ್ಯರು ಸಿದ್ಧರೆಂದರೆ ಮುಕ್ತಿ ಹೊಂದಿದವರು. ಇಂತಹ ಅಸುರರು=ದೇವತೆಗಳು ಇವರಿಂದ ವಂದ್ಯನು=ನಮಸ್ಕರಿಸಿಕೊಂಡವನೆಂದು ಹನ್ನೊಂದನೇ ವಿಶೇಷಣದ ಅರ್ಥವಾಗುತ್ತದೆ. ಹೀಗೆ ಭಾರತದ ಮಂಗಲಾಚರಣರೂಪ ಪ್ರಥಮಪದ್ಯದಲ್ಲಿ ಉಕ್ತರೀತಿಯಿಂದ ಸಕಲಗುಣವಿಶಿಷ್ಟನಾದ ವಿಷ್ಣುವನ್ನೇ ಹೇಳಿದ ಪ್ರಯುಕ್ತ ಇಡೀ ಭಾರತದ ಅರ್ಥವನ್ನು ಹೇಳಿದಂತಾಯಿತು. ಸಕಲ ಭಾರತದಲ್ಲಿ ಗುಣಗಣಪೂರ್ಣನಾದ ವಿಷ್ಣುವೇ ಪ್ರತಿಪಾದ್ಯನೆಂದು ಬೇರೆ ಹೇಳಬೇಕಾಗಿಲ್ಲ. ಇಷ್ಟು ಮಾತ್ರವಲ್ಲ ಸಕಲ ಶಾಸ್ತ್ರಗಳದ್ದೂ ಪುರಾಣಗಳದ್ದೂ ಹೆಚ್ಚೇನು?—ನಾಟಕಾದಿ ಕಾವ್ಯಕಾರರದ್ದೂ ಒಂದು ಸಂಪ್ರದಾಯವಿದೆ ಅದೇನೆಂದರೆ ಶ್ರೋತೃಗಳ ಮನಸ್ಸಮಾಧಾನಕ್ಕಾಗಿ ಇಡೀ ಮುಂದಿನ ಗ್ರಂಥದಲ್ಲಿ ನಿರೂಪಿಸುವ ವಿಷಯವನ್ನು ಆದಿಯಲ್ಲಿ ಸಂಕ್ಷೇಪದಿಂದ ಸೂಚಿಸುವುದು. ಈ ಲೋಕಸಂಪ್ರದಾಯವನ್ನು ಸರ್ವಜ್ಞರಾದ ವ್ಯಾಸರೂ ಬಿಡಲಿಲ್ಲ ಮಾತ್ರವಲ್ಲ 'ಸಂಕ್ಷೇಪವಿಸ್ತರಾಭ್ಯಾಂ ತು ಕಥಯಂತಿ ಮನೀಷಿಣಃ' ಎಂಬ ಪ್ರಮಾಣಸಿದ್ಧವೂ ಆಗಿದೆ ತಾವು ಹೇಳುವ ದೇವತಾದಿ ವಿಷಯವನ್ನು ಅನೇಕಸಲ ಸ್ಮರಣೆಗೆ ತಂದಪ್ರಯುಕ್ತ, ಮಹಾಫಲವೂ ಪ್ರಮಾಣಸಿದ್ಧವೆಂಬುವಲ್ಲಿ "ಬಹುವಾರಸ್ಯ ಕೀರ್ತಸ್ಯ ಫಲಬಾಹುಲ್ಯಕಾರಣಾತ್" ಎಂಬ ವಾಕ್ಯವು ಪ್ರಮಾಣವು.

ಹೀಗೆ ಆದಿಮಪದ್ಯದಲ್ಲಿ ಹೇಳಿದ ವಿಷ್ಣುಸರ್ವೋತ್ತಮತ್ವವನ್ನು ಮಧ್ಯೇಮಧ್ಯೇ ಅಲ್ಲಲ್ಲಿ ತಪ್ಪದೆ ನಿರೂಪಿಸಿ, ಅದೇ ವಿಷ್ಣುಸರ್ವೋತ್ತಮತ್ವವನ್ನೇ ಅಂತ್ಯದಲ್ಲಿಯೂ ಶಪಥಪೂರ್ವಕವಾಗಿ ನಿರೂಪಿಸಿದ್ದರಿಂದ ಲಕ್ಷಸಂಖ್ಯಾಕವಾದ ಈ ಭಾರತಗ್ರಂಥದಲ್ಲಿ ವಿಷ್ಣುಸರ್ವೋತ್ತಮತ್ವವೇ ಪ್ರತಿಪಾದ್ಯವೆನ್ನುವುದು ಆಪಾಮರಸಾಧಾರಣವಾದುದು. ಅದನ್ನು ಇಲ್ಲಿ ಸಂಕ್ಷೇಪತಃ "ಸ್ಥಾಲೀಪುಲಾಕ"ನ್ಯಾಯದಿಂದ ತೋರಿಸುವೆವು. ಆದಿಪದ್ಯಾರ್ಥವನ್ನು ನಿರೂಪಿಸಿರುವೆವು. "ಸಸುರಾಸುರಗಂಧರ್ವಂ ಸಯಕ್ಷೋರಗರಾಕ್ಷಸಂ । ಜಗದ್ವಶೇ ವರ್ತತೇದಂ ಕೃಷ್ಣಸ್ಯ ಸಚರಾಚರಂ" "ವಿಶ್ವಂ ವಿಷ್ಣುರ್ವಷಟ್ಕಾರೋ ಭೂತಭವ್ಯಭವತ್ಪ್ರಭುಃ । ........ಪೂತಾತ್ಮಾ ಪರಮಾತ್ಮಾ ಚ ಮುಕ್ತಾನಾಂ ಪರಮಾ ಗತಿಃ" "ವಿಷ ನಿಷ್ಕಂಟಕ

ಪಂಥಾಃ ಯತ್ರ ಸಂಪೂಜ್ಯತೇ ಹರಿಃ । ಕುಪಥಂ ತಂ ವಿಜಾನೀಯಾದ್ಗೋವಿಂದರಹಿತಾಗಮಂ" "ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ । ಬ್ರಹ್ಮಾ ಮಾಮಾಶ್ರಿತೋ ನಿತ್ಯಂ ನಾಹಂ ಕಂಚಿದುಪಾಶ್ರಿತಃ" "ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ । ಸತ್ಯಂ ಸತ್ಯಂ ಪುನಸ್ಸತ್ಯಮುದ್ಧೃತ್ಯ ಭುಜಮುಚ್ಯತೇ । ವೇದಶಾಸ್ತ್ರಾತ್ಪರಂ ನಾಸ್ತಿ ನ ದೈವಂ ಕೇಶವಾತ್ಪರಂ" ಹೀಗೆ ಶಪಥಪೂರ್ವಕವಾಗಿ ಕೈ ಎತ್ತಿಕೊಂಡು ವಿಷ್ಣುಸರ್ವೋತ್ತಮತ್ವವನ್ನು ಉದ್ಘೋಷಿಸಿದುದರಿಂದ ಇದಕ್ಕೆ ಅನ್ಯಾರ್ಥವನ್ನು ಹೇಳುವವರನ್ನು ಕುರುಡರೆಂದರೂ ತಪ್ಪಾಗದು. ಇದೇ ರೀತಿಯಾಗಿ ವಿಷ್ಣುಸರ್ವೋತ್ತಮತ್ವವನ್ನು ಭಾರತಭಾಗಗಳಿಂದ ಸಮರ್ಥಿಸಲು ಹೊರಟರೆ ಅದೇ ಒಂದು ಗ್ರಂಥದಂತಾಗಬಹುದು. ಅದಕ್ಕೆ ಈಗ ಅವಕಾಶವಿಲ್ಲದ ಕಾರಣ ಈಗ ಆ ವಿಷಯನಿರೂಪಣೆಯನ್ನು ಉಪರಮಿಸುವೆವು.

ಇದೇ ರೀತಿಯಲ್ಲಿ ದರ್ಶನಭಾಷಾ, ಸಮಾಧಿಭಾಷಾ, ಗುಹ್ಯಭಾಷಾ ಎಂಬ ಮೂರು ಭಾಷಾ ರೀತಿಯಿಂದಲೂ ಪ್ರಾಜ್ಞರು ಅರ್ಥವನ್ನು ನಿರೂಪಿಸುವರು. ಈಗ ಇಲ್ಲಿ ಅದಕ್ಕೂ ಅವಕಾಶವಿಲ್ಲ. ನಾವು ನಿರೂಪಿಸುವುದಿಲ್ಲ. ಈಗ ನಾವು ಹೊರಟದ್ದು ಸಭಾಷ್ಯ ಸತಾತ್ಪರ್ಯ ಶ್ರೀಮದ್ಭಗವದ್ಗೀತೆಯ ಮುನ್ನುಡಿ ಬರೆಯಲು ಅದಕ್ಕೆ ಉಪಪಾದಕವಾಗಿ ಇಷ್ಟು ಬರೆದದ್ದು. ಈ ಭಾರತವೆಂಬುವುದು ಸರ್ವಶಾಸ್ತ್ರಗಳಲ್ಲಿ ಉತ್ತಮವೆಂತಲೂ. ಆ ಭಾರತದಲ್ಲಿ ಶ್ರೀಮದ್ಭಗವದ್ಗೀತೆಯು ಶ್ರೇಷ್ಠವೆಂತಲೂ "ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ" ಎಂಬ ಪ್ರಮಾಣಸಿದ್ಧವು.

ಯುದ್ಧಭೂಮಿಯಾದ ಕುರುಕ್ಷೇತ್ರದಲ್ಲಿ ಉಭಯಸೇನೆಯು ಯುದ್ಧಸನ್ನದ್ಧವಾಗಿ ಬಂದು ನಿಂತಿರಲು ತನ್ನ ಶೌರ್ಯದಲ್ಲಿಯೇ ಹೆಮ್ಮೆಯಿಟ್ಟಿರುವ ಪಾರ್ಥನು ಯುದ್ಧಸನ್ನದ್ಧನಾಗಿ ಬಂದು ನಿಂತು ತನ್ನ ಇದಿರಿನಲ್ಲಿರುವ ತನ್ನ ಬಂಧು-ಗುರು-ಮಿತ್ರವರ್ಗದವರನ್ನು ನೋಡಿದಾಕ್ಷಣ ತನ್ನ ಶಸ್ತ್ರಗಳನ್ನು ಚೆಲ್ಲಿಬಿಟ್ಟು ಹೇಡಿಯಂತೆ ನಿರ್ವೀರ್ಯನಂತೆ ಯುದ್ಧಪರಾಙ್ಮುಖನಾಗಿ ಶೋಕಾಕ್ರಾಂತನಾಗಲು, ಆಗ ಆತಗೆ ತತ್ತ್ವೋಪದೇಶವನ್ನು ಕೊಟ್ಟು ನವಚೈತನ್ಯವನ್ನು ತುಂಬಿ ಯುದ್ಧೋನ್ಮುಖನನ್ನಾಗಿ ಮಾಡಿ. "ಹೇ ಕೃಷ್ಣ! ನಿನ್ನಾಜ್ಞೆಯಂತೆ ನಡೆವೆ"ನೆಂದು ಅವನಿಂದಲೇ ಹೇಳಿಸಿ. ಹೃಷ್ಟಚಿತ್ತನನ್ನಾಗಿ ಮಾಡಿದ, ಅರಸಿಕರಿಗೆ ರಸಿಕತನವನ್ನೀಯುವಂತಹುದೂ. ನೈರಾಶ್ಯವಾದಿಗಳಿಗೆ ಆಶಾಪೂರಕವೂ, ದುಃಖಸಾಗರಮಗ್ನರಿಗೆ ಮಾರ್ಗದರ್ಶಕವೂ, ಜ್ಞಾನಶೂನ್ಯರಿಗೆ ಜ್ಞಾನಪ್ರದವೂ, ಮಾರ್ಗಭ್ರಷ್ಟರಿಗೆ ಸನ್ಮಾರ್ಗದರ್ಶಕವೂ, ದುರ್ವಿನೀತರಿಗೆ ಸನ್ನೀತಿದಾಯಕವೂ ಕಿಂಕರ್ತವ್ಯತಾಮೂಢರಿಗೆ ಕರ್ತವ್ಯಬೋಧಕವೂ, ಪಾಪಮಾರ್ಗಾನುಸಾರಿಗಳಿಗೆ ಸನ್ಮಾರ್ಗದಾಯಿಯೂ ಜ್ಞಾನಿಗಳಿಗೆ ದಿವ್ಯಜ್ಞಾನಜನಕವೂ, ಕರ್ಮಿಗಳಿಗೆ ನಿವೃತ್ತಕರ್ಮಬುದ್ಧಿಪ್ರದವೂ, ಭಕ್ತರಿಗೆ ಭಾವೋದ್ರೇಕದಾಯಕವೂ, ನಾಸ್ತಿಕರಿಗೆ ಆಸ್ತಿಕ್ಯಬುದ್ಧಿದಾಯಕವೂ ಆಗಿದೆ. ಕಿಂ ಬಹುನಾ? ಜಾತಿ ನೀತಿ ಪಂಥಾದಿ ಯಾವ ವಿಶೇಷವನ್ನೂ ಅವಲಂಬಿಸದೆ ಸರ್ವರಿಗೂ ಆದರಣೀಯವಾಗಿರುವ ಶ್ರೀ ಕೃಷ್ಣ ಭಗವಂತನ ದಿವ್ಯ ವಾಣೀಚಮತ್ಕಾರಸರ್ವಸ್ವವೇ ಈ ಗೀತೆಯು.

ಹಿಂದೆ ಹೇಳಿದಂತೆ ವೇದಾಧಿಕಾರವಿಲ್ಲದ ಸ್ತ್ರೀ ಶೂದ್ರ ಬ್ರಹ್ಮಬಂಧುಗಳಿಗೂ ಧರ್ಮಜ್ಞಾನದ್ವಾರಾ ಮೋಕ್ಷವಾಗಲೆಂಬ ಸದುದ್ದೇಶದಿಂದ ರಚಿತವಾದ ಸಂಭವ. ಸಭಾ ಅರಣ್ಯ, ವಿರಾಟ, ಉದ್ಯೋಗ, ಭೀಷ್ಮ, ದ್ರೋಣ ಕರ್ಣ, ಶಲ್ಯ. ಗದಾ. ಸೌಪ್ತಿಕ, ಶಾಂತಿ. ಆನುಶಾಸನಿಕ, ಆಶ್ವಮೇಧಿಕ, ಮೌಸಲ ಮಹಾಪ್ರಸ್ಥಾನ, ಸ್ವರ್ಗಾರೋಹಣ, ಭವಿಷ್ಯತ್ ಎಂಬ (18) ಹದಿನೆಂಟು ಪರ್ವಾತ್ಮಕವಾದ ಮಹಾಭಾರತದ ಭೀಷ್ಮಪರ್ವದಲ್ಲಿ ಭಾರತವೆಂಬ ಪಾರಿಜಾತದ ಮಧುಭೂತವಾಗಿಯೂ, ಸರ್ವಭಾರತತಾತ್ಪರ್ಯಸಂಗ್ರಹರೂಪವಾಗಿಯೂ ಇರುವ ಶ್ರೀ ಕೃಷ್ಣಾರ್ಜುನರ ಸಂವಾದಾತ್ಮಕವಾದ ಗೀತೆಯು(18) ಹದಿನೆಂಟು ಅಧ್ಯಾಯಾತ್ಮಕವಾಗಿದೆ ಎಂದು ಸರ್ವವಿದಿತವಷ್ಟೆ! ಅದನ್ನು ಆರರಿಂದ ಭಾಗಿಸಿದರೆ (3) ಮೂರು ಷಟ್ಕಗಳಾಗುವವಷ್ಟೆ!

ಅದರ ಪ್ರಥಮ ಷಟ್ಕದಲ್ಲಿ ಅಂದರೆ ಮೊದಲಿನ ಆರು ಅಧ್ಯಾಯಗಳಲ್ಲಿ ಜ್ಞಾನೋಪಾಯಗಳನ್ನು ಹೇಳಿರುವರು. ಎರಡನೇ ಷಟ್ಕದಲ್ಲಿ ಅಂದರೆ ಏಳರಿಂದ ಹನ್ನೆರಡರ ತನಕದ ಆರು ಅಧ್ಯಾಯಗಳಲ್ಲಿ ಉಪಾಯ ಸಾಧ್ಯವಾದ ಜ್ಞಾನವನ್ನು ನಿರೂಪಿಸಿರುವರು:- ತೃತೀಯ ಷಟ್ಕದಲ್ಲಿ ಅಂದರೆ ಹದಿಮೂರರಿಂದ ಅಂತ್ಯದ ತನಕದ ಆರು ಅಧ್ಯಾಯಗಳಲ್ಲಿ ಹಿಂದೆ ನಿರೂಪಿಸಿದ ಜ್ಞಾನೋಪಾಯ ಮತ್ತು ಜ್ಞಾನಗಳನ್ನೇ ಬುದ್ಧ್ಯಾರೂಢವಾಗುವ ಉದ್ದಿಶ್ಯ ವಿವರಿಸಿ ನಿರೂಪಿಸಿದ್ದಾರೆ.

೧ ಒಂದನೇ ಅಧ್ಯಾಯದಲ್ಲಿ:—ಅದರಲ್ಲಿಯೂ ಪ್ರಥಮಾಧ್ಯಾಯ ಮತ್ತು ದ್ವಿತೀಯಾಧ್ಯಾಯದ ಹತ್ತು ಶ್ಲೋಕಗಳ ಪರ್ಯಂತ ಅರ್ಜುನನಿಗೆ ಶ್ರೀ ಕೃಷ್ಣನು ಉಪದೇಶಕೊಡಲು ಪ್ರಸಕ್ತಿ ತಂದೊಡ್ಡುವ ವಿಷಯವನ್ನು ನಿರೂಪಿಸಿದ್ದಾರೆ.

೨ ಎರಡನೇ ಅಧ್ಯಾಯ ದಲ್ಲಿ:—ಭಗವದಾರಾಧನರೂಪವಾಗಿ ತನಗೆ ವಿಹಿತವಾದ ವೃತ್ತಿಯನ್ನನುಸರಿಸುವುದೇ ಧರ್ಮವು. ಅದನ್ನಾಚರಿಸದಿರುವುದೇ ಅಧರ್ಮವು. ಪ್ರಕೃತ ಕ್ಷತ್ರಿಯರಿಗೆ ಶ್ರೀಮನ್ನಾರಾಯಣನ ಮತ್ತು ತದ್ಭಕ್ತರ ದ್ವೇಷಿಗಳೂ ಅವರ ಅನುಯಾಯಿಗಳೂ ಇವರ ನಿಗ್ರಹವೇ ಪರಮ ಧರ್ಮವು. ಅಂತಹ ಸ್ವವರ್ಣಾಶ್ರಮೋಚಿತವಾಗಿ ಬಂದ ಈ ದುಷ್ಕರ ನಿಗ್ರಹರೂಪ ಧರ್ಮವನ್ನು ಬಂಧುವ್ಯಾಮೋಹದಿಂದ ಅಧರ್ಮವೆಂದು ಶಂಕಿಸುವ ಅರ್ಜುನನಿಗೆ ನಾವು ಹಿಂದೆ ಹೇಳಿದ ದ್ವೇಷಿಗಳ ನಿಗ್ರಹವೇ ಪರಮ ಧರ್ಮ, ತದ್ವಿರುದ್ಧವಾದುದು ಸರ್ವವೂ ಅಧರ್ಮವೆಂತ ಬೋಧಿಸುವವನಾಗಿ ಈಗ ನಿನಗೆ ಪ್ರಾಪ್ತವಾದ ಬಂಧುನಿಗ್ರಹ ನಿಮಿತ್ತ ನೀನು ತಿಳಿದುಕೊಂಡ ಶೋಕವು ಅವಿವೇಕಮೂಲಕವೆಂದು ನಿರೂಪಿಸಿದ್ದಾರೆ.

೩ ಮೂರನೇ ಅಧ್ಯಾಯದಲ್ಲಿ:—'ಏಷಾ ತೇಽಭಿಹಿತಾ ಸಾಂಖ್ಯೇ' ಎಂಬುವ ತನಕ ಜೀವೇಶ್ವರರ ಸ್ವರೂಪವನ್ನು ನಿರೂಪಣಮಾಡಿ 'ಯೋಗೇ ತ್ವಿಮಾಂ ಶೃಣು' ಎಂಬುದರಿಂದ ಜ್ಞಾನೋಪಾಯವನ್ನು ಕೇಳು, ಎಂದು ಪ್ರತಿಜ್ಞಾಮಾಡಿ 'ತ್ರೈಗುಣ್ಯವಿಷಯಾ ವೇದಾಃ' ಇತ್ಯಾದಿಗಳಿಂದ ಆ ಉಪಾಯವನ್ನು ಹೇಳಿ 'ಕರ್ಮಜಂ ಬುದ್ಧಿಯುಕ್ತಾ ಹಿ' ಇತ್ಯಾದಿ ಶ್ಲೋಕಗಳಿಂದ ಅತ್ಯಲ್ಪ ಬಿಡಿಸಿ ನಿರೂಪಿಸಿದ್ದಾರೆ. ಅದೇ ಉಪಾಯವನ್ನು ಅವಶ್ಯವಾಗಿ ಆಚರಿಸಬೇಕೆಂದು ಬಹುವಾಗಿ ಈ ಮೂರನೇ ಅಧ್ಯಾಯದಲ್ಲಿ ನಿರೂಪಿಸುವವರಾಗಿದ್ದಾರೆ.

೪ ನಾಲ್ಕನೇ ಅಧ್ಯಾಯದಲ್ಲಿ:—ಯೋಗ. ನಿವೃತ್ತಕರ್ಮ ಎಂತ ಬೇರೆಬೇರೆ ನಾಮವುಳ್ಳ ಉಪಾಯವನ್ನೂ. ನೀಡೋಚ್ಚಭಾವದಿಂದಿರುವ ಪದಾರ್ಥಗಳ ಕೊನೆ ಅಂದರೆ ಅತ್ಯುಚ್ಚನಾಗಿರುವ ಶ್ರೀಮನ್ನಾರಾಯಣತತ್ವಜ್ಞಾನವನ್ನು ಗೀತೆಯ ನಾಲ್ಕನೇ ಅಧ್ಯಾಯದಲ್ಲಿ ಪ್ರತಿಪಾದಿಸಿರುವರು.

೫ ಐದನೇ ಅಧ್ಯಾಯದಲ್ಲಿ:—'ಯೋಗಸ್ಥಃ ಕುರು ಕರ್ಮಾಣಿ' ಎಂತಲೂ ಹಾಗೆಯೇ 'ಸಂಗಂ ತ್ಯಕ್ತ್ವಾ' ಎಂತಲೂ, ದ್ವಿತೀಯಾಧ್ಯಾಯದಲ್ಲಿ ಸಂಕ್ಷೇಪದಿಂದ ಹೇಳಿದ್ದ ತೃತೀಯಾಧ್ಯಾಯದಲ್ಲಿ ವಿಶೇಷತಃ ಸ್ಪಷ್ಟವಾಗಿ ಹೇಳಿದ ವರ್ಣಾಶ್ರಮವಿಹಿತವಾದ ಕರ್ಮಾನುಷ್ಠಾನರೂಪವಾದ ಕರ್ಮಯೋಗದ ಎರಡಂಶಗಳನ್ನು ಅಂದರೆ ಫಲಕಾಮನಾವನ್ನು ಬಿಡುವುದು ಒಂದಂಶ, ಈಶ್ವರಾರ್ಪಣಬುದ್ಧಿಯಿಂದ ಮಾಡುವುದು ಇನ್ನೊಂದಂಶ—ಹೀಗೆ ಎರಡಂಶವುಳ್ಳ ಕರ್ಮಯೋಗವನ್ನು ಈ ಐದನೆಯ ಅಧ್ಯಾಯದಲ್ಲಿ ಹೇಳಿರುವರು.

೬ ಆರನೇ ಅಧ್ಯಾಯದಲ್ಲಿ:—"ಬುದ್ಧಿಯೋಗೇ ತ್ವಿಮಾಂ ಶೃಣು" ಎಂತ ಪ್ರತಿಜ್ಞಾತವಾದ ಯೋಗವು ಎರಡು ವಿಧ--ಕರ್ಮಯೋಗ, ಧ್ಯಾನಯೋಗವೆಂದು. ಅದರಲ್ಲಿ ಕರ್ಮಯೋಗವು ಜ್ಞಾನವನ್ನು ಕುರಿತು ಬಹಿರಂಗ ಸಾಧನವು. ಜ್ಞಾನಕ್ಕೆ ಅಂತರಂಗ ಸಾಧನವು ಧ್ಯಾನಯೋಗವೇ. ಅಂತಹ ಧ್ಯಾನಯೋಗವು ಕರ್ಮಯೋಗಸಾಧ್ಯವಾದ ಕಾರಣ ಕರ್ಮಯೋಗವನ್ನು ನಿರೂಪಿಸಿ ಜ್ಞಾನಕ್ಕೆ

ಸಾಧಕವಾದ ಪ್ರಯುಕ್ತ ಈಗ ಹೇಳುವುದು ಯುಕ್ತವಾದುದರಿಂದ ಈ ಆರನೇ ಅಧ್ಯಾಯದಲ್ಲಿ ಧ್ಯಾನಯೋಗವನ್ನು ನಿರೂಪಣಮಾಡುತ್ತಾರೆ.

೭ ಏಳನೇ ಅಧ್ಯಾಯದಲ್ಲಿ: — ಯದ್ಯಪಿ ಆಸನಾದ್ಯಂಗಗಳನ್ನು ನಿರೂಪಿಸುವರು. ಆದರೆ ಅದು ಧ್ಯಾನಯೋಗದ ಉದ್ದಿಶ್ಯ ಹೇಳುವುದರಿಂದ ಧ್ಯಾನಯೋಗವೇ ಮುಖ್ಯ ನಿರೂಪಣೀಯವು. ಹೀಗೆಯೇ ಧ್ಯಾನಯೋಗದಲ್ಲಿ ಹಿಂದೆ ಹೇಳಿದ ಕರ್ಮಯೋಗವು ಅಧಿಕಾರ ಪ್ರಯೋಜಕವಾಗಿದ್ದ ಪ್ರಯುಕ್ತ ಅದನ್ನು ಇಲ್ಲಿ ನಿರೂಪಿಸಿದರೂ ಅದು ಮುಖ್ಯ ನಿರೂಪಣೀಯವಲ್ಲವೆಂದು ತಿಳಿಯತಕ್ಕದ್ದು. ಹೀಗೆ ಜ್ಞಾನದ ಬಹಿರಂಗಸಾಧನವಾದ ಕರ್ಮಯೋಗವನ್ನು ಸಂಕ್ಷೇಪ ವಿಸ್ತಾರಗಳಿಂದ ಐದು ಅಧ್ಯಾಯಪರ್ಯಂತ ನಿರೂಪಿಸಿ ಅಂತರಂಗಸಾಧನವಾದ ಧ್ಯಾನಯೋಗವನ್ನು ಆರನೇ ಅಧ್ಯಾಯದಲ್ಲಿ ನಿರೂಪಣಮಾಡಿ, ಅಂತಹ ಧ್ಯಾನವು ಭಕ್ತಿಪೂರ್ವಕವಾಗಿ ಅನುಷ್ಠಿತವಾದರೇನೇ ಜ್ಞಾನಸಾಧಕವಾಗುತ್ತದೆ. ಶಿಶುಪಾಲಾದಿಗಳಂತೆ ದ್ವೇಷಪೂರ್ವಕವಾದ ಧ್ಯಾನವು ಜ್ಞಾನಸಾಧಕವಲ್ಲ. ಅಂತಹ ಭಕ್ತಿಯು ಹುಟ್ಟಲಿಕ್ಕೆ ಭಗವನ್ಮಾಹಾತ್ಮ್ಯವನ್ನು ಇನ್ನು ಮೇಲಿನ ಆರು ಅಧ್ಯಾಯಗಳಲ್ಲಿ ನಿರೂಪಿಸುತ್ತಾರೆ. "ನ ತ್ವೇವಾಹಂ ಜಾತು ನಾಸಂ" ಇತ್ಯಾದಿಗಳಿಂದ ಪೂರ್ವದ ಅಧ್ಯಾಯಷಟ್ಕದಲ್ಲಿ ಭಗವನ್ಮಾಹಾತ್ಮ್ಯವನ್ನು ನಿರೂಪಿಸಿದ್ದರೂ ಸಾಧನವನ್ನೇ ಪ್ರಧಾನವಾಗಿ ಹೇಳಿದ ಕಾರಣ ಅದಕ್ಕೆ ಸಾಧನವನ್ನು ಹೇಳುವುದರಿಂದ ಸಾಧನ ಷಟ್ಕವೆಂದು ಹೆಸರು. ಇಲ್ಲಿ ಮಾಹಾತ್ಮ್ಯವನ್ನು ಜಾಸ್ತಿ ನಿರೂಪಿಸಿದ್ದರಿಂದ ಅಧ್ಯಾಯಷಟ್ಕಗಳ ಅರ್ಥ ಭೇದವನ್ನು ತಿಳಿಯಬೇಕು. ಅದರಲ್ಲಿ ಪ್ರತಿಜ್ಞಾ ಮಾಡಿದ ಮಾಹಾತ್ಮ್ಯವನ್ನು 'ಮಯ್ಯಾಸಕ್ತ' ಇತ್ಯಾದಿಗಳಿಂದ ಈ ಅಧ್ಯಾಯದಲ್ಲಿ ಹೇಳಲಿಕ್ಕೆ ಉಪಕ್ರಮ ಮಾಡುವನು.

೮ ಎಂಟನೇ ಅಧ್ಯಾಯದಲ್ಲಿ: — ಅಂತಕಾಲದಲ್ಲಿ ಸ್ಮರಣೀಯತ್ವವನ್ನೂ ಪ್ರಾಪ್ಯತ್ವವನ್ನೂ ಪರಮಾತ್ಮ ಮಹಿಮಾರೂಪವಾದದ್ದು ನಿರೂಪಿಸುವನು. ಅದಕ್ಕೋಸ್ಕರ ಪೂರ್ವಾಧ್ಯಾಯದ ಅಂತ್ಯದಲ್ಲಿ "ತೇ ಬ್ರಹ್ಮ ತದ್ವಿದುಃ" "ಪ್ರಯಾಣಕಾಲೇಽಪಿ ಚ ಮಾಂ" ಎಂತ ಹೇಳಿದ್ದಕ್ಕೂ ವ್ಯಾಖ್ಯಾನವನ್ನು ಈ ಅಧ್ಯಾಯದಲ್ಲಿ ಮಾಡುತ್ತಾರೆ. ತತ್ಸಂಗಾತ್ ಅಂತ್ಯಕಾಲದ ಸ್ಮರಣಫಲವೂ ಅದರ ಉಪಾಯಪ್ರಕಾರವೂ ಬ್ರಹ್ಮಪ್ರಾಪ್ತಿಯ ಮಾರ್ಗವೂ ಈ ಅಧ್ಯಾಯದಲ್ಲಿ ನಿರೂಪಿತವಾಗಿದೆ.

೯ ಒಂಭತ್ತನೇ ಅಧ್ಯಾಯದಲ್ಲಿ: — ಏಳನೇ ಅಧ್ಯಾಯದಲ್ಲಿ 'ಸಾಧಿಭೂತಾಧಿದೈವಂ ಮಾಂ' ಎಂದು ಹೇಳಿದ ಭಗವನ್ಮಾಹಾತ್ಮ್ಯವನ್ನು ಈ ಅಧ್ಯಾಯದಲ್ಲಿ ಬಿಡಿಸಿ ಹೇಳುತ್ತಾರೆ. ಇಂತಹ ಮಾಹಾತ್ಮ್ಯ ನಿರೂಪಣವನ್ನು ಮಾಡಬೇಕಾದರೆ ಅಧ್ಯಾತ್ಮಾದಿ ಪದಾರ್ಥವನ್ನು ತಿಳಿದುಕೊಳ್ಳುವುದು ಅಗತ್ಯವಾಗಿರುವ ಕಾರಣ ಆ ಪದಗಳ ಅರ್ಥವನ್ನು ಎಂಟನೇ ಅಧ್ಯಾಯದಲ್ಲಿ ನಿರೂಪಿಸಿ ಭಗವನ್ಮಾಹಾತ್ಮ್ಯನಿರೂಪಣವು ಅವಸರ ಪ್ರಾಪ್ತವಾದದ್ದಾಗಿದೆ.

೧೦ ಹತ್ತನೇ ಅಧ್ಯಾಯದಲ್ಲಿ: — ಷಷ್ಠಾಧ್ಯಾಯದಲ್ಲಿ ಧ್ಯಾನಯೋಗವನ್ನು ನಿರೂಪಿಸಿ, ನವಮಾಧ್ಯಾಯದ ಅಂತ್ಯದಲ್ಲಿ 'ಮನ್ಮನಾ ಭವ' ಇತ್ಯಾದಿಗಳಿಂದ ಆ ಧ್ಯಾನವನ್ನು ನಮ್ಮ ಸ್ಮೃತಿಪಥಕ್ಕೆ ತಂದೊಡ್ಡಿ ಆ ಧ್ಯಾನವು ವಿಷಯಸಾಪೇಕ್ಷವಾದ ಪ್ರಯುಕ್ತ ವಿಷಯರೂಪವಾದ ಅಂದರೆ ಧ್ಯೇಯ ಭಗವಂತನ ವಿಭೂತಿ ರೂಪಗಳನ್ನು ವಿಸ್ತಾರದಿಂದ ಈ ಅಧ್ಯಾಯದಲ್ಲಿ ಹೇಳುವವರಾಗಿ ಆದಿಯಲ್ಲಿ ಮಹಾ ಋಷ್ಯಾದಿಗಳಿಗೆ ಅತಿ ಸಾಮರ್ಥ್ಯವಿರುವುದು ನಮಗೆ ವಿದಿತವಾದ ಪ್ರಯುಕ್ತ ಅಂತಹ ಸಾಮರ್ಥ್ಯದಿಂದ ಕೂಡಿದ ಮಹರ್ಷ್ಯಾದಿಗಳನ್ನು ನಿರ್ಮಾಣಮಾಡುವವನು ಇವನೇ ಎಂತ ಪರಮಾತ್ಮನ ವಿಶೇಷಸೃಷ್ಟಿಕರ್ತೃತ್ವವನ್ನು ನಿರೂಪಿಸುತ್ತಾರೆ

೧೧ ಹನ್ನೊಂದನೇ ಅಧ್ಯಾಯದಲ್ಲಿ: — ಪೂರ್ವಾಧ್ಯಾಯಾಂತ್ಯದಲ್ಲಿ "ವಿಷ್ಟಭ್ಯಾಹಮಿದಂ" ಎಂತ ಪರಮಾತ್ಮನ ವ್ಯಾಪ್ತರೂಪೋಪಾಸನವನ್ನು ಸಂಕ್ಷೇಪದಿಂದ ಹೇಳಿದ್ದಾರೆ. ಸಂಕ್ಷೇಪದಿಂದ ಹೇಳಿದ

ಸರಿಯಾಗಿ ಮನಸ್ಸಿಗೆ ಹಿಡಿಯದು. ಮನಸ್ಸಿಗೆ ಸರಿಯಾಗಿ ಹಿಡಿಯದೆ ಧ್ಯಾನಮಾಡಲು ಶಕ್ಯವಿಲ್ಲ. ಆದ ಕಾರಣ ಧ್ಯಾನದ ಸೌಕರ್ಯಾರ್ಥವಾಗಿ ಪೂರ್ವಾಧ್ಯಾಯಾಂತ್ಯದಲ್ಲಿ ಹೇಳಿದ ವಿಶ್ವರೂಪದ ಸ್ಥಿತಿಯನ್ನು ವಿಸ್ತಾರವಾಗಿ ಈ ಅಧ್ಯಾಯದಲ್ಲಿ ನಿರೂಪಿಸುತ್ತಾರೆ.

೧೨ ಹದಿನೆರಡನೇ ಅಧ್ಯಾಯದಲ್ಲಿ:—ಹೇಗೆ ಭಗವದುಪಾಸನವು ಮೋಕ್ಷಸಾಧನವೋ ಹಾಗೆಯೇ ಶ್ರೀ ಲಕ್ಷ್ಮೀದೇವಿಯ ಉಪಾಸನೆಯೂ ಮುಕ್ತಿಸಾಧನವೆಂತ ಮುಂದಿನ ಶ್ರುತಿಯಿಂದ ತಿಳಿಯುತ್ತದೆ. "ಶ್ರಿಯಂ ವಸಾನಾ ಅಮೃತತ್ವಮಾಯನ್" ಎಂಬ ಶ್ರುತಿಯಲ್ಲಿ ಶ್ರೀದೇವಿಯ ಉಪಾಸಕರೂ ಅಮೃತತ್ವ ಶಬ್ದವಾಚ್ಯ ಮೋಕ್ಷವನ್ನು ಹೊಂದಿದ್ದಾರಾಗಿ ಹೇಳಿದೆ. ಆದಕಾರಣ ಇದರಲ್ಲಿಯೂ ಒಂದು ಮುಖ್ಯಸಾಧನವೆಂದು ತಿಳಿಯಲೋಸುಗ ಶ್ರೀದೇವಿಯ ಉಪಾಸನಾಪೇಕ್ಷಯಾ ಶ್ರೀಪತಿಯ ಉಪಾಸನೆಯೇ ಶ್ರೇಷ್ಠವೆಂದು ಈ ಅಧ್ಯಾಯದಲ್ಲಿ ನಿರೂಪಿಸಿರುವರು.

೧೩ ಹದಿಮೂರನೇ ಅಧ್ಯಾಯದಲ್ಲಿ:—ಪೂರ್ವಾಧ್ಯಾಯಷಟ್ಕದಲ್ಲಿ ಉಕ್ತವಾದ ಅರ್ಥಗಳ ಸಂಗ್ರಹರೂಪವಾದದ್ದು ಈ ಅಧ್ಯಾಯವು. ಹೇಗೆಂದರೆ—ಅಧ್ಯಾಯಗಳ ಪ್ರಥಮಷಟ್ಕದಲ್ಲಿ "ತ್ರೈಗುಣ್ಯವಿಷಯಾ ವೇದಾಃ" ಇತ್ಯಾದಿಗಳಿಂದ ಬಹಳವಾಗಿ ಹೇಳಿದ ಜ್ಞಾನಸಾಧನವು ಷಷ್ಠಾಧ್ಯಾಯಸಮಾಪ್ತಿತನಕ ನಿರೂಪಿತವಾಯಿತು. ಪ್ರಥಮಷಟ್ಕದ ದ್ವಿತೀಯಾಧ್ಯಾಯದಲ್ಲಿ 'ನ ತ್ವೇವಾಹ' ಮಿತ್ಯಾದಿಗಳಿಂದ ಅನಾದಿ ನಿತ್ಯತ್ವಾದಿ ಜೀವಸ್ವರೂಪವನ್ನು ಹೇಳಿ, ದ್ವಿತೀಯಷಟ್ಕದಲ್ಲಿ ಭಗವತ್ಸ್ವರೂಪವನು ಹೇಳಿ, ಸಪ್ತಮಾಧ್ಯಾಯದಲ್ಲಿ 'ಭೂಮಿರಾಪ' ಇತ್ಯಾದಿಗಳಿಂದ ಕ್ಷೇತ್ರಶಬ್ದವಾಚ್ಯವಾದ ಭಗವದಾವಾಸಸ್ಥಾನವೂ ನಿರೂಪಿತವಾಗಿದೆ. ಹೀಗೆ ಅಲ್ಲಲ್ಲಿ ಹೇಳಿದ ವಿಷಯಗಳನ್ನು ಬುಧ್ಯಾರೂಢವಾಗುವ ಉದ್ದಿಶ್ಯ ಈ ಅಧ್ಯಾಯದಲ್ಲಿ ನಿರೂಪಿಸಿರುವರು.

೧೪ ಹದಿನಾಲ್ಕನೇ ಅಧ್ಯಾಯದಲ್ಲಿ:—"ಬುದ್ಧಿರ್ಯೋಗೇ ತ್ವಿಮಾಂ ಶೃಣು" ಎಂತ ದ್ವಿತೀಯಾಧ್ಯಾಯದಲ್ಲಿ ಪ್ರತಿಜ್ಞಾಮಾಡಿದ ಕರ್ಮಧ್ಯಾನಲಕ್ಷಣ ಜ್ಞಾನಸಾಧನವನ್ನು ಕಾಮಾದಿವರ್ಜನರೂಪ ಸಹಕಾರಿಸಹಿತವಾದದ್ದನ್ನು ನಿರೂಪಿಸಿ ಕಾಮಾದಿವರ್ಜನರೂಪ ಇತಿಕರ್ತವ್ಯಾಂಶ (ಸಹಕಾರಿ) ಯನ್ನು ಉತ್ತರದ ಐದು ಅಧ್ಯಾಯದಲ್ಲಿ ಬಿಡಿಸಿ ನಿರೂಪಿಸುತ್ತಾನೆ. ಅದರಲ್ಲಿ ಬಂಧದ ರೀತಿಯನ್ನು ತಿಳಿದರೆ ತನ್ನಿವೃತ್ತಿಸಾಧನಗಳಾದ ಆ ಸಹಕಾರಿಗಳನ್ನು ಅನುಷ್ಠಾನಾರ್ಥ ನಿರೂಪಿಸುವುದು ನ್ಯಾಯ. ಬಂಧವಾದರೂ 'ಕಾರಣಂ ಗುಣಸಂಗೋಽಸ್ಯ' ಎಂತ ಪೂರ್ವಾಧ್ಯಾಯದಲ್ಲಿ ಹೇಳಿದ ರೀತ್ಯಾ ತ್ರಿಗುಣಾತ್ಮಕವಾದದ್ದು. ಅದಕಾರಣ "ಕ್ಷೇತ್ರಕ್ಷೇತ್ರಜ್ಞಸಂಯೋಗಾತ್" ಎಂತ ಹೇಳಿದ ಉತ್ಪತ್ತಿಯನ್ನು ವಿವರಣಪೂರ್ವಕವಾಗಿ ತ್ರಿಗುಣದ ವಿಕಾರಸ್ಥಿತಿಯನ್ನೂ ತನ್ನಿವೃತ್ತ್ಯುಪಾಯವನ್ನೂ ಈ ಅಧ್ಯಾಯದಲ್ಲಿ ನಿರೂಪಣೆಮಾಡುತ್ತಾರೆ.

೧೫ ಹದಿನೈದನೇ ಅಧ್ಯಾಯದಲ್ಲಿ: – ತ್ರಯೋದಶಾಧ್ಯಾಯದಲ್ಲಿ ಸಂಸಾರ ಹೇತುಭೂತವಾದ ಕ್ಷೇತ್ರನಾಮಕವಾದ ಜಗತ್ಸ್ವರೂಪವನ್ನು ನಿರೂಪಿಸಿ 'ಯ ಏನಂ ವೇತ್ತಿ ಪುರುಷಂ' ಇತ್ಯಾದಿಯಿಂದ ಭಗವದಾದಿಜ್ಞಾನರೂಪವಾದ ತನ್ನಿವೃತ್ತ್ಯುಪಾಯವನ್ನು ಹೇಳಿರುವರು. ಅವೆರಡನ್ನು ಕೂಡಿಸಿ ಇಲ್ಲಿ ವಿಶದವಾಗಿ ನಿರೂಪಿಸುತ್ತಾರೆ

೧೬ ಹದಿನಾರನೇ ಅಧ್ಯಾಯದಲ್ಲಿ:—"ನಿರ್ಮಾನಮೋಹಾ" ಇತ್ಯಾದಿಯಿಂದ ಹೇಳಿದ ಪುಮರ್ಥಭೂತಗಳಾದ ಜ್ಞಾನಮೋಕ್ಷಗಳ ಸಾಧನವನ್ನೂ 'ಯತಂತೋಽಪ್ಯಕೃತಾತ್ಮಾನಃ' ಇತ್ಯಾದಿಯಿಂದ ಹೇಳಿದ ಪುಮರ್ಥವಿರೋಧಿಯನ್ನೂ ಹೇಳುವುದಕ್ಕೋಸ್ಕರ ಅದು ದೇವಾಸುರಲಕ್ಷಣರೂಪವಾದುದರಿಂದ ಅದನ್ನು ಈ ಅಧ್ಯಾಯದಲ್ಲಿ ವಿಸ್ತರಿಸುವರು.

೧೭ ಹದಿನೇಳನೇ ಅಧ್ಯಾಯದಲ್ಲಿ: – ಚತುರ್ದಶಾಧ್ಯಾಯದಲ್ಲಿ "ನಾನ್ಯಂ ಗುಣೇಭ್ಯಃ ಕರ್ತಾರಂ" ಇತ್ಯಾದಿಯಿಂದ ಎಲ್ಲಾ ಪರಿಣಾಮಗಳೂ ಗುಣಕೃತವೆಂತ ಸಾಮಾನ್ಯತಃ ಹೇಳಿದ್ದನ್ನು ಇಲ್ಲಿ ಸತ್ವಾದಿ

i

ಗುಣಕೃತವಾದ ಶ್ರದ್ಧಾದಿಭೇದವನ್ನೂ ಆಹಾರದ ಭೇದವನ್ನೂ ತಪಃಪ್ರಭೃತಿ ಕರ್ಮಭೇದವನ್ನೂ ಹೇಳಿ ಅದರ ಪ್ರಪಂಚವನ್ನೇ ಮಾಡುವರು.

೧೮ **ಹದಿನೆಂಟನೇ ಅಧ್ಯಾಯದಲ್ಲಿ:**—ಮಂದರಿಗೆ ಅನುಗ್ರಹಿಸುವ ಬುದ್ಧಿಯಿಂದ ಹಿಂದೆ ಅಲ್ಲಲ್ಲಿ ವಿಕ್ಷಿಪ್ತವಾಗಿ ಹೇಳಿದ ಜ್ಞಾನಸಾಧನವನ್ನೂ, ತ್ರಿಗುಣಕಾರ್ಯವನ್ನೂ, ಸನ್ನ್ಯಾಸವನ್ನೂ, ತ್ಯಾಗವನ್ನೂ ಪುಮರ್ಥಹೇತುಗಳೆಂದು ಹಿಂದೆ ಹೇಳಿದ ಪ್ರಯುಕ್ತ ಅದರ ಸ್ವರೂಪವನ್ನು ಈ ಅಧ್ಯಾಯದಲ್ಲಿ ನಿರೂಪಣೆ ಮಾಡುತ್ತಾರೆ.

ನಾವು ಹಿಂದೆ ಹೇಳಿದ ರೀತಿಯಿಂದ ಇಡೀ ಭಾರತದಲ್ಲಿ ವಿಷ್ಣುಸರ್ವೋತ್ತಮತ್ವವು ಹೇಳಲ್ಪಟ್ಟಿದೆ ಎಂಬುವುದು ಸಿದ್ಧವೆಂತ ನಾವು ತೋರಿಸಿಕೊಟ್ಟಿರುವೆವು. ಅದನ್ನು ಪುನಃ ಹೇಳುವುದಿಲ್ಲ. ಹಾಗಾದರೆ "ಭಾರತಂ ಸರ್ವಶಾಸ್ತ್ರೇಷು ಭಾರತೇ ಗೀತಿಕಾ ವರಾ" ಎಂಬ ಪ್ರಮಾಣದಲ್ಲಿ ಹೇಳಿದ ರೀತಿಯಿಂದ ಈ ಗೀತೆಗೆ ಸರ್ವಶ್ರೈಷ್ಠ್ಯವು ಸಿದ್ಧವಾಗುತ್ತದೆ. ಇಲ್ಲಿ ನಾವು ಸ್ವಲ್ಪ ವಿಚಾರಮಾಡಬೇಕಾಗಿ ಬರುತ್ತದೆ. ಗೀತೆಗೆ ಸರ್ವಶ್ರೇಷ್ಠತ್ವವು ಹೇಳುವುದು ಇದು ಭಾರತಾಂತರ್ಗತವೆಂದೊ, ಅಥವಾ ಸ್ವಾತಂತ್ರ್ಯದಿಂದಲೊ? ಸ್ವಾತಂತ್ರ್ಯದಿಂದ ಸರ್ವಶ್ರೇಷ್ಠತ್ವವನ್ನು ಹೇಳುವುದಾದರೆ ಎಷ್ಟು ಮಾತ್ರಕ್ಕೂ ವ್ಯಾಸರು ಇದನ್ನು ಭಾರತಾಂತರ್ಗತವಾಗಿಯೂ ತದೇಕದೇಶವಾಗಿಯೂ ಮಾಡುತ್ತಿರಲಿಲ್ಲ. ಆದರೆ ಹಾಗೆ ಮಾಡಲಿಲ್ಲ. ಹಾಗಾದರೆ ಇದು ಭಾರತದಿಂದಲೂ ಶ್ರೇಷ್ಠವೆಂದುದು ಯಾವ ನಿಮಿತ್ತ? ಸಾಮಾನ್ಯತಃ ಒಂದು ಗ್ರಂಥದ ಭಾಗವೆಂದು ಆಗಬೇಕಾದರೆ ಆ ಗ್ರಂಥದಲ್ಲಿ ನಿರೂಪಿಸಿದ ವಿಷಯಗಳಲ್ಲಿ ಕೆಲವೇ ಆದರೂ ಇಲ್ಲಿ ನಿರೂಪಿಸಿರಬೇಕು. ಹಾಗಾದರೆ ಭಾರತದಲ್ಲಿ ಹೇಳಿದ ವಿಷಯವನ್ನೇ ಏಕದೇಶವಾದ ಗೀತೆಯಲ್ಲಿ ನಿರೂಪಿಸಿರುವರೆಂದೊಪ್ಪಬೇಕು. ಹಾಗಾದರೆ ಬಾಕಿ ಗ್ರಂಥದಲ್ಲಿ ಹೇಳಿದ ಕೆಲವು ವಿಷಯಗಳನ್ನು ಹೇಳುವ ಆ ಗ್ರಂಥದ ಏಕದೇಶಕ್ಕೆ ಆ ಗ್ರಂಥದಿಂದ ಶ್ರೇಷ್ಠತೆಯಿಲ್ಲ. ಹಾಗೆ ಭಾರತದಲ್ಲಿ ಹೇಳಿದ ಕೆಲವು ವಿಷಯವನ್ನು ಇಲ್ಲಿ ನಿರೂಪಿಸಿದರೆ ಇದು ತದೇಕದೇಶವಾಗಲಿ; ತದಪೇಕ್ಷಯಾ ಇದಕ್ಕೆ ಉತ್ತಮತ್ವವು ಹೇಗೆ? ಈ ಶಂಕಾ ಸಹಜವಾಗಿ ಬರಬಹುದು. ಅದಕ್ಕೆ ಆರಂಭದಲ್ಲಿ ಇಲ್ಲಿ ಸ್ವಲ್ಪ ವಿಚಾರ ಮಾಡಬೇಕೆಂದು ಹೇಳಿದ್ದು. ಇಲ್ಲಿ ನಾಟಕಗಳಲ್ಲಿ "ಪತಾಕಾ" ಪ್ರಕರೀ ಇತ್ಯಾದಿಗಳನ್ನು ತಿಳಿದವರಿಗೆ ಈ ವಿಷಯವನ್ನು ತಿಳಿಸುವುದು ಬಹು ಸುಲಭವು. ನಮಗೆ ಇಲ್ಲಿ ಅದನ್ನು ಬಿಡಿಸುವುದು ಅಪ್ರಸ್ತುತವು. ಆದರೆ ಒಂದು ಗ್ರಂಥದಲ್ಲಿ ಹೇಳಿದ ವಿಷಯಗಳಲ್ಲಿ ಅಮುಖ್ಯವಾದವುಗಳನ್ನು ಆ ಗ್ರಂಥದ ಏಕದೇಶದಲ್ಲಿ ನಿರೂಪಿಸಿದರೆ ಆ ಏಕದೇಶವು ಆ ಗ್ರಂಥದಿಂದ ಶ್ರೇಷ್ಠವಾಗಲಾರದು ಪ್ರಕೃತ ಹಾಗಲ್ಲ ದಧಿಯಿಂದ ಮಥಿತವಾಗಿ ತೆಗೆದ ನವನೀತವು ಅವಶಿಷ್ಟ ಮಜ್ಜಿಗೆಯಿಂದ ಹೇಗೆ ಶ್ರೇಷ್ಠವೋ, ಹಾಗೆ ಇಡೀ ಭಾರತದಲ್ಲಿ ಹೇಳಿದ ವಿಷಯಗಳಲ್ಲಿ ಮುಖ್ಯವಾದ ವಿಷಯವನ್ನು ಗೀತೆಯಲ್ಲಿ ಹೇಳಿದಕಾರಣ ಇದು ಮುಖ್ಯವೆಂದು ಮಹನೀಯರಿಂದ ಪರಿಗಣಿತವಾಗಿದೆ ಅಂತಹ ವಿಷಯವು ಯಾವುದೆಂದು ಯಾರಾದರೂ ಕೇಳಬಹುದು. ಅಂತಹ ವಿಷಯಗಳು ವಿಷ್ಣುಸರ್ವೋತ್ತಮತ್ವಾದಿಗಳೇ. ಇದನ್ನು ಒಬ್ಬರು ಮಹಾನುಭಾವರು ನವರತ್ನಗಳೆಂದು ತಮ್ಮ ಈ ಪದ್ಯದಲ್ಲಿ ಹೇಳಿದ್ದಾರೆ **"ಶ್ರೀಮನ್ಮಧ್ವಮತೇ ಹರಿಃ ಪರತರಃ ಸತ್ಯಂ ಜಗತ್ತತ್ತ್ವತೋ ಭೇದೋ ಜೀವಗಣಾ ಹರೇರನುಚರಾ ನೀಚೋಚ್ಚಭಾವಂ ಗತಾಃ । ಮುಕ್ತಿ-ರ್ನೈಜಸುಖಾನುಭೂತಿರಮಲಾ ಭಕ್ತಿಶ್ಚ ತತ್ಸಾಧನಂ ಹ್ಯಕ್ಷಾದಿತ್ರಿತಯಂ ಪ್ರಮಾಣಮಖಿಲಾ-ಮ್ನಾಯೈಕವೇದ್ಯೋ ಹರಿಃ"**

ಇಲ್ಲಿ ಯಾರಾದರೂ ನಮ್ಮಲ್ಲಿ ಶಂಕಿಸಬಾರದೆಂದು ಹೇಳುವೆವು. ಏನೆಂದರೆ ಶ್ರೀಮನ್ಮಧ್ವಾಚಾರ್ಯರು ಈಗಿನವರು, ಗೀತೆಯು ಪ್ರಾಚೀನವಾದದ್ದು. ಮತ್ತಿನವರಾದ ಶ್ರೀಮಧ್ವಾಚಾರ್ಯರು ತಮ್ಮ ಶಾಸ್ತ್ರದಲ್ಲಿ ಹೇಳಿದುದು ಪೂರ್ವತನ ಗೀತೆಯಲ್ಲಿ ಹೇಳಿದೆ, ಎಂಬುವುದು ಕೇವಲ ಮತಾಭಿಮಾನಮೂಲಕವೆಂದು ಶಂಕಿಸಬಾರದು. ಎಂತ ನಮ್ಮ ಆಚಾರ್ಯರು ಹೇಳಿದ್ದನ್ನು ನೋಡಿ ಗೀತೆಯಲ್ಲಿ ನಿರೂಪಿಸಲಾಯಿತೆಂದರೆ ಅದು

ಮತಾಭಿಮಾನಮೂಲಕವೆನ್ನಬಹುದು. ಗೀತೆಯಲ್ಲಿ ಹೇಳಿದ್ದನ್ನು ನೋಡಿ ಆ ಪ್ರಮೇಯವು ನಮ್ಮ ಶಾಸ್ತ್ರ ಪ್ರತಿಪಾದ್ಯವೆಂದು ಹೇಳಿದರೆ ಗೀತೆಗೆ ನ್ಯೂನತೆಯಿಲ್ಲ—ಮಾತ್ರವಲ್ಲ. ನಮ್ಮ ಶಾಸ್ತ್ರವು ಗೀತಾಮೂಲಕವಾದ ಕಾರಣ ಮಹಾಪ್ರಮಾಣವೆಂದಾಯಿತು. ನಮ್ಮ ಶಾಸ್ತ್ರವೂ ಗೀತೆಯೂ ಏಕಾರ್ಥಕವೆಂದು ಹೇಳಲು ನಾವು ಹೆಮ್ಮೆ ಪಡುವೆವು. ಹೀಗೆ ಹೇಳಲು ನಮಗಿದ್ದಷ್ಟು ಸತ್ಯವಾದ ಸಮರ್ಥಕವಾದ ಕಾರಣವು ಯಾವ ಭಾಷ್ಯಕಾರರಿಗೂ ಇಲ್ಲ. ಅದು ಹ್ಯಾಗೆಂದರೆ ನಿರ್ಮತ್ಸರ ದೃಷ್ಟಿಯಿಂದ ನೋಡಿರಿ ಏನೆಂದರೆ ಈ ಗೀತೆಗೆ ನಮ್ಮ ಆಚಾರ್ಯರಂತೆ ಬಹು ಪ್ರಾಚೀನರೂ ಭಾಷ್ಯ ಮಾಡಿರುವರು. ಅದನ್ನು ಅಲ್ಲವೆಂದು ಹೇಳುವುದಿಲ್ಲ. ಆದರೂ ನಮ್ಮ ಆಚಾರ್ಯರ ವ್ಯಾಖ್ಯಾನವೇ ಮೂಲಕಾರರ ಅಭಿಪ್ರಾಯಾನುಸಾರವೆಂದೂ ಮುಖ್ಯವೆಂದೂ ನಾವು ಹೇಳುವೆವು. ನೀವೂ ಒಪ್ಪಲೇಬೇಕಾಗುವುದು. ನೋಡಿರಿ—

ಈಗ ಲೋಕದಲ್ಲಿ ಎಲ್ಲಾದರೂ ಒಂದು ವಿಷಯವು ನಡೆದರೆ ಅಲ್ಲಿ ತಾನಿದ್ದು ನೋಡಿ ಹೇಳುವವನ ಮಾತಿಗೆ ಪ್ರಾಮಾಣ್ಯವೋ. ಇಲ್ಲವೆ ಕೇವಲ ಊಹಿಸಿ ಮತ್ತೊಬ್ಬರ ಮಾತಿನಿಂದ ಕೇಳಿ ಹೇಳುವವನ ಮಾತು ಪ್ರಮಾಣವೋ? ನೀವೇ ವಿಚಾರಮಾಡಿರಿ. ನ್ಯಾಯವಾದರೆ ನೋಡಿ ಹೇಳುವವನ ಮಾತಿಗೆ ಬೆಲೆ ಕೊಡುವುದೆಂಬುವುದರಲ್ಲಿ ವಿವಾದವಿಲ್ಲ ಹಾಗಾದರೆ ಭಾರತಯುದ್ಧವು ನಡೆಯುವ ಸಂದರ್ಭದಲ್ಲಿ ಕೆಳಗಿದ್ದ ಶ್ರೀಕೃಷ್ಣನು ಹತ್ತಿರವಿದ್ದ ಪಾರ್ಥನಿಗೆ ಉಪದೇಶ ಕೊಟ್ಟದ್ದು. ಇದೆಲ್ಲವನ್ನೂ ನೋಡುತ್ತ ಕೇಳಿದುದು ಅರ್ಜುನನ ರಥದ ಮೇಲೆ ಮೂರ್ತಿಮತ್ತಾಗಿ ಸಿಂಹನಾದಕೊಟ್ಟು ಶತ್ರುಗಳ ಬಲವನ್ನು ಕುಗ್ಗಿಸುತ್ತ ಪಾರ್ಥನನ್ನೂ ಯೂ ಇವನ ಪಕ್ಷೀಯರನ್ನೂ ಉಬ್ಬಿಸುತ್ತಾ ಇದ್ದವ ಹನುಮಂತನೊಬ್ಬನೇ. ಈ ಮೂವರಲ್ಲದೆ ಇತರರಿಗೆ ಈ ವಿಷಯವು ಸ್ಪಷ್ಟವಾಗಿ ಗೊತ್ತಿಲ್ಲವಷ್ಟೆ! ಹೀಗಿರುವಾಗ ಆ ಮುಖ್ಯವಾಯುವಿನ ಅಂಶರಾದ ಹನುಮಂತರೇ ನಮ್ಮ ಶ್ರೀಮನ್ಮಧ್ವನಾಮಕರಾಗಿ ಅವತರಿಸಿದ ಕಾರಣ ಆ ಶ್ರೀ ಕೃಷ್ಣನ ದಿವ್ಯ ಉಪದೇಶವನ್ನು ಸಾಕ್ಷಾತ್ ಕಿವಿಯಲ್ಲಿ ಕೇಳಿ ನಡೆದ ಸರ್ವವನ್ನೂ ಕಣ್ಣಾರೆ ನೋಡಿ ಇಲ್ಲಿ ನಿರೂಪಿಸಿದ ನಮ್ಮ ಆಚಾರ್ಯರ ವ್ಯಾಖ್ಯಾನಕ್ಕೆ ಸರಿ ಯಾವ ವ್ಯಾಖ್ಯಾನವಾದೀತು? ಇದನ್ನು ನಮ್ಮ ಆಚಾರ್ಯವ್ಯಾಖ್ಯಾನವೆಂಬ ದುರಭಿಮಾನದಿಂದ ಹೆಮ್ಮೆಪಡುವುದಲ್ಲ. ಕಿಂತು ಈ ನಿಮಿತ್ತವ ಅನ್ಯತ್ರ ಯಾವ ವ್ಯಾಖ್ಯಾನಕ್ಕೂ ಇಲ್ಲದ್ದು ನಮ್ಮ ಶ್ರೀಮದಾಚಾರ್ಯರ ಕೃತಿಗೆ ಮಾತ್ರವೆಂದು ಹೆಮ್ಮೆ.

ಇಲ್ಲಿ ವಾಯುವಿನ ಅವತಾರನಾದ ಹನುಮಂತನೇ ಶ್ರೀಮದಾಚಾರ್ಯರಾಗಿ ಅವತರಿಸಿದ್ದೆಂಬುವುದು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವಾಗಿಯೂ ಇತರತ್ರ ಅದನ್ನು ಸಮರ್ಥನಮಾಡಿಯೂ ಅದು ನಿರ್ಣೀತವಾದುದರಿಂದ ಇಲ್ಲಿ ಅದನ್ನು ಸಮರ್ಥಿಸುವುದು ಅಗತ್ಯವಿಲ್ಲ. ಇಷ್ಟು ಮಾತ್ರವಲ್ಲ. ಹಿಂದೆ ಹೇಳಿದ ಮೂವರ ಪೈಕಿ ಸಾಕ್ಷಾತ್ ಶ್ರೋತನಾದ ಪಾರ್ಥನೇ ಜಯತೀರ್ಥರಾಗಿ ಜನಿಸಿ ಶ್ರೀಮದಾಚಾರ್ಯರ ಸಮಗ್ರ ಗ್ರಂಥಜಾತಕ್ಕೆ ಅಭೂತಪೂರ್ವವಾದ ಟೀಕಾಮಾಡಿ ಟೀಕಾಚಾರ್ಯರೆಂದು ಜಗತ್ಪ್ರಸಿದ್ಧರಾಗಿರುವರಷ್ಟೆ! ಆದ ಕಾರಣ ಪಾರ್ಥನೇ ಗೀತಾಭಾಷ್ಯಕ್ಕೆ ಟೀಕಾಚಾರ್ಯರಾಗಿ ವ್ಯಾಖ್ಯಾನಮಾಡಿದರೆ ಇದನ್ನು ಬಿಟ್ಟು ಇನ್ನಾವುದು ಇದರ ಎದುರಲ್ಲಿ ಮಾನ್ಯತೆಯನ್ನು ಹೊಂದೀತು? ವಾಚಕರೇ ವಿಚಾರಿಸಬಹುದು. ಟೀಕಾಚಾರ್ಯರು ಪಾರ್ಥ ಅವತಾರವೆಂಬುವುದು ಐತಿಹ್ಯವೂ. ಅಪರೋಕ್ಷಜ್ಞಾನಿಗಳಾದ ಇತರ ಮುಹನೀಯರ ವಚನಗಳೂ ಇವುಗಳಿಂದ ಸಿದ್ಧವಾಗುತ್ತದೆ. ಇನ್ನು ಈ ಮಾತನ್ನು ವ್ಯಾಸರೇ ತಮ್ಮ ಮಹಾಭಾರತದಲ್ಲಿ ಮೋಕ್ಷಪರ್ವದಲ್ಲಿ "**ಯೂಯಂ ಮಾನುಷ್ಯಮೇಷ್ಯಥ**" ಎಂತ ಪಾಂಡವರೇ ಮನುಷ್ಯರಾಗಿ ಜನಿಸುವರೆಂಬುದನ್ನು ಸೂಚಿಸಿರುವರು.

ನಾವು ಹಿಂದೆ ಗೀತಾದಲ್ಲಿ ವಿಷ್ಣುಸರ್ವೋತ್ತಮತ್ವಾದಿ ವಿಷಯವು ನಿರೂಪಿತವಾಗಿದ್ದಾಗಿ ಹೇಳಿದ್ದೇವೆ. ಅದನ್ನು ನಿಮ್ಮ ಮನಸ್ಸಿಗೆ ಅರೂಢವಾಗುವಗೋಸ್ಕರ ದಿಙ್ಮಾತ್ರಪ್ರದರ್ಶನವನ್ನು ಮಾಡುತ್ತೇವೆ. ಗೀತೆಯ ಪ್ರಥಮಾಧ್ಯಾಯದಲ್ಲಿ ಶ್ಲೋಕ 14ರಲ್ಲಿ **ಮಾಧವ** ಎಂತಲೂ 15–21ರಲ್ಲಿ **ಹೃಷೀಕೇಶ** ಎಂತಲೂ **ಅಚ್ಯುತ** ಎಂತಲೂ, 31ರಲ್ಲಿ **ಕೇಶವ** ಎಂತಲೂ, 32ರಲ್ಲಿ **ಗೋವಿಂದ** ಎಂತಲೂ, 35ರಲ್ಲಿ **ಮಧುಸೂದನ**

ಎಂತಲೂ, 39 ಮತ್ತು 44ರಲ್ಲಿ ಜನಾರ್ದನ ಎಂತಲೂ ಅಲ್ಲಲ್ಲಿ ವ್ಯಾಸರು ತಾನಾಗಿಯಾಗಲೀ, ಅರ್ಜುನನ ಮುಖದಿಂದಾಗಿಯಾಗಲೀ ಶ್ರೀ ಕೃಷ್ಣನಿಗೆ ಅನೇಕ ವಿಧ ನಾಮನಿರ್ದೇಶ ಮಾಡಿದುದು ಸರಿಯಷ್ಟೆ! ಇಲ್ಲಿ ಸ್ವಲ್ಪ ವಿಚಾರಮಾಡುವ ಶ್ರೀ ಕೃಷ್ಣನಿಗೆ ಈ ಅವತಾರದಲ್ಲಿ ವಾಸುದೇವ, ದೇವಕೀತನಯ, ನಂದಕುಮಾರ, ವಾರ್ಷ್ಣೇಯ, ಯಾದವೋತ್ತಮ, ರಾಮಾನುಜ, ಗದಾಗ್ರಜ, ಭೈಷ್ಮೀಪತಿ, ಸತ್ಯಾಪತಿ ಇತ್ಯಾದಿ ಅನೇಕ ವಿಧನಾಮಗಳಿರುವಾಗ ಅದರ ಮಧ್ಯದ ನಾಮಗಳಿಂದ ಸರ್ವತ್ರ ಸಂಬೋಧಿಸಿದ್ದರೆ ಅಥವಾ ಹೇಳಿದ್ದರೆ ನಮ್ಮ ಈ ಯಾವ ಶಂಕೆಗೂ ಅವಸರವಿರುತ್ತಿರಲಿಲ್ಲ. ಹಾಗೇನೂ ಮಾಡದೆ ಮಾಧವ ಮಧುಸೂದನ ಇತ್ಯಾದಿ ಮಹಾವಿಷ್ಣುವಿನ ತತ್ತದವತಾರಗಳಲ್ಲಿ ಪ್ರಸಿದ್ಧಗಳೂ ಶಾಸ್ತ್ರಸಮ್ಮತಗಳೂ ಆದ, ನಾಮಗಳಿಂದ ಶ್ರೀ ಕೃಷ್ಣನನ್ನು ಕರೆದದ್ದರಿಂದ ಇವನು ಸಾಕ್ಷಾತ್ ಶ್ರೀ ನಾರಾಯಣನ ಅವತಾರನೆಂದು ಹೇಳದೆ ಬೇರೆ ದಾರಿಯಿಲ್ಲ. ಆಯಾಯ ಅವತಾರಗಳಲ್ಲಿ ಪುರಾಣಪ್ರಸಿದ್ಧಗಳಾದ ಜನಾರ್ದನೇತ್ಯಾದಿ ನಾಮಗಳು ಆಯಾಯ ನಾಮಗಳಿಂದ ತೋರುವ ಕ್ರಿಯೆಗಳನ್ನು ಈ ಶ್ರೀ ಕೃಷ್ಣನಲ್ಲಿ ಹೇಳದೆ ಆ ನಾಮಗಳು ಶ್ರೀ ಕೃಷ್ಣನಿಗೆ ಬರಲು ಏನು ಕಾರಣ? ಮಧುನಾಮಕ ದೈತ್ಯನನ್ನು ಸಂಹರಿಸಿದ ಕಾರಣ ಪುರಾಣಗಳಲ್ಲಿಯೂ ಶಾಸ್ತ್ರಗಳಲ್ಲಿಯೂ ಸರ್ವೋತ್ತಮನಾದ ಶ್ರೀ ನಾರಾಯಣನನ್ನು ಕರೆದಿದ್ದಾರೆ. ಅದನ್ನು ಶ್ರೀ ಕೃಷ್ಣನಲ್ಲಿ ಕೂಡಿಸಬೇಕಾದರೆ ಆ ಮಧುನಾಮಕ ದೈತ್ಯನನ್ನು ಸಂಹರಿಸಿದ ರೂಪವೇ ಈ ಶ್ರೀ ಕೃಷ್ಣನು ಎಂತ ಹೇಳದೆ ಬೇರೆ ದಾರಿಯುಂಟೆ? ಹೀಗೆ ಜಗನ್ಮಾತೆಯಾದ ರಮಾದೇವಿಯ ಪತಿಯಾದ ಕಾರಣ ಮಾಧವ ಎಂತ ಹೆಸರು. ಇದು ಶ್ರೀ ಕೃಷ್ಣನಿಗೆ ಬರಬೇಕಾದರೆ ಸಾಕ್ಷಾತ್ ಲಕ್ಷ್ಮೀಪತಿಯೆಂದು ಹೇಳದೆ ಬೇರೆ ಗತಿಯುಂಟೇ. ಹೀಗೆ ಪ್ರತಿಯೊಂದು ನಾಮ ವಿಚಾರಮಾಡುವಾಗ ಆ ನಾಮಗಳಲ್ಲಿ ತೋರುವ ರೂಪಕ್ರಿಯೆಗಳಿಂದ ಬಂದ ನಾಮವನ್ನು ಕೃಷ್ಣನಲ್ಲಿ ಹೇಳಬೇಕಾಗಿದ್ದರೆ ಆ ಅವತಾರರೂಪವೂ ಈ ಕೃಷ್ಣನೂ ಒಬ್ಬನೆಂದು ಹೇಳದೆ ಬೇರೆ ನಿರ್ವಾಹವುಂಟೇ. ಹೀಗೆ ಪ್ರತಿಯೊಂದನ್ನೂ ವಿಚಾರಮಾಡುವಾಗ ಆಯಾವ ಅವತಾರಗಳನ್ನು ಮಾಡಿದ ಮಹಾಸರ್ವೋತ್ತಮನಾದ ಶ್ರೀ ನಾರಾಯಣನೇ ಶ್ರೀ ಕೃಷ್ಣನೆಂದು ಕೃಷ್ಣನಿಗೆ ಸರ್ವೋತ್ತಮತ್ವವು ಅನಾಯಾಸದಿಂದ ಲಭಿಸುತ್ತದೆ. ಇದು ಈ ಜನ್ಮದಲ್ಲಿ ಕೃಷ್ಣನಿಗೆ ಕೂಡುವ ನಾಮಗಳನ್ನು ಬಿಟ್ಟು ಬೇರೆ ನಾಮಗಳಿಂದ ಕೃಷ್ಣನನ್ನು ನಿರ್ದೇಶ ಮಾಡಿದ ಶ್ರೀವೇದವ್ಯಾಸದೇವರ ವಿಷಯನಿರೂಪಣಚಾತುರ್ಯವು. ಏನೆಂದರೆ ಲೋಕದ ಎಲ್ಲ ತಂದೆತಾಯಿಗಳಿಂದ ಹುಟ್ಟುವ ಮನುಷ್ಯಪುತ್ರರಂತೆ ವಸುದೇವದೇವಕಿಯರಲ್ಲಿ ಜನಿಸಿದ ಮಗನಿವನಲ್ಲ. ಕಿಂತು ಸರ್ವೋತ್ತಮನಾದ ಮಹಾವಿಷ್ಣುವಿನ ಅವತಾರಮೂರ್ತಿಯೆಂದು ಬೋಧಿಸುವ ಕೌಶಲವು.

2ನೇ ಅಧ್ಯಾಯದ 9ನೇ ಶ್ಲೋಕದಲ್ಲಿ "ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ" ಎಂತ ಶ್ರೀ ಕೃಷ್ಣನಿಗೆ ಗೋವಿಂದ ಎಂದು ಹೆಸರಿಟ್ಟದ್ದರಿಂದ ಶಾಸ್ತ್ರಕಾರರು ಆ ಪದಕ್ಕೆ ವೇದಪ್ರತಿಪಾದ್ಯ ಎಂದು ಅರ್ಥ ಮಾಡಿದ್ದರಿಂದ ಶ್ರೀ ಕೃಷ್ಣನಿಗೆ ವೇದಪ್ರತಿಪಾದ್ಯತ್ವವೂ ಇದೇಅಧ್ಯಾಯದ 61ನೇ ಶ್ಲೋಕದಲ್ಲಿ "ಯುಕ್ತ ಆಸೀತ ಮತ್ಪರಃ" ಎಂತ ಕೃಷ್ಣನು 'ಅಹಂ ಪರೋ ಯಸ್ಯ' ಎಂದು ತನಗೆ ಉತ್ತಮತ್ವವನ್ನು ಹೇಳಿದ ಕಾರಣ ಸರ್ವೋತ್ತಮತ್ವವು ಅಭಿಪ್ರೇತವಾಯಿತು.

3ನೇ ಅಧ್ಯಾಯದ 22ನೇ ಶ್ಲೋಕದಲ್ಲಿ ತಾನು ಕರ್ಮದಿಂದ ಪ್ರಾಪ್ತವ್ಯವೇನದೆಯೋ, ಅದನ್ನೆಲ್ಲ ಹೊಂದಿದವ. ಇನ್ನು ಕರ್ಮದಿಂದ ಹೊಂದುವುದಿಲ್ಲವಾಗಿ ಹೇಳಿ ತನಗೆ ನಿತ್ಯಮುಕ್ತತ್ವ ಸರ್ವೋತ್ತಮತ್ವಗಳನ್ನು ಸೂಚಿಸಿದ್ದಾನೆ.

4ನೇ ಅಧ್ಯಾಯ 5ನೇ ಶ್ಲೋಕದಲ್ಲಿ 'ತಾನ್ಯಹಂ ವೇದ' ಇತ್ಯಾದಿಗಳಲ್ಲಿ ತನಗೆ ಸರ್ವಜ್ಞತ್ವವನ್ನೂ, 'ಭೂತಾನಾಮೀಶ್ವರೋಽಪಿ ಸನ್' ಎಂಬ 6ನೇ ಶ್ಲೋಕದಲ್ಲಿ ತನಗೆ ಸರ್ವೇಶ್ವರತ್ವವನ್ನೂ, 14ರಲ್ಲಿ 'ನ ಮಾಂ ಕರ್ಮಾಣಿ ಲಿಂಪಂತಿ' ಎಂಬ ಶ್ಲೋಕದಲ್ಲಿ ಈಶ್ವರಲಕ್ಷಣವಾದ ಪುಣ್ಯಪಾಪಕರ್ಮಗಳ

ಅಲೇಃಪವನ್ನೂ, ಹಾಗೆ 35ರಲ್ಲಿ 'ದ್ರಕ್ಷ್ಯಾತ್ಮನ್ಯಥೋ ಮಯಿ' ಎಂದು ತನಗೆ ಸರ್ವಭೂತಾಧಾರತ್ವವನ್ನೂ ಹೇಳಿ ಶ್ರೀ ಕೃಷ್ಣನು ತನಗೆ ಸರ್ವೋತ್ತಮತ್ವವನ್ನು ಪ್ರತಿಪಾದಿಸಿರುವನು.

5ನೇ ಅಧ್ಯಾಯದ 29ರಲ್ಲಿ 'ಭೋಕ್ತಾರಂ ಯಜ್ಞತಪಸಾಂ' ಎಂಬುವುದರಿಂದ ತನಗೆ ಸರ್ವಯಜ್ಞಭೋಕ್ತೃತ್ವ, ಸರ್ವೇಶ್ವರತ್ವ ತನ್ನನ್ನು ಹಾಗೆ ತಿಳಿದವರಿಗೆ ಮುಕ್ತಿದಾಯಕತ್ವ ಇವುಗಳನ್ನು ಹೇಳಿದ್ದಾನೆ.

6ನೇ ಅಧ್ಯಾಯದ 14ರಲ್ಲಿ 'ಮತ್ಪರಃ' ಎಂಬುದರಿಂದ ತನಗೆ ಸರ್ವೋತ್ತಮತ್ವವನ್ನೂ, ಶ್ಲೋ. 15ರಲ್ಲಿ 'ಮತ್ಸಂಸ್ಥಾಮಧಿಗಚ್ಛತಿ' ಎಂದು ತನ್ನ ಜ್ಞಾನಿಗೆ ಮೋಕ್ಷವನ್ನೂ, 30ರಲ್ಲಿ 'ಯೋ ಮಾಂ ಪಶ್ಯತಿ ಸರ್ವತ್ರ'ಎಂದು ತನಗೆ ಸರ್ವಾಧಾರತ್ವ, ಸರ್ವದೇಶದಲ್ಲಿ ವ್ಯಾಪ್ತಿ ಇವುಗಳನ್ನು ನಿರೂಪಿಸಿರುವನು.

7ನೇ ಅಧ್ಯಾಯದ 7ನೇ ಶ್ಲೋಕದಲ್ಲಿ 'ಮತ್ತಃ ಪರತರಂ ನಾಸ್ತಿ'ಇತ್ಯಾದಿಗಳಲ್ಲಿ ತನ್ನಿಂದ ಉತ್ತಮ ವಸ್ತು ಇಲ್ಲವೆಂತಲೂ, ತಾನು ಸರ್ವಾಶ್ರಯನೆಂತಲೂ. 12ರಲ್ಲಿ 'ಯೇ ಚೈವ' ಇತ್ಯಾದಿ ಶ್ಲೋಕಗಳಲ್ಲಿ ಸಾತ್ವಿಕ ರಾಜಸ ತಾಮಸ ಸರ್ವಕ್ರಿಯಾಕರ್ತ ತಾನೇ ಎಂತಲೂ, 22ನೇ ಶ್ಲೋಕದಲ್ಲಿ 'ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ ಹಿ ತಾನ್' ಎಂತ ಯಾವ ದೇವತಾ ಉಪಾಸನಾ ಮಾಡಿದರೂ ತತ್ತತ್ಫಲದಾತನು ತಾನೇ ಎಂತಲೂ ನಿರೂಪಿಸಿದ್ದಾನೆ

8ನೇ ಅಧ್ಯಾಯದ 5ನೇ ಶ್ಲೋಕ 'ಅಂತಕಾಲೇ ಚ' ಎಂಬುದರಿಂದ ತನ್ನ ಸ್ಮರಣೆ ಅಂತ್ಯಕಾಲದಲ್ಲಿ ಮಾಡುವವರಿಗೆ ಮುಕ್ತಿಯಾಗುವುದೆಂತಲೂ, 13ನೇ 'ಓಮಿತ್ಯೇಕಾಕ್ಷರಂ' ಎಂಬ ಶ್ಲೋಕದಲ್ಲಿ ತಾನು ಓಂಕಾರ ಪ್ರತಿಪಾದ್ಯ ಬ್ರಹ್ಮ ಎಂತಲೂ 'ಮಾಮುಪೇತ್ಯ ಪುನರ್ಜನ್ಮ' ಎಂಬ 15ನೇ ಶ್ಲೋಕದಿಂದ ತನ್ನನ್ನು ಹೊಂದಿದವರಿಗೆ ಪುನಃಪುನಃ ಜನಿರೂಪ ಸಂಸಾರವಿಲ್ಲವೆಂತಲೂ ನಿರೂಪಿಸಿದ್ದಾನೆ

9ನೇ ಅಧ್ಯಾಯದ 4ನೇ ಶ್ಲೋಕದಲ್ಲಿ ಶ್ರೀ ಕೃಷ್ಣನು 'ಮಯಾ ತತಮಿದ' ಮಿತ್ಯಾದಿಗಳಿಂದ ತನಗೆ ಜಗತ್ತಿನ ವ್ಯಾಪ್ತಿಯನ್ನು ವಿಶದವಾಗಿ ಪ್ರತಿಪಾದನಮಾಡಿದ್ದಾನೆ

10ನೇ ಅಧ್ಯಾಯದ 2ನೇ 'ಅಹಮಾದಿರ್ಹಿ' 5ನೇ 'ಅಹಿಂಸಾ ಸಮತಾ ತುಷ್ಟಿಃ' 8ನೇ 'ಅಹಂ ಸರ್ವಸ್ಯ' ಇತ್ಯಾದಿ ಶ್ಲೋಕಗಳಲ್ಲಿ ತಾನೇ ಸರ್ವಕಾರಣನೆಂತಲೂ ಇನ್ನು ಕೊನೆತನಕ ತನಗೆ ಸರ್ವರಲ್ಲಿಯೂ ಸಾರತ್ವವನ್ನೂ ನಿರೂಪಿಸಿದ್ದಾನೆ

11ನೇ ಅಧ್ಯಾಯದಲ್ಲಿ 30 'ಭಾಸಸ್ತವೋಗ್ರಾಃ' ಇತ್ಯಾದಿಗಳಿಂದ ಕೊನೆಯವರೆಗೂ ಸೂರ್ಯಾದಿ ಸರ್ವಪ್ರಕಾಶಕ ತೇಜಸ್ವಿತೆಯನ್ನೂ, ಸರ್ವರಿಗೂ ಭಯಜನಕವಾದ ವಿಶ್ವವ್ಯಾಪ್ತರೂಪಿತ್ವವನ್ನೂ. ಸರ್ವ ಸಂಹಾರಕತ್ವವನ್ನೂ, ತನಗೆ ಸರ್ವೋತ್ತಮತ್ವವನ್ನೂ ಜೀವರಲ್ಲಿ ತಾರತಮ್ಯಸಾಧಕ ನೀಚೋಚ್ಚತ್ವವನ್ನೂ ನಿರೂಪಿಸಿದ್ದಾನೆ.

12ನೇ ಅಧ್ಯಾಯದ 'ತೇಷಾಮಹಂ ಸಮುದ್ಧರ್ತಾ' ಎಂಬ 7ನೇ ಶ್ಲೋಕದಲ್ಲಿ ಕೃಷ್ಣನು ತಾನು ತನ್ನ ಉಪಾಸಕರಿಗೆ ಮೋಕ್ಷದಾಯಕನೆಂತಲೂ ಉದ್ಧಾರಕನೆಂತಲೂನಿರೂಪಿಸಿರುವನು

13ನೇ ಅಧ್ಯಾಯದ 19ನೇ ಶ್ಲೋಕದಲ್ಲಿ "ಮದ್ಭಾವಾಯೋಪಪದ್ಯತೇ" ಎಂತ ತನ್ನ ಧ್ಯಾನಿ ಭಕ್ತನಿಗೆ ಮೋಕ್ಷವಾಗುತ್ತದೆಂದು ಹೇಳಿದ್ದಾನೆ

14ನೇ ಅಧ್ಯಾಯ 26ನೇ "ಮಾಂ ಚ ಯೋಽವ್ಯಭಿಚಾರೇಣ" ಎಂಬ ಶ್ಲೋಕದಿಂದ ಭಕ್ತಿಯಿಂದ ತನ್ನನ್ನು ಸೇವಿಸುವವರಿಗೆ ಮೋಕ್ಷವಾಗುತ್ತವೆಂದು ಹೇಳಿ ಮೋಕ್ಷಕ್ಕೆ ನಿರ್ಮಲ ಭಕ್ತಿಯೇ ಸಾಧನವೆಂತಲೂ ನಿರೂಪಿಸುವವನಾಗಿದ್ದಾನೆ

15ನೇ ಅಧ್ಯಾಯದಲ್ಲಿ ಶ್ರೀಕೃಷ್ಣನು ತಾನೇ ಸರ್ವೋತ್ತಮನೆಂದೂ 16ನೇ ಅಧ್ಯಾಯದಲ್ಲಿ ಜಗತ್ತು ಸುಳ್ಳೆಂಬುವ ವಾದವನ್ನು ನಿಂದಿಸಿ ಸತ್ಯತ್ವವನ್ನು ಜಗತ್ತಿಗೆ ಸ್ಥಾಪಿಸಿ, ಜಾತಿಭೇದವನ್ನೂ ನಿರೂಪಿಸಿದ್ದಾನೆ.

17ನೇ ಅಧ್ಯಾಯದಲ್ಲಿ ಪ್ರಾಯಃ ಆದಿಯಿಂದ ಅಂತ್ಯತನಕವೂ ಜೀವರಿಗೆ ಪರಸ್ಪರ ಭೇದವನ್ನೂ ತಾರತಮ್ಯವನ್ನೂ ನಿರೂಪಿಸಿದ್ದಾನೆ.

18ನೇ ಅಧ್ಯಾಯದ 65ನೇ ಶ್ಲೋಕದಲ್ಲಿ "ಮದ್ಭಕ್ತೋ ಮಾಮುಪೈಷ್ಯಸಿ" ಎಂಬೋಣದರಿಂದ ತನ್ನ ಭಕ್ತಿಯನ್ನು ಮಾಡು, ಅದರಿಂದ ಮತ್ಪ್ರಾಪ್ತಿರೂಪ ಮುಕ್ತಿಯನ್ನು ಹೊಂದುವಿ, ಎಂತ ಹೇಳಿ, ಮುಕ್ತಿಗೆ ಭಕ್ತಿಯೇ ಮುಖ್ಯಸಾಧನವೆಂತಲೂ ಅದರಿಂದ ಪ್ರಸನ್ನನಾಗಿ ನಾನು ಮೋಕ್ಷ ಕೊಡುವವನೆಂತಲೂ ಸೂಚಿಸಿದ್ದಾನೆ. ಹೀಗೆ ಗೀತೆಯ 18 ಅಧ್ಯಾಯಗಳಲ್ಲಿ ತಾತ್ಪರ್ಯವನ್ನು ಬಿಟ್ಟು ಬಲಾತ್ಕಾರದಿಂದ ಅರ್ಥಗಳನ್ನು ಹೇಳದೆ ವಿಚಾರ ಮಾಡಿದರೆ 1 ವಿಷ್ಣುವೇ ಸರ್ವೋತ್ತಮನು, 2 ಜಗತ್ತು ಸತ್ಯವು, 3 ಜೀವರಲ್ಲಿ ಸತ್ಯವಾದ ಭೇದವು, 4 ಜೀವರಲ್ಲಿ ಪರಸ್ಪರ ಉತ್ಕರ್ಷಾಪಕರ್ಷರೂಪ ತಾರತಮ್ಯ—ಇದನ್ನೇ ಶಾಸ್ತ್ರೀಯ ಶಬ್ದದಿಂದ ಹೇಳುವುದಾದರೆ ನೀಚೋಚ್ಚಭಾವ ಸ್ವಸ್ವರೂಪಾನಂದವನ್ನು ತಂದುಕೊಡುವ ಪರಮಾತ್ಮಪ್ರಾಪ್ತಿಯೇ ಅಥವಾ ಪರಮಾತ್ಮಪ್ರಾಪ್ತಿಯಿಂದಾಗುವ ಸ್ವಸ್ವರೂಪಾನಂದಾವಿರ್ಭಾವವೇ ಮುಕ್ತಿಯೆಂತಲೂ ಅದಕ್ಕೆ ಭಕ್ತಿಯೇ ಮುಖ್ಯ ಸಾಧನವೆಂತಲೂ ಹೇಳಿದ ಪ್ರಯುಕ್ತ ಹಿಂದೆನಾವು ಹೇಳಿದಂತೇ "ಶ್ರೀಮನ್ಮಧ್ವಮತೇ ಹರಿಃ ಪರತರಃ........" ಎಂಬ ಶ್ಲೋಕದಲ್ಲಿ ಹೇಳಿದ ಶ್ರೀಮದಾನಂದತೀರ್ಥಭಗವತ್ಪಾದರ ಮತವನ್ನೇ ಶ್ರೀಕೃಷ್ಣನು ತೋರಿಸಿದಂತಾಯಿತೆಂದು ನಾವ ಪ್ರತ್ಯೇಕ ಹೇಳಬೇಕಾಗಿಲ್ಲ.

ದ್ವೈತವೇದಾಂತ ಮಹಾಸಾಗರದಲ್ಲಿ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರು ಮುಳುಗಿ ಅಮೂಲ್ಯ ರತ್ನ ತುಲ್ಯಗಳಾದ ತತ್ವಗಳನ್ನು ತೆಗೆದುತಂದು ನಮಗೆ ತೋರಿಸಿದರೂ ಸಂಸ್ಕೃತಭಾಷೆಯನ್ನು ಅರಿಯದ ಕಾರಣ ಕಣ್ಣಿಲ್ಲದಂತಿರುವವರು ನೋಡಲಸಮರ್ಥರಾಗಿ ದುಃಖಪಡುತ್ತಿರಲು ಸುಲಭವಾದ ತಿಳಿಗನ್ನಡಭಾಷೆಯಲ್ಲಿ ಬೋಧಿಸಿ ಪ್ರಚಾರಪಡಿಸುವ ಮುಖ್ಯೋದ್ದೇಶದಿಂದ ಹೊರಟಿರುವ ಈ ಮಧ್ವಮುನಿ ಸೇವಾಸಂಘವು ಯಾರಿಂದ ಪ್ರಶಂಸನೀಯವಾಗಲಿಕ್ಕಿಲ್ಲ? ಯಾರು ಈ ಸಂಘದ ಉಪಕಾರಸ್ಮರಣೆಯನ್ನು ಮಾಡಲಿಕ್ಕಿಲ್ಲ?

ಈ ರತ್ನತುಲ್ಯಗಳಾದ ಶ್ರೀಮದಾಚಾರ್ಯರು ಹೇಳಿದ ತತ್ವಗಳನ್ನು ಶ್ರೀಮದ್ವ್ಯಾಸವಿಠಾರ ಶ್ರೀಮದ್ವಾದಿರಾಜಪೂಜ್ಯಚರಣರು, ಪುರಂದರದಾಸರು, ವಿಜಯದಾಸರು, ಶ್ರೀ ವ್ಯಾಸರಾಯಶ್ರೀಮಚ್ಚರಣರು, ಕನಕದಾಸ ಮೊದಲಾದ ಮಹಾಮಹಿಮರು ಸರಳವಾದ ಶೈಲಿಯಲ್ಲಿ ಪಾಮರರಿಗೂ ತಿಳಿಯುವಂತೆ ಸುಳಾದಿ ರೂಪದಿಂದ ತಿಳಿಸಿದ್ದರೂ ಅದನ್ನೂ ನೋಡದ ಮತ್ತು ಅದರಲ್ಲಿ ಶ್ರೀಮದಾಚಾರ್ಯರ ಸಮಗ್ರ ಗ್ರಂಥಗಳ ಅನೂಚಾನವಾಗಿ ತೋರುವ ಅರ್ಥವು ನಮಗೆ ಅದರಿಂದ ಆಗದಿರುವ ಕಾರಣವೂ ಆ ವಿಷಯವನ್ನು ಮನಸ್ಸಿನಲ್ಲಿ ವಿಚಾರಮಾಡಿ ಈ ಮಧ್ವಮುನಿಸೇವಾಸಂಘವು ಅಂತಹ ಅಜ್ಞರಿಗೂ ತಿಳಿಯಲೋಸುಗ ಈ ಕಾರ್ಯವನ್ನು ಮಾಡಲುದ್ಯುಕ್ತವಾದ ಪ್ರಯುಕ್ತ ಈ ಮಧ್ವಮುನಿಸೇವಾಸಂಘವನ್ನು ಶ್ಲಾಘಿಸುವೆವು.

ಈ ಸಂಘವು ಇಂತಹ ಜನೋಪಕಾರಿಯಾದ ಕಾರ್ಯವನ್ನು ಇತೋಪ್ಯತಿಶಯವಾಗಿ ಮಾಡಿ ಶ್ರೀಹರಿವಾಯುಗಳ ಅನುಗ್ರಹಕ್ಕೆ ಪಾತ್ರವಾಗಲಿ. ಎಂದು ನಾವು ಹಾರೈಸುವೆವು

ಇಲ್ಲಿ ಇನ್ನೊಂದು ಮಾತನ್ನು ಹೇಳದೆ ಮನಸ್ಸು ಕೇಳುವುದಿಲ್ಲ. ಅದೇನೆಂದರೆ—ಸಿದ್ಧಾಂತತತ್ವಗಳನ್ನು ಪ್ರಚಾರಪಡಿಸಲು ಶ್ರೀಮದಾಚಾರ್ಯರ ಗ್ರಂಥಗಳನ್ನು ಭಾಷಾಂತರಪಡಿಸುವ ವಿಷಯದಲ್ಲಿ ಪಂಡಿತರು ಬಹುಮಂದಿಯಿದ್ದರೂ ನಮ್ಮ ಶ್ರೀಮನ್ಮಧ್ವಸಿದ್ಧಾಂತಪ್ರಬೋಧಿನೀ ಸಂಸ್ಕೃತ ಮಹಾಪಾಠಶಾಲೆಯ ಪಂಡಿತರಾದ ಅಗ್ರಹಾರ ಶ್ರೀಮಾನ್ ನಾರಾಯಣತಂತ್ರಿಗಳನ್ನು ಹುಡುಕಿ ತೆಗೆದದ್ದಕ್ಕೆ ನಮ್ಮ ಸಮ್ಮತಿಯನ್ನು ತೋರಿಸುವುದು ತಪ್ಪಾಗದು. ಏಕೆಂದರೆ-ನಮ್ಮ ಮುನ್ನುಡಿಯಲ್ಲಿ ನಾವು ಹಿಂದೆ ಹೇಳಿದಂತೆಯೇ ಅನೇಕ ಭಾವ

ಗರ್ಭಿತವಾದ ಗೀತೆಯ ಭಾಷ್ಯ ತಾತ್ಪರ್ಯ ಟೀಕಾ ಟಿಪ್ಪಣಿಗಳು ಇದ್ದರೂ ಅನಭಿಜ್ಞರಿಗೆ ಅವುಗಳು ಇಲ್ಲದ ಹಾಗೆ ಇರುವ ಕಾರಣ ಅದನ್ನು ಪ್ರಕೃತ ಭಾಷಾಂತರಿಸಲಿಕ್ಕೆ ಹೊರಟ ನಮ್ಮ ಶ್ರೀಯುತರು ಭಾಷ್ಯ ತಾತ್ಪರ್ಯಾದಿ ಗ್ರಂಥಗಳಲ್ಲಿ ಆಪಾತತಃ ತೋರುವ ವಿರೋಧಗಳನ್ನು ಸಹಜವಾಗಿ ವೇದಾಂತಶಾಸ್ತ್ರಗಳಿಗಾಗಲೀ ಪುರಾಣಾದಿ ಬೇರೆ ಗ್ರಂಥಗಳಿಗಾಗಲೀ ವಿರೋಧವು ಬಾರದಹಾಗೆ ಸಮಂಜಸ ರೀತಿಯಿಂದ ಬಿಡಿಸಿ ಹೇಳಿದ್ದು ಈ ಗ್ರಂಥವನ್ನು ನೋಡುವ ವಾಚಕರಿಗೆ ಸ್ವಯಂ ವ್ಯಕ್ತವಾಗುವಪ್ರಯುಕ್ತ ನಾವು ಹೇಳುವುದು ಅಗತ್ಯವಿಲ್ಲ. ಆದರೂ ಸ್ಥಾಲೀಪುಲಾಕ ನ್ಯಾಯದಿಂದ ಒಂದೆರಡು ವಿಷಯಗಳನ್ನು ಹೆಕ್ಕಿ ತೋರಿಸುವೆವು. ಅದು ಹೇಗೆಂದರೆ--೨ನೇ ಅಧ್ಯಾಯ ಪುಟ ೨೨ರಲ್ಲಿ "ಬ್ರಹ್ಮಾಽಪಿ ತನ್ನ ಜಾನಾತಿ" ಎಂಬುವ ಪ್ರಮಾಣ ಕೊಟ್ಟು, ಬ್ರಹ್ಮನಿಗೆ ಭಾರತದಲ್ಲಿ ಹೇಳಿದ ಎಲ್ಲಾ ಅರ್ಥಜ್ಞಾನವಿಲ್ಲವೆಂತಲೂ, ಅದೇ ಅಧ್ಯಾಯ ಪುಟ ೨೩ರಲ್ಲಿ "ಸ್ವಯಂ ವ್ಯಾಸೋ ಹಿ ತದ್ವೇದ ಬ್ರಹ್ಮಾ ವಾ ತತ್ಪ್ರಸಾದತಃ" ಎಂಬುವ ಪ್ರಮಾಣದಲ್ಲಿ ಹೇಳಿದ ಪ್ರಯುಕ್ತ ಬ್ರಹ್ಮದೇವರಿಗೆ ಭಾರತದ ಎಲ್ಲಾ ಅರ್ಥಜ್ಞಾನವಿದೆ, ಎಂತಲೂ ಪರಸ್ಪರ ವಿರುದ್ಧಗಳಾದ ಅರ್ಥಗಳು ತೋರುವುದನ್ನು ಬ್ರಹ್ಮಾ ಎಂಬುವುದಕ್ಕೆ ಬೃಹಸ್ಪತ್ಯಾಚಾರ್ಯರೂ ಚತುರ್ಮುಖ ಬ್ರಹ್ಮದೇವರೂ ವಾಚ್ಯರು ಎಂತ ಎರಡು ಅರ್ಥಗಳನ್ನು ಸಪ್ರಮಾಣವಾಗಿ ಹೇಳಿ ಅಪರಿಹಾರ್ಯವಾಗಿ ತೋರುವ ಈ ವಿರೋಧದ ಪರಿಹಾರವನ್ನು ಅತಿಸುಲಭವಾಗಿ ಮನದಟ್ಟುವಾಗುವಂತೆ ಪರಿಹರಿಸಿದ್ದು ನೋಡಿದರೆ ಯಾರ ಮನಸ್ಸಿಗೆ ಸಮಾಧಾನವಾಗಲಿಕ್ಕಿಲ್ಲ?

ಹೀಗೆ ೨ನೇ ಅಧ್ಯಾಯದ ೭೦ನೇ ಪುಟದಲ್ಲಿ "ಅವಿನಾಶಿ ತು ತದ್ವಿದ್ಧಿ" ಎಂಬ ಶ್ಲೋಕಕ್ಕೆ ವ್ಯಾಖ್ಯಾನವನ್ನು ಬರೆಯುವಾಗ ಈ ಲೇಖಕರು ಇಲ್ಲಿ ಭಾಷ್ಯಕ್ಕೂ ತಾತ್ಪರ್ಯಕ್ಕೂ ವಿರೋಧ ಬರುತ್ತದೆ ಹೇಗೆಂದರೆ ಭಾಷ್ಯದಲ್ಲಿ ಆ ಶ್ಲೋಕದಲ್ಲಿ ಆಕಾಶ ಮೊದಲಾದವುಗಳನ್ನು ಹೇಳುತ್ತದೆಂದು ಹೇಳಿದ್ದಾರೆ. ತಾತ್ಪರ್ಯದಲ್ಲಿ ಶ್ರೀಹರಿಗೆ ಲಕ್ಷಣವನ್ನು ಹೇಳುತ್ತದೆಂದು ಹೇಳಿದ್ದಾರೆ. ಹೀಗೆ ಭಿನ್ನಾರ್ಥಕವಾಗಿ ತೋರುವ ಈ ವಿರೋಧವನ್ನು ಬಹಳ ಸುಲಭಶೈಲಿಯಲ್ಲಿ ಪರಿಹರಿಸಿದ್ದಾರೆ. ಅದು ಹೇಗೆಂದರೆ—ಎರಡು ವ್ಯಾಖ್ಯಾನಗಳಿಗೂ ಈ ಶ್ಲೋಕದಲ್ಲಿ ಜೀವರು ಹೇಳಲ್ಪಡುವುದಿಲ್ಲವೆಂಬ ತಾತ್ಪರ್ಯವೊಂದೇ. ಆದುದರಿಂದ ಎರಡು ವ್ಯಾಖ್ಯಾನಗಳಿಗೂ ವಿರೋಧವಿಲ್ಲ. ಮೊದಲೇ ನಾವು ಹೇಳಿದ ಪ್ರಕಾರ ಭಾರತವೇ ದಶಾರ್ಥಕವಾಗಿರುವ ಪ್ರಯುಕ್ತ ಅದರಲ್ಲಿ ಅಂತರ್ಗತವಾದ ಗೀತೆಯೂ ದಶಾರ್ಥಕವೇ ಆಗಿರುವುದರಿಂದ ಅದರಲ್ಲೊಂದು ಅಮುಖ್ಯಾರ್ಥವನ್ನೂ ಭಾಷ್ಯಕಾರರು ಹೇಳಿದ್ದಾರೆ. ತನ್ನದೇ ಇನ್ನೊಂದು ವ್ಯಾಖ್ಯಾನದಲ್ಲಿ ಮುಖ್ಯಾರ್ಥವನ್ನೂ ಹೇಳಿದ್ದಾರೆ. ಹೀಗೆ ನಮಗೆ ಇದು ಅನೇಕಾರ್ಥಕವೆಂಬುವ ವಿಷಯದಲ್ಲಿ ದಾರಿ ತೋರಿಸಿಕೊಟ್ಟಿದ್ದಾರೆ ಎರಡು ವ್ಯಾಖ್ಯಾನಗಳಲ್ಲಿಯೂ ಜೀವರು ಹೇಳಲ್ಪಡುವುದಿಲ್ಲವೆಂಬ ಒಂದೇ ತಾತ್ಪರ್ಯಕ್ಕೆ ಯಾವ ಹಾನಿಯೂ ಇಲ್ಲ. ಈಗ ಯಾವ ವಿರೋಧಶಂಕೆಯು? ಈ ರಹಸ್ಯವನ್ನು ನಮಗೆ ತೋರಿಸಿಕೊಟ್ಟಿದ್ದಕ್ಕೆ ಈ ಲೇಖಕರು ಅಭಿನಂದನೀಯರು. ವಾಚಕರೂ ಇದೇ ರೀತಿಯಾಗಿ ಇದನ್ನು ಹೀಗೆಯೇ ಗಮನಿಸಬೇಕಾಗಿ ನಾವು ಆಶಿಸುತ್ತೇವೆ

ಇದೇ ರೀತಿಯಾಗಿ ಜನೋಪಕಾರಿಯಾದ ಕೆಲಸಗಳು ಇನ್ನೂ ಅಧಿಕವಾಗಿ ಈ ಸಂಘದಿಂದ ಆಗಲಿ ಎಂದು ನಮ್ಮ ಪ್ರಿಯ ಉಪಾಸ್ಯ ಶ್ರೀ ಕೃಷ್ಣವಿಟ್ಠಲರಲ್ಲಿ ಪ್ರಾರ್ಥಿಸಿ, ಇನ್ನೊಮ್ಮೆ ಈ ಸಂಘಕ್ಕೆ ಶುಭವನ್ನು ಕೋರಿ, ನಮ್ಮ ಮುನ್ನುಡಿಯನ್ನು ಮುಗಿಸುತ್ತೇವೆ.

ಶ್ರೀಕಸ್ತೇ ಸುಶ್ರಿಯಂ ದದ್ಯಾದಾಯುರ್ವಾಯುಸುಶಪ್ರಿಯಃ ।
ಭೂಮಿಂ ತೇ ವಾಮನೋ ದದ್ಯಾದ್ಧೀಸ್ವಂತು ನೃಕೇಸರೀ ॥

ಇತಿ ಶಂ!

ಜಯನಾಮ ಚೈತ್ರ ಪೂರ್ಣಿಮಾ.
ರವಿವಾರ.
ತಾ. 18-4-1954.

ಶ್ರೀ(೧೦೮)ಶ್ರೀಮಲ್ಲಕ್ಷ್ಮೀಂದ್ರತೀರ್ಥಶ್ರೀಪಾದಂಗಳವರು,
"ಜಗದ್ಗುರು ಶ್ರೀ ಮಧ್ವಾಚಾರ್ಯರ ಸಂಸ್ಥಾನ,"ಶೀರೂರುಮಠ, ಉಡುಪಿ.

॥ ಶ್ರೀಃ ॥

# ಅಕಾರಾದಿಕ್ರಮೇಣ ಶ್ರೀಮದ್ಭಗವದ್ಗೀತಾ ಶ್ಲೋಕಾನುಕ್ರಮಣಿಕಾ

ನಿಜಪೂರ್ಣಸುಖಾಮಿತಬೋಧತನುಃ ಪರಶಕ್ತಿರನಂತಗುಣಃ ಪರಮಃ ।
ಅಜರಾಮರಣಃ ಸಕಲಾರ್ತಿಹರಃ ಕಮಲಾಪತಿರೀಡ್ಯತಮೋಽವತು ನಃ ॥

## ಅ

## ದ

## ಪ

ವ್ಯಾಸಂ ಭಾರತಕರ್ತಾರಂ ಮಧ್ವಂ ಮೂಲಕೃತಂ ತಥಾ ।
ಚೇತೋ ವಾಗ್ದೇವತಾಂ ವಾಣೀಂ ಗುರೂಂಶ್ಚ ಪ್ರಣಮಾಮ್ಯಹಂ ॥

# ಯೋಗಃ

1) ಯೋಗಃ=ಮೋಕ್ಷೋಪಾಯವು. ಮೋಕ್ಷಕ್ಕೆ ಸಾಧನವಾದುದು. ಅದು (೧) ಕರ್ಮಯೋಗ, (೨) ಜ್ಞಾನಯೋಗ, (ಅಥವಾ ಸಮಾಧಿಯೋಗ,) ಎಂದು ೨ ಎರಡು ವಿಧವು. (ಪು. ೨೧೭) ಕರ್ಮ ಪ್ರಚುರವಾದ ಯೋಗವು ಕರ್ಮಯೋಗವು. ಅಂದರೆ ಶ್ರೀಪರಮಾತ್ಮನಿಗೆ ಪ್ರೀತಿಯಾಗಲಿ ಎಂಬುವ ಬುದ್ಧಿಯಿಂದ ತಮ್ಮ ತಮ್ಮ ವರ್ಣಾಶ್ರಮಗಳಿಗೆ ಉಚಿತಗಳಾದ ಕರ್ಮಗಳನ್ನು ಮಾಡುವುದು. ಈ ಕರ್ಮಯೋಗವು ಮೋಕ್ಷಕ್ಕೆ ಪರಂಪರಯಾ ಕಾರಣವು.

2) ಜ್ಞಾನಪ್ರಚುರವಾದ ಯೋಗವು ಜ್ಞಾನಯೋಗವು. ಆ ಅಪರೋಕ್ಷಜ್ಞಾನವು ಮೋಕ್ಷಕ್ಕೆ ಮುಖ್ಯ ಕಾರಣವು. ಅಪರೋಕ್ಷಜ್ಞಾನಕ್ಕೆ ಧ್ಯಾನವೂ, ಅದಕ್ಕೆ ಭಕ್ತಿ ಮೊದಲಾದವುಗಳೂ ಕಾರಣಗಳು.

3) ಪ್ರಥಮ ಷಟ್ಕದಲ್ಲಿ (ಅಧ್ಯಾ ೧—೬ ರಲ್ಲಿ) ಜ್ಞಾನಸಾಧನವನ್ನೂ, ದ್ವಿತೀಯ ಷಟ್ಕದಲ್ಲಿ (೭-೧೨ ರಲ್ಲಿ) ಭಕ್ತಿಯು ಹುಟ್ಟುವುದಕ್ಕಾಗಿ ಶ್ರೀಹರಿಯ ಸ್ವರೂಪ ಮಹಿಮೆಗಳನ್ನೂ, ತೃತೀಯ ಷಟ್ಕದಲ್ಲಿ ಜ್ಞಾನೋಪಾಯಾದಿಗಳನ್ನು ವಿವರಿಸಿ ನಿರೂಪಿಸಿರುವರು. ಅದರಲ್ಲಿಯೂ ೧—೧೨ ಅಧ್ಯಾಯ ಪರ್ಯಂತ ಅಲ್ಲಲ್ಲಿ ಬಿಕ್ಕಿ ಹೇಳಿದ್ದನ್ನೆಲ್ಲಾ ಬುದ್ಧಿಯಲ್ಲಿ ಆರೂಢವಾಗುವುದಕ್ಕಾಗಿ ಸಂಕ್ಷೇಪದಿಂದ ೧೩ನೇ ಅಧ್ಯಾಯದಲ್ಲಿ ಹೇಳಿರುವರು. ೧೪—೧೮ರ ಪರ್ಯಂತ ಜ್ಞಾನಸಾಧನವಾದ ನಿಷ್ಕಾಮಕರ್ಮ, ಧ್ಯಾನ, ಇವುಗಳ ಇತಿ ಕರ್ತವ್ಯತಾಂಶವನ್ನು ವಿವರಿಸಿರುವರು.

4) ಅಂದರೆ ಅಧ್ಯಾ ೨. ಶ್ಲೋ. ೧೨. ಪು. ೪೬. ನತ್ವೇವಾಹಂ ಎಂಬುವುದನ್ನಾರಂಭಿಸಿ ಶ್ಲೋ. ೩೦. ಪುಟ. ೧೨೭. ದೇಹೀ ನಿತ್ಯಂ ಎಂಬುವ ಪರ್ಯಂತವಾದುದು ಜೀವೇಶ್ವರರಿಬ್ಬರ ಸ್ವರೂಪಜ್ಞಾನವನ್ನು ಹುಟ್ಟಿಸುವಂತಾದ್ದು. ತ್ರೈಗುಣ್ಯವಿಷಯಾ ವೇದಾಃ ಶ್ಲೋ. ೪೫ ಪು. ೧೪೪. ಆರಂಭಿಸಿ ೬ನೇ ಅಧ್ಯಾಯ ಸಮಾಪ್ತಿ ಪು. ೩೯೭ ಪರ್ಯಂತವಾದುದು ಶ್ರೀಹರಿಯ ಅಪರೋಕ್ಷಜ್ಞಾನಕ್ಕೆ ಕಾರಣವಾದ ಉಪಾಯದ ಜ್ಞಾನವು ಬರುವುದಕ್ಕಾಗಿ. ಏವಂಚ ೨ನೇ ಅಧ್ಯಾಯದಲ್ಲಿ ಸಾಂಖ್ಯ ಯೋಗಗಳನ್ನು ಅಂದರೆ–ಜೀವೇಶ್ವರರ ಸ್ವರೂಪಜ್ಞಾನ ಮತ್ತು ಅದಕ್ಕೆ ಸಾಧನವಾದ ನಿವೃತ್ತ ಕರ್ಮರೂಪವಾದ ಜ್ಞಾನೋಪಾಯ ಇವುಗಳನ್ನು ಹೇಳಿರುವರು

5) ೩ನೇ ಅಧ್ಯಾಯದಲ್ಲಿ ನಿವೃತ್ತಕರ್ಮರೂಪವಾದ ಜ್ಞಾನೋಪಾಯವೆಂಬೀ ಯೋಗವು ಅವಶ್ಯ ಕಾರ್ಯವಾಗಿರುವುದರಿಂದ ಆ ಕರ್ಮಯೋಗವನ್ನು ವಿಶೇಷವಾಗಿ ವಿವರಿಸಿರುವರು.

6) ೪ನೇ ಅಧ್ಯಾಯದಲ್ಲಿ ಜ್ಞಾನಯೋಗವನ್ನು ಅಂದರೆ ನಿಯತಂ ಕುರು ಕರ್ಮ ತ್ವಂ (೩-೮- ಪು. ೨೩೦) ಇತ್ಯಾದಿಗಳಿಂದ ಹೇಳಿದ ನಿವೃತ್ತ ಕರ್ಮವನ್ನೂ ಯೋ ಬುದ್ಧೇಃ ಪರತಸ್ತು ಸಃ (೩-೪೨- ಪು. ೨೭೭) ಇತ್ಯಾದಿಗಳಿಂದ ಹೇಳಿದ ವಿಷ್ಣು ಸರ್ವೋತ್ತಮತ್ವವನ್ನೂ ವಿಸ್ತರಿಸಿ ಹೇಳಿರುವರು.

7) (೫ನೇ ಅಧ್ಯಾಯದಲ್ಲಿ ಸನ್ನ್ಯಾಸ ಯೋಗಗಳನ್ನು ಹೇಳಿರುವರು. ಅಂದರೆ ಫಲೇಚ್ಛಾದಿಗಳನ್ನು ಬಿಟ್ಟು ಶ್ರೀ ಪರಮಾತ್ಮನಿಗೆ ಪ್ರೀತಿಯಾಗಲಿ, ಎಂಬುವ ಬುದ್ಧಿಯಿಂದ ತಮ್ಮ ತಮ್ಮ ವರ್ಣಾಶ್ರಮಗಳಿಗೆ ವಿಹಿತಗಳಾದ ಕರ್ಮಗಳನ್ನು .ಮಾಡುವುದು ಕರ್ಮಯೋಗವು. ಆ ಕರ್ಮಯೋಗಕ್ಕೆ, ೧) ಕಾಮ ಕ್ರೋಧ ಮೊದಲಾದುವುಗಳನ್ನು ಬಿಡುವುದು. (೨) ಶ್ರೀಹರಿಗೆ ಪ್ರೀತಿಯಾಗಲಿ, ಎಂಬುವ ಬುದ್ಧಿಯಿಂದ ತಮಗೆ ವಿಹಿತಗಳಾದ ಕರ್ಮಗಳನ್ನು ಮಾಡುವುದು, ಎಂದು ಎರಡು ಅಂಶಗಳು. ೩ನೇ ಅಧ್ಯಾಯದಲ್ಲಿ ಸಂಕ್ಷೇಪದಿಂದ ಹೇಳಿದ್ದ ಅವುಗಳನ್ನು ಇಲ್ಲಿ ವಿವರಿಸುತ್ತಾರೆ.

8) ೬ನೇ ಅಧ್ಯಾಯದಲ್ಲಿ ಕರ್ಮಯೋಗದಿಂದ ಸಾಧ್ಯವಾದ ಅಪರೋಕ್ಷ ಜ್ಞಾನಕ್ಕೆ ಮುಖ್ಯ ಸಾಧನವಾದ ಸಮಾಧಿ (ಧ್ಯಾನ) ರೂಪ ಯೋಗವನ್ನು ವಿಸ್ತರಿಸಿ ಹೇಳಿರುವರು.

9) ೬ನೇ ಅಧ್ಯಾಯದಲ್ಲಿ ಧ್ಯಾನವು ಭಕ್ತಿಪೂರ್ವಕವಾಗಿ ಮಾಡಿದರೇನೇ ಜ್ಞಾನಸಾಧನವಾಗುವುದೆಂದು ಧ್ಯಾನ (ಸಮಾಧಿ) ಯೋಗವನ್ನು ಹೇಳಿರುವರು. ಅಂದರೆ ಭಕ್ತಿಯು ಹುಟ್ಟುವುದಕ್ಕಾಗಿ ಭಗವಂತನ ಮಹಿಮೆಯನ್ನು ಹೇಳಿರುವರು.

10) ೯ನೇ ಅಧ್ಯಾಯದಲ್ಲಿ ಭಗವಂತನ ಮಹಿಮಾ ವರ್ಣನ ರೂಪವಾದ ಭಕ್ತಿಯೋಗವನ್ನು ವಿವರಿಸಿ ಹೇಳಿರುವರು.

ಅಗ್ರಹಾರ ನಾರಾಯಣ ತಂತ್ರಿ.

## ಶುದ್ಧಾಶುದ್ಧ ಪತ್ರಿಕೆ Intreduction

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| 10 | 5 | Qtto | Otto |
| ,, | 7 | Gite | Gita |
| ,, | 11 | and rise | and made him rise |
| ,, | 13 | madehim | *Delete* |
| 11 | 6 | bondege | bondage |
| 13 | 31 | partantra satya | paratantra satya |
| 17 | 10 | immenent | immanent |
| ,, | 30 | uadhis | upadhis |
| 19 | 15 | विशेणतो | विशेषतो |
| ,, | 16 | रसा | रस |
| 19 | 28 | all-penettatring | all-penetrating |
| 23 | 17 | abava | abhava |
| 28 | 19+20 | delete | |
| 37 | 20 | then | them |
| 41 | 8 | elemet | element |

### ಭಗವದ್ಗೀತೆಯ ಗ್ರಂಥದಲ್ಲಿ

| | | | |
|---|---|---|---|
| ೧೩೯ | ೧೭ | ಸಭಾಂವಿಶಗ್ಯ | ಸಂಭಾವಿತಸ್ಯ |
| ೧೩೧ | ೨೮ | ಧಿಯತೇ | ಧೀಯತೇ |
| ೨೫೭ | ೧೮ | ತಿಳದಿರುವ | ತಿಳಿಯದಿರುವ |
| ೩೮೪ | ೫ | ಭೂಶಸ್ಥ | ಭೂತಸ್ಥ |
| ೪೩೫ | ೧೩ | ದೈವವಂ | ದೈವಂ |
| ೪೮೮ | ೨೨ | ದಿಷಂತಿ | ದ್ವಿಷಾಂತಿ |
| ೫೭೮ | ೧೧ | ಮಾದಂ | ಮಾದ್ಯಂ |
| ೫೮೯ | ೧೯ | ಭಾಂಂತೇ | ಭಾಗವತೇ |
| ೬೭೩ | ೧೧ | ದ ಃಖಾನಾಂ | ಭಾವಾನಾಂ |

ಹೀನನೂ, ನನ್ನ ದ್ವೇಷಿಗಳೂ, ಇತರೆಲ್ಲರೂ ಭಕ್ತಿಯಿಲ್ಲದವರು, ಅಭಕ್ತರು. (೩) ನನ್ನ ಭಕ್ತನೂ ಕೂಡ ಯಾವನು ಯತ್ನಿಂಚಿತ್ಪ್ರಯೋಜನಕ್ಕಾಗಿ ಬೇರೆ ದೇವತೆಗಳನ್ನು ಪರಿವಾರ ದೇವತೆಗಳೆಂದು ತಿಳಿದು ಕೊಳ್ಳದೆ ಧ್ಯಾನಿಸುತ್ತಾನೋ, ಅವನಕ್ಕಿಂತ ಕೇವಲ ನನ್ನನ್ನು ಉಪಾಸನೆ ಮಾಡುವವನು ಶ್ರೇಷ್ಠನು. ಬ್ರಹ್ಮರುದ್ರಾದಿ ಎಲ್ಲಾ ದೇವಾದಿಗಳನ್ನು ನನ್ನಿಂದ ಭಿನ್ನರನ್ನಾಗಿಯೂ. ನನ್ನ ಅಧೀನದಲ್ಲಿಯೇ ಇರುವವರನ್ನಾಗಿಯೂ, ತಿಳಿದವನಾಗಿ ಪರಿಶುದ್ಧವಾದ ಜ್ಞಾನವುಳ್ಳ ಧ್ಯಾನಿಯು ಎಲ್ಲರಿಗಿಂತ ಶ್ರೇಷ್ಠನು, ಎಂದು ದತ್ತಾತ್ರೇಯವಚನವು.

ವಿ || (1) ಅನ್ಯಾನ್ ಮದಧೀನಾನ್ ಜಾನನ್ ಎಂದು ಹೇಳಿದ್ದರಿಂದ ರುದ್ರಾದಿದೇವತೆಗಳನ್ನು ಪರಿವಾರರೂಪದಿಂದ ಉಪಾಸನೆ ಮಾಡಬೇಕೆಂದು ಹೇಳಲ್ಪಡುತ್ತದೆ. (2) ನನ್ನನ್ನುಪಾಸನೆ ಮಾಡುವವರಲ್ಲಿಯೂ ಪರಿಶುದ್ಧಜ್ಞಾನವಿದ್ದು ವಿಷಯಾಭಿಲಾಷೆಯನ್ನು ಬಿಟ್ಟವನು ಶ್ರೇಷ್ಠನೆಂದುಕ್ತವಾಯ್ತು||೪೬,೪೭||

ಇತಿ ಶ್ರೀಮದಾನಂದತೀರ್ಥಭಗವತ್ಪಾದವಿರಚಿತೇ ಶ್ರೀಭಗವದ್ಗೀತಾತಾತ್ಪರ್ಯನಿರ್ಣಯೇ ಷಷ್ಠೋಽಧ್ಯಾಯಃ || ೬ ||

ಅ || ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾ ತಾತ್ಪರ್ಯದಲ್ಲಿ ಆರನೇ ಅಧ್ಯಾಯವು ಮುಗಿಯಿತು. || ೬ ||

|| ಶ್ರೀಕೃಷ್ಣಾರ್ಪಣಮಸ್ತು ||

# ಏಳನೇ ಅಧ್ಯಾಯವು.

ಟೀ—(1) ಆರನೇ ಅಧ್ಯಾಯದಲ್ಲಿ ಪರಬ್ರಹ್ಮನ ಅಪರೋಕ್ಷಜ್ಞಾನಕ್ಕೆ ಮುಖ್ಯಸಾಧನವಾದ ಧ್ಯಾನರೂಪ ಯೋಗವನ್ನು ನಿರೂಪಿಸಿರುವರು. ಆ ಧ್ಯಾನವನ್ನು ಭಕ್ತಿಪೂರ್ವಕವಾಗಿ ಮಾಡಿದರೇನೇ ಅದು ಜ್ಞಾನಕ್ಕೆ ಸಾಧನವಾಗುತ್ತದೆ. ಆದಕಾರಣ ಧ್ಯಾನಕಾರಣವಾದ ಭಕ್ತಿಯು ಹುಟ್ಟುವುದಕ್ಕಾಗಿ ಶ್ರೀಹರಿಯ ಮಾಹಾತ್ಮ್ಯವನ್ನು ಮುಂದಿನ ಆರು ಅಧ್ಯಾಯಗಳಲ್ಲಿ ಹೇಳುತ್ತಾರೆ. (2) ಹಿಂದಿನ ೬ ಅಧ್ಯಾಯಗಳಲ್ಲಿಯೂ ಶ್ರೀಹರಿಯ ಮಾಹಾತ್ಮ್ಯವನ್ನು ಹೇಳಿದ್ದರೂ ಅವುಗಳಲ್ಲಿ ಸಾಧನವನ್ನೇ ಹೆಚ್ಚಾಗಿ ಹೇಳಿರುವರು. ಮುಂದಿನ ೬ ಅಧ್ಯಾಯಗಳಲ್ಲಿ ಕ್ವಚಿತ್ ಸಾಧನವನ್ನು ಹೇಳುವುದಾದರೂ ಹೆಚ್ಚಾಗಿ ಶ್ರೀಹರಿಯ ಮಹಿಮೆಯನ್ನೇ ಹೇಳುವರು. ಅದಕಾರಣ ಹಿಂದಿನ ೬ ಅಧ್ಯಾಯದಲ್ಲಿ ಸಾಧನವನ್ನು ಹೇಳಿದ್ದೆಂತಲೂ, ಮುಂದಿನ ೬ ಅಧ್ಯಾಯಗಳಲ್ಲಿ ಮಹಾತ್ಮ್ಯವನ್ನು ಹೇಳುತ್ತಾರೆಂಬುವುದೂ ಕೂಡುತ್ತದೆ. (3) ಪ್ರಕೃತ ಶ್ರೀಹರಿಯ ಮಹಿಮೆಯನ್ನು ಹೇಳುವುದಕ್ಕಾಗಿ ಪ್ರತಿಜ್ಞೆ ಮಾಡುತ್ತಾರೆ—

ಗೀ || || ಶ್ರೀಭಗವಾನುವಾಚ ||

ಓಂ || ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಂಜನ್ಮದಾಶ್ರಯಃ ।
ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು || ೧ ||

ಅ || ಶ್ರೀಭಗವಾನ್=ಶ್ರೀಕೃಷ್ಣನು, ಉವಾಚ=ಉಪದೇಶಿಸಿದನು, ಪಾರ್ಥ=ಅರ್ಜುನನೇ, ಮಯಿ=ನನ್ನಲ್ಲಿ. (ಶ್ರೀಕೃಷ್ಣನಲ್ಲಿ) ಆಸಕ್ತಮನಾಃ=ಅತ್ಯಂತ ಸ್ನೇಹದಿಂದೊಡಗೂಡಿದ ಮನಸ್ಸುಳ್ಳವನಾಗಿ, ಯೋಗಂ=ಜ್ಞಾನಸಾಧನವಾದ ಕರ್ಮರೂಪಯೋಗವನ್ನೂ ಧ್ಯಾನರೂಪಯೋಗವನ್ನೂ, ಯುಂಜನ್=ಮಾಡುವವನಾಗಿ, ಮದಾಶ್ರಯಃ=ಶ್ರೀಪರಮಾತ್ಮನೇ ನನ್ನಿಂದ ಎಲ್ಲಾ ಕಾರ್ಯವನ್ನು ಮಾಡಿಸುತ್ತಾನೆ, ಅವನೇ ನನಗೆ ರಕ್ಷಕನು, ಶ್ರೀಹರಿಯನ್ನು ಆಶ್ರಯಿಸಿಯೇ ನಾನು ಇರುವುದು, ಎಂಬ ಜ್ಞಾನವುಳ್ಳವನಾಗಿ, ಮಾಂ=ಶ್ರೀಕೃಷ್ಣನೆನಿಸಿದ ನನ್ನನ್ನು, ಸಮಗ್ರಂ=ನಿನಗೆ ತಿಳಿದುಕೊಳ್ಳಲಿಕ್ಕೆ ಎಷ್ಟು ಶಕ್ಯವಾಗುವುದೋ, ಅಷ್ಟು ಸಂಪೂರ್ಣವಾಗಿ, ಅಸಂಶಯಂ=ಸಂದೇಹವಿಲ್ಲದ. ಯಥಾ=ಯಾವ ಪ್ರಕಾರವಾಗಿ, ಜ್ಞಾಸ್ಯಸಿ=ತಿಳಿದುಕೊಳ್ಳುವಿಯೋ. ತತ್=ಹಾಗೆಯೇ, ತತ್=ಆ ಪ್ರಕಾರವಾಗಿಯೇ ನನ್ನ ಜ್ಞಾನವನ್ನು ಹುಟ್ಟಿಸುವ ಮಾತನ್ನು, ಶೃಣು=ಕೇಳು. (ಅಂದರೆ ಕೇಳಿ ಆ ಮಾತಿನಲ್ಲಿ ಆಸಕ್ತಿಯನ್ನು (ವಿಶ್ವಾಸವನ್ನು) ಮಾಡು.) || ೧ ||

ಭಾ || ಓಂ || (೧) ಸಾಧನಂ ಪ್ರಾಧಾನ್ಯೇನೋಕ್ತಮತೀತೈರಧ್ಯಾಯೈಃ । ಉತ್ತರೈಸ್ತು ಷಡ್ಭಿರ್ಭಗವನ್ಮಾಹಾತ್ಮ್ಯಂ ಪ್ರಾಧಾನ್ಯೇನಾಹ || (೨) ಆಸಕ್ತಮನಾಃ ಅತೀವ ಸ್ನೇಹಯುಕ್ತಮನಾಃ । ಮದಾಶ್ರಯಃ ಭಗವಾನೇವ ಮಯಾ ಸರ್ವಂ ಕಾರಯತಿ । ಸ ಏವ ಚ ಮೇ ಶರಣಂ । ತಸ್ಮಿನ್ನೇವ ಚಾಹಂ ಸ್ಥಿತ ಇತಿ ಸ್ಥಿತಃ || (೩) ಅಸಂಶಯಂ ಸಮಗ್ರಮಿತಿ ಕ್ರಿಯಾವಿಶೇಷಣಂ || ೧ ||

ಅ ॥ (೧) (ಹಿಂದಿನ ಅಧ್ಯಾಯಗಳಲ್ಲಿಯೂ ಅಲ್ಲಲ್ಲಿ ಶ್ರೀಹರಿಯ ಮಹಿಮೆಯನ್ನು ಹೇಳಿದ್ದರೂ) ಪ್ರಚುರವಾಗಿ (ಹೆಚ್ಚು ಗ್ರಂಥಗಳಿಂದ) ಹಿಂದಿನ ಆರು ಅಧ್ಯಾಯಗಳಿಂದ ಜ್ಞಾನಸಾಧನವೇ ಹೇಳಲ್ಪಟ್ಟಿದೆ. ಇನ್ನು ಮುಂದಿನ ಆರು ಅಧ್ಯಾಯಗಳಿಂದ ಪ್ರಚುರವಾಗಿ (ಹೆಚ್ಚು ಗ್ರಂಥಗಳಿಂದ) ಶ್ರೀಪರಮಾತ್ಮನ ಮಹಿಮೆಯನ್ನೇ ಹೇಳುತ್ತಾರೆ. (೨) (ಆಸಕ್ತಮನಾಃ=ಸಂಬದ್ಧವಾದ ಮನಸ್ಸುಳ್ಳವನು, ಎಂಬುವ ಪ್ರತೀತಿಯನ್ನು ಹೋಗಲಾಡಿಸುತ್ತಾರೆ—)ಆಸಕ್ತಮನಾಃ=ಅತ್ಯಂತ ಸ್ನೇಹಯುಕ್ತವಾದ ಮನಸ್ಸುಳ್ಳವನು, ಮದಾಶ್ರಯಃ=ಶ್ರೀಪರಮಾತ್ಮನೇ ನನ್ನಿಂದ ಎಲ್ಲವನ್ನು ಮಾಡಿಸುತ್ತಾನೆ. ಅವನೇ ನನಗೆ ರಕ್ಷಕನು, ಅವನನ್ನಾಶ್ರಯಿಸಿಯೇ ನಾನು ಇರುವುದು ಎಂದು ತಿಳಿದವನು. (೩) ((1) ಅಸಂಶಯಂ (ಸಂಶಯವಿಲ್ಲದಿರುವ) ಸಮಗ್ರಂ (ಸಂಪೂರ್ಣ) ಇವೆರಡೂ ಶ್ರೀಪರಮಾತ್ಮನಿಗೆ ವಿಶೇಷಣವೆಂದು ಭಾಸ್ಕರಾಚಾರ್ಯರು ವ್ಯಾಖ್ಯಾನಮಾಡಿರುವರು (2) ಅದ್ವೈತಭಾಷ್ಯದಲ್ಲಿ ಸಮಗ್ರಂ=ಸಮಸ್ತ ವಿಭೂತಿ ಬಲ ಶಕ್ತಿ ಐಶ್ವರ್ಯ ಮೊದಲಾದ ಗುಣಗಳಿಂದೊಡಗೂಡಿದ, ಮಾಂ=ನನ್ನನ್ನು ಸಂದೇಹವಿಲ್ಲದೆ ಎಂದು ಅರ್ಥ ಹೇಳಿರುವರು. ಇವೆರಡು ಅಯುಕ್ತವೆಂಬುವ ಅಭಿಪ್ರಾಯದಿಂದ ಹೇಳುತ್ತಾರೆ—) ಅಸಂಶಯಂ ಸಮಗ್ರಂ ಇವೆರಡೂ ಕ್ರಿಯಾವಿಶೇಷಗಳು. (ಅಂದರೆ ಸಂಶಯರೂಪವಾಗದಿರುವ ಹಾಗೆ ನಿನ್ನ ಯೋಗ್ಯತೆಗೆ ಅನುಗುಣವಾಗಿ ತಿಳಿದುಕೊಳ್ಳಲಿಕ್ಕೆ, ಯೋಗ್ಯವಾದುದೆಲ್ಲವೂ ಎಂದರ್ಥವು) ಶ್ರೀಹರಿಗೆ ಯಾವಾಗಲೂ ಸಂಶಯವಿಲ್ಲದಿರುವುದರಿಂದ ಸಂಶಯವಿಲ್ಲದವನೆಂದು ಹೇಳುವುದು ಅನುಪಯುಕ್ತವು ಶ್ರೀಹರಿಯು ಸಂಪೂರ್ಣವಾಗಿ ತಿಳಿದುಕೊಳ್ಳಲಿಕ್ಕೆ ಯಾರಿಗೂ ಅಶಕ್ಯನಾಗಿರುವುದರಿಂದ ಸಮಗ್ರಂ ಸಂಪೂರ್ಣನಾದ ನನ್ನನ್ನು ತಿಳಿಯಬೇಕೆಂದು ಹೇಳಿದ್ದು ಅಯುಕ್ತವು ॥ ೧ ॥

ಗೀ ॥ ಜ್ಞಾನಂ ತೇಽಹಂ ಸವಿಜ್ಞಾನಮಿದಂ ವಕ್ಷ್ಯಾಮ್ಯಶೇಷತಃ ।
ಯಜ್ಜ್ಞಾತ್ವಾ ನೇಹ ಭೂಯೋಽನ್ಯಜ್ಜ್ಞಾತವ್ಯಮವಶಿಷ್ಯತೇ ॥ ೨ ॥

ಅ ॥ ಅಹಂ=ನಾನು. (ಅರ್ಜುನನೇ) ತೇ=ನಿನಗಾಗಿ, ಇದಂ=ನನ್ನದ್ದಾದ, ಸವಿಜ್ಞಾನಂ=ವಿಶೇಷವಾಗಿ ತಿಳಿದುಕೊಳ್ಳಲಿಕ್ಕೆ ಯೋಗ್ಯವಾದ ಮಹಿಮೆಯಿಂದ ಕೂಡಿದ, ಜ್ಞಾನಂ=ಸಾಮಾನ್ಯರೂಪವಾಗಿ ತಿಳಿಯಬು ಯೋಗ್ಯವಾದ ಮಾಹಾತ್ಮ್ಯವನ್ನು (ಅಂದರೆ ಶ್ರೀಹರಿಯ ಸಾಮಾನ್ಯ ಮಾಹಾತ್ಮ್ಯವನ್ನೂ ವಿಶೇಷ ಮಾಹಾತ್ಮ್ಯವನ್ನೂ ಕೂಡ,) ಅಶೇಷತಃ=ನಿನಗೆ ತಿಳಿದುಕೊಳ್ಳಲಿಕ್ಕೆ ಎಷ್ಟು ಯೋಗ್ಯತೆಯು ಇದೆಯೋ ಅವೆಲ್ಲವನ್ನು, ವಕ್ಷ್ಯಾಮಿ=ಹೇಳುವೆನು ಯತ್=ಯಾವ ಮಾಹಾತ್ಮ್ಯಯನ್ನು, ಜ್ಞಾತ್ವಾ=ತಿಳಿದುಕೊಂಡು, ಭೂಯಃ=ತಿರುಗಿ, ಇಹ=ತಿಳಿಯಲು ಯೋಗ್ಯವಾದ ಮಾಹಾತ್ಮ್ಯಗಳ ಮಧ್ಯದಲ್ಲಿ, ಅನ್ಯತ್ ಜ್ಞಾತವ್ಯಂ=ಬೇರೆ ಯಾವುದೊಂದೂ ನಿನಗೆ ತಿಳಿಯಲು ಯೋಗ್ಯವಾದ ಮಾಹಾತ್ಮ್ಯಯು, ನಾವಶಿಷ್ಯತೇ=ಉಳಿಯುವಂತಾದ್ದು ಇಲ್ಲ. (ಅಂದರೆ ನಾನು ಮುಂದೆ ಹೇಳುವ ಮಹಿಮೆಯನ್ನು ತಿಳಿದರೆ ನಿನಗೆ ತಿಳಿಯಲು ಯೋಗ್ಯವಾದ ಸರ್ವವನ್ನು ತಿಳಿದಂತೆಯೇ ಆಗುವುದು.) ॥೨॥

ಭಾ ॥ ಇದಂ ಮದ್ವಿಷಯಂ ಜ್ಞಾನಂ । ವಿಜ್ಞಾನಂ ವಿಶೇಷಜ್ಞಾನಂ ॥ ೨ ॥

ಅ ॥ ಇದಂ=ನನ್ನ ವಿಷಯಕವಾದ ಜ್ಞಾನವು. ವಿಜ್ಞಾನಂ=ವಿಶೇಷಜ್ಞಾನವು. (ಅಂದರೆ ನನ್ನ ಸಾಮಾನ್ಯ ಮಹಿಮೆಯನ್ನೂ ವಿಶೇಷ ಮಹಿಮೆಯನ್ನೂ ಎಂದರ್ಥವು ॥ ೨ ॥

ಹೀ—ಈ ಮಹಿಮೆಯನ್ನು ಕೇಳಲಿಕ್ಕೆ ವಿಶ್ವಾಸ ಹುಟ್ಟುವುದಕ್ಕಾಗಿ ಆ ಮಾಹಾತ್ಮ್ಯಜ್ಞಾನವು ಸುಲಭಸಾಧ್ಯವಲ್ಲವೆನ್ನುತ್ತಾರೆ—

ಗೀ ॥ ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।
ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ ೩ ॥

ಅ ॥ ಮನುಷ್ಯಾಣಾಂ ಸಹಸ್ರೇಷು= ಸಾವಿರಾರು ಮನುಷ್ಯರ ಮಧ್ಯದಲ್ಲಿ, ಕಶ್ಚಿತ್= ಪುಣ್ಯವಂತನಾದ ಒಬ್ಬ ಪುರುಷನು. ಸಿದ್ಧಯೇ= ಮಾಹಾತ್ಮ್ಯಜ್ಞಾನವನ್ನು ಹೊಂದುವುದಕ್ಕಾಗಿ, ಯತತಿ=ಪ್ರಯತ್ನಿಸುತ್ತಾನೆ. ಯತತಾಮಪಿ= ಮಾಹಾತ್ಮ್ಯಜ್ಞಾನಕ್ಕಾಗಿ ಪ್ರಯತ್ನಿಸುವ ಜನರ ಮಧ್ಯದಲ್ಲಿಯೂ, ಕಶ್ಚಿತ್= ಪುಣ್ಯವಂತನೊಬ್ಬನೇ, (ಜ್ಞಾನವನ್ನು ಹೊಂದುತ್ತಾನೆ) ಸಿದ್ಧಾನಾಂ= ಜ್ಞಾನವನ್ನು ಹೊಂದಿದವರ ಮಧ್ಯದಲ್ಲಿಯೂ, ಕಶ್ಚಿತ್= ಒಬ್ಬನೇ, ತತ್ತ್ವತಃ= ಯಥಾರ್ಥವಾಗಿ (ಯೋಗ್ಯತಾನುಗುಣವಾಗಿ) ವೇತ್ತಿ= ತಿಳಿದುಕೊಳ್ಳುತ್ತಾನೆ. ॥ ೩ ॥

ಭಾ ॥ ದೌರ್ಲಭ್ಯಂ ಜ್ಞಾನಸ್ಯಾಹ । ಮನುಷ್ಯಾಣಾಮಿತಿ ॥ ೩ ॥

ಅ ॥ (ಶ್ರೋತೃಗಳಿಗೆ ವಿಶ್ವಾಸ ಹುಟ್ಟುವುದಕ್ಕಾಗಿ) ಮನುಷ್ಯಾಣಾಂ ಎಂಬುವ ಶ್ಲೋಕದಿಂದ ಶ್ರೀಪರಮಾತ್ಮನ ಮಹಾತ್ಮ್ಯಜ್ಞಾನವು ಅತಿ ದುರ್ಲಭವೆನ್ನುತ್ತಾರೆ. ॥ ೩ ॥

ತಾ ॥ ಓಂ ॥ (೧) ಭಗವನ್ಮಹಿಮಾ ವಿಶೇಷತ ಉಚ್ಯತೇ ॥ (೨) ಅನಂತಾನಾಂ ತು ಜೀವಾನಾಂ ಯತಂತೇ ಕೇಚಿದೇವ ತು । ಮುಕ್ತ್ಯೈ ತೇಷು ಚ ಮುಚ್ಯಂತೇ ಕೇಚಿನ್ಮುಕ್ತೇಷು ಚ ಸ್ಫುಟಂ । ಕೇಚನೈವ ಹರಿಂ ಸಮ್ಯಗ್ಬ್ರಹ್ಮರುದ್ರಾದಯೋ ವಿದುಃ । ಅನ್ಯೇಷಾಂ ಯಾವತಾ ಮುಕ್ತಿಸ್ತಾವಜ್ಜ್ಞಾನಂ ಹರೌ ಪರಮಿತಿ ಪಾದ್ಮೇ ॥ (೩) ಮುಕ್ತಾನಾಮಪಿ ಸಿದ್ಧಾನಾಂ ನಾರಾಯಣಪರಾಯಣಃ । ಸುದುರ್ಲಭಃ ಪ್ರಶಾಂತಾತ್ಮಾ ಕೋಟಿಷ್ವಪಿ ಮಹಾಮುನ ಇತಿ ಭಾಗವತೇ ॥ (೪) ಸರ್ವೇ ಮುಕ್ತಾ ಹರೌ ಭಕ್ತಾಸ್ತೇಷು ಬ್ರಹ್ಮೈವ ಮುಖ್ಯತಃ । ವಿಷ್ಣೋಃ ಪರಮಭಕ್ತಸ್ತು ತಸ್ಮಾಜ್ಜೀವಘನೋ ಮತ ಇತಿ ಸತ್ತತ್ತ್ವೇ ॥ ೧,೨,೩ ॥

ಅ ॥ (೧) ಹಿಂದೆ ಹೇಳಿದ ಧ್ಯಾನವನ್ನು ಭಕ್ತಿಪೂರ್ವಕವಾಗಿ ಮಾಡಿದರೇನೇ ಅದು ಅಪರೋಕ್ಷಜ್ಞಾನಕ್ಕೆ ಸಾಧನವಾಗುತ್ತದೆ. ಇಲ್ಲವಾದರೆ ಆಗಲಾರದು. ಆದಕಾರಣ ಭಕ್ತಿಯು ಹುಟ್ಟುವುದಕ್ಕಾಗಿ ಹಿಂದೆ ಸಂಕ್ಷೇಪವಾಗಿ ಹೇಳಿದ ಭಗವನ್ಮಹಿಮೆಯನ್ನೇ ಈ ಅಧ್ಯಾಯದಲ್ಲಿ ವಿಸ್ತರವಾಗಿ ಹೇಳುತ್ತಾರೆ. (೨) (ಜ್ಞಾನವನ್ನು ಸಂಪಾದಿಸುವ ವಿಷಯದಲ್ಲಿ ವಿಶ್ವಾಸವನ್ನು ಹುಟ್ಟಿಸುವುದಕ್ಕಾಗಿ ಜ್ಞಾನಕ್ಕೆ ದೌರ್ಲಭ್ಯವನ್ನು ಹೇಳುತ್ತಾರೆ-) ಅನಂತಾನಂತ ಜೀವರ ಮಧ್ಯದಲ್ಲಿ ಕೆಲವರೇ ಮೋಕ್ಷಸಾಧನವಾದ ಜ್ಞಾನವನ್ನು ಹೊಂದುವುದಕ್ಕಾಗಿ ಪ್ರಯತ್ನಿಸುತ್ತಾರೆ. ಪ್ರಯತ್ನಿಸುವವರ ಮಧ್ಯದಲ್ಲಿ, ಕೆಲವರೇ ಜ್ಞಾನವನ್ನು ಸಂಪಾದಿಸಿ ಜೀವನ್ಮುಕ್ತರಾಗುತ್ತಾರೆ (ಜೀವನ್ಮುಕ್ತರಾದವರೆಲ್ಲರೂ ಮೋಕ್ಷವನ್ನು ಹೊಂದುತ್ತಾರೆ. ಮುಕ್ತರಾದವರೆಲ್ಲರೂ ಶ್ರೀಹರಿಯನ್ನು ತಿಳಿಯುತ್ತಾರೆ) ಬ್ರಹ್ಮ ರುದ್ರ ಮೊದಲಾದ ಕೆಲವು ದೇವತೆಗಳು ಉತ್ತಮಾಧಿಕಾರಿಗಳು ಮಾತ್ರ ಮಧ್ಯಮಾಧಿಕಾರಿಗಳಿಗಿಂತ ಹೆಚ್ಚಾಗಿ ಸಂಪೂರ್ಣವಾಗಿ(ಚೆನ್ನಾಗಿ ಅಂದರೆ ಅವರವರ ಯೋಗ್ಯತಾನುಸಾರವಾಗಿ)ಯೋ ತಿಳಿಯುತ್ತಾರೆ. ಬೇರೆ ಅಧಿಕಾರಿಗಳಿಗೆ ಎಷ್ಟು ಜ್ಞಾನದಿಂದ ಮೋಕ್ಷವಾಗುತ್ತದೋ ಅಷ್ಟೇ ಭಗವದ್ವಿಷಯಕವಾದ ಜ್ಞಾನವಿದೆ. ಎಂದು ಪಾದ್ಮದಲ್ಲಿದೆ. (೩) ಜೀವನ್ಮುಕ್ತರಾದವರೆಲ್ಲರೂ ಮೋಕ್ಷವನ್ನು ಹೊಂದುತ್ತಾರೆ (ಮುಕ್ತರಾದವರೆಲ್ಲರೂ ಶ್ರೀಹರಿಯ ಜ್ಞಾನಾದಿಗಳುಳ್ಳವರಾದುದರಿಂದ ಶ್ರೀನಾರಾಯಣನೇ

ಆಶ್ರಯನಾಗಿ ಉಳ್ಳವರು. ಆದರೆ) ಕೋಟಿ ಸಂಖ್ಯೆ ಮುಕ್ತರ ಮಧ್ಯದಲ್ಲಿಯೂ ಚೆನ್ನಾಗಿ ಶಾಂತಚಿತ್ತನಾಗಿ ಶ್ರೀನಾರಾಯಣನೇ ಮುಖ್ಯಾಶ್ರಯನೆಂದು ತಿಳಿದವನು ಅತಿದುರ್ಲಭನು, ಎಂದು ಭಾಗವತದಲ್ಲಿದೆ. ಮುಕ್ತರೆಲ್ಲರೂ ಶ್ರೀಹರಿಯಲ್ಲಿ ಭಕ್ತಿಯುಳ್ಳವರೇ ಆಗಿರುತ್ತಾರೆ. ಅವರಲ್ಲಿ ಮುಖ್ಯವಾಗಿ ಶ್ರೀವಿಷ್ಣುವಿನ ಅತ್ಯುತ್ತಮವಾದ ಭಕ್ತಿಯುಳ್ಳವನು ಚತುರ್ಮುಖಬ್ರಹ್ಮನೇ. (ಇದರಿಂದ ಮಹಾಜ್ಞಾನಿಗಳು ಮಾತ್ರ ದುರ್ಲಭರೆಂದಲ್ಲ. ಮಹಾಭಕ್ತ್ಯಾದಿಗಳುಳ್ಳವನೂ ದುರ್ಲಭನೆಂದುಕ್ತವಾಯ್ತು.) (೪) ಆದಕಾರಣ ಚತುರ್ಮುಖಬ್ರಹ್ಮನು ಜೀವೋತ್ತಮನೆಂದು ಪ್ರಸಿದ್ಧನು, ಎಂದು ಸತ್ತತ್ತ್ವವೆಂಬುವ ಗ್ರಂಥದಲ್ಲಿದೆ. ॥ ೧, ೨, ೩ ॥

ಪೀ—ಹೀಗೆ ಉಪಯುಕ್ತ ಪ್ರಮೇಯವನ್ನು ಹೇಳಿ ಸಾಮಾನ್ಯತಃ ತಿಳಿಯಲು ಯೋಗ್ಯವಾದ ಮಾಹಾತ್ಮ್ಯವನ್ನು ನಾಲ್ಕು ಶ್ಲೋಕಗಳಿಂದ ಹೇಳುತ್ತಾರೆ—

ಗೀ ॥ ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।
ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪ ॥

ಅ ॥ ಭೂಮಿಃ=ಪೃಥಿವಿಯು. ಆಪಃ=ಜಲವು. ಅನಲಃ=ತೇಜಸ್ಸು, ವಾಯುಃ=ಗಾಳಿಯು, ಖಂ=ಆಕಾಶವು. (ಹೀಗೆ ಪಂಚಮಹಾಭೂತಗಳೂ) ಮನಃ=ಮನಸ್ತತ್ತ್ವವು, ಬುದ್ಧಿಃ=ಬುದ್ಧಿತತ್ತ್ವವು, ಅಹಂಕಾರಶ್ಚ=ಅಹಂಕಾರತತ್ತ್ವ (ಮಹತ್ತತ್ತ್ವ)ಗಳೂ, ಇತಿ=ಹೀಗೆ, ಮೇ=ನನ್ನ ಅಧೀನದಲ್ಲಿರುವ, ಇಯಂ ಪ್ರಕೃತಿಃ=ಈ ಜಡಪ್ರಕೃತಿಯು, ಅಷ್ಟಧಾ ಭಿನ್ನಾ=ಎಂಟು ಪ್ರಕಾರವಾಗಿ ಭೇದವುಳ್ಳದ್ದು. (ಏವಂಚ ನನ್ನಿಂದ ಪ್ರೇರೇಪಿಸಲ್ಪಟ್ಟ ಪ್ರಕೃತಿಯು ಪೃಥಿವೀ ಮೊದಲಾದ ಕಾರ್ಯರೂಪದಿಂದಲೇ ಬೇರೆ ಬೇರೆಯಾಗಿರುವುದು) ॥ ೪ ॥

ಭಾ ॥ ಪ್ರತಿಜ್ಞಾತಂ ಜ್ಞಾನಮಾಹ । ಭೂಮಿರಿತ್ಯಾದಿನಾ । ಮಹತೋಽಹಂಕಾರ ಏವಾಂತರ್ಭಾವಃ ॥ ೪ ॥

ಅ ॥ ಪ್ರತಿಜ್ಞಾತವಾದ ತಿಳಿಯಲು ಯೋಗ್ಯವಾದ ಸಾಮಾನ್ಯ ಮಹಿಮೆಯನ್ನು ಭೂಮಿರಾಪಃ ಇತ್ಯಾದಿಗಳಿಂದ ಹೇಳುತ್ತಾರೆ. (ಮಹತ್ತತ್ತ್ವವನ್ನು ಇಲ್ಲಿ ಹೇಳದಿದ್ದುದರಿಂದ ಅದಿಲ್ಲವೋ ಎಂದರೆ—) ಮಹತ್ತತ್ತ್ವವು ಅಹಂಕಾರ ಶಬ್ದಾರ್ಥದಲ್ಲಿ ಸೇರುತ್ತದೆ. (ಅಂದರೆ ಕಾರ್ಯವಾಚಕವಾದ ಅಹಂಕಾರ ಶಬ್ದದಿಂದ ಅಹಂಕಾರತತ್ತ್ವಕ್ಕೆ ಕಾರಣವಾದ ಮಹತ್ತತ್ತ್ವವನ್ನೂ ಇಟ್ಟುಕೊಳ್ಳಬೇಕು.) ॥ ೪ ॥

ಪೀ—ಜಡಪ್ರಕೃತಿ ಅದರ ಕಾರ್ಯಗಳಾದ ಪೃಥಿವ್ಯಾದಿ ಇವುಗಳು ಮಾತ್ರ ನನ್ನ ಅಧೀನದಲ್ಲಿ ಇರತಕ್ಕವುಗಳೆಂದಲ್ಲ. ಮತ್ತೆ ಬ್ರಹ್ಮಾದಿ ಜಗತ್ತಿಗೆ ಮಾತೆಯಾದ ಲಕ್ಷ್ಮೀದೇವಿಯೂ ಕೂಡ ನನ್ನ ಅಧೀನದಲ್ಲಿಯೇ ಇರುವವಳೆನ್ನುತ್ತಾರೆ—

ಗೀ ॥ ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ ।
ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್ ॥ ೫ ॥

ಅ ॥ ಮಹಾಬಾಹೋ=ಅರ್ಜುನನೇ, ಇಯಂ=ಹಿಂದೆ ಹೇಳಿದ ಜಡಪ್ರಕೃತಿಯು, ಅಪರಾ=ಅಧಮವಾದುದು (ಜೀವರೂ ಕೂಡ ಅಧಮರು.) ಯಯಾ=ಯಾವಲಕ್ಷ್ಮೀದೇವಿಯಿಂದ, ಇದಂ ಜಗತ್=ಈ

ಬ್ರಹ್ಮರುದ್ರ ಮೊದಲಾದ ಜಗತ್ತು, ಧಾರ್ಯತೇ=ಧರಿಸಲ್ಪಡುತ್ತದೋ, (ತಾಂ=ಅಂತಹ) ಇತಸ್ತು=ಜಡ ಪ್ರಕೃತ್ಯಾದಿಗಳಿಗಿಂತ, ಅನ್ಯಾಂ=ಇತರಳಾದ, ಜೀವಭೂತಾಂ=ಎಲ್ಲಾ ಜೀವರ ದೇಹಗಳಲ್ಲಿದ್ದು ಅವರವರ ಪ್ರಾಣಗಳನ್ನು ಆಯಾಯ ದೇಹಗಳಲ್ಲಿ ಧರಿಸಿಕೊಂಡಿರುವುದರಿಂದ ಜೀವ ಎನಿಸಿಕೊಂಡವಳೂ, ಸರ್ವದಾ ಇರುವವಳೂ ಆದ, ಮೇ=ನನ್ನ ಅಧೀನದಲ್ಲಿರುವ, ಪ್ರಕೃತಿಂ=ಲಕ್ಷ್ಮೀದೇವಿಯನ್ನು (ಮುಕ್ತರನ್ನು ಕೂಡ) ಪರಾಂ=ಉತ್ತಮರನ್ನಾಗಿ, ವಿದ್ಧಿ=ತಿಳಿದುಕೊಳ್ಳು. ॥ ೫ ॥

ಪೀ– ಅಪರಶಬ್ದಕ್ಕೆ ಅನೇಕಾರ್ಥಗಳು ಇದ್ದುದರಿಂದ ಪ್ರಕೃತದಲ್ಲಿ ವಿವಕ್ಷಿತವಾದ ಅರ್ಥವನ್ನು ಹೇಳುತ್ತಾರೆ—

**ಭಾ ॥ (೧) ಅಪರಾ ಅನುತ್ತಮಾ । ವಕ್ಷ್ಯಮಾಣಾಮಪೇಕ್ಷ್ಯ ॥ (೨) ಜೀವಭೂತಾ ಶ್ರೀಃ । ಜೀವಾನಾಂ ಪ್ರಾಣಧಾರಿಣೀ । ಚಿದ್ರೂಪಭೂತಾ ಸರ್ವದಾ ಸತೀ । ಏತನ್ಮಹದ್ಭೂತಮಿತಿ ಶ್ರುತಿಃ ॥ (೩) ಜಗಾದ ಚ । ಪ್ರಕೃತೀ ದ್ವೇ ತು ದೇವಸ್ಯ ಜಡಾ ಚೈವಾಜಡಾ ತಥಾ । ಅವ್ಯಕ್ತಾಖ್ಯಾ ಜಡಾ ಸಾ ಚ ಸೃಷ್ಟ್ಯಾ ಭಿನ್ನಾಽಷ್ಟಧಾ ಪುನಃ । ಮಹಾನ್ ಬುದ್ಧಿರ್ಮನಶ್ಚೈವ ಪಂಚ ಭೂತಾನಿ ಚೇತಿ ಹಿ । ಅವರಾ ಸಾ ಜಡಾ ಶ್ರೀಶ್ಚ ಪರೇಯಂ ಧಾರ್ಯತೇ ಯಯಾ । ಚಿದ್ರೂಪಾ ಸಾ ತ್ವನಂತಾ ಚ ಅನಾದಿನಿಧನಾ ಪರಾ । ಯತ್ಸಮಂ ತು ಪ್ರಿಯಂ ಕಿಂಚಿನ್ನಾಸ್ತಿ ವಿಷ್ಣೋರ್ಮಹಾತ್ಮನಃ । ನಾರಾಯಣಸ್ಯ ಮಹಿಷೀ ಮಾತಾ ಸಾ ಬ್ರಹ್ಮಣೋಽಪಿ ಹಿ । ತಾಭ್ಯಾಮಿದಂ ಜಗತ್ಸರ್ವಂ ಹರಿಃ ಸೃಜತಿ ಭೂತರಾಡಿತಿ ನಾರದೀಯೇ ॥ ೫ ॥**

ಅ ॥ (೧) (ಜಡಪ್ರಕೃತಿಯು) ಮುಂದೆ ಹೇಳುವ ಶ್ರೇಷ್ಠವಾದ ಚಿತ್ಪ್ರಕೃತಿ (ಲಕ್ಷ್ಮೀದೇವಿ)ಗಿಂತ, ಅಪರಾ=ನಿಕೃಷ್ಟವು. (೨) (ಜೀವಭೂತಾಂ ಎಂಬುವುದಕ್ಕೆ ಜೀವಭಾವವನ್ನು ಹೊಂದಿದ ಎಂಬೀ ಪರರ ವ್ಯಾಖ್ಯಾನವು ಅಯುಕ್ತವೆಂಬುವ ಅಭಿಪ್ರಾಯದಿಂದ ಯೋಗ್ಯವಾದ ಅರ್ಥವನ್ನು ಹೇಳುತ್ತಾರೆ—) ಜೀವಭೂತಾ=ಲಕ್ಷ್ಮೀದೇವಿಯು ಎಲ್ಲಾ ಜೀವರ ಶರೀರಗಳಲ್ಲಿದ್ದು ಅವರ ಪ್ರಾಣಗಳನ್ನು ಧರಿಸಿಕೊಂಡಿರುವುದರಿಂದ ಜೀವ ಎನಿಸಿಕೊಳ್ಳುವವಳು. ಜ್ಞಾನಾನಂದಾತ್ಮಕ ಶರೀರವುಳ್ಳವಳು. ಸರ್ವದಾ ಅಂದರೆ ಭೂತ ಭವಿಷ್ಯದ್ವರ್ತಮಾನ ಕಾಲಗಳಲ್ಲಿಯೂ ಇರುವವಳು. (ಸರ್ವದಾ ಇರತಕ್ಕದು ಎಂಬುವ ಅರ್ಥದಲ್ಲಿ ಭೂತ ಶಬ್ದಕ್ಕೆ ಪ್ರಾಮಾಣಿಕ ಪ್ರಯೋಗವನ್ನು ತೋರಿಸುತ್ತಾರೆ—) ಏತತ್=ಶ್ರೀತತ್ತ್ವವು ಜಡಪ್ರಕೃತಿಗಿಂತಲೂ ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠವು. ಸರ್ವದಾ ಇರತಕ್ಕುದು, ಎಂದು ವೇದವು. (ಇದರಿಂದ ಜಡಪ್ರಕೃತಿಗಿಂತ ಲಕ್ಷ್ಮೀದೇವಿಯು ಉತ್ತಮಳೆಂದುಕ್ತವಾಯ್ತು.) (೩) (ಭೂಮಿರಾಪಃ ಇತ್ಯಾದಿಗಳಿಗೆ ಅಭಿಮತವಾದ ಅರ್ಥವನ್ನು ಪುರಾಣವಾಕ್ಯದಿಂದ ದೃಢೀಕರಿಸುತ್ತಾರೆ. ) ಜಡ ಅಜಡ (ಅಚೇತನ ಚೇತನ) ಎಂಬುವ ಎರಡು ಪ್ರಕೃತಿಗಳು ಶ್ರೀಪರಮಾತ್ಮನ ಅಧೀನಗಳು. ಜಡಪ್ರಕೃತಿಯು ಅವ್ಯಕ್ತ ಎನಿಸಿಕೊಳ್ಳುತ್ತದೆ. ಆ ಜಡಪ್ರಕೃತಿಯು, ಮಹತ್ತತ್ತ್ವ, ಬುದ್ಧಿತತ್ತ್ವ, ಮನಸ್ತತ್ತ್ವ, ಪೃಥಿವ್ಯಾದಿ ಪಂಚಭೂತಗಳು ಈ ಪ್ರಕಾರ ಕಾರ್ಯರೂಪದಿಂದ ಎಂಟು ಪ್ರಕಾರ ಭಿನ್ನವಾಗಿದೆ. ಆ ಜಡಪ್ರಕೃತಿಯು ನಿಕೃಷ್ಟವಾದುದು. ಅಜಡಪ್ರಕೃತಿಯು ಲಕ್ಷ್ಮೀದೇವಿಯು. ಉತ್ಕೃಷ್ಟಗಳು, ಅವಳಿಂದ ಜಡಪ್ರಕೃತಿಯು ಧರಿಸಲ್ಪಡುತ್ತದೆ (ಅವಳ ಅಧೀನವಾಗಿದೆ.) ಆ ಚಿತ್ಪ್ರಕೃತಿಯು ಜ್ಞಾನಾನಂದಸ್ವರೂಪ ದೇಹವುಳ್ಳವಳು. ನಾಶವಿಲ್ಲದವಳು. ಸರ್ವದೇಶಕಾಲಗಳಲ್ಲಿರುವವಳು. ಬ್ರಹ್ಮಾದಿಗಳಿಂದ ಕೋಟಿ ಪಾಲು ಹೆಚ್ಚು ಗುಣ ಉಳ್ಳವಳು. ಉತ್ಪತ್ತಿನಾಶವಿಲ್ಲದವಳು ಬ್ರಹ್ಮಾದಿಗಳಿಗಿಂತ ಉತ್ತಮಳು ಸರ್ವೋತ್ತಮನಾದ

ಶ್ರೀವಿಷ್ಣುವಿಗೆ, ಇಷ್ಟವಾದುದು, ಲಕ್ಷ್ಮೀದೇವಿಗೆ ಸಮಾನವಾದುದು, ಯಾವುದೊಂದೂ ಇಲ್ಲವೇ ಇಲ್ಲ. ಅವಳು ಶ್ರೀನಾರಾಯಣನ ಪತ್ನಿಯು, ಆ ಲಕ್ಷ್ಮಿಯು ಚತುರ್ಮುಖಬ್ರಹ್ಮನಿಗೂ ಕೂಡ ತಾಯಿಯು. ಸಮಸ್ತ ಪ್ರಾಣಿಗಳಿಗೆ ನಿಯಾಮಕನಾದ ಶ್ರೀಹರಿಯು ಆ ಜಡಪ್ರಕೃತಿ ಚಿತ್ಪ್ರಕೃತಿಯರಿಂದ ಈ ಎಲ್ಲಾ ಜಗತ್ತನ್ನು ಸೃಷ್ಟಿಸುತ್ತಾನೆ ಎಂದು ನಾರದೀಯ ಪುರಾಣದಲ್ಲಿದೆ. ॥ ೫ ॥

ಹೀ— ದೇಹ ಇಂದ್ರಿಯಾದಿ ಅನೇಕ ಪದಾರ್ಥಗಳು ಇದ್ದಪ್ರಯುಕ್ತ ಜಡ ಅಜಡ ಪ್ರಕೃತಿಗಳು ಮಾತ್ರ ಶ್ರೀಪರಮಾತ್ಮನ ಅಧೀನಗಳೆಂದು ಹೇಗೆ ಹೇಳಿದ್ದು ಎಂದರೆ ದೇಹ ಮೊದಲಾದ ಸಮಸ್ತ ಕಾರ್ಯಗಳೂ ಜಡಾಜಡಪ್ರಕೃತಿಗಳಲ್ಲಿಯೇ ಸೇರಿವೆ ಎನ್ನುತ್ತಾರೆ—

ಗೀ ॥ ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।
ಅಹಂ ಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಲಯಸ್ತಥಾ ॥ ೬ ॥

ಅ ॥ ಸರ್ವಾಣಿ=ಎಲ್ಲಾ. ಭೂತಾನಿ=ಶರೀರ ಇಂದ್ರಿಯ ವಿಷಯರೂಪಗಳಾದ ಕಾರ್ಯಗಳಿಂದ ಕೂಡಿದ ಚತುರ್ಮುಖನೇ ಮೊದಲಾದ ಜೀವರು. ಏತದ್ಯೋನೀನಿ=ಜಡಪ್ರಕೃತಿ ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯೇ ಕಾರಣವಾಗಿ ಉಳ್ಳವರು. (ಅಂದರೆ ಆ ಜಡಪ್ರಕೃತಿ ಚಿತ್ಪ್ರಕೃತಿಗಳಿಂದಲೇ ಹುಟ್ಟಿದವರು.) ಇತಿ=ಹೀಗೆ, ಉಪಧಾರಯ=ತಿಳಿದುಕೊಳ್ಳು. (ಚೇತನಾಚೇತನಗಳಿಗೆ ಕಾರಣಗಳಾದ ಈ ಪ್ರಕೃತಿಗಳು ಮಾತ್ರ ನನ್ನ ಅಧೀನಗಳು, ಸಮಸ್ತ ವಸ್ತುಗಳ ಉತ್ಪತ್ತ್ಯಾದಿಗಳು ಆ ಪ್ರಕೃತಿಗಳ ಅಧೀನಗಳೇ, ಶ್ರೀಕೃಷ್ಣನ ಅಧೀನಗಳಲ್ಲವೆಂದು ತಿಳಿದುಕೊಳ್ಳುವುದು ಬೇಡ, ಮತ್ತೆ ಎಲ್ಲವೂ ಶ್ರೀಹರಿಯ ಅಧೀನಗಳೆಂದೇ ತಿಳಿದುಕೊಳ್ಳು, ಎನ್ನುತ್ತಾರೆ—) ಅಹಂ=ನಾನು, ಕೃತ್ಸ್ನಸ್ಯ ಜಗತಃ=ಬ್ರಹ್ಮ ರುದ್ರಾದಿ ಸಮಸ್ತ ಜಗತ್ತಿಗೂ, ಪ್ರಭವಃ=ಪ್ರಕೃತಿದ್ವಾರಾ ಸೃಷ್ಟಿಕರ್ತನು. ತಥಾ=ಹಾಗೆಯೇ, ಪ್ರಲಯಃ=ವಿನಾಶಕನು. ॥ ೬ ॥

ಭಾ ॥ (೧) ನ ಕೇವಲಂ ತೇ ಜಗತ್ಪ್ರಕೃತೀ ಮದ್ವಶೇ ಇತ್ಯೇತಾವನ್ಮದೈಶ್ವರ್ಯಮಿತ್ಯಾಹ । ಅಹಮಿತಿ ॥ (೨) ಪ್ರಭವಾದೇಃ ಸತ್ತಾಪ್ರತೀತ್ಯಾದಿಕಾರಣತ್ವಾತ್ತದ್ಭೋಕ್ತೃತ್ವಾಚ್ಚ ಪ್ರಭವ ಇತ್ಯಾದಿ ॥ (೩) ತಥಾ ಚ ಶ್ರುತಿಃ । ಸರ್ವಕಾಮಃ ಸರ್ವಕರ್ಮಾ ಸರ್ವಗಂಧಃ ಸರ್ವರಸಃ ಸರ್ವಮಿದಮಭ್ಯಾತ್ತೋಽವಾಕ್ಯನಾದರ ಇತಿ ॥ (೪) ಆಹ ಚ । ಸ್ರಷ್ಟಾ ಪಾತಾ ಚ ಸಂಹರ್ತಾ ನಿಯಂತಾ ಚ ಪ್ರಕಾಶಿತಾ । ಯತಃ ಸರ್ವಸ್ಯ ತೇನಾಹಂ ಸರ್ವೋಽಸೀತ್ಯೃಷಿಭಿಃ ಸ್ತುತಃ । ಸುಖರೂಪಸ್ಯ ಭೋಕ್ತೃತ್ವಾನ್ನ ತು ಸರ್ವಸ್ವರೂಪತಃ । ಆಗಮಿಷ್ಯತ್ಸುಖಂ ಚಾಪಿ ತಚ್ಚಾಸ್ತ್ಯೇವ ಸದಾಽಪಿ ತು । ತಥಾಽಪ್ಯಚಿಂತ್ಯಶಕ್ತಿತ್ವಾಜ್ಜ್ಞಾತಂ ಸುಖಮತೀವ ಚೇತಿ ನಾರದೀಯೇ ॥ ೬ ॥

ಅ ॥ (೧) ಆ ಪ್ರಕೃತಿಗಳು ಮಾತ್ರ ನನ್ನ ಅಧೀನವಲ್ಲಿರತಕ್ಕವುಗಳು, ಇಷ್ಟೇ ನನ್ನ ಐಶ್ವರ್ಯವು ಎಂದಲ್ಲ. ಎಂದು ಅಹಂ ಎಂಬುವ ಶ್ಲೋಕದಿಂದ ಹೇಳುತ್ತಾರೆ. (ಅಂದರೆ ಪ್ರಕೃತಿಗಳೇ ನನ್ನ ಅಧೀನಗಳು, ಜಗತ್ತಿನ ಉತ್ಪತ್ತಿ ಸ್ಥಿತಿ ಲಯಗಳು ಪ್ರಕೃತ್ಯಧೀನಗಳೇ, ಶ್ರೀಪರಮಾತ್ಮನ ಅಧೀನಗಳಲ್ಲ, ಎಂಬುವ ಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಅಹಂ ಕೃತ್ಸ್ನಸ್ಯ ಎಂದು ಹೇಳಿದ್ದು. ಪ್ರಕೃತಿಗಳಿಗೆ ಕಾರಣತ್ವಾದಿಗಳೂ ನನ್ನ ಅಧೀನಗಳೇ.) (೨) (ಜಗತ್ತಿನ ಧರ್ಮಗಳಾದ ಉತ್ಪತ್ತಿನಾಶಗಳಿಗೆ ಸಾಕ್ಷಾತ್ತಾಗಿ

ಶ್ರೀಪರಮಾತ್ಮನಿಂದ ಐಕ್ಯವು ಹೇಳಲ್ಪಡುತ್ತದೆ, ಎಂಬುವ ಪ್ರತೀತಿಯನ್ನು ನಿರಾಕರಿಸುತ್ತಾರೆ—) ಉತ್ಪತ್ತ್ಯಾದಿಗಳಿಗೆ ಕಾರಣನಾದುದರಿಂದಲೂ ಅವುಗಳಿಗೆ ಭೋಕ್ತನಾದುದರಿಂದಲೂ ಪ್ರಭವಃ ಇತ್ಯಾದಿಗಳನ್ನು ಹೇಳಿದ್ದು. (೩) (ಶ್ರೀಪರಮಾತ್ಮನಿಗೆ ಸರ್ವಭೋಕ್ತೃತ್ವವು ಹೇಗೆಂದರೆ—) ಹಾಗೆಯೇ ಶ್ರುತಿಯು ಹೇಳುತ್ತದೆ. ಸಮಸ್ತ ಇಷ್ಟಾರ್ಥಗಳನ್ನು ಹೊಂದಿದವನು. ಅವರವರಿಗೆ ನಿಯಾಮಕನಾಗಿ ಸರ್ವಕರ್ಮಗಳನ್ನು ಮಾಡಿಸುವವನು. ಚಿದಾನಂದಾತ್ಮಕವಾದ ಸರ್ವ ಶುಭಗಂಧಸ್ವರೂಪನು. ಚಿದಾನಂದಾತ್ಮಕವಾದ ಸರ್ವ ಶುಭರಸಸ್ವರೂಪನು. ಸಮಸ್ತ ಜಗತ್ತನ್ನು ಅಧೀನವಾಗಿ ಧರಿಸಿಕೊಂಡಿರುತ್ತಾನೆ. ಸಾಮಾನ್ಯ ಜನರಂತೆ ಅರ್ಥವಿಲ್ಲದ ಮಾತನ್ನಾಡದಿರುವವನು. ತನ್ನನ್ನು ತಾನೇ ಹೊಗಳದಿರುವವನು. ಅಥವಾ ಶ್ರೀಪರಮಾತ್ಮನ ಅನುಗ್ರಹವಿಲ್ಲದ ವಾಕ್ಯದಿಂದ ತಿಳಿಯಲಶಕ್ಯನು. ತಾನೇ ಆಶ್ಚರ್ಯರೂಪನಾದುದರಿಂದ ಬೇರೆ ಕಡೆ ಆಶ್ಚರ್ಯಬುದ್ಧಿಯಿಲ್ಲದವನು. ಎಂದು (ಛಾಂದೋಗ್ಯ. ೩ ೧೪) (ಈ ವಾಕ್ಯದಿಂದ ಚಿದಾನಂದಾತ್ಮಕವಾದ ಸರ್ವಗಂಧಾದಿರೂಪತ್ವವೂ, ಸುಗಂಧಾದಿಭೋಕ್ತೃತ್ವವೂ, ಹೇಳಲ್ಪಡುತ್ತದೆ. **ಸರ್ವಗಂಧಾದಿರೂಪಶ್ಚ ಭೋಕ್ತಾ ಚೈಷಾಂ ಸದೈವ ಹಿ** ಎಂದುಕ್ತವಾಗಿದೆ. (೪) (ಜಗತ್ತಿನ ಉತ್ಪತ್ತ್ಯಾದಿಗಳಿಗೆ ಕಾರಣನಾದುದರಿಂದಲೇ ಐಕ್ಯವನ್ನು ಹೇಳಿದ್ದೆಂಬುವುದು ಹೇಗೆಂದರೆ—) ಸರ್ವಜಗತ್ತಿಗೂ ಸೃಷ್ಟಿಕರ್ತನು, ರಕ್ಷಕನು, ಸಂಹಾರಕನು, ನಿಯಾಮಕನು, ಪ್ರಕಾಶಕನೂ ಆದಕಾರಣ ನಾನು ಸರ್ವಃ ಅಸ್ಮಿ ಎಂದು ಋಷಿಗಳಿಂದ ಸ್ತುತಿಸಿಕೊಳ್ಳಲ್ಪಟ್ಟಿದ್ದೇನೆ. ಸರ್ವಸುಖ ಕಾರಣವನ್ನು ಭೋಗಿಸುವುದರಿಂದಲೇ **ಸರ್ವೋಽಸ್ಮಿ** ಎಂದು ಅನಿಸಿಕೊಳ್ಳುತ್ತೇನೆ. ಸರ್ವ ವಸ್ತುಗಳ ಸ್ವರೂಪನಾದುದರಿಂದ ಐಕ್ಯವನ್ನು ಹೇಳಿದ್ದೆಂದು ಹೇಳಕೂಡದು. (೫) (ಭೋಗದಿಂದ ಸುಖವು ಆಗುವುದಾದರೆ ಅದು ಮೊದಲು ಇಲ್ಲದಿರುವುದರಿಂದ ಅಪೂರ್ಣತಾ ಬರಬೇಕಾಗುವುದು ಎಂದರೆ—) ಭೋಗದಿಂದ ಬರುವ ಸುಖವೂ ಸರ್ವದಾ ಉಂಟೇ ಉಂಟು, ಕ್ರಿಯೆಗಳೂ ಕೂಡ ಶಕ್ತಿರೂಪದಿಂದ ಸರ್ವದಾ ಇವೆ. (ಹಾಗಾದರೆ ಭೋಗದಿಂದ ಹುಟ್ಟಿತೆಂದು ಹೇಗೆ ಹೇಳುವುದೆಂದರೆ—) ಆದರೂ ಅಚಿಂತ್ಯ ಶಕ್ತಿಯು ಇದ್ದುದರಿಂದ ಅತ್ಯಂತ ಸುಖವು ಹುಟ್ಟಿತೆಂದು ಹೇಳುವುದು ಎಂದು ನಾರದೀಯ ಪುರಾಣದಲ್ಲಿದೆ. || ೬ ||

ಪೀ—ಸರ್ವಜಗತ್ತಿಗೂ ನಾನೇ ಉತ್ಪಾದಕನು ಇತ್ಯಾದಿಗಳು ಹೇಗೆ ಕೂಡುತ್ತವೆಂದರೆ—

**ಗೀ || ಮತ್ತಃ ಪರತರಂ ನಾನ್ಯತ್ಕಿಂಚಿದಸ್ತಿ ಧನಂಜಯ |**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ || ೭ ||**

ಅ || ಧನಂಜಯ=ಅರ್ಜುನನೇ, ಮತ್ತಃ=ನನಗಿಂತ, ಅನ್ಯತ್=ಬೇರೆ ಒಂದು, ಪರತರಂ=ಸರ್ವೋತ್ತಮವಾದ ವಸ್ತುವು, ಕಿಂಚಿತ್=ಯಾವುದೊಂದೂ, ನಾಸ್ತಿ=ಇಲ್ಲವೇ ಇಲ್ಲ. ಇದಂ ಸರ್ವಂ=ಈ ಪ್ರಕೃತಿ ಮೊದಲಾದ ಸರ್ವ ಜಗತ್ತು, ಸೂತ್ರೇ=ಹಗ್ಗದಲ್ಲಿ, ಮಣಿಗಣಾ ಇವ=ಮಣಿಗಳ ಸಮುದಾಯಗಳು (ಆಶ್ರಯಿಸಿಕೊಂಡಿರುವಂತೆ) ಮಯಿ=ನನ್ನಲ್ಲಿ, ಪ್ರೋತಂ=ಆಶ್ರಿತವಾಗಿದೆ. (ಅಂದರೆ ಜಗತ್ತಿನ ಉತ್ಪತ್ತಿ ಸಂಹಾರಗಳನ್ನು ಮಾತ್ರ ಮಾಡುವವನಲ್ಲ. ರಕ್ಷಣೆಯನ್ನು ಸಹ ನಾನೇ ಮಾಡುವವನು.) || ೭ ||

**ಭಾ || ಅಹಮೇವ ಪರತರಃ | ಮತ್ತೋಽನ್ಯತ್ಪರತರಂ ನ ಕಿಂಚಿದಪಿ |** || ೭ ||

ಅ || ನಾನೇ ಸರ್ವೋತ್ತಮನು. ನನಗಿಂತ ಬೇರೆ ಯಾವುದೊಂದೂ ಸರ್ವೋತ್ತಮವಾದುದು ಯಾವುದೂ ಇಲ್ಲ. || ೭ ||

**ಪೀ—ಭೂಮಿರಾಪಃ ಇತ್ಯಾದಿಗಳ ಅರ್ಥವನ್ನು ಸ್ಮೃತಿಯಿಂದಲೇ ಹೇಳುತ್ತಾರೆ—**

**ತಾ॥ (೧) ಅಚೇತನಾ ಚೇತನೇತಿ ದ್ವಿವಿಧಾ ಪ್ರಕೃತಿರ್ಮತಾ । ತ್ರಿಗುಣಾಽಚೇತನಾ ತತ್ರ ಚೇತನಾ ಶ್ರೀರ್ಹರಿಪ್ರಿಯಾ । ತೇ ಉಭೇ ವಿಷ್ಣುವಶಗೇ ಜಗತಃ ಕಾರಣೇ ಮತೇ ॥ (೨) ಪಿತಾ ವಿಷ್ಣುಃ ಸ ಜಗತೋ ಮಾತಾ ಶ್ರೀರ್ಯಾ ತ್ವಚೇತನಾ । ಉಪಾದಾನಂ ತು ಜಗತಃ ಸೈವ ವಿಷ್ಣುಬಲೇರಿತೇತಿ (ಚ) ॥ ೧ ॥**

ಅ ॥ (೧) ಅಚೇತನಪ್ರಕೃತಿ, ಚೇತನಪ್ರಕೃತಿ ಎಂದು ಪ್ರಕೃತಿಯು ಎರಡು ವಿಧವು. ಅದರಲ್ಲಿ ಅಚೇತನಪ್ರಕೃತಿಯು ಸತ್ತ್ವರಜಸ್ತಮೋಗುಣಗಳುಳ್ಳದ್ದು. ಚೇತನಪ್ರಕೃತಿಯಾದ ಲಕ್ಷ್ಮೀದೇವಿಯು ಶ್ರೀಪರಮಾತ್ಮನಿಗೆ ಪತ್ನಿಯು. ಆ ಚೇತನಾಚೇತನ ಪ್ರಕೃತಿಗಳೆರಡು ಶ್ರೀಪರಮಾತ್ಮನ ಅಧೀನವಲ್ಲಿರತಕ್ಕವುಗಳು. ಜಗತ್ತಿಗೆ ಕಾರಣಗಳು. (೨) ಆ ಶ್ರೀಪರಮಾತ್ಮನು ಬ್ರಹ್ಮಾದಿ ಜಗತ್ತಿಗೆ ಪಿತನು. ಲಕ್ಷ್ಮೀದೇವಿಯು ತಾಯಿಯು. ಅಚೇತನಪ್ರಕೃತಿಯೇ ಶ್ರೀವಿಷ್ಣುವಿನ ಬಲದಿಂದ ಪ್ರೇರೇಪಿಸಲ್ಪಟ್ಟದ್ದಾಗಿ ಜಗತ್ತಿಗೆ ಉಪಾದಾನಕಾರಣವಾಗುತ್ತದೆ.

ವಿ ॥ (1) **ಚೇತನಾ ಶ್ರೀಃ** ಎಂಬುದರಿಂದ **ಜೀವಭೂತಾಂ** ಎಂಬುದರ ಅರ್ಥವನ್ನು ಹೇಳಿದಂತೆಯೇ ಆಯಿತು. (2) **ತೇ ಉಭೇ** ಎನ್ನುವುದರಿಂದ **ಮೇ ಪ್ರಕೃತಿಂ** ಎಂಬುದರ ಅರ್ಥವನ್ನು ಹೇಳಿದಂತೆ ಆಯಿತು. (3) **ಜಗತಃ ಕಾರಣೇ** ಎಂಬುವುದರಿಂದ **ಏತದ್ಯೋನೀನಿ** ಎಂಬುದರ ಅರ್ಥವು ಉಕ್ತವಾಯಿತು (4) **ಪಿತಾ ವಿಷ್ಣುಃ** ಎಂಬುದರಿಂದ **ಅಹಂ ಕೃತ್ಸ್ನಸ್ಯ** ಎಂಬುದು ವ್ಯಾಖ್ಯಾತವಾಯಿತು (5) **ವಿಷ್ಣುಬಲೇರಿತಾ** ಎಂಬುದರಿಂದ ಅಚೇತನಪ್ರಕೃತಿಗೆ ಉಪಾದಾನತ್ವಶಕ್ತಿಯು ಭಗವಂತನ ಅಧೀನವೆಂದು ಉಕ್ತವಾಯಿತು. ॥ ೧ ॥

**ಪೀ**—ನಿನ್ನಂತೆಯೇ ಸರ್ವೋತ್ತಮನು ಬೇರೆಯೂ ಇದ್ದರೆ ಅವನಿಗೂ ಪಿತೃತ್ವಾದಿಗಳು ಕೂಡುವುದರಿಂದ **ಕೃತ್ಸ್ನಸ್ಯ** ಎಂದದ್ದು ಹೇಗೆಂದರೆ—

ತಾ ॥ (೧) ಮತ್ತೋಽನ್ಯತ್ಪರತರಂ ನಾಸ್ತಿ ಪರತರಸ್ತ್ವಹಮೇವೇತ್ಯರ್ಥಃ । ಅನ್ಯಥಾಽನ್ಯದಿತಿ ವ್ಯರ್ಥಂ ॥ (೨) ಅವರಾ ದುಃಖಸಂಬಂಧಾಜ್ಜೀವಾ ಏವ ಪ್ರಕೀರ್ತಿತಾಃ । ನಿತ್ಯನಿರ್ದುಃಖರೂಪತ್ವಾತ್ಪರಾ ಶ್ರೀರೇಕಲೈವ ತು । ದುಃಖಾಸಂಪೀಡಿತತ್ವಾತ್ತು ಮಧ್ಯಮೋ **ವಾಯುರುಚ್ಯತೇ** ॥ (೩) ಅನನ್ಯಾಧೀನರೂಪತ್ವಾದಸಮಾಧಿಕಸೌಖ್ಯತಃ । ತತ್ತಂತ್ರತ್ವಾಚ್ಚ ಸರ್ವಸ್ಯ ವಿಷ್ಣುಃ ಪರತರೋ(ಮೋ) ಮತಃ ॥ (೪) ಅಭಾವಾದಂತರಾಽನ್ಯಸ್ಯ ತ್ರಿಪ್ಯೈಕಾರ್ಥೌ ತರಪ್ತಮೌ ॥ (೫) ಯಸ್ಮಾತ್ ಸಂಬಂಧಯೋಗ್ಯತ್ವಾಜ್ಜೀವಾ ಅಪ್ಯವರಾ ಮತಾಃ । ತಸ್ಮಾ ಜಡಾಂಯಾಃ ಪ್ರಕೃತೇರವರತ್ವೇ ಕ್ವ ಸಂಶಯಃ ॥ (೬) ಅಥಾವರತರಾ ಯೇ ತು ವಿಮುಖಾಶ್ಚೇತನಾ ಪರೇಃ । ನಿತ್ಯದುಃಖೈಕಯೋಗ್ಯತ್ವಾನ್ನ ಹ್ಯೇತತ್ಸ್ಯಾದಚೇತನೇ ॥ (೭) ಅತಃ ಪರತರಂ(ಮಂ) ವಿಷ್ಣುಂ ಯೋ ವೇತ್ತಿ ಸ ವಿಮುಚ್ಯತೇ ॥ (೮) ಮುಕ್ತಸ್ತು ಸ್ವಾತ್ಮಪರಾಭಾಸಃ ಸುನಿತ್ಯಸುಖಭೋಜನಾತ್ ॥ (೯) ತತ್ರಾಪಿ ತಾರತಮ್ಯಂ ಸ್ಯಾತ್ತೇಷು ಬ್ರಹ್ಮಾಧಿಕೋ ಮತಃ ॥ (೧೦)

**ವಿಷ್ಣೋೕರಾಧಿಕ್ಯಸಂವಿತ್ತಿಃ ಸರ್ವಸ್ಮಾಜ್ಜ್ಞಾನಮುಚ್ಯತೇ । ಏವಂ ವಿವಿಚ್ಯ ತಜ್ಜ್ಞಾನಂ ವಿಜ್ಞಾನಮಿತಿ ಕೀರ್ತಿತಂ ॥ (೧೧) ಏತಚ್ಚ ತಾರತಮ್ಯೇನ ವರ್ತತೇ ಕೇಶವಾದಿಷು । ಮುಖ್ಯವಿಜ್ಞಾನ್ಯತೋ ವಿಷ್ಣುಃ ಕಿಂಚಿದ್ವಿಜ್ಞಾನಿನೋಽಪರೇ ॥ ೨ ॥ ೪-೬ ॥**

ಅ ॥ (೧)ನನಗಿಂತ ಬೇರೆ ಯಾವ ವಸ್ತುವೂ ಸರ್ವೋತ್ಕೃಷ್ಟವಾದುದು ಇಲ್ಲ. ನಾನೇ ಸರ್ವೋತ್ತಮನು. (ಆದಕಾರಣ ಅಹಂ ಕೃತ್ಸ್ನಸ್ಯ ಎಂದು ಹೇಳಿದ್ದು ಯುಕ್ತವೇ.) (ತನಗಿಂತ ಬೇರೆ ಯಾವುದೂ ಇಲ್ಲವೆಂದು ನಿಷೇಧಿಸಿದ್ದೆಂದು ಏಕೆ ಆಗಲಾರದೆಂದರೆ—) ಇಲ್ಲಿ ತನಗಿಂತ ಬೇರೆ ವಸ್ತುವಿಲ್ಲವೆಂದು ಹೇಳಿದ್ದೆಂದಾದರೆ ಪರತರ ಎಂಬುವುದರಿಂದಲೇ ತನಗಿಂತ ಇತರವಸ್ತುವನ್ನು ಹೇಳಿದ ಕಾರಣ ಅನ್ಯತ್ ಎಂಬುವುದು ವ್ಯರ್ಥವಾಗುವುದು ಅನ್ಯತ್ ಎಂಬುವುದಕ್ಕೆ ತನಗಿಂತ ಬೇರೆ ಎಂದು ಅರ್ಥವನ್ನು ಒಡಂಬಟ್ಟರೆ ಪರತರಂ ಎಂಬುವುದು ವ್ಯರ್ಥವಾಗುವುದು. (೨) (ಶ್ರೀವಿಷ್ಣುವೇ ಪರತರನೆಂದಾದರೆ ಪರ ಅವರ ಮೊದಲಾದುವುಗಳು ಯಾವುವು? ಎಂದರೆ ಈ ಅರ್ಥದಲ್ಲಿ ಸ್ಮೃತಿಪ್ರಮಾಣವನ್ನು ಹೇಳುತ್ತಾರೆ-). ದುಃಖಸಂಬಂಧವುಳ್ಳವರಾದುದರಿಂದ ಜೀವರೇ ಅವರರು ಎನಿಸುತ್ತಾರೆ. ನಿತ್ಯದಲ್ಲಿಯೂ ನಿರ್ದುಃಖ ಸ್ವರೂಪಳಾದುದರಿಂದ ಲಕ್ಷ್ಮೀದೇವಿಯೊಬ್ಬಳೇ ಪರಾ (ಶ್ರೇಷ್ಠಳು) ಎನಿಸುತ್ತಾಳೆ. ವಾಯುದೇವರು ದುಃಖಸಂಬಂಧವುಳ್ಳವರಾದುದರಿಂದ ಪರ ಎನಿಸಿಕೊಳ್ಳುವುದಿಲ್ಲ. ದುಃಖದಿಂದ ಚೆನ್ನಾಗಿ ಪೀಡಿಸಿಕೊಳ್ಳಲ್ಪಡದಿರುವುದರಿಂದ ಅವರ ಎಂದೂ ಅನಿಸಿಕೊಳ್ಳುವುದಿಲ್ಲ. ಆದಕಾರಣ ಮಧ್ಯಮನು ಎನಿಸುತ್ತಾನೆ (೩) ಶ್ರೀವಿಷ್ಣುವು ಅನ್ಯಾಧೀನಸ್ವರೂಪವುಳ್ಳವನಾಗದಿರುವುದರಿಂದಲೂ ಶ್ರೀಹರಿಯ ಸುಖಕ್ಕೆ ಸಮಾನವಾದ ಸುಖವೂ ಹೆಚ್ಚು ಸುಖವೂ ಯಾರಿಗೂ ಇಲ್ಲದಿರುವುದರಿಂದಲೂ, ಬ್ರಹ್ಮಾದಿಗಳೆಲ್ಲರೂ ಶ್ರೀಹರಿಯ ಅಧೀನದಲ್ಲಿರುವುದರಿಂದಲೂ ಶ್ರೀವಿಷ್ಣುವು ಪರತರನೆನಿಸುತ್ತಾನೆ. (೪) (ಪರಃ=ಉತ್ತಮನು ಪರತರಃ=ಇಬ್ಬರಲ್ಲಿ ಉತ್ತಮನು. ಪರತಮಃ=ಬಹು ಮಂದಿಯಲ್ಲಿ ಉತ್ತಮನು. ಆದಕಾರಣ ಶ್ರೀವಿಷ್ಣುವು ಪರತರನಾದರೆ ಪರತಮನು ಯಾರು? ಎಂದರೆ-)ಇಲ್ಲಿ ಪರತರ ಪರತಮ ಪದಗಳಿಂದ ವಿಷ್ಣು ಒಬ್ಬನೇ ಹೇಳಲ್ಪಡುತ್ತಾನೆ. ಪರಳು ಶ್ರೀದೇವಿಯು. ಪರತಮನು ಶ್ರೀವಿಷ್ಣುವು. ಇವರ ಮಧ್ಯದಲ್ಲಿ ಪರತರನು ಇನ್ನೊಬ್ಬನಿಲ್ಲದಿರುವುದರಿಂದ ಈ ವಿಷ್ಣುವು ಪರತರನೇ. ವಿಷ್ಣುವಿನಿಂದ ದೊಡ್ಡವನು ಇನ್ನೊಬ್ಬನಿಲ್ಲದಿರುವುದರಿಂದ ವಿಷ್ಣುವು ಪರತಮನೂ ಅವನೇ. ಆದಕಾರಣ ಇಲ್ಲಿ ತರಪ್ ತಮಪ್ ಪ್ರತ್ಯಯಗಳಿಗೆ ಒಂದೇ ಅರ್ಥಗಳು. (೫) ಜೀವರಿಗೆ ಪ್ರಕೃತಿಯ ಸಂಬಂಧವಿದ್ದುದರಿಂದ ಜೀವರು ಅವರರು (ನಿಕೃಷ್ಟರು) ಎಂದಾಗುವಾಗ ಅಂತಹ ಜಡಭೂತವಾದ ಪ್ರಕೃತಿಯು ನಿಕೃಷ್ಟವು (ಅವರವು) ಎಂಬುವಲ್ಲಿ ಸಂಶಯವೇನು? (ಜಡಪ್ರಕೃತಿಗೆ ದುಃಖವಿಲ್ಲದಿದ್ದರೂ ದುಃಖಕ್ಕೆ ಕಾರಣವಾಗಿರುವುದರಿಂದ ಅವರತ್ವವು ನಿಸ್ಸಂಶಯವಾಗಿ ಇದ್ದೇ ಇದೆ) (೬) ಯಾವ ಚೇತನರು ಶ್ರೀಹರಿಗೆ ವಿಮುಖರಾಗಿರುತ್ತಾರೋ, ಅವರು ಕೇವಲ ನಿತ್ಯ ದುಃಖಕ್ಕೆ ಮಾತ್ರ ಯೋಗ್ಯರಾಗಿರುವುದರಿಂದ ಅವರತರರು (ಅಚೇತನಕ್ಕಿಂತಲೂ ಚೇತನವು ಉತ್ತಮವಾಗಿರುವುದರಿಂದ ಶ್ರೀಹರಿಗೆ ವಿಮುಖರಾದ ಚೇತನರಿಗೆ ಅವರತರತ್ವವಿದ್ದರೆ ಅಚೇತನವಾದ ಪ್ರಕೃತಿಗೆ ಅವರತ್ವವು ಹೇಗೆಂದರೆ—) ಅಚೇತನದಲ್ಲಿ ನಿತ್ಯದುಃಖ ಸಂಬಂಧವಿಲ್ಲದಿರುವುದರಿಂದ ಅವರತ್ವವೇ. ಅವರತರತ್ವವಾಗಲೀ, ಅವರತಮತ್ವವಾಗಲೀ ಇಲ್ಲ. (೭) (ಜೀವರಿಗೆ ದುಃಖಸಂಬಂಧವು ಸ್ವಾಭಾವಿಕವಾದರೆ ಮೋಕ್ಷವು ಹೇಗೆ ಆಗುವುದು ಎಂದರೆ –) ಹಿಂದೆ ಹೇಳಿದ ಪ್ರಕಾರ ಸರ್ವೋತ್ತಮನಾದ ಶ್ರೀವಿಷ್ಣುವನ್ನು ಯಾವನು ತಿಳಿಯುತ್ತಾನೋ ಅತನು ಮುಕ್ತನಾಗುತ್ತಾನೆ. (೮) (ಶ್ರೀಪರಮಾತ್ಮನ ಜ್ಞಾನದಿಂದ ದುಃಖನಿವೃತ್ತಿಯಾಗುವುದಾದರೆ ಮುಕ್ತನು ಪರನೆಂದಾಗುವುದು. ಲಕ್ಷ್ಮಿಯೊಬ್ಬಳೇ ಪರಳೆಂದು ಹೇಳುವುದು ಅಯುಕ್ತವೆಂದರೆ-)ಮುಕ್ತನಾದರೂ ನಿತ್ಯಸುಖವನ್ನನುಭವಿಸುವುದರಿಂದ ಪರಾಭಾಸನೆನಿಸುತ್ತಾನೆ ಮುಕ್ತನು ಅವರನಾಗದಿದ್ದರೂ ಸಂಸಾರದಶೆಯಲ್ಲಿ ದುಃಖವನ್ನನುಭವಿಸಿದುದರಿಂದ ಪರಾಭಾಸನೆಂದೇ ಅನಿಸಿ

ಕೊಳ್ಳುತ್ತಾನೆ. ಲಕ್ಷ್ಮೀದೇವಿಯಂತೆ ಪರ ಎಂದು ಅನ್ನಿಸಿಕೊಳ್ಳುವುದಿಲ್ಲ.) (೯) (ಸರ್ವ ಮುಕ್ತರಿಗೆ ದುಃಖಾಭಾವವು ಸಮಾನವಾದರೂ ಸುಖಾದಿಗಳಲ್ಲಿ ಸಾಮ್ಯವು ಇಲ್ಲವೇ ಇಲ್ಲವೆನ್ನುತ್ತಾರೆ—) ಮುಕ್ತರ ಲ್ಲಿಯೂ ತಾರತಮ್ಯವು ಇದೆ. ಮುಕ್ತರಲ್ಲಿ ಬ್ರಹ್ಮನು ಉತ್ತಮನೆಂದು ಸಮ್ಮತನು. (೧೦) (ವೇದಾದಿ ಗಳಲ್ಲಿ ಜ್ಞಾನ ವಿಜ್ಞಾನಗಳಿಂದ ಮೋಕ್ಷವನ್ನು ಹೇಳಿದಕಾರಣ ಶ್ರೀವಿಷ್ಣುವು ಪರತರ ಎಂಬುವ ಜ್ಞಾನ ದಿಂದ ಮೋಕ್ಷವಾಗುತ್ತದೆಂದು ಹೇಳಿದ್ದು ಹೇಗೆ ಎಂದರೆ—) ಬ್ರಹ್ಮ ರುದ್ರಾದಿಗಳಿಗೆಲ್ಲರಿಗಿಂತ ವಿಷ್ಣುವೇ ಸರ್ವೋತ್ತಮನು, ಎಂದು ತಿಳಿದುಕೊಳ್ಳುವುದು ಜ್ಞಾನವೆನಿಸುತ್ತದೆ. ಹೀಗೆ ಲಕ್ಷ್ಮೀದೇವಿಯು ಪರಳೆನಿ ಸುತ್ತಾಳೆ. ಶ್ರೀಪರಮಾತ್ಮನು, ಪರತರನು ಇತ್ಯಾದಿ ರೀತಿಯಾಗಿ ಪ್ರತ್ಯೇಕ ಪ್ರತ್ಯೇಕ ಬಿಡಿಸಿ ತಿಳಿದು ಕೊಳ್ಳುವುದು ವಿಜ್ಞಾನವೆನಿಸುತ್ತದೆ. (ಜ್ಞಾನಂ ತೇಽಹಂ ಎಂಬುದರ ಅರ್ಥವನ್ನು ಹೇಳಿದಂತೆಯೇ ಆಯಿತು.) (೧೧) ಈ ಜ್ಞಾನವು ಕೇಶವಾದಿಗಳಲ್ಲಿ ತರತಮಭಾವದಿಂದಲೇ ಇರುತ್ತದೆ. ಆದಕಾರಣ ಶ್ರೀ ವಿಷ್ಣುವು ಮುಖ್ಯವಾಗಿ ವಿಜ್ಞಾನೀ ಎನಿಸುತ್ತಾನೆ. ಬ್ರಹ್ಮಾದಿಗಳು ಯಥಾಯೋಗ್ಯವಾಗಿ ವಿಜ್ಞಾನಿಗಳು.
॥ ೩ ॥ ॥ ೭ ॥

ಪೀ—ಜ್ಞಾನಂ ತೇಽಹಂ ಎಂದು ಜ್ಞಾನಪದದಿಂದ ಹೇಳಲ್ಪಟ್ಟ ಸಾಮಾನ್ಯ ಮಹಿಮೆಯನ್ನು **ಭೂಮಿರಾಪಃ** ಇದು ಮೊದಲಾದ ನಾಲ್ಕು ಶ್ಲೋಕಗಳಿಂದ ಹೇಳಿ ಈಗ ವಿಜ್ಞಾನಪದದಿಂದ ಹೇಳಲ್ಪಟ್ಟ ವಿಶೇಷವಾಗಿ ತಿಳಿಯಲು ಯೋಗ್ಯವಾದ ಶ್ರೀಹರಿಯ ಅಲೌಕಿಕವಾದ ಮಹಿಮೆಯನ್ನು ಹೇಳುತ್ತಾನೆ—

**ಗೀ ॥ ರಸೋಽಹಮಪ್ಸು ಕೌಂತೇಯ ಪ್ರಭಾಽಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ ೮ ॥**

ಅ॥ ಕೌಂತೇಯ = ಅರ್ಜುನನೇ, ಅಹಂ = ನಾನು. ಅಪ್ಸು = ಜಲಗಳಲ್ಲಿ ಶ್ರೇಷ್ಠವಾದುದು, ರಸಃ = ಯಾವುದು ರಸವೋ. ಅಂತಹ ರಸಕ್ಕೆ ಶ್ರೇಷ್ಠತ್ವಾದಿ ಬರಲಿಕ್ಕೆ ವಿಶೇಷವಾಗಿ ಶ್ರೀಹರಿಯು ಕಾರಣನಾದುದ ರಿಂದಲೂ, ರಸಭೋಕ್ತನಾದುದರಿಂದಲೂ ರಸಕ್ಕೆ ನಿಯಾಮಕನಾಗಿರುವುದರಿಂದಲೂ **ರಸಃ** ಎಂದು ಹೆಸ ರುಳ್ಳವನಾಗುತ್ತೇನೆ. ಅಥವಾ ಜಲಗಳಲ್ಲಿದ್ದು ರಸವನ್ನು ತೆಗೆದುಕೊಳ್ಳುವುದರಿಂದಲೂ ರಸಕ್ಕೆ ಪ್ರೇರಕ ನಾಗಿರುವುದರಿಂದಲೂ ರಸಃ ಎಂದು ಹೆಸರುಳ್ಳವನಾಗಿರುತ್ತೇನೆ. ಶಶಿಸೂರ್ಯಯೋಃ = ಚಂದ್ರ ಸೂರ್ಯ ರಲ್ಲಿರತಕ್ಕ ಕಾಂತಿಗೆ ಶ್ರೇಷ್ಠತ್ವವು ಬರಲಿಕ್ಕೆ ವಿಶೇಷವಾಗಿ ಕಾರಣನಾಗಿರುವುದರಿಂದ, ಪ್ರಭಾಽಸ್ಮಿ = ಪ್ರಭೆ ಯೆಂದು ಹೆಸರುಳ್ಳವನಾಗಿರುತ್ತೇನೆ. ಅಥವಾ ಚಂದ್ರ ಸೂರ್ಯರಲ್ಲಿದ್ದು ತಾನು ಪ್ರಕಾಶಿಸುವುದರಿಂದ **ಪ್ರಭಾ** ಎಂದು ಹೆಸರುಳ್ಳವನಾಗಿರುತ್ತೇನೆ. ಸರ್ವವೇದೇಷು = ಸಮಸ್ತ ವೇದಗಳಲ್ಲಿ ಶ್ರೇಷ್ಠವಾದ, ಪ್ರಣವಃ = ಪ್ರಣವ ಮಂತ್ರಕ್ಕೆ ನಿಯಾಮಕನಾಗಿ **ಪ್ರಣವ** ಎಂದು ಹೆಸರುಳ್ಳವನಾಗಿರುತ್ತೇನೆ ಅಥವಾ ಶ್ರೀಹರಿಯು ಸಮಸ್ತ ವೇದಗಳಲ್ಲಿದ್ದು ತನ್ನನ್ನು ಸ್ತುತಿಸಿಕೊಳ್ಳುತ್ತಾನೆ. ವೇದಪುರುಷನು ಮಾಡುವ ಸ್ತುತಿಗೆ ಪ್ರೇರಕನಾಗಿರುತ್ತಾನೆ. ಆದಕಾರಣ **ಪ್ರಣವ** ಎಂದು ಹೆಸರುಳ್ಳವನು ಖೇ = ಆಕಾಶದಲ್ಲಿರ ತಕ್ಕ, ಶಬ್ದಃ = ಧ್ವನ್ಯಾತ್ಮಕ ಶಬ್ದಕ್ಕೆ ನಿಯಾಮಕನಾಗಿರುವುದರಿಂದ **ಶಬ್ದ**ನೆಂದು ಹೆಸರುಳ್ಳವನು ಮತ್ತು ಆಕಾಶದಲ್ಲಿದ್ದು ಶಬ್ದಕ್ಕೆ ಪ್ರೇರಕನಾಗಿರುವುದರಿಂದ **ಶಬ್ದ**ನೆಂದು ಹೆಸರುಳ್ಳವನು. ನೃಷು = ಮನುಷ್ಯರಲ್ಲಿ ರತಕ್ಕ, ಪೌರುಷಂ = ಪುರುಷತ್ವಕ್ಕೆ ನಿಯಾಮಕನಾಗಿರುವುದರಿಂದಲೂ. ಸ್ತ್ರೀಯರಲ್ಲಿಲ್ಲದಿರುವ, ಪುರುಷರಲ್ಲಿ ತಕ್ಕ ಪೌಢಿಮೆಗೆ ಅಥವಾ ಸಾಮರ್ಥ್ಯ ವಿಶೇಷಕ್ಕೆ ಕಾರಣನಾದುದರಿಂದ **ಪೌರುಷ**ನೆಂದು ಹೆಸರುಳ್ಳವ ನಾಗಿರುತ್ತೇನೆ ॥ ೮ ॥

**ತಾ ॥ (೧) ಸೋಽಪ್ಸು ಸ್ಥಿತ್ವಾ ರಸಯತಿ ರಸನಾಮಾ ತತಃ ಸ್ಮೃತಃ । ಸೂರ್ಯಚಂದ್ರಾ- ದಿಷು ಸ್ಥಿತ್ವಾ ಪ್ರಭಾನಾಮಾ ಪ್ರಭಾಸನಾತ್ ॥ (೨) ವೇದಸ್ಥಃ ಪ್ರಣವಾಖ್ಯೋಽಸಾ-**

ವ್ಯಾಖ್ಯಾನಂ ಯತ್ಕೃತಾತ್ಮತಃ । ಖೇ ಸ್ಥಿತಃ ಶಬ್ದನಾಮಾಽಸೌ ಯಚ್ಛಬ್ದಯತಿ ಕೇ-
ಶವಃ ॥ ೮ ॥

ಅ ॥ (೧) ಶ್ರೀ ಹರಿಯು ಜಲದಲ್ಲಿದ್ದು ಅದರ ಸಾರವನ್ನು ತೆಗೆದುಕೊಳ್ಳುವುದರಿಂದಲೂ, ರಸಕ್ಕೆ ಪ್ರೇರಕನಾಗಿರುವುದರಿಂದಲೂ ರಸನೆಂದು ಹೆಸರುಳ್ಳವನು, ಸೂರ್ಯ ಚಂದ್ರಾದಿಗಳಲ್ಲಿದ್ದು ತಾನು ಪ್ರಕಾಶಿಸುವುದರಿಂದಲೂ, ಅವರ ಪ್ರಭೆ(ಕಾಂತಿ)ಗೆ ಪ್ರೇರಕನಾದುದರಿಂದಲೂ ಪ್ರಭಾ ಎಂದು ಹೆಸರುಳ್ಳವನು. (೨) ಶ್ರೀಪರಮಾತ್ಮನು ಸಮಸ್ತವೇದಗಳಲ್ಲಿದ್ದು ತನ್ನನ್ನೇ ಚೆನ್ನಾಗಿ ಸ್ತುತಿಸಿಕೊಳ್ಳುವುದರಿಂದಲೂ, ವೇದವು ಮಾಡುವ ಸ್ತುತಿಗೆ ಪ್ರೇರಕನಾದುದರಿಂದಲೂ ಪ್ರಣವನೆಂದು ಹೆಸರುಳ್ಳವನು. ಶ್ರೀ ಹರಿಯು ಆಕಾಶದಲ್ಲಿದ್ದು ಅದರಲ್ಲಿದ್ದ ಶಬ್ದಕ್ಕೆ ಪ್ರೇರಕನಾದುದರಿಂದಲೂ, ಮಾತನ್ನಾಡಿಸುವುದರಿಂದಲೂ ಶಬ್ದನೆಂದು ಹೆಸರುಳ್ಳವನು. ॥ ೮ ॥

ಗೀ ॥ ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।
ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯ ॥

ಅ ॥ ಪೃಥಿವ್ಯಾಂ=ಭೂಮಿಯಲ್ಲಿರತಕ್ಕ, ಪುಣ್ಯಃ=ಉತ್ತಮವಾದ, ಗಂಧಃ=ಗಂಧವು ಶ್ರೇಷ್ಠವಾಗಲಿಕ್ಕೆ ಕಾರಣನೂ ಸುಗಂಧಭೋಕ್ತನೂ ಆಗಿರುವುದರಿಂದಲೂ, ತಾನು ಭೂಮಿಯಲ್ಲಿದ್ದು ಸುರಭ್ಯಸುರಭಿ ಗಂಧಗಳಿಗೆ ಪ್ರೇರಕನಾದುದರಿಂದಲೂ ಗಂಧನೆಂದು ಹೆಸರುಳ್ಳವನು. ವಿಭಾವಸೌ=ಅಗ್ನಿಯಲ್ಲಿರುವ, ತೇಜಶ್ಚಾಸ್ಮಿ=ಸುಡತಕ್ಕ ಸಾಮರ್ಥ್ಯಕ್ಕೆ ಕಾರಣನಾದುದರಿಂದ ತೇಜಃ ಎಂದು ಹೆಸರುಳ್ಳವನಾಗಿರುತ್ತೇನೆ. ಸರ್ವಭೂತೇಷು=ಸಮಸ್ತ ಪ್ರಾಣಿಗಳ, ಜೀವನಂ=ಜೀವನಕ್ಕೆ ನಿಯಾಮಕನಾಗಿರುವುದರಿಂದಲೂ ಸಮಸ್ತ ಪ್ರಾಣಿಗಳಲ್ಲಿದ್ದು ಅವುಗಳಿಗೆ ಜೀವನವನ್ನು ಕೊಡುವುದರಿಂದಲೂ ಜೀವನನೆಂದು ಹೆಸರುಳ್ಳವನು. ತಪಸ್ವಿಷು=ತಪಸ್ಸು ಮಾಡುವವರ, ತಪಶ್ಚ=ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸುಗಳಿಗೆ ನಿಯಾಮಕನಾಗಿ ಇರುವುದರಿಂದಲೂ, ತಪಸ್ವಿಗಳಲ್ಲಿದ್ದು ತಪಸ್ಸು ಮಾಡುವುದರಿಂದಲೂ, ತಪಸ್ವಿಗೆ ಪ್ರೇರಕನಾಗಿರುವುದರಿಂದಲೂ ತಪಃ ಎಂದು ಹೆಸರುಳ್ಳವನಾಗಿರುತ್ತೇನೆ. ॥ ೯ ॥

ತಾ ॥ ಪುಣ್ಯಾಪುಣ್ಯಂ ಗಂಧಯತಿ ಸ್ವಯಂ ಪುಣ್ಯೋ ಧರಾಸ್ಥಿತಃ । ತೇಜಯತ್ಯಗ್ನಿಸಂಸ್ಥಃ
ಸನ್ನ್ಯು(ಭೂ)ತಸ್ಥೋ ಜೀವನಪ್ರದಃ । ತಪಸ್ವಿಸ್ಥಸ್ತಪಯತಿ ॥ ೯ ॥

ಅ ॥ ಶ್ರೀಪರಮಾತ್ಮನು ತಾನು ಭೂಮಿಯಲ್ಲಿದ್ದು ಅಪ್ರಾಕೃತ ಗಂಧಸ್ವರೂಪನಾಗಿ ಸುವಾಸನೆ ದುರ್ವಾಸನೆಗಳಿಗೆ ಪ್ರೇರಕನಾದುದರಿಂದ ಪುಣ್ಯಗಂಧನೆಂದು ಹೆಸರುಳ್ಳವನು. ಅಗ್ನಿಯಲ್ಲಿದ್ದು ತೇಜಸ್ಸುಳ್ಳವನೂ, ತೇಜಸ್ಸಿಗೆ ಪ್ರೇರಕನೂ ಆಗಿರುವುದರಿಂದ ತೇಜಃ ಎಂದು ಹೆಸರುಳ್ಳವನು. ಸಮಸ್ತ ಪ್ರಾಣಿಗಳಲ್ಲಿದ್ದವನಾಗಿ ಜೀವನವನ್ನು ಕೊಡತಕ್ಕವನಾದುದರಿಂದ ಜೀವನನೆನಿಸುತ್ತಾನೆ. ತಪಸ್ವಿಗಳಲ್ಲಿದ್ದು ನಿತ್ಯದ್ಧ್ಯಾನಾತ್ಮಕವಾದ ತಪಸ್ಸನ್ನು ಮಾಡುತ್ತಾ ತಪಸ್ಸಿಗೆ ಪ್ರೇರಕನಾಗಿರುವ ಕಾರಣ ತಪಃ ಎನಿಸುತ್ತಾನೆ. ॥ ೯ ॥

ಗೀ ॥ ಬೀಜಂ ಮಾಂ ಸರ್ವಭೂತಾನಾಂ ವಿದ್ಧಿ ಪಾರ್ಥ ಸನಾತನಂ ।
ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಂ ॥ ೧೦ ॥

ಅ ॥ ಪಾರ್ಥ = ಅರ್ಜುನನೇ. ಸನಾತನಂ = ಶಶ್ವದೇಕಪ್ರಕಾರನಾದ, ಮಾಂ = ನನ್ನನ್ನು, ಸರ್ವಭೂತಾನಾಂ = ಸಮಸ್ತಪ್ರಾಣಿಗಳಿಗೆ, ಬೀಜಂ = ಕಾರಣನನ್ನಾಗಿ, ವಿದ್ಧಿ = ತಿಳಿದುಕೊಳ್ಳು. ಬುದ್ಧಿಮತಾಂ = ಜ್ಞಾನಿಗಳ, ಬುದ್ಧಿರಸ್ಮಿ = ಬುದ್ಧಿಗೆ ನಿಯಾಮಕನಾಗಿರುವುದರಿಂದ ಬುದ್ಧಿ ಎಂದು ಹೆಸರುಳ್ಳವನಾಗಿರುತ್ತೇನೆ ಅಹಂ = ನಾನು. ತೇಜಸ್ವಿನಾಂ = ತೇಜಸ್ಸುಳ್ಳವರ, ತೇಜಃ = ತೇಜಸ್ಸಿಗೆ ನಿಯಾಮಕನಾಗಿ ತೇಜಸ್ಸಿಗೆ ಪ್ರೇರಕನಾದುದರಿಂದ ತೇಜಃ ಎಂದು ಹೆಸರುಳ್ಳವನಾಗಿರುತ್ತೇನೆ. (ಮತ್ತು ಜಲ ಮೊದಲಾದ ಸರ್ವ ವಸ್ತುಗಳಿಗೆ, ರಸ ಗಂಧ ಪ್ರಭೆ ಮೊದಲಾದ ಧರ್ಮಗಳನ್ನು ವ್ಯವಸ್ಥೆಯಿಂದ ಮಾಡುವುದರಿಂದ ಶ್ರೀಹರಿಯು ರಸ ಗಂಧ ಪ್ರಭೆ ಮೊದಲಾದ ಹೆಸರುಳ್ಳವನು.) ॥ ೧೦ ॥

ತಾ ॥ ವ್ಯಂಜನಾದ್ಬೀಜಸಂಜ್ಞಿತಃ । ಬೋಧನಾದ್ಬುದ್ಧಿನಾಮಾಽಸೌ ಬುದ್ಧಿಮತ್ಸು ವ್ಯವಸ್ಥಿತಃ ॥ ೧೦ ॥

ಅ ॥ ಬೀಜದಲ್ಲಿದ್ದು ಅಂಕುರ (ಮೊಳಕೆ)ವನ್ನು ಹೊರಡಿಸುವುದರಿಂದ ಅಥವಾ ಜಗತ್ತನ್ನು ಸೃಷ್ಟಿಸುವುದರಿಂದಲೂ ಬೀಜಕ್ಕೆ ಶಕ್ತಿಯನ್ನು ಪ್ರೇರೇಪಿಸುವುದರಿಂದಲೂ ಶ್ರೀಪರಮಾತ್ಮನು ಬೀಜನೆಂದು ಹೆಸರುಳ್ಳವನು. ಜ್ಞಾನಿಗಳಲ್ಲಿದ್ದು ತಿಳಿಯುವುದರಿಂದಲೂ ಬುದ್ಧಿಗೆ ಪ್ರೇರಕನಾದುದರಿಂದಲೂ ಬುದ್ಧಿಯೆಂದು ಹೆಸರುಳ್ಳವನು. ॥ ೧೦ ॥

ಗೀ ॥ ಬಲಂ ಬಲವತಾಮಸ್ಮಿ ಕಾಮರಾಗವಿವರ್ಜಿತಂ ।
ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥ ೧೧ ॥

ಅ ॥ ಭರತರ್ಷಭ = ಭರತಕುಲದಲ್ಲಿ ಶ್ರೇಷ್ಠನಾದ ಅರ್ಜುನನೇ, ಅಹಂ = ನಾನು, ಬಲವತಾಂ = ಬಲವುಳ್ಳ ಜನರಲ್ಲಿದ್ದು, ಕಾಮರಾಗವಿವರ್ಜಿತಂ = ಕಾಮರಾಗಗಳಿಲ್ಲದ ಬಲಮಸ್ಮಿ = ಬಲವೆಂದು ಹೆಸರುಳ್ಳವನಾಗಿರುತ್ತೇನೆ. ಭೂತೇಷು = ಪ್ರಾಣಿಗಳಲ್ಲಿ. ಧರ್ಮಾವಿರುದ್ಧಃ = ಧರ್ಮಗಳಿಗೆ ವಿರುದ್ಧವಾಗದಿರುವ, ಕಾಮಃ ಅಸ್ಮಿ = ಇಚ್ಛೆಗೆ ಪ್ರೇರಕನಾಗಿರುವುದರಿಂದ ಕಾಮನೆಂದು ಹೆಸರುಳ್ಳವನಾಗಿರುತ್ತೇನೆ. ॥ ೧೧ ॥

ತಾ ॥ (೧) ನಿತ್ಯಪೂರ್ಣಬಲತ್ವಾತ್ತು ಬಲಂ ಕಾಮವಿವರ್ಜಿತಂ । ಅರಾಗಜ(ಜಸ) ಬಲಶ್ಚೈವ ಸ್ಥಾನೇಭ್ಯೋಽನ್ಯೇಷ್ವಯೋಜನಾತ್ ॥ (೨) ಏಕಾದ್ಯಶಬಲಾತ್ಮಾಽಸೌ ಬಲಿನಾಂ ಬಲದಃ ಸ್ವಯಂ । ವೇತಿ ಪೂರ್ಣತ್ವವಾಚೀ ಸ್ಯಾತ್ತದ್ರತೇರ್ಬಲಮುಚ್ಯತೇ ॥ (೩) ಪ್ರಾಯೋ ಹಿ ಕಾಮಿತಾ ಅರ್ಥಾ ಧರ್ಮಂ ಹನ್ಯುರ್ಹರೇಃ ಪುನಃ । ನ ಧರ್ಮಹಾನಿಕೃತ್ಕಿಂತು ಕಾಮಿತೋ ಧರ್ಮಬುದ್ಧಿಕೃತ್ । ಧರ್ಮಾವಿರುದ್ಧಕಾಮೋಽತೋ ವಿಷ್ಣುರ್ಭೂತೇಷು ಸಂಸ್ಥಿತಃ ॥ (೪) ಏವಂ ಸ ಸರ್ವಶಕ್ತ್ಯಾಢ್ಯಃ ಸ್ವತಂತ್ರಶ್ಚೈವ ಸರ್ವಗಃ । ವ್ಯವಸ್ಥಯೈವ ಸರ್ವೇಷಾಂ ಸರ್ವದಾ ಸರ್ವದಃ ಪ್ರಭುಃ ॥ ೧೧ ॥

ಅ ॥ (೧) ವಿಷಯಭೋಗಾಪೇಕ್ಷೆಯಿಲ್ಲದೆ ನಿತ್ಯವಾದ ಪೂರ್ಣಬಲವಿದ್ದುದರಿಂದ ಕಾಮವಿರಹಿತವಾದ ಬಲರೂಪನು. ಅಯೋಗ್ಯಸ್ಥಾನಗಳಲ್ಲಿ ತನ್ನ ಬಲವನ್ನು ಪ್ರಯೋಗಿಸದಿರುವುದರಿಂದ ರಾಗದಿಂದ ಉಂಟಾದ ಬಲವಿಲ್ಲದವನು. (ಅಂದರೆ ಇತರರ ದ್ರವ್ಯ ಸ್ತ್ರೀ ಮೊದಲಾದವರ ಅನುರಾಗವುಳ್ಳವರು ಬಲಪ್ರಯೋಗಕ್ಕೆ ಅನರ್ಹರಾದ ಧನ ಸ್ತ್ರೀ ಮೊದಲಾದವರ ಸ್ವಾಮಿಗಳಲ್ಲಿ ಅವರ ಸಂಹಾರಕ್ಕಾಗಿ ಬಲವನ್ನು

ಪ್ರಯೋಗಿಸುತ್ತಾರೆ) ಹಾಗೆ ಶ್ರೀ ಪರಮಾತ್ಮನು ಮಾಡುವುದಿಲ್ಲ. (೨) (ಅರ್ಥಾಂತರವನ್ನು ಹೇಳುತ್ತಾರೆ–) ಇಂತಹ ಬಲರೂಪನಾದ ಶ್ರೀಪರಮಾತ್ಮನು ತಾನು ಬಲಿಷ್ಠರಿಗೂ ಬಲಪ್ರದನು. (ಅರ್ಥಾಂತರವನ್ನು ಹೇಳುತ್ತಾರೆ–) ಪ (ಬ) ಎಂಬುವುದು ಪೂರ್ಣವೆಂಬುವ ಅರ್ಥವನ್ನು ಹೇಳುತ್ತದೆ. (ರ. ಲ) ಪೂರ್ಣರತಿಯಿರುವುದರಿಂದ ಬಲವೆಂದು ಹೇಳಲ್ಪಡುತ್ತಾನೆ (ಇದರಿಂದ ಬಲವುಳ್ಳ ಜೀವಾದಿಗಳಿಗೂ ಅತಿಶಯವಾಗಿ ಬಲವನ್ನು ಕೊಡುವವನು, ಎಂದು ಉಕ್ತವಾಯಿತು.) (೩) ಪ್ರಾಯಶಃ ಇಚ್ಛಿಸಲ್ಪಟ್ಟ ಅರ್ಥಗಳು ಧರ್ಮವನ್ನು ಕೆಡಿಸುತ್ತವೆ. ಶ್ರೀಪರಮಾತ್ಮನಾದರೂ ಧರ್ಮವನ್ನು ಕೆಡಿಸುವುದಿಲ್ಲ ಮತ್ತ ಭಕ್ತ್ಯಾದಿಗಳಿಂದ ಶ್ರೀಪರಮಾತ್ಮನನ್ನು ವಶೀಕರಿಸಿದರೆ ಧರ್ಮವೃದ್ಧಿಯನ್ನೇ ಮಾಡುತ್ತಾನೆ. ಆದಕಾರಣ ಶ್ರೀಪರಮಾತ್ಮನು ಪ್ರಾಣಿಗಳಲ್ಲಿದ್ದು ಧರ್ಮಕ್ಕೆ ಅವಿರುದ್ಧವಾದ ಕಾಮವನ್ನು ಕೊಡುವವನು. (೪) ಹೀಗೆ ಶ್ರೀ ಪರಮಾತ್ಮನು ಸರ್ವ ವಸ್ತುಗಳಿಂದಲೂ ಭಿನ್ನನು. ಸರ್ವ ಸ್ವತಂತ್ರನು ಸರ್ವರಿಗೂ ಸ್ವಾಮಿಯಾದ ಶ್ರೀಪರಮಾತ್ಮನು ಜಲಗಳಲ್ಲಿ ರಸವೇ. ಭೂಮಿಯಲ್ಲಿ ಗಂಧವೇ. ಇದು ಮೊದಲಾದ ವ್ಯವಸ್ಥೆಯಿಂದಲೇ ಜಲಾದಿಗಳಿಗೆ ಅಸಾಧಾರಣವಾದ ರಸಮೊದಲಾದ ಗುಣಗಳನ್ನು ಕೊಡತಕ್ಕವನು. ಆದಕಾರಣ ರಸಾದಿನಾಮಗಳುಳ್ಳವನು. || ೧೧ ||

ಪೀ–ಶ್ರೀಪರಮಾತ್ಮನು ರಸಮೊದಲಾದ ಧರ್ಮಗಳಿಗೆ ಮಾತ್ರ ಪ್ರೇರಕನೆಂದಲ್ಲ, ಮತ್ತೆ ಜಲಮೊದಲಾದ ಸರ್ವ ಧರ್ಮಿಗಳಿಗೆ ಪ್ರೇರಕನೂ ಆಗಿರುತ್ತಾನೆನ್ನುತ್ತಾರೆ–

**ಗೀ॥ ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ || ೧೨ ||**

ಅ॥ ಯೇ ಚ ಭಾವಾಃ=ಯಾವ ಪದಾರ್ಥಗಳು, ಸಾತ್ತ್ವಿಕಾಃ=ಸತ್ತ್ವಗುಣದ ವಿಕಾರಗಳೋ, ರಾಜಸಾಃ=ರಜೋಗುಣದ ವಿಕಾರಗಳೋ. ತಾಮಸಾಶ್ಚ=ತಮೋಗುಣದ ವಿಕಾರಗಳೋ, ತಾನ್ ಸರ್ವಾನ್=ಆ ಎಲ್ಲಾ ಪದಾರ್ಥಗಳನ್ನು, ಮತ್ತ ಏವ=ನನ್ನಿಂದಲೇ ಹುಟ್ಟಿದವುಗಳನ್ನಾಗಿ. ವಿದ್ಧಿ=ತಿಳಿದುಕೊಳ್ಳು. (ಹಾಗೆಯೇ) ತೇ=ನನ್ನಿಂದ ಹುಟ್ಟಿದ ಆ ಪದಾರ್ಥಗಳು, ಮಯಿ=ನನ್ನನ್ನೇ ಆಶ್ರಯಿಸಿಕೊಂಡು, (ನನ್ನನ್ನೇ ಉಪಜೀವಿಸಿಕೊಂಡು) ಇರುತ್ತವೆ. ಇತಿ ವಿದ್ಧಿ=ಹೀಗೆ ತಿಳಿದುಕೊಳ್ಳು. ಅಹಂ ತು=ನಾನಾದರೂ, ತೇಷು=ಆ ಪದಾರ್ಥಗಳನ್ನುಪಜೀವಿಸಿಕೊಂಡು ನೈವ=ಇರುವವನೇ ಅಲ್ಲ. || ೧೨ ||

ಭಾ॥ (೧) ಇದಂ ಜ್ಞಾನಂ ॥ (೨) ರಸೋಽಹಮಿತಿ ವಿಜ್ಞಾನಂ ॥ (೩) ಅಬಾದಯೋಽಪಿ ಹಿ ತತ ಏವ । ತಥಾಽಪಿ ರಸಾದಿಸ್ವಭಾವಾನಾಂ ಸಾರಾಣಾಂ ಚ ಸ್ವಭಾವತ್ವೇ ಸಾರತ್ವೇ ಚ ವಿಶೇಷತೋಽಪಿ ಸ ಏವ ನಿಯಾಮಕಃ । ನತ್ವಬಾದಿನಿಯಮಾನುಬದ್ಧೋ ರಸಾದಿಸ್ತತ್ಪಾರತನ್ತ್ರ್ಯಾದಿಶ್ಚೇತಿ ದರ್ಶಯತಿ । ಅಪ್ಸು ರಸ ಇತ್ಯಾದಿವಿಶೇಷಶಬ್ದೈಃ ॥ (೪) ಭೋಗಶ್ಚ ವಿಶೇಷತೋ ರಸಾದೇರಿತಿ । ಉಪಾಸನಾರ್ಥಂ ಚ ॥ ೧ ॥

ಅ॥ (೧) ಭೂಮಿರಾಪಃ ಇತ್ಯಾದಿ ಶ್ಲೋಕಗಳಿಂದ ಸಾಮಾನ್ಯತಃ ತಿಳಿಯಲು ಯೋಗ್ಯವಾದ ಮಾಹಾತ್ಮ್ಯವು ಹೇಳಲ್ಪಟ್ಟಿತು. (೨) ರಸೋಽಹಂ ಇತ್ಯಾದಿಗಳು ವಿಶೇಷತಃ ತಿಳಿಯಲು ಯೋಗ್ಯವಾದ ಮಾಹಾತ್ಮ್ಯಪ್ರತಿಪಾದಕಗಳು. (ಅಲೌಕಿಕ ಮಾಹಾತ್ಮ್ಯವನ್ನು ಹೇಳುವುದರಿಂದ ಇದು ವಿಶೇಷ ಮಹಿಮಾ ಪ್ರತಿಪಾದಕವೆಂದು ತಿಳಿಯುತ್ತದೆ) (ರಸ ಪ್ರಭಾ ಇತ್ಯಾದಿಗಳ ಸತ್ತ್ವಪ್ರತೀತಿ ಇತ್ಯಾದಿಗಳಿಗೆ

ಕಾರಣನಾದುದರಿಂದಲೂ ರಸಾದಿಗಳ ಭೋಕ್ತನಾದುದರಿಂದಲೂ ಶ್ರೀಪರಮಾತ್ಮನು ರಸಾದಿಶಬ್ದಗಳಿಂದ ಹೇಳಲ್ಪಡುತ್ತಾನೆ) (೩) ಜಲಮೊದಲಾದ ಧರ್ಮಗಳೂ ಶ್ರೀಪರಮಾತ್ಮನ ಅಧೀನಗಳೇ ಆಗಿವೆ. ಶ್ರೀಹರಿಗೆ ಭೋಗ್ಯಗಳೂ ಆಗಿವೆ. ಅದರೂ ಜಲಾದಿಗಳ ಸ್ವಾಭಾವಿಕ ಧರ್ಮಗಳಾದ ರಸವೇ ಮೊದಲಾದವುಗಳಿಗೂ ಜಲಾದಿಗಳ ಧರ್ಮಗಳಾದ ಸಂಖ್ಯ ಮೊದಲಾದವುಗಳಲ್ಲಿ ಶ್ರೇಷ್ಠವಾದ ರಸಾದಿಗಳಿಗೂ. (ಅಂದರೆ – ಜಲಾದಿಗಳ ಸ್ವಾಭಾವಿಕ ಧರ್ಮಭೂತಗಳಾದ ರಸಾದಿಗಳೂ ಜಲಾದಿಗಳ ಧರ್ಮಗಳಲ್ಲಿ ಶ್ರೇಷ್ಠಗಳಾದ ರಸಾದಿಗಳೂ) ಜಲಾದಿಗಳ ಸ್ವಭಾವವೆಂಬುವ ವಿಷಯದಲ್ಲಿಯೂ ಜಲಾದಿಗಳ ಧರ್ಮಗಳಲ್ಲಿ ಶ್ರೇಷ್ಠವೆಂಬುವ ವಿಷಯದಲ್ಲಿಯೂ ರಸ ಮೊದಲಾದವುಗಳಿಗೆ ರಸತ್ವ ಮೊದಲಾದುದು ಇದೆ, ಎಂಬುವ ವಿಷಯದಲ್ಲಿಯೂ ಶ್ರೀಪರಮಾತ್ಮನೇ ವಿಶೇಷ (ಮುಖ್ಯ) ವಾಗಿಯೂ ನಿಯಾಮಕನು (ಯದ್ಯಪಿ ಧರ್ಮಿಗಳೂ ಶ್ರೀಹರಿಯ ಅಧೀನಗಳೇ. ಆದಾಗ್ಯೂ ಜಲಾದಿರೂಪ ಧರ್ಮಿಗಳಿಂದಲೂ ಜಲಾದಿಗಳಲ್ಲಿರುವ ರಸಾದಿಧರ್ಮಗಳಿಗೆ ವಿಶೇಷತಃ ನಿಯಾಮಕನಾಗಿರುವುದರಿಂದ ಅಪ್ಸು ರಸಃ ಎಂದು ಪ್ರತ್ಯೇಕ ಹೇಳಿದ್ದು ಯುಕ್ತವು) ರಸ ಮೊದಲಾದುದೂ ಆ ರಸಾದಿಗಳಿಗೆ ಜಲಾದಿ ಧರ್ಮಗಳಲ್ಲಿ ಸಾರತ್ವವೂ, ಜಲಾದಿಗಳ ಸ್ವಭಾವತ್ವವೂ ರಸತ್ವಾದಿಗಳೂ ಜಲಾದಿಗಳ ನಿಯಮಾನುಬದ್ಧವಲ್ಲವೆಂದು ಅಪ್ಸು ರಸಃ ಇತ್ಯಾದಿ ವಿಶೇಷ ಶಬ್ದಗಳಿಂದ ತೋರಿಸುತ್ತಾರೆ (ಅಂದರೆ ಲೋಕದಲ್ಲಿ ಕುಂಬಾರ ನೇಕಾರ ಮೊದಲಾದವರು ಮಡಿಕೆ ಬಟ್ಟೆ ಮೊದಲಾದ ವಸ್ತುಗಳನ್ನು ಮಾಡುತ್ತಾರೆ. ಅವುಗಳಲ್ಲಿರುವ ಗಂಧ ರಸ ಮೊದಲಾದ ಗುಣಗಳಲ್ಲಿಯೂ ಅವುಗಳ ಧರ್ಮಗಳಾದ ಗಂಧತ್ವಾದಿಗಳನ್ನು ಮಾಡುವ ವಿಷಯದಲ್ಲಿಯೂ ಪ್ರತ್ಯೇಕವಾಗಿ ಕರ್ತೃತ್ವವುಳ್ಳವರಲ್ಲ. ಆದರೂ ಮಡಿಕೆ ಮೊದಲಾದವುಗಳು ಹುಟ್ಟುವಾಗ ಅದರೊಂದಿಗೆ ಅವುಗಳ ಧರ್ಮಗಳೂ ಹುಟ್ಟುತ್ತವೆ. ಶ್ರೀಪರಮಾತ್ಮನಾದರೂ ಹಾಗಲ್ಲ. ಮತ್ತೆ ಜಲಾದಿಗಳ ಧರ್ಮಗಳಾದ ರಸಾದಿ ಗುಣಗಳಲ್ಲಿಯೂ ಜಲಾದಿ ಧರ್ಮಗಳಾದ ಸ್ವಭಾವತ್ವಾದಿ ವಿಷಯದಲ್ಲಿಯೂ ಅವುಗಳಲ್ಲಿರುವ ಗಂಧತ್ವಾದಿ ಧರ್ಮಗಳಲ್ಲಿಯೂ ಪ್ರತ್ಯೇಕವಾಗಿ ಸೃಷ್ಟಿ ಮಾಡತಕ್ಕ ಶಕ್ತಿಯಿದ್ದವನೇ ಪ್ರತ್ಯೇಕ ವ್ಯಾಪಾರವುಳ್ಳವನೇ ನಿಯಮದಿಂದ ಇರುತ್ತಾನೆ ಕುಂಬಾರಾದಿಗಳಿಗೆ ಅಂತಹ ಶಕ್ತಿಯಿಲ್ಲ ಮಡಿಕೆ ಮಾತ್ರ ಮಾಡುತ್ತಾನೆ ಅದರಲ್ಲಿರುವ ಎಲ್ಲಾ ಧರ್ಮಗಳನ್ನು ಪ್ರತ್ಯೇಕ ಹುಟ್ಟಿಸುವ ಶಕ್ತಿಯೂ ಅವುಗಳನ್ನು ಪ್ರೇರಣೆ ಮಾಡುವ ಶಕ್ತಿಯೂ ಇರುವುದಿಲ್ಲ. ಶ್ರೀಪರಮಾತ್ಮನಿಗಾದರೂ ಧರ್ಮಗಳನ್ನು ಪ್ರತ್ಯೇಕ ಸೃಷ್ಟಿಸುವ ಶಕ್ತಿಯೂ ನಿಯಮಿಸುವ ಶಕ್ತಿಯೂ ಇದೆ ಎಂದು ತೋರಿಸುವುದಕ್ಕಾಗಿ ಅಪ್ಸು ರಸಃ ಇತ್ಯಾದಿ ವಿಶೇಷ ಶಬ್ದಗಳನ್ನು ತೆಗೆದುಕೊಂಡದ್ದು.) (೪) (ರಸಾದಿ, ಭೋಕ್ತೃತ್ವ ಪಕ್ಷದಲ್ಲಿಯೂ ಪ್ರಯೋಜನವನ್ನು ತೋರಿಸುತ್ತಾರೆ) ಜಲಾದಿಗಳ ಭೋಗಕ್ಕಿಂತಲೂ ಅತಿಶಯವಾಗಿ ರಸಾದಿಗಳ ಭೋಗವು ಶ್ರೀಪರಮಾತ್ಮನಿಗೆ ಎಂದು ಅಪ್ಸು ರಸಃ ಇತ್ಯಾದಿ ವಿಶೇಷಶಬ್ದಗಳಿಂದ ತೋರಿಸುತ್ತಾರೆ. ಜಲಾದಿಗಳಿಗಿಂತ ವಿಶೇಷವಾಗಿ ರಸ ಗಂಧ ಮೊದಲಾದವುಗಳಲ್ಲಿ ಶ್ರೀಪರಮಾತ್ಮನನ್ನು ಉಪಾಸನಾಮಾಡುವುದಕ್ಕಾಗಿ ಅಪ್ಸು ರಸಃ ಇತ್ಯಾದಿ ವಿಶೇಷತಃ ಪ್ರತ್ಯೇಕ ಉಕ್ತಿಯು ಕೂಡುತ್ತದೆ

೮ ॥ (1) ಜಲಗಳಲ್ಲಿ ಸಾರಭೂತವಾದುದು ಯಾವುದು ರಸವೋ, ರಸಕ್ಕೆ ಜಲದ ಸ್ವಾಭಾವಿಕವಾದ ಧರ್ಮ ಸ್ವಭಾವತ್ವದಲ್ಲಿಯೂ ರಸಾದಿಗಳಿಗೆ ಜಲಧರ್ಮಗಳಾದ ಸಂಖ್ಯಾ ಮೊದಲಾದವುಗಳಲ್ಲಿ ಶ್ರೇಷ್ಠತ್ವದಲ್ಲಿಯೂ ರಸತ್ವದಲ್ಲಿಯೂ ಶ್ರೀಪರಮಾತ್ಮನು ವಿಶೇಷವಾಗಿ ಕಾರಣನಾಗಿರುವುದರಿಂದಲೂ ರಸಾದಿಗಳಿಗೆ ಭೋಕ್ತನಾಗಿರುವುದರಿಂದಲೂ ಅವುಗಳಲ್ಲಿ ಪರಮಾತ್ಮನನ್ನೇ ವಿಶೇಷತಃ ಉಪಾಸನೆ ಮಾಡುವುದಕ್ಕಾಗಿ ರಸೋಽಹಂ ಎಂದು ಜಲಾದಿಗಳಿಗಿಂತ ಪ್ರತ್ಯೇಕ ಹೇಳಿದ್ದು ಯುಕ್ತವು ಹೀಗೆಯೇ (2) ಚಂದ್ರಸೂರ್ಯರಲ್ಲಿ ಯಾವುದು ಪ್ರಭೆಯು ಇದೆಯೋ, ಆ ಕಾಂತಿಗೆ ಚಂದ್ರಸೂರ್ಯರ ಸ್ವಾಭಾವಿಕ ಧರ್ಮದಲ್ಲಿಯೂ ಆ ಪ್ರಭೆಗೆ ಚಂದ್ರಸೂರ್ಯರ ಧರ್ಮಗಳಲ್ಲಿ ಶ್ರೇಷ್ಠತ್ವದಲ್ಲಿಯೂ, ಆ ಪ್ರಭೆಗೆ ಪ್ರಭಾತ್ವರೂಪಧರ್ಮತ್ವದಲ್ಲಿಯೂ ಶ್ರೀಪರಮಾತ್ಮನು ವಿಶೇಷವಾಗಿ ಕಾರಣನಾದುದರಿಂದ ಪ್ರಭಾಸ್ಮಿ ಎಂದು ವಿಶೇಷವಾಗಿ

ಹೇಳಿದ್ದು. (3) ಸಮಸ್ತ ವೇದಗಳಲ್ಲಿ ಸಾರಭೂತವಾದುದು ಯಾವುದು ಪ್ರಣವವು ಇದೆಯೋ, ಅದಕ್ಕೆ ವೇದಗಳ ಸಾರತ್ವವೂ, ಪ್ರಣವಕ್ಕೆ ಪ್ರಣವತ್ವವೂ ಇದೆ. ಇವೆಲ್ಲವೂ ಶ್ರೀಹರಿಯ ಅಧೀನಗಳು. ಆದ ಕಾರಣ ಪ್ರಣವಃ ಅಸ್ಮಿ ಎಂದದ್ದು. (4) ಆಕಾಶದಲ್ಲಿದ್ದ ಧ್ವನ್ಯಾತ್ಮಕ ಶಬ್ದವು ಅದಕ್ಕೆ ಆಕಾಶದ ಸ್ವಾಭಾವಿಕ ಧರ್ಮತ್ವವೂ ಆ ಶಬ್ದಕ್ಕೆ ಸಂಖ್ಯಾ ಮೊದಲಾದ ಆಕಾಶಧರ್ಮಗಳಲ್ಲಿ ಶ್ರೇಷ್ಠತ್ವವೂ ಶಬ್ದದಲ್ಲಿ ಶಬ್ದತ್ವರೂಪ ಧರ್ಮವೂ ಇವೆಲ್ಲವೂ ಶ್ರೀಹರಿಯ ಅಧೀನಗಳು. ಶಬ್ದವು ಶ್ರೀಹರಿಗೆ ಭೋಗ್ಯವೂ ಆಗಿದೆ. ಆದಕಾರಣ ಶಬ್ದೋಽಹಮಸ್ಮಿ ಎಂದು ಹೇಳಿದ್ದು. (5) ಪೃಥಿವಿಯಲ್ಲಿದ್ದ ಸುಗಂಧವು. ಭೂಮಿಯ ಸ್ವಾಭಾವಿಕ ಧರ್ಮವು. ಅದು ಪೃಥಿವೀಧರ್ಮಗಳಲ್ಲಿ ಶ್ರೇಷ್ಠವು. ಗಂಧದಲ್ಲಿ ಗಂಧತ್ವವಿದೆ, ಶ್ರೀಹರಿಯು ಗಂಧಭೋಕ್ತನು. ಇವು ಎಲ್ಲಾದಕ್ಕೂ ಶ್ರೀಪರಮಾತ್ಮನೇ ಕಾರಣನು. ಸುಗಂಧವನ್ನು ಅನುಭವಿಸುತವನೂ ಆಗಿರುತ್ತಾನೆ. ಆದಕಾರಣ ಗಂಧಃ ಅಹಮಸ್ಮಿ ಎಂದು ಹೇಳಿದ್ದು ಇದೇರೀತಿಯಾಗಿ ಎಲ್ಲಾ ಕಡೆ ತಿಳಿಯತಕ್ಕದ್ದು. (6) ರಸೋಽಹಮಸ್ಮೀತ್ಯುಪಾಸೀತ ಇತ್ಯಾದಿ ರೂಪವಾಗಿ ರಸಾದಿಗಳು ಶ್ರೀಹರಿಯ ಉಪಾಸನಕ್ಕಾಗಿ ಪ್ರತಿಮಾಸ್ಥಾನೀಯಗಳು. ಏವಂಚ ಜಲಾದಿಗಳಲ್ಲಿ ಶ್ರೀಪರಮಾತ್ಮನನ್ನು ಉಪಾಸನೆಮಾಡುವುದಕ್ಕಿಂತ ರಸಾದಿಗಳಲ್ಲಿ ಶ್ರೀಪರಮಾತ್ಮನ ಉಪಾಸನೆಯು ಶ್ರೇಷ್ಠವಾಗಿರುವುದರಿಂದ ಪ್ರತ್ಯೇಕ ಹೇಳಿದ್ದು. ॥ ೧ ॥

ಟೀ—ಶ್ರೀಪರಮಾತ್ಮನು ಸತ್ತಾದಿಗಳಿಗೆ ಕಾರಣನಾಗಿರುವುದರಿಂದಲೂ ಸರ್ವಭೋಕ್ತನಾಗಿರುವುದರಿಂದಲೂ, ರಸಾದಿಗಳಲ್ಲಿ ಜಲಾದಿಗಳಿಗಿಂತಲೂ ವಿಶೇಷವಾಗಿ ಉಪಾಸನೆಮಾಡಬೇಕೆಂಬುವುದಕ್ಕಾಗಿಯೂ ಅಪ್ಸು ರಸಃ ಅಹಂ ಇದುಮೊದಲಾದುದನ್ನು ಹೇಳಿದ್ದು, ಎಂಬ ಮೂರು ಅರ್ಥಗಳಲ್ಲಿ ಪ್ರಮಾಣವನ್ನು ಹೇಳುತ್ತಾರೆ—

ಭಾ ॥ (೧) ಉಕ್ತಂ ಚ ಗೀತಾಕಲ್ಪೇ । ರಸಾದೀನಾಂ ರಸಾದಿತ್ವೇ ಸ್ವಭಾವತ್ವೇ ತಥೈವ ಚ । ಸಾರತ್ವೇ ಸರ್ವಧರ್ಮೇಷು ವಿಶೇಷೇಣಾಪಿ ಕಾರಣಂ । ಸಾರಭೋಕ್ತಾ ಚ ಸರ್ವತ್ರ ಯತೋಽತೋ ಜಗದೀಶ್ವರಃ ॥ (೨) ರಸಾದಿಮಾನಿನಾಂ ದೇಹೇ ಸ ಸರ್ವತ್ರ ವ್ಯವಸ್ಥಿತಃ । ಅಬಾದಯಃ ಪಾರ್ಷದಾ ಧ್ಯೇಯಃ ಸ ಜ್ಞಾನಿನಾಂ ಹರಿಃ । ರಸಾದಿಸಂಪತ್ತ್ಯಾ ಅನ್ಯೇಷಾಂ ವಾಸುದೇವೋ ಜಗತ್ಪತಿರಿತಿ ॥ (೩) ಸ್ವಭಾವೋ ಜೀವ ಏವ ಚ । ಸರ್ವಸ್ವಭಾವೋ ನಿಯತಸ್ತೇನೈವ ಕಿಮುತಾಪರಂ । ನ ತದಸ್ತಿ ವಿನಾ ಯತ್ಸ್ಯಾತ್ ಮಯಾ ಭೂತಂ ಚರಾಚರಮಿತಿ ಚ ॥ (೪) ಧರ್ಮಾವಿರುದ್ಧಃ ಕಾಮರಾಗವಿವರ್ಜಿತಮಿತ್ಯಾದ್ಯುಪಾಸನಾರ್ಥಂ ॥ (೫) ಉಕ್ತಂ ಚ ಗೀತಾಕಲ್ಪೇ । ಧರ್ಮಾವಿರುದ್ಧಕಾಮೇನಾಪ್ಯುಪಾಸ್ಯಃ ಕಾಮಮಿಚ್ಛತಾ । ವಿಹೀನೇ ಕಾಮರಾಗಾದೇರ್ಬಲೇ ಚ ಬಲಮಿಚ್ಛತಾ । ಧ್ಯಾತಸ್ತತ್ರ ಕ್ವಚಿತ್ಸಿದ್ಧಿಜ್ಞಾನಮೇವ ದದಾತಿ ಸ ಇತ್ಯಾದಿ । ಪುಣ್ಯೋ ಗಂಧ ಇತಿ ಭೋಗಾಪೇಕ್ಷಯಾ ಚ । ತಥಾ ಚ ಶ್ರುತಿಃ ॥ (೬) ಪುಣ್ಯಮೇವಾಮುಂ ಗಚ್ಛತಿ ನ ಹ ವೈ ದೇವಾನ್ಪಾಪಂ ಗಚ್ಛತಿ । ಋತಂ ಪಿಬಂತೌ ಸುಕೃತಸ್ಯ ಲೋಕ ಇತ್ಯಾದಿಕಾ ॥ ೨ ॥

ಅ ॥ (೧) ಗೀತಾಕಲ್ಪದಲ್ಲಿ ಈ ಕ್ರಮೇಣವು ಹೇಳಲ್ಪಟ್ಟಿದೆ. ರಸ ಗಂಧ ಮೊದಲಾದುವುಗಳಲ್ಲಿರುವ ರಸತ್ವ ಗಂಧತ್ವ ಮೊದಲಾದ ಧರ್ಮಗಳಲ್ಲಿಯೂ ಹಾಗೆಯೇ ರಸಾದಿಗಳಿಗೆ ಜಲಾದಿಗಳ ಸ್ವಭಾವತ್ವ

ದಲ್ಲಿಯೂ, ರಸಾದಿಗಳಿಗೆ ಜಲಾದಿಗಳಲ್ಲಿರುವ ಸಂಖ್ಯಾ ಮೊದಲಾದ ಎಲ್ಲಾ ಧರ್ಮಗಳಿಗಿಂತ ಶ್ರೇಷ್ಠತ್ವ ದಲ್ಲಿಯೂ ಶ್ರೀಪರಮಾತ್ಮನೇ ವಿಶೇಷತಃ ಕಾರಣನು. ಅಲ್ಲದೆ ಶ್ರೀಪರಮಾತ್ಮನೇ ಜಲಾದಿಗಳಲ್ಲಿರತಕ್ಕ ರಸಾದಿಸಾರಭೋಕ್ತನೂ ಆಗಿರುತ್ತಾನೆ. ಆದಕಾರಣ ಶ್ರೀಪರಮಾತ್ಮನು ರಸಾದಿರೂಪವಾದ ಜಗತ್ತನ್ನು ಹೇಳುವ ರಸಾದಿಶಬ್ದಗಳಿಂದ ಹೇಳಲ್ಪಡುತ್ತಾನೆ. (೨) ಶ್ರೀಪರಮಾತ್ಮನು ರಸಾದಿಗಳಿಗೆ ಅಭಿಮಾನಿಗ ಳಾದ ದೇವತೆಗಳ ದೇಹಗಳಲ್ಲಿ ಸರ್ವತ್ರ ಇರುತ್ತಾನೆ. ಜಲಾದಿಗಳಿಗೆ ಅಭಿಮಾನಿಗಳಾದ ದೇವತೆಗಳು ವಿಷ್ಣುಪಾರ್ಷದರು. (ಪರಿವಾರಭೂತರು.) ಆ ಜಗತ್ಪತಿಯಾದ ಪಾಪಪರಿಹಾರಕನಾದ ಶ್ರೀಪರಮಾ ತ್ಮನು ಜ್ಞಾನವನ್ನು ಅಪೇಕ್ಷಿಸುವವರಿಗೆ ಜ್ಞಾನದ ಪ್ರಾಪ್ತಿಗಾಗಿಯೂ, ರಸವನ್ನಪೇಕ್ಷಿಸುವವರಿಗೆ ರಸಾದಿ ಗಳ ಪ್ರಾಪ್ತಿಗಾಗಿಯೂ ಧ್ಯಾನಿಸಲ್ಪಡಬೇಕು. (೩) (ಸ್ವಭಾವವೂ ಶ್ರೀಪರಮಾತ್ಮನ ಅಧೀನವು ಎಂಬು ವಲ್ಲಿ ಬೇರೆ ಪ್ರಮಾಣಗಳನ್ನು ಹೇಳುತ್ತಾರೆ-) (I) ಸರ್ವ ವಸ್ತುಗಳ ಸ್ವಭಾವವೂ ಜೀವನೂ (ಎಲ್ಲರೂ ಶ್ರೀ ಪರಮಾತ್ಮನ ಅನುಗ್ರಹದಿಂದಲೇ ಇರುತ್ತಾರೆ ಅನುಗ್ರಹವಿಲ್ಲದೆ ಇರಲು ಸಾಧ್ಯವೇ ಇಲ್ಲ.) ಎಲ್ಲಾ ವಸ್ತುಗಳ ಸ್ವಭಾವವೂ ಶ್ರೀಪರಮಾತ್ಮನಿಂದಲೇ ಪ್ರೇರಿಸಲ್ಪಡುತ್ತದೆ. (ಶ್ರೀಪರಮಾತ್ಮನ ಅಧೀನವೇ.) ಅಸ್ವಾಭಾವಿಕವಾದ ಬೇರೆ ಧರ್ಮಗಳು ಶ್ರೀಪರಮಾತ್ಮನ ಅಧೀನವೆಂದು ಸುತರಾಂ ಸಿದ್ಧಿಸುತ್ತದೆ. ಚೇತ ನಾಚೇತನ ವಸ್ತುಗಳೆಲ್ಲವೂ ನನ್ನ ಅಧೀನವಾಗಿ ಇಲ್ಲದಿರುವುದು ಯಾವುದೂ ಇಲ್ಲವೇ ಇಲ್ಲ. (೪) ಉತ್ತಮ ಗಳಾದ ಬಲಕಾಮಾದಿಗಳಲ್ಲಿಯೇ ಶ್ರೀಪರಮಾತ್ಮನನ್ನು ಉಪಾಸನೆ ಮಾಡಬೇಕು. ಧರ್ಮವಿರುದ್ಧ ಗಳಾದ ಅಶುಚಿಗಳಾದ ಕಾಮಾದಿ ಪದಾರ್ಥಗಳಲ್ಲಿ ಉಪಾಸನೆಮಾಡಕೂಡದೆಂದು ತಿಳಿಸಿಕೊಡುವುದಕ್ಕಾಗಿ ೧೧ನೇ ಶ್ಲೋಕದಲ್ಲಿ ಕಾಮಕ್ಕೆ ಧರ್ಮಾವಿರುದ್ಧಃ ಎಂದು ವಿಶೇಷಣವು. ಬಲದಲ್ಲಿ ಕಾಮರಾಗವಿವ ರ್ಜಿತಂ ಎಂದು ವಿಶೇಷಣವು (೫) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ) ಪುರುಷಾರ್ಥವನ್ನು ಇಚ್ಛಿಸುವವನು ಧರ್ಮಕ್ಕೆ ಅವಿರುದ್ಧವಾದ ಕಾಮದಲ್ಲಿ ಶ್ರೀಪರಮಾತ್ಮನನ್ನು ಉಪಾಸನೆ ಮಾಡಬೇಕು. ಬಲ ವನ್ನು ಇಚ್ಛಿಸುವವನು ಕಾಮ ರಾಗ ಇತ್ಯಾದಿಗಳಿಂದ ವಿರಹಿತವಾದ ಬಲದಲ್ಲಿ ಶ್ರೀಪರಮಾತ್ಮನನ್ನು ಧ್ಯಾನಿ ಸಬೇಕು ಕಾಮಾದಿಗಳನ್ನು ಇಚ್ಛಿಸದೆ ಇದ್ದವರು ಕಾಮಾದಿಗಳಲ್ಲಿ ಶ್ರೀಪರಮಾತ್ಮನನ್ನು ಧ್ಯಾನಿಸಿದರೆ ಶ್ರೀಪರಮಾತ್ಮನು ಜ್ಞಾನವನ್ನೇ ಕೊಡುತ್ತಾನೆ. ಇತ್ಯಾದಿ ಪ್ರಮೇಯವು ಗೀತಾಕಲ್ಪದಲ್ಲಿ ಹೇಳಿದೆ. (೬) (ಗಂಧಕ್ಕೆ ಪುಣ್ಯಃ ಎಂದು ವಿಶೇಷಣ ಕೊಟ್ಟಿದ್ದಕ್ಕೆ ಪ್ರಯೋಜನಾಂತರವನ್ನು ಹೇಳುತ್ತಾರೆ-) ಶ್ರೀ ಪರಮಾತ್ಮನಿಗೆ ಪುಣ್ಯವಾದ ಗಂಧವೇ (ಸುಗಂಧವೇ) ಭೋಗವು. ದುರ್ಗಂಧವು ಭೋಗವಿಲ್ಲ, ಎಂದು ತಿಳಿಸುವುದಕ್ಕಾಗಿ ಗಂಧವಲ್ಲಿ ಪುಣ್ಯಃ ಎಂದು ವಿಶೇಷಣವನ್ನು ಕೊಟ್ಟಿದ್ದು. (ಶ್ರೀಪರಮಾತ್ಮನಿಗೆ ದುರ್ಗಂಧಾನುಭವವಿಲ್ಲವಾದರೆ ಸರ್ವಜ್ಞನು ಆಗದೆ ಹೋದಾನು. ಇದ್ದರೆ ಭೋಗವಿಲ್ಲವೆಂದದ್ದು ಹೇಗೆ ಎಂದರೆ-ದುರ್ಗಂಧಾದಿಗಳ ಅನುಭವವಿದ್ದರೂ ಅದು ದುಃಖರೂಪವಾದ ಫಲಕ್ಕೆ ಕಾರಣಗಳಾಗುವುದಿಲ್ಲ. ಸುಗಂಧವು ಸುಖಾಭಿವ್ಯಕ್ತಿಗೆ ಕಾರಣವಾಗುವುದು. ॥ ೨ ॥

ಟೀ—ಶುಚಿಯಾದ ವಸ್ತುವೇ ಶ್ರೀಪರಮಾತ್ಮನಿಗೆ ಭೋಗ್ಯವು ಎಂಬುವ ವಿಷಯದಲ್ಲಿಯೇ ಪ್ರಮಾಣ ವನ್ನು ಹೇಳುತ್ತಾರೆ—

ಭಾ ॥ (೧) ಋತಂ ಚ ಪುಣ್ಯಂ । ಋತಂ ಸತ್ಯಂ ತಥಾ ಧರ್ಮಃ ಸುಕೃತಂ ಚಾಭಿಧೀಯತ ಇತ್ಯಭಿಧಾನಾತ್ । ಋತಂ ತು ಮಾನಸೋ ಧರ್ಮಃ ಸತ್ಯಂ ಸ್ಯಾತ್ತತ್ಪ್ರಯೋಗಗ ಇತಿ ಚ ॥ (೨) ನ ಚಾನತ್ವನ್ಯನ್ನ್ಯೋ ಅಭಿಚಾಕಶೀತಿ । ಅನ್ಯೋ ನಿರನ್ನೋಽಪಿ ಬಲೇನ ಭೂಯಾನಿತ್ಯಾದಿವಿರೋಧಃ । ಸ್ಥೂಲಾನಸನೋಕ್ತೇಃ ॥ (೩) ಅಹ ಚ ಸೂರ್ಕ್ಷ್ಮಾ- ಶನಂ । ಪ್ರವಿವಿಕ್ತಾಹಾರತರ ಇವೈಷ ಭವತ್ಯಸ್ಮಾಚ್ಛಾರೀರಾದಾತ್ಮನ ಇತಿ ॥ (೪) ನ

ಚಾತ್ರ ಜೀವ ಉಚ್ಯತೇ । ಶರೀರಾದಾತ್ಮನ ಇತಿ ಭೇದಾಭಿಧಾನಾತ್ । ಸ್ವಪ್ನಾದಿ
ಶಾರೀರ ಏವ । ಶಾರೀರಸ್ತು ತ್ರಿಧಾ ಭಿನ್ನೋ ಜಾಗ್ರದಾದಿಷ್ವವಸ್ಥಿತೇರಿತಿ ವಚನಾ
ದ್ಗಾರುಡೇ । ಅಸ್ಮಾದಿತೀಶ್ವರವ್ಯಾವೃತ್ತ್ಯರ್ಥಂ ॥ ೩

ಅ ॥ (೧) (1) ಹಾಗೆ ಹೇಳತಕ್ಕ ವೇದವು ಇದೆ. ಮನುಷ್ಯರಿಗೆ ಭೋಗ್ಯವಾದ ಅನ್ನ, ವೈಶ್ವದೇವ ಹರಣ ಮೊದಲಾದ ದೇವಾನ್ನ, ಇದು ಮೊದಲಾದ ಸಪ್ತಾನ್ನ ವಿದ್ಯೆಯನ್ನು ಪಾವನಮಾಡತಕ್ಕ ಮುಖ ಬ್ರಹ್ಮನಿಗೆ ಪುಣ್ಯವೇ ಬರುತ್ತದೆ. ದೇವತೆಗಳಿಗೆ ಪಾಪವು ಬರುವುದಿಲ್ಲ. (ಸಾಮಾನ್ಯ ದೇ ಗಳಿಗೆ ಮಾತ್ರ ಪುಣ್ಯಭೋಗವು ನಿಯಮದಿಂದ ಇದೆ, ಎಂದಾಗುವಾಗ ದೇವೋತ್ತಮನಾದ ಶ್ರೀಪರಮಾ ನಿಗೆ ಪುಣ್ಯಭೋಗವೇ ಇರುವುದು. ಪಾಪಫಲಭೋಗವು ಬರುವುದಿಲ್ಲವೆಂದು ಸುತರಾಂ ಸಿದ್ಧವಾಗುತ್ತ (2) ಸುಕೃತನಿರ್ಮಿತವಾದ ಶರೀರದಲ್ಲಿ ಪುಣ್ಯಫಲವನ್ನು ಅನುಭವಿಸುತ್ತಿರುವವರು ಆತ್ಮಾ ಅಂತರಾ ಎಂಬುವ ಎರಡು ಭಗವದ್ರೂಪಗಳು. ಇದು ಮೊದಲಾದ ಶ್ರುತಿಗಳಿಂದ ಶ್ರೀಪರಮಾತ್ಮನಿಗೆ ಶುಭ ಗವೇ ಇರುವುದೆಂದು ಸಿದ್ಧವಾಗುತ್ತದೆ. ಋತ ಸತ್ಯ ಶಬ್ದಗಳಿಂದ ಪುಣ್ಯವು, ಸತ್ಕರ್ಮವೂ ಕೂಡ ಲ್ಪಡುತ್ತದೆ ಎಂದು ಪದಗಳಿಗೆ ಶಕ್ತಿಯನ್ನು ತೋರಿಸಿಕೊಡುವ ಪ್ರಮಾಣವಿದೆ. ಋತವೆಂದರೆ ಮ ನಿಂದ ಹುಟ್ಟತಕ್ಕ ಧರ್ಮವು. ಒಳ್ಳೇ ಶಬ್ದಪ್ರಯೋಗದಿಂದುಂಟಾಗತಕ್ಕ ಪುಣ್ಯವು ಸತ್ಯವೆನಿಸುತ್ತ (೨) (ಶ್ರೀಪರಮಾತ್ಮನಿಗೆ ವಿಷಯಭೋಗವನ್ನು ಒಡಂಬಟ್ಟರೆ ವೇದಾದಿಗಳಿಂದ ವಿರೋಧವು ಬರುವ ಎಂದರೆ—) (ದೇಹದಲ್ಲಿ ಜೀವಪರಮಾತ್ಮರಿಬ್ಬರು ಇದ್ದಾರೆ. ಇಬ್ಬರಲ್ಲಿ ಒಬ್ಬ ಜೀವನು ಕರ್ಮಫಲವ ಣ್ಣುತ್ತಿದ್ದಾನೆ.) ಇನ್ನೊಬ್ಬ ಶ್ರೀಹರಿಯು ಕರ್ಮಫಲವನ್ನುಣ್ಣದೆ ಪ್ರಕಾಶಿಸುತ್ತಿದ್ದಾನೆ. (೩) ಇ ಬ್ಬನು ಅನ್ನವನ್ನುಣ್ಣದಿದ್ದರೂ ಬಲದಿಂದ ಶ್ರೇಷ್ಠನಾಗಿದ್ದಾನೆ, ಇದು ಮೊದಲಾದ ಪ್ರಮಾಣಗ ವಿರೋಧವು ಬರುವುದಿಲ್ಲ. (ಏಕೆ ವಿರೋಧವಿಲ್ಲವೆಂದರೆ—) ಶ್ರುತ್ಯಾದಿಗಳಲ್ಲಿ ಸ್ಥೂಲವಾದ ಜೀವಭೋ ವಾದ ದುಷ್ಕರ್ಮದ ಫಲವನ್ನು ಶ್ರೀಹರಿಯು ಭೋಗಿಸುವುದಿಲ್ಲವೆಂದು ಹೇಳಿದ್ದು. ಶ್ರೀಪರಮಾತ್ಮ ಸೂಕ್ಷ್ಮವಾದ ಶುಭಭೋಗವಿದೆ (೩) (ಅದು ಹೇಗೆಂದರೆ-) ಶ್ರುತಿಯು ಹೇಳುತ್ತದೆ. ಗಂಧ ಮೊದಲಾ ಗಳಲ್ಲಿ ಜೀವನ ಇಂದ್ರಿಯಕ್ಕೆ ಗೋಚರವಾಗದಿರುವ ಯಾವುದು ಸಾರಭಾವವಿದೆಯೋ, ಅವರ ಭೋಗವ ಶ್ರೀಪರಮಾತ್ಮನಿಗೆ ಹೇಳುತ್ತದೆ. ಶ್ರೀಪರಮಾತ್ಮನು ಈ ಶರೀರದಲ್ಲಿರತಕ್ಕ ಜೀವನಿಗಿಂತ ಅತಿಶಯ ವಿಲಕ್ಷಣವಾದ ಭೋಗವುಳ್ಳವನೇ ಆಗುತ್ತಾನೆ. (೪) (ಇಲ್ಲಿ ಹೇಳಿದ ಸೂಕ್ಷ್ಮಭೋಗವು ಜೀವನಿಗೆ ಎ ಹೇಳಕೂಡದು. ಏಕೆಂದರೆ ಜೀವನಿಗಿಂತ ಜೀವನು ವಿಲಕ್ಷಣ ಆಹಾರವುಳ್ಳವನೆಂಬುವುದು ಕೂಡ ದಷ್ಟೆ. ಶರೀರದಲ್ಲಿರತಕ್ಕ ಜೀವನದ್ವಿತೀಯಂತ ಎಂದು ಸೂಕ್ಷ್ಮಭೋಕ್ತನಾದ ಪರಮಾತ್ಮನಿಗೆ ಭೇದ ಹೇಳಿದ್ದಾರೆ. ಸ್ವಪ್ನ ಸುಷುಪ್ತ್ಯಾದಿಗಳು ಶರೀರದಲ್ಲಿರತಕ್ಕ ಜೀವನಲ್ಲಿಯೇ. ಜಾಗ್ರದಾದ್ಯವಸ್ಥೆಗ ಶರೀರದಲ್ಲಿರತಕ್ಕ ಜೀವನು ಮೂರು ಪ್ರಕಾರ ಭಿನ್ನನಾಗಿರುತ್ತಾನೆ. ಎಂದು ಗಾರುಡದಲ್ಲಿದೆ. (೫) ಶಾರೀರಾತ್ಮನು ಶ್ರೀಪರಮಾತ್ಮನಲ್ಲವೆಂದು ತೋರಿಸುವುದಕ್ಕಾಗಿ ಅಸ್ಮಾತ್ ಎಂದು ವಿಶೇಷಣವು. (ಅ ಜೀವನನ್ನು ಮಾತ್ರ ತೆಗೆದುಕೊಳ್ಳಬೇಕೆಂದು ಸೂಚಿಸುವುದಕ್ಕಾಗಿ ಅಸ್ಮಾತ್ ಎಂದು ವಿಶೇಷಣವು)॥

ಟೀ — ಶಾರೀರ ಶಬ್ದದಿಂದ ಶ್ರೀಪರಮಾತ್ಮನನ್ನು ತೆಗೆದುಕೊಳ್ಳಲಿಕ್ಕೇನೇ ಬರುವುದಿಲ್ಲ. ಆದರ ಅಸ್ಮಾತ್ ಎಂಬುವ ವಿಶೇಷಣವು ಏತಕ್ಕೆಂದರೆ—

ಭಾ ॥ (೧) ಶಾರೀರೌ ತಾವುಭೌ ಜ್ಞೇಯೌ ಜೀವಶ್ಚೇಶ್ವರಸಂಜ್ಞಿತಃ । ಅನಾದಿಬಂಧನಸ್ತ್ವೇ
ಕೋ ನಿತ್ಯಮುಕ್ತಸ್ತಥಾ ಪರ ಇತಿ ವಚನಾನ್ನಾರದೀಯೇ ॥ (೨) ಭೇದಶ್ರುತೇ

ಸತಿ ಗತ್ಯಂತರೇ ಪುರುಷಭೇದ ಏವ ಕಲ್ಪ್ಯೋ ನ ತ್ವವಸ್ಥಾಭೇದಃ ॥ (೩) ಆಹ ಚ । ಪ್ರವಿವಿಕ್ತಭುಗ್ಯತೋ ಹ್ಯಸ್ಮಾಚ್ಛಾರೀರಾತ್ಪುರುಷೋತ್ತಮಃ । ಅತೋಽಭೋಕ್ತಾ ಚ ಭೋಕ್ತಾ ಚ ಸ್ಥೂಲಾಭೋಗಾತ್ಸ ಏವ ತ್ವಿತಿ ಗೀತಾಕಲ್ಪೇ ॥ (೪) ನತ್ವಹಂ ತೇಷ್ವಿತಿ ತದನಾಧಾರತ್ವಮುಚ್ಯತೇ । ಉಕ್ತಂ ಚ । ತದಾಶ್ರಿತಂ ಜಗತ್ಸರ್ವಂ ನಾಸೌ ಕುತ್ರ-ಚಿದಾಶ್ರಿತ ಇತಿ ಗೀತಾಕಲ್ಪೇ ॥ ೪ ॥ ॥ ೭—೧೨ ॥

ಅ ॥ (೧) ಜೀವ ಶ್ರೀಪರಮಾತ್ಮ ಇಬ್ಬರೂ ಶರೀರದಲ್ಲಿರತಕ್ಕವರೆಂದು ತಿಳಿಯಬೇಕು. ಅದರಲ್ಲಿ ಜೀವನು ಅನಾದಿಕಾಲದಿಂದಲೂ ಸಂಸಾರಬಂಧವಿರುವವನು. ಶ್ರೀಪರಮಾತ್ಮನು ನಿತ್ಯಮುಕ್ತನು. (ಯಾವಾಗಲೂ ಸಂಸಾರಸಂಬಂಧವೇ ಇಲ್ಲದವನು.) ಎಂದು ನಾರದೀಯಪುರಾಣದಲ್ಲಿದೆ. (೨) (ಪ್ರವಿವಿಕ್ತಾಹಾರತರಃ ಎಂಬುವ ಶಬ್ದದಿಂದ ಅವಸ್ಥಾಭೇದದಿಂದ ಜೀವನನ್ನೇ ತೆಗೆದುಕೊಳ್ಳಲಿಕ್ಕೆ ಬಂದರೂ ಆ ವಾಕ್ಯದಿಂದ ಈಶ್ವರನನ್ನೇ ತೆಗೆದುಕೊಳ್ಳುವುದು ಏತಕ್ಕೆ. ಜೀವನನ್ನೇ ಏಕೆ ತೆಗೆದುಕೊಳ್ಳಬಾರದೆಂದರೆ-) ಅಸ್ಮಾಚ್ಛಾರೀರಾದಾತ್ಮನಃ ಎಂದು ಪರಮಾತ್ಮನಿಗೆ ಜೀವನಿಂದ ಭೇದವನ್ನು ಹೇಳುವ ಶಬ್ದವಿದೆ. ಭೇದಶ್ರುತಿಗೆ ಸ್ವಾಭಾವಿಕ ಭೇದರೂಪವಾದ ಅರ್ಥವು ಕೂಡುತ್ತಿರುವಾಗ ಜೀವಪರಮಾತ್ಮರೂಪ ಪುರುಷ ಭೇದವನ್ನೇ ಹೇಳಬೇಕು. ಅವಸ್ಥಾಭೇದವನ್ನೇ ಇಟ್ಟುಕೊಂಡು ಈ ಜೀವನೇ ಎರಡು ಶಬ್ದಗಳಿಂದ ಹೇಳಲ್ಪಡುತ್ತಾನೆಂದು ಹೇಳಕೂಡದು. (೩) ಈ ಶರೀರದಲ್ಲಿರತಕ್ಕ ಜೀವನಿಗಿಂತ ಶ್ರೀಪರಮಾತ್ಮನು ಸಾರಭಾಗವನ್ನುಣ್ಣುವವನು. ಅದಕಾರಣ ಶ್ರೀಪರಮಾತ್ಮನೇ ಸ್ಥೂಲಪದಾರ್ಥಗಳನ್ನುಣ್ಣದಿರುವುದರಿಂದ ಅಭೋಕ್ತನೆಂಮೂ ಸಾರಪದಾರ್ಥವನ್ನುಣ್ಣುವುದರಿಂದ ಭೋಕ್ತಾ ಎಂದೂ ಅನಿಸುತ್ತಾನೆ, ಎಂದು ಗೀತಾಕಲ್ಪದಲ್ಲಿ ಹೇಳಿದೆ. (೪) (ಸರ್ವಭೂತಸ್ಥಮಾತ್ಮಾನಂ ಎಂದು ಹೇಳಿದ್ದರಿಂದ ನ ತ್ವಹಂ ತೇಷು ಎಂದು ಹೇಳಿದ್ದು ಹೇಗೆ ಕೂಡುತ್ತದೆ, ಎಂದರೆ—) ನ ತ್ವಹಂ ತೇಷು ಎಂದು ಹೇಳಿದ್ದರಿಂದ ಆ ಜೀವರನ್ನು ಪಜೀವಿಸಿಕೊಂಡು ಶ್ರೀಪರಮಾತ್ಮನು ಇರುವುದಿಲ್ಲವೆಂದುಕ್ತವಾಯಿತು. ಈ ಪ್ರಮೇಯವು ಹೇಳಲ್ಪಟ್ಟಿದೆ. ಸಂಪೂರ್ಣ ಜಗತ್ತೂ ಶ್ರೀಪರಮಾತ್ಮನನ್ನೇ ಆಶ್ರಯಿಸಿಕೊಂಡಿದೆ. ಶ್ರೀಪರಮಾತ್ಮನು ತನ್ನ ಉಪಜೀವನಕ್ಕೆ ಎಲ್ಲಿಯೂ ಆಶ್ರಯಿಸಿಕೊಂಡಿಲ್ಲ. ಎಂದು ಗೀತಾಕಲ್ಪದಲ್ಲಿ ಹೇಳಿದೆ. ॥ ೪ ॥ ॥ ೭-೧೨ ॥

ಪೀ—ಶ್ರೀ ಪರಮಾತ್ಮನು ರಸ ಮೊದಲಾದ ಧರ್ಮಗಳಿಗೆ ಮಾತ್ರ ಪ್ರೇರಕನೆಂದಲ್ಲ. ಮತ್ತೆ ಜಲಾದಿಧರ್ಮಗಳಿಗೆಲ್ಲದಕ್ಕೂ ಪ್ರೇರಕನೆನ್ನುತ್ತಾರೆ -

ತಾ ॥ ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ । ತತ ಏವ ನ ಚಾನ್ಯ-
ಸ್ಮಾತ್ತದಾಯತ್ತಮಿದಂ ನ ಸಃ । ಅನ್ಯಾಯತ್ತಃ ॥ ೧೨ ॥

ಅ ॥ ಸಾತ್ತ್ವಿಕ, ರಾಜಸ, ತಾಮಸ ಪದಾರ್ಥಗಳೆಲ್ಲವೂ ಶ್ರೀ ಪರಮಾತ್ಮನಿಂದಲೇ ಹುಟ್ಟಿದವುಗಳು. ಇತರರಿಂದ ಹುಟ್ಟಿದವುಗಳಲ್ಲ. ಶ್ರೀ ಪರಮಾತ್ಮನ ಅಧೀನಗಳೇ. ಆ ಶ್ರೀ ಪರಮಾತ್ಮನು ಮತ್ತೊಬ್ಬನ ಅಧೀನದಲ್ಲಿಲ್ಲದಿರುವವನು. ॥ ೧೨ ॥

ಗೀ ॥ ತ್ರಿಭಿರ್ಗುಣಮಯೈರ್ಭಾವೈರೇಭಿಃ ಸರ್ವಮಿದಂ ಜಗತ್ ।
ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಂ ॥ ೧೩ ॥

ಅ ॥ ತ್ರಿಭಿಃ ಗುಣಮಯೈಃ = ಸತ್ತ್ವ ರಜಸ್ತಮಸ್ಸುಗಳೆಂಬ ಮೂರು ಗುಣಸ್ವರೂಪಗಳಾದ, ಏಭಿಃ ಭಾವೈಃ = ಈ ಪದಾರ್ಥಗಳಿಂದ, ತ್ರಿಗುಣ ತ್ರಿಗುಣಕಾರ್ಯರೂಪ ಪದಾರ್ಥಗಳಿಂದ, ಅಥವಾ ಸಾತ್ವಿಕಾದಿ ರೂಪಗಳಾದ ಪದಾರ್ಥಗಳಿಂದ, ಇದಂ ಸರ್ವಂ ಜಗತ್ = ಜ್ಞಾನಿಗಳು ಹೊರತು ಬೇರೆಯಾದ ಎಲ್ಲಾ ಅಜ್ಞಾನಿಸಮೂಹವು, ಮೋಹಿತಂ = ಮೋಹವನ್ನು ಹೊಂದಿದ್ದಾಗಿ; ಏಭ್ಯಃ = ಸಾತ್ವಿಕಾದಿ ಗುಣ–ಗುಣ ವಿಕಾರಗಳ ದೆಸೆಯಿಂದ, ಪರಂ = ಬೇರೆಯಾದ, ಅವ್ಯಯಂ = ದೇಹದಿಂದಲೂ ನಾಶವಿಲ್ಲದಿರುವ, ಮಾಂ = ನನ್ನನ್ನು, ನಾಭಿಜಾನಾತಿ = ತಿಳಿಯುವುದಿಲ್ಲ. ವಿಪರೀತವಾಗಿಯೇ ತಿಳಿಯುತ್ತದೆ. ॥ ೧೩ ॥

ಟೀ—ವಿಜ್ಞಾನವನ್ನು ಹೇಳುತ್ತೇನೆಂದು ಪ್ರಾರಂಭಿಸಿ ತ್ರಿಭಿಃ ಇತ್ಯಾದಿಗಳನ್ನು ಹೇಳಲು ಕಾರಣ ವೇನೆಂದರೆ—

**ಭಾ ॥ (೧) ತರ್ಹಿ ಕಥಮೇವಂ ನ ಜ್ಞಾಯಸ ಇತ್ಯತ ಆಹ । ತ್ರಿಭಿರಿತಿ ॥ (೨) ತಾದಾತ್ಮ್ಯಾರ್ಥೇ ಮಯಟ್ । ತಚ್ಚೋಕ್ತಂ । ತಾದಾತ್ಮ್ಯೇರ್ಥೇ ವಿಕಾರಾರ್ಥೇ ಪ್ರಾಚುರ್ಯಾರ್ಥೇ ಮಯಟ್ಸ್ಮೃತೇತಿ ॥ (೩) ನ ಹಿ ಗುಣಕಾರ್ಯಭೂತಾ ಮಾಯಾ । ಗುಣಮಯೀತಿ ಚ ವಕ್ಷ್ಯತಿ ॥ (೪) ಸಿದ್ಧಂ ಚ ಕಾರ್ಯಸ್ಯಾಪಿ ತಾದಾತ್ಮ್ಯಂ । ತಾದಾತ್ಮ್ಯಂ ಕಾರ್ಯಧರ್ಮಾದೇಸ್ಸಂಯೋಗೋ ಭಿನ್ನವಸ್ತುನೋರಿತಿ ವ್ಯಾಸಯೋಗೇ ॥ ೧ ॥**

ಅ ॥ (೧) ಹಿಂದೆ ಹೇಳಿದ ಅಲೌಕಿಕ ಮಹಿಮೆಯುಳ್ಳವನಾದರೆ ನಿನ್ನನ್ನೇ ಎಲ್ಲಾ ಜನರೂ ಸತ್ತ್ವಾದಿ ಗುಣರಹಿತನನ್ನಾಗಿಯೂ, ಅಲೌಕಿಕ ಮಾಹಾತ್ಮ್ಯವುಳ್ಳವನನ್ನಾಗಿಯೂ ಏಕೆ ತಿಳಿಯುವುದಿಲ್ಲ? ಎಂದರೆ ತ್ರಿಭಿಃ ಎಂಬುವ ಶ್ಲೋಕದಿಂದ ಸಮಾಧಾನಹೇಳುತ್ತಾರೆ. (೨) ಗುಣಮಯೈಃ ಎಂಬುವಲ್ಲಿದ್ದ ಮಯಟ್ ಪ್ರತ್ಯಯವು ತಾದಾತ್ಮ್ಯವೆಂಬುವ ಅರ್ಥದಲ್ಲಿದೆ. (ಈ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ–) ತಾದಾತ್ಮ್ಯ (ತತ್ಸ್ವರೂಪ)ವೆಂಬುವ ಅರ್ಥದಲ್ಲಿಯೂ, ವಿಕಾರವೆಂಬುವ ಅರ್ಥದಲ್ಲಿಯೂ, ಪ್ರಾಚುರ್ಯವೆಂಬುವ ಅರ್ಥದಲ್ಲಿಯೂ ಹೀಗೆ ಮಯಟ್‌ಪ್ರತ್ಯಯವು ಮೂರು ಅರ್ಥವನ್ನು ಹೇಳುತ್ತದೆ. (೩) ಮಾಯಾಶಬ್ದದಿಂದ ವಾಚ್ಯಳಾದ ದುರ್ಗಾದೇವಿಗೆ ಗುಣವಿಕಾರತ್ವಾದಿಗಳು ಕೂಡಲಾರವು. ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ಎಂದು ದುರ್ಗಾದೇವಿಯು ಸತ್ತ್ವಾದಿಗುಣಗಳಿಗೆ ಅಭಿಮಾನಿನಿಯೆಂದು ಮುಂದಕ್ಕೆ ಹೇಳುವರು. (೪) ಗುಣಗಳಿಂದ ಹುಟ್ಟಿದ ಪದಾರ್ಥಗಳಿಗೆ ಗುಣಗಳಿಂದ ಅಭೇದವು ಸಿದ್ಧವಾಗಿದೆ. (ಆದಕಾರಣ ಶ್ರೀಪರಮಾತ್ಮನಿಗೆ ಗುಣಗಳಿಂದ ಮಾತ್ರ ಉತ್ತಮತ್ವವಲ್ಲ. ಗುಣಕಾರ್ಯಗಳಾದ ಪದಾರ್ಥಗಳಿಂದಲೂ ಉತ್ತಮತ್ವವು ಸಿದ್ಧವಾಯಿತು. (ಕಾರ್ಯಕ್ಕೆ ಕಾರಣದಿಂದ ಅಭೇದವೆಂಬುವ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ–) ಕಾರ್ಯದ್ರವ್ಯಕ್ಕೆ ಉಪಾದಾನಕಾರಣದಿಂದಲೂ ಗುಣ ಕ್ರಿಯಾ ಜಾತಿ ಮೊದಲಾದ ಧರ್ಮಗಳಿಗೆ ಗುಣ್ಯಾದಿ ದ್ರವ್ಯಗಳಿಂದಲೂ ಅಭೇದವಿದೆ. ಘಟಪಟಾದಿರೂಪಗಳಾದ ಪರಸ್ಪರ ಭಿನ್ನವಸ್ತುಗಳಿಗೆ ಸಂಯೋಗಸಂಬಂಧವು. ಅಭೇದವಲ್ಲ ಇತ್ಯಾದಿ ಪ್ರಮೇಯವು ವ್ಯಾಸಯೋಗದಲ್ಲಿದೆ. ॥ ೧ ॥

ಟೀ—ಭಾವಶಬ್ದಕ್ಕೆ ಅನೇಕಾರ್ಥಗಳು ಇದ್ದುದರಿಂದ ಇಲ್ಲಿ ವಿವಕ್ಷಿತವಾದ ಅರ್ಥವನ್ನು ಹೇಳುತ್ತಾರೆ–

**ಭಾ ॥ (೧) ಭಾವೈಃ ಪದಾರ್ಥೈಃ । ಸರ್ವೇ ಭಾವಾ ದೃಶ್ಯಮಾನಾ ಗುಣಮಯಾ ಏವ ಇತಿ ದರ್ಶಯತಿ । ಏಭಿರಿತಿ ॥ (೨) ಜ್ಞಾನಿವ್ಯಾವೃತ್ತ್ಯರ್ಥಮಿದಮಿತಿ ।ಗುಣಮಯಾದೇಹಾದಿಭಿಃ ದೃಷ್ಟ್ವೇಶ್ವರದೇಹೋಽಪಿ ತಾದೃಶ ಇತಿ ಮಾಯಾಮೋಹಿತ ಇತ್ಯರ್ಥಃ । (೩) ಜಗಾದ ಚ ವ್ಯಾಸಯೋಗೇ । ಗೌಣಾನ್ ಬ್ರಹ್ಮಾದಿದೇಹಾದೀನ್ ದೃಷ್ಟ್ವಾ-**

ವಿಷ್ಣೋರಪೀದೃಶಃ । ದೇಹಾದಿರಿತಿ ಮನ್ವಾನೋ ಮೋಹಿತೋऽಜ್ಞೋ ಜನೋ
ಭೃಶಮಿತಿ ॥ (೪) ಏಭ್ಯೋ ಗುಣಮಯೇಭ್ಯಃ । (1) ಗುಣೇಭ್ಯಶ್ಚ ಪರಮಿತಿ ವಕ್ಷ್ಯ-
ಮಾಣತ್ವಾತ್ । (2) ಕೇವಲೋ ನಿರ್ಗುಣಶ್ಚೇತ್ಯಾದಿಶ್ರುತಿಭ್ಯಶ್ಚ ।(3)ತ್ರೈಗುಣ್ಯವರ್ಜಿ
ತಮಿತಿ ಚೋಕ್ತಂ ॥ ೨ ॥ ॥ ೧೩ ॥

ಅ ॥ (೧) ಭಾವೈಃ=ಪದಾರ್ಥಗಳಿಂದ. (ಏಭಿಃ ಎಂದು ಹೇಳಿದ್ದರಿಂದ ಎದುರು ಇರುವ ವಸ್ತುಗಳನ್ನೇ ತೆಗೆದುಕೊಳ್ಳಬೇಕಾದ ಕಾರಣ ಸರ್ವ ಎಂಬುವ ಅರ್ಥವು ಸಿದ್ಧಿಸುವುದಿಲ್ಲ ಎಂದರೆ-) ಪ್ರಮಾಣಸಿದ್ಧಗಳಾದ ಎಲ್ಲಾ ವಸ್ತುಗಳೂ ಗುಣಮಯಗಳೇ ಎಂದು ಏಭಿಃ ಎಂಬುದರಿಂದ ತೋರಿಸುತ್ತಾರೆ (೨) (ಇದಂ ಎಂದು ಅಜ್ಞಾನಿಗಳ ಸಮುದಾಯವನ್ನೇ ಹೇಳಿದ್ದರಿಂದ ಜ್ಞಾನಿಗಳಿಗೆ ಅಜ್ಞಾನವಿಲ್ಲವೆಂದು ಸಿದ್ಧವಾಯಿತು. ಶ್ರೀಪರಮಾತ್ಮನು ಸತ್ವಾದಿಗುಣಾತ್ಮಕ ದೇಹವುಳ್ಳವನು, ಎಂಬುವ ಭ್ರಮೆಗೆ ಗುಣಾತ್ಮಕಗಳಾದ ಪದಾರ್ಥಗಳು ಹೇಗೆ ಕಾರಣಗಳೆಂದರೆ –)ಲೋಕದಲ್ಲಿ ಸತ್ವರಜಸ್ತಮೋಗುಣಾತ್ಮಕಗಳಾದ ಚೈತ್ರಾದಿಗಳ ದೇಹಾದಿಗಳನ್ನು ನೋಡಿ, ಶ್ರೀಪರಮಾತ್ಮನ ಶರೀರವೂ ಗುಣಾತ್ಮಕವು ದೇಹವಾದುದರಿಂದ ಗುಣಮಯವಾದ ಚೈತ್ರಾದಿಗಳ ಶರೀರದಂತೆ, ಎಂಬುವ ಅನುಮಾನದಿಂದ ತತ್ವಜ್ಞಾನವಿಲ್ಲದಿರುವ ಅಜ್ಞಾನಿ ಜನರು ಮೋಹಿತರಾಗುತ್ತಾರೆ. (೩) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ –)ಚತುರ್ಮುಖ ಬ್ರಹ್ಮನೇ ಮೊದಲಾದ ದೇವತೆಗಳ ಸತ್ವ ಮೊದಲಾದ ಗುಣಾತ್ಮಕಗಳಾದ ದೇಹ ಇಂದ್ರಿಯಾದಿಗಳನ್ನು ನೋಡಿ ಶ್ರೀಪರಮಾತ್ಮನ ಶರೀರವೂ ಇಂತಹದೆಂದು ತಿಳಿಯುವ ಅಜ್ಞಜನರು ಚೆನ್ನಾಗಿ ಮೋಹಿತರಾಗುತ್ತಾರೆ. (ಪರಮಾತ್ಮನು ಅಪ್ರಾಕೃತ ದಿವ್ಯಜ್ಞಾನಾನಂದಾತ್ಮಕ ಶರೀರವುಳ್ಳವನೆಂಬುವ ತತ್ವಜ್ಞಾನವಿಲ್ಲದವರಾಗಿರುತ್ತಾರೆ,) ಎಂದು ವ್ಯಾಸಯೋಗವೆಂಬುವ ಗ್ರಂಥದಲ್ಲಿ ಹೇಳಿದೆ (೪) ಏಭ್ಯಃ=ಗುಣ, ಗುಣವಿಕಾರಗಳಾದ ಪದಾರ್ಥಗಳದ್ವೆಶೆಯಿಂದ (1) ಗುಣೇಭ್ಯಃ=ಸತ್ವಾದಿಗುಣಗಳದಶೆಯಿಂದ. ಪರಂ ವ್ಯತಿರಿಕ್ತನು, ಎಂದು ಮುಂದೆ ಹೇಳುವರು. (2) ಜಡಸಂಪರ್ಕವಿಲ್ಲದವನು. ಜ್ಞಾನಾನಂದಸ್ವರೂಪನು, ಸತ್ವರಜಸ್ತಮೋಗುಣರಹಿತನು, ಇದು ಮೊದಲಾದ ವೇದಗಳಿಂದಲೂ (3) ಸತ್ವಾದಿ ಮೂರು ಗುಣಗಳಿಂದ ವಿರಹಿತನೆಂಬುವ ಭಾರತವಾಕ್ಯದಿಂದಲೂ ಪರಮಾತ್ಮನು ಗುಣಾತ್ಮಕ ಶರೀರವಿಲ್ಲದವನೆಂದು ಸಿದ್ಧವಾಗುವುದು ॥೨॥ ॥೧೩॥

ಪೀ – ಶ್ರೀಪರಮಾತ್ಮನು ಅಪ್ರಾಕೃತ ದಿವ್ಯಶರೀರವುಳ್ಳವನಾಗಿರುವುದರಿಂದ ಜ್ಞಾನವು ಬಾರದಿರಲಿಕ್ಕೆ ನಮ್ಮಂತೆ ಪ್ರಾಕೃತಶರೀರವುಳ್ಳವನೆಂಬ ವಿಪರೀತ ಜ್ಞಾನಕ್ಕೆ, ಗುಣಗಳಿಗೆ ಅಭಿಮಾನಿನಿಯಾದ ದುರ್ಗಾದೇವಿಯೇ ಮುಖ್ಯ ಕಾರಣಳು ಎಂದು ಹಿಂದೆ ಹೇಳಿದ ದೇಹತ್ವಾತ್=ದೇಹವಾದುದರಿಂದ. ಎಂಬುವ ಅನುಮಾನವು ನಿಮಿತ್ತಮಾತ್ರವು ಎನ್ನುತ್ತಾರೆ–

ಗೀ ॥ ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।
ಮಾಮೇವ ಯೇ ಪ್ರಪದ್ಯಂತೇ ಮಾಯಾಮೇತಾಂ ತರಂತಿ ತೇ ॥ ೧೪ ॥

ಅ ॥ ದೈವೀ=ಸೃಷ್ಟ್ಯಾದಿರೂಪ ಕ್ರೀಡಾದಿಗುಣಗಳಿಂದ ವಿಶಿಷ್ಟನಾದ ಶ್ರೀಪರಮಾತ್ಮನ ಸಂಬಂಧಿನಿಯಾದ, ಮಮ=ನನ್ನವಳಾದ. (ಅಂದರೆ ನನಗೆ ಅತ್ಯಂತ ಪ್ರಿಯಳಾದ) ಏಷಾ=ಪ್ರಮಾಣಸಿದ್ಧಳಾದ, ಗುಣಮಯೀ=ಸತ್ವಾದಿಗುಣಗಳಿಗೆ ಅಭಿಮಾನಿನಿಯಾದ, ಮಾಯಾ=ದುರ್ಗಾದೇವಿಯು, (ಹಿಂದೆ ಹೇಳಿದ ವಿಪರೀತ ಜ್ಞಾನವನ್ನು ಹೊಂದಿಸಿಕೊಡುವವಳು) ದುರತ್ಯಯಾ=ದಾಟಲಶಕ್ಯಳು. (ಅಂದರೆ ಅವಳು ಕೊಟ್ಟ ಮೋಹವನ್ನು ಯಾರಿಂಗೂ ಅತಿಕ್ರಮಿಸಲು ಸಾಧ್ಯವಿಲ್ಲ.) (ವಿನಾಚ ಸ್ವ... ...ತಿ ಲಯ

ಮೊದಲಾದ ಗುಣಗಳಿಂದ ಕೂಡಿರುವ ಅತಿಸಮರ್ಥನಾದ ನನಗೆ ದುರ್ಗಾದೇವಿಯು ಅತ್ಯಂತ ಪ್ರಿಯಳಾಗಿರುವುದರಿಂದ ಅವರಿಗೂ ಅಂತಹ ಅಪರಿಮಿತ ಶಕ್ತಿಯಿದೆ, ಎಂದು ತಿಳಿಸಿಕೊಡುವುದಕ್ಕಾಗಿ ದೈವೀ ಎಂದು ಹೇಳಿದ್ದು.) (ಮೂರು ಗುಣಗಳ ಮಧ್ಯದಲ್ಲಿ ತಮೋಗುಣದಿಂದಲೇ ಇಂತಹ ಮೋಹವನ್ನು ಹುಟ್ಟಿಸುವುದೆಂದು ತಿಳಿಸುವುದಕ್ಕಾಗಿ **ಗುಣಮಯೀ** ಎಂದು ಹೇಳಿದ್ದು.) ಯೇ = ಯಾರು, ಮಾಮೇವ = ನನ್ನನ್ನೇ, ಪ್ರಪದ್ಯಂತೇ = ಶರಣುಹೊಂದುತ್ತಾರೋ, ತೇ = ಅವರು, ಏತಾಂ ಮಾಯಾಂ = ಈ ದುರ್ಗಾದೇವಿಯಿಂದುಂಟಾದ ಮೋಹವನ್ನು, ತರಂತಿ = ದಾಟುತ್ತಾರೆ ॥ ೧೪ ॥

**ಭಾ ॥ (೧) ಕಥಮನಾದಿಕಾಲೇ ಮೋಹಾನತ್ಯಯೋ ಬಹೂನಾಮಿತ್ಯತ ಆಹ । ದೈವೀತಿ ॥ (೨) ಅಯಮಾಶಯಃ । ಮಾಯಾ ಹ್ಯೇಷಾ ಮೋಹಿಕಾ । ಸಾ ಚ ಸೃಷ್ಟ್ಯಾದಿಕ್ರೀಡಾದಿಮದ್ದೇವಸಂಬಂಧಿತ್ವಾದತಿಶಕ್ತೇರ್ದುರತ್ಯಯಾ ॥ (೩) ತಥಾ ಹಿ ದೇವಶಬ್ದಾರ್ಥಂ ಪಠಂತಿ । ದಿವು ಕ್ರೀಡಾವಿಜಿಗೀಷಾವ್ಯವಹಾರದ್ಯುತಿಸ್ತುತಿಮೋದಮದಸ್ವಪ್ನಕಾಂತಿಗತಿಷ್ವಿತಿ ॥ (೪) ಕಥಂ ದೈವೀ ಮದೀಯತ್ವಾತ್ ಅಹಂ ದೇವ ಇತಿ ॥ (೫) ಅಬ್ರವೀಚ್ಚ । ಶ್ರೀರ್ಭೂರ್ದುರ್ಗೇತಿ ಯಾ ಭಿನ್ನಾ ಮಹಾಮಾಯಾ ತು ವೈಷ್ಣವೀ । ತಚ್ಛಕ್ತ್ಯನಂತಾಂಶಹೀನಾಽಥಾಪಿ ತಸ್ಯಾಶ್ರಯಾತ್ಪ್ರಭೋಃ । ಅನಂತಬ್ರಹ್ಮರುದ್ರಾದ್ಯೈರ್ದೇನಾರ್ನಾಸ್ಯಾಃ ಶಕ್ತಿಕಲಾಽಪಿ ಹಿ । ತೇಷಾಂ ದುರತ್ಯಯಾಽಪ್ಯೇಷಾ ವಿನಾ ವಿಷ್ಣುಪ್ರಸಾದತ ಇತಿ ವ್ಯಾಸಯೋಗೇ ॥ ೧ ॥**

ಅ ॥ (೧) (ಶ್ರೀಪರಮಾತ್ಮನಿಗೆ ಸತ್ವರಜಸ್ತಮೋರೂಪವಾದ ಗುಣಾತ್ಮಕ ಶರೀರವು ಇದೆ, ಎಂಬುವ ಮೋಹವು ಬಹುಮಂದಿಗೂ ಅನಾದಿಕಾಲವನ್ನಾರಂಭಿಸಿ ಇರಲು ಕಾರಣವೇನು? ಎಂದರೆ- ದೈವೀ ಎಂಬುವ ಶ್ಲೋಕದಿಂದ ಸಮಾಧಾನ ಹೇಳುತ್ತಾರೆ.(೨) ಸತ್ವಾದಿಗುಣಗಳಿಗೆ ಅಭಿಮಾನಿನಿಯಾದ ದುರ್ಗಾದೇವಿಯು ಮುಖ್ಯವಾಗಿ ತನ್ನ ಅಧೀನವಾದ ತಮೋಗುಣದಿಂದಲೇ ಇಂತಹ ಮೋಹವನ್ನು ಹುಟ್ಟಿಸುತ್ತಾಳೆ. (ಅನುಮಾನವು ಮೋಹಹೇತುವೆಂದು ಹೇಳಿದ್ದು ನಿಮಿತ್ತಮಾತ್ರವು) ಆ ದುರ್ಗಾದೇವಿಯು ಸೃಷ್ಟಿ ಸ್ಥಿತಿ ಮೊದಲಾದ ಕ್ರೀಡಾ ವಿಜಿಗೀಷಾದಿಗುಣಗಳುಳ್ಳ ಶ್ರೀಪರಮಾತ್ಮನಿಗೆ ಪರಮಪ್ರಿಯಳಾಗಿರುವುದರಿಂದ ಅಪರಿಮಿತ ಶಕ್ತಿಯುರುವವಳಾದ ಕಾರಣ ಆ ದುರ್ಗಾದೇವಿಯು ಕೊಟ್ಟ ಮೋಹವನ್ನು ಯಾರಿಗೂ ಅತಿಕ್ರಮಿಸಲು ಸಾಧ್ಯವಿಲ್ಲ. (೩) ಅದನ್ನೇ ಹೇಳುತ್ತಾರೆ. ದಿವ್ ಧಾತುವು ಕ್ರೀಡಾ, ವಿಶೇಷತಃ ಗೆಲ್ಲಲಿಚ್ಛೆ ವ್ಯವಹಾರ ಪ್ರಕಾಶ, ಸ್ತುತಿ, ಮದ, ಸಂತೋಷ, ಸ್ವಪ್ನ, ಕಾಂತಿ, ಗತಿ ಈ ಅರ್ಥಗಳಲ್ಲಿದ್ದ ಕಾರಣ ದೇವಶಬ್ದವು ಕ್ರೀಡಾದ್ಯನೇಕ ಗುಣಗಳುಳ್ಳ ಪರಮಾತ್ಮನನ್ನು ತಿಳಿಸುತ್ತದೆ. ಆದಕಾರಣ ಶ್ರೀಪರಮಾತ್ಮನೇ ಕ್ರೀಡಾದಿಗುಣವಿಶಿಷ್ಟನಾದ ಪ್ರಯುಕ್ತ ದೇವ ಎನಿಸುತ್ತಾನೆ. ಅಂತಹ ಶ್ರೀಪರಮಾತ್ಮನಿಗೆ ಅತ್ಯಂತ ಪ್ರಿಯಪತ್ನಿ ಯಾಗಿರುವುದರಿಂದ ಲಕ್ಷ್ಮೀದೇವಿಯು ದೇವೀ ಎನಿಸುತ್ತಾಳೆ. (೪) ಮಹಾಮಾಯಾ ಎನಿಸಿಕೊಂಡ ಶ್ರೀವಿಷ್ಣುವಿನ ಪತ್ನಿಯಾದ ಲಕ್ಷ್ಮೀದೇವಿಯು ಶ್ರೀ, ಭೂ, ದುರ್ಗಾ, ಎಂದು ಮೂರು ರೂಪವುಳ್ಳವಳು. ಅವಳು ಶ್ರೀಪರಮಾತ್ಮನ ಶಕ್ತಿಗಿಂತ ಅನಂತಾಂಶಗಳಿಂದ ಕಡಿಮೆಯಾದವಳು. ಆದರೂ ಸರ್ವಸಮರ್ಥನಾದ ಶ್ರೀಪರಮಾತ್ಮನ ಆಶ್ರಯದಿಂದ ಶ್ರೀ ಲಕ್ಷ್ಮೀದೇವಿಯ ಶಕ್ತಿಗಳಲ್ಲಿ ಏಕದೇಶವೂ ಕೂಡ ಶೇಷ ಬ್ರಹ್ಮ ರುದ್ರಾದಿಗಳಿಗೆ ಇಲ್ಲ. ಶ್ರೀಪರಮಾತ್ಮನ ಅನುಗ್ರಹವಿಲ್ಲದೆ ಈ ಮಾಯೆಯೆನಿಸಿದ ದುರ್ಗಾದೇವಿಯನ್ನು ಬ್ರಹ್ಮರುದ್ರಾದಿಗಳಿಗೆ ಅತಿಕ್ರಮಿಸಲು ಸಾಧ್ಯವೇ ಇಲ್ಲ, ಎಂದು ವ್ಯಾಸಯೋಗ

ವೆಂಬುವ ಗ್ರಂಥದಲ್ಲಿ ಹೇಳಿರುವರು. (ಶ್ರೀಪರಮಾತ್ಮನ ಅನುಗ್ರಹದಿಂದ ದುರ್ಗೆಯು ಕೊಟ್ಟ ಭ್ರಮೆಯನ್ನು ಕಳೆದುಕೊಂಡು ಭಗವತ್ತತ್ವಜ್ಞಾನವನ್ನು ಸಂಪಾದಿಸುತ್ತಾರೆ) ॥ ೧ ॥

ಭಾ ॥ (೧) ತರ್ಹಿ ನ ಕಥಂಚಿದತ್ಯೇತುಂ ಶಕ್ಯತ ಇತ್ಯತ ಆಹ । ಮಾಮೇವೇತಿ । ಅನ್ಯತ್
ಸರ್ವಂ ಪರಿತ್ಯಜ್ಯ ಮಾಮೇವ ಯೇ ಪ್ರಪದ್ಯಂತೇ । ಗುರ್ವಾದಿವಂದನಂ ಚ ಮ-
ಯ್ಯೇವ ಸಮರ್ಪಯಂತಿ । ಸ ಏವ ಚ ತತ್ರ ಸ್ಥಿತ್ವಾ ಗುರ್ವಾದಿರ್ಭವತೀತ್ಯಾದಿ
ಪಶ್ಯಂತಿ ॥ (೨) ಆಹ ಚ ನಾರದೀಯೇ । ಮತ್ಸಂಪತ್ತ್ಯಾ ತು ಗುರ್ವಾದೀನ್ಭಜಂತೇ
ಮಧ್ಯಮಾ ನರಾಃ । ಮದುಪಾಧಿತಯಾ ತಾಂಶ್ಚ ಸರ್ವಭೂತಾನಿ ಚೋತ್ತಮಾ ಇತಿ॥
(೩) ಆಚಾರ್ಯಚೈತ್ಯವಪುಷಾ ಸ್ವಗತಿಂ ವ್ಯನಂಕ್ಷೀತಿ ಚ ॥ ೨ ॥ ॥ ೧೪ ॥

ಅ ॥(೧) ಹಾಗಾದರೆ ಆ ಭ್ರಮೆಯನ್ನು ಎಷ್ಟು ಪ್ರಯತ್ನ ಪಟ್ಟರೂ ಅತಿಕ್ರಮಿಸಲು ಸಾಧ್ಯವಿಲ್ಲವೋ ಎಂದರೆ ಮಾಮೇವ ಯೇ ಎಂದು ಹೇಳಿರುವರು ಬ್ರಹ್ಮ ರುದ್ರ ಮೊದಲಾದ ಎಲ್ಲಾ ಜಗತ್ತನ್ನು ಬಿಟ್ಟು (ಅಂದರೆ ಸರ್ವೋತ್ತಮತ್ವ ಬುದ್ಧಿಯಿಂದ ಅವರನ್ನು ಭಜಿಸದೆ)ನನ್ನನ್ನೇ ಯಾರು ಶರಣು ಹೊಂದುತ್ತಾರೋ ಗುರುಗಳು ತಂದೆ ತಾಯಿ ಮೊದಲಾದವರ ನಮಸ್ಕಾರವನ್ನು ನನ್ನಲ್ಲಿಯೇ ಸಮರ್ಪಿಸುತ್ತಾರೋ. (ಅಂದರೆ ಗುರು ತಂದೆ ತಾಯಿ ಮೊದಲಾದವರು ಭಗವದ್ಭಕ್ತರೇ ಇದು ಮೊದಲಾದ ಬುದ್ಧಿಯಿಂದ ಅವರಿಗೆ ನಮಸ್ಕಾರಾದಿಗಳನ್ನು ಮಾಡುತ್ತಾರೋ.) (ಇದು ಮಧ್ಯಮ ಭಕ್ತರ ವಿಷಯಕವು.) ಆ ಶ್ರೀಪರಮಾತ್ಮನೇ ಗುರು ಮೊದಲಾದವರಲ್ಲಿ ಅಂತರ್ಯಾಮಿಯಾಗಿದ್ದು ತತ್ತ್ವಜ್ಞಾನವನ್ನು ಹುಟ್ಟಿಸುತ್ತಾನೆ. ಇತ್ಯಾದಿ ಪ್ರಕಾರ ತಿಳಿಯುತ್ತಾರೋ. (ಇದು ಉತ್ತಮ ಭಕ್ತರ ವಿಷಯಕವು.) (ಅಂತಹವರು ಈ ಮಾಯೆಯನ್ನು ದಾಟುತ್ತಾರೆ) (ಅಂದರೆ ದುರ್ಗಾದೇವಿಯು ಕೊಟ್ಟ ಭ್ರಮೆಯನ್ನು ಕಳೆದುಕೊಂಡು ಶ್ರೀಪರಮಾತ್ಮನ ತತ್ತ್ವಜ್ಞಾನವನ್ನು ಹೊಂದುತ್ತಾರೆ.) (೨) ಈ ವಿಷಯವು ನಾರದೀಯಪುರಾಣದಲ್ಲಿ ಹೇಳಿದೆ. ಮಧ್ಯಮ ಭಕ್ತರು, ಗುರು ಪಿತೃ ಮೊದಲಾದವರಲ್ಲಿ ಶ್ರೀವಿಷ್ಣುವು ಇದ್ದಾನೆಂದು ತಿಳಿದುಕೊಂಡು ಗುರು ಮೊದಲಾದವರಲ್ಲಿರತಕ್ಕ ಶ್ರೀವಿಷ್ಣುವನ್ನೂ ಗುರು ಮೊದಲಾದವರನ್ನೂ ಸೇವಿಸುತ್ತಾರೆ. ಉತ್ತಮ ಭಕ್ತರಾದ ಭೀಮಾದಿಗಳು, ಗುರು ಮೊದಲಾದವರು ಶ್ರೀಪರಮಾತ್ಮನ ಪೂಜೆಗೆ ಸಾಲಿಗ್ರಾಮಾದಿಗಳಂತೆಯೇ ಪ್ರತಿಮಾಸ್ಥಾನೀಯರೆಂದು ತಿಳಿದು ಗುರು ಮೊದಲಾದವರಲ್ಲಿರುವ ಶ್ರೀವಿಷ್ಣುವನ್ನೇ ಸೇವಿಸುತ್ತಾರೆ. ಗುರುಗಳಿಂದ ದ್ರೋಣಾದಿಗಳನ್ನು ಸೇವಿಸುವುದಿಲ್ಲ ಹೀಗೆ ನಾರದೀಯ ಪುರಾಣದಲ್ಲಿ ಹೇಳಿರುವರು. (೩) ಆಚಾರ್ಯರ ಚಿತ್ತದಲ್ಲಿರತಕ್ಕ ರೂಪದಿಂದ ನಿನ್ನ ಜ್ಞಾನವನ್ನು ನೀನೇ ಪ್ರಕಟಿಸುತ್ತಿ (ಎಂದು ಭಾಗವತದಲ್ಲಿ ಶ್ರೀಕೃಷ್ಣನೊಡನೆ ಉದ್ಧವನ ಮಾತು.) ॥ ೧೪ ॥

ಹೀ — ನಿನ್ನ ಶರಣಾಗತಿಯಿಂದ ಮಾಯೆಯು ಬಿಟ್ಟುಹೋಗುತ್ತದೆಂದಾದರೆ ಎಲ್ಲರೂ ನಿನ ಶರಣಾಗತಿಯಿಂದ ಮಾಯೆಯಿಂದುಂಟಾದ ಮೋಹವನ್ನು ಏಕೆ ಕಳೆದುಕೊಳ್ಳುವುದಿಲ್ಲವೆಂದರೆ

ಗೀ ॥ ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।
ಮಾಯಯಾಪಹೃತಜ್ಞಾನಾ ಆಸುರಂ ಭಾವಮಾಶ್ರಿತಾಃ ॥ ೧೫ ॥

ವುಳ್ಳವರಾಗಿ ಅಥವಾ ತತ್ವಜ್ಞಾನವಿಲ್ಲದವರಾಗಿ. ಮೂಢಾಃ=ಮಿಥ್ಯಾಜ್ಞಾನವುಳ್ಳವರಾಗಿ. ಆಸುರಂ ಭಾವಂ=ಅಸುರರ ಸ್ವಭಾವವನ್ನು, ಆಶ್ರಿತಾಃ=ಆಶ್ರಯಿಸಿದವರಾಗಿ. ಅಥವಾ ಇಂದ್ರಿಯಗಳಿಗೆ ಗೋಚರಗಳಾದ ವಿಷಯಭೋಗಗಳಲ್ಲಿಯೇ ಆಸಕ್ತರಾಗಿ, ಮಾಂ=ನನ್ನನ್ನು, ನ ಪ್ರಪದ್ಯಂತೇ=ಶರಣು ಹೊಂದುವುದಿಲ್ಲ. ॥ ೧೫ ॥

ಟೀ—ಸುಕೃತಿಗಳು ನನ್ನನ್ನು ಭಜಿಸುತ್ತಾ ಹೊಂದುತ್ತಾರೆ. ಅವರಲ್ಲಿಯೂ ತಾರತಮ್ಯವು ಇದೆ ಎನ್ನುತ್ತಾರೆ—

**ಗೀ ॥ ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ೧೬ ॥**

ಅ ॥ ಭರತರ್ಷಭ=ಭರತಕುಲದಲ್ಲಿ ಶ್ರೇಷ್ಠನಾದ, ಅರ್ಜುನ=ಅರ್ಜುನನೇ. ಆರ್ತಃ=ರೋಗಾದಿಗಳಿಂದ ಪೀಡಿತನಾದವನು, ಜಿಜ್ಞಾಸುಃ=ಶ್ರೀ ಪರಮಾತ್ಮನ ಜ್ಞಾನವನ್ನು ಹೊಂದಲಿಚ್ಛಿಸುವವನು, ಅರ್ಥಾರ್ಥೀ=ದ್ರವ್ಯಾಭಿಲಾಷಿಯು, ಜ್ಞಾನೀ ಚ=ಶ್ರೀ ಪರಮಾತ್ಮನ ತತ್ವವನ್ನರಿತವನು, ಹೀಗೆ ಚತುರ್ವಿಧಾಃ=ನಾಲ್ಕು ವಿಧರಾದ, ಸುಕೃತಿನಃ=ಪೂರ್ವಜನ್ಮದಲ್ಲಿ ಪುಣ್ಯವನ್ನು ಸಂಪಾದಿಸಿರುವ, ಜನಾಃ=ಜನರು. ಭಜಂತೇ=ಸೇವಿಸುತ್ತಾರೆ. ॥ ೧೬ ॥

**ಭಾ ॥ (೧) ತರ್ಹಿ ಕಿಮಿತಿ ಸರ್ವೇ ನಾತ್ಯಾಯನ್ನಿತ್ಯತ ಆಹ । ನ ಮಾಮಿತಿ ॥ (೨) ದುಷ್ಕೃತಿತ್ವಾನ್ಮೂಢಾಃ । ಅತ ಏವ ನರಾಧಮಾಃ । ಅಪಹೃತಜ್ಞಾನತ್ವಾಚ್ಚ ಮೂಢಾಃ । ಅತ ಏವಾಸುರಂ ಭಾವಮಾಶ್ರಿತಾಃ ॥ (೩) ಸ ಚ ವಕ್ಷ್ಯತೇ ಪ್ರವೃತ್ತಿಂ ಚ ನಿವೃತ್ತಿಂ ಚೇತ್ಯಾದಿನಾ ॥ (೪) ಅಪಹಾರೋಽಭಿಭವಃ । ಉಕ್ತಂ ಚೈತದ್ವ್ಯಾಸಯೋಗೇ । ಜ್ಞಾನಂ ಸ್ವಭಾವೋ ಜೀವಾನಾಂ ಮಾಯಯಾ ಹ್ಯಭಿಭೂಯತ ಇತಿ ॥ (೫) ಅಸುಷು ರತಾ ಅಸುರಾಃ । ತಚ್ಚೋಕ್ತಂ ನಾರದೀಯೇ । ಜ್ಞಾನಪ್ರಧಾನಾ ದೇವಾಸ್ತು ಅಸುರಾಸ್ತು ರತಾ ಅಸಾವಿತಿ ॥ ೧೫,೧೬ ॥**

ಅ ॥ (೧) ನಿನ್ನನ್ನು ಶರಣುಹೊಂದಿದ ಕಾರಣ ಮಾಯೆಯು ಅತಿಕ್ರಮಿಸಲು ಶಕ್ಯವೇ ದಾದರೆ ಸರ್ವರೂ ಕೂಡ ಏತಕ್ಕೆ ಮಾಯೆಯಿಂದುಂಟಾಗುವ ಭ್ರಮೆಯನ್ನು ಕಳೆದುಕೊಳ್ಳುವುದಿಲ್ಲವೆಂದರೆ, ನ ಮಾಂ ಎಂಬುವ ಶ್ಲೋಕದಿಂದ ಸಮಾಧಾನ ಹೇಳುತ್ತಾರೆ. (೨) ಪಾಪಮಾಡತಕ್ಕ ಸ್ವಭಾವವುಳ್ಳವರಾದುದರಿಂದ ವಿವೇಕಶೂನ್ಯರು. ಮಿಥ್ಯಾಜ್ಞಾನವುಳ್ಳವರು. ಮೂಢರಾಗಿರುವುದರಿಂದಲೇ ಮನುಷ್ಯಾಧಮರು ನಷ್ಟವಾದ ಜ್ಞಾನವುಳ್ಳವರಾದುದರಿಂದಲೂ ವಿವೇಕವಿಲ್ಲದವರು. ನರಾಧಮರಾದುದರಿಂದಲೇ ಆಸುರಸ್ವಭಾವವನ್ನು ಆಶ್ರಯಿಸಿದವರು. (ಅಂತಹವರು ಅಸುರಸ್ವಭಾವವನ್ನಾಶ್ರಯಿಸಿದವರಾದುದರಿಂದ ನನ್ನನ್ನು ತಿಳಿಯುವುದಿಲ್ಲ.) (೩) ಆ ಆಸುರಭಾವವು ಪ್ರವೃತ್ತಿಂ ಚ ನಿವೃತ್ತಿಂ ಚ ಇತ್ಯಾದಿಗಳಿಂದ ಮುಂದೆ ಹೇಳಲ್ಪಡುವುದು. (೪) (ಶ್ರೀಪರಮಾತ್ಮನನ್ನು ಹೊಂದದಿರುವ ಮುಕ್ತಿಯೋಗ್ಯರೂ ಅಯೋಗ್ಯರೂ ಇವರ ಧರ್ಮಗಳಿಂದೂ ಹೇಳಬೇಕು ಅವರಲ್ಲಿ ಮುಕ್ತಿಯೋಗ್ಯರಿಗೆ ಯಥಾರ್ಥಜ್ಞಾನವೇ ಸ್ವಭಾವವಾಗಿರುವುದರಿಂದ ಜ್ಞಾನವು ನಷ್ಟವಾಗಿದೆ, ಎಂಬುವುದು ಹೇಗೆ? ಎಂದರೆ—) ಅಪಹಾರಃ=ಅಭಿಭವವು. (ಅಪಹೃತಜ್ಞಾನಾ ಎಂಬುವಲ್ಲಿ ಮುಕ್ತಿಯೋಗ್ಯಜೀವರ ಜ್ಞಾನದಲ್ಲಿ ಅಪಹಾರವೆಂದರೆ ಅಭಿಭವವು (ತಿರಸ್ಕಾರವು) ಎಂದು ತಿಳಿಯತಕ್ಕದ್ದು) ತತ್ಜೀವರ ಜ್ಞಾನವು ಸ್ವಭಾವಭೂತವಾದುದು. ಅದು ಮಾಯೆಯಿಂದ ತಿರಸ್ಕೃತ

ತಿರಸ್ಕರಿಸಲ್ಪಡುತ್ತದೆ, ಎಂದು ವ್ಯಾಸಯೋಗವೆಂಬುವ ಗ್ರಂಥದಲ್ಲಿ ಹೇಳಲ್ಪಡುತ್ತದೆ. (೫) ಅಸುರಾಃ= ಇಂದ್ರಿಯಗಳನ್ನು ಸಂತೋಷಗೊಳಿಸುವುದರಲ್ಲಿಯೇ ಆಸಕ್ತರಾದವರು. ದೇವತೆಗಳು ಜ್ಞಾನವೇ ಪ್ರಧಾನವಾಗಿ ಉಳ್ಳವರು. ಅಸುರರು ಇಂದ್ರಿಯವಿಷಯಗಳಲ್ಲಿಯೇ ಆಸಕ್ತರಾದವರು. ಎಂದು ನಾರದೀಯ ಪುರಾಣದಲ್ಲಿ ಹೇಳಿದೆ. ॥ ೧೫, ೧೬ ॥

ಗೀ ॥ ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ ।
ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥೧೭॥

ಅ ॥ ತೇಷಾಂ=ಆ ನಾಲ್ಕು ವಿಧರಾದ ಜನರ ಮಧ್ಯದಲ್ಲಿ, ನಿತ್ಯಯುಕ್ತಃ= ಸರ್ವದಾ ಶ್ರೀಪರಮಾತ್ಮನಲ್ಲಿ ಮನಸ್ಸಿಟ್ಟು ಧ್ಯಾನಮಾಡುತ್ತಿರುವ, ಏಕಭಕ್ತಿಃ=ಶ್ರೀಕೃಷ್ಣನಾದ ನನ್ನಲ್ಲಿಯೇ ಭಕ್ತಿಯುಳ್ಳ, ಜ್ಞಾನೀ= ಭಗವಂತನ ತತ್ವವನ್ನು ತಿಳಿದವನು, ವಿಶಿಷ್ಯತೇ= ಉತ್ಕೃಷ್ಟನಾಗಿರುತ್ತಾನೆ. ಹಿ= ಏಕೆಂದರೆ, ಅಹಂ= ನಾನು, ಜ್ಞಾನಿನಃ= ಜ್ಞಾನಿಗೆ, ಅತ್ಯರ್ಥಂ= ಅತಿಶಯವಾಗಿ, ಪ್ರಿಯಃ=ಪ್ರೀತಿಪಾತ್ರನು. ಸ ಚ= ಆ ಜ್ಞಾನಿಯು, ಮಮ= ನನಗೆ, ಪ್ರಿಯಃ= ಪ್ರಿಯನು. ॥ ೧೭ ॥

ಗೀ ॥ ಉದಾರಾಃ ಸರ್ವ ಏವೈತೇ ಜ್ಞಾನೀ ತ್ವಾತ್ಮೈವ ಮೇ ಮತಂ ।
ಆಸ್ಥಿತಃ ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಂ ॥ ೧೮ ॥

ಅ ॥ ಏತೇ ಸರ್ವೇ ಏವ ಉದಾರಾಃ= ಈ ನಾಲ್ಕು ಜನರೂ ಉತ್ಕೃಷ್ಟರೇ. ಜ್ಞಾನೀತು= ಜ್ಞಾನಿಯಾದರೂ, ಮೇ= ನನ್ನ. ಆತ್ಮೈವ= ನನಗೆ ಅತ್ಯಂತ ಪ್ರಿಯನಾಗಿರುವುದರಿಂದ ಬೇರೆ ಯಾವರು ಹೊಂದದಿದ್ದರೂ ಇವನು ನನ್ನನ್ನು ನಿಶ್ಚಯವಾಗಿಯೂ ಹೊಂದುತ್ತಾನೆ ಅಥವಾ ತನ್ನ ಸ್ಥಿತಿ ಮೊದಲಾದುದೆಲ್ಲವೂ ನನ್ನ (ಶ್ರೀಕೃಷ್ಣನ) ಅಧೀನವೇ, ಎಂದು ತಿಳಿದು ನನ್ನ ವೈಕುಂಠಾದಿ ಲೋಕಗಳನ್ನು ಹೊಂದುವವನು. ಹೀಗೆ, ಮೇ= ನನ್ನ, ಮತಂ= ಸಿದ್ಧಾಂತವು. ಸ ಹಿ= ಆ ಜ್ಞಾನಿಯು, ಅನುತ್ತಮಾಂ= ಅಸದೃಶವಾದ, ಗತಿಮೇವ= ಗತಿಯನ್ನುದ್ದೇಶಿಸಿಯೇ. ಯುಕ್ತಾತ್ಮಾ= ಶ್ರೀಹರಿಯ ಧ್ಯಾನದಿಂದೊಡಗೂಡಿದ ಮನಸ್ಸುಳ್ಳವನಾಗಿ, ಮಾಂ= ನನ್ನನ್ನು, ಆಸ್ಥಿತಃ= ಹೊಂದುತ್ತಾನೆ. ॥ ೧೮ ॥

ಭಾ ॥ (೧) ಏಕಸ್ಮಿನ್ನೇವ ಭಕ್ತಿರೇಕಭಕ್ತಿಃ ॥ (೨) ತಚ್ಚೋಕ್ತಂ ಗಾರುಡೇ । ಮಯ್ಯೇವ ಭಕ್ತಿರ್ನಾನ್ಯತ್ರ ಏಕಭಕ್ತಿಃ ಸ ಉಚ್ಯತ ಇತಿ ॥ ೧೭, ೧೮ ॥

ಅ ॥ ಸರ್ವೋತ್ತಮನಾದ ಶ್ರೀಪರಮಾತ್ಮನೊಬ್ಬನಲ್ಲಿಯೇ ಮಾಹಾತ್ಮ್ಯಜ್ಞಾನಪೂರ್ವಕ ಸುದೃಢಸ್ನೇಹವುಳ್ಳವನು, ಏಕಭಕ್ತಿಃ ಎನಿಸುತ್ತಾನೆ. (೨) ನನ್ನಲ್ಲಿಯೇ ಸುದೃಢಸ್ನೇಹವುಳ್ಳವನು, ಇತರರಲ್ಲಿ ಸುದೃಢಸ್ನೇಹವಿಲ್ಲದವನು. ಅಂತಹನು ಏಕಭಕ್ತಿಃ ಎನಿಸುತ್ತಾನೆ, ಎಂಬ ಪ್ರಮೇಯವು ಗಾರುಡದಲ್ಲಿ ಹೇಳಿದೆ. ॥ ೧೭, ೧೮ ॥

ಪೀ — ಇಂತಹ ಜ್ಞಾನಿಯು ದುರ್ಲಭನೆನ್ನುತ್ತಾರೆ—

ಗೀ ॥ ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ ।
ವಾಸುದೇವಃ ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯ ॥

ಅ ॥ ಬಹೂನಾಂ ಜನ್ಮನಾಂ=ಬಹು ಜನ್ಮಗಳ, ಅಂತೇ=ಕೊನೆಗೆ, ವಾಸುದೇವಃ ಸರ್ವಮಿತಿ= ಎಲ್ಲಾ ವಸ್ತುಗಳ ಸ್ಥಿತಿ ಮೊದಲಾದುದು ಶ್ರೀಕೃಷ್ಣನ ಅಧೀನವೇ. ಅಥವಾ ಸರ್ವಗುಣ ಪರಿಪೂರ್ಣನಾದವನು ಶ್ರೀಕೃಷ್ಣನು, ಇತಿ ಜ್ಞಾನವಾನ್=ಹೀಗೆ ತಿಳಿದವನೇ, ಮಾಂ=ನನ್ನನ್ನು, ಪ್ರಪದ್ಯತೇ=ಶರಣುಹೊಂದುತ್ತಾನೆ. ಸ ಮಹಾತ್ಮಾ=ಅಂತಹ ಜ್ಞಾನವುಳ್ಳವನು. ಸುದುರ್ಲಭಃ=ಅತ್ಯಂತ ದುರ್ಲಭನು.

ವಿ ॥ ಶ್ರೀಕೃಷ್ಣನ ತತ್ತ್ವಜ್ಞಾನದಿಂದ ಮೋಕ್ಷವಾಗುವುದಾದರೂ ಎಲ್ಲರಿಗೆ ಶ್ರೀಕೃಷ್ಣನ ಜ್ಞಾನವೇ ಇಲ್ಲ. ಆದಕಾರಣ ಸರ್ವರಿಗೆ ಮೋಕ್ಷವಾಗುವುದಿಲ್ಲ. ॥ ೧೯ ॥

**ಭಾ ॥ ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಭವತಿ । ತಚ್ಚೋಕ್ತಂ ಬ್ರಾಹ್ಮೇ । ಜನ್ಮಭಿರ್ಬಹುಭಿರ್ಜ್ಞಾತ್ವಾ ತತೋ ಮಾಂ ಪ್ರತಿಪದ್ಯತ ಇತಿ ॥ ೧೯ ॥**

ಅ ॥ ಬಹುಜನ್ಮಗಳ ಅಂತ್ಯದಲ್ಲಿ ಜ್ಞಾನವುಳ್ಳವನಾಗುತ್ತಾನೆ. ಬಹು ಜನ್ಮಗಳಿಂದ ನನ್ನನ್ನು ತಿಳಿದುಕೊಂಡು ಆ ಮೇಲೆ ಆವಾಗಲೇ ನನ್ನನ್ನು ಹೊಂದುತ್ತಾನೆ, ಎಂದು ಬ್ರಾಹ್ಮಪುರಾಣದಲ್ಲಿ ಹೇಳಿದೆ. (ಆದಕಾರಣ ಜ್ಞಾನವು ಹುಟ್ಟಿದ ಮೇಲೆ ಶ್ರೀಪರಮಾತ್ಮನನ್ನು ಹೊಂದಲಿಕ್ಕೆ ಅನೇಕ ಜನ್ಮಗಳು ಆವಶ್ಯಕವು ಎಂಬುದು ಅಯುಕ್ತವೆಂದುಕ್ತವಾಯಿತು ) ॥ ೧೯ ॥

ಪೀ — ಲೋಕದಲ್ಲಿ ಬ್ರಹ್ಮಜ್ಞಾನಿಗಳು ಬಹುಮಂದಿ ಕಾಣುವುದರಿಂದ ದೌರ್ಲಭ್ಯವು ಹೇಗೆ ಎಂದರೆ-

**ಗೀ ॥ ಕಾಮೈಸ್ತೈಸ್ತೈರ್ಹೃತಜ್ಞಾನಾಃ ಪ್ರಪದ್ಯಂತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಃ ಸ್ವಯಾ ॥ ೨೦ ॥**

ಅ ॥ ತೈಸ್ತೈಃ ಕಾಮೈಃ=ತಂತಮ್ಮ ಇಚ್ಛೆಗಳಿಂದ ಹೃತಜ್ಞಾನಾಃ=ಜ್ಞಾನವಿರಹಿತವಾಗಿ ಅಥವಾ ಅಪಹೃತಜ್ಞಾನವುಳ್ಳವರಾಗಿ, ತಂ ತಂ ನಿಯಮಂ=ಬ್ರಾಹ್ಮಶೈವ ಮೊದಲಾದ ಆವಾವ ಆಗಮಗಳಲ್ಲಿ ಹೇಳಿದ ನಿಯಮವನ್ನು, ಆಸ್ಥಾಯ=ಆಶ್ರಯಿಸಿಕೊಂಡು. ಸ್ವಯಾ ಪ್ರಕೃತ್ಯಾ=ತಮ್ಮ ಸ್ವಭಾವದಿಂದ. ನಿಯತಾಃ= ವಶೀಕರಿಸಲ್ಪಟ್ಟವರಾಗಿ. ಅನ್ಯದೇವತಾಃ=ತನಗಿಂತ ಭಿನ್ನರಾದ ಬ್ರಹ್ಮ, ಶಕ್ತಿ ರುದ್ರಾದಿ ದೇವತೆಗಳನ್ನು, ಪ್ರಪದ್ಯಂತೇ=ಶರಣು ಹೊಂದುತ್ತಾರೆ.

ವಿ ॥ ಜ್ಞಾನಿಗಳಾಗಿ ತೋರುವವರು ಅನೇಕ ವಿಧಗಳಾದ ಅಭಿಲಾಷೆಗಳಿಂದ ಶ್ರೀಪರಮಾತ್ಮನು ಉತ್ತಮನೆಂಬುವ ಜ್ಞಾನವಿಲ್ಲದವರಾಗಿ ಬೇರೆ ದೇವತೆಗಳನ್ನು ಪೂಜಿಸುತ್ತಾ ಆ ದೇವತೆಗಳನ್ನೇ ಹೊಂದುತ್ತಾರೆ. ಮುಖ್ಯವಾಗಿ ಭಗವದ್ಭಕ್ತನು ದುರ್ಲಭನು. ॥ ೨೦ ॥

**ಭಾ ॥ ಪ್ರಕೃತ್ಯಾ ಸ್ವಭಾವೇನ । ಸ್ವಭಾವಃ ಪ್ರಕೃತಿಶ್ಚೈವ ಸಂಸ್ಕಾರೋ ವಾಸನೇತಿ ಚೇತ್ಯಭಿಧಾನಾತ್ ॥ ೨೦ ॥**

ಅ ॥ ಪ್ರಕೃತ್ಯಾ—ಸ್ವಭಾವದಿಂದ. ಸ್ವಭಾವವೇ ಪ್ರಕೃತಿ ಎಂಬ ಶಬ್ದದಿಂದಲೂ ಸಂಸ್ಕಾರವು ವಾಸನಾ ಎಂಬುವ ಶಬ್ದದಿಂದಲೂ ಹೇಳಲ್ಪಡುತ್ತದೆ ಎಂದು ಶಬ್ದಶಕ್ತಿಯನ್ನು ತಿಳಿಸುವ ಪ್ರಮಾಣವಿದೆ. ॥ ೨೦ ॥

**ಗೀ || ಯೋ ಯೋ ಯಾಂ ಯಾಂ ತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ |**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ || ೨೧ ||**

ಅ || ಯೋ ಯಃ=ಮುಖ್ಯವಾಗಿ ಭಗವದ್ಭಕ್ತ ತಮೋಯೋಗ್ಯ ಇವರಿಗಿಂತ ಭಿನ್ನನೂ, ವಿಷ್ಣು ಸರ್ವೋತ್ತಮತ್ವಜ್ಞಾನ ವಿಪರೀತಜ್ಞಾನಗಳಿಲ್ಲದಿರುವ ಯಾರು ಯಾರು, ಭಕ್ತಃ=ಬ್ರಹ್ಮರುದ್ರಾದಿಗಳಲ್ಲಿ ಭಕ್ತಿಯುಳ್ಳವರಾಗಿ, ಯಾಂ ಯಾಂ ತನುಂ=ಕಾರಣವಿಶೇಷಗಳಿಂದ ಯಾವ ಯಾವ ಬ್ರಹ್ಮರುದ್ರಾದಿಗಳ ಶರೀರವನ್ನು, ಶ್ರದ್ಧಯಾ=ಆಸ್ತಿಕ್ಯಬುದ್ಧಿಯಿಂದ, ಅರ್ಚಿತುಂ—ಪೂಜಿಸಲಿಕ್ಕೆ, ಇಚ್ಛತಿ=ಇಚ್ಛಿಸುತ್ತಾನೋ, ತಸ್ಯ ತಸ್ಯ=ಅವರವರಿಗೆ, ತಾಮೇವ ಶ್ರದ್ಧಾಂ=ಆ ಆಸ್ತಿಕ್ಯಬುದ್ಧಿಯನ್ನೇ, ಅಚಲಾಂ=ಸ್ಥಿರವಾದುದನ್ನಾಗಿ, (ಚಲನೆಯಿಲ್ಲದಿರುವುದನ್ನಾಗಿ), ಅಹಂ=ನಾನು, ವಿದಧಾಮಿ=ಕೊಡುತ್ತೇನೆ. || ೨೧ ||

**ಗೀ || ಸ ತಯಾ ಶ್ರದ್ಧಯಾ ಯುಕ್ತಸ್ತಸ್ಯಾರಾಧನಮೀಹತೇ |**
**ಲಭತೇ ಚ ತತಃ ಕಾಮಾನ್ಮಯೈವ ವಿಹಿತಾನ್ಹಿತಾನ್ || ೨೨ ||**

ಅ || ಸ ಚ=ಬ್ರಹ್ಮರುದ್ರಾದಿ ದೇವತೆಗಳಲ್ಲಿ ವಿಶೇಷತಃ ಭಕ್ತಿಯಿದ್ದವನು. ತಯಾ ಶ್ರದ್ಧಯಾ=ಆ ಬ್ರಹ್ಮ ಶಿವ ಶಕ್ತ್ಯಾದಿ ವಿಷಯಕವಾದ ಆಸ್ತಿಕ್ಯಬುದ್ಧಿಯಿಂದ, ಯುಕ್ತಃ=ಕೂಡಿದವನಾಗಿ, ತಸ್ಯ=ಆ ಬ್ರಹ್ಮರುದ್ರಾದಿ ದೇವತೆಗಳ, ಆರಾಧನಂ=ಪೂಜಾದಿಗಳನ್ನು, ಈಹತೇ=ಮಾಡುತ್ತಾನೆ. ತತಃ=ಆ ದೇವತೆಗಳನ್ನು ಪೂಜಿಸುವುದರಿಂದ, ಮಯೈವ=ಆ ದೇವತೆಗಳಲ್ಲಿ ಅಂತರ್ಯಾಮಿಯಾದ ನನ್ನಿಂದಲೇ, ವಿಹಿತಾನ್ ತಾನ್=ಕೊಡಲ್ಪಟ್ಟ. ಅವರವರಿಗೆ ಅಭಿಪ್ರೇತಗಳಾದ ಪದಾರ್ಥಗಳನ್ನು, ಲಭತೇ ಚ=ಹೊಂದುತ್ತಾನೆ. (ನಾನು ಹೊರತು ಬೇರೆ ಯಾರಿಗೂ ಫಲವನ್ನು ಕೊಡಲಿಕ್ಕೆ ಸಾಮರ್ಥ್ಯವೇ ಇಲ್ಲ. || ೨೨ ||

ಅಥವಾ

ಟೀ—ವಸ್ತುತಃ ಭಗವದ್ಭಕ್ತನೇ ಆಗಿದ್ದವನು ಉಪದೇಶ ಮಾಡುವವರಿಲ್ಲದಿರುವುದರಿಂದ ಬ್ರಹ್ಮಾದಿ ದೇವತೆಗಳನ್ನು ಪೂಜಿಸುವವನೆಂದಾದರೆ—

ಅ || ಸ್ವತಃ ವಿಷ್ಣುಭಕ್ತನಾದವನು ಶ್ರೀ ವಿಷ್ಣುವನ್ನು ಸರ್ವೋತ್ತಮನೆಂದು ತಿಳಿದರೂ ಕಾರಣಾಂತರದಿಂದಲೇ ಬ್ರಹ್ಮಾದಿಗಳನ್ನು ಪೂಜಿಸುತ್ತಿದ್ದರೆ ಅಂತಹವರಿಗೆ ಅಂತಹ ಶ್ರದ್ಧೆಯನ್ನೇ ಕೊಡುತ್ತೇನೆ. ಆ ಮೇಲೆ ಕ್ರಮದಿಂದ ಶ್ರೀ ಪರಮಾತ್ಮನ ಅನುಗ್ರಹದಿಂದ ಬಂದ ಗುರುಗಳ ಉಪದೇಶದ್ವಾರಾ ಶ್ರೀ ಪರಮಾತ್ಮನನ್ನು ಪೂಜಿಸುತ್ತಾನೆ ಆಮೇಲೆ ನನ್ನ (ಶ್ರೀ ಪರಮಾತ್ಮನ) ಪೂಜೆಯಿಂದ ಸಂತೋಷಗೊಂಡ ನನ್ನಿಂದಲೇ ಕೊಡಲ್ಪಟ್ಟ ಮೋಕ್ಷಾದಿ ಕಾಮಗಳನ್ನು ಹೊಂದುತ್ತಾನೆ. || ೨೧,೨೨ ||

ಟೀ—ಬ್ರಹ್ಮರುದ್ರಾದಿ ದೇವತೆಗಳನ್ನು ಪೂಜಿಸುವವರಿಗೂ ನೀನೇ ಫಲವನ್ನು ಕೊಡುವುದಾದರೆ ಅವರ ಪೂಜಾದಿಗಳನ್ನು ಬಿಟ್ಟು ನಿನ್ನ ಪೂಜಾದಿಗಳನ್ನು ಏಕೆ ಮಾಡಬೇಕೆಂದರೆ—

**ಗೀ || ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ |**
**ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪಿ || ೨೩ ||**

ಅ || ತೇಷಾಂ=ಶ್ರೀಪರಮಾತ್ಮನು, ಲಕ್ಷ್ಮೀಬ್ರಹ್ಮರುದ್ರ ಮೊದಲಾದ ದೇವತೆಗಳಿಗಿಂತ ಉತ್ತಮನು ಎಂದು ತಿಳಿದು ಯತ್ಕಿಂಚಿತ್ ಐಹಿಕಫಲಕ್ಕಾಗಿ ಆ ಇತರ ದೇವತೆಗಳಾದ ಲಕ್ಷ್ಮೀ ಬ್ರಹ್ಮಾದಿಗಳನ್ನು ಪೂಜಿ

ಸುವವರಿಗೆ, ಅಲ್ಪಮೇಧಸಾಂ = ಅಲ್ಪವಾದ ಫಲದಲ್ಲಿಯೇ ಬುದ್ಧಿಯಿರುವುದರಿಂದ, ತತ್ = ಇತರ ದೇವತೆಗಳ ಪೂಜೆಯಿಂದುಂಟಾದ, ಫಲಂ = ಫಲವು, ಅಂತವತ್ತು ಭವತಿ = ನಾಶವುಳ್ಳದ್ದೇ (ಅನಿತ್ಯವೇ) ಆಗುತ್ತದೆ. (ಹೇಗೆಂದರೆ) ದೇವಯಜಃ = ಪರಮಾತ್ಮನು ಸರ್ವೋತ್ತಮನೆಂದು ತಿಳಿಯದೆ ಬ್ರಹ್ಮರುದ್ರಾದಿಗಳನ್ನು ಪೂಜಿಸುವವರು, ದೇವಾನ್ = ಬ್ರಹ್ಮರುದ್ರಾದಿ ದೇವತೆಗಳನ್ನು, ಯಾಂತಿ = ಹೊಂದುತ್ತಾರೆ. (ಅವರು ನನ್ನನ್ನು ಹೊಂದುವುದಿಲ್ಲ. ಆದಕಾರಣ ಅವರಿಗೆ ಸಿಗುವ ಫಲವು ನಾಶವುಳ್ಳದ್ದೇ) ಮದ್ಭಕ್ತಾಸ್ತು = ನನ್ನನ್ನೇ ಸರ್ವೋತ್ತಮನೆಂದು ತಿಳಿದು ನನ್ನನ್ನು ಪೂಜಿಸುವವರಾದರೂ, ಮಾಮಪಿ=ಮೊದಲು ದೇವತೆಗಳನ್ನು ಹೊಂದಿ ಕೊನೆಗೆ ನನ್ನನ್ನು ಕೂಡ, ಯಾಂತಿ = ಹೊಂದುತ್ತಾರೆ. (ಆದಕಾರಣ ಅವರ ಫಲಕ್ಕೆ ನಾಶವಿಲ್ಲ. ಆದುದರಿಂದ ನನ್ನನ್ನು ಸರ್ವೋತ್ತಮನೆಂದೂ, ಬ್ರಹ್ಮರುದ್ರಾದಿ ದೇವತೆಗಳನ್ನು ನನ್ನ ಪರಿವಾರರೆಂದೂ ತಿಳಿದು ಪೂಜಿಸಬೇಕು.) ॥ ೨೩ ॥

ಟೀ—ರಾಮಕೃಷ್ಣಾದಿರೂಪವಾದ ಶ್ರೀಪರಮಾತ್ಮನ ಶರೀರವನ್ನು ಎಂಬುವ ಪ್ರತೀತಿಯನ್ನು ಹೋಗಲಾಡಿಸುತ್ತಾರೆ—

**ಭಾ ॥ (೧) ಯಾಂ ಯಾಂ ಬ್ರಹ್ಮಾದಿರೂಪಾಂ ತನುಂ । ಉಕ್ತಂ ಚ ನಾರದೀಯೇ । ಅಂತೋ ಬ್ರಹ್ಮಾದಿಭಕ್ತಾನಾಂ ಮದ್ಭಕ್ತಾನಾಮನಂತತೇತಿ ॥ (೨) ಮುಕ್ತಶ್ಚ ಕಾಂ ಗತಿಂ ಗಚ್ಛೇನ್ಮೋಕ್ಷಶ್ಚೈವ ಕಿಮಾತ್ಮಕ ಇತ್ಯಾದೇಃ ಪರಿಹಾರಸಂದರ್ಭಾಚ್ಚ ಮೋಕ್ಷಧರ್ಮೇಷು ॥ (೩) ಅವತಾರೇ ಮಹಾವಿಷ್ಣೋರ್ಭಕ್ತಃ ಕುತ್ರ ಚ ಮುಚ್ಯತ ಇತ್ಯಾದೇಶ್ಚ ಬ್ರಹ್ಮವೈವರ್ತೇ ॥ ೨೧,೨೨,೨೩ ॥**

ಅ ॥ (೧) ಬ್ರಹ್ಮರುದ್ರಾದಿರೂಪವಾದ ಯಾವಯಾವ ಶರೀರವನ್ನು (ಅಂತವತ್ತು ಫಲಂ ತೇಷಾಂ ಎಂದು ಬ್ರಹ್ಮರುದ್ರಾದಿಗಳ ಭಕ್ತರಿಗೆ ನಾಶಶೀಲವಾದ ಫಲವು ಹೇಳಲ್ಪಟ್ಟಿದೆ. ಅದು ಬ್ರಹ್ಮಾದಿಗಳನ್ನು ತಿಳಿದುಕೊಂಡರೆ ಕೂಡುತ್ತದೆ. ಶ್ರೀ ಪರಮಾತ್ಮನೆಂದು ತಿಳಿದುಕೊಂಡರೆ ಕೂಡುವುದಿಲ್ಲ. ಎನ್ನುತ್ತಾರೆ—) ಬ್ರಹ್ಮಾದಿಗಳನ್ನು ಸೇವಿಸಿದ ಜನರಿಗೆ ನಾಶಶೀಲವಾದ ಫಲವಾಗುತ್ತದೆ ನನ್ನನ್ನೇ ಸೇವಿಸಿದವರಿಗೆ ನಾಶವಿಲ್ಲ. ಮೋಕ್ಷಾದಿರೂಪ ಫಲವಾಗುತ್ತದೆ, ಎಂದು ನಾರದೀಯ ಪುರಾಣದಲ್ಲಿದೆ (೨) ಮುಕ್ತನಾದವನು ಯಾವ ಗತಿಯನ್ನು ಹೊಂದುವನು? ಮೋಕ್ಷದ ಸ್ವರೂಪವು ಯಾವುದು? ಇದುಮೊದಲಾದ ಪ್ರಶ್ನೆಗೆ ಪರಿಹಾರರೂಪವಾದ ವಾಕ್ಯಸಂದರ್ಭ ವಾಕ್ಯದಿಂದಲೂ ಈ ಅರ್ಥವು. ಅಂದರೆ ಶ್ರೀ ಪರಮಾತ್ಮನ ಭಕ್ತರಿಗೆ ಮೋಕ್ಷಾದಿರೂಪವಾದ ಪುರುಷಾರ್ಥವಾಗುತ್ತದೆಂದು ತಿಳಿಯುತ್ತದೆ ಹೀಗೆ ಮೋಕ್ಷಧರ್ಮಗಳಲ್ಲಿದೆ. (೩) (ಶ್ರೀ ಪರಮಾತ್ಮನ ಮೂಲರೂಪವನ್ನು ಭಜಿಸಿದವರಿಗೆ ನಾಶವಿಲ್ಲದ ಫಲವು ಬರಲಿ, ರಾಮಕೃಷ್ಣಾದಿ ಅವತಾರರೂಪವನ್ನು ಭಜಿಸುವವರಿಗೆ ನಾಶವಿರುವ ಫಲವನ್ನೊಡಂಬಟ್ಟರೆ ಬಾಧಕವೇನೆಂದರೆ—) ಸರ್ವೋತ್ತಮನಾದ ಶ್ರೀವಿಷ್ಣುವಿನ ಯಾವುದಾದರೊಂದು ಅವತಾರರೂಪದ ಜ್ಞಾನದಿಂದಲೂ ಮುಕ್ತನಾಗುತ್ತಾನೆ. ಇದುಮೊದಲಾದ ಪ್ರಮೇಯವು ಬ್ರಹ್ಮವೈವರ್ತದಲ್ಲಿದೆ ॥ ೨೧,೨೨,೨೩ ॥

ಟೀ—ಸರ್ವರಿಗೂ ಪ್ರೇರಕನಾಗಿ ಎಲ್ಲಾ ದೇಹಗಳಲ್ಲಿ ಶ್ರೀಪರಮಾತ್ಮನು ಇದ್ದರೆ ಆಯಾಯ ದೇಹದಲ್ಲಿರುವ ಜೀವರಿಗೆ ಏಕೆ ಕಾಣಿಸಿಕೊಳ್ಳುವುದಿಲ್ಲ ಎಂದರೆ—

**ಭಾ ॥ (೧) ಅಚೇತನಯಾ (ನಾ ಯಾ) ತನ್ನೇಯತ್ವಾತ್ತು ಮಾಯಯಾ । ಲಕ್ಷ್ಮ್ಯಾಖ್ಯ ಪರಗಯಾ ಲೋಕೋ ವಿಷ್ಣುನೈವ ವಿಮೋಹಿತಃ ॥ (೨) ಯೇ ತು ವಿಷ್ಣುಂ ಪ್ರಪದ್ಯಂತೇ**

ತೇ ಮಾಯಾಂ ತಾಂ (ತು) ತರಂತಿ ಹಿ ॥ (೩) ಲಕ್ಷ್ಮೀಃ ಸಾ ಜಡಮಾಯಾ ಯಾ ದೇವತಾ ತೇ ಉಭೇ ಅಪಿ । ವಿಷ್ಣೋರ್ವಶೇ ತತೋಽನನ್ಯಭಕ್ತ್ಯಾ ತಂ ಶರಣಂ ವ್ರಜೇತ್ ॥ (೪) ಯಾದೃಶೀ ತತ್ರ ಭಕ್ತಿಃ ಸ್ಯಾತ್ತಾದೃಶ್ಯನ್ಯತ್ರ ನೈವ ಚೇತ್ । ಅನನ್ಯಭಕ್ತಿಃ ಸಾ ಜ್ಞೇಯಾ ವಿಷ್ಣಾವೇವ ತು ಸಾ ಭವೇತ್ । ಅನ್ಯೇಷು ವೈಷ್ಣವತ್ವೇನ ಲಕ್ಷ್ಮೀಬ್ರಹ್ಮಹರಾದಿಷು । ಕುರ್ಯಾದ್ಭಕ್ತಿಂ ನಾನ್ಯಥಾ ತು ತದ್ವಶಾ ಏವ ತೇ ಯತಃ ॥ (೫) ಏವಂ ಜಾನಂಸ್ತಮಾಪ್ನೋತಿ ನಾನ್ಯಥಾ ತು ಕಥಂಚನ ॥ ೧ ॥

ಅ ॥ (೧) ಅಚೇತನವಾದ ಪ್ರಕೃತಿಯಿಂದಲೂ, ಶ್ರೀಪರಮಾತ್ಮನ ಅಧೀನದಲ್ಲಿಯೇ ಇರುವ ಶ್ರೀವಿಷ್ಣುವಿನಿಂದಲೇ ಚೆನ್ನಾಗಿ ತಿಳಿಯಲ್ಪಡುವುದರಿಂದ ಮಾಯೆಯೆನಿಸಿಕೊಂಡ ಲಕ್ಷ್ಮೀರೂಪಳಾದ ದುರ್ಗಾದೇವಿಯಿಂದಲೂ ಕೂಡ ಮುಖ್ಯವಾಗಿ ಶ್ರೀಪರಮಾತ್ಮನ ಸಾಮರ್ಥ್ಯದಿಂದಲೂ ಜನರು ಮನಸ್ಸಿನ ಅಜ್ಞಾನದಿಂದ ಆವೃತರಾಗಿರುವುದರಿಂದ ಶ್ರೀಪರಮಾತ್ಮನನ್ನು ತಿಳಿಯುವುದಿಲ್ಲ. (1) ಅಚೇತನಯಾ ಇತ್ಯಾದಿಗಳಿಂದ ತ್ರಿಭಿರ್ಗುಣಮಯೈಃ (೧೩, ೧೪) ಇತ್ಯಾದಿಗಳ ಅರ್ಥವು ಉಕ್ತವಾಯಿತು. (3) ವಿಷ್ಣುನೈವ ಎಂಬುವುದರಿಂದ ನಾಹಂ ಪ್ರಕಾಶಃ ಎಂಬ (೨೫)ನೇ ಶ್ಲೋಕದ ಅರ್ಥವ ಉಕ್ತವಾಯಿತು ) (೨) (ಹೀಗೆ ಜನರು ಮೋಹಿತರಾಗಿದ್ದಾರೆಂದಾದರೆ ಯಾರಿಗೂ ಶ್ರೀಪರಮಾತ್ಮನ ಜ್ಞಾನವು ಬಾರದೆ ಹೋಗುವುದು ಎಂದರೆ—) ಯಾರು ವಿಷ್ಣುವನ್ನೇ ಶರಣು ಹೊಂದುತ್ತಾರೋ, ಅವರು ದುರ್ಗಾದೇವಿಯಿಂದುಂಟಾದ ಹಿಂದೆ ಹೇಳಿದ ಅಜ್ಞಾನರೂಪವಾದ ಆವರಣವನ್ನೇ ಕಳೆದುಕೊಳ್ಳುತ್ತಾರೆ. (ಇದರಿಂದ ಮಾಮೇವ ಎಂಬುವ ೧೪ನೇ ಶ್ಲೋಕವು ವ್ಯಾಖ್ಯಾತವಾಯಿತು ) (೩) (ಶ್ರೀಪರಮಾತ್ಮನನ್ನು ಶರಣು ಹೊಂದಿದ್ದರಿಂದ ದುರ್ಗೆಯಿಂದುಂಟಾದ ಹಿಂದೆ ಹೇಳಿದ ಅಜ್ಞಾನವನ್ನು ಹೇಗೆ ಕಳೆದುಕೊಳ್ಳುವುದು ಎಂದರೆ-) ಆ ಲಕ್ಷ್ಮೀರೂಪಳಾದ ದುರ್ಗಾದೇವಿಯು ಜಡಭೂತವಾದ ಮಾಯೆಯೆನಿಸಿದ ಪ್ರಕೃತಿಗೆ ಅಭಿಮಾನಿನಿಯು. ಆ ಅಚೇತನಪ್ರಕೃತಿ. ಚೇತನಪ್ರಕೃತಿ (ಲಕ್ಷ್ಮೀದೇವಿಯು) ಇವರಿಬ್ಬರೂ ಪರಮಾತ್ಮನ ಅಧೀನದಲ್ಲಿರುವವರು. ಆದಕಾರಣ ಅನನ್ಯಭಕ್ತಿಯಿಂದ ಆ ಶ್ರೀಪರಮಾತ್ಮನನ್ನು ಶರಣು ಹೊಂದಬೇಕು. (ಲಕ್ಷ್ಮೀದೇವಿಯು ಜಡಭೂತವಾದ ಮಾಯೆಗೆ ಅಭಿಮಾನಿನಿಯು. ಆ ಅಚೇತನ ಪ್ರಕೃತಿಯು ಲಕ್ಷ್ಮೀದೇವಿಯ ಅಧೀನವು. ಆ ಲಕ್ಷ್ಮೀದೇವಿಯು ಶ್ರೀಪರಮಾತ್ಮನ ಅಧೀನದಲ್ಲಿರುವವಳು ಆದಕಾರಣ ಇಬ್ಬರೂ ಪರಮಾತ್ಮನ ಅಧೀನದಲ್ಲಿರುವವರು. ಆದಕಾರಣ ಪರಮಾತ್ಮನನ್ನು ಶರಣುಹೊಂದಿ ಮಾಯೆಯನ್ನು ಅತಿಕ್ರಮಿಸಿಕೊಳ್ಳಬೇಕು.) (ಅಂದರೆ ಶ್ರೀಪರಮಾತ್ಮನನ್ನು ಶರಣು ಹೊಂದಿದವರು ಶ್ರೀಹರಿಯ ಅಧೀನದಲ್ಲಿರುವ ಪ್ರಕೃತಿಯಿಂದುಂಟಾದ ಅಜ್ಞಾನರೂಪವಾದ ಆವರಣವನ್ನು ಆತನ ಅನುಗ್ರಹದಿಂದ, ತೆರೆದುಕೊಂಡು, ಶ್ರೀಪರಮಾತ್ಮನನ್ನು ತಿಳಿಯುತ್ತಾರೆ ) (ಇದರಿಂದ ಗುಣಮಯೀ ಎಂಬುವುದು ವ್ಯಾಖ್ಯಾತವಾಯಿತು.) (ಅನನ್ಯಭಕ್ತ್ಯಾ ಎಂಬುವುದರಿಂದ ಏಕಭಕ್ತಿಃ ಎಂಬ ೧೭ನೇ ಶ್ಲೋಕದ ತಾತ್ಪರ್ಯವು ಉಕ್ತವಾಯಿತು ) (೪) (ಅನನ್ಯಭಕ್ತಿ ಎಂದರೆ ಎಂತಹ ಭಕ್ತಿಯೆಂದರೆ--) ಬೇರೆ ದೇವತೆಗಳಲ್ಲಿ ವಿಶೇಷ ಭಕ್ತಿಯು ಹುಟ್ಟದೆ ಶ್ರೀಪರಮಾತ್ಮನಲ್ಲಿಯೇ ಇರುವ ಮುಖ್ಯ ಭಕ್ತಿಯು ಅನನ್ಯಭಕ್ತಿಯೆನಿಸುತ್ತದೆ ಶ್ರೀಪರಮಾತ್ಮನಿಂದ ಇತರರಾದ ಲಕ್ಷ್ಮೀ ಬ್ರಹ್ಮ ರುದ್ರ ಮೊದಲಾದ ದೇವತೆಗಳು ಶ್ರೀವಿಷ್ಣುವಿನ ಭಕ್ತರು ಎಂದು ತಿಳಿದುಕೊಂಡು ಅವರಲ್ಲಿ ತಾರತಮ್ಯಾನುಸಾರವಾಗಿ ಭಕ್ತಿಯನ್ನು ಮಾಡಬೇಕು. ಏಕೆಂದರೆ ಆ ದೇವತೆಗಳೆಲ್ಲರೂ ಶ್ರೀಪರಮಾತ್ಮನ ಅಧೀನದಲ್ಲಿಯೇ ಇರುವವರು (ಅಂದರೆ ಪರಮಾತ್ಮನು ಸರ್ವೋತ್ತಮನೆಂದು ತಿಳಿದು ಅವನಲ್ಲಿಯೇ ನಿರವಧಿಕ ಭಕ್ತಿಯನ್ನು ಮಾಡಬೇಕು ) (೫) (ಶ್ರೀವಿಷ್ಣುವು ಸರ್ವೋತ್ತಮನು. ಇತರರಾದ ಬ್ರಹ್ಮರುದ್ರಾದಿಗಳು ಶ್ರೀಪರಮಾತ್ಮನ ಅಧೀನದಲ್ಲಿರುವವರು, ಎಂದು ತಿಳಿದು

ಭಕ್ತಿಮಾಡುವವರಿಗೆ ಫಲವೇನೆಂದರೆ—) ಶ್ರೀವಿಷ್ಣುವು ಸರ್ವೋತ್ತಮನು, ಬ್ರಹ್ಮಾದಿಗಳು ಪರಿವಾರಭೂತರೆಂದು ತಿಳಿದು ಸೇವಿಸುವವರು ಶ್ರೀಪರಮಾತ್ಮನ ವೈಕುಂಠಾದಿ ಲೋಕಗಳಿಗೆ ಹೋಗುತ್ತಾರೆ. ಹೀಗೆ ಭಜಿಸದಿದ್ದರೆ ಬೇರೆ ಯಾವ ಪ್ರಕಾರದಿಂದಲೂ ವೈಕುಂಠಾದಿ ಲೋಕವನ್ನು ಹೊಂದಲಾರರು. (ಇದರಿಂದ ಜ್ಞಾನೀ ತ್ವಾತ್ಮೈವ ಮೇ ಮತಂ ಎಂಬ ೧೮ನೇ ಶ್ಲೋಕವು ವ್ಯಾಖ್ಯಾತವಾಯಿತು.) ॥ ೧ ॥

ಹೀ—ಭಗವಜ್ಜ್ಞಾನಿಗಳಿಗೇನೇ ಮೋಕ್ಷವು. ಶ್ರೀಪರಮಾತ್ಮನ ಜ್ಞಾನವನ್ನು ಸಂಪಾದಿಸದೆ ಕೇವಲ ಕರ್ಮಾದಿಗಳನ್ನು ಮಾಡುವವರಿಗೆ ಮೋಕ್ಷವಾಗುವುದಿಲ್ಲವೆಂಬುವುದು ಹೇಗೆ? ಎಂದರೆ—

ತಾ ॥ (೧) ಪೂರ್ಣಂ ವಸ್ತು ಯತೋ ಹ್ಯೇಕೋ ವಾಸುದೇವೋ ನ ಚಾಪರಃ ॥ (೨) ಏವಂ ವಿದ್ದುರ್ಲಭೋ ಲೋಕೇ ಯತ್ಸರ್ವೇ ಮಿಶ್ರಯಾಜಿನಃ ॥ (೩) ವಿಷ್ಣುಂ ತತ್ಪರಮಂ (ಮ)ಜ್ಞಾತ್ವಾ ರಮಾಬ್ರಹ್ಮಹರಾದಿಕಾನ್ । ಯಜನ್ನಪಿ ತಮೋ ಘೋರಂ ನಿತ್ಯ-ದುಃಖಂ ಪ್ರಯಾತಿ ಹಿ ॥ (೪) ಅಜ್ಞಾನಾಂ ತು ಕುಲೇ ಜಾತೋ ಯಾವದ್ವಿಷ್ಣೋಃ ಸಮರ್ಚನಂ । ವಿಷ್ಣುತತ್ತ್ವಂ ನ ಜಾನೀಯಾತ್ತಾವತ್ಸೇವಾ ಪೃಥಕ್ಕೃತಾ ॥ (೫) ವಿದ್ಯಾದ್ಯೈಹಿಕಭೋಗಾಯ ಯದಿ ಬುದ್ಧ್ವಾ ಪುನರ್ನ ತು । ಪರಿವಾರತಾಮೃತೇ ಕುರ್ಯಾದನ್ಯದೇವಾರ್ಚನಂ ಕ್ವಚಿತ್ ॥ (೬) ಅಜಾನತಾ ಕೃತಂ ತ್ಯಕ್ತಂ ನ ದೋ-ಷಾಯ ಭವಿಷ್ಯತಿ । ಜನ್ಮಾದಿಪ್ರದಮೇವ ಸ್ಯಾದತ್ಯಾಗೇ ಪುನರೇವ ತು । ಕ್ಷಿಪ್ರಂ ಚ ಜ್ಞಾಪಯತ್ಯೇವ ಭಗವಾನ್ ಸ್ವಯಮೇವ ತು । ಯದಿ ಜನ್ಮಾಂತರೇ ಸ್ವೀಯೋ ನಿಮಿತ್ತೀಕೃತ್ಯ ಕಂಚನೇತ್ಯಾದಿ ಚ ॥ ೨ ॥

ಅ ॥ (೧) ಸರ್ವಗುಣಪರಿಪೂರ್ಣನಾದವನು ವಾಸುದೇವನೊಬ್ಬನೇ. ಬೇರೆ ಯಾರೂ ಗುಣಪರಿಪೂರ್ಣರಾದವರು ಇಲ್ಲ. (ಶ್ರೀಪರಮಾತ್ಮನೇ ಸರ್ವಗುಣಪರಿಪೂರ್ಣನಾದುದರಿಂದ ಅವನಿಗೇನೇ ಮೋಕ್ಷವನ್ನು ಕೊಡತಕ್ಕ ಶಕ್ತಿಯು. ಇತರರಿಗೆ ಅಂತಹ ಶಕ್ತಿಯು ಮುಖ್ಯವಾಗಿ ಇಲ್ಲ. ಇದರಿಂದ ವಾಸುದೇವಃ ಸರ್ವಂ ಎಂಬ ೧೯ನೇ ಶ್ಲೋಕವು ವ್ಯಾಖ್ಯಾತವಾಯ್ತು.) (೨) (ಶ್ರೀಪರಮಾತ್ಮನ ಜ್ಞಾನದಿಂದ ಮೋಕ್ಷವಾಗುವುದಾದರೆ – ಸರ್ವರಿಗೂ ಮೋಕ್ಷವಾಗಬೇಕಾಗುವುದು, ಎಂದರೆ—) ಶ್ರೀಪರಮಾತ್ಮನು ಸರ್ವೋತ್ತಮನೆಂದು ತಿಳಿದ ಜ್ಞಾನಿಯು ಲೋಕದಲ್ಲಿ ಬಹಳ ದುರ್ಲಭನು. (ಅಂದರೆ ಶ್ರೀಪರಮಾತ್ಮನ ಜ್ಞಾನದಿಂದ ಮೋಕ್ಷವಾಗುವುದಾದರೂ ಎಲ್ಲರಿಗೆ ಪರಮಾತ್ಮನು ಸರ್ವೋತ್ತಮನೆಂದು ಜ್ಞಾನವು ಇರುವುದಿಲ್ಲ. ಆದಕಾರಣ ಸರ್ವರಿಗೆ ಮೋಕ್ಷವಾಗುವುದಿಲ್ಲ) (ಇದರಿಂದ ಸ ಮಹಾತ್ಮಾ ಎಂಬುವುದು ವ್ಯಾಖ್ಯಾತವಾಯ್ತು) (ಲೋಕದಲ್ಲಿ ಭಗವಜ್ಜ್ಞಾನಿಗಳು ಬಹುಮಂದಿ ಇದ್ದ ಪ್ರಯುಕ್ತ ದುರ್ಲಭತ್ವವು ಹೇಗೆಂದರೆ-) ಎಲ್ಲರೂ ವಿಪರೀತವಾಗಿಯೇ ಪೂಜಿಸುವರು. (ಶ್ರೀಪರಮಾತ್ಮನನ್ನು ಸರ್ವೋತ್ತಮನೆಂದು ತಿಳಿದುಕೊಳ್ಳದೆ ವಿಪರೀತವಾಗಿ ತಿಳಿದುಕೊಂಡು, ತನಗೆ ಅಯೋಗ್ಯ ದೇವಾದಿಗಳ ಪದವನ್ನು ಇಚ್ಛಿಸಿಯೂ ಯಜ್ಞ ಮಾಡುವವರು.) (ಇದರಿಂದ ಕಾಮೈಸ್ತೈಸ್ತೈಃ ಇತ್ಯಾದಿಗಳ ತಾತ್ಪರ್ಯವು ಉಕ್ತವಾಯ್ತು.) (೩) (ಆ ರೀತಿಯಾಗಿ ಯಜ್ಞ ಮಾಡುವವರಿಗೆ ಫಲವು ಯಾವುದೆಂದರೆ-) ಶ್ರೀಪರಮಾತ್ಮನನ್ನು ಲಕ್ಷ್ಮೀಬ್ರಹ್ಮಾದಿಗಳಿಗಿಂತ ಉತ್ತಮನನ್ನಾಗಿ ತಿಳಿಯದೆ ವಿಪರೀತವಾಗಿ ತಿಳಿದು ಲಕ್ಷ್ಮೀ ಬ್ರಹ್ಮರುದ್ರ ಮೊದಲಾದವರನ್ನು ಸರ್ವೋತ್ತಮರೆಂದು ತಿಳಿದು ಯಾಗ ಮಾಡುವವರೂ ಕೂಡ ನಿತ್ಯದುಃಖಾತ್ಮಕವಾದ ಭಯಂಕರವಾದ ಅಂಧಂತಮಸ್ಸನ್ನು ಹೊಂದುತ್ತಾರೆ. (೪) (ಉಪದೇಶಕರಿಲ್ಲದೆ ಯಥಾರ್ಥಜ್ಞಾನವಿಲ್ಲ. ವಿಪರೀತ ಜ್ಞಾನವೂ ಇಲ್ಲ. ಅಂತಹವನಿಗೆ ಬೇರೆ ದೇವತೆಗಳನ್ನು ಪೂಜಿಸಿದ್ದರಿಂದ ಏನು ಫಲವಾಗು

ವೃದ್ಧಃ? ಎಂದರೆ—) ಆಜ್ಞರ ಕುಲದಲ್ಲಿ ಹುಟ್ಟಿದವನು ಗುರುಗಳು ಸಿಗದೆ ತತ್ವಜ್ಞಾನವಿಲ್ಲದವನಾಗಿ ಶ್ರೀಪರಮಾತ್ಮನಿಗೆ ಪೂಜೆಯನ್ನು ಮಾಡಬೇಕೆಂದೂ ಶ್ರೀಪರಮಾತ್ಮನ ತತ್ವವನ್ನು ತಿಳಿಯಬೇಕೆಂದೂ ಆತನ ಜ್ಞಾನವು ಸಿಗುವ ಪರ್ಯಂತ ಬ್ರಹ್ಮಾದಿಗಳು ಪರಿವಾರಭೂತರು ಎಂದು ತಿಳಿಯದೆ ಮಾಡಿದ ಅವರ ಸೇವೆಯೂ, ಆ ದೇವತೆಗಳನ್ನುದ್ದೇಶಿಸಿ ಮಾಡಿದ ಯಜ್ಞವೂ, ವಿದ್ಯಾ ಮೊದಲಾದುದೂ, ಆ ದೇವತೆಗಳ ಜ್ಞಾನ ಸ್ತೋತ್ರ ಮೊದಲಾದುದೂ ಐಹಿಕಭೋಗವನ್ನು ಹೊಂದಿಸಿಕೊಡಲಿಕ್ಕೇನೇ ಸಮರ್ಥವಾಗುತ್ತದೆ. ಶ್ರೀವಿಷ್ಣುವು ಸರ್ವೋತ್ತಮನೆಂದು ತಿಳಿದುಕೊಳ್ಳದೆ ಬೇರೆ ದೇವತೆಗಳ ಉದ್ದೇಶದಿಂದ ಯಜ್ಞವನ್ನು ಮಾಡಿ ಪುನಃ ವಿಷ್ಣುವು ಸರ್ವೋತ್ತಮನೆಂದು ತಿಳಿದುಕೊಂಡು ಮೇಲೆ ತಿರುಗಿ ಬ್ರಹ್ಮಾದಿಗಳನ್ನು ಪರಿವಾರಭೂತರೆಂದು ತಿಳಿಯದೆ ಅಂದರೆ ಸ್ವತಂತ್ರರೆಂದು ತಿಳಿದು ಆ ಬ್ರಹ್ಮಾದಿಗಳ ಪೂಜೆಯನ್ನು ಸರ್ವಥಾ ಎಲ್ಲಿಯೂ ಮಾಡುವುದೇ ಇಲ್ಲ. ಅಂತೂ ಪೂರ್ವದಲ್ಲಿ ಶ್ರೀಹರಿಯು ಸರ್ವೋತ್ತಮನೆಂದು ತಿಳಿಯದೆ ಮಾಡಿದ ಕರ್ಮವೂ ವಿದ್ಯಾದಿಗಳೂ ಇವೆಲ್ಲವೂ ಐಹಿಕಭೋಗಗಳನ್ನು ಕೊಡಲಿಕ್ಕೇನೇ ಸಮರ್ಥವಾಗುತ್ತವೆ. ಮೊದಲು ಪರಮಾತ್ಮನು ಸರ್ವೋತ್ತಮನೆಂದು ತಿಳಿಯದೆ ಮಾಡಿದ ಬ್ರಹ್ಮಾದಿ ದೇವತೆಗಳ ಪೂಜೆಯು ಪುನಃ ಶ್ರೀಪರಮಾತ್ಮನು ಸರ್ವೋತ್ತಮನೆಂದು ತಿಳಿದುಬಿಟ್ಟರೆ ಅದರಿಂದ ದೋಷ (ಪಾಪ)ವು ಬರುವುದಿಲ್ಲ ಪುನಃ ಸತ್ಕುಲದಲ್ಲಿ ಜನ್ಮಾದಿಗಳನ್ನು ಹೊಂದಿಸಿಕೊಡಲಿಕ್ಕೇನೇ ಕಾರಣವಾಗುತ್ತದೆ. (ಸ್ವತಃ ಭಗವದ್ಭಕ್ತನೇ ಆಗಿದ್ದವನು ಶ್ರೀಭಗವತ್ತತ್ವವನ್ನು ತಿಳಿದರೂ ಕಾರಣವಿಶೇಷದಿಂದ ಹಿಂದಿನ ಮಾರ್ಗವನ್ನು ಬಿಡದಿದ್ದರೆ ಅಂತಹನಿಗೆ ಏನು ಫಲವಾಗುವುದು. ಎಂದರೆ—) ಶ್ರೀವಿಷ್ಣುವಿನ ತತ್ವವನ್ನರಿತವನು ವಿಶೇಷವಾಗಿ ಸ್ವಾಭಾವಿಕವಾಗಿಯೇ ಭಗವದ್ಭಕ್ತನಾಗಿದ್ದರೆ ಅದರಿಂದಲೇ ಪೂರ್ವಮಾರ್ಗವನ್ನು ಕಾರಣಾಂತರದಿಂದ ಬಿಡದಿದ್ದರೆ ಶ್ರೀಪರಮಾತ್ಮನು ತಾನೇ ಒಬ್ಬ ಗುರುವನ್ನು ನಿಮಿತ್ತೀಕರಿಸಿಕೊಂಡು ಅದೇ ಜನ್ಮದಲ್ಲಿ ಶೀಘ್ರವಾಗಿ ಅಥವಾ ಜನ್ಮಾಂತರದಲ್ಲಿ ಹಿಂದಿನ ಮಾರ್ಗವನ್ನು ಬಿಡುವುದಕ್ಕಾಗಿ ಅದು ಹೇಯವೆಂದೂ ಶ್ರೀಭಗವನ್ಮಾರ್ಗವು ಅವಶ್ಯವಾಗಿ ಸ್ವೀಕರಿಸಬೇಕೆಂದೂ ತಿಳಿಸುತ್ತಾನೆ, ಇತ್ಯಾದಿ ಕ್ರಮೇಯವು ಹೇಳಲ್ಪಟ್ಟಿದೆ. (ಇದರಿಂದ ಲಭತೇ ಚ ಇತ್ಯಾದಿಗಳ ತಾತ್ಪರ್ಯವು ಉಕ್ತವಾಯ್ತು) ॥ ೨ ॥

ಟೀ—ಶ್ರೀಪರಮಾತ್ಮನು ರಸಾದಿಗಳಿಗೆ ಕಾರಣನಾದುದರಿಂದ ಆತನಿಗೆ ರಸ ಮೊದಲಾದ ನಾಮವು. ರಸಕ್ಕೂ ಪರಮಾತ್ಮನಿಗೂ ಅಭೇದದಿಂದ ಅಲ್ಲ, ಎಂದು ಹಿಂದೆ ಹೇಳಿರುವರು. ಏವಂಚ ಮಯಿ ಸರ್ವಮಿದಂ ಎಂಬುವ ಉಪಕ್ರಮ ವಾಕ್ಯ, ಮತ್ತ ಏವ ಎಂಬುವ ಉಪಸಂಹಾರ ವಾಕ್ಯಗಳಿಂದಲೂ ಎಲ್ಲವೂ ಶ್ರೀಪರಮಾತ್ಮನ ಅಧೀನವೇ ಎಂದು ತಿಳಿಯುತ್ತದೆ ಎನ್ನುತ್ತಾರೆ—

ತಾ ॥ (೧) ಮತ್ತ ಏವೇತಿ ತಾನ್ವಿದ್ಧೀತ್ಯುಪಸಂಹಾರಾಚ್ಚ । ತತ್ತತ್ಕಾರಣತ್ವಾತ್ತತ್ತನ್ನಾಮೇತ್ಯವಸೀಯತೇ ॥ (೨) ಮಯಿ ಸರ್ವಮಿದಂ ಪ್ರೋತಮಿತಿ ಭೇದೇನೈವೋಪಕ್ರಮಾಚ್ಚ ॥ (೩) ಆಪ್ನೋತಿ ವಿಷ್ಣುಮಿತ್ಯೇವಾತ್ಮಶಬ್ದೋ ಜ್ಞಾನಿನಿ । ಯಚ್ಚಾಪ್ನೋತಿ ಯದಾದತ್ತ ಇತ್ಯಾದೇಃ ॥ (೪) ಆಸ್ಥಿತಃ ಸ ಹಿ ಮಾಂ ಪ್ರಪದ್ಯತೇ ಇತ್ಯಾದಿವಾಕ್ಯಶೇಷಾಚ್ಚ ॥ (೫) ಬಹೂನಾಂ ಜನ್ಮನಾಮಂತೇ ಜ್ಞಾನವಾನ್ಮಾಂ ಪ್ರಪದ್ಯತೇ । ವಾಸುದೇವಃ ಸರ್ವಮಿತಿ ಪೂರ್ಣಮಿತಿ ಜಾನನ್ಪ್ರಪದ್ಯಂತೇಽನ್ಯದೇವತಾ ಇತಿ(ಇತ್ಯಾದಿ)ವಾಕ್ಯಶೇಷೇ ಭೇದದರ್ಶನಾಚ್ಚ । ದೇವಾನ್ದೇವಯಜೋ ಯಾಂತಿ ಮದ್ಭಕ್ತಾ ಯಾಂತಿ ಮಾಮಪೀತಿ ಚ ॥ (೬) ಜ್ಞಾತ್ವಾ ಪರತ್ವಂ ವಿಷ್ಣೋಸ್ತು ಪೃಥಗ್ದೇವಾನ್ಯಜನ್ನರಃ । ಯಾತಿ ದೇವಾಂಸ್ತದಜ್ಞಾತ್ವಾ ತಮ ಏವ ಪ್ರಪದ್ಯತೇ ॥(೭)ತಥಾ

ಅಪಿ ಯಾವದನನ್ಯೈಸ್ತು ಸಾಮ್ಯಂ ಹೀನತ್ವಮೇವ ವಾ । ನ ನಿಶ್ಚಿನ್ವಂತಿ ಜಾಯಂತೇ ಸಂಸಾರೇ ತೇ ಪುನಃಪುನರಿತಿ ಚ ॥ ೩ ॥ ॥ ೨೩ ॥

ಅ ॥ (೧) ಮತ್ತ ಏವ ತಾನ್ ಎಂಬೀ ಉಪಸಂಹಾರ ವಾಕ್ಯದಿಂದಲೂ ರಸ ಗಂಧ ಮೊದಲಾದವುಗಳಿಗೆ ಕಾರಣನಾಗಿರುವುದರಿಂದ ರಸ ಗಂಧ ಮೊದಲಾದ ಆಯಾಯ ನಾಮಧೇಯವುಳ್ಳವನೆಂದು ನಿಶ್ಚಿತವಾಗುತ್ತದೆ. (೨) ನನ್ನಲ್ಲಿ ಈ ಎಲ್ಲಾ ಜಗತ್ತೂ ಆಶ್ರಿತವಾಗಿದೆ, ಎಂದು ಭೇದವೇ ಆದಿಭಾಗದಲ್ಲಿ ಉಕ್ತವಾಗಿದೆ. (೩) (ಜ್ಞಾನೀ ತ್ವಾತ್ಮೈವ ಮೇ ಮತಂ ಎಂಬುವುದಕ್ಕೆ ಶ್ರೀಪರಮಾತ್ಮನನ್ನು ತಿಳಿದವನು ಪರಮಾತ್ಮನನ್ನು ಹೊಂದುತ್ತಾನೆಂದು ವ್ಯಾಖ್ಯಾನಮಾಡಿರುವರು. ಯುಕ್ತಿಯಿಂದಲೂ ಹಿಂದೆ ಹೇಳಿದ ಅರ್ಥವೇ ಯುಕ್ತವು, ಅಭೇದಾರ್ಥಕವಲ್ಲವೆಂದು ಸಾಧಿಸುತ್ತಾರೆ—) ಶ್ರೀವಿಷ್ಣುವನ್ನು ಜ್ಞಾನಿಯು ಹೊಂದುವುದರಿಂದ ಜ್ಞಾನಿಯು ಆತ್ಮನೆಂದು ಅನ್ನಿಸಿಕೊಳ್ಳುತ್ತಾನೆ. (೪)(ಅದು ಹೇಗೆಂದರೆ—) ಯಾವ ಕಾರಣದಿಂದ ಶ್ರೀಪರಮಾತ್ಮನು ಎಲ್ಲವನ್ನೂ ಹೊಂದುತ್ತಾನೋ, ತೆಗೆದುಕೊಳ್ಳುತ್ತಾನೋ, ವಿಷಯುಗಳನ್ನು ಭೋಗಿಸುತ್ತಾನೋ, ಇತ್ಯಾದಿ ಭಾರತ ಪ್ರಮಾಣದಿಂದಲೂ ಶ್ರೀಪರಮಾತ್ಮನಲ್ಲಿಯೇ ಭಕ್ತಿಯನ್ನು ಮಾಡಿರುವ ಆ ಜ್ಞಾನಿಯೇ ನನ್ನನ್ನು ಶರಣು ಹೊಂದುತ್ತಾನೆ. ಇದು ಮೊದಲಾದ ವಾಕ್ಯ ಶೇಷದಿಂದಲೂ ಆತ್ಮಾ ಎಂಬುವುದಕ್ಕೆ ಪರಮಾತ್ಮನನ್ನು ಹೊಂದಿದವನೆಂದು ಅರ್ಥವನ್ನೇ ಇಟ್ಟುಕೊಳ್ಳಬೇಕೆಂದು ಸಿದ್ಧವಾಗುತ್ತದೆ (ಏವಂಚ ಮೋಕ್ಷಪ್ರಾಪ್ತಿಗಾಗಿ ಶ್ರೀಪರಮಾತ್ಮನನ್ನು ಧ್ಯಾನಿಸುವ ಜ್ಞಾನಿಗೆ ಮೋಕ್ಷವು ಸಿಗುತ್ತದೆಂದು ಹೇಳಿದ ಕಾರಣ ಜ್ಞಾನೀ ತ್ವಾತ್ಮೈವ ಮೇಮತಂ ಎಂಬುವಲ್ಲಿಯೂ ನನ್ನನ್ನು ಹೊಂದುತ್ತಾನೆಂದೇ ಅರ್ಥಮಾಡಬೇಕು. ಸ್ವರೂಪವೆಂಬುವ ಅರ್ಥವಲ್ಲ. (೫) (ಜ್ಞಾನವು ಹುಟ್ಟಿದೊಡನೆ ಮೋಕ್ಷವು ನಿಶ್ಚಿತವಾಗಿರುವುದರಿಂದ ಬಹೂನಾಂ ಜನ್ಮನಾಂ ಎಂದು ಹೇಳಿದ್ದು ಹೇಗೆ ಎಂದರೆ—) ಬಹು ಜನ್ಮಗಳ ಅಂತ್ಯದಲ್ಲಿ ಜ್ಞಾನವುಳ್ಳವನಾಗುತ್ತಾನೆ. ಆಮೇಲೆ ನನ್ನನ್ನು ಹೊಂದುತ್ತಾನೆ. ವಾಸುದೇವನು ಸರ್ವಮಿತಿ= ಸರ್ವಗುಣ ಪರಿಪೂರ್ಣನೆಂದು ತಿಳಿದವನು. (ಇಲ್ಲಿ ಶ್ರೀಪರಮಾತ್ಮನಿಗೆ ಸರ್ವಗುಣಪರಿಪೂರ್ಣತ್ವವೇ ಹೇಳಲ್ಪಡುತ್ತದೆ. ಸರ್ವೈಕ್ಯವಲ್ಲ) (ಈ ವಾಕ್ಯವು ಅಭೇದವನ್ನು ಹೇಳುತ್ತದೆಂದೇ ಏಕೆ ಆಗಬಾರದೆಂದರೆ—) ವಿಷ್ಣುವಿಗಿಂತ ಇತರರಾದ ಬ್ರಹ್ಮಾದಿ ದೇವತೆಗಳನ್ನು ಹೊಂದುತ್ತಾರೆಂದು ವಾಕ್ಯಶೇಷದಲ್ಲಿ ಭೇದವೇ ಸ್ಪಷ್ಟವಾಗಿ ಕಂಡದೆ. ದೇವತೆಗಳನ್ನು ಪೂಜಿಸುವವರು ದೇವತೆಗಳನ್ನು ಹೊಂದುತ್ತಾರೆ. ನನ್ನ ಭಕ್ತರು ನನ್ನನ್ನು ಹೊಂದುತ್ತಾರೆ, ಎಂದೂ (ಭೇದವನ್ನೇ ಸ್ಪಷ್ಟವಾಗಿ ಹೇಳಿರುತ್ತಾರೆ.) (೬) ಶ್ರೀವಿಷ್ಣುವು ಸರ್ವೋತ್ತಮನೆಂದು ತಿಳಿದುಕೊಂಡು ದೇವತೆಗಳನ್ನು ಪ್ರತ್ಯೇಕ ಪೂಜಿಸುವವರು ದೇವತೆಗಳನ್ನು ಹೊಂದುತ್ತಾರೆ. ಶ್ರೀವಿಷ್ಣುವು ಸರ್ವೋತ್ತಮನೆಂದು ತಿಳಿಯದೆ ಬೇರೆ ದೇವತೆಗಳೇ ಸರ್ವೋತ್ತಮರೆಂದು ತಿಳಿದು ಪೂಜಿಸುವವರು ಅಂಧಂತಮಸ್ಸನ್ನು ಹೊಂದುತ್ತಾರೆ. (೭) ಹೀಗೆ ವಿಪರೀತ ಜ್ಞಾನವಿಲ್ಲದೆ ಶ್ರೀಪರಮಾತ್ಮನಿಗೆ ಬ್ರಹ್ಮಾದಿಗಳಿಂದ ಸಾಮ್ಯವನ್ನೂ, ನೀಚತ್ವವನ್ನೂ, ಐಕ್ಯವನ್ನಾಗಲೀ ನಿಶ್ಚಯಿಸಿಕೊಳ್ಳುವುದಿಲ್ಲವೋ, ಅವರು ಪುನಃಪುನಃ ಸಂಸಾರದಲ್ಲಿ ಹುಟ್ಟುತ್ತಾರೆ. (ಆ ಮೇಲೆ ಅಸುರಯೋನಿಯನ್ನು ಹೊಂದಿ ಮೂಢರಾಗಿ ಕೊನೆಗೆ ಅಂಧಂತಮಸ್ಸನ್ನು ಹೊಂದುತ್ತಾರೆ) ॥ ೨೩ ॥

ಟೀ—ಬ್ರಹ್ಮಾದಿಗಳನ್ನು ಪೂಜಿಸುವವರಿಗೆ ನಾಶವುಳ್ಳ ಸ್ವರ್ಗಾದಿರೂಪ ಫಲವು. ಪರಮಾತ್ಮನನ್ನು ಪೂಜಿಸುವವರಿಗೆ ನಾಶವಿಲ್ಲದ ಮೋಕ್ಷರೂಪ ಫಲವೆಂಬುದು ಹೇಗೆ? ಬ್ರಹ್ಮಾದಿಗಳಿಗಿಂತ ಶ್ರೀಪರಮಾತ್ಮನಿಗೆ ವಿಶೇಷವೇನು? ಎಂದರೆ—

ಗೀ ॥ ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಮಬುದ್ಧಯಃ ।
ಪರಂ ಭಾವಮಜಾನಂತೋ ಮಮಾವ್ಯಯಮನುತ್ತಮಂ ॥ ೨೪ ॥

ಅ ‖ ಅಬುದ್ಧಯಃ=ಅಜ್ಞಾನಿಗಳು, ಪರಂ=ಬ್ರಹ್ಮಾದಿಗಳಿಗಿಂತ ವಿಲಕ್ಷಣವೂ, ಅನುತ್ತಮಂ=ಅತ್ಯುತ್ಕೃಷ್ಟವೂ, ಅವ್ಯಯಂ=ನಾಲ್ಕುವಿಧನಾಶ ಇಲ್ಲದಿರುವುದೂ, ಆದ, ಮಮ=ನನ್ನ, ಭಾವಂ=ಯಥಾರ್ಥ ಸ್ವರೂಪವನ್ನು, ಅಜಾನಂತಃ=ತಿಳಿಯದವರಾಗಿ, ಅವ್ಯಕ್ತಂ=ಜಡಪ್ರಕೃತಿ ಕಾರ್ಯಗಳಾದ ದೇಹಾದಿಗಳಿಲ್ಲದಿರುವ, ಮಾಂ=ನನ್ನನ್ನು, ವ್ಯಕ್ತಿಮಾಪನ್ನಂ=ಪ್ರಾಕೃತ ದೇಹಾದಿಗಳನ್ನು ಹೊಂದಿದವನನ್ನಾಗಿ, ಮನ್ಯಂತೇ=ತಿಳಿಯುತ್ತಾರೆ. (ಏವಂಚ ಬ್ರಹ್ಮರುದ್ರಾದಿ ದೇವತೆಗಳು ಪ್ರಾಕೃತ ದೇಹಾದಿಗಳುಳ್ಳವರು ಶ್ರೀಪರಮಾತ್ಮನು ಪ್ರಾಕೃತ ಶರೀರಾದಿಗಳು ಇಲ್ಲದವನು. ಅಪ್ರಾಕೃತ ಚಿದಾನಂದಾತ್ಮಕ ಶರೀರವುಳ್ಳವನು ಹೀಗೆ ಶ್ರೀಪರಮಾತ್ಮನಿಗೆ ಬ್ರಹ್ಮಾದಿಗಳಿಗಿಂತ ವಿಶೇಷವು.) ಅಥವಾ ನನ್ನ ಸ್ವರೂಪವನ್ನು ತಿಳಿಯದಿರುವ ಅಲ್ಪಜ್ಞಾನಿಗಳು ಅವ್ಯಕ್ತನಾದ ನನ್ನನ್ನು ಸರ್ವಾತ್ಮನಾ ವ್ಯಕ್ತನಾದ ಜೀವನನ್ನಾಗಿ ತಿಳಿಯುತ್ತಾರೆ. (ಜೀವೈಕ್ಯವನ್ನು ತಿಳಿಯುತ್ತಾರೆ) ಹೀಗೆ ತಿಳಿಯುವವರು ತಮೋಯೋಗ್ಯರು. ‖ ೨೪ ‖

ಭಾ ‖ (೧) ಕೋ ವಿಶೇಷಸ್ತ್ವಾನ್ನೇಭ್ಯ ಇತ್ಯತ ಆಹ । ಅವ್ಯಕ್ತಮಿತಿ । ಕಾರ್ಯದೇಹಾದಿವರ್ಜಿತಂ ‖ (೨) ತದ್ವಾನಿವ ಪ್ರತೀಯಸ ಇತ್ಯತ ಆಹ । ವ್ಯಕ್ತಿಮಾಪನ್ನಮಿತಿ । ಕಾರ್ಯದೇಹಾದ್ಯಾಪನ್ನಂ ‖ (೩) ತಚ್ಚೋಕ್ತಂ । (1) ಸದಸತಃ ಪರಂ । (2) ನ ತಸ್ಯ ಕಾರ್ಯಂ । (3) ಅಪಾಣಿಪಾದಃ । (4) ಆನಂದದೇಹಂ ಪುರುಷಂ ಮನ್ಯಂತೇ ಗೌಣದೃಷ್ಟಿಕಮಿತ್ಯಾದೌ ‖ (೪) ಭಾವಂ ಯಾಥಾರ್ಥ್ಯಂ । ತಥಾಽಬ್ರವೀಚ್ಚ । ಯಾಥಾತಥ್ಯಮಜಾನಂತಃ ಪರಂ ತಸ್ಯ ವಿಮೋಹಿತಾ ಇತ್ಯಾದಿ ‖ ೨೪ ‖

ಅ ‖ (೧) ನಿನಗೆ ಬ್ರಹ್ಮಾದಿಗಳಿಗಿಂತ ವಿಶೇಷವು ಯಾವುದು? (ಬ್ರಹ್ಮಾದಿಗಳನ್ನು ಹೊಂದಿದವರಿಗೆ ನಾಶವುಳ್ಳ ಸ್ವರ್ಗಾದಿರೂಪವಾದ ಫಲವು. ನಿನ್ನನ್ನು ಹೊಂದಿದವರಿಗೆ ನಾಶವಿಲ್ಲದ ಮೋಕ್ಷಾದಿರೂಪವಾದ ಫಲವು ಹೇಗೆ? ಎಂದರೆ) ಅವ್ಯಕ್ತಂ ಎಂಬುವುದರಿಂದ ಸಮಾಧಾನ ಹೇಳುತ್ತಾರೆ –) ಅವ್ಯಕ್ತಂ= ಪ್ರಕೃತಿಕಾರ್ಯ ದೇಹಾದಿಗಳು ಇಲ್ಲದವನು. (೨) ಪ್ರಾಕೃತ ಶರೀರವಿರುವವನಂತೆ ತೋರುತ್ತಿ ಎಂದರೆ ವ್ಯಕ್ತಿಮಾಪನ್ನಂ ಎಂದು ಹೇಳಿದ್ದಾರೆ. ಪ್ರಕೃತಿಕಾರ್ಯಗಳಾದ ದೇಹಾದಿಗಳನ್ನು ಹೊಂದಿದವನು (೩) (ಈ ವಿಷಯದಲ್ಲಿ ಪ್ರಮಾಣಗಳನ್ನು ಹೇಳುತ್ತಾರೆ—) ಆ ಪ್ರಮೇಯವು ಹೇಳಲ್ಪಟ್ಟಿದೆ. (1) ಶ್ರೀಪರಮಾತ್ಮನು ಕಾರ್ಯವಾದ ದೇಹಾದಿ; ಕಾರಣವಾದ ಪ್ರಕೃತಿ ಇವುಗಳಿಂದ ವಿಲಕ್ಷಣನು. (2) ಶ್ರೀಪರಮಾತ್ಮನಿಗೆ ಪ್ರಾಕೃತ ಶರೀರವಿಲ್ಲ. (3) ಪ್ರಾಕೃತ ಕೈಕಾಲುಗಳಿಲ್ಲದವನು. (4) ಆನಂದಾತ್ಮಕ ಶರೀರವುಳ್ಳ ಪರಮಾತ್ಮನನ್ನು ಸತ್ವರಜಸ್ತಮೋಗುಣಾತ್ಮಕ ದೇಹವುಳ್ಳವನನ್ನಾಗಿ ತಿಳಿಯುತ್ತಾರೆ. ಇತ್ಯಾದಿಗಳಲ್ಲಿ ಹೇಳಿದ್ದಾರೆ. (೪) ಭಾವಂ=ಯಾಥಾರ್ಥ್ಯವನ್ನು, ಹಾಗೆಯೇ ಹೇಳಿರುವನು. ಆ ಶ್ರೀಪರಮಾತ್ಮನ ಉತ್ತಮವಾದ ಯಥಾರ್ಥಸ್ವರೂಪವನ್ನು ತಿಳಿಯದವರಾಗಿ ವಿಮೋಹಿತರಾಗಿರುತ್ತಾರೆ, ಇತ್ಯಾದಿ ವಿಷಯವು ನಿರೂಪಿಸಲ್ಪಟ್ಟಿದೆ ‖ ೨೪ ‖

ಗೀ ‖ ನಾಹಂ ಪ್ರಕಾಶಃ ಸರ್ವಸ್ಯ ಯೋಗಮಾಯಾಸಮಾವೃತಃ ।
ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಂ ‖
‖ ೨೫ ‖

ಅ ‖ ಯೋಗಮಾಯಾಸಮಾವೃತಃ=ನನ್ನ ಸಾಮರ್ಥ್ಯರೂಪ ಉಪಾಯದಿಂದಲೂ ದುರ್ಗಾದೇವಿಯಿಂದಲೂ, ಸಮಾವೃತಃ=ಮರೆ ಮಾಡಲ್ಪಟ್ಟ, ಅಹಂ=ನಾನು, ಸರ್ವಸ್ಯ ಎಲ್ಲಾ ಜನರಿಗೆ, ಪ್ರಕಾಶಃ

ಜ್ಞಾನವಿಷಯನು, ನ=ಆಗುವುದಿಲ್ಲ. (ಈ ಕಾರಣದಿಂದ) ಮೂಢಃ=ನನ್ನಿಂದಲೇ ಮೋಹವನ್ನು ಹೊಂದಿದ, ಅಯಂ ಲೋಕಃ=ಈ ಜನರು, ಮಾಂ=ನನ್ನನ್ನು, ಅಜಂ=ಉತ್ಪತ್ತಿರಹಿತನನ್ನಾಗಿಯೂ, ಅವ್ಯಯಂ=ವಿನಾಶರಹಿತನನ್ನಾಗಿಯೂ, ನಾಭಿಜಾನಾತಿ=ತಿಳಿಯುವುದಿಲ್ಲ. ॥ ೨೫ ॥

ಭಾ ॥ (೧) ಅಜ್ಞಾನಂ ಚ ಮದಿಚ್ಛಯೇತ್ಯಾಹ । ನಾಹಮಿತಿ । ಯೋಗೇನ ಸಾಮರ್ಥ್ಯೋಪಾಯೇನ ಮಾಯಯಾ ಚ ॥ (೨) ಮಯ್ಯೈವ ಮೂಢೋ ನಾಭಿಜಾನಾತಿ । ತಥಾಽಽಹ ಪಾದ್ಮೇ । ಆತ್ಮನಃ ಪ್ರಕೃತಿಂ ಚೈವ ಲೋಕಚಿತ್ತಸ್ಯ ಬಂಧನಂ । ಸ್ವಸಾಮರ್ಥ್ಯೇನ ದೇವ್ಯಾ ಚ ಕುರುತೇ ಸ ಮಹೇಶ್ವರ ಇತಿ ॥ ೨೫ ॥

ಅ ॥ (೧) ನಾಹಂ ಎಂಬುವ ಶ್ಲೋಕದಿಂದ ನನ್ನ ಇಚ್ಛೆಯಿಂದಲೇ ನನ್ನ ವಿಷಯದಲ್ಲಿ ಅಜ್ಞಾನವೆನ್ನುತ್ತಾರೆ—)ಯೋಗೇನ=ನನ್ನ ಸಾಮರ್ಥ್ಯರೂಪವಾದ ಉಪಾಯದಿಂದ. ಮಾಯಾರೂಪಳಾದ ದುರ್ಗಾದೇವಿಯಿಂದಲೂ. (೨) ನನ್ನಿಂದಲೇ ಮೋಹ ಹೊಂದಿದವರಾಗಿ ತಿಳಿಯುವುದಿಲ್ಲ. ಹಾಗೆಯೇ ಪಾದ್ಮದಲ್ಲಿದೆ ಆ ಶ್ರೀಪರಮಾತ್ಮನು ತನ್ನ ಸಾಮರ್ಥ್ಯದಿಂದಲೂ, ದುರ್ಗಾದೇವಿಯಿಂದಲೂ, ತನ್ನ ಅಧೀನವಾದ ಪ್ರಕೃತಿಯನ್ನು ಜನರ ಮನಸ್ಸಿಗೆ ಬಂಧಕವನ್ನಾಗಿ ಮಾಡುತ್ತಾನೆ, ಎಂದೂ ಇದೆ. ॥ ೨೫ ॥

ತಾ ॥ ಅವ್ಯಕ್ತಃ ಪರಮಾತ್ಮಾಽಸೌ ವ್ಯಕ್ತೋ ಜೀವ ಉದಾಹೃತಃ । ಮನ್ಯತೇ ಯಸ್ತಯೋರೈಕ್ಯಂ ಸ ತು ಯಾತ್ಯಧರಂ ತಮ ಇತಿ ಚ ॥ ೨೪,೨೫ ॥

ಅ ॥ ಪರಮಾತ್ಮನು ಅವ್ಯಕ್ತನೆನಿಸುತ್ತಾನೆ ಜೀವನು ವ್ಯಕ್ತನೆನಿಸುತ್ತಾನೆ. ಜೀವಬ್ರಹ್ಮರಿಗೆ ಐಕ್ಯವನ್ನು ಯಾವನು ತಿಳಿಯುತ್ತಾನೋ, ಅವನು ಅಂಧಂತಮಸ್ಸನ್ನು ಹೊಂದುತ್ತಾನೆ. ॥ ೨೪, ೨೫ ॥

ಗೀ ॥ ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।
ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬ ॥

ಅ ॥ ಅರ್ಜುನ=ಅರ್ಜುನನೇ, ಅಹಂ=ನಾನು, ಸಮತೀತಾನಿ=ಕಳೆದು ಹೋದ, ವರ್ತಮಾನಾನಿ ಚ=ಈಗ ಇರುವ, ಭವಿಷ್ಯಾಣಿ ಚ=ಇನ್ನು ಮುಂದೆ ಉಂಟಾಗುವ, ಭೂತಾನಿ ಚ=ಪ್ರಾಣಿಗಳನ್ನು, ವೇದ=(ಮಾಯಾನಿಮಿತ್ತ ಬಂಧವು ನನಗೆ ಇಲ್ಲದಿರುವುದರಿಂದ) ತಿಳಿಯುತ್ತೇನೆ. ಮಾಂ ತು=ನನ್ನನ್ನಾದರೂ, ಕಶ್ಚನ=ಯಾರೊಬ್ಬನೂ, ನ ವೇದ=(ಮಾಯಾನಿಮಿತ್ತ ಬಂಧವಿರುವುದರಿಂದ) ಯಥಾರ್ಥವಾಗಿ ತಿಳಿಯುವುದಿಲ್ಲ. (ಬ್ರಹ್ಮರುದ್ರಾದಿಗಳೂ ಸಹ ಸಂಪೂರ್ಣ ತಿಳಿಯುವುದಿಲ್ಲ.) ॥ ೨೬ ॥

ಭಾ ॥ ನ ಚ ಮಾಂ ಮಾಯಾ ಬಧ್ನಾತೀತ್ಯಾಹ । ವೇದೇತಿ । ನ ಕಶ್ಚನಾತಿಸಮರ್ಥೋಽಪಿ ಸ್ವಸಾಮರ್ಥ್ಯಾತ್ ॥ ೨೬ ॥

ತಾ ॥ ಯಥಾಽಽತ್ಮಾನಂ ಹರಿರ್ವೇತ್ತಿ ತಥಾಽನ್ಯೇ ನೈವ ತಂ ವಿದುಃ । ಜಾನಂತಿ ಕಿಂಚಿತ್ ಕ್ರಮಶೋ ರಮಾದ್ಯಾಸ್ತತ್ಪ್ರಸಾದತ ಇತಿ ಚ ॥ ೨೬ ॥

ಅ ॥ ಶ್ರೀಪರಮಾತ್ಮನು ಹೇಗೆ ತನ್ನನ್ನು ಚೆನ್ನಾಗಿ ತಿಳಿದುಕೊಳ್ಳುತ್ತಾನೋ, ಹಾಗೆ ಇತರರು ಶ್ರೀ ಪರಮಾತ್ಮನನ್ನು ಚೆನ್ನಾಗಿ ತಿಳಿಯುವುದಿಲ್ಲ. ಲಕ್ಷ್ಮೀಬ್ರಹ್ಮಾದಿಗಳೂ ಕೂಡ ಶ್ರೀಪರಮಾತ್ಮನ ಅನುಗ್ರಹದಿಂದಲೇ ತಾರತಮ್ಯದಿಂದ ಕ್ರಮವಾಗಿ ಸ್ವಲ್ಪಸ್ವಲ್ಪ (ಅವರವರ ಯೋಗ್ಯತಾನುಸಾರ) ತಿಳಿಯುತ್ತಾರೆ. ॥ ೨೬ ॥

ಪೀ — ಪೂರ್ವದಲ್ಲಿ ಮಾಯೆಯೂ ಶ್ರೀಪರಮಾತ್ಮನೂ ಜೀವಬ್ರಹ್ಮೈಕ್ಯ ವಿಷಯಕ ಮಿಥ್ಯಾಜ್ಞಾನಕ್ಕೆ ಮುಖ್ಯ ಕಾರಣರೆಂದು ಹೇಳಿದೆ. ಈಗ ಇಚ್ಛಾ ದ್ವೇಷಗಳಿಂದ ಹುಟ್ಟಿದ ಸುಖದುಃಖಾದಿ ವಿಷಯಕ ಮಿಥ್ಯಾಜ್ಞಾನವೂ ಕೂಡ ಅವಾಂತರ ಕಾರಣವೆನ್ನುತ್ತಾರೆ—

ಗೀ ॥ ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।
ಸರ್ವಭೂತಾನಿ ಸಮ್ಮೋಹಂ ಸರ್ಗೇ ಯಾಂತಿ ಪರಂತಪ ॥ ೨೭ ॥

ಅ ॥ ಪರಂತಪ = ಶತ್ರುಗಳಿಗೆ ತಾಪವನ್ನು ಹುಟ್ಟಿಸುವ, ಭಾರತ = ಅರ್ಜುನನೇ, ಸರ್ವಭೂತಾನಿ = ಎಲ್ಲಾ ಪ್ರಾಣಿಗಳು ಇಚ್ಛಾದ್ವೇಷಸಮುತ್ಥೇನ = ಇಚ್ಛೆಯೂ ದ್ವೇಷವೂ ಇವುಗಳ ಅಭಿವೃದ್ಧಿಯಿಂದ ಹುಟ್ಟಿದ, ದ್ವಂದ್ವಮೋಹೇನ = ಸುಖದುಃಖ ಲಾಭಾಲಾಭಾದಿ ವಿಷಯಕ ಮಿಥ್ಯಾಜ್ಞಾನದಿಂದ ಅಥವಾ ಜೀವೇಶ್ವರಾದಿ ವಿಷಯಕವಾದ ಮಿಥ್ಯಾಜ್ಞಾನದಿಂದ, ಸರ್ಗೇ = ಸೃಷ್ಟಿಕಾಲವನ್ನಾರಂಭಿಸಿಕೊಂಡೇ, ಸಮ್ಮೋಹಂ = ಮಿಥ್ಯಾಜ್ಞಾನದಾರ್ಢ್ಯವನ್ನು, ಯಾಂತಿ = ಹೊಂದುತ್ತಾರೆ. ॥ ೨೭ ॥

ಭಾ ॥ (೧) ದ್ವಂದ್ವಮೋಹೇನ ಸುಖದುಃಖಾದಿವಿಷಯಮೋಹೇನ । ಇಚ್ಛಾದ್ವೇಷಯೋಃ ಪ್ರವೃದ್ಧಯೋಃ ನಹಿ ಕಿಂಚಿಜ್ಜ್ಞಾತುಂ ಶಕ್ಯಂ ॥ (೨) ಕಾರಣಾಂತರಮೇತತ್ । ಸರ್ಗೇ ಸರ್ಗಕಾಲೇ ಆರಭ್ಯೈವ । ಶರೀರೇ ಹಿ ಸತೀಚ್ಛಾದಯಃ । ಪೂರ್ವಂ ತ್ವಜ್ಞಾನಮಾತ್ರಂ ॥ ೨೭ ॥

ಅ ॥ (೧) ದ್ವಂದ್ವಮೋಹೇನ = ಸುಖದುಃಖಾದಿ ವಿಷಯಕವಾದ ಮಿಥ್ಯಾಜ್ಞಾನದಿಂದ (ವಿಷಯೇಚ್ಛಾದ್ವೇಷಗಳು ಅಭಿವೃದ್ಧಗಳಾದರೆ ಯಾವುದೊಂದೂ) ತಿಳಿಯಲು ಶಕ್ಯವಾಗುವುದಿಲ್ಲ. (ಅಂದರೆ ದುಃಖವು ಹೇಗೆ ಹೋದೀತೋ, ಅದರಂತೆ ವೈಷಯಿಕ ಸುಖಾದಿಗಳಲ್ಲಿ ಹೇಯತ್ವಾದಿ ಜ್ಞಾನವು ಬರುವುದಿಲ್ಲ) (೨) (ಶ್ರೀಪರಮಾತ್ಮನೂ ಪರಮಾತ್ಮನ ಅಧೀನವಾದ ಮಾಯೆಯೂ ಮೋಹಕವೆಂದು ಹಿಂದೆ ಹೇಳಿರುತ್ತಾರೆ. ಇದ ಕಾರಣ ಭಗವದ್ವಿಷಯಕವಾದ ಮಿಥ್ಯಾಜ್ಞಾನಕ್ಕೆ ಇಚ್ಛಾದ್ವೇಷಗಳಿಂದ ಹುಟ್ಟಿದ ದ್ವಂದ್ವಮೋಹವು ಕಾರಣಗಳೆಂದು ಹೇಳಿದ್ದು ಹೇಗೆ? ಎಂದರೆ — ) ಭಗದ್ವಿಷಯಕವಾದ ಮಿಥ್ಯಾಜ್ಞಾನಕ್ಕೆ ಇಚ್ಛಾದ್ವೇಷಗಳಿಂದ ಹುಟ್ಟಿದ ದ್ವಂದ್ವಮೋಹವು ಅವಾಂತರಕಾರಣವೆಂದು ಹೇಳಲ್ಪಡುತ್ತದೆ. (ಅದು ಹೇಗೆಂದರೆ) ಇದು ಸರ್ಗೇ — ಸೃಷ್ಟಿಕಾಲವನ್ನಾರಂಭಿಸಿಯೇ, ಜೀವರ ಭಗವದ್ವಿಷಯಕ ಮಿಥ್ಯಾಜ್ಞಾನಕ್ಕೆ ಕಾರಣವಾಗುತ್ತದೆ. ಶರೀರವು ಹುಟ್ಟಿದ ಮೇಲೆ ಇಚ್ಛಾದಿಗಳು ಹುಟ್ಟುತ್ತವೆ ಶರೀರವು ಹುಟ್ಟುವುದಕ್ಕಿಂತ ಮೊದಲು ಅಜ್ಞಾನ ಮಾತ್ರವಿರುತ್ತದೆ ॥ ೨೭ ॥

ಪೀ—ನಾಹಂ ಪ್ರಕಾಶಃ ಎಂಬುದರಿಂದ ಕೆಲವರಿಗೆ ಬರತಕ್ಕ ವಿಶ್ವಜ್ಞಾನವೂ ನನ್ನ ಇಚ್ಛೆಯಿಂದಲೇ ಎಂದು ಹೇಳಿದ್ದಾರೆ. ಅದಯುಕ್ತವು. ಏಕಾತ್ಮ್ಯಂ ನಾಮ ಯದಿದಂ ಬ್ರೂಯುಃ ಇತ್ಯಾದಿಗಳಲ್ಲಿ ಇಚ್ಛಾದ್ವೇಷಾದಿಗಳೇ ಅದ್ವೈತಜ್ಞಾನಕ್ಕೆ ಕಾರಣಗಳೆಂದು ಹೇಳಿದ್ದಾರೆ ಎಂದರೆ ಇಚ್ಛಾದ್ವೇಷಸಮುತ್ಥೇನ ಎಂದು ಹೇಳಿದೆ. ಆ ಶ್ಲೋಕದಲ್ಲಿದ್ದ ಮೋಹ ಸಮ್ಮೋಹ ಶಬ್ದಗಳಿಗೆ ಬೇರೆ ಬೇರೆ ಅರ್ಥಗಳನ್ನು ಹೇಳುತ್ತಾರೆ—

ತಾ ॥ (೧) ದ್ವಂದ್ವಮೋಹೋ ಮಿಥ್ಯಾಜ್ಞಾನಂ ! ತಮಸ್ತು ಶಾರ್ವರಂ ವಿದ್ಯಾನ್ಮೋಹಶ್ಚೈವ
ವಿಪರ್ಯಯ ಇತಿ (ಚ) ಭಾರತೇ ॥ (೨) ಜೀವೇಶ್ವರಾದಿಕಂ ದ್ವಂದ್ವಂ ತದ್ವಿಷಯೋ
ಮೋಹೋ ದ್ವಂದ್ವಮೋಹಃ । ಸಮ್ಮೋಹಸ್ತದಾಗ್ರಹಃ । ತದಾಗ್ರಹೋ ಮಹಾಮೋ
ಹಃ । ಕ್ರೋಧಸ್ತಾಮಿಸ್ರ (ತಾಮಿಸ್ರಃ ಕ್ರೋಧ) ಉಚ್ಯತ ಇತ್ಯುಕ್ತತ್ವಾತ್ । ಸರ್ಗೇ
ಸರ್ಗಕಾಲ ಏವ । ಜೀವಧರ್ಮಾನೀಶ್ವರೇ ತು ಯೋಜೀವೇಷ್ವೈಶ್ವರಾನ ಪಿ ।
ವಿದ್ಯಾಜ್ಜೀವೇಶ್ವರೈಕ್ಯಂ ವಾದ್ವಂದ್ವಮೋಹೀ ಸ ಉಚ್ಯತ ಇತ್ಯಾಗ್ನೇಯೇ ॥ ೨೭ ॥

ಅ ॥ (೧) ದ್ವಂದ್ವಮೋಹಃ = ಮಿಥ್ಯಾಜ್ಞಾನವು. (ಮೋಹ ಶಬ್ದಕ್ಕೆ ಮಿಥ್ಯಾಜ್ಞಾನವೆಂಬುವ ಅರ್ಥವು ಹೇಗೆಂದರೆ—) ರಾತ್ರಿಸಂಬಂಧಿಯಾದ ಕಗ್ಗತ್ತಲೆಯಂತೆ ಆವರಕವಾದ ಅಜ್ಞಾನವು ತಮಃ ಎನಿಸುತ್ತದೆ. ಇದ್ದುದನ್ನು ಇದ್ದಹಾಗೆ ತಿಳಿದುಕೊಳ್ಳದೆ ವಿಪರೀತವಾಗಿ ತಿಳಿದುಕೊಳ್ಳುವುದು ಮೋಹವೆನಿಸುತ್ತದೆ. (೨) (ದ್ವಂದ್ವಮೋಹ ಶಬ್ದಾರ್ಥವನ್ನು ಹೇಳುತ್ತಾರೆ—) ಜೀವೇಶ್ವರರು ಮತ್ತು ಅವರ ಧರ್ಮಗಳಾದ ಸರ್ವಜ್ಞತ್ವ ಅಲ್ಪಜ್ಞತ್ವ, ಸ್ವಾತಂತ್ರ್ಯ ಪಾರತಂತ್ರ್ಯ, ಸರ್ವಶಕ್ತಿ ಅಲ್ಪಶಕ್ತಿ ಮೊದಲಾದುವುಗಳು ದ್ವಂದ್ವಗಳು ಎನಿಸಿಕೊಳ್ಳುತ್ತವೆ. ಅವುಗಳ ವಿಷಯಗಳಲ್ಲಿರತಕ್ಕ ಮಿಥ್ಯಾಜ್ಞಾನವು ದ್ವಂದ್ವಮೋಹವೆನಿಸುತ್ತದೆ (ಸಮ್ಮೋಹಶಬ್ದಾರ್ಥವನ್ನು ಹೇಳುತ್ತಾರೆ-) ಮಿಥ್ಯಾಜ್ಞಾನದ ದಾರ್ಢ್ಯವು ಸಮ್ಮೋಹವೆನಿಸುತ್ತದೆ ಮಿಥ್ಯಾಜ್ಞಾನದಾರ್ಢ್ಯವೇ ಮಹಾಮೋಹವೆನಿಸುತ್ತದೆ. ಜೀವೈಕ್ಯವನ್ನು ನಿರಾಕರಿಸುವ ಯಥಾರ್ಥಜ್ಞಾನಿಗಳಲ್ಲಿ ಉಂಟಾಗತಕ್ಕ ಕ್ರೋಧವು ತಾಮಿಸ್ರವೆನಿಸುತ್ತದೆ ಎಂದು ಹೇಳಿದೆ. (೩) ಸರ್ಗೇ ಸೃಷ್ಟಿಕಾಲವನ್ನಾರಂಭಿಸಿಯೇ (ದ್ವಂದ್ವಮೋಹವು) ಭಗವದ್ವಿಷಯಕ ಮಿಥ್ಯಾಜ್ಞಾನಕ್ಕೆ ಕಾರಣವು. ಯಾವನು ಜೀವನ ಧರ್ಮಗಳನ್ನು ಶ್ರೀಪರಮಾತ್ಮನಲ್ಲಿಯೂ, ಜೀವರಲ್ಲಿ ಶ್ರೀಪರಮಾತ್ಮನ ಧರ್ಮಗಳನ್ನೂ ಜೀವೇಶ್ವರರಿಗೆ ಐಕ್ಯವನ್ನಾಗಲೀ ತಿಳಿಯುವನೋ, ಅವನು ದ್ವಂದ್ವಮೋಹೀ ಎನಿಸುತ್ತಾನೆ, ಎಂದು ಆಗ್ನೇಯಪುರಾಣದಲ್ಲಿದೆ. ॥ ೨೭ ॥

ಪೀ—ಎಲ್ಲಾ ಜೀವರೂ ಅಜ್ಞಾನವನ್ನೇ ಹೊಂದಿರುವುದಾದರೆ ಮುಕ್ತಿಮಾರ್ಗವೇ ಇಲ್ಲವೆಂದಾಗಬೇಕಾಗುವುದು. ಎಂದರೆ ಕೆಲವರು ಅಜ್ಞಾನವಿಲ್ಲದವರೂ ಇರುತ್ತಾರೆನ್ನುತ್ತಾರೆ—

ಗೀ ॥ ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಂ ।
ತೇ ದ್ವಂದ್ವಮೋಹನಿರ್ಮುಕ್ತಾ ಭಜಂತೇ ಮಾಂ ದೃಢವ್ರತಾಃ ॥೨೮॥

ಅ ॥ ಯೇಷಾಂ = ಯಾವ. ಪುಣ್ಯಕರ್ಮಣಾಂ = ಸತ್ಕರ್ಮವನ್ನು ಮಾಡುವ. ಜನಾನಾಂ = ಜನರ ಪಾಪಂ = ಪಾಪವು. ಅಂತಗತಂ ನಷ್ಟವಾಗಿದೆಯೋ. ತೇ ತು = ಅವರೇ, ದ್ವಂದ್ವಮೋಹನಿರ್ಮುಕ್ತಾಃ = ಹಿಂದೆ ಹೇಳಿದ ಮಿಥ್ಯಾಜ್ಞಾನರಹಿತರಾಗಿ, ದೃಢವ್ರತಾಃ = ಶ್ರೀಪರಮಾತ್ಮನನ್ನೇ ಸೇವಿಸಬೇಕೆಂಬುವ ದೃಢವಾದ ಸಂಕಲ್ಪವುಳ್ಳವರಾಗಿ, ಮಾಂ = ನನ್ನನ್ನು, ಭಜಂತೇ = ಸೇವಿಸುತ್ತಾರೆ ॥ [illegible]

ಭಾ ॥ ವಿಪರೀತಾಶ್ಚ ಕೇಚಿತ್ಸಂತೀತ್ಯಾಹ । ಯೇಷಾಮಿತಿ ॥ ೨೮ ॥

ಅ ॥ ಅಜ್ಞಾನವಿಲ್ಲದವರೂ (ಅಂದರೆ ಶ್ರೀಪರಮಾತ್ಮನನ್ನು ತಿಳಿಯತಕ್ಕವರೂ) ಕೆಲವರು ಇರುತ್ತಾರೆಂದು ಯೇಷಾಂ ಎಂಬುವ ಶ್ಲೋಕದಿಂದ ಹೇಳುತ್ತಾರೆ. ॥ ೨೮ ॥

ಟೀ—ಶ್ರೀಪರಮಾತ್ಮನನ್ನು ಸೇವಿಸುವವರಿಗೆ ಫಲವು ಯಾವುದೆಂದರೆ—

ಗೀ ॥ ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತಂತಿ ಯೇ ।
ತೇ ಬ್ರಹ್ಮ ತದ್ವಿದುಃ ಕೃತ್ಸ್ನಮಧ್ಯಾತ್ಮಂ ಕರ್ಮ ಚಾಖಿಲಂ ॥ ೨೯ ॥

ಅ ॥ ಯೇ=ಯಾವ ಸತ್ವಭಾವವುಳ್ಳ ಜನರು, ಜರಾಮರಣಮೋಕ್ಷಾಯ=ಮುಪ್ಪು ಸಾವುಗಳು ಇಲ್ಲದ ಮೋಕ್ಷವನ್ನು ಹೊಂದುವುದಕ್ಕಾಗಿ, ಸ್ವರ್ಗಾದಿಗಳ ಅಭಿಲಾಷೆಯು ನಿವೃತ್ತಿಯಾಗುವುದಕ್ಕಾಗಿಯೂ ಮಾಂ=ನನ್ನನ್ನು, ಆಶ್ರಿತ್ಯ=ಆಶ್ರಯಿಸಿಕೊಂಡು, ಯತಂತಿ=ಪ್ರಯತ್ನಿಸುತ್ತಾರೋ, (ಸೇವಿಸುತ್ತಾರೋ) ತೇ=ಅವರು, ತದ್ಬ್ರಹ್ಮ=ಆ ಪರಬ್ರಹ್ಮನನ್ನು ತಿಳಿಯುತ್ತಾರೆ. ಕೃತ್ಸ್ನಂ=ಎಲ್ಲಾ, ಅಧ್ಯಾತ್ಮಂ=ಅಧ್ಯಾತ್ಮನನ್ನು, ತಿಳಿಯುತ್ತಾರೆ. ಅಖಿಲಂ=ಎಲ್ಲಾ, ಕರ್ಮ ಚ=ಕರ್ಮವನ್ನು, ವಿದುಃ=ತಿಳಿದುಕೊಳ್ಳುತ್ತಾರೆ. ಅಂದರೆ—ಬ್ರಹ್ಮ=ವ್ಯಾಪ್ತವಾದ ಆ ನನ್ನ ರೂಪವನ್ನು ಅವರು ತಿಳಿಯುತ್ತಾರೆ. ಕೃತ್ಸ್ನಮಧ್ಯಾತ್ಮಂ=ಜೀವರಿಗೆ ಉಪಕಾರಕವಾದ ದೇಹ ಇಂದ್ರಿಯ ಅಂತಃಕರಣರೂಪ ವಸ್ತು. ಅಥವಾ ಜೀವರಾಶಿ ಇವುಗಳನ್ನು ತಿಳಿಯುತ್ತಾರೆ ಸೃಷ್ಟಿರೂಪ ಭಗವತ್ಕರ್ಮವನ್ನು ತಿಳಿಯುತ್ತಾರೆ. ॥ ೨೯ ॥

ಗೀ ॥ ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।
ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥ ೩೦ ॥

ಅ ॥ ಯೇ=ಯಾರು, ಸಾಧಿಭೂತಾಧಿದೈವಂ=ಅಧಿಭೂತ ಅಧಿದೈವಗಳಿಂದ ಕೂಡಿದ, ಸಾಧಿಯಜ್ಞಂ ಚ=ಅಧಿಯಜ್ಞದಿಂದಕೂಡಿದ, ಮಾಂ=ನನ್ನನ್ನು, ವಿದುಃ=ತಿಳಿದುಕೊಳ್ಳುತ್ತಾರೋ, ಪ್ರಯಾಣಕಾಲೇ ಚ=ಮರಣಕಾಲದಲ್ಲಿಯೂ, ಮಾಂ=ನನ್ನನ್ನು, ವಿದುಃ=ತಿಳಿದುಕೊಳ್ಳುತ್ತಾರೋ, ತೇ=ಅವರು, ಯುಕ್ತಚೇತಸಃ=ಶ್ರೀಪರಮಾತ್ಮನಲ್ಲಿಯೇ ಮನಸ್ಸನ್ನು ಇಟ್ಟು, ಧ್ಯಾನಮಾಡುವವರು. ಅಂದರೆ—(1) **ಸಾಧಿಭೂತಂ** ಎಂಬುವುದಕ್ಕೆ ಅಧಿಭೂತ ಎನಿಸಿಕೊಂಡ ದೇಹಸಹಿತರಾದ ಜೀವರಿಗೆ, ಉಪಕಾರಕವಾಗಿ ಇರುವ ಉತ್ಪತ್ತಿ ವಿನಾಶಗಳುಳ್ಳ ಪೃಥಿವ್ಯಾದಿ ಪದಾರ್ಥಗಳಲ್ಲಿ ನಿಯಾಮಕವಾಗಿ ತಾರತಮ್ಯ ರೂಪವಿಶೇಷದಿಂದ ಕೂಡಿರುವ ನನ್ನನ್ನು ಅಥವಾ ಪೃಥಿವೀ ಮೊದಲಾದ ಪಂಚಭೂತಗಳಿಗಿಂತ ಶ್ರೇಷ್ಠವಾಗಿರುವುದರಿಂದ **ಅಧಿಭೂತ** ಎನಿಸಿಕೊಂಡ ಸಮಸ್ತ ಜೀವರಾಶಿಯಲ್ಲಿ ನಿಯಾಮಕವಾಗಿ ತಾರತಮ್ಯ ರೂಪವಿಶೇಷದಿಂದ ಕೂಡಿರುವ ನನ್ನನ್ನು. (2) **ಸಾಧಿದೈವಂ** ಎಂಬುವುದಕ್ಕೆ **ಅಧಿದೈವ** ಎನಿಸಿಕೊಂಡ ಸಮಸ್ತ ಜೀವಾಧಿಪತಿಯಾದ ಚತುರ್ಮುಖ ಬ್ರಹ್ಮ, ಅಥವಾ ಸಂಕರ್ಷಣನಲ್ಲಿರುವ ರೂಪವಿಶೇಷದಿಂದ ಕೂಡಿರುವ. ಅಥವಾ ಅಧಿದೈವ ಎನಿಸಿಕೊಂಡ ಲಕ್ಷ್ಮೀದೇವಿಯಿಂದ ಕೂಡಿರುವ ರೂಪವಿಶೇಷವನ್ನು. (3) **ಸಾಧಿಯಜ್ಞಂ** ಎಂಬುವುದಕ್ಕೆ **ಅಧಿಯಜ್ಞ** ಎನಿಸಿಕೊಂಡ ಸಮಸ್ತ ಪ್ರಾಣಿಗಳಲ್ಲಿರುವ ರೂಪವಿಶೇಷದಿಂದ ಕೂಡಿರುವ, ನನ್ನನ್ನು ತಿಳಿಯುತ್ತಾರೆ. ಎಂಬ ಅಭಿಪ್ರಾಯವು ಅಧ್ಯಾ. ೮. ಶ್ಲೋಕ [illegible] ಗಳಿಂದ ಲಭಿಸುವುದು. ॥ ೩೦ ॥

## ಗೀ ॥ ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಜ್ಞಾನವಿಜ್ಞಾನಯೋಗೋ ನಾಮ ಸಪ್ತಮೋಽಧ್ಯಾಯಃ ॥ ೭ ॥

ಅ ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಜ್ಞಾನವಿಜ್ಞಾನಯೋಗವೆಂಬ ಏಳನೇ ಅಧ್ಯಾಯವು ಮುಗಿಯಿತು. ॥ ೭ ॥

ಭಾ ॥ (೧) ಜರಾಮರಣಮೋಕ್ಷಾಯೇತ್ಯನ್ಯಕಾಮನಿವೃತ್ತ್ಯರ್ಥಂ ಮೋಕ್ಷೇ ಸಕ್ತಿಸ್ತುತ್ಯರ್ಥಂ ವಾ ನ ವಿಧಿಃ । (1) ಮುಮುಕ್ಷೋರಮುಮುಕ್ಷುಸ್ತು ವರೋ ಹ್ಯೇಕಾಂತಭಕ್ತಿಭಾಗಿತೀರಿತಸ್ತು ತೇ ನಾರದೀಯೇ । (2) ನಾತ್ಯಂತಿಕಮಿತಿ ಚ ॥ (೨) ದೇವಾನಾಂ ಗುಣಲಿಂಗಾನಾಮಾನುಶ್ರಾವಿಕಕರ್ಮಣಾಂ । ಸತ್ತ್ವ ಏವೈಕಮನಸೋ ವೃತ್ತಿಃ ಸ್ವಾಭಾವಿಕೀ ತು ಯಾ । ಅನಿಮಿತ್ತಾ ಭಗವತಿ ಭಕ್ತಿಃ ಸಿದ್ಧೇರ್ಗರೀಯಸೀ । ಜರಯತ್ಯಾಶು ಯಾ ಕೋಶಂ ನಿಗೀರ್ಣಮನಲೋ ಯಥೇತಿ ಭಾಗವತೇ ಲಕ್ಷಣಾಚ್ಚ ॥ (೩) ಆಹ ಚ । ಸರ್ವೇ ವೇದಾಸ್ತು ದೇವಾರ್ಥಾ ದೇವಾ ನಾರಾಯಣಾರ್ಥಕಾಃ ನಾರಾಯಣಸ್ತು ಮೋಕ್ಷಾರ್ಥೋ ಮೋಕ್ಷೋ ನಾನ್ಯಾರ್ಥ ಇಷ್ಯತೇ । ಏವಂ ಮಧ್ಯಮಭಕ್ತಾನಾಮೇಕಾಂತಾನಾಂ ನ ಕಸ್ಯಚಿತ್ । ಅರ್ಥೋ ನಾರಾಯಣೋ ದೇವಃ ಸರ್ವಮನ್ಯತ್ತದರ್ಥಕಮಿತಿ ಗೀತಾಕಲ್ಪೇ ॥ (೪) (1) ತ ಏವ ಚ ವಿದುಃ । (2) ಯಮೇವೈಷ ವೃಣುತ ಇತಿ ಶ್ರುತೇಃ ॥ ೨೯,೩೦ ॥

ಅ ॥ (೧) ಜರಾಮರಣಮೋಕ್ಷಾಯ ಎಂದು ಹೇಳಿದ್ದು ಮೋಕ್ಷದಿಂದ ಬೇರೆಯಾದ ಸ್ವರ್ಗಾದಿ ವಿಷಯಕ ಕಾಮಗಳ ನಿವೃತ್ತಿಗಾಗಿಯೂ ಮೋಕ್ಷವಿಷಯದಲ್ಲಿ ಆಸಕ್ತಿಯು ಇತರ ವಿಷಯಾಸಕ್ತಿಯಿಂದ ಪ್ರಶಸ್ತವು ಎಂದು ಮೋಕ್ಷವನ್ನು ಸ್ತುತಿಸುವುದಕ್ಕಾಗಿಯೂ ಹೇಳಿದ್ದು. ಸರ್ವಥಾ ವಿಧಿಯಲ್ಲ. ಏಕೆಂದರೆ (1) ಮೋಕ್ಷವನ್ನು ಇಚ್ಛಿಸುವವನಿಗಿಂತ ಮೋಕ್ಷವನ್ನು ಇಚ್ಛಿಸದಿರುವ ಏಕಾಂತಭಕ್ತನು ಶ್ರೇಷ್ಠನು, ಎಂದು ನಾರದೀಯಪುರಾಣದಲ್ಲಿ ಮೋಕ್ಷವನ್ನು ಇಚ್ಛಿಸದಿರುವ ಏಕಾಂತಭಕ್ತನನ್ನು ಸ್ತುತಿಸಿರುವರು. (2) ಮತ್ತು ನಾತ್ಯಂತಿಕಂ ವಿಗಣಯಂತ್ಯಪಿ ತೇ ಪ್ರಸಾದಂ ಏಕಾಂತಭಕ್ತರು ನಿನ್ನ ಮೋಕ್ಷರೂಪ ಪ್ರಸಾದವನ್ನು ಗಣನೆಮಾಡುವುದಿಲ್ಲವೆಂದೂ ಏಕಾಂತಭಕ್ತರನ್ನು ಸ್ತುತಿಸಿರುತ್ತದೆ. (೨) ಸರ್ವಗುಣಭರಿತನಾದ ಶ್ರೀಹರಿಯೊಬ್ಬನಲ್ಲಿಯೇ ಸಂಪೂರ್ಣ ಮನಸ್ಸನ್ನು ಇಟ್ಟಿರುವ ಅಂದರೆ ಶುದ್ಧ ಸಾತ್ವಿಕನಾದ ಚತುರ್ಮುಖನ, ಗಂಧರಸಾದಿಗಳ ಅನುಭವರೂಪ ಗುಣಗಳಿಂದ ಅನುಮೇಯಗಳೂ, ವಚನಾದಿಕ್ರಿಯೆಗಳಿಂದ ಅನುಮೇಯಗಳೂ, ವೇದಗಳಲ್ಲಿ ಹೇಳಿದ ಕರ್ಮಗಳನ್ನು ಮಾಡಲಿಕ್ಕೆ ಕಾರಣಗಳೂ ಆದ ಇಂದ್ರಿಯಗಳಿಗೆ ಪರಮಾತ್ಮನಲ್ಲಿ ಫಲೋದ್ದೇಶವಿಲ್ಲದೆ ಕೇವಲ ನಿರವಧಿಕ ಸ್ನೇಹರೂಪವಾದ ಸ್ವಭಾವದಿಂದಲೇ ಉಂಟಾಗುವ ಯಾವ ವ್ಯಾಪಾರವೋ, ಅದೇ ಭಕ್ತಿಯು. ಆ ಭಕ್ತಿಯು ಕಾಮಸಹಿತವಾದ ಭಕ್ತಿಯಿಂದುಂಟಾದ ಅಲ್ಪಾಧಿಕಾರಿಗಳಿಗೆ ಇರುವ ಮುಕ್ತಿಗಿಂತಲೂ ಶ್ರೇಷ್ಠವಾದುದು. ಇಂತಹ ಭಕ್ತಿಯು ಮೋಕ್ಷಕಾಮನಾ ಇಲ್ಲದಿದ್ದರೂ ಲಿಂಗಶರೀರವನ್ನು ಸ್ವಭಾವದಿಂದಲೇ ಭುಕ್ತವಾದ ಅನ್ನವನ್ನು ಜಾಠರಾಗ್ನಿಯಂತೆ ಜೀರ್ಣೀಕರಿಸುತ್ತದೆ. (೩) ಸಮಸ್ತವೇದಗಳು ದೇವತೆಗಳ ಜ್ಞಾನವನ್ನು ಹುಟ್ಟಿಸಲಿಕ್ಕೆ ಉಪಯುಕ್ತವಾದವುಗಳು. ತಿಳಿಯಲ್ಪಟ್ಟ

ಇಂದ್ರಿಯಾದಿಗಳಿಗೆ ಪ್ರೇರಕರಾದ ದೇವತೆಗಳು ನಾರಾಯಣನ ಜ್ಞಾನಕ್ಕೆ ಉಪಯುಕ್ತರು ಮೋಕ್ಷವನ್ನು ಪಡೆಯುವುದಕ್ಕಾಗಿ ಶ್ರೀನಾರಾಯಣನ ಜ್ಞಾನವನ್ನು ಸಂಪಾದಿಸಬೇಕು. ಮೋಕ್ಷವು ಬೇರೆ ಪ್ರಯೋಜನಕ್ಕಾಗಿ ಅಲ್ಲ ಹೀಗೆ ಮಧ್ಯಮಭಕ್ತರ ಮನೋವ್ಯಾಪಾರವು. ಏಕಾಂತಭಕ್ತರಿಗೆ ಯಾವ ಫಲೋದ್ದೇಶದಿಂದಲೂ ಜ್ಞೇಯನಲ್ಲ. ಶ್ರೀನಾರಾಯಣನೇ ಪರಮ ಪುರುಷಾರ್ಥನು. ಬೇರೆ ಎಲ್ಲವೂ ನಾರಾಯಣನ ಜ್ಞಾನಕ್ಕಾಗಿಯೇ. ಹೀಗೆ ಗೀತಾಕಲ್ಪದಲ್ಲಿ ಹೇಳಿದೆ. (೪) (1) ಆ ಏಕಾಂತಭಕ್ತರೇ ಶ್ರೀಪರಮಾತ್ಮನನ್ನು ಮುಖ್ಯವಾಗಿ ತಿಳಿದಿರುವರು. (2) ಶ್ರೀಪರಮಾತ್ಮನು ಯಾರನ್ನು ಭಕ್ತರನ್ನಾಗಿ ಅಂಗೀಕರಿಸುತ್ತಾನೋ. ಅವನಿಂದಲೇ ಪರಮಾತ್ಮನು ಹೊಂದಲ್ಪಡುವನು. (ತಿಳಿಯಲ್ಪಡತಕ್ಕವನು) ಎಂಬ ಶ್ರುತಿಯಿಂದ. ॥ ೨೯, ೩೦ ॥

**ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ಸಪ್ತಮೋಽಧ್ಯಾಯಃ ॥ ೭ ॥**

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾಭಾಷ್ಯದಲ್ಲಿ ಏಳನೇ ಅಧ್ಯಾಯವು ಮುಗಿಯಿತು. ॥ ೭ ॥

**ತಾ ॥ ತದ್ಬ್ರಹ್ಮೇತ್ಯುಕ್ತೇಽನ್ಯತ್ವಾಶಂಕಾಂ ನಿವಾರಯತಿ । ಸಾಧಿಭೂತಾಧಿದೈವ ಮಂ ಮಾಮಿತಿ ॥ ೨೮,೨೯,೩೦ ॥**

ಅ ॥ ತದ್ಬ್ರಹ್ಮ ಎಂದು ಹೇಳಿದಾಗ ಉಂಟಾಗತಕ್ಕ ಪರಮಾತ್ಮನಿಂದ ಭಿನ್ನನೆಂಬುವ ಶಂಕೆಯನ್ನು **ಸಾಧಿಭೂತಾಧಿದೈವಂ** ಎಂಬುದರಿಂದ ನಿವಾರಣಮಾಡುತ್ತಾರೆ. ॥ ೨೮, ೨೯, ೩೦ ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾತಾತ್ಪರ್ಯನಿರ್ಣಯೇ ಸಪ್ತಮೋಽಧ್ಯಾಯಃ ॥ ೭ ॥**

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾತಾತ್ಪರ್ಯನಿರ್ಣಯದಲ್ಲಿ ಏಳನೇ ಅಧ್ಯಾಯವು ಮುಗಿಯಿತು. ॥ ೭ ॥

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಃ ॥

# ಎಂಟನೇ ಅಧ್ಯಾಯವು.

ಟೀ—(1) ತೇ ಬ್ರಹ್ಮ ತದ್ವಿದುಃ ಮತ್ತು ಪ್ರಯಾಣಕಾಲೇಽಪಿ ಚ ಮಾಂ ವಿದುಃ ಇವುಗಳ ಅರ್ಥವನ್ನು ಇಲ್ಲಿ ಪ್ರಧಾನವಾಗಿ ಹೇಳುತ್ತಾರೆ. (2) ಆ ಪ್ರಸಂಗದಿಂದ ಅಂತ್ಯಕಾಲದ ಸ್ಮರಣಫಲವೂ, ಅದರ ಸಾಧನಪ್ರಕಾರವೂ, ಬ್ರಹ್ಮಪ್ರಾಪ್ತಿ ಮಾರ್ಗವೂ, ಇಲ್ಲಿ ಹೇಳಲ್ಪಡುತ್ತದೆ. (3) ಹಾಗೆಯೇ ಸಾಧಿಭೂತಾಧಿದೈವಂ ಎಂಬುವುದರಿಂದ ಶ್ರೀಕೃಷ್ಣರೂಪ ಶ್ರೀಪರಮಾತ್ಮನ ಜ್ಞಾನದಿಂದ ಬ್ರಹ್ಮಜ್ಞಾನವು ಬೇರೆ ಎಂದು ತೋರುತ್ತದೆ. ವಾಸುದೇವಾತ್ಮಕಂ ಬ್ರಹ್ಮ ಎಂಬುವಲ್ಲಿ ಶ್ರೀಕೃಷ್ಣನೇ ಬ್ರಹ್ಮನೆಂದು ತೋರುತ್ತದೆ. ಈ ಎರಡು ವಾಕ್ಯಗಳಿಂದ ಸಂಶಯ ಉಂಟಾಗಿ ಪ್ರಶ್ನಿಸುತ್ತಾನೆ—

ಗೀ ॥ ॥ ಅರ್ಜುನ ಉವಾಚ ॥

ಓಂ ॥ ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।
ಅಧಿಭೂತಂ ಚ ಕಿಂ ಪ್ರೋಕ್ತಮಧಿದೈವಂ ಕಿಮುಚ್ಯತೇ ॥ ೧ ॥

ಅ ॥ ಅರ್ಜುನಃ=ಅರ್ಜುನನು, ಉವಾಚ=ಪ್ರಶ್ನೆಮಾಡುತ್ತಾನೆ ಪುರುಷೋತ್ತಮ=ಕ್ಷರಾಕ್ಷರಪುರುಷರಿಂದುತ್ತಮನಾದ ಶ್ರೀಕೃಷ್ಣನೇ, ತತ್=ನೀನು ಹಿಂದಿನ ಅಧ್ಯಾಯದಲ್ಲಿ ಹೇಳಿದ. ಬ್ರಹ್ಮ=ಬ್ರಹ್ಮವು, ಕಿಂ=ಯಾವುದು? ಅಧ್ಯಾತ್ಮಂ=ಅಧ್ಯಾತ್ಮವು, ಕಿಂ=ಯಾವುದು? ಕರ್ಮ=ಕರ್ಮವು, ಕಿಂ=ಯಾವುದು? ಅಧಿಭೂತಂ=ಅಧಿಭೂತವು. ಕಿಂ ಪ್ರೋಕ್ತಂ=ಯಾವುದು ಹೇಳಲ್ಪಟ್ಟಿದೆ. ಅಧಿದೈವಂ=ಅಧಿದೈವವು, ಕಿಂ=ಯಾವುದೆಂದು, ಉಚ್ಯತೇ=ಹೇಳಲ್ಪಡುತ್ತದೆ. ॥ ೧ ॥

ಗೀ ॥ ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ಮಧುಸೂದನ ।
ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ ೨ ॥

ಅ ॥ ಮಧುಸೂದನ=ಶ್ರೀಕೃಷ್ಣನೇ, ಅಸ್ಮಿನ್ ದೇಹೇ=ಈ ಶರೀರದಲ್ಲಿ. ಅಧಿಯಜ್ಞಃ=ಅಧಿಯಜ್ಞನು, ಕಃ=ಯಾವನು? ಅತ್ರ=ದೇಹದಲ್ಲಿ. ಅಧಿಯಜ್ಞಃ=ಅಧಿಯಜ್ಞನು. ಕಥಂ=ಹೇಗೆ ಇರುತ್ತಾನೆ. ಪ್ರಯಾಣಕಾಲೇ ಚ=ಮರಣಕಾಲದಲ್ಲಿ, ನಿಯತಾತ್ಮಭಿಃ=ಮನಸ್ಸನ್ನು ನಿಗ್ರಹಿಸಿಕೊಂಡಿರುವ ಪುರುಷರಿಂದ, ಕಥಂ=ಯಾವ ಪ್ರಕಾರದಿಂದ, ಜ್ಞೇಯಃ=ಸ್ಮರಿಸಲ್ಪಡತಕ್ಕವನು ನೀನು, ಅಸಿ=ಆಗಿರುತ್ತಿ. ॥ ೨ ॥

ಟೀ—ಈ ಎಂಟು ಪ್ರಶ್ನೆಗಳಿಗೂ ಶ್ರೀಪರಮಾತ್ಮನು ಕ್ರಮವಾಗಿ ಉತ್ತರವನ್ನು ಕೊಡುತ್ತಾನೆ—

ಗೀ ॥ ॥ ಶ್ರೀಭಗವಾನುವಾಚ ॥

ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।
ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ ೩ ॥

ಅ ॥ ಶ್ರೀಭಗವಾನ್=ಶ್ರೀಕೃಷ್ಣನು, ಉವಾಚ=ಉತ್ತರವನ್ನು ಕೊಟ್ಟನು. ಪರಮಂ=ಸರ್ವೋತ್ತಮನಾದ, ಅಕ್ಷರಂ=ಸರ್ವಥಾ ನಾಶವಿಲ್ಲದಿರುವ ಶ್ರೀಪರಮಾತ್ಮನು, ಬ್ರಹ್ಮ=ಬ್ರಹ್ಮನೆನಿಸಿಕೊಳ್ಳುತ್ತಾನೆ. (ಅಕ್ಷರಳು ಲಕ್ಷ್ಮೀದೇವಿಯೂ ಆಗುತ್ತಾಳೆ. ಇಲ್ಲಿ ಅಕ್ಷರಶಬ್ದದಿಂದ ಲಕ್ಷ್ಮೀದೇವಿಯನ್ನು ತೆಗೆದುಕೊಳ್ಳಬಾರದೆಂಬುದಕ್ಕಾಗಿ ಪರಮಾಕ್ಷರನೆಂದು ಹೇಳಿದ್ದು.) (2) ಸ್ವಭಾವಃ=ಜೀವರಿಗೆ ಉಪಕಾರಕವಾಗಿರುವ, ಶರೀರ ಇಂದ್ರಿಯ ಅಂತಃಕರಣ ಮೊದಲಾದ ವಸ್ತುಗಳು, ಅಥವಾ ಜೀವರಾಶಿಯೂ, ಅಧ್ಯಾತ್ಮಂ ಉಚ್ಯತೇ=ಅಧ್ಯಾತ್ಮವೆನಿಸುತ್ತವೆ. (ಆತ್ಮಾನಂ ಅಧಿಕೃತ್ಯ ಯದಸ್ತಿ. ಜೀವರಿಗೆ ಉಪಕಾರಕವಾಗಿರುವ ದೇಹಾದಿಗಳು.) ಅಥವಾ ಆತ್ಮಾಧಿಕಾರ ಗ್ರಂಥಪ್ರತಿಪಾದ್ಯವಾದುದು ಯಾವುದು ಎಂಬ ಪ್ರಶ್ನೆಗೆ ಆತ್ಮಾಧಿಕಾರ ಗ್ರಂಥಪ್ರತಿಪಾದ್ಯನಾದವನು ಜೀವನು, ಯಾವಾಗಲೂ ಒಂದೇ ಪ್ರಕಾರದಿಂದ ಇರುತ್ತಾನೆ. (3) ಭೂತಭಾವೋದ್ಭವಕರಃ=ಜೀವರನ್ನೂ ಜಡಪದಾರ್ಥಗಳನ್ನೂ ಸೃಷ್ಟಿಮಾಡುವ, ವಿಸರ್ಗಃ=ಶ್ರೀಪರಮಾತ್ಮನ ಸೃಷ್ಟಿವ್ಯಾಪಾರವು. ಕರ್ಮಸಂಜ್ಞಿತಃ=ಕರ್ಮವೆಂದು ಎನಿಸಿಕೊಳ್ಳುತ್ತದೆ ॥ ೩ ॥

ಭಾ ॥ ಓಂ ॥ (೧) ಮರಣಕಾಲೇ ಕರ್ತವ್ಯಗತ್ಯಾದ್ಯಸ್ಮಿನ್ನಧ್ಯಾಯ ಉಪದಿಶತಿ । ಪರಮಮಕ್ಷರಂ ಬ್ರಹ್ಮ । ವೇದಾದಿಶಂಕಾನಿವೃತ್ತ್ಯರ್ಥಮೇತತ್ ॥ (೨) ಆತ್ಮನ್ಯಧಿ ಯತ್ತದಧ್ಯಾತ್ಮಂ । ಆತ್ಮಾಧಿಕಾರೇ ಯತ್ತದಿತಿ ವಾ ॥ (೩) ತಥಾ ಹಿ । ಜೈವಃ ಸ್ವಭಾವಃ । ಸ್ವಾತ್ಮೀಯೋ ಭಾವಃ ಸ್ವಭಾವ ಇತಿ ವ್ಯುತ್ಪತ್ತ್ಯಾ ಜೀವೋ ವಾ ಸ್ವಭಾವಃ । ಸರ್ವದಾಽಸ್ಯೈವೈಕಪ್ರಕಾರೇಣೇತಿ ಭಾವಃ । ಅಂತಃಕರಣಾದಿವ್ಯಾವೃತ್ತ್ಯರ್ಥೋ ಭಾವಶಬ್ದಃ । ನ ಹ್ಯೇಕಪ್ರಕಾರೇಣ ಸ್ಥಿತಿರಂತಃಕರಣಾದೇಃ । ವಿಕಾರಿತ್ವಾತ್ । ಸ್ವಶಬ್ದ ಈಶ್ವರವ್ಯಾವೃತ್ತ್ಯರ್ಥಃ ॥ (೪) ಭೂತಾನಾಂ ಜೀವಾನಾಂ ಭಾವಾನಾಂ ಜಡಪದಾರ್ಥಾನಾಂ ಚೋದ್ಭವಕರೇಶ್ವರಕ್ರಿಯಾ ವಿಸರ್ಗಃ । ವಿಶೇಷೇಣ ಸರ್ಜನಂ ವಿಸರ್ಗ ಇತ್ಯರ್ಥಃ ॥ ೧,೨,೩ ॥

ಅ ॥ (೧) ಮರಣಕಾಲದಲ್ಲಿ ಮಾಡಬೇಕಾದ ಸ್ಮರಣಾದಿಗಳೂ, ಸ್ಮರಣಸಾಧನವೂ, ಗಮ್ಯನಾದ ವಸ್ತುವೂ, ಬ್ರಹ್ಮಪ್ರಾಪ್ತಿಮಾರ್ಗವೂ ಇವುಗಳನ್ನು ಈ ಅಧ್ಯಾಯದಲ್ಲಿ ಉಪದೇಶಿಸುತ್ತಾನೆ ಸರ್ವೋತ್ತಮನಾದ ಅಕ್ಷರನು ಬ್ರಹ್ಮನು (ಅಕ್ಷರಂ ಬ್ರಹ್ಮ ಎಂದಿಷ್ಟೇ ಹೇಳಿದರೆ ಪರಮಂ ಎಂಬುವ ವಿಶೇಷಣ ಕೂಡದಿದ್ದರೆ) ಅಕ್ಷರಶಬ್ದವಾಚ್ಯತ್ವವು ವೇದ ಪ್ರಕೃತಿ ಮೊದಲಾದುವುಗಳಲ್ಲಿಯೂ ಇರುದರಿಂದ ಆ ವೇದಾದಿಗಳನ್ನು ಇಲ್ಲಿ ಅಕ್ಷರಶಬ್ದದಿಂದ ತೆಗೆದುಕೊಳ್ಳಬಾರದೆಂಬುವುದಕ್ಕಾಗಿ ಅಕ್ಷರದಲ್ಲಿ ಪರಮಂ ಎಂಬುವ ವಿಶೇಷಣವು. (ಸರ್ವೋತ್ತಮನಾದ ಅಕ್ಷರನು ಪರಬ್ರಹ್ಮನೇ ವೇದಾದಿಗಳು ಅಲ್ಲವೆಂದೇ ಇಲ್ಲಿ) (೨) ಕೇವಲ ಜೀವರಿಗೆ ಉಪಕಾರಕವಾದ ದೇಹಾಂತಃಕರಣ ಮೊದಲಾದ ವಸ್ತುಗಳು ಅಧ್ಯಾತ್ಮವೆನಿಸುತ್ತವೆ. ಅಥವಾ ಆತ್ಮಾ (ಜೀವ) ಧಿಕಾರವೆಂಬುವ ಗ್ರಂಥವಿಶೇಷದಲ್ಲಿ ಪ್ರತಿಪಾದ್ಯನಾದ ಜೀವನು ಅಧ್ಯಾತ್ಮನೆನಿಸುತ್ತಾನೆ. (೩) (ಹಾಗಾದರೆ ಸ್ವಭಾವಃ ಎಂಬುವ ಶಬ್ದದಿಂದ ದೇಹಾದಿ, ಜೀವ, ಎಂಬುವ ಎರಡು ಅರ್ಥಗಳು ಸಿಗುವುದು ಹೇಗೆಂದರೆ —) ಅದನ್ನು ಪ್ರತಿಪಾದಿಸುತ್ತಾರೆ. ಜೀವರ ಸಂಬಂಧಿಯಾದ (ಅಂದರೆ ಜೀವರಿಗೆ ಉಪಕಾರಕವಾಗಿರುವ) ಅಂತಃಕರಣವನ್ನಾರಂಭಿಸಿ ದೇಹಪರ್ಯಂತ ಪದಾರ್ಥವು ಸ್ವಭಾವವು. ಸ್ವ=ಸ್ವ= ಜೀವನಿಗೆ ಉಪಕಾರಕವಾಗಿರುವ, ಭಾವಃ=ಪದಾರ್ಥವು, ಸ್ವಭಾವವು) (ಎರಡನೇದಕ್ಕೆ ಉತ್ತರವು) ಸ್ವ=ಜೀವನೆಂಬ, ಭಾವಃ=ಸರ್ವದಾ ಏಕಪ್ರಕಾರವಾಗಿರುವ ವಸ್ತುವೆ ಸ್ವಭಾವವು, ಎಂಬ ವ್ಯುತ್ಪತ್ತಿಯಿಂದ ಜೀವನು ಸ್ವಭಾವವೆನಿಸುತ್ತಾನೆ ಸರ್ವದಾ ಒಂದೇ ಪ್ರಕಾರವಾಗಿರುವ ಇರತಕ್ಕವನು (ಆತ್ಮಾಧಿಕಾರ ಗ್ರಂಥದಲ್ಲಿ ಹೇಳಲ್ಪಟ್ಟವನೂ, ಸದಾ ಏಕಪ್ರಕಾರನಾಗಿರುವವನೂ, ಜೀವನು) ಸ್ವ

ಎಂದಿಷ್ಟೇ ಹೇಳಿದರೆ ಸ್ತ್ರೀಯುವಾದ ಅಂತಃಕರಣಾದಿಗಳಿಂದೂ ಅರ್ಥವಾಗುವುದು. ಅದನ್ನು ತೆಗೆದುಕೊಳ್ಳ ಬಾರದೆಂಬುವುದಕ್ಕಾಗಿ ಭಾವಶಬ್ದವು ಅನ್ನಮಯಂ ಹಿ ಸೌಮ್ಯ ಮನಃ ಇತ್ಯಾದಿ ಪ್ರಮಾಣಗಳಿಂದ ಅಂತಃಕರಣ ಮೊದಲಾದವುಗಳು ಅನ್ನದ ವಿಕಾರಗಳಾಗಿರುವುದರಿಂದ ಅವುಗಳು ಒಂದೇ ಪ್ರಕಾರ ಇರುವುದೇ ಇಲ್ಲ. ಆದಕಾರಣ ಸರ್ವದಾ ಏಕಪ್ರಕಾರವಾಗಿರುವ ವಸ್ತುಗಳು ಅಂತಃಕರಣಾದಿಗಳು ಆಗುವುದಿಲ್ಲ. (ಹೀಗಾದರೆ ಭಾವಃ ಎಂದಿಷ್ಟೇ ಸಾಕು. ಸ್ವಶಬ್ದವು ಏಕೆಂದರೆ—) ಶ್ರೀಪರಮಾತ್ಮನೂ ಕೂಡ ಸರ್ವದಾ ಒಂದೇ ಪ್ರಕಾರವೇ ಇದ್ದಾನೆ. ಆದಕಾರಣ ಭಾವಃ ಎಂದಿಷ್ಟೇ ಹೇಳಿದರೆ ಶ್ರೀಪರಮಾತ್ಮನ ಪ್ರತೀತಿಯೇ ಬರುವುದು. ಆಗ ಎರಡನೇ ಪ್ರಶ್ನೆಗೆ ಉತ್ತರವು ಸಿಗುವುದಿಲ್ಲ. ಪ್ರಕೃತ ಭಾವಶಬ್ದದಿಂದ ಶ್ರೀಪರಮಾತ್ಮನನ್ನು ತೆಗೆದುಕೊಳ್ಳಬಾರದೆಂಬುವುದಕ್ಕಾಗಿ ಸ್ವಶಬ್ದವು. (ಪರಮಾತ್ಮನು ಜೀವನ (ಸ್ವಃ=)ಸ್ವರೂಪಭೂತನಲ್ಲವಷ್ಟೆ) ಆದಕಾರಣ ಸ್ವಭಾವಶಬ್ದದಿಂದ ಜೀವನನ್ನೇ ಇಟ್ಟುಕೊಳ್ಳಬೇಕು. (೪) ಭೂತಾನಾಂ=ಜೀವರಿಗೂ, ಭಾವಾನಾಂ=ಜಡಪದಾರ್ಥಗಳಿಗೂ, ಸೃಷ್ಟ್ಯಾದಿಗಳನ್ನು ಮಾಡತಕ್ಕ ಶ್ರೀಹರಿಯ ವ್ಯಾಪಾರಭೂತವಾದ ವಿಸರ್ಗವು (ಅಂದರೆ ವಿಶೇಷವಾಗಿ ಪರಮಾತ್ಮನು ಮಾಡತಕ್ಕ ಸೃಷ್ಟ್ಯಾದಿ ವ್ಯಾಪಾರವು) ಕರ್ಮ ಎನಿಸುತ್ತದೆ. (ವಿಸರ್ಗಪದಕ್ಕೆ ತ್ಯಾಗವೆಂದರ್ಥವಲ್ಲ.) ॥ ೧, ೨, ೩ ॥

ಗೀ ॥ ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಂ ।
ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥ ೪ ॥

ಅ ॥ ದೇಹಭೃತಾಂ ವರ=ಶರೀರಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನೇ, ಕ್ಷರಃ=ದೇಹಸಹಿತರಾದ ಜೀವರಿಗೆ ಉಪಕಾರಕವಾಗಿರುವ ಉತ್ಪತ್ತಿ ವಿನಾಶಗಳುಳ್ಳ, ಭಾವಃ=ಕಾರ್ಯಭೂತವಾದ ಪದಾರ್ಥವು. ಅಧಿಭೂತಂ=ಅಧಿಭೂತವೆನಿಸಿಕೊಳ್ಳುತ್ತದೆ (ಅಂದರೆ ದೇಹಸಹಿತರಾದ ಜೀವರಿಗೆ ಉಪಕಾರಿಯಾಗಿರುವ ಉತ್ಪತ್ತಿ ವಿನಾಶವುಳ್ಳ ಪದಾರ್ಥವು) (5) ಪುರುಷಶ್ಚ=ಸರ್ವಜೀವರಿಗೆ ಅಭಿಮಾನಿಯಾದ ಸಂಕರ್ಷಣ (ಶೇಷ)ನು ಅಥವಾ ಚತುರ್ಮುಖ ಬ್ರಹ್ಮನು. ಅಧಿದೈವತವೆನಿಸುತ್ತಾನೆ. (ಅಂದರೆ ಸಮಸ್ತ ದೇವತೆಗಳಿಗೆ ಸ್ವಾಮಿಯಾಗಿ ದೇವತಾಪ್ರತಿಪಾದಕ ಗ್ರಂಥದಲ್ಲಿ ಮುಖ್ಯವಾಗಿ ಪ್ರತಿಪಾದ್ಯರಾದ ಶೇಷಬ್ರಹ್ಮರು ಅಧಿದೈವತರು.) ಅತ್ರ ದೇಹೇ=ಈ ಜೀವರ ಶರೀರದಲ್ಲಿ, ಅಧಿಯಜ್ಞಃ=ಅಧಿಯಜ್ಞನು, ಅಹಮೇವ=ನಾನೇ ಜೀವರ ದೇಹದಲ್ಲಿದ್ದು ಯಜ್ಞಗಳಿಗೆ ಪ್ರವರ್ತಕನಾದುದರಿಂದ ಅಧಿಯಜ್ಞ ಎನಿಸಿಕೊಂಡ ರೂಪವಿಶೇಷವು ನಾನೇ. ॥ ೪ ॥

ಭಾ ॥ (೧) ಭೂತಾನಿ ಸಶರೀರಾನ್ ಜೀವಾನಧಿಕೃತ್ಯ ಯತ್ತದಧಿಭೂತಂ । ಕ್ಷರೋ ಭಾವಃ ವಿನಾಶಿಕಾರ್ಯಪದಾರ್ಥಃ ॥ (೨) ಅವ್ಯಕ್ತಾಂತರ್ಭಾವೇಽಪಿ ತಸ್ಯಾಪ್ಯನ್ಯಥಾಭಾವಾಖ್ಯೋ ವಿನಾಶೋಽಸ್ತ್ಯೇವ ॥ (೩) ತಚ್ಚೋಕ್ತಂ । (1) ಅವ್ಯಕ್ತಂ ಪರಮೇ ವ್ಯೋಮ್ನಿ ನಿಷ್ಕ್ರಿಯೇ ಸಂಪ್ರಲೀಯತ ಇತಿ । (2) ತಸ್ಮಾದವ್ಯಕ್ತಮುತ್ಪನ್ನಂ ತ್ರಿಗುಣಂ ದ್ವಿಜಸತ್ತಮೇತಿ ಚ । (3) ವಿಕಾರೋಽವ್ಯಕ್ತಜನ್ಮ ಹೀತಿ ಚ ಸ್ಕಾಂದೇ ॥ ೧ ॥

ಅ ॥ (೧) ದೇಹಸಹಿತರಾದ ಜೀವರಿಗೆ ಉಪಕಾರಕವಾಗಿರುವ, ಕ್ಷರಃ ಭಾವಃ=ಉತ್ಪತ್ತಿ ವಿನಾಶಗಳುಳ್ಳ ಪೃಥಿವ್ಯಾದಿ ಪದಾರ್ಥವು ಅಧಿಭೂತವೆನಿಸುತ್ತದೆ. (೨) (ಹಾಗಾದರೆ ಜಡ ಪ್ರಕೃತಿಯೂ ಕೂಡ ದೇಹ ಸಹಿತರಾದ ಜೀವರಿಗೆ ಉಪಕಾರಕವಾಗಿರುತ್ತದೆ. ಅದೂ ಅಧಿಭೂತದಲ್ಲಿ ಸೇರುತ್ತದೆ. ಅದಕ್ಕೆ ಉತ್ಪತ್ತಿ ವಿನಾಶಗಳಿಲ್ಲ ಆದಕಾರಣ ಸರ್ವಾಧಿಭೂತಗಳಲ್ಲಿ ಕ್ಷರಃ ಭಾವಃ ಎಂಬುವ ಉತ್ಪತ್ತಿ ವಿನಾಶಗಳು ಹೊಂದುವುದಿಲ್ಲವೆಂದರೆ—) ಜಡಪ್ರಕೃತಿಯೂ ಕೂಡ ಅಧಿಭೂತದಲ್ಲಿ ಸೇರಿದರೂ (ಕ್ಷರಃ ಭಾವ. ಉತ್ಪತ್ತಿ ವಿನಾಶಗಳವೆ ಎಂಬುವುದು ಎಲ್ಲಾ ಅಧಿಭೂತಗಳಲ್ಲಿಯೂ ಇದೆ) (ಹೇಗೆಂದರೆ) ಜಡಪ್ರಕೃತಿಗೂ

ಕೂಡ ಅನ್ಯಥಾಭಾವವೆಂಬುವ ವಿನಾಶವು (ಅಂದರೆ ಗುಣಪ್ರಧಾನಭಾವವಿಲ್ಲದೆ ಸತ್ವರಜಸ್ತಮಸ್ಸುಗಳೆಂಬ ಮೂರುಗಳೂ ಪ್ರಧಾನಭಾವದಿಂದಲೇ ಇರುವುದೆಂಬ ಸಾಮ್ಯಾವಸ್ಥಾರೂಪವಾದ ವಿನಾಶವು ಉಂಟೇ ಉಂಟು.) (ಹಾಗೆಯೇ ವಿಕಾರರೂಪವಾದ ಉತ್ಪತ್ತಿಯೂ ಇದೆ.) (ಅಂದರೆ ಹಿಂದೆ ಹೇಳಿದ ಸಾಮ್ಯಾವಸ್ಥೆಯನ್ನು ಬಿಟ್ಟು ಗುಣಪ್ರಧಾನಭಾವವಿದ್ದು ಮಹದಾದಿಕಾರ್ಯರೂಪದಿಂದ ವಿಕಾರರೂಪವಾದ ಗುಣವೈಷಮ್ಯವೆಂಬುವ ಸೃಷ್ಟಿಯೂ ಇದೆ.) (೩) (ಜಡಪ್ರಕೃತಿಗೆ ಉತ್ಪತ್ತಿ ನಾಶಗಳಿವೆ, ಎಂಬುವ ಎರಡು ವಿಷಯದಲ್ಲಿಯೂ ಪ್ರಮಾಣಗಳನ್ನು ಹೇಳುತ್ತಾರೆ--) (1) ಅವ್ಯಕ್ತತತ್ವವು (ಜಡಪ್ರಕೃತಿಯು) ಪ್ರಲಯಕಾಲದಲ್ಲಿ ಕ್ಷಣಲವಾದಿ ಸೃಷ್ಟಿ ಹೊರತು ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳಿಲ್ಲದಿರುವುದರಿಂದ ನಿಷ್ಕ್ರಿಯ ನೆನಿಸಿದ, ಸರ್ವತ್ರ ವ್ಯಾಪ್ತನಾದ, ಸರ್ವೋತ್ತಮನಾದ ಶ್ರೀಪರಮಾತ್ಮನಲ್ಲಿ ಲಯಹೊಂದುತ್ತದೆ. (ಅಂದರೆ ಸಾಮ್ಯಾವಸ್ಥೆ ಎಂಬ ಲಯವನ್ನು ಹೊಂದುತ್ತದೆ) (2) ಎಲೋ ಬ್ರಾಹ್ಮಣೋತ್ತಮನೇ ಆ ಶ್ರೀಪರಮಾತ್ಮನಿಂದ ಸತ್ವರಜಸ್ತಮೋಗುಣಾತ್ಮಕವಾದ ಜಡಪ್ರಕೃತಿಯು ವಿಕಾರರೂಪ ಉತ್ಪತ್ತಿಯುಳ್ಳದ್ದು ಆಯಿತು. (ಅಂದರೆ ಜಡಪ್ರಕೃತಿಯು ವಿಕಾರವನ್ನು ಹೊಂದಿತು.) (3) ಅವ್ಯಕ್ತಕ್ಕೆ ಉತ್ಪತ್ತಿಯೆಂದರೆ ಮಹದಾದಿರೂಪದಿಂದ ವಿಕಾರಹೊಂದುವುದು. ಎಂದು ಸ್ಕಾಂದಪುರಾಣದಲ್ಲಿದೆ ॥ ೧ ॥

ಭಾ ॥ (೧) ಪುರಿ ಶಯನಾತ್ಪುರುಷೋ ಜೀವಃ । ಸ ಚ ಸಂಕರ್ಷಣೋ ಬ್ರಹ್ಮಾ ವಾ । ಸ ಸರ್ವದೇವಾನಧಿಕೃತ್ಯ ವರ್ತತೇ ಪತಿರಿತ್ಯಧಿದೈವತಂ । ದೇವಾಧಿಕಾರಸ್ಥ ಇತಿ ವಾ ॥ (೨) ಸರ್ವಯಜ್ಞಭೋಕ್ತೃತ್ವಾದೇರಧಿಯಜ್ಞಃ । ಅನ್ಯೋಽಧಿಯಜ್ಞೋಽಗ್ನ್ಯಾದಿಃ ಪ್ರಸಿದ್ಧ ಇತಿ ದೇಹ ಇತಿ ವಿಶೇಷಣಂ । ಭೋಕ್ತಾರಂ ಯಜ್ಞತಪಸಾಂ ॥ (೩) (1) ತ್ರೈವಿದ್ಯಾ ಮಾಂ । (2) ಯೇಽಪ್ಯನ್ಯದೇವತಾಭಕ್ತಾಃ । (3) ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ । ದದತೋ ಮನುಷ್ಯಾಃ ಪ್ರಶಂಸಂತಿ ಯಜಮಾನಂ ದೇವಾ ಇತ್ಯಾದೇಃ ॥ (೪) ಕುತೋ ಹ್ಯಸ್ಯ ಧ್ರುವಃ ಸ್ವರ್ಗಃ ಕುತೋ ನೈಶ್ರೇಯಸಂ ಪದ-ಮಿತ್ಯಾದಿಪರಿಹಾರಾಚ್ಚ ಮೋಕ್ಷಧರ್ಮೇ ॥ ೨ ॥

ಅ ॥ (೧) ಎಲ್ಲರ ದೇಹದಲ್ಲಿ ಅಭಿಮಾನಿಯಾಗಿ ಇರುವುದರಿಂದ, ಪುರುಷಃ - ಜೀವನು. ಅಂದರೆ ಸಮಸ್ತ ಜೀವರಿಗೆ ಅಭಿಮಾನಿಯಾಗಿರುವುದರಿಂದ ಸಂಕರ್ಷಣನು (ಶೇಷನು) ಅಥವಾ ಚತುರ್ಮುಖ ಬ್ರಹ್ಮನು ಅವರಿಬ್ಬರೂ ಎಲ್ಲಾ ದೇವತೆಗಳಿಗೆ ಅಧಿಪತಿಯೂ, ಸ್ವಾಮಿಯೂ ಆಗಿರುವ ಕಾರಣ ಅಧಿದೈವತನು ಎನಿಸಿಕೊಳ್ಳುತ್ತಾರೆ. ಅಥವಾ ದೇವಾಧಿಕಾರಪ್ರಕರಣದಲ್ಲಿ ಅಂದರೆ ದೇವತಾಪ್ರಕರಣಗಳಲ್ಲಿ ಮುಖ್ಯವಾಗಿ ಪ್ರತಿಪಾದ್ಯರಾಗಿರುವವರು. (೨) ಸಮಸ್ತ ಯಜ್ಞಗಳನ್ನು ಭೋಗಿಸುವುದರಿಂದಲೂ, ಸಮಸ್ತ ಯಜ್ಞಗಳಿಗೆ ಪ್ರವರ್ತಕನಾದುದರಿಂದಲೂ, ಯಜ್ಞಗಳಿಗೆ ಫಲವನ್ನು ಕೊಡತಕ್ಕವನಾದುದರಿಂದಲೂ ಇದುಮೊದಲಾದ ಕಾರಣಗಳಿಂದ ಶ್ರೀಪರಮಾತ್ಮನು ಅಧಿಯಜ್ಞನೆನಿಸುತ್ತಾನೆ. ಪರಬ್ರಹ್ಮನಿಂದ ಇತರರಾದ ಅಗ್ನ್ಯಾದಿಗಳೂ ಯಜ್ಞಭೋಕ್ತೃಗಳೆಂದು ಪ್ರಸಿದ್ಧರಾಗಿರುವ ಕಾರಣ ಆ ಅಗ್ನ್ಯಾದಿಗಳನ್ನು ತೆಗೆದುಕೊಳ್ಳಬಾರದೆಂಬುವುದಕ್ಕಾಗಿ ದೇಹೇ ಎಂದು ವಿಶೇಷಣವು ಅಂದರೆ ಕರ್ತೃ ಭೋಕ್ತೃ ಫಲದಾತೃಗಳ ದೇಹದಲ್ಲಿ ಪ್ರೇರಕನಾಗಿರುವ ಶ್ರೀಪರಮಾತ್ಮನೇ ಅಧಿಯಜ್ಞನು. (ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ಎಂದು ಶ್ರೀಕೃಷ್ಣನು ಅಧಿಯಜ್ಞನಿಂದ ಕೂಡಿದಾತನೆಂದು ಹೇಳಿದ್ದರಿಂದ ಅಧಿಯಜ್ಞನು ಶ್ರೀಕೃಷ್ಣನಿಗಿಂತ ಬೇರೆಯಾದ ಅಗ್ನ್ಯಾದಿಗಳೆಂದು ಶಂಕೆಯು ಬರುವುದು. ಅದನ್ನು ಪರಿಹರಿಸುವುದಕ್ಕಾಗಿಯೂ ದೇಹೇ ಎಂದು ಹೇಳಿದ್ದು.) (ಶ್ರೀಪರಮಾತ್ಮನಿಗೆ ಸರ್ವ ಯಜ್ಞಭೋಕ್ತೃತ್ವ ಹೇಗೆ ಎಂದರೆ —)

ಯಜ್ಞ ತಪಸ್ಸುಗಳನ್ನು ಭೋಗಿಸುವವನು. (೩) (ತ್ರೈವಿದ್ಯರು ಮಾಡತಕ್ಕ ಯಜ್ಞಗಳ ಭೋಕ್ತೃತ್ವವು ಶ್ರೀಪರಮಾತ್ಮನಿಗೆ ಇಲ್ಲದಿರುವುದರಿಂದ ಸರ್ವಯಜ್ಞಭೋಕ್ತೃತ್ವಾದೇಃ ಎಂದು ಹೇಳಿದ್ದು ಅಯುಕ್ತವೆಂದರೆ–) (1) ತ್ರೈವಿದ್ಯರೂ ಕೂಡ ನನ್ನನ್ನುದ್ದೇಶಿಸಿಯೇ ಯಜ್ಞ ಮಾಡುತ್ತಾರೆ. (2) ಯಾರು ಅನ್ಯದೇವತೆಗಳ ಭಕ್ತರಾಗಿ ನನ್ನನ್ನುದ್ದೇಶಿಸಿ ಯಜ್ಞ ಮಾಡುತ್ತಾರೋ ಆ ಯಜ್ಞಭೋಕ್ತನೂ ನಾನೇ (ಅದ ಕಾರಣ ಸರ್ವಯಜ್ಞಭೋಕ್ತೃತ್ವವೂ ಶ್ರೀಪರಮಾತ್ಮನಿಗೆ ಇದೆ) (ಶ್ರೀಪರಮಾತ್ಮನು ಸರ್ವಪ್ರವರ್ತಕನೆಂಬುವ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ-) (3)ಗಾರ್ಗಿಯೇ ಮನುಷ್ಯರು ದ್ರವ್ಯಾದಿಗಳನ್ನು ಕೊಡತಕ್ಕ ಜನರನ್ನು ಹೊಗಳುತ್ತಾರೆ ದೇವತೆಗಳು ಯಜ್ಞಮಾಡತಕ್ಕ ಯಜಮಾನನ್ನು ಹೊಗಳುತ್ತಾರೆ. ಇವೆಲ್ಲವೂ ಈ ಅಕ್ಷರಶಬ್ದವಾಚ್ಯನಾದ ಶ್ರೀಪರಮಾತ್ಮನ ಪ್ರೇರಣೆಯು ಇದ್ದರೇನೇ ಆಗುತ್ತದೆ ಇಲ್ಲವಾದರೆ ಆಗಲಾರದು, ಇತ್ಯಾದಿ ಪ್ರಮಾಣಗಳಿಂದ ಶ್ರೀಹರಿಗೆ ಸರ್ವಪ್ರವರ್ತಕತ್ವವು ಸಿದ್ಧವಾಗುತ್ತದೆ (೪) (ಶ್ರೀಪರಮಾತ್ಮನೇ ಯಜ್ಞಫಲವನ್ನು ಕೊಡುವವನು ಇತ್ಯಾದಿ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ–) ಇವನಿಗೆ ಪ್ರಾಚೀನವಾದ ಸ್ವರ್ಗವು ಯಾರಿಂದ ಆಗುತ್ತದೆ. ಮೋಕ್ಷದಲ್ಲಿ ಉಂಟಾಗತಕ್ಕ ಸುಖವೂ ಯಾರಿಂದ ಆಗುತ್ತದೆ. ಸ್ವರ್ಗತಸ್ಯೈವ ಕಿಂ ಕುರ್ಯಾತ್ ಇದುಮೊದಲಾದ ಪ್ರಶ್ನೆಗೆ ಸ್ವರ್ಗಸ್ಥಾ ಅಪಿ ಯೇ ಕೇಚಿತ್ ತಂ ನಮಸ್ಯಂತಿ ದೇಹಿನಃ ಎಂದು ಪರಮಾತ್ಮನೇ ಫಲಕೊಡತಕ್ಕವನೆಂದು ಪರಿಹಾರವು ಮೋಕ್ಷಧರ್ಮದಲ್ಲಿ ಹೇಳಿದೆ. ||

ಟೀ – ಅಧಿಯಜ್ಞಃ ಕಥಂ ಎಂಬುವ ಪ್ರಶ್ನೆಗೆ ಸರ್ವಯಜ್ಞಭೋಕ್ತೃತ್ವವಿದ್ದುದರಿಂದ ಅಧಿಯಜ್ಞತ್ವವು ಪರಮಾತ್ಮನಿಗೆ ಎಂಬುವ ಉತ್ತರವನ್ನು ಶ್ರೀಕೃಷ್ಣನೇಕೆ ಹೇಳಲಿಲ್ಲ ಎಂದರೆ—

**ಭಾ || (೧) ಭಗವಾಂಶ್ಚೇತ್ತದ್ಭೋಕ್ತೃತ್ವಾದೇರಧಿಯಜ್ಞತ್ವಂ ಸಿದ್ಧಮಿತಿ ಕಥಮಿತ್ಯಸ್ಯ ಪರಿಹಾರಃ ಪೃಥಙ್ನೋಕ್ತಃ || (೨) ಸರ್ವಪ್ರಾಣಿದೇಹಸ್ಥರೂಪೇಣಾಧಿಯಜ್ಞಃ | ಅತ್ರೇತಿ ಸ್ವದೇಹನಿವೃತ್ತ್ಯರ್ಥಂ | ನ ಹಿ ತತ್ರೇಶ್ವರಸ್ಯ ನಿಯಂತೃತ್ವಂ ಪೃಥಗಸ್ತಿ | ನಾತ್ರೋಕ್ತಂ ಬ್ರಹ್ಮ ಭಗವತೋಽನ್ಯತ್ | ತೇ ಬ್ರಹ್ಮೇತ್ಯುಕ್ತ್ವಾ, ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುರಿತಿ ಪರಾಮರ್ಶಾತ್ | ತಸ್ಯೈವ ಚ ಪ್ರಶ್ನಾತ್ || (೩) ಸಾಧಿಯಜ್ಞಮಿತಿ ಭೇದಪ್ರತೀತೇಸ್ತನ್ನಿವೃತ್ತ್ಯರ್ಥಮಧಿಯಜ್ಞೋಽಹಮಿತ್ಯುಕ್ತಂ | ಮಾಮಿತ್ಯಭೇದಸಿದ್ಧೇರತ್ರರಮಿತ್ಯೇವೋಕ್ತಂ || ೩ ||**

ಅ || (೧) ಯಾವಾಗ ಅಧಿಯಜ್ಞಃ ಅಹಂ ಎಂದು ಶ್ರೀಪರಮಾತ್ಮನು ಯಜ್ಞಭೋಕ್ತನಾದುದರಿಂದ ಅಧಿಯಜ್ಞನೆಂದು ಹೇಳಲ್ಪಟ್ಟಿದ್ದಾನೋ, ಆಗ ಶ್ರೀಪರಮಾತ್ಮನಿಗೆ ಸರ್ವಯಜ್ಞಭೋಕ್ತೃತ್ವಾದಿಗಳು ಇದ್ದುದರಿಂದ ಅಧಿಯಜ್ಞತ್ವವಿದೆ ಎಂದು ಭೋಕ್ತಾರಂ ಯಜ್ಞತಪಸಾಂ ಇತ್ಯಾದಿಗಳ ಅರ್ಥವನ್ನು ಅರ್ಜುನನು ಕೇಳಿದ್ದರಿಂದ ಅರ್ಜುನನಿಗೆ ಸಿದ್ಧವೇ ಆಗಿದೆ. ಹೀಗೆ ಆಲೋಚಿಸಿಯೇ ಶ್ರೀಕೃಷ್ಣನು ಕಥಂ ಅಧಿಯಜ್ಞಃ ಎಂಬುವ ಪ್ರಶ್ನೆಗೆ ಅಧಿಯಜ್ಞೋಽಹಂ ಎಂಬುವುದಕ್ಕಿಂತ ಪ್ರತ್ಯೇಕ ಪರಿಹಾರವನ್ನು ಹೇಳಲಿಲ್ಲ. (ಅ[illegible]ರಿಗೆ ತಿಳಿಯುವುದಕ್ಕಾಗಿ ಭಾಷ್ಯದಲ್ಲಿ ಪ್ರತ್ಯೇಕ ಪರಿಹಾರ ಹೇಳಿದ್ದು.) (೨) ಸಮಸ್ತ ಪ್ರಾಣಿಗಳ ದೇಹದಲ್ಲಿರತಕ್ಕ ರೂಪವಿಶೇಷದಿಂದ ಕೂಡಿರುವುದರಿಂದ ಸಾಧಿಯಜ್ಞಃ ಎನಿಸುತ್ತಾನೆ. (ಅತ್ರ ಎಂದು ದೇಹ[illegible] ವಿಶೇಷಣ ಕೊಟ್ಟಿದ್ದು ಏತಕ್ಕೆಂದರೆ –) ಅತ್ರ ಎಂದು ಹೇಳಿದ್ದು ತನ್ನ (ಶ್ರೀಕೃಷ್ಣನ) ದೇಹವನ್ನು ತೆಗೆ[illegible]ಕೊಳ್ಳಬಾರದೆಂಬುವುದಕ್ಕಾಗಿ ಅತ್ರ=ಉಕ್ತರಶರೀರಾತಿರಿಕ್ತವಾದ ಜೀವರ ದೇಹದಲ್ಲಿ ಎಂದರ್ಥವು. ([illegible] ಕೃಷ್ಣನ ಶರೀರವನ್ನು ಏಕೆ ತೆಗೆದುಕೊಳ್ಳಬಾರದೆಂದರೆ–) ಶ್ರೀಪರಮಾತ್ಮನಿಗೆ ತನ್ನ ಶರೀ[illegible]

ನಿಯಾಮಕತ್ವವು ಪ್ರತ್ಯೇಕವಿಲ್ಲ. (ಅಂದರೆ ಬೇರೆ ರೂಪದಿಂದ ಇರುವುದಿಲ್ಲ.) (ಅಧಿಯಜ್ಞೋಽಹಂ ಎಂದು ಹೇಳಿದಂತೆಯೇ ಬ್ರಹ್ಮ ಅಹಂ ಎಂದು ಹೇಳಲಿಲ್ಲ. ಆದಕಾರಣ ಬ್ರಹ್ಮನು ಶ್ರೀಪರಮಾತ್ಮನಿಂದ ಬೇರೆಯೇ ಎಂದರೆ—) ಇಲ್ಲಿ ಹೇಳಲ್ಪಟ್ಟ ಬ್ರಹ್ಮನು ಶ್ರೀಪರಮಾತ್ಮನಿಂದ ಬೇರೆಯಲ್ಲ. ತೇ ಬ್ರಹ್ಮ ತದ್ವಿದುಃ (ಅ. ೭. ಶ್ಲೋ. ೨೯) ಎಂದು ಹೇಳಿ ಸಾಧಿಭೂತಾಧಿದೈವಂ ಮಾಂ ಎಂದು ಹಿಂದೆ ಹೇಳಿದ ಬ್ರಹ್ಮನನ್ನೇ ಮಾಂ ಎಂದು ಪರಾಮರ್ಶಮಾಡಿದ್ದಾರೆ. (ಬ್ರಹ್ಮನೆಂದರೆ ಪರಮಾತ್ಮಾ ಎಂದೇ ಏಕೆ ಹೇಳಬೇಕು? ಎಂದರೆ—) ಆ ಬ್ರಹ್ಮನನ್ನೇ ಪ್ರಶ್ನೆಮಾಡಿದ್ದು. (ಪ್ರಶ್ನೆಮಾಡಿದ್ದಕ್ಕೇನೇ ಉತ್ತರ ಕೊಟ್ಟದ್ದು.) (೩) (ಹಾಗಾದರೆ ಅಧಿಯಜ್ಞನೂ ಬ್ರಹ್ಮನೂ ಇಬ್ಬರೂ ಪರಬ್ರಹ್ಮರಾದುದರಿಂದ ಒಂದು ಕಡೆ ಮಾತ್ರ ಅಧಿಯಜ್ಞೋಽಹಮೇವ ಎಂದು ಹೇಳಲು ಕಾರಣವೇನು? ಇನ್ನೊಂದು ಕಡೆ ಬ್ರಹ್ಮ ಅಹಮೇವ ಎಂದು ಏಕೆ ಹೇಳಲಿಲ್ಲ? ಎಂದರೆ—) ಸಾಧಿಯಜ್ಞಂ ಎಂದು ಅಧಿಯಜ್ಞನು ಬೇರೆ, ಅಧಿಯಜ್ಞನಿಂದ ಕೂಡಿದವನು ಬೇರೆ ಎಂದು ಭೇದವು ತೋರುವುದರಿಂದ ಆ ಭೇದಭ್ರಮೆಯನ್ನು ಅಧಿಯಜ್ಞನಿಂದ ಕೂಡಿದ್ದೇನೆಂದು ಹೇಳಿದ್ದರಿಂದ ನಿವೃತ್ತಿಗೊಳಿಸುವುದಕ್ಕಾಗಿ (ಅಂದರೆ ಅಧಿಯಜ್ಞನೂ ಅಧಿಯಜ್ಞನಿಂದ ಕೂಡಿದವನೂ ಒಬ್ಬನೇ ಎಂದು ತೋರಿಸುವುದಕ್ಕಾಗಿ) ಅಧಿಯಜ್ಞೋಽಹಂ ಎಂದು ಹೇಳಿದ್ದು. ಮಾಂ ಎಂಬುವುದರಿಂದ ಅಭೇದವು ಪ್ರಸಿದ್ಧವಾಗಿ ತೋರುವದರಿಂದ ಅಕ್ಷರಂ ಎಂದಿಷ್ಟೇ ಹೇಳಿರುವರು. ॥ ೩ ॥

ಟೀ—ಹಿಂದೆ ಹೇಳಿದ ಪ್ರಮೇಯವನ್ನು ಆಗಮ ಹೇಳಿ ದೃಢೀಕರಿಸುತ್ತಾರೆ—

ಭಾ ॥ (೧) ಆಹ ಚ ಗೀತಾಕಲ್ಪೇ । ದೇಹಸ್ಥವಿಷ್ಣುರೂಪಾಣಿ ಅಧಿಯಜ್ಞ ಇತೀರಿತಃ । ಕರ್ಮೇಶ್ವರಸ್ಯ ಸೃಷ್ಟ್ಯಾಖ್ಯಂ ತಚ್ಚಾಪೀಚ್ಛಾದ್ಯಮುಚ್ಯತೇ । ಅಧಿಭೂತಂ ಜಡಂ ಪ್ರೋಕ್ತಮಧ್ಯಾತ್ಮಂ ಜೀವ ಉಚ್ಯತೇ । ಹಿರಣ್ಯಗರ್ಭೋಽಧಿದೈವಂ ದೇವಃ ಸಂಕರ್ಷಣೋಽಪಿ ವಾ । ಬ್ರಹ್ಮ ನಾರಾಯಣೋ ದೇವಃ ಸರ್ವದೇವೇಶ್ವರೇಶ್ವರ ಇತಿ ॥
(೨) ಯಥಾಪ್ರತೀತಂ ವಾ ಸರ್ವಮತ್ರ ನೈವ ವಿರುಧ್ಯತ ಇತಿ ॥ ೪ ॥

ಅ ॥ ಸರ್ವರ ದೇಹಗಳಲ್ಲಿರತಕ್ಕ ಶ್ರೀವಿಷ್ಣುರೂಪಗಳು ಅಧಿಯಜ್ಞಃ ಎನಿಸುತ್ತವೆ. ಶ್ರೀಪರಮಾತ್ಮನ ಸೃಷ್ಟಿರೂಪವಾದುದು ಕರ್ಮವು. ಸೃಷ್ಟ್ಯಾಖ್ಯ ಕರ್ಮವೂ ಕೂಡ ಇಚ್ಛಾಪ್ರಯತ್ನಾದಿ ರೂಪವೇ. (ಪರಿಣಾಮರೂಪವಾದುದಲ್ಲ.) ದೇಹದಿಂದ ಬಾಹ್ಯವಾದ ಜಡಪದಾರ್ಥವು ಅಧಿಭೂತವೆನಿಸುತ್ತದೆ. ಜೀವನು ಅಧ್ಯಾತ್ಮನೆನಿಸುತ್ತಾನೆ. ಚತುರ್ಮುಖನು ಅಥವಾ ಶೇಷನು ಅಧಿದೈವತನೆನಿಸುತ್ತಾನೆ. ಸಮಸ್ತ ದೇವತೆಗಳಿಗೆ ಅಧಿಪತಿಗಳಾದ ಬ್ರಹ್ಮಾದಿಗಳಿಗೆ ಸ್ವಾಮಿಯಾದ ಶ್ರೀನಾರಾಯಣದೇವರು ಬ್ರಹ್ಮ ಎನಿಸಿಕೊಳ್ಳುತ್ತಾರೆ ಹೀಗೆ ಗೀತಾಕಲ್ಪದಲ್ಲಿ ಹೇಳಿದೆ. (೨) ಈ ಪದಗಳಿಗೆ ಇಷ್ಟು ಮಾತ್ರ ಅರ್ಥವೆಂದಲ್ಲ. ಮತ್ತೆ ಪ್ರಮಾಣ ವಿರುದ್ಧವಾದ ಶಬ್ದ ಶಕ್ತಿಯಿಂದ ತೋರುವ ಬೇರೆ ಅರ್ಥವನ್ನು ಹೇಳಿದರೆ [illegible] ಅಭಿಪ್ರಾಯಕ್ಕೆ ವಿರೋಧಿಯಾಗುವುದಿಲ್ಲ. ॥ ೪ ॥

ಟೀ— ಈ ಅಭಿಪ್ರಾಯವನ್ನೇ ವಾಕ್ಯಾಂತರದಿಂದ ಸ್ಪಷ್ಟೀಕರಿಸುತ್ತಾರೆ—

ಭಾ ॥ (೧) ಸ್ಕಾಂದೇ ಚ । ಆತ್ಮಾಭಿಮಾನಾಧಿಕಾರಸ್ಥಿತಮಧ್ಯಾತ್ಮಮುಚ್ಯತೇ । ದೇಹಾದ್ಬಾಹ್ಯಂ ವಿನಾಶೀವ ಬಾಹ್ಯತ್ವಾದಧಿದೈವತಂ ॥ (೨) ದೇವಾಧಿಕಾರಗಂ ಸರ್ವಂ ಮಹಾಭೂತಾಧಿಕಾರಗಂ । ತತ್ಕಾರಣಂ ತಥಾ ಕಾರ್ಯಮಧಿಭೂತಂ ತದುಚ್ಯತೇ ॥

(೫)ಮಹಾಕೌರ್ಮೇ ಚ । ಅಧ್ಯಾತ್ಮಂ ದೇಹಪರ್ಯಂತಂ ಕೇವಲಾತ್ಮೋಪಕಾರಕಂ ।
ಸದೇಹಜೀವಾ ಭೂತಾನಿ ಯತ್ತೇಷಾಮುಪಕಾರಕೃತ್ । ಅಧಿಭೂತಂ ತು ಮಾಯಾಂ-
ತಂ ದೇವಾನಾಮಧಿದೈವತಮಿತಿ ॥ ೫ ॥ ॥ ೪ ॥

ಅ ॥ (೧) ದೇಹಾದಿಗಳಲ್ಲಿ ಇದ್ದಂತೆ ಪೃಥಿವೀ ಮೊದಲಾದ ಭೂತಗಳಲ್ಲಿ ಅತ್ಯಭಿಮಾನ ವಿಷಯತ್ವ ಇಲ್ಲದಿರುವುದರಿಂದ ದೇಹಸಹಿತನಾದ ಜೀವನಿಗೆ ಉಪಕಾರಕವಾಗಿರುವ, ದೇಹದಿಂದ ಭಿನ್ನವಾಗಿರುವ ಪೃಥಿವೀ ಮೊದಲಾದ ಭೂತಾದಿಗಳನ್ನು ಬಿಟ್ಟು ಜೀವರ ವಿಶೇಷಾಭಿಮಾನಕ್ಕೆ ವಿಷಯವಾದ ಅಂತಃಕರಣವನ್ನು ಆರಂಭಿಸಿ ದೇಹಪರ್ಯಂತವಾದ ವಸ್ತುವೂ, ಮತ್ತು ಆತ್ಮಾಧಿಕಾರ ಎಂಬುವ ಗ್ರಂಥದಲ್ಲಿ ಹೇಳಲ್ಪಡತಕ್ಕ ಜೀವನೂ ಕೂಡ ಅಧ್ಯಾತ್ಮನೆನಿಸುತ್ತಾನೆ. (೨) ದೇವಾಧಿಕಾರ ಗ್ರಂಥಪ್ರತಿಪಾದ್ಯವಾದುದೆಲ್ಲವೂ ಅಧಿದೈವತವೆನಿಸುತ್ತದೆ. ಹಾಗೆಯೇ ಮಹಾಭೂತಾಧಿಕಾರ ಗ್ರಂಥಪ್ರತಿಪಾದ್ಯವಾದುದು ಪಂಚ ಮಹಾಭೂತವೂ, ಕಾರ್ಯ ಕಾರಣಗಳಿಗೆ ಅಭೇದವಿದ್ದ ಪ್ರಯುಕ್ತ ಮಹಾಭೂತಗಳಿಗೆ ಕಾರಣಗಳಾದ ಅಹಂಕಾರತತ್ವಾದಿಗಳೂ, ಮಹಾಭೂತಕಾರ್ಯವಾದ ಭೌತಿಕ ಪದಾರ್ಥವೂ. ಅಧಿಭೂತವೆನಿಸುತ್ತದೆ, ಎಂದು ಸ್ಕಾಂದಪುರಾಣದಲ್ಲಿದೆ. (೩) ಅಂತಃಕರಣವನ್ನಾರಂಭಿಸಿ ದೇಹಪರ್ಯಂತವಾದುದು ಕೇವಲ ಜೀವನಿಗೆ ಉಪಕಾರಕವಾದುದು ಅಧ್ಯಾತ್ಮವೆನಿಸುತ್ತದೆ ದೇಹಸಹಿತರಾದ ಜೀವರೂ ಭೂತಗಳೂ ಯಾವುದೋ ಅವುಗಳಿಗೆ ಉಪಕಾರಕವಾದುದು ಜಡಪ್ರಕೃತಿಪರ್ಯಂತವಾದ ವಸ್ತುವು ಅಧಿಭೂತವೆನಿಸುತ್ತದೆ. ಇಂದ್ರಾದಿದೇವತೆಗಳಿಗೆ ಉಪಕಾರವನ್ನು ಮಾಡತಕ್ಕ ಶೇಷನು ಅಥವಾ ಚತುರ್ಮುಖ ಬ್ರಹ್ಮನು ಅಧಿದೈವತವೆನಿಸುತ್ತಾನೆ. ॥ ೫ ॥ ॥ ೪ ॥

ತಾ ॥ ಓಂ ॥ (೧) ಉಕ್ತವ್ಯಾಖ್ಯಾನಪೂರ್ವಕಂ ಬ್ರಹ್ಮಪ್ರಾಪ್ತಿರುಚ್ಯತೇ ॥ (೨) ತದಿತಿ ವಿಶೇಷಣಾದ್ಬ್ರಹ್ಮೇತ್ಯುಕ್ತಮನ್ಯದೇವ ॥ (೩) ಪ್ರತ್ಯಕ್ತ್ವಾದೀನಾಂ ಮಧ್ಯೇ ಯತ್ಕಿಂಚಿತ್ ॥ (೪) ಉಪರಿ ಸಾಧಿಯಜ್ಞಂ ಚೇತಿ ಚಶಬ್ದಾದಧಿಭೂತಾದಿಸಹಿತತ್ವೇನ ವಿಷ್ಣುಜ್ಞಾನಮನ್ಯದೇವೇತಿ ಸಂಶಯಃ । ಕಿಂ ತದ್ಬ್ರಹ್ಮೇತಿ ಪ್ರಶ್ನಕಾರಣಂ ॥ (೫) ಪರಮಾಕ್ಷರೋ(ರಂ) ವಿಷ್ಣುರೇವ ಮುಖ್ಯತ ಇತಿ ಸಿದ್ಧತ್ವಾತ್ । ತಥೈವ ಪರಿಹರತಿ ॥೧॥

ಅ ॥ (೧) ಹಿಂದೆ ತೇ ಬ್ರಹ್ಮ ತದ್ವಿದುಃ ಎಂದು ಹೇಳಿರುತ್ತಾರೆ. ಅದರ ವ್ಯಾಖ್ಯಾನವನ್ನು ಈ ಅಧ್ಯಾಯದಲ್ಲಿ ಮಾಡುತ್ತಾರೆ. ಪ್ರಯಾಣಕಾಲೇಽಪಿ ಚ ಮಾಂ ಎಂದು ಹೇಳಿದ ವ್ಯಾಖ್ಯಾನಪ್ರಸಂಗದಿಂದ ಸ ತಂ ಪರಂ ಪುರುಷಮುಪೈತಿ ದಿವ್ಯಂ ಎಂಬುವುದರಿಂದ ಅಂತ್ಯಕಾಲದಲ್ಲಿ ಸ್ಮರಣ ಮಾಡಿದ್ದಕ್ಕೆ ಫಲವನ್ನೂ. ಅನನ್ಯಚೇತಾಃ ಸತತಂ ಇತ್ಯಾದಿಗಳಿಂದ ಮರಣಕಾಲದಲ್ಲಿ ಮಾಡುವ ಸ್ಮರಣೋಪಾಯಪ್ರಕಾರವನ್ನೂ, ಅಗ್ನಿರ್ಜ್ಯೋತಿಃ ಇತ್ಯಾದಿಗಳಿಂದ ಪರಬ್ರಹ್ಮಪ್ರಾಪ್ತಿ ಮಾರ್ಗವನ್ನೂ ಹೇಳುತ್ತಾರೆ (೨) (ಅರ್ಜುನನು ಜ್ಞಾನಿಯಾಗಿರುವುದರಿಂದ ಬ್ರಹ್ಮ ಎಂದರೆ ಭಗವಂತನೇ ಎಂದು ನಿಶ್ಚಯವಾಗಿಯೂ ತಿಳಿದಿರುತ್ತಾನೆ ಆದಕಾರಣ ಕಿಂ ತದ್ಬ್ರಹ್ಮ ಎಂದು ಪ್ರಶ್ನೆ ಮಾಡಿದ್ದು ಹೇಗೆ ಕೂಡುತ್ತದೆ? ಎಂದರೆ-) (ಅರ್ಜುನನು ಜ್ಞಾನಿಯಾಗಿದ್ದಾಗ್ಯೂ ಈ ಪ್ರಶ್ನೆಯು ಕೂಡುತ್ತದೆ.) ತದ್ಬ್ರಹ್ಮ ಎಂಬುವಲ್ಲಿ ಶ್ರೀಕೃಷ್ಣನು ಪರಬ್ರಹ್ಮನಲ್ಲಿ ಪರೋಕ್ಷವಾಚಕವಾದ ತತ್ ಎಂಬುವುದನ್ನು ವಿಶೇಷಣ ರೂಪ ಪ್ರಯುಕ್ತ ಇಲ್ಲಿ ಹೇಳಿದ ಬ್ರಹ್ಮನು ಭಗವಂತನಲ್ಲ ಮತ್ತೊಬ್ಬನೇ ಎಂದು ತೋರುತ್ತದೆ (ವಾಸುದೇವಾತ್ಮಕಂ ಬ್ರಹ್ಮ ಇತ್ಯಾದಿ ಪ್ರಮಾಣಗಳಿಂದ ಈ ಬ್ರಹ್ಮನು ಭಗವಂತನೇ ಎಂದು ತೋರುತ್ತದೆ ಹೀಗೆ ಎರಡು ವಿಧ ಪ್ರಮಾಣಗಳಿಂದ ಸಂಶಯವುಂಟಾದ ಕಾರಣ ಕಿಂ ತದ್ಬ್ರಹ್ಮ ಎಂದು ಪ್ರಶ್ನೆ ಮಾಡಿದ್ದು ) (೩) (ಬ್ರಹ್ಮ ಶಬ್ದ

ಭಗವಂತನಲ್ಲಿ ಮಾತ್ರ ಇರುವುದರಿಂದ ತತ್ ಎಂದು ವಿಶೇಷಣ ಕೊಟ್ಟರೂ ಬ್ರಹ್ಮನು ಭಗವಂತನಿಂದ ಬೇರೆ ಎಂದು ಪ್ರತೀತಿಯು ಹೇಗೆ ಬರುವುದು? ಎಂದರೆ—) (ಬ್ರಹ್ಮಶಬ್ದಕ್ಕೆ ಪರಮಾತ್ಮನಲ್ಲಿ ಮುಖ್ಯತ್ವ ಇದ್ದರೂ ಪ್ರಕೃತಿ ವೇದ ಮೊದಲಾದುವುಗಳೂ ಅಮುಖ್ಯವಾಗಿ ಬ್ರಹ್ಮಶಬ್ದದ ಅರ್ಥವಾಗುವುದರಿಂದ ತತ್ ಎಂದು ವಿಶೇಷಣ ಕೊಟ್ಟಿರುವುದರಿಂದ ಮುಖ್ಯವಾದ ಅರ್ಥವು ಕೂಡದಿದ್ದರೂ ಅಮುಖ್ಯವಾದ ಅರ್ಥವು ಕೂಡಬಹುದು.) ಆದಕಾರಣ ಪ್ರಕೃತಿ ವೇದ ಮೊದಲಾದವುಗಳ ಮಧ್ಯದಲ್ಲಿ ಯಾವುದಾದರೊಂದು ಇಲ್ಲಿ ಬ್ರಹ್ಮಶಬ್ದಾರ್ಥವು ಆಗುವುದು. (ಆದಕಾರಣ ಹೀಗೆ ಪ್ರತೀತಿಯು ಯುಕ್ತವೇ.) (೪) (ತತ್ ಎಂಬುವ ವಿಶೇಷಣದಿಂದ ಬ್ರಹ್ಮನು ಭಗವಂತನಿಂದ ಭಿನ್ನನು ಎಂದು ಶಂಕೆಯನ್ನು ಸಾಧಿಭೂತಾಧಿದೈವಂ ಮಾಂ ಎಂಬುವ ಮೇಲಿನ ವಾಕ್ಯದಲ್ಲಿ ಬ್ರಹ್ಮ ಎಂದು ಹೇಳದೆ ಮಾಂ ಎಂದು ಹೇಳಿದ ಕಾರಣ ಶ್ರೀಕೃಷ್ಣನೇ ಪರಿಹರಿಸಿರುತ್ತಾನೆ. ಆದುದರಿಂದ ಬ್ರಹ್ಮನು ಭಗವಂತನಿಂದ ಭಿನ್ನನೆಂಬುವ ಪ್ರತೀತಿಯು ಹೇಗೆ ಬರುವುದು? ಎಂದರೆ—) ಮೇಲೆ ಸಾಧಿಯಜ್ಞಂ ಚ ಎಂದು ಚಶಬ್ದದಿಂದ ಅಧಿಭೂತಾದಿಗಳಿಂದ ಕೂಡಿರುವುದರಿಂದ ಶ್ರೀವಿಷ್ಣುವಿನ ಜ್ಞಾನವು ಬ್ರಹ್ಮಜ್ಞಾನದಿಂದ ಬೇರೆಯೇ ಎಂದು ಬರತಕ್ಕ ಸಂಶಯವು ಕಿಂ ತದ್ಬ್ರಹ್ಮ ಎಂಬುವ ಪ್ರಶ್ನೆಗೆ ಕಾರಣವು. (ಅಂದರೆ-ಯದ್ಯಪಿ ಈ ಪ್ರತೀತಿಯನ್ನು ಮೇಲಿನ ವಾಕ್ಯದಲ್ಲಿಯೇ ಪರಿಹರಿಸಿರುವರು. ಆದರೂ ಸಂಶಯವು ಬಂದೇ ಬರುವುದು. ಹೇಗೆಂದರೆ ಸಾಧಿಯಜ್ಞಂ ಚ ಎಂಬುವಲ್ಲಿ ಚಶಬ್ದದಿಂದ ಸಾಧಿಭೂತಾಧಿಯಜ್ಞಂ ಮಾಂ ಚ ಎಂದು ಹೇಳುವುದರಿಂದ ಅಧಿಭೂತಾದಿಗಳಿಂದ ಕೂಡಿರುವ ಕಾರಣ ಬ್ರಹ್ಮಜ್ಞಾನಕ್ಕಿಂತ ಶ್ರೀವಿಷ್ಣುವಿನ ಜ್ಞಾನವು ಬೇರೆಯೇ ಎಂದು ತತ್ ಎಂಬುವ ವಿಶೇಷಣದಿಂದಲೇ ತೋರುತ್ತದೆ (೫) ಸಾಧಿಭೂತಾಧಿದೈವಂ ಮಾಂ ಎಂದು ಶ್ರೀಕೃಷ್ಣನೇ ಬ್ರಹ್ಮನೆಂದು ಹೇಳಿದ್ದರಿಂದ ಕಿಂ ತದ್ಬ್ರಹ್ಮ ಎಂಬುವ ಪ್ರಶ್ನೆಗೆ ಅಹಂ ಬ್ರಹ್ಮ ಎಂದೇ ಪರಿಹಾರ ಹೇಳಬೇಕಿತ್ತು. ಅಕ್ಷರಂ ಬ್ರಹ್ಮ ಪರಮಂ ಎಂದು ಹೇಳಿದ್ದು ಹೇಗೆ ಕೂಡುತ್ತದೆ? ಎಂದರೆ--) ಮುಖ್ಯವಾಗಿ ಶ್ರೀವಿಷ್ಣುವೇ ಪರಮಾಕ್ಷರನೆನಿಸುತ್ತಾನೆ. ಹೀಗೆ ಪರಮಾಕ್ಷರಶಬ್ದವು ಶ್ರೀವಿಷ್ಣುವಿನಲ್ಲಿಯೇ ಪ್ರಸಿದ್ಧವಾದ ಕಾರಣ ಪರಮಾಕ್ಷರಂ ಬ್ರಹ್ಮ ಎಂದೇ ಪರಿಹರಿಸುತ್ತಾರೆ ॥ ೧ ॥

ಟೀ—ಪರಮಾಕ್ಷರ ಶಬ್ದವು ಶ್ರೀವಿಷ್ಣುವಿನಲ್ಲಿಯೇ ಪ್ರಸಿದ್ಧವಾದ ಕಾರಣ ಪರಮಾಕ್ಷರಂ ಬ್ರಹ್ಮ ಎಂದು ಹೇಳಿದ್ದರಿಂದ ಅಹಂ ಬ್ರಹ್ಮ ಎಂದು ಹೇಳಿದಂತೆಯೇ ಆಯಿತೆಂದಾಗಲಿ, ಆದಾಗ್ಯೂ ಅಹಂ ಬ್ರಹ್ಮ ಎಂದು ಸಾಕ್ಷಾತ್ತಾಗಿ ಹೇಳದೆ ಹೀಗೆ ಹೇಳಲು ಕಾರಣವೇನು? ಎಂದರೆ—

ತಾ ॥ (೧) ಅಜ್ಞಾನಾಂ ತದಪಿ ಜ್ಞಾಪಯಿತುಂ ತಥೈವ ಪರಿಹಾರಃ ॥ (೨) ಪುನರಪನಿತಿ ನೋಕ್ತಮಿತ್ಯಾಶಂಕಾಽವ್ಯಕ್ತಂ ವ್ಯಕ್ತಿಮಾಪನ್ನಮಿತಿ ವಿಷ್ಣಾವೇವ ಪ್ರಯುಕ್ತತ್ವೇನಾವ್ಯಕ್ತಶಬ್ದೇನಾವ್ಯಕ್ತೋಽಕ್ಷರ ಇತ್ಯುಕ್ತ ಇತಿ ಪರಿಹ್ರಿಯತೇ ॥ (೩) ಯೋ ಚಾ[illegible]ಕ್ಷರಮವ್ಯಕ್ತಮಿತ್ಯತ್ರ ತು ಪೃಥಕ್ಪ್ರಶ್ನಾದುಪಾಸಕಯೋಃ ಫಲತಾರತಮ್ಯಕಥನಾತ್ ಕೂಟಸ್ಥೋಽಕ್ಷರ ಉಚ್ಯತ ಇತ್ಯುಕ್ತಾತ್ಕ್ಷರಾದಪಿ ಚೋತ್ತಮ ಇತಿ ವಿಷ್ಣೋರುತ್ತಮತ್ವಕಥನಾಚ್ಚಾನ್ಯದೇವೇತ್ಯವಸೀಯತೇ ॥ ೨ ॥

ಅ ॥ (೧) ಶ್ರೀಕೃಷ್ಣನಿಗೆ ಪರಮಾಕ್ಷರತ್ವವೂ ಕೂಡ ಇದೆ, ಎಂದು ಅಜ್ಞರಿಗೆ ತಿಳಿಸಿಕೊಡುವದಕ್ಕಾಗಿ ಹಾಗೆಯೇ ಪರಿಹಾರಮಾಡಿದ್ದಾರೆ. (೨) (ಯಾರು ಪರಮಾಕ್ಷರನು ಶ್ರೀವಿಷ್ಣುವೆಂದು ತಿಳಿ[illegible] [illegible]ಲ್ಲವೋ ಅವರಿಗಾಗಿ ಅಕ್ಷರಂ ಬ್ರಹ್ಮ ಎಂದೇ ಹೇಳಿರುತ್ತಾರೆ ಅಹಂ ಬ್ರಹ್ಮ ಎಂ[illegible] [illegible]ದರಿಂದ ಬ್ರಹ್ಮನು ಅಕ್ಷರನೂ ಕೂಡ ಶ್ರೀಪರಮಾತ್ಮನಿ[illegible] ಭಿನ್ನನೇ ಎಂಬ ಶಂಕೆ[illegible]

ವುದು. ಅಲ್ಲದೆ ಪರಮಾಕ್ಷರನೂ ಬ್ರಹ್ಮನೂ ಕೂಡ ಪರಮಾತ್ಮನೇ. ಎಂದು ಜ್ಞಾನವು ಬರುವುದಿಲ್ಲ, ಎಂದರೆ–) ಪುನಃ ಅಹಂ ಎಂದು ಹೇಳಲಿಲ್ಲ, ಎಂಬ ಆಶಂಕೆಯು ಅವ್ಯಕ್ತಂ ವ್ಯಕ್ತಿಮಾಪನ್ನಂ ಎಂದು ಶ್ರೀವಿಷ್ಣುವಿನಲ್ಲಿಯೇ ಪ್ರಯುಕ್ತವಾದ ಅವ್ಯಕ್ತಶಬ್ದದಿಂದ ಅವ್ಯಕ್ತೋಽಕ್ಷರ ಇತ್ಯುಕ್ತಃ ಎಂದು ಮೇಲೆ ಅಕ್ಷರನಿಗೆ ಅವ್ಯಕ್ತತ್ವವನ್ನು ಹೇಳಿ ಪರಿಹರಿಸುತ್ತಾರೆ. (ಅಂದರೆ– ಈ ಶಂಕೆಯು ಹುಟ್ಟುತ್ತದೆಂಬುವುದು ಸತ್ಯವೇ. ಆದರೆ ಆ ಶಂಕೆಯು, ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯಂತೇ ಮಾಂ ಎಂದು ಅವ್ಯಕ್ತ ಶಬ್ದವು ಶ್ರೀಪರಮಾತ್ಮನಲ್ಲಿ ಪ್ರಯುಕ್ತವಾಗಿರುವುದರಿಂದ, ಅವ್ಯಕ್ತೋಽಕ್ಷರ ಇತ್ಯುಕ್ತಃ ಎಂದು ಮೇಲೆ ಅಕ್ಷರನು ಅವ್ಯಕ್ತನೆಂದು ಹೇಳಿದ್ದರಿಂದ ಪರಿಹರಿಸಲ್ಪಡುತ್ತದೆ. ಆದಕಾರಣ ಬ್ರಹ್ಮನು ಪರಮಾಕ್ಷರನೆಂದು ಪರಿಹಾರ ಮಾಡುವಾಗ ಅಹಂ ಬ್ರಹ್ಮ ಎಂದು ಹೇಳುವುದಕ್ಕಿಂತಲೂ ಹೆಚ್ಚು ವಿಶೇಷಾರ್ಥವೇ ಸಿಗುವುದರಿಂದ ಹಾಗೆ ಪರಿಹಾರ ಮಾಡಿದ್ದೇ ಯುಕ್ತವು. (ಅಂದರೆ ಅಹಂ ಬ್ರಹ್ಮ ಎಂದು ಹೇಳಿದರೆ ಶ್ರೀಕೃಷ್ಣನಲ್ಲಿ ಬ್ರಹ್ಮ ಎಂಬ ಶಬ್ದವಿದೆ, ಎಂದು ಇಷ್ಟುಮಾತ್ರ ಅರ್ಥವು ಸಿಗುತ್ತಿತ್ತು. ಅಕ್ಷರಂ ಬ್ರಹ್ಮ ಎಂದು ಹೇಳಿದರೆ– ಶ್ರೀಕೃಷ್ಣನಲ್ಲಿ ಅಕ್ಷರಶಬ್ದವೂ ಬ್ರಹ್ಮಶಬ್ದವೂ ಎರಡೂ ಇದೆ, ಎಂದು ಸಿಗುವುದರಿಂದ ಅಧಿಕಲಾಭವಾಯಿತು.) (೩) (ಅಕ್ಷರಶಬ್ದವು ಶ್ರೀವಿಷ್ಣುವಿನಲ್ಲಿಯೇ ಮುಖ್ಯವೆಂದಾದರೆ–ಯೇ ಚಾಪ್ಯಕ್ಷರಮವ್ಯಕ್ತಂ ಎಂಬುವಲ್ಲಿಯೂ ಕೂಟಸ್ಥೋಽಕ್ಷರ ಉಚ್ಯತೇ ಎಂಬುವಲ್ಲಿಯೂ ಅಕ್ಷರಶಬ್ದವಾಚ್ಯನು ಶ್ರೀವಿಷ್ಣುವೇ ಆಗಬೇಕಾಗುವುದು ಎಂದರೆ–) ಯೇ ಚಾಪ್ಯಕ್ಷರಮವ್ಯಕ್ತಂ ಎಂಬುವಲ್ಲಿ ಪ್ರತ್ಯೇಕ ಪ್ರಶ್ನೆ ಮಾಡಿದ್ದರಿಂದಲೂ ಉಪಾಸಕರಿಗೆ ಫಲದಲ್ಲಿ ತಾರತಮ್ಯವನ್ನು ಹೇಳಿದ್ದರಿಂದಲೂ ಕೂಟಸ್ಥೋಽಕ್ಷರ ಉಚ್ಯತೇ ಎಂದು ಹೇಳಿ ಅಹಂ ಅಕ್ಷರಾದಪಿ ಚೋತ್ತಮಃ ಎಂದು ಶ್ರೀವಿಷ್ಣುವಿಗೆ ಅಕ್ಷರನಿಂದ ಉತ್ತಮತ್ವವನ್ನು ಹೇಳಿದ್ದರಿಂದಲೂ ಅಲ್ಲಿ ಹೇಳಿದ ಅಕ್ಷರಳು ಶ್ರೀವಿಷ್ಣುವಿಗಿಂತ ಭಿನ್ನಳಾದ ಲಕ್ಷ್ಮೀದೇವಿಯೇ ಎಂದು ನಿಶ್ಚಿತವಾಗುತ್ತದೆ. (ಅಂದರೆ– ಅಕ್ಷರಶಬ್ದವು ಶ್ರೀವಿಷ್ಣುವಿನಲ್ಲಿಯೇ ಮುಖ್ಯವಾದುದಾಗೂ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ. ಯೇ ಚಾಪ್ಯಕ್ಷರಂ ಎಂದು ಶ್ರೀಕೃಷ್ಣನಿಗೂ ಅಕ್ಷರನಿಗೂ ಭೇದವನ್ನು ಹೇಳಿದ್ದರಿಂದ ಅವರನ್ನು ಉಪಾಸನೆಮಾಡುವವರಿಗೆ ತಾರತಮ್ಯವನ್ನು ಪ್ರಶ್ನೆ ಮಾಡಿದ್ದರಿಂದಲೂ ಯೇ ತ್ವಕ್ಷರಮನಿರ್ದೇಶ್ಯಂ, ಯೇ ತು ಸರ್ವಾಣಿ ಕರ್ಮಾಣಿ ಇತ್ಯಾದಿಗಳಿಂದ ಅಕ್ಷರನನ್ನು ಪಾಸನೆ ಮಾಡಿದವರಿಗೂ ಶ್ರೀಕೃಷ್ಣನನ್ನು ಪಾಸನೆ ಮಾಡಿದವರಿಗೂ ಫಲತಾರತಮ್ಯವನ್ನು ಹೇಳಿದ್ದರಿಂದಲೂ ಯೇ ಚಾಪ್ಯಕ್ಷರಮವ್ಯಕ್ತಂ ಎಂಬುವಲ್ಲಿ ಅಕ್ಷರಶಬ್ದವಾಚ್ಯವಾದುದು ಶ್ರೀವಿಷ್ಣುವಿನಿಂದ ಭಿನ್ನವೇ, ಎಂದೇ ನಿಶ್ಚಿತವಾಗುತ್ತದೆ ಹಾಗೆಯೇ ಕೂಟಸ್ಥೋಽಕ್ಷರ ಉಚ್ಯತೇ ಎಂಬುವಲ್ಲಿಯೂ ಅಕ್ಷರನು ಶ್ರೀವಿಷ್ಣುವಿನಿಂದ ಭಿನ್ನನೇ ಎಂದೇ ನಿಶ್ಚಯವಾಗುತ್ತದೆ. ಅಹಮಕ್ಷರಾದಪಿ ಚೋತ್ತಮಃ ಎಂದು ಶ್ರೀವಿಷ್ಣುವಿಗೆ ಅಕ್ಷರನಿಂದ ಉತ್ತಮತ್ವವನ್ನು ಹೇಳಿದ್ದರಿಂದ ಮುಖ್ಯವಾದ ಅರ್ಥವು ಕೂಡದಿರುವಾಗ ಅಮುಖ್ಯವಾದ ಲಕ್ಷ್ಮ್ಯಾದಿರೂಪ ಅರ್ಥವನ್ನು ಅಂಗೀಕರಿಸುವುದು ನ್ಯಾಯವಾಗಿದೆ. ಪ್ರಕೃತದಲ್ಲಿ ಬಾಧಕವಿಲ್ಲದಿರುವುದರಿಂದ ಅಕ್ಷರಶಬ್ದಕ್ಕೆ ಶ್ರೀವಿಷ್ಣುವೆಂದೇ ಅರ್ಥ ಹೇಳಬೇಕು ಪ್ರಕೃತದಲ್ಲಿ ಲಕ್ಷ್ಮ್ಯಾದಿರೂಪವಾದ ಅರ್ಥವಲ್ಲ.) ||೩||

ಟೀ– ಅಧಿಯಜ್ಞವಂತೆ ಬ್ರಹ್ಮನೂ ವಿಷ್ಣುವಾದರೆ ಬ್ರಹ್ಮಾಹಮೇವ ಎಂದು ಹೇಳದೆ ಅಧಿಯಜ್ಞೋಽಹಮೇವ ಎಂದು ಏತಕ್ಕೆ ಹೇಳುವುದು. ಕಾರಣವಿಶೇಷವಿಲ್ಲದೆ ಹೀಗೆ ಹೇಳಲಾರರು. ಆದಕಾರಣ ಅಧಿಯಜ್ಞನೇ ಶ್ರೀವಿಷ್ಣುವು. ಬ್ರಹ್ಮನು ವಿಷ್ಣುವಲ್ಲ ಎಂದರೆ–

ತಾ|| (೧) ಅಧಿಯಜ್ಞೋಽಹಮೇವೇತಿ ಸಾಧಿಯಜ್ಞಮಿತ್ಯುಕ್ತ್ಯಾ ಪ್ರಾಪ್ತಭೇದನಿವೃತ್ತ್ಯರ್ಥಃ || (೨) ತಸ್ಯೈವ ಸರ್ವಪ್ರಾಣಿದೇಹಸ್ಥಿತರೂಪಾಂತರಾಪೇಕ್ಷಯಾ ಸಹಿತತ್ವಂ ಯುಜ್ಯತೇ || (೩) ಪ್ರಾಣಿನಾಂ ದೇಹಗೋ ವಿಷ್ಣುರಧಿಯಜ್ಞ ಇತೀರಿತಃ | ಸ ಏವ ವಾ ಸ್ತು-

ರೂಪೇಣ ಬ್ರಹ್ಮೇತಿ ಪರಿಕೀರ್ತ್ಯತೇ । ತೈಸ್ತೈರಧಿಕಯಾಜ್ಯತ್ವಾದ್ಬೃಂಹಿತತ್ವಾಚ್ಚ ಹೇತುತಃ । ಅಧ್ಯಾತ್ಮಂ ತತ್ಸ್ವಭಾವೋ ಯದಧಿಕಃ ಪರಮಾತ್ಮಗಃ । ಪುಂಸಾಂ ಸ ಜಡಭಾವಾನಾಂ ಸರ್ಗಃ ಕರ್ಮ ಹರೇಃ ಸ್ಮೃತಂ । ಭೂತಾಧಿಕತ್ವತೋ ಜೀವಾ ಅಧಿಭೂತಮಿತೀರಿತಾಃ । ಅಧಿಕೋ ದೈವತಂ ವಿಷ್ಣುರೇವ ಯಸ್ಯಾಸ್ತು ಸಾ ರಮಾ । ಪುರುಷಾಖ್ಯಾಽಧಿದೈವಾಖ್ಯಾ ತ್ವಿತಿ ಜ್ಞೇಯಮಿದಂ ನರೈರಿತಿ ತತ್ತ್ವವಿವೇಕೇ ॥ (೪) ಕಥಂರೂಪೋಽಧಿಯಜ್ಞ ಇತಿ ಪ್ರಶ್ನಸ್ತ್ವಹಮೇವೇತ್ಯುಕ್ತತ್ವಾತ್ತಲ್ಲಕ್ಷಣೋಕ್ತ್ಯೈವ ಪರಿಹೃತಃ ॥ ೩ ॥ ॥ ೧,೨,೩,೪ ॥

ಅ ॥ (೧) ಸಾಧಿಯಜ್ಞಂ ಎಂದು ಹೇಳಿದ್ದರಿಂದ ಪ್ರಾಪ್ತವಾದ ಭೇದವು ಇಲ್ಲವೆಂದು ತಿಳಿಸುವುದಕ್ಕಾಗಿ ಅಧಿಯಜ್ಞಃ ಅಹಮೇವ ಎಂದು ಹೇಳಿದ್ದು. (ಅಂದರೆ ಬ್ರಹ್ಮ ಅಧಿಯಜ್ಞರು ಇಬ್ಬರೂ ಪರಬ್ರಹ್ಮರಾದಾಗ್ಯೂ ಬ್ರಹ್ಮ ಅಹಮೇವ ಎಂದು ಹೇಳದೆ ಅಧಿಯಜ್ಞಃ ಅಹಮೇವ ಎಂದು ಹೇಳಿದ್ದು ಕೂಡುತ್ತದೆ. ಸಾಧಿಯಜ್ಞಂ ಮಾಂ ಅಧಿಯಜ್ಞನಿಂದ ಕೂಡಿದ ನನ್ನನ್ನು ಎಂದು ಶ್ರೀಕೃಷ್ಣನು ಹೇಳಿದ್ದರಿಂದ ಅಧಿಯಜ್ಞನು ಶ್ರೀಕೃಷ್ಣನಿಂದ ಬೇರೆ ಎಂದು ಬರುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಅಹಮೇವ ಅಧಿಯಜ್ಞನು ನಾನೇ ಎಂದು ಹೇಳಿದ್ದು.) (೨) (ಪರಮಾತ್ಮನೇ ಅಧಿಯಜ್ಞನೆಂದಾದರೆ ಸಾಧಿಯಜ್ಞಂ=ಅಧಿಯಜ್ಞನಿಂದ ಕೂಡಿದ, ಶ್ರೀಕೃಷ್ಣನನ್ನು ಎಂಬುದು ಹೇಗೆ ಕೂಡುತ್ತದೆ? ಎಂದರೆ-) ಶ್ರೀಪರಮಾತ್ಮನೇ ಸಮಸ್ತ ಪ್ರಾಣಿಗಳ ದೇಹಗಳಲ್ಲಿರತಕ್ಕ ರೂಪಾಂತರದಿಂದ ಕೂಡಿರುವುದರಿಂದ ಅಧಿಯಜ್ಞನಿಂದ ಸಹಿತತ್ವವು ಕೂಡುತ್ತದೆ. (ಅಂದರೆ ಪರಮಾತ್ಮನೇ ಅಧಿಯಜ್ಞನಾದಾಗ್ಯೂ. ಅಧಿಯಜ್ಞನು ಸಮಸ್ತ ಪ್ರಾಣಿಗಳ ದೇಹದಲ್ಲಿರತಕ್ಕ ರೂಪಾಂತರವಾಗುವುದರಿಂದ ಪರಮಾತ್ಮನು ಅಧಿಯಜ್ಞನಿಂದ ಕೂಡಿದ್ದಾನೆಂಬುವುದು ಯುಕ್ತವಾಗುತ್ತದೆ.) (೩) (ಸ್ಮೃತಿಯಿಂದಲೇ ಅಕ್ಷರಂ ಬ್ರಹ್ಮ ಪರಮಂ ಇತ್ಯಾದಿ ೩ ೪. ಶ್ಲೋಕಗಳ ಅರ್ಥವನ್ನು ಹೇಳುತ್ತಾರೆ—) ಪ್ರಾಣಿಗಳ ದೇಹದಲ್ಲಿರತಕ್ಕ ಶ್ರೀವಿಷ್ಣುವು ಅಧಿಯಜ್ಞನೆನಿಸುತ್ತಾನೆ ಶ್ರೀಪರಮಾತ್ಮನೇ ಸರ್ವ ಜಗತ್ತಿನಲ್ಲಿ ವ್ಯಾಪ್ತವಾದ ರೂಪದಿಂದ ಬ್ರಹ್ಮ ಎನಿಸಿಕೊಳ್ಳುತ್ತಾನೆ ಆವಾವ ಸರ್ವ ಸಜ್ಜನರಿಂದ ಹೆಚ್ಚು ಹೋಮಿಸಲ್ಪಡುವುದರಿಂದ ಅಧಿಯಜ್ಞಃ ಎನಿಸಿಕೊಳ್ಳುತ್ತಾನೆ ಸರ್ವಗುಣ ಪರಿಪೂರ್ಣನಾದುದರಿಂದ ಬ್ರಹ್ಮ ಎನಿಸಿಕೊಳ್ಳುತ್ತಾನೆ. ಪರಮಾತ್ಮನಲ್ಲಿರತಕ್ಕ ಸರ್ವ ಸ್ವಾತಂತ್ರ್ಯಾದಿರೂಪವಾದ ಸ್ವಭಾವವು ಅಧಿಕವಾಗಿರುವ ಕಾರಣ ಅಧ್ಯಾತ್ಮವೆನಿಸುತ್ತದೆ ಜಡಪದಾರ್ಥಗಳಿಂದ ಕೂಡಿರುವ ಮನುಷ್ಯರನ್ನು ಸೃಷ್ಟಿಮಾಡುವ ಶ್ರೀಪರಮಾತ್ಮನ ಸಂಬಂಧಿಯಾದ ಸೃಷ್ಟಿರೂಪ ವ್ಯಾಪಾರವು ಕರ್ಮಎನಿಸುತ್ತದೆ ಪೃಥಿವೀ ಮೊದಲಾದ ಪಂಚಭೂತಗಳಿಂದ ಜೀವರು ಶ್ರೇಷ್ಠರಾಗಿರುವುದರಿಂದ ಅಧಿಭೂತರೆನಿಸುತ್ತಾರೆ. ಲಕ್ಷ್ಮೀದೇವಿಗಿಂತ ವಿಷ್ಣ್ವಾಖ್ಯದೇವತೆಯೇ ಶ್ರೇಷ್ಠವಾಗಿರುವ ಕಾರಣ ಆ ಲಕ್ಷ್ಮೀದೇವಿಯು ಪುರುಷಾಖ್ಯಾ, ಅಧಿದೈವಾ ಎನಿಸಿಕೊಳ್ಳುತ್ತಾಳೆ. ಹೀಗೆ ಈ ಪ್ರಮೇಯವನ್ನು ಮನುಷ್ಯರು ತಿಳಿಯಬೇಕು, ಎಂದು ತತ್ವವಿವೇಕವೆಂಬುವ ಗ್ರಂಥದಲ್ಲಿದೆ. (೪) (ಅಧಿಯಜ್ಞಃ ಕಥಂ ಕೋಽತ್ರ ಎಂಬುವಲ್ಲಿ ಅಧಿಯಜ್ಞಃ ಕಥಂ ಅಧಿಯಜ್ಞನು ಎಂತಹ ರೂಪವುಳ್ಳವನೆಂಬುವ ಪ್ರಶ್ನೆಯು ಏಕೆ ಪರಿಹೃತವಾಗಲಿಲ್ಲವೆಂದರೆ) ಅಧಿಯಜ್ಞನು ಎಂತಹ ರೂಪವುಳ್ಳವನೆಂಬುವ ಪ್ರಶ್ನೆಯು ಅಹಮೇವ ಎಂದು ಹೇಳಿ ಕವಿಂ ಪುರಾಣಂ ಎಂಬುವಲ್ಲಿ ಶ್ರೀಪರಮಾತ್ಮನಿಗೆ ಲಕ್ಷಣವನ್ನು ಹೇಳಿದ್ದರಿಂದಲೇ ಪರಿಹರಿಸಲ್ಪಟ್ಟಿದೆ. ॥ ೩ ॥ ॥ ೧, ೨, ೩, ೪ ॥

ಗೀ ॥ ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಲೇವರಂ ।
ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥ ೫ ॥

ಅ ॥ ಯಃ=ಯಾವಾತನು, ಅಂತಕಾಲೇ ಚ=ಮರಣಕಾಲದಲ್ಲಿಯೂ ಕೂಡ, ಮಾಮೇವ=ನನ್ನನ್ನೇ, (ಶ್ರೀಕೃಷ್ಣನನ್ನೇ) ಸ್ಮರನ್=ಸ್ಮರಿಸುವವನಾಗಿ, ಕಲೇವರಂ=ದೇಹವನ್ನು, ತ್ಯಕ್ತ್ವಾ=ಬಿಟ್ಟು, ಪ್ರಯಾತಿ=ಹೊರಟುಹೋಗುತ್ತಾನೋ, ಸಃ=ಆತನು. ಮದ್ಭಾವಂ=ನನ್ನಲ್ಲಿ ನಿರ್ದುಃಖ ನಿರತಿಶಯ ಆನಂದಾನುಭವರೂಪವಾದ ಸ್ಥಿತಿಯನ್ನು, (ಅಂದರೆ ಮೋಕ್ಷವನ್ನು) ಯಾತಿ=ಹೊಂದುತ್ತಾನೆ. ಅತ್ರ=ಈ ವಿಷಯದಲ್ಲಿ, ಸಂಶಯಃ=ಸಂದೇಹವು, ನಾಸ್ತಿ=ಇಲ್ಲ.

ವಿ ॥ ನಿರ್ದುಃಖ ನಿರತಿಶಯಾನಂದಾಭಿವ್ಯಕ್ತಿರೂಪವಾದ ಮೋಕ್ಷವನ್ನು ಹೊಂದುವುದಕ್ಕಾಗಿ ಮರಣಕಾಲದಲ್ಲಿ ನನ್ನನ್ನು (ಶ್ರೀಕೃಷ್ಣನನ್ನು) ಸ್ಮರಿಸುತ್ತಾ ಇರಬೇಕು. ॥ ೫ ॥

ಟೀ—ಮದ್ಭಾವಂ ಎಂಬುವುದಕ್ಕೆ ನನ್ನ ಸ್ವರೂಪವನ್ನು ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

**ಭಾ ॥ (೧) ಮದ್ಭಾವಂ ಮಯಿ ಸತ್ತಾಂ । ನಿರ್ದುಃಖನಿರತಿಶಯಾನಂದಾತ್ಮಿಕಾಂ ॥ (೨) ತಚ್ಚೋಕ್ತಂ । ಮುಕ್ತಾನಾಂ ಚ ಗತಿರ್ಬ್ರಹ್ಮನ್ ಕ್ಷೇತ್ರಜ್ಞ ಇತಿ ಕಲ್ಪಿತ ಇತಿ ಮೋಕ್ಷಧರ್ಮೇ ॥ ೫ ॥**

ಅ ॥ (೧) ಮದ್ಭಾವಂ=ನನ್ನಲ್ಲಿ ನಿರ್ದುಃಖ ನಿರತಿಶಯಾನಂದರೂಪವಾದ ಸ್ಥಿತಿಯನ್ನು. (೨) ಈ ವಿಷಯವು ಪ್ರಮಾಣದಲ್ಲಿ ಉಕ್ತವಾಗಿದೆ. ಎಲೋ ಬ್ರಹ್ಮನೇ ಮುಕ್ತರಿಗೆ ಶ್ರೀಪರಮಾತ್ಮನೇ ಆಶ್ರಯನೆಂದು ಸಮರ್ಥಿಸಲ್ಪಟ್ಟಿದೆ, ಎಂದು ಮೋಕ್ಷಧರ್ಮದಲ್ಲಿದೆ. ॥ ೫ ॥

**ತಾ ॥ (೧) ಮದ್ಭಾವಂ ಮಯಿ ಭಾವಂ ॥ (೨) ಸದಾ ತದ್ಭಾವಭಾವಿತಾನಾಮೇವ ಸ್ಮರಂಸ್ತ್ಯಜತೀತಿ ಕೇವಲಂ ತತ್ಕಾಲಸ್ಮರಣಂ ಭವತಿ ॥ (೩) ನ ಚೇತ್ಸ್ಮರತೋಽಪಿ ಸಮಾಧಿಸ್ಥಸ್ಖಲನವತ್ಪೂರ್ವಕರ್ಮಾನುಸಾರಿಸ್ಮೃತ್ಯಾ ತತ್ಪ್ರಾಪ್ತಿರೇವ ಭವತಿ ॥ (೪) ಅಪರೋಕ್ಷಜ್ಞಾನಿನಾಂ ಪ್ರಾರಬ್ಧಕರ್ಮಾವಸಾನೇ ಸ್ಮರಂಸ್ತ್ಯಜತೀತಿ ಭವತ್ಯೇವ ॥ ೧ ॥**

ಅ ॥ (೧) ಮದ್ಭಾವಂ=ವೈಕುಂಠಾದಿ ಸ್ಥಾನವಿಶೇಷಗಳಲ್ಲಿ ನನ್ನ ಆಶ್ರಯದಿಂದಲೇ ಇರೋಣವನ್ನು (ಮೋಕ್ಷವನ್ನು) (ಪರಕೀಯರು ಹೇಳುವಂತೆ ಐಕ್ಯವೆಂಬುವ ಅರ್ಥವನ್ನು ಇಟ್ಟುಕೊಂಡರೆ ಅಂತ್ಯಕಾಲದಲ್ಲಿ ಯಾವ ಪದಾರ್ಥವನ್ನು ಸ್ಮರಿಸುತ್ತಾರೋ, ಆಯಾವ ಪದಾರ್ಥವನ್ನು ಹೊಂದುತ್ತಾರೆಂದು ಹೇಳುವ ತಂ ತಮೇವೇತಿ ಎಂಬುವ ವಾಕ್ಯದಿಂದ ವಿರೋಧವು) (ಅಂತ್ಯಕಾಲದಲ್ಲಿ ಶ್ರೀಪರಮಾತ್ಮನ ಸ್ಮರಣದಿಂದಲೇ ಮೋಕ್ಷವು ಸಿಗುವುದರಿಂದ ಸದಾ ಶ್ರೀಪರಮಾತ್ಮನಲ್ಲಿ ಮನಸ್ಸನ್ನು ಇಡಬೇಕೆಂಬುವದು ಏತಕ್ಕೆಂದರೆ—) ಶ್ರೀಪರಮಾತ್ಮನನ್ನು ಸ್ಮರಿಸಿಕೊಂಡು ಶರೀರವನ್ನು ಬಿಡುತ್ತಾನೆಂದು ಹೇಳಿದ ಸಾಕ್ಷಾತ್ ಅಂತ್ಯಕಾಲ ಸ್ಮರಣವು ಸರ್ವದಾ ಶ್ರೀಪರಮಾತ್ಮನಲ್ಲಿ ಮನಸ್ಸನ್ನು ಇಟ್ಟು ಧ್ಯಾನಿಸುವವರಿಗೇನೇ ಉಂಟಾಗುತ್ತದೆ. (ಸರ್ವದಾ ಧ್ಯಾನಿಸಿಕೊಂಡು ಇಲ್ಲದವರಿಗೆ ಅಂತ್ಯಕಾಲದಲ್ಲಿ ಶ್ರೀಹರಿಯ ಸ್ಮರಣೆಯುಂಟಾಗಲಾರದು. ಏವಂಚ ಮೋಕ್ಷಪ್ರಾಪ್ತಿಗೆ ಕಾರಣವಾದ ಅಂತ್ಯಕಾಲ ಸ್ಮರಣಕ್ಕಾಗಿಯೇ ಸರ್ವದಾ ಶ್ರೀಪರಮಾತ್ಮನಲ್ಲಿ ಮನಸ್ಸನ್ನು ಇಡಬೇಕೆಂದು ಹೇಳಿದ್ದು) (೩) (ಹಾಗಾದರೆ ಅಂತ್ಯಕಾಲದಲ್ಲಿಯೇ ಮಹಾಪ್ರಯತ್ನದಿಂದ ಶ್ರೀಪರಮಾತ್ಮನ ಸ್ಮರಣೆಯನ್ನು ಮಾಡಲು ಶಕ್ಯವಾಗುವುದರಿಂದ ಸರ್ವದಾ ಶ್ರೀಪರಮಾತ್ಮನಲ್ಲಿ ಮನಸ್ಸನ್ನು ಇಡಬೇಕೆಂಬುವುದು ಏತಕ್ಕೆಂದರೆ—) ಸರ್ವದಾ ಶ್ರೀಪರಮಾತ್ಮನಲ್ಲಿ ಮನಸ್ಸನ್ನು

ಇತದಿದ್ದರೆ ಮಹಾಪ್ರಯತ್ನದಿಂದ ಧ್ಯಾನಿಸುವವನಿಗೂ ಕೂಡ ಪ್ರಾರಬ್ಧಕರ್ಮವಶದಿಂದ ಧ್ಯಾನವು ಕೆಟ್ಟು ಹೋಗುವಂತೆ ಮಹಾಪ್ರಯತ್ನದಿಂದ ಸ್ಮರಣೆಮಾಡುವವನಿಗೂ ಪ್ರಾರಬ್ಧಕರ್ಮವಶದಿಂದ ಬೇರೆ ವಿಷಯ ದಲ್ಲಿಯೇ ಸ್ಮರಣೆಯು ಬಂದು ಅವುಗಳ ಪ್ರಾಪ್ತಿಯೇ ಆಗುತ್ತದೆ. (ಅಂತ್ಯಕಾಲದಲ್ಲಿ ಶ್ರೀಪರಮಾತ್ಮನ ಸ್ಮರಣೆಯೇ ಬರುವುದಕ್ಕಾಗಿ ಸದಾ ಶ್ರೀಪರಮಾತ್ಮನಲ್ಲಿಯೇ ಮನಸ್ಸನ್ನು ಇಡಬೇಕು.) (೪) (ಪ್ರಾರಬ್ಧ ಕರ್ಮಾನುಸಾರವಾಗಿ ಅಂತ್ಯಕಾಲದಲ್ಲಿ ಪರಬ್ರಹ್ಮನ ಸ್ಮರಣೆಯು ಬಾರದೆ ಹೋದರೆ ಜ್ಞಾನಿಗಳಿಗೂ ಪ್ರಾರಬ್ಧಕರ್ಮವು ಇದ್ದುದರಿಂದ ಅಂತ್ಯಕಾಲದಲ್ಲಿ ಪರಬ್ರಹ್ಮನ ಸ್ಮರಣೆಯು ಬಾರದಿರುವುದರಿಂದ ಮೋಕ್ಷವು ಸಿಗದೆ ಹೋಗುವುದು ಎಂದರೆ—) ಅಪರೋಕ್ಷಜ್ಞಾನಿಗಳಿಗೆ ಪ್ರಾರಬ್ಧಕರ್ಮವು ಅವಸಾನ ವಾಗೋಣ ಸ್ಮರನ್ ತ್ಯಜತಿ ಎಂದು ಹೇಳಿದ ಸಾಕ್ಷಾತ್ ಅಂತ್ಯಕಾಲಸ್ಮರಣವು ನಿಶ್ಚಯವಾಗಿಯೂ ಬರುತ್ತದೆ. ಅದಕಾರಣ ಮೋಕ್ಷವು ಲಭಿಸುವುದು. (ಅಂದರೆ ಅಪರೋಕ್ಷಜ್ಞಾನಿಗೆ ಜ್ಞಾನಸಾಮರ್ಥ್ಯ ದಿಂದ ಅಪ್ರಾರಬ್ಧವಾದ ಪೂರ್ವಕರ್ಮಕ್ಕೆ ನಾಶವು. ಉತ್ತರಕರ್ಮಕ್ಕೆ ಸಂಬಂಧವಿಲ್ಲವೆಂದಾಗುವುದು. ಉಳಿದ ಪ್ರಾರಬ್ಧಕರ್ಮಗಳು ಅಲ್ಪಗಳಾಗಿರುವುದರಿಂದ ಅವುಗಳನ್ನು ಭೋಗಿಸಿ ಅವುಗಳಿಗೆ ಅವಸಾನವು ಬರುವುದು.) ॥ ೧ ॥

ಪೀ – ಹೀಗೆ ಅರ್ಥ ಹೇಳಲಿಕ್ಕೆ ಶ್ರೀಕೃಷ್ಣನ ವಾಕ್ಯಸಮ್ಮತಿಯಿದೆ ಎನ್ನುತ್ತಾರೆ—

ಟಾ ॥ (೧) ಪ್ರಯಾಣಕಾಲೇಽಪಿ ಚ ಮಾಂ ತೇ ವಿದುರಿತ್ಯುಕ್ತತ್ವಾತ್ ॥ (೨) ಯುಕ್ತಚೇತಸ ಇತಿ ವಿಶೇಷಣಾನ್ನಿತ್ಯಂ ಸ್ಮರತಾಮೇವಾಪರೋಕ್ಷಜ್ಞಾನಂ ಜಾಯತೇ ॥ (೩) ಭಕ್ತ್ಯಾ ಜ್ಞಾನಾನ್ನಿಷಿದ್ಧಾನಾಂ ತ್ಯಾಗಾನ್ನಿತ್ಯಂ (ತ್ಯ)ಹರಿಸ್ಮೃತೇಃ । ಅರಾಗಾದ್ವಿಹಿತಾತ್ಯಾಗಾದಿತ್ಯೇತೈರೇವ ಸಂಯುತೈಃ । ಅಪರೋಕ್ಷದರ್ಶನಂ ವಿಷ್ಣೋರ್ಜಾಯತೇ ನಾನ್ಯಥಾ ಕ್ವಚಿದಿತಿ ಸತ್ತತ್ತ್ವೇ ॥ ೨ ॥ ॥ ೫ ॥

ಅ ॥ (೧) ಮರಣಕಾಲದಲ್ಲಿಯೂ ಅವರು ನನ್ನನ್ನು ತಿಳಿಯುತ್ತಾರೆ ಎಂದು ಹೇಳಿರುತ್ತಾರೆ. (೨) (ಹೀಗಾದರೆ ಅಂತ್ಯಕಾಲದ ಸ್ಮರಣೆಗೆ ಪ್ರಾರಬ್ಧಕರ್ಮಾವಸಾನವೇ ಕಾರಣವು. ಪ್ರಾರಬ್ಧಕರ್ಮಾವಸಾನಕ್ಕೆ ಅಪರೋಕ್ಷಜ್ಞಾನವು ಕಾರಣವು. ತಥಾಚ ಸದಾ ಅವನಲ್ಲಿ ಮನಸ್ಸನ್ನು ಇಡಬೇಕೆಂಬುವುದು ಏತಕ್ಕೆ ಎಂದರೆ –) ಯುಕ್ತಚೇತಸಃ ಎಂದು ವಿಶೇಷಣ ಕೊಟ್ಟ ಪ್ರಯುಕ್ತ ನಿತ್ಯದಲ್ಲಿಯೂ ಸ್ಮರಣ ಮಾಡುವವರಿಗೇನೇ ಅಪರೋಕ್ಷಜ್ಞಾನ ಉಂಟಾಗುತ್ತದೆ (ಅಂದರೆ ಸಾಕ್ಷಾತ್ ಅಂತ್ಯಕಾಲ ಸ್ಮರಣೆಗೆ ಪ್ರಾರಬ್ಧಕರ್ಮಾವಸಾನವೇ ಕಾರಣವು ಅದಕ್ಕೆ ಕಾರಣವಾಗ ಅಪರೋಕ್ಷಜ್ಞಾನವು ಬೇಕೆಂದರೂ ಸತ್ಯವೇ. ಆದರೂ ಸದಾ ಶ್ರೀಹರಿಯಲ್ಲಿ ಮನಸ್ಸನ್ನು ಇಟ್ಟು ಧ್ಯಾನಿಸುವುದು ಅಪರೋಕ್ಷಜ್ಞಾನಕ್ಕೆ ಸಾಧನ ವಾಗಿರುವುದರಿಂದ ಅಂತ್ಯಕಾಲದಲ್ಲಿ ಶ್ರೀಹರಿಯ ಸ್ಮರಣೆಗೂ ಕಾರಣವಾಗುವುದು.) (೩) (ನಿತ್ಯದಲ್ಲಿಯೂ ಹರಿಸ್ಮರಣೆಯು ಭಕ್ತ್ಯಾದಿಗಳಿಂದ ಯುಕ್ತವಾದರೇನೇ ಅಪರೋಕ್ಷಜ್ಞಾನಕ್ಕೆ ಸಾಧನವಾಗುತ್ತದೆ. ಭಕ್ತ್ಯಾದಿಗಳು ಇಲ್ಲವಾದರೆ ಸಾಧನವಾಗಲಾರದೆನ್ನುತ್ತಾರೆ-) ಭಕ್ತಿಯಿಂದಲೂ ಜ್ಞಾನದಿಂದಲೂ ನಿಷಿದ್ಧಪದಾರ್ಥ ಗಳನ್ನು ಬಿಡೋಣವರಿಂದಲೂ ನಿತ್ಯದಲ್ಲಿಯೂ ಶ್ರೀಹರಿಯ ಸ್ಮರಣೆಯಿಂದಲೂ ವಿಷಯೇಚ್ಛೆಯು ಇಲ್ಲದಿರು ವುದರಿಂದಲೂ ಶಾಸ್ತ್ರದಲ್ಲಿ ವಿಹಿತಗಳಾದ ನಿತ್ಯನೈಮಿತ್ತಿಕ ಕರ್ಮಗಳನ್ನು ಬಿಡದಿರೋಣದರಿಂದಲೂ ಇವುಗಳೆಲ್ಲ ಒಟ್ಟಿಗೆ ಕೂಡಿದರೇನೇ ಶ್ರೀಪರಮಾತ್ಮನ ಅಪರೋಕ್ಷಜ್ಞಾನವು ಉಂಟಾಗುತ್ತದೆ. ಇಲ್ಲವಾದರೆ ಸರ್ವಥಾ ಅಪರೋಕ್ಷಜ್ಞಾನವು ಹುಟ್ಟಲಾರದು, ಎಂದು ಸತ್ತತ್ತ್ವನೆಂಬುವ ಗ್ರಂಥದಲ್ಲಿ ಹೇಳಿದೆ.॥೨॥ ॥ ೫ ॥

**ಗೀ ॥ ಯಂ ಯಂ ವಾಪಿ ಸ್ಮರನ್ಭಾವಂ ತ್ಯಜತ್ಯಂತೇ ಕಲೇವರಂ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ ೬ ॥**

ಅ ॥ ವಾಪಿ=ಅಥವಾ, ಕೌಂತೇಯ=ಅರ್ಜುನನೇ. ಸದಾ=ನಿರಂತರದಲ್ಲಿಯೂ, ತದ್ಭಾವಭಾವಿತಃ= ಆ ಶ್ರೀಪರಮಾತ್ಮನಲ್ಲಿಟ್ಟ ಮನಸ್ಸಿನಿಂದ, ಭಾವಿತಃ=ನಿರಂತರದಲ್ಲಿಯೂ ಶ್ರೀಹರಿಯ ಧ್ಯಾನದಿಂದುಂಟಾದ ಭಗವದ್ವಿಷಯಕವಾದ ಸ್ಮರಣೆಯನ್ನುಂಟುಮಾಡುವ ಸಂಸ್ಕಾರವುಳ್ಳ, ಮನುಷ್ಯನು, ಯಂ ಯಮಪಿ ಭಾವಂ=ಯಾವ ಯಾವ ಪದಾರ್ಥವನ್ನು, ಅಂತೇ=ಮರಣಕಾಲದಲ್ಲಿ, ಸ್ಮರನ್=ಸ್ಮರಣೆ ಮಾಡುವವನಾಗಿ, ಕಲೇವರಂ=ದೇಹವನ್ನು, ತ್ಯಜತಿ=ಬಿಡುತ್ತಾನೋ, ತಂ ತಮೇವ=ಆಯಾ ಪದಾರ್ಥವನ್ನು, ಏತಿ=ಹೊಂದುತ್ತಾನೆ.

ವಿ ॥ ಶ್ರೀ ಪರಮಾತ್ಮನಲ್ಲಿ ಮನಸ್ಸನ್ನು ಇಟ್ಟು ನಿರಂತರದಲ್ಲಿಯೂ ಶ್ರೀಪರಮಾತ್ಮನ ಸ್ಮರಣವು ಅಪರೋಕ್ಷಜ್ಞಾನವನ್ನು ಹುಟ್ಟಿಸಿ ಭೋಗದಿಂದ ಪ್ರಾರಬ್ಧಕರ್ಮವು ಅವಸಾನವಾದ ಮೇಲೆ ಅಂತ್ಯಕಾಲದಲ್ಲಿ ಸ್ಮರಣೆಗೆ ಕಾರಣವಾಗುತ್ತದೆ. ಸಾಕ್ಷಾತ್ಕಾರಣವಲ್ಲವೆಂದು ತಿಳಿಯಬೇಕು. ॥ ೬ ॥

**ಗೀ ॥ ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋಬುದ್ಧಿರ್ಮಾಮೇವೈಷ್ಯಸ್ಯಸಂಶಯಂ ॥ ೭ ॥**

ಅ ॥ ತಸ್ಮಾತ್=ಆದಕಾರಣ, ಸರ್ವೇಷು ಕಾಲೇಷು=ಎಲ್ಲಾ ಕಾಲಗಳಲ್ಲಿ, ಮಾಂ=ನನ್ನನ್ನೇ. ಅನುಸ್ಮರ=ಸ್ಮರಣೆಮಾಡು. ತಸ್ಮಾತ್=ಸರ್ವದಾ ನನ್ನ ಸ್ಮರಣೆಯು ಮೋಕ್ಷವನ್ನು ಹೊಂದಲಿಕ್ಕೆ ಕಾರಣವಾದ ಅಂತ್ಯಕಾಲದಲ್ಲಿ ಬರತಕ್ಕ ನನ್ನ ಸ್ಮರಣೆಗೆ ಕಾರಣವಾಗಿರುವುದರಿಂದ, ಮಯಿ=ನನ್ನಲ್ಲಿ, ಅರ್ಪಿತಮನೋಬುದ್ಧಿಃ=ಮನಸ್ಸನ್ನೂ ಬುದ್ಧಿಯನ್ನೂ ಸಂಪೂರ್ಣ ಇಟ್ಟವನಾಗಿ, ಯುಧ್ಯ ಚ=ಯುದ್ಧಮಾಡು. ಅಸಂಶಯಂ=ನಿಸ್ಸಂಶಯವಾಗಿ, ಮಾಮೇವ=ನನ್ನನ್ನೇ, ಏಷ್ಯಸಿ=ಹೊಂದುವಿ ॥ ೭ ॥

**ಭಾ ॥ (೧) ಸ್ಮರನ್ಪುರುಷಸ್ತ್ಯಜತೀತಿ ಭಿನ್ನಕಾಲೀನತ್ವೇಽಪ್ಯವಿರೋಧ ಇತಿ ಮಂದಮತೇಃ ಶಂಕಾ ಮಾ ಭೂದಿತ್ಯಂತ ಇತಿ ವಿಶೇಷಣಂ । ಸುಮತೇರ್ನೈವ ಶಂಕಾವಕಾಶಃ । ಸ್ಮರಂಸ್ತ್ಯಜತೀತ್ಯೇಕಕಾಲೀನತ್ವಪ್ರತೀತೇಃ ॥ (೨) ದುರ್ಮತೇರ್ದುರ್ಜ್ಞಾನ್ನ ಸ್ಮರಂಸ್ತ್ಯಜತೀತಿ ಭವಿಷ್ಯತಿ ಶಂಕಾ ॥ (೩) ತ್ಯಜನ್ದೇಹಂ ನ ಕಶ್ಚಿತ್ತು ಮೋಹಮಾಪ್ನೋತ್ಯಸಂಶಯಮಿತಿ ಸ್ಕಾಂದೇ ॥ (೪) ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತೀತಿ ಹಿ ಶ್ರುತಿಃ ॥ (೫) ಸದಾ ತದ್ಭಾವಭಾವಿತ ಇತ್ಯಂತಕಾಲೇ ಸ್ಮರಣೋಪಾಯಮಾಹ । ಭಾವೋಽಂತರ್ಗತಂ ಮನಃ । ತಥಾಽಭಿಧಾನಾತ್ । ಭಾವಿತತ್ವಮತಿವಾಸಿತತ್ವಂ । ಭಾವನಾ ತ್ವತಿವಾಸನೇತ್ಯಭಿಧಾನಾತ್ ॥**
**॥ ೬,೭ ॥**

ಅ ॥ (೧) ಸ್ಮರನ್ ತ್ಯಜತಿ ಎಂದು ಶ್ರೀಪರಮಾತ್ಮನನ್ನು ಸ್ಮರಣೆಮಾಡಿದವನಿಗೆ ದೇಹತ್ಯಾಗ ಹೇಳಿದ್ದು. ಶ್ರೀಪರಮಾತ್ಮನ ಸ್ಮರಣೆಯು ದೇಹತ್ಯಾಗಕಾಲದಿಂದ ಬೇರೆ ಕಾಲದಲ್ಲಿ (ಅಂದರೆ ಮೊದಲು ಯಾವಾಗಲಾದರೂ) ಇದ್ದರೂ ಸಾಕೆಂದು ಮಂದಮತಿಗೆ ಬರತಕ್ಕ ಶಂಕೆಯನ್ನು ಪರಿಹರಿಸುವುದಕ್ಕಾ

ದೇಹತ್ಯಾಗ ಕಾಲದಲ್ಲಿಯೇ ಶ್ರೀಹರಿಯ ಸ್ಮರಣೆಯು ಆವಶ್ಯಕವೆಂದು ತಿಳಿಸುವುದಕ್ಕಾಗಿ ಅಂತೇ ಎಂದು ಹರಿಸ್ಮರಣೆಗೆ ವಿಶೇಷಣವನ್ನು ಕೊಟ್ಟಿರುವರು. (ಅಂತೇ ಎಂಬುವುದರಿಂದ ಸ್ಮರಣ ಶರೀರತ್ಯಾಗಗಳು ಒಂದೇ ಕಾಲದಲ್ಲಿರತಕ್ಕುವುಗಳೆಂದು ಸಿದ್ಧಿಸುವುದು.) ಪ್ರಕೃತಿ ಪ್ರತ್ಯಯಾರ್ಥವನ್ನು ತಿಳಿದ ವಿಚಾರ ಶೀಲನಾದ ಪುರುಷನಿಗೆ ದೇಹತ್ಯಾಗದಿಂದ ಪೂರ್ವದಲ್ಲಿ ಯಾವಾಗಲಾದರೂ ಹರಿಸ್ಮರಣೆಯು ಇದ್ದರೆ ಸಾಕೆಂಬುವ ಶಂಕೆಯೇ ಬರುವುದಿಲ್ಲ. ಏಕೆಂದರೆ ಸ್ಮರನ್ ತ್ಯಜತಿ ಎಂದು ಸ್ಮರಣಕ್ಕೂ ದೇಹತ್ಯಾಗಕ್ಕೂ ಒಂದೇ ಕಾಲವು ಶಬ್ದಮರ್ಯಾದೆಯಿಂದಲೇ ತೋರುವುದರಿಂದ ಜ್ಞಾನಿಗೆ ಅಂತಹ ಶಂಕೆಗೆ ಅವಕಾಶವೇ ಇಲ್ಲ. (೨) (ದುರ್ಮತಿಯೂ ಕೂಡ ಶಬ್ದನ್ಯಾಯವನ್ನು ತಿಳಿದಿದ್ದರೆ ಅವನಿಗೂ ಹಿಂದೆ ಹೇಳಿದ ಶಂಕೆಯು ಹುಟ್ಟಲಾರದು. ಆದಕಾರಣ ಆತನನ್ನು ಕುರಿತು ಅಂತೇ ಎಂಬುವುದು ವ್ಯರ್ಥವೇ, ಎಂದರೆ—) ದುರ್ಮತಿಗೆ (ಶ್ರೀಹರಿಯ ಸ್ಮರಣೆಗೆ ಕಾರಣವಾದ ಸಂಸ್ಕಾರವನ್ನು ನಾಶಮಾಡುವ ಮಹಾದುಃಖವು ಮರಣಕಾಲದಲ್ಲಿ ಉಂಟಾಗುವುದರಿಂದ ಆ ಕಾಲದಲ್ಲಿ ಹರಿಯ ಸ್ಮರಣೆಯು ಬರಲಾರದು. ಆದಕಾರಣ ಶಂಕೆಯು ಬರುವುದು. ಆದಕಾರಣ ದುಃಖದೆಶೆಯಿಂದ ಸಂಸ್ಕಾರವು ಲೋಪವಾಗಿ ಸ್ಮರಿಸಿಕೊಂಡು ದೇಹವನ್ನು ಬಿಡುವುದಿಲ್ಲ. ಅಂದರೆ ದೇಹಾಭಿಮಾನವುಳ್ಳ ಅಜ್ಞಾನಿಗೆ ಮರಣಕಾಲದಲ್ಲಿ ದುಃಖ ಉಂಟಾಗಿ ಸ್ಮರಣವು ಬರುವುದಿಲ್ಲ.) (ದೇಹಾಭಿಮಾನವುಳ್ಳ ಅಜ್ಞಾನಿಯು ದೇಹತ್ಯಾಗವನ್ನು ಆತ್ಮತ್ಯಾಗವನ್ನೆಂಬಂತೆ ತಿಳಿದುಕೊಂಡುದರಿಂದ ಮರಣಕಾಲದಲ್ಲಿ ಆತನಿಗೆ ದುಃಖ ಉಂಟಾಗುತ್ತದೆ. ಜ್ಞಾನಿಯಾದರೂ ಸರ್ವದಾ ದೇಹವನ್ನು ಹೇಯವನ್ನಾಗಿಯೇ ತಿಳಿದ ಕಾರಣ ಸ್ವಲ್ಪವೂ ಆ ಕಾಲದಲ್ಲಿ ದುಃಖವುಂಟಾಗುವುದಿಲ್ಲ. ಜ್ಞಾನಿಯ ಉತ್ಕ್ರಮಣವು ಅಜ್ಞಾನಿಯ ಮರಣಕ್ಕಿಂತ ಅತ್ಯಂತ ವಿಲಕ್ಷಣವೆಂದು ಶಾಸ್ತ್ರದಿಂದ ತಿಳಿದ ಜ್ಞಾನಿಗೆ ಈ ಶಂಕೆಯು ಬರುವುದಿಲ್ಲ. ಜ್ಞಾನಿಯು ಮರಣಕಾಲದಲ್ಲಿ ಶ್ರೀಹರಿಯನ್ನು ಸ್ಮರಣೆಮಾಡಿ ಮೋಕ್ಷವನ್ನು ಹೊಂದುತ್ತಾನೆ. ಅಜ್ಞಾನಿಯು ಇತರರನ್ನು ಸ್ಮರಿಸಿ ಇತರರನ್ನು ಹೊಂದುತ್ತಾನೆ.) (೩) ಜ್ಞಾನಿಯಾಗಲೀ ಅಜ್ಞಾನಿಯಾಗಲೀ ಯಾವನೊಬ್ಬನೂ ದೇಹವನ್ನು ಬಿಡುವವನು ಮರಣಕಾಲದಲ್ಲಿ ಮೋಹವನ್ನು ಹೊಂದುವುದಿಲ್ಲ. ಸಂಶಯವಿಲ್ಲ. ಹೀಗೆ ಸ್ಕಾಂದದಲ್ಲಿ ಹೇಳಿದೆ. (೪) ಆ ಈ ಅಪರೋಕ್ಷ ಜ್ಞಾನಿಯ ಹೃದಯದ ಅಗ್ರಭಾಗವು ಪ್ರಕಾಶಿಸುತ್ತದೆ. ಆ ಪ್ರಕಾಶದಿಂದ ಈ ಜೀವನು ಶರೀರದಿಂದ ಹೊರಟುಹೋಗುತ್ತಾನೆ, ಎಂದು ಜ್ಞಾನಿಯ ಉತ್ಕ್ರಮಣಕ್ಕೆ ಅಜ್ಞರ ಮರಣಕ್ಕಿಂತ ವೈಲಕ್ಷಣ್ಯವನ್ನು ಹೇಳತಕ್ಕ ಶ್ರುತಿಯು (೫) ಸದಾ ತದ್ಭಾವಭಾವಿತಃ ಎಂಬುವುದರಿಂದ ಅಂತ್ಯಕಾಲದ ಸ್ಮರಣೋಪಾಯವನ್ನು ಹೇಳುತ್ತಾರೆ. ಭಾವಃ=ಜೀವರ ಅಂತರ್ಗತವಾದ ಮನಸ್ಸು. ಹೀಗೆ ಶಬ್ದಶಕ್ತಿಗ್ರಾಹಕವಾದ ಪ್ರಮಾಣವಿದೆ. ಭಾವಿತತ್ವಂ=ಅತ್ಯಂತವಾಗಿ ಸಂಸ್ಕಾರದಿಂದ ಕೂಡಿರುವಿಕೆಯು. ಭಾವನಾ= ಅತ್ಯಂತ ಸಂಸ್ಕಾರವು, ಎಂದು ಅಭಿಧಾನವು. ॥ ೬, ೭ ॥

ಗೀ ॥ ಅಭ್ಯಾಸಯೋಗಯುಕ್ತೇನ ಚೇತಸಾನನ್ಯಗಾಮಿನಾ ।
ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿಂತಯನ್ ॥ ೮ ॥

ಅ ॥ ಪಾರ್ಥ=ಅರ್ಜುನ, ಅಭ್ಯಾಸಯೋಗಯುಕ್ತೇನ=ಪುನಃಪುನಃ ಆವೃತ್ತಿರೂಪವಾದ ಉಪಾಯದಿಂದ ಕೂಡಿದ, ಅನನ್ಯಗಾಮಿನಾ=ಶ್ರೀಪರಮಾತ್ಮನನ್ನು ಬಿಟ್ಟು ಬೇರೆ ವಿಷಯಗಳ ಕಡೆಗೆ ಹೋಗದಿರುವ, ಚೇತಸಾ=ಮನಸ್ಸಿನಿಂದ, ದಿವ್ಯಂ=ಜಗತ್ಸೃಷ್ಟ್ಯಾದಿರೂಪ ಕ್ರೀಡಾದಿಗುಣಗಳಿಂದ ಕೂಡಿದ, ಪರಮಂ=ಸರ್ವೋತ್ತಮನಾದ, ಪುರುಷಂ=ಸಮಸ್ತ ಪ್ರಾಣಿಗಳ ಶರೀರಗಳಲ್ಲಿ ನಿಯಾಮಕನಾಗಿರುವ, ಅಥವಾ ಸರ್ವಗುಣಪರಿಪೂರ್ಣನಾದ ಶ್ರೀಕೃಷ್ಣನನ್ನು, ಅನುಚಿಂತಯನ್=ನಿರಂತರದಲ್ಲಿಯೂ ಧ್ಯಾನಮಾಡುವವನಾಗಿ, ಯಾತಿ=ಶ್ರೀಪರಮಾತ್ಮನನ್ನು (ಅಂದರೆ ಮೋಕ್ಷವನ್ನು) ಹೊಂದುತ್ತಾನೆ ॥ ೮ ॥

ಭಾ ॥ (೧) ಸದಾ ತದ್ಭಾವಭಾವಿತತ್ವಂ ಸ್ಪಷ್ಟಯತಿ । ಅಭ್ಯಾಸೇತಿ । ಅಭ್ಯಾಸ ಏವ ಯೋ-
ಗೋಽಭ್ಯಾಸಯೋಗಃ । ದಿವ್ಯಂ ಪುರುಷಂ ಪುರಿಶಯಂ ಪೂರ್ಣಂ ಚ ॥ (೨) ಸ ವಾ
ಅಯಂ ಪುರುಷಃ ಸರ್ವಾಸು ಪೂರ್ಷು ಪುರಿಶಯೋ ನೈನೇನ ಕಿಂ ಚ ನಾನಾವೃತಂ
ನೈನೇನ ಕಿಂ ಚ ನಾಸಂವೃತಮಿತಿ ಶ್ರುತೇಃ । ದಿವ್ಯಂ ಸೃಷ್ಟ್ಯಾದಿಕ್ರೀಡಾಯುಕ್ತಂ ।
ದಿವು ಕ್ರೀಡೇತಿ ಧಾತೋಃ ॥ ೮ ॥

ಅ ॥ (೧) ಸದಾ ಶ್ರೀಪರಮಾತ್ಮನಲ್ಲಿಯೇ ಮನಸ್ಸ ಇಟ್ಟು, ಧ್ಯಾನಿಸದೇಕೆಂಬುವುದನ್ನು ಅಭ್ಯಾಸ ಎಂಬುವ ಶ್ಲೋಕದಿಂದ ಸ್ಪಷ್ಟೀಕರಿಸುತ್ತಾರೆ. ಅಭ್ಯಾಸಯೋಗವೆಂದರೆ ಧ್ಯಾನಕ್ಕೆ ಪುನಃಪುನಃ ಆವರ್ತ ಪರೂಪವಾದ ಉಪಾಯವೆಂದರ್ಥವು. ದಿವ್ಯಂ=ಕ್ರೀಡಾದಿಗುಣವಿಶಿಷ್ಟನಾದ, ಪುರುಷಂ=ಸರ್ವರ ದೇಹಗಳಲ್ಲಿ ನಿಯಾಮಕನಾಗಿರುವ, ಅಥವಾ ಸರ್ವಗುಣಪರಿಪೂರ್ಣನಾದ, ಶ್ರೀಪರಮಾತ್ಮನನ್ನು. (೨) ಆ ಈ ಶ್ರೀಪರಮಾತ್ಮನು ಸರ್ವರ ಶರೀರಗಳಲ್ಲಿ ನಿಯಾಮಕನಾಗಿರುತ್ತಾನೆ. ಆದಕಾರಣ ಪುರುಷಃ ಎನಿಸುತ್ತಾನೆ ಈ ಶ್ರೀಪರಮಾತ್ಮನಿಂದ ಯಾವುದೊಂದೂ ಅಂತರ್ವ್ಯಾಪ್ತವಾಗದಿದ್ದುದು ಇಲ್ಲ. ಮತ್ತೆ ಇವನು ಎಲ್ಲಾ ವಸ್ತುಗಳ ಒಳಗೇನೇ ವ್ಯಾಪಿಸಿಕೊಂಡಿದ್ದಾನೆ. ಅಂದರೆ ಸರ್ವಾಂತರ್ಯಾಮಿಯು. ಮತ್ತು ಇವನಿಂದ ಯಾವುದೊಂದೂ ಹೊರಗೆ ವ್ಯಾಪಿಸಿಕೊಳ್ಳದೆ ಇದ್ದುದು ಇಲ್ಲ. ಎಲ್ಲವೂ ಶ್ರೀಹರಿಯಿಂದ ವ್ಯಾಪಿಸಿಕೊಂಡದ್ದೇ ಆಗಿದೆ. (ಅಂದರೆ ಪರಮಾತ್ಮನು ಎಲ್ಲಾ ವಸ್ತುಗಳ ಒಳಗೂ ಹೊರಗೂ ವ್ಯಾಪಿಸಿಕೊಂಡಿದ್ದಾನೆ.) ಎಂದು ಶ್ರುತಿಯು. ದಿವ್ಯಂ=ಜಗತ್ಸೃಷ್ಟ್ಯಾದಿರೂಪ ಕ್ರೀಡಾದಿಗುಣಗಳಿಂದ ಕೂಡಿದವನು. ದಿವ್ ಧಾತುವು ಕ್ರೀಡಾ ಎಂಬುವ ಅರ್ಥದಲ್ಲಿದೆ. ॥ ೮ ॥

ಗೀ ॥ ಕವಿಂ ಪುರಾಣಮನುಶಾಸಿತಾರ-
ಮಣೋರಣೀಯಾಂಸಮನುಸ್ಮರೇದ್ಯಃ ।
ಸರ್ವಸ್ಯ ಧಾತಾರಮಚಿಂತ್ಯರೂಪ-
ಮಾದಿತ್ಯವರ್ಣಂ ತಮಸಃ ಪರಸ್ತಾತ್ ॥ ೯ ॥

ಅ ॥ ಯಃ=ಯಾವಾತನು, ಕವಿಂ=ಸರ್ವಜ್ಞನಾದ, ಪುರಾಣಂ=ಅನಾದಿಯಾದ. ಅನುಶಾಸಿತಾರಂ=ಸರ್ವ ಜಗತ್ತಿಗೂ ಶಿಕ್ಷಕನಾದ, ಅಣೋಃ=ಸೂಕ್ಷ್ಮವಾದ ವಸ್ತುವಿಗಿಂತಲೂ, ಅಣೀಯಾಂಸಂ=ಅತ್ಯಂತ ಅಣುಪರಿಮಾಣವುಳ್ಳ. ಸರ್ವಸ್ಯ=ಚೇತನ ಅಚೇತನ ಎಲ್ಲಾ ವಸ್ತುಗಳಿಗೂ. ಧಾತಾರಂ=ಧಾರಕನೂ ರಕ್ಷಕನೂ ಆದ, ಅಚಿಂತ್ಯರೂಪಂ=ಸಂಪೂರ್ಣವಾಗಿ ಮನಸ್ಸಿಗೂ ತಿಳಿಯಲಶಕ್ಯ ರೂಪವುಳ್ಳ, ಆದಿತ್ಯವರ್ಣಂ=ಸೂರ್ಯನಂತೆ ಪ್ರಭೆಯುಳ್ಳ, ತಮಸಃ ಪರಸ್ತಾತ್=ಸತ್ವರಜಸ್ತಮೋಗುಣ ರೂಪವಾದ ಪ್ರಕೃತಿಯನ್ನೂ, ಮೃತ್ಯುವನ್ನೂ ಮೀರಿ ಇರುವ. (ಅಂದರೆ ಪ್ರಕೃತಿ ಮರಣಗಳ ಸಂಬಂಧವೂ ಇಲ್ಲದಿರುವ) ಶ್ರೀಪರಮಾತ್ಮನನ್ನು, ಅನುಸ್ಮರೇತ್=ಚೆನ್ನಾಗಿ ಸ್ಮರಿಸುತ್ತಾನೋ, (ಆತನು ಮುಕ್ತನಾಗುತ್ತಾನೆ.) ॥ ೯

ಭಾ ॥ (೧) ಧ್ಯೇಯಮಾಹ । ಕವಿಮಿತಿ । ಕವಿಂ ಸರ್ವಜ್ಞಂ । ಯಃ ಸರ್ವಜ್ಞ ಇತಿ ಶ್ರುತಿಃ ।
ತ್ವಂ ಕವಿಃ ಸರ್ವವೇದನಾದಿತಿ ಬ್ರಾಹ್ಮೇ ॥ (೨) ಧಾತಾರಂ ಧಾರಣಪೋಷಣಕ-
ರ್ತಾರಂ । ಡುಧಾಞ್ ಧಾರಣಪೋಷಣಯೋರಿತಿ ಧಾತೋಃ ॥ (೩) ಧಾತಾ ವಿ-
ಧಾತಾ ಪರಮೋತ ಸಂದೃಗಿತಿ ಶ್ರುತಿಃ ॥ (೪) ಬ್ರಹ್ಮಾ ಸ್ಥಾಣುರಿತ್ಯಾರಭ್ಯ ತಸ
ಪ್ರಸಾದಾದಿಚ್ಛಂತಿ ತದಾದಿಷ್ಟಫಲಾಂ ಗತಿಮಿತ್ಯಾದಿ ಚ ಮೋಕ್ಷಧರ್ಮೇ ॥ (೫) (।)

ತಮಸೋಽವ್ಯಕ್ತಾತ್ಪರತಃ ಸ್ಥಿತಂ । ತಮಸಃ ಪರಸ್ತಾದಿತಿ । (2) ಅವ್ಯಕ್ತಂ ವೈ ತಮಃ ಪರಸ್ತಾದ್ಧಿ ಸ ತತ ಇತಿ ಪಿಪ್ಪಲಾದಶಾಖಾಯಾಂ ।(3) ಮೃತ್ಯುರ್ವಾವ ತಮಃ ಮೃತ್ಯುರ್ವೈ ತಮೋ ಜ್ಯೋತಿರಮೃತಮಿತಿ ಶ್ರುತೇಃ ॥ ೯ ॥

ಅ ॥ (೧) ಧ್ಯೇಯವಾದ ಭಗವದ್ರೂಪವನ್ನು ಕವಿಂ ಎಂಬುವ ಶ್ಲೋಕದಿಂದ ವಿವರಿಸುತ್ತಾರೆ. ಕವಿಂ=ಸರ್ವಜ್ಞನನ್ನು, ಯಾವನು ಸರ್ವಜ್ಞನೋ, ಎಂಬುವ ಶ್ರುತಿಯಿಂದ ಶ್ರೀಹರಿಗೆ ಸರ್ವಜ್ಞತ್ವವು ಸಿದ್ಧವಾಗುತ್ತದೆ. ಸಮಸ್ತವನ್ನು ತಿಳಿದಿರುವುದರಿಂದ ನೀನು ಸರ್ವಜ್ಞನಾದುದರಿಂದ ಕವಿಃ ಎನಿಸಿಕೊಳ್ಳುತ್ತಿ, ಎಂದು ಬ್ರಾಹ್ಮಪುರಾಣದಲ್ಲಿದೆ. (೨) ಧಾಞ್ ಧಾತುವು ಧಾರಣ ಪೋಷಣಗಳೆಂಬುವ ಅರ್ಥಗಳಲ್ಲಿವೆ, ಎಂಬುವ ಧಾತುವ್ಯಾಖ್ಯಾನದಿಂದ ಧಾತಾರಂ=ಧಾರಣ ಪೋಷಣಗಳನ್ನು ಮಾಡುವವನನ್ನು. (೩) (ಶ್ರೀಪರಮಾತ್ಮನು ಸರ್ವಜಗದ್ಧಾರಕನೆಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಶ್ರೀಪರಮಾತ್ಮನು ಸರ್ವಜಗದ್ಧಾರಕನು, ಸರ್ವ ಜಗತ್ತಿನ ಸೃಷ್ಟಿಕರ್ತನು, ಮತ್ತು ಉತ್ತಮ ಜ್ಞಾನಸ್ವರೂಪನು, ಎಂದು ಶ್ರುತಿಯು. (೪) (ಸರ್ವ ಜಗದ್ಧಾರಕನು ಶ್ರೀಪರಮಾತ್ಮನೇ. ಬೇರೆಯವರು ಅಲ್ಲ ಎಂಬುವಲ್ಲಿ ಪ್ರಮಾಣ ಹೇಳುತ್ತಾರೆ–) ಚತುರ್ಮುಖ ಬ್ರಹ್ಮ, ರುದ್ರ ಎಂದಾರಂಭಿಸಿ ಅವರು ಆ ಶ್ರೀಪರಮಾತ್ಮನ ಅನುಗ್ರಹದಿಂದ ಶ್ರೀಪರಮಾತ್ಮನಿಂದ ಕೊಡಲ್ಪಟ್ಟ ಸುಖವುಳ್ಳ (ಅಂದರೆ ಕೇವಲ ಸುಖರೂಪವಾದ) ಮೋಕ್ಷರೂಪ ಗತಿಯನ್ನು ಇಚ್ಛಿಸುತ್ತಾರೆ, ಎಂದು ಮೋಕ್ಷಧರ್ಮದಲ್ಲಿ ಹೇಳಿದೆ. (೫) (1) ತಮಸಃ=ಜಡಪ್ರಕೃತಿಯ ದೆಸೆಯಿಂದ, ಪರತಃ ಸ್ಥಿತಂ=ಅತಿಕ್ರಮಿಸಿ ಇರತಕ್ಕವನು. (ಅಂದರೆ ಅಪ್ರಾಕೃತವಾದ ಶರೀರವುಳ್ಳವನು.) (2) ಪ್ರಕೃತಿಯನ್ನು ಮೀರಿದವನು. (ಜಡಪ್ರಕೃತಿಯ ಸಂಬಂಧವಿಲ್ಲದವನು.) ತಮಃ ಅಂದರೆ ಜಡಪ್ರಕೃತಿಯು. ಆ ಶ್ರೀಪರಮಾತ್ಮನು ಆ ಜಡಪ್ರಕೃತಿಯಿಂದ ಮೀರಿದವನು, ಎಂದು ಪಿಪ್ಪಲಾದ ಶಾಖೆಯಲ್ಲಿ ಹೇಳಿದೆ (3) ಮರಣವು ತಮಃ ಎನಿಸುತ್ತದೆ. ಪ್ರಕಾಶಸ್ವರೂಪನಾದ ಶ್ರೀಪರಬ್ರಹ್ಮನು (ಅಮೃತನು) ಮರಣರಹಿತನಾಗಿರುತ್ತಾನೆ. ॥ ೯ ॥

ತಾ ॥ ತಮಸಃ ಪರಸ್ತಾದಪ್ರಾಕೃತದೇಹಃ(ಹಂ) ॥ ೯ ॥

ಅ ॥ ತಮಸಃ ಪರಸ್ತಾತ್=ಅಪ್ರಾಕೃತ ದೇಹವುಳ್ಳವನು. ॥ ೯ ॥

ಗೀ ॥ ಪ್ರಯಾಣಕಾಲೇ ಮನಸಾಽಚಲೇನ
ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।
ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್
ಸ ತಂ ಪರಂ ಪುರುಷಮುಪೈತಿ ದಿವ್ಯಂ ॥ ೧೦ ॥

ಅ ॥ ಭಕ್ತ್ಯಾ ಯುಕ್ತಃ=ಯಾವನು ಭಕ್ತಿಯಿಂದ ಕೂಡಿದವನಾಗಿ, ಪ್ರಯಾಣಕಾಲೇ—ಮರಣಕಾಲದಲ್ಲಿ. ಯೋಗಬಲೇನ=ಯೋಗಸಾಮರ್ಥ್ಯದಿಂದ, ಭ್ರುವೋಃ=ಹುಬ್ಬುಗಳ, ಮಧ್ಯೇ-ಮಧ್ಯದಲ್ಲಿ, ಪ್ರಾಣಂ=ಪ್ರಾಣವಾಯುವನ್ನು, ಆವೇಶ್ಯ=ಪ್ರವೇಶಮಾಡಿಸಿ, ಅಚಲೇನ=ಶ್ರೀಪರಮಾತ್ಮನಿಂದ ಕದಲದಿರುವ, ಮನಸಾ=ಮನಸ್ಸಿನಿಂದ ಸಮ್ಯಕ್=ಚೆನ್ನಾಗಿ, ಅನುಸ್ಮರೇತ್=ಶ್ರೀಪರಮಾತ್ಮನನ್ನು ಸ್ಮರಿಸುವಾತನೋ, ಸಃ=ಆತನು, ದಿವ್ಯಂ=ಕ್ರೀಡಾದಿಗುಣವಿಶಿಷ್ಟನಾದ. ಪರಂ=ಸರ್ವೋತ್ತಮನಾದ ತಂ ಪುರುಷಂ=ಆ ಶ್ರೀಪರಮಾತ್ಮನನ್ನು, ಉಪೈತಿ=ಹೊಂದುತ್ತಾನೆ. ॥ ೧೦ ॥

ಭಾ ॥ (೧) ವಾಯುಜಯಾದಿಯೋಗಯುಕ್ತಾನಾಂ ಮೃತಿಕಾಲೇ ಕರ್ತವ್ಯಮಾಹ ವಿಶೇಷತಃ ಪ್ರಯಾಣಕಾಲ ಇತಿ ॥ (೨) ವಾಯುಜಯಾದಿರಹಿತಾನಾಮಪಿ ಜ್ಞಾನಭಕ್ತಿವೈರಾಗ್ಯಾದಿಸಂಪೂರ್ಣಾನಾಂ ಭವತ್ಯೇವ ಮುಕ್ತಿಃ ॥ (೩) ತದ್ಯುತಾಂ ತ್ವೀಷಜ್ಜ್ಞಾನಾದ್ಯಸಂಪೂರ್ಣಾನಾಮಪಿ ನಿಪುಣಾನಾಂ ತದ್ಬಲಾತ್ಕಥಂಚಿದ್ಭವತೀತಿ ವಿಶೇಷಃ ॥ (೪) ಉಕ್ತಂ ಚ ಭಾಗವತೇ । ಪಾನೇನ ತೇ ದೇವ ಕಥಾಸುಧಾಯಾಃ ಪ್ರವೃದ್ಧಭಕ್ತ್ಯಾ ವಿಶದಾಶಯಾ ಯೇ । ವೈರಾಗ್ಯಸಾರಂ ಪ್ರತಿಲಭ್ಯ ಬೋಧಂ ಯಥಾಂಜಸಾನ್ವೀಯುರಕುಂಠಧಿಷ್ಣ್ಯಂ । ತಥಾಪರೇ ಚಾತ್ಮಸಮಾಧಿಯೋಗಬಲೇನ ಜಿತ್ವಾ ಪ್ರಕೃತಿಂ ಬಲಿಷ್ಠಾಂ । ತ್ವಾಮೇವ ಧೀರಾಃ ಪುರುಷಂ ವಿಶಂತಿ ತೇಷಾಂ ಶ್ರಮಃ ಸ್ಯಾನ್ನ ತು ಸೇವಯಾ ತ ಇತಿ ॥ ೧ ॥

ಅ ॥ (೧) ಶ್ವಾಸನಿರೋಧಾದಿರೂಪವಾದ ಯೋಗದಿಂದ ಕೂಡಿರುವ ಉಪಾಸಕರಿಗೆ ಮರಣಕಾಲದ ಕರ್ತವ್ಯವನ್ನು ವಿಶೇಷವಾಗಿ ಪ್ರಯಾಣಕಾಲೇ ಎಂಬುವ ಶ್ಲೋಕದಿಂದ ಹೇಳುತ್ತಾರೆ. (೨) ಶ್ವಾಸನಿರೋಧಾದಿರೂಪವಾದ ಯೋಗವಿಲ್ಲದವರಿಗೂ ಜ್ಞಾನ ಭಕ್ತಿ ವೈರಾಗ್ಯಾದಿಗುಣಗಳಿಂದ ಸಂಪೂರ್ಣರಾದವರಿಗೆ ಮೋಕ್ಷವಾಗಿಯೇ ಆಗುತ್ತದೆ. (೩) ಶ್ವಾಸನಿರೋಧಾದಿರೂಪ ಉಪಾಯವನ್ನು ಮಾಡುತ್ತಿದ್ದು ಜ್ಞಾನಭಕ್ತ್ಯಾದಿಗುಣಗಳು ಸ್ವಲ್ಪ ಕಡಿಮೆಯಾಗಿ ಶ್ವಾಸನಿರೋಧಾದಿಗಳನ್ನು ಮಾಡುವುದರಲ್ಲಿ ಸಮರ್ಥರಾದ ಉಪಾಸಕರಿಗೂ ಕೂಡ ಶ್ವಾಸನಿರೋಧಾದಿರೂಪ ಯೋಗಾಭ್ಯಾಸ ಬಲದಿಂದ ಶೀಘ್ರದಲ್ಲಿ ಅಲ್ಪ ಆನಂದವುಳ್ಳ ಮುಕ್ತಿಯು ಆಗುತ್ತದೆ. (೪) ಶ್ರೀಪರಮಾತ್ಮನೇ ನಿನ್ನ ಮಾಹಾತ್ಮ್ಯಪ್ರತಿಪಾದಕವಾದ ಕಥೆಯೆಂಬ ಅಮೃತಪಾನದಿಂದ (ಶ್ರವಣಮನನಾದಿಗಳಿಂದ) ಅಭಿವೃದ್ಧವಾದ ಭಕ್ತಿಯಿಂದ ನಿರ್ಮಲವಾದ ಅಂತಃಕರಣವುಳ್ಳವರು, ಯಾರು ಉತ್ತಮಭಕ್ತರು ಇದ್ದಾರೋ, ಅವರು ವಿಷಯವೈರಾಗ್ಯಕ್ಕೆ ಫಲಭೂತವಾದ ಅಪರೋಕ್ಷಜ್ಞಾನವನ್ನು ಹೊಂದಿ ನಾಶವಿಲ್ಲದ ವೈಕುಂಠಾದಿ ಮಂದಿರವುಳ್ಳ ಶ್ರೀಪರಮಾತ್ಮನಾದ ನಿನ್ನನ್ನು ಸಂಪೂರ್ಣ ಹೊಂದಿರುತ್ತಾರೋ, (ಅಂದರೆ ಸಾಯುಜ್ಯಾದಿರೂಪವಾದ ಮುಕ್ತಿಯನ್ನು ಹೊಂದಿರುತ್ತಾರೋ) ಹಾಗೆಯೇ ಇಂತಹ ಪೂರ್ಣ ಭಕ್ತಿಯುಳ್ಳವರಿಗಿಂತ ಇತರರಾದ ಶ್ವಾಸನಿರೋಧದಲ್ಲಿ ಪ್ರಧಾನರಾದ ಅಪರೋಕ್ಷಜ್ಞಾನಿಗಳು ಅಲ್ಪವಾದ ಭಗವದ್ವಿಷಯಕ ಧ್ಯಾನ, ಹೆಚ್ಚು ಶ್ವಾಸನಿರೋಧಾದಿರೂಪವಾದ ಯೋಗಬಲ ಇವುಗಳಿಂದ ಬಲಿಷ್ಠವಾದ (ಅಲ್ಪ ಸಾಧನಗಳಿಂದ ಗೆಲ್ಲಲಿಕ್ಕೆ ಅಶಕ್ಯವಾದ) ಪ್ರಕೃತಿಯನ್ನು ಗೆದ್ದು (ಲಿಂಗದೇಹವನ್ನು ಬಿಟ್ಟು) ಗುಣಪೂರ್ಣನಾದ ನಿನ್ನನ್ನು ಪ್ರವೇಶವಾಡಿಯೇ ಮಾಡುತ್ತಾರೆ. ಉತ್ತಮಭಕ್ತರಂತೆ ಚೆನ್ನಾಗಿ ಅಲ್ಲ ಇಂತಹ ಯೋಗಾಭ್ಯಾಸವುಳ್ಳವರಿಗೆ ಸಾಧನಕಾಲದಲ್ಲಿ ಬಹಳ ಕ್ಲೇಶವುಂಟಾಗುತ್ತದೆ. ನಿನ್ನ ಶ್ರವಣಾದಿರೂಪವಾದ ಸೇವೆಯನ್ನು ಮಾಡುವವರಿಗೆ ಅಂತಹ ಕ್ಲೇಶವು ಬರುವುದಿಲ್ಲ ॥ ೧

ಭಾ ॥ (೧) ಯೇ ತು ತದ್ಭಾವಿತಾ ಲೋಕಾ ಏಕಾಂತಿತ್ವಂ ಸಮಾಶ್ರಿತಾಃ । ಏತದಭ್ಯಧಿಕಂ ತೇಷಾಂ ಯತ್ತೇಜಃ ಪ್ರವಿಶಂತ್ಯುತೇತಿ ಮೋಕ್ಷಧರ್ಮೇ ॥ (೨) ಸಂಪೂರ್ಣಾನಾಂ ಭವೇನ್ಮೋಕ್ಷೋ ವಿರಕ್ತಿಜ್ಞಾನಭಕ್ತಿಭಿಃ । ನಿಯಮೇನ ತಥಾ ಪೀರಜಯಾದಿಯುತಯೋಗಿನಾಂ । ವಶ್ಯತ್ವಾನ್ಮನಸಸ್ತ್ವೀಷತ್ಪೂರ್ವಮಪ್ಯಾಪ್ಯತೇ ಧ್ರುವಮಿತಿ ವ್ಯಾಸಯೋಗೇ ॥ ೨ ॥ ॥ ೧೦ ॥

ಅ ॥ (೧) ಯಾವ ಜನರು ಶ್ರೀಪರಮಾತ್ಮನ ಪ್ರಸಾದದಿಂದ ಶ್ರೀಪರಮಾತ್ಮನನ್ನು ಧ್ಯಾನಿಸುವವರಾಗಿ ಏಕಾಂತಭಕ್ತತ್ವವನ್ನು ಹೊಂದಿರುತ್ತಾರೋ, ಅವರಿಂದ ಹೊಂದಲ್ಪಡತಕ್ಕ ಮುಕ್ತಿರೂಪ ಫಲವು ಇತರರು ಹೊಂದುವ ಮುಕ್ತಿಗಿಂತ ಅತ್ಯುತ್ಕೃಷ್ಟವು. ಮತ್ತು ಅವರು ಸರ್ವತ್ರ ವ್ಯಾಪ್ತನಾದ ತೇಜೋರೂಪನಾದ ಶ್ರೀನಾರಾಯಣನನ್ನು ಪ್ರವೇಶಮಾಡುತ್ತಾರೆ, ಎಂದು ಮೋಕ್ಷಧರ್ಮದಲ್ಲಿ ಹೇಳಿದೆ. (ವೈರಾಗ್ಯ ಜ್ಞಾನ ಭಕ್ತಿ ಎಂಬ ಸಾಧನಗಳಿಂದ ಸಂಪೂರ್ಣರಾದ ಉತ್ತಮಾಧಿಕಾರಿಗಳಿಗೆ ನಿಶ್ಚಯವಾಗಿ ಮೋಕ್ಷವಾಗುವುದು. ಆದರೂ ಶ್ವಾಸನಿರೋಧಾದಿಗಳಿಂದ ಯುಕ್ತರಾದ ಯೋಗಿಗಳಿಗೆ ಮನಸ್ಸು ಅಧೀನವಾಗಿಯೇ (ಮನೋ ನಿಗ್ರಹ) ಇರುವುದರಿಂದ ಭಕ್ತ್ಯಾದಿಪ್ರಧಾನರಾದ ಯೋಗಿಗಳಿಗಿಂತಲೂ ಸ್ವಲ್ಪ ಮೊದಲೇ ಶ್ವಾಸನಿರೋಧಾದಿಗಳಿಂದ ಯುಕ್ತರಾದ ಯೋಗಿಗಳಿಂದ ಪರಬ್ರಹ್ಮನು (ಮೋಕ್ಷವು) ನಿಶ್ಚಯವಾಗಿಯೂ ಹೊಂದಲ್ಪಡುತ್ತದೆ, ಎಂದು ವ್ಯಾಸಯೋಗದಲ್ಲಿದೆ. (ಅಂದರೆ ಭಕ್ತ್ಯಾದಿ ಪ್ರಧಾನರಾದ ಯೋಗಿಗಳಿಂದ ಹೊಂದಲ್ಪಡುವ ಮುಕ್ತಿಗಿಂತ ಇತರರ ಮುಕ್ತಿಯು ನಿಕೃಷ್ಟವಾದುದು.) ॥ ೧೦ ॥

ಹೀ—ಶ್ವಾಸನಿರೋಧಾದಿಗಳನ್ನು ಮಾಡಿಕೊಂಡಿರುವ ಯೋಗಿಗಳ ಮರಣಕಾಲದಲ್ಲಿ ಕರ್ತವ್ಯವನ್ನು ಧ್ಯೇಯವನ್ನೂ ಸ್ಪಷ್ಟೀಕರಿಸುತ್ತಾರೆ—

**೧೧ ॥ ಯದಕ್ಷರಂ ವೇದವಿದೋ ವದಂತಿ**
**ವಿಶಂತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರಂತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥ ೧೧ ॥**

ಅ ॥ ಯತ್ಪದಂ=ಯಾವ ಭಗವತ್ಸ್ವರೂಪವನ್ನು, ಅಕ್ಷರಂ=ನಾಲ್ಕು ವಿಧ ನಾಶವೂ ಇಲ್ಲದಿರುವುದನ್ನಾಗಿ, ವೇದವಿದಃ=ವೇದಾರ್ಥಜ್ಞಾನಿಗಳು, ವದಂತಿ=ಹೇಳುತ್ತಾರೋ, ಯತ್=ಯಾವ ಭಗವತ್ಸ್ವರೂಪವನ್ನು, ವೀತರಾಗಾಃ=ಕಾಮ ಕ್ರೋಧ ಮೊದಲಾದ ದೋಷಗಳು ಇಲ್ಲದಿರುವ, ಯತಯಃ=ಪ್ರಯತ್ನಶೀಲರಾದವರು, ವಿಶಂತಿ=ಪ್ರವೇಶಮಾಡುತ್ತಾರೋ, ಯತ್=ಯಾವ ಭಗವತ್ಸ್ವರೂಪವನ್ನು, ಇಚ್ಛಂತಃ=ತಿಳಿಯಲಿಚ್ಛಿಸುವವರಾಗಿ, ಬ್ರಹ್ಮಚರ್ಯಂ=ಮನಸ್ಸು ಮೊದಲಾದ ಇಂದ್ರಿಯಗಳನ್ನು ಪರಬ್ರಹ್ಮನಲ್ಲಿ ಸ್ಥಿರವಾಗಿ ಇಡುವಿಕೆಯನ್ನು, ಚರಂತಿ=ಮಾಡುತ್ತಾರೋ, ತತ್ಪದಂ=ಮೋಕ್ಷೇಚ್ಛುಗಳಿಂದ ಹೊಂದಲ್ಪಡತಕ್ಕ, ಆ ಪರಬ್ರಹ್ಮಸ್ವರೂಪವನ್ನು ತೇ=ನಿನಗಾಗಿ, ಸಂಗ್ರಹೇಣ=ಸಂಕ್ಷೇಪವಾಗಿ, ಪ್ರವಕ್ಷ್ಯೇ=ಹೇಳುವೆನು. (ಪರಬ್ರಹ್ಮನನ್ನು ಸ್ಮರಣೆಮಾಡುವ ಪ್ರಕಾರವನ್ನು ಹೇಳುವೆನು.) ॥ ೧೧ ॥

**ಭಾ ॥ (೧) ತದೇವ ಧ್ಯೇಯಂ ಪ್ರಪಂಚಯತಿ । ಯದಕ್ಷರಮಿತ್ಯಾದಿನಾ । ಪ್ರಾಪ್ಯತೇ ಮುಮುಕ್ಷುಭಿರಿತಿ ಪದಂ ಸ್ವರೂಪಂ । ಪದ ಗತಾವಿತಿ ಧಾತೋಃ । ತದ್ವಿಷ್ಣೋಃ ಪರಮಂ ಪದಮಿತಿ ಶ್ರುತೇಶ್ಚ ॥ (೨) ಗೀಯಸೇ ಪದಮಿತ್ಯೇವ ಮುನಿಭಿಃ ಪದ್ಯಸೇ ಯತ ಇತಿ ಚ ನಾರದೀಯೇ ॥ ೧೧ ॥**

ಅ ॥ ಆ ಧ್ಯೇಯವಾದ ಭಗವತ್ಸ್ವರೂಪವನ್ನೇ ಯದಕ್ಷರಂ ಇತ್ಯಾದಿಗಳಿಂದ ವಿವರಿಸುತ್ತಾರೆ. ಮೋಕ್ಷೇಚ್ಛುಗಳಿಂದ ಹೊಂದಲ್ಪಡುವುದರಿಂದ ಪದಂ ಭಗವತ್ಸ್ವರೂಪವು. ಗತಿ ಎಂಬುವ ಅರ್ಥದಲ್ಲಿ ಪದ ಎಂಬುವ ಧಾತುವಿದೆ. ಹೀಗೆ ಧಾತುವ್ಯಾಖ್ಯಾನದಿಂದಲೂ. ಶ್ರೀವಿಷ್ಣುವಿನ ಸರ್ವೋತ್ಕೃಷ್ಟವಾದ ಸ್ವರೂ

ಪವನ್ನು ಜ್ಞಾನಿಗಳು ನೋಡುತ್ತಾರೆ, ಎಂಬುವ ಶ್ರುತಿಯಿಂದಲೂ, (೨) ಎಲೋ ಪರಬ್ರಹ್ಮನೇ ನೀನು ಮುನಿಗಳಿಂದ ಹೊಂದಲ್ಪಡುತ್ತಿ. ಆದಕಾರಣ ಪದಂ ಎನಿಸುತ್ತಿ. ಎಂದು ನಾರದೀಯ ಪುರಾಣವಾಕ್ಯದಿಂದಲೂ ಪದಂ ಎಂಬುವುದಕ್ಕೆ ಸ್ವರೂಪವೆಂಬುವ ಅರ್ಥವು ಸಿದ್ಧವಾಗುತ್ತದೆ. ॥ ೧೧ ॥

ಭಾ ॥ ಮನಆದೀನಾಂ ಬ್ರಹ್ಮಣಿ ಚರಣಂ ಬ್ರಹ್ಮಚರ್ಯಂ ॥ ೧೧ ॥

ಅ ॥ ಮನಸ್ಸು ಮೊದಲಾದ ಇಂದ್ರಿಯಗಳಿಗೆ ಪರಬ್ರಹ್ಮನಲ್ಲಿ ಇರುವಿಕೆಯು ಬ್ರಹ್ಮಚರ್ಯವೆನಿಸುತ್ತದೆ. ॥ ೧೧ ॥

ಪೀ — ಧ್ಯಾನಿಸುವ ಪ್ರಕಾರವನ್ನು ಹೇಳುತ್ತಾರೆ --

ಗೀ ॥ ಸರ್ವದ್ವಾರಾಣಿ ಸಂಯಮ್ಯ ಮನೋ ಹೃದಿ ನಿರುಧ್ಯ ಚ ।
ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋ ಯೋಗಧಾರಣಾಂ ॥
ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।
ಯಃ ಪ್ರಯಾತಿ ತ್ಯಜನ್ದೇಹಂ ಸ ಯಾತಿ ಪರಮಾಂ ಗತಿಂ ॥ ೧೨,೧೩ ॥

ಅ ॥ ಸರ್ವದ್ವಾರಾಣಿ = ವಾಯುವಿನ ಸಂಚಾರಸ್ಥಾನಗಳಾದ ಸುಷುಮ್ನಾನಾಡಿ ಹೊರತು ಬೇರೆ ಎಲ್ಲಾ ನಾಡಿ(ಇಂದ್ರಿಯಮಾರ್ಗ)ಗಳನ್ನು, ಸಂಯಮ್ಯ = ನಿರೋಧವಮಾಡಿ, ಹೃದಿ = ಪ್ರಲಯಕಾಲದಲ್ಲಿ ಜಗತ್ತನ್ನು ನಾಶಪಡಿಸುವುದರಿಂದ ಹೃತ್ ಎನಿಸಿಕೊಳ್ಳುವ ಶ್ರೀಮನ್ನಾರಾಯಣನಲ್ಲಿ, ಮನಃ = ಮನಸ್ಸನ್ನು, ನಿರುಧ್ಯ = ನಿರೋಧಿಸಿ, (ಅಂದರೆ ಬೇರೆ ಕಡೆ ಹೋಗದಂತೆ ಮಾಡಿ ಶ್ರೀಪರಮಾತ್ಮನಲ್ಲಿಯೇ ಸ್ಥಿರವಾಗಿ ಇರಿಸಿ) ಆತ್ಮನಃ = ತನ್ನ, ಪ್ರಾಣಂ = ಪ್ರಾಣವಾಯುವನ್ನು, ಮೂರ್ಧ್ನಿ = ಸುಷುಮ್ನಾನಾಡಿಯ ಮಾರ್ಗವಾಗಿ ಬ್ರಹ್ಮರಂಧ್ರದಲ್ಲಿ, ಆಧಾಯ = ಇಟ್ಟು, ಯೋಗಧಾರಣಾಂ ಆಸ್ಥಿತಃ = ಅಖಂಡ ಸ್ಮೃತಿರೂಪವಾದ ಯೋಗಧಾರಣದಲ್ಲಿಯೇ ಆಗ್ರಹಯುಕ್ತನಾಗಿ, ಓಮಿತ್ಯೇಕಾಕ್ಷರಂ = ಓಂ ಎಂಬುವ ಒಂದು ಅಕ್ಷರದಿಂದ ಹೇಳಲ್ಪಡತಕ್ಕ, ಬ್ರಹ್ಮ = ಪರಬ್ರಹ್ಮಸ್ವರೂಪನಾದ, ಮಾಂ = ನನ್ನನ್ನು, ವ್ಯಾಹರನ್ = ಹೇಳುತ್ತಾ, ಅನುಸ್ಮರನ್ = ಸ್ಮರಣೆ ಮಾಡುತ್ತಾ, (ಅಂದರೆ ಓಂ ಎಂದು ಉಚ್ಚರಿಸಿ ಆ ಪ್ರಣವಪ್ರತಿಪಾದ್ಯನಾದ ಪರಬ್ರಹ್ಮನನ್ನು ಸ್ಮರಿಸಿಕೊಂಡು) ಯಃ = ಯಾವಾತನು, ದೇಹಂ = ಶರೀರವನ್ನು, ತ್ಯಜನ್ = ಬಿಡುವವನಾಗಿ, ಪ್ರಯಾತಿ = ಹೊರಟುಹೋಗುತ್ತಾನೋ, ಸಃ = ಆತನು, ಪರಮಾಂ ಗತಿಂ = ಮೋಕ್ಷವನ್ನು, ಯಾತಿ = ಹೊಂದುತ್ತಾನೆ. ॥ ೧೨, ೧೩ ॥

ಪೀ — ಮನೋ ನಿರುಧ್ಯ ಎಂಬುವುದರಿಂದಲೇ ಸಮಸ್ತ ಇಂದ್ರಿಯಗಳನ್ನು ಸ್ವಾಧೀನೀಕರಿಸಿಕೊಳ್ಳಬೇಕೆಂದು ಹೇಳಿದ್ದರಿಂದ ತಿರುಗಿ ಏಕೆ ಹೇಳುವುದೆಂದರೆ ವಾಯುಸಂಚರಿಸುವ ಸಮಸ್ತನಾಡಿಗಳನ್ನು (ಇಂದ್ರಿಯಮಾರ್ಗಗಳನ್ನು) ನಿರೋಧಿಸಬೇಕೆಂದು ಇಲ್ಲಿ ಹೇಳುತ್ತಾರೆ ಆ ನಾಡಿಗಳನ್ನು ತಡೆಯುವುದು ಏಕೆಂದರೆ —

ಭಾ ॥ (೧) 'ಬ್ರಹ್ಮನಾಡೀಂ ವಿನಾ ಯದ್ಯನ್ಯತ್ರ ಗಚ್ಛತಿ ತರ್ಹಿ ವಿನಾ ಮೋಕ್ಷಂ ಸ್ಥಾನಾಂತರಂ ಪ್ರಾಪ್ನೋತೀತಿ ಸರ್ವದ್ವಾರಾಣಿ ಸಂಯಮ್ಯ ॥ (೨) ನಿರ್ಗಚ್ಛಂತ್ಯೆಕ್ಸಸಾಸೂರ್ಯಗಾ ದಿಶಃ ಶ್ರೋತ್ರೇಣ ಚೈವ ಓಂಕಾರಾದಿವಚನಾದ್ವ್ಯಾಸಯೋಗೇ । ಮೋಕ್ಷ-

ಧರ್ಮೇ ಚ ॥ (೩) ಹೃದಿ ನಾರಾಯಣೇ । ಹ್ರಿಯತೇ ತ್ವಯಾ ಜಗದ್ಯಸ್ಮಾದ್ಧೃದಿ-
ಶ್ಚೈವಂ ಪ್ರಭಾಷಸ ಇತಿ ಪಾದ್ಮೇ ॥ (೪) ನ ಹಿ ಮೂರ್ಧ್ನಿ ಪ್ರಾಣೇ ಹೃದಿ ಮನಸಃ
ಸ್ಥಿತಿಃ ಸಂಭವತಿ । ಯತ್ರ ಪ್ರಾಣೋ ಮನಸ್ತತ್ರ ತತ್ರ ಜೀವಃ ಪರಸ್ತಥೇತಿ ವ್ಯಾಸ
ಯೋಗೇ ॥ (೫) ಯೋಗಧಾರಣಾಮಾಸ್ಥಿತಃ । ಯೋಗಧಾರಣ ಏವಾಭಿಯುಕ್ತ
ಇತ್ಯರ್ಥಃ ॥ ೧೨, ೧೩ ॥

ಅ ॥ (೧) ಬ್ರಹ್ಮನಾಡಿಯನ್ನು ಬಿಟ್ಟು ಬೇರೆ ನಾಡಿಗಳಲ್ಲಿ ಜೀವನು ಹೋದರೆ ಆ ಜೀವನು ಮೋಕ್ಷ ಹೊಂದದೆ ಬೇರೆ ಸ್ಥಾನಗಳಿಗೆ ಹೋಗುವ ಕಾರಣ ಸರ್ವದ್ವಾರಾಣಿ ಸಂಯಮ್ಯ, ಎಂದುಕ್ತವಾಗಿದೆ. (೨) (ಬ್ರಹ್ಮನಾಡಿ ಹೊರತು ಬೇರೆ ನಾಡೀಮಾರ್ಗದಿಂದ ಉತ್ಕ್ರಾಂತನಾದ ಜೀವನು ಸ್ಥಾನಾಂತರವನ್ನು (ಸೂರ್ಯಾದಿಗಳನ್ನು) ಹೊಂದುತ್ತಾನೆ. ಮೋಕ್ಷವನ್ನು ಹೊಂದುವುದಿಲ್ಲ, ಎಂಬುವ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಕಣ್ಣಿನಿಂದ ಹೋಗುವ ಜೀವನು ಸೂರ್ಯನನ್ನೂ, ಕಿವಿಯಿಂದ ಹೋದವನು ದಿಗಭಿಮಾನಿದೇವತೆಗಳನ್ನೂ ಹೊಂದುತ್ತಾನೆ. ಇದುಮೊದಲಾದ, ಪ್ರಮಾಣಗಳಿಂದ ದ್ವಾರಾಂತರದಿಂದ ಹೋದವನು ಸ್ಥಾನಾಂತರವನ್ನು (ಬೇರೆ ದೇವತೆಗಳನ್ನು) ಹೊಂದುತ್ತಾನೆಂದು ವ್ಯಾಸಯೋಗವೆಂಬುವ ಗ್ರಂಥದಲ್ಲಿ ಹೇಳಿದೆ. ಮೋಕ್ಷಧರ್ಮದಲ್ಲಿಯೂ ಈ ಅರ್ಥವೇ ಸ್ಪಷ್ಟವಾಗಿ ಹೇಳಲ್ಪಟ್ಟಿದೆ. (೩) ಹೃದಿ= ಶ್ರೀನಾರಾಯಣನಲ್ಲಿ. (ಈ ಅರ್ಥವು ಹೇಗೆ ಸಿಗುತ್ತದೆಂದರೆ-) ಎಲೋ ಶ್ರೀಪರಮಾತ್ಮನೇ ನಿನ್ನಿಂದ ಜಗತ್ತು ಸಂಹರಿಸಲ್ಪಡುವುದರಿಂದ ನೀನು ಹೃತ್ ಎನಿಸಿಕೊಳ್ಳುತ್ತಿ, ಎಂದು ಪಾದ್ಮದಲ್ಲಿದೆ. (೪) (ಹೃತ್ ಎಂಬುವುದಕ್ಕೆ ಹೃದಯವೆಂದು ಪ್ರಸಿದ್ಧವಾದ ಅರ್ಥವನ್ನೇ ಏಕೆ ಹೇಳಬಾರದೆಂದರೆ –) ಶಿರಸ್ಸಿನಲ್ಲಿ ಮುಖ್ಯಪ್ರಾಣನಿರುವಾಗ ಹೃದಯದಲ್ಲಿ ಮನಸ್ಸು ಇರುತ್ತದೆಂಬುವುದು ಕೂಡುವುದಿಲ್ಲವಷ್ಟೆ. (ಏಕೆ ಕೂಡುವುದಿಲ್ಲವೆಂದರೆ–) ಎಲ್ಲಿ ಪ್ರಾಣನಿರುತ್ತಾನೋ, ಅಲ್ಲಿ ಮನಸ್ಸು ಇರುತ್ತದೆ. ಅಲ್ಲಿಯೇ ಜೀವನೂ ಹಾಗೆಯೇ ಶ್ರೀಪರಮಾತ್ಮನೂ ಇರುತ್ತಾನೆ, ಎಂದು ವ್ಯಾಸಯೋಗದಲ್ಲಿ ಹೇಳಿದೆ. (೫) ಯೋಗಧಾರಣಾಮಾಸ್ಥಿತಃ= ಶ್ವಾಸನಿರೋಧ ಮೊದಲಾದ ಯೋಗಸಂಪೂರ್ತಿಯಲ್ಲಿಯೇ ಆಗ್ರಹವುಳ್ಳವನು ಎಂದರ್ಥವು. ॥೧೨, ೧೩॥

ಕಾ ॥ ಏಕಾಕ್ಷರವಾಚ್ಯತ್ವಾದೇಕಾಕ್ಷರಂ ಪರಂ ಬ್ರಹ್ಮ ॥ ೧೨,೧೩ ॥

ಅ ॥ ಓಂ ಎಂಬುವ ಒಂದು ಅಕ್ಷರದಿಂದ ಹೇಳಲ್ಪಡುವುದರಿಂದ ಏಕಾಕ್ಷರಂ= ಎಂಬುವ ಶಬ್ದವಾಚ್ಯನು ಪರಬ್ರಹ್ಮನು. ॥ ೧೨, ೧೩ ॥

ಟೀ—ನಿತ್ಯದಲ್ಲಿಯೂ ಧ್ಯಾನದಲ್ಲಿ ಅಭ್ಯಾಸವುಳ್ಳವನಿಗೇನೇ ಮರಣಕಾಲದಲ್ಲಿ ನನ್ನ ಸ್ಮರಣೆಯುಂಟಾಗುತ್ತದೆ ನಿತ್ಯಾಭ್ಯಾಸವಿಲ್ಲದವನಿಗೆ ಸ್ಮರಣೆಯು ಬರಲಾರದು, ಎಂದು ಸ್ಪಷ್ಟವಾಗಿ ಹೇಳುತ್ತಾರೆ—

ಗೀ ॥ ಅನನ್ಯಚೇತಾಃ ಸತತಂ ಯೋ ಮಾಂ ಸ್ಮರತಿ ನಿತ್ಯಶಃ ।
ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪ ॥

ಅ ॥ ಪಾರ್ಥ= ಅರ್ಜುನನೇ, ಯಃ= ಯಾವಾತನು, ಸತತಂ= ನಿರಂತರದಲ್ಲಿಯೂ, ಅನನ್ಯಚೇತಾಃ= ಪರಮಾತ್ಮನು ಹೊರತು ಬೇರೆ ವಿಷಯಗಳಲ್ಲಿ ಮನಸ್ಸನ್ನು ಇಡದಿರುವವನಾಗಿ, ನಿತ್ಯಶಃ= ನಿರಂತರದಲ್ಲಿ. ಮಾಂ= ನನ್ನನ್ನು, ಸ್ಮರತಿ= ಸ್ಮರಣೆಮಾಡುತ್ತಾನೋ, ತಸ್ಯ= ಅಂತಹ, ನಿತ್ಯಯುಕ್ತಸ್ಯ= ನಿತ್ಯದಲ್ಲಿಯೂ ನನ್ನನ್ನು ಹೊಂದಲಿಕ್ಕೆ ಅವಶ್ಯಕವಾದ ಧ್ಯಾನವುಳ್ಳ, ಯೋಗಿನಃ ಸಂಪೂರ್ಣ ...

ಯವುಳ್ಳ ಯೋಗಿಗೆ, ಅಹಂ=ನಾನು, ಸುಲಭಃ=ಮರಣಕಾಲದಲ್ಲಿ ಸುಖದಿಂದ ಸ್ಮೃತಿವಿಷಯನಾಗುತ್ತೇನೆ. ಅಥವಾ ಅನಾಯಾಸದಿಂದ ಹೊಂದಲ್ಪಡತಕ್ಕವನು. ॥ ೧೪ ॥

ಭಾ ॥ ನಿತ್ಯಯುಕ್ತಸ್ಯ ನಿತ್ಯೋಪಾಯವತಃ । ಯೋಗಿನಃ ಪರಿಪೂರ್ಣಯೋಗಸ್ಯ ॥ ೧೪ ॥

ಅ ॥ ನಿತ್ಯಯುಕ್ತಸ್ಯ=ಪ್ರತಿನಿತ್ಯವೂ ಶ್ವಾಸನಿರೋಧ ಮೊದಲಾದ ಯೋಗರೂಪವಾದ ಉಪಾಯವನ್ನು ಮಾಡತಕ್ಕಂಥ ಸಂಪೂರ್ಣ ಉಪಾಯವುಳ್ಳವನಿಗೆ. ಯೋಗಿನಃ=ಪರಿಪೂರ್ಣ ಉಪಾಯವುಳ್ಳವನಿಗೆ॥ ೧೪ ॥

ಗೀ ॥ ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಂ ।
ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ ೧೫ ॥

ಅ ॥ ಮಹಾತ್ಮಾನಃ=ಜ್ಞಾನಿಗಳು, ಪರಮಾಂ=ಉತ್ತಮವಾದ, ಸಂಸಿದ್ಧಿಂ=ಮೋಕ್ಷವನ್ನು. ಗತಾಃ= ಹೊಂದಿದಕಾರಣ, ಮಾಂ=ನನ್ನನ್ನು, ಉಪೇತ್ಯ=ಹೊಂದಿ, ದುಃಖಾಲಯಂ=ದುಃಖಕ್ಕೆ ಕಾರಣವಾದ, ಅಶಾಶ್ವತಂ=ಅನಿತ್ಯವಾದ, (ನಾಶವುಳ್ಳ) ಜನ್ಮ=ದೇಹಸಂಬಂಧವನ್ನು, ನಾಪ್ನುವಂತಿ=ತಿರುಗಿ ಹೊಂದುವು ದಿಲ್ಲ. ॥ ೧೫ ॥

ಭಾ ॥ ತತ್ಪ್ರಾಪ್ತಿಂ ಸ್ತೌತಿ । ಮಾಮಿತಿ । ಪರಮಾಂ ಸಿದ್ಧಿಂ ಗತಾ ಹಿ ತ ಇತಿ ತತ್ರ ಹೇತುಃ ॥ ॥ ೧೫ ॥

ಅ ॥ ಮಾಂ ಎಂಬುವ ಶ್ಲೋಕದಿಂದ ಭಗವತ್ಪ್ರಾಪ್ತಿಯನ್ನು ಸ್ತುತಿಸುತ್ತಾರೆ. ಪರಮಾಂ ಸಿದ್ಧಿಂ ಗತಾಃ ಎಂಬುವುದು ತಿರುಗಿ ಜನ್ಮವಿಲ್ಲವೆಂಬುವಲ್ಲಿ ಹೇತುವು. ॥ ೧೫ ॥

ಗೀ ॥ ಆಬ್ರಹ್ಮಭವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।
ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೬ ॥

ಅ ॥ ಅರ್ಜುನ=ಅರ್ಜುನನೇ, ಆಬ್ರಹ್ಮಭವನಾತ್=ಮೇರುಪರ್ವತದಲ್ಲಿರತಕ್ಕ ಚತುರ್ಮುಖ ಬ್ರಹ್ಮನ ಲೋಕವನ್ನಾರಂಭಿಸಿ (ಲೋಕದಿಕೆಯಿಂದ), ಲೋಕಾಃ=ಕೆಳಗಿನ ಲೋಕಗಳಲ್ಲಿರತಕ್ಕ ಜನರು, ಪುನರಾವರ್ತಿನಃ=ತಿರುಗಿ ಭೂಲೋಕದಲ್ಲಿ ಹುಟ್ಟು ಸಾವುಳ್ಳವರು. ಕೌಂತೇಯ=ಅರ್ಜುನನೇ, ಮಾಂ= ತನ್ನನ್ನು, ಉಪೇತ್ಯ=ಹೊಂದಿ (ಇರುವವರಿಗೆ) ಪುನಃ=ತಿರುಗಿ, ಜನ್ಮ=ಉತ್ಪತ್ತಿಯು, ನ ತುವಿದ್ಯತೇ= ಇರುವುದೇ ಇಲ್ಲ. ॥ ೧೬ ॥

ಟೀ—ಆ ಬ್ರಹ್ಮಭವನಾಲ್ಲೋಕಾಃ ಪುನರಾವರ್ತಿನಃ ಎಂಬುವುದರಿಂದ ಸತ್ಯಲೋಕದಲ್ಲಿದ್ದ ವರಿಗೂ ತಪೋಲೋಕ ಜನರ್ಲೋಕದಲ್ಲಿದ್ದವರಿಗೂ ಜನ್ಮವು ಹೇಳಲ್ಪಡುತ್ತದೆಂಬ ಅಪವ್ಯಾಖ್ಯಾನವನ್ನು ನಿರಾಕರಿಸುತ್ತಾರೆ—

ಭಾ ॥ (೧) ಮಹಾಮೇರುಸ್ಥಬ್ರಹ್ಮಸದನಮಾರಭ್ಯ ನ ಪುನರಾವೃತ್ತಿಃ ॥ (೨) ತಟ್ಸ್ತೋಕ್ತಂ ನಾರಾಯಣಗೋಪಾಲಕಲ್ಪೇ । ಆ ಮೇರುಬ್ರಹ್ಮಸದನಾದಾ ಜನಾನ್ನ ಜನಿರ್ಭುವಿ। ತಥಾಽಸ್ವಭಾವಃ ಸರ್ವತ್ರ ಪ್ರಾಪ್ಯೈವ ವಸುದೇವಜಮಿತಿ ॥ ೧೬ ॥

**ಅ ॥ ಪೃಥಿವ್ಯಾಂ ಬ್ರಹ್ಮಣೋ ಮೇರೌ ಜಯಂತಂ ತ್ವಂತರಿಕ್ಷಗಂ । ತೃತೀಯಂ ಸತ್ಯಲೋಕೇ ವೈ ಸದನಂ ತ್ರಿವಿಧಂ ಸ್ಮೃತಂ** ಎಂಬುವ ಪ್ರಮಾಣದಿಂದ ಮಹಾಮೇರು ಪರ್ವತದಲ್ಲಿರತಕ್ಕ ಚತುರ್ಮುಖನ **ಶತಕೋಟಿ** ಎಂದು ಹೆಸರುಳ್ಳ ಮನೆಯನ್ನಾರಂಭಿಸಿ (ಅಂದರೆ ಆ ಮನೆಯಿಂದ ಮೇಲೆ ಇರತಕ್ಕ ಅನಂತಾಸನ ಶ್ವೇತದ್ವೀಪಗಳಲ್ಲಿರುವವರಿಗೂ ಜನೋಲೋಕಕ್ಕಿಂತ ಮೇಲೆ ಇರುವ ಎಲ್ಲಾ ಲೋಕಗಳಲ್ಲಿರುವವರಿಗೂ) ತಿರುಗಿ ಭೂಲೋಕದಲ್ಲಿ ಹುಟ್ಟು ಸಾವುಗಳು ಇಲ್ಲ. (೨) ಈ ವಿಷಯವು ನಾರಾಯಣಗೋಪಾಲಕಲ್ಪವೆಂಬುವ ಗ್ರಂಥದಲ್ಲಿ ಉಕ್ತವಾಗಿದೆ. ಮೇರುಪರ್ವತದಲ್ಲಿರತಕ್ಕ ಚತುರ್ಮುಖ ಬ್ರಹ್ಮನ ಮಂದಿರವನ್ನು ಆರಂಭಿಸಿಯೂ ಮತ್ತು ಜನಲೋಕವನ್ನಾರಂಭಿಸಿಯೂ (ಅಂದರೆ ಆ ಲೋಕಗಳಿಗಿಂತ) ಮೇಲಿನ ಲೋಕಗಳಲ್ಲಿರುವವರಿಗೆ ಯದ್ಯಪಿ ತಿರುಗಿ ಭೂಮಿಯಲ್ಲಿ ಹುಟ್ಟು ಸಾವುಗಳು ಬರುವುದಿಲ್ಲ ಆದರೂ ಈ ಎಲ್ಲಾ ಲೋಕಗಳಲ್ಲಿಯೂ ಇರುವ ಪರಮಾತ್ಮನನ್ನು ಹೊಂದಿ ಇರುವವರಿಗೇನೇ ಹುಟ್ಟು ಸಾವು ಇಲ್ಲದಿರುವುದು (ಕೇವಲ ಲೋಕ ಸಾಮರ್ಥ್ಯದಿಂದ ಹುಟ್ಟು ಸಾವುಗಳು ಇಲ್ಲವೆಂದಲ್ಲ) ॥ ೧೬ ॥

**ಪೀ**—ಬ್ರಹ್ಮಾದಿಗಳನ್ನು ಹೊಂದಿದವರಿಗೂ ತಿರುಗಿ ಉತ್ಪತ್ತಿಯಿಲ್ಲದಿರುವುದರಿಂದ **ಮಾಮುಪೇತ್ಯ** ಎಂದು ವಿಶಿಷ್ಯ ಹೇಳಿದ್ದು ಏತಕ್ಕೆಂದರೆ— **ಆಬ್ರಹ್ಮಭವನಾತ್** ಎಂಬುವುದರಿಂದ ಸಮಾಧಾನವನ್ನು ಹೇಳಿರುವರು. ಅದರಲ್ಲಿ ಅಜನಾನ್ನ ಜನಿರ್ಭುವಿ ಎಂಬುವ ಪ್ರಮಾಣದಿಂದ ಸತ್ಯಲೋಕದಶಿಯಿಂದ ಕೆಳಗಿನದ್ದಾದ ಜನಲೋಕಾದಿಗಳಲ್ಲಿದ್ದವರಿಗೂ ಹುಟ್ಟು ಸಾವುಗಳಿಲ್ಲದಿರುವುದರಿಂದ ಚತುರ್ಮುಖನ ಲೋಕವನ್ನಾರಂಭಿಸಿ ಇರುವ ಲೋಕಗಳಲ್ಲಿದ್ದವರಿಗೆ ಜನ್ಮಾದಿಗಳಿಲ್ಲವೆಂದದ್ದು ಹೇಗೆ? ಎಂಬುವ ಆಶಂಕೆಯನ್ನು ಸ್ಮೃತಿಯಿಂದಲೇ ಪರಿಹರಿಸುತ್ತಾರೆ—

**ಶಾ ॥ (೧) ನಿಯಮಾಜ್ಜನ್ಮನೋ ಭಾವೋ ಮುಕ್ತಸ್ಯೈವ ॥ (೨) ತಥಾಽಪಿ ತು । ಮಹ-**
**ರ್ಲೋಕಮತೀತಾನಾಂ ನ ಜನ್ಮಾಂತಲಯೌ ವಿನಾ ॥ (೩) ತತ್ರಾಪ್ಯವಶ್ಯಂ ತತ್ಸ್ಥಾ-**
**ನಂ ತೈಃ ಕ್ಷಿಪ್ರಂ ಪುನರಾಪ್ಯತ ಇತಿ ಪಾದ್ಮೇ ॥ ೧೭ ॥**

**ಅ ॥** ಲಿಂಗದೇಹಭಂಗವಾಗಿ ಪರಬ್ರಹ್ಮನನ್ನು ಹೊಂದಿದ ಮುಕ್ತನಿಗೇನೇ **ನ ಚ ಪುನರಾವರ್ತತೇ** ಎಂದು ಶಾಸ್ತ್ರದಲ್ಲಿ ಹೇಳಿದ ನಿಯಮಾನುಸಾರವಾಗಿ ಪುನರ್ಜನ್ಮ ನ ವಿದ್ಯತೇ ಎಂದು ಹೇಳಿದ ಪ್ರಕಾರ ಏಕಪ್ರಕಾರವಾಗಿ ಜನನಮರಣಗಳು ಇಲ್ಲದಿರುವುದು. (೨) ಆದರೂ ಮಹರ್ಲೋಕವನ್ನು ದಾಟಿ ಜನಾದಿಲೋಕಗಳಲ್ಲಿ ಆವಾಸಮಾಡುವವರಿಗೆ ಅಂಶದಿಂದ ಅವತಾರವಿದ್ದರೂ ಅಂಶವನ್ನು ಬಿಟ್ಟು ಸಂಪೂರ್ಣ ಅಂಶರೂಪದಿಂದ ಅವರು ಹುಟ್ಟುವುದಿಲ್ಲ ಪ್ರಲಯಾಂತದಲ್ಲಿ ಹುಟ್ಟಿದರೂ ಲಯವಾಗದೆ ಹುಟ್ಟುವುದಿಲ್ಲ. **ಪ್ರಲಯೋಪಕ್ರಮದಲ್ಲಿ ಮರಣವಿದ್ದರೂ ಲಯವಿಲ್ಲದೆ ಮೊದಲು ಮರಣವಿಲ್ಲ.** (ಅಂದರೆ ಮಹರ್ಲೋಕಕ್ಕಿಂತ ಮೇಲಿನ ಲೋಕಕ್ಕೆ ಹೋಗಿರುವ ಅಂತಿಗಳಾದ ವಾಯುಮೊದಲಾದ ದೇವತೆಗಳಿಗೆ ಪೀವಾದ್ಯಂಶಗಳಿಂದ ಭೂಮಿಯಲ್ಲಿ ಉತ್ಪತ್ತಿಯು. ಬ್ರಹ್ಮನ ಲಯಾಂತದಲ್ಲಿ ವಾಯುವು ಬ್ರಹ್ಮನಾಗಿಯೂ, ಭಾರತಿಯು ಸರಸ್ವತಿಯಾಗಿಯೂ, ರುದ್ರನು ಶೇಷನಾಗಿಯೂ, ಪಾರ್ವತಿಯು ವಾರುಣಿಯಾಗಿಯೂ ಹುಟ್ಟುತ್ತಾರೆ. ಪರ್ವರಿಗೂ ಲಯೋಪಕ್ರಮದಲ್ಲಿ ಮರಣವೂ ಇದೆ) (೩) ಅವರು ಅಂಶದಿಂದ ಅವತಾರ ಮಾಡಿದರೂ ತಿರುಗಿ ಶೀಘ್ರವಾಗಿ ಆಯಾವ ಅಂಶಿಯ ಸ್ಥಾನವನ್ನು ಹೊಂದಿ ಅಂಶಿರೂಪರೇ ಆಗುತ್ತಾರೆ, ಎಂದು ಪಾದ್ಮದಲ್ಲಿ ಹೇಳಿದೆ.

**ವಿ ॥** (1) ಮೇರುಪರ್ವತದಲ್ಲಿರತಕ್ಕ ಬ್ರಹ್ಮನ ಮನೆಗಿಂತ ಕೆಳಗಿನ ಲೋಕಗಳಲ್ಲಿರತಕ್ಕ ಜನರು ಪುನಃ ಭೂಮಿಗೆ ಬಂದು ಹುಟ್ಟುಸಾವುಗಳುಳ್ಳವರಾಗುತ್ತಾರೆ. (2) ಮೇರುಪರ್ವತದಲ್ಲಿರತಕ್ಕ ಚತು

ಮುಖನ ಮಂದಿರಕ್ಕಿಂತಲೂ ಜನೋಲೋಕಕ್ಕಿಂತಲೂ ಮೇಲಿನ ಲೋಕಗಳಲ್ಲಿದ್ದವರಿಗೆ ಹುಟ್ಟು ಸಾವುಗಳು ಇಲ್ಲದಿರಲಿಕ್ಕೆ ಆ ಲೋಕಗಳಲ್ಲಿರುವುದು ಮಾತ್ರ ಕಾರಣವಲ್ಲ. ಮತ್ತೆ ಅಲ್ಲಿದ್ದ ಭಗವದ್ರೂಪವನ್ನು ಹೊಂದಿರುವುದೇ ಜನನಾದಿಗಳು ಇಲ್ಲದಿರಲಿಕ್ಕೆ ಕಾರಣವು. (3) ಸರ್ವಥಾ ಜನನಾಭಾವವು ಮುಕ್ತನಿಗೆ ಮಾತ್ರ. ॥ ೧೬ ॥

ಗೀ ॥ ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋ ವಿದುಃ ।
ರಾತ್ರಿಂ ಯುಗಸಹಸ್ರಾಂತಾಂ ತೇಽಹೋರಾತ್ರವಿದೋ ಜನಾಃ ॥೧೭॥

ಅ ॥ (ಯಾವ ಜನರು) ಬ್ರಹ್ಮಣಃ ಯತ್ ಅಹಃ = ಪರಬ್ರಹ್ಮನ ಹಗಲನ್ನು, ಸಹಸ್ರಯುಗಪರ್ಯಂತಂ = ಬಹುಯುಗ ಪರ್ಯಂತವನ್ನಾಗಿ, (ಅಂದರೆ ಪರಬ್ರಹ್ಮನ *ದ್ವಿಪರಾರ್ಧಾತ್ಮಕವನ್ನಾಗಿ) ವಿದುಃ = ತಿಳಿಯುತ್ತಾರೋ, ರಾತ್ರಿಂ = (ಪರಬ್ರಹ್ಮನ) ರಾತ್ರಿಯನ್ನು, ಯುಗಸಹಸ್ರಾಂತಾಂ = ಬಹುಯುಗ ಪರ್ಯಂತವನ್ನಾಗಿ. (ಬ್ರಹ್ಮನದ್ವಿಪರಾರ್ಧಪರ್ಯಂತವಾದುದನ್ನಾಗಿಯೇ) ವಿದುಃ = ತಿಳಿಯುತ್ತಾರೋ, ತೇ ಜನಾಃ = ಆ ಜನರು, ಅಹೋರಾತ್ರವಿದಃ = ಶ್ರೀಪರಮಾತ್ಮನ ಹಗಲು ರಾತ್ರಿಗಳನ್ನು ತಿಳಿದವರು.

ವಿ ॥ ಪರಬ್ರಹ್ಮನು ನಿರ್ವಿಕಾರನೂ ನಿತ್ಯನೂ ಆದಾಗ್ಯೂ ಆತನ ಜಗತ್ತಿನ ಸೃಷ್ಟ್ಯಾದಿವ್ಯಾಪಾರಗಳು ನಡಿಯುತ್ತಿರುವಾಗ ಅಹಃ ಎಂದೂ ಸೃಷ್ಟ್ಯಾದಿಗಳು ನಡೆಯದಿರುವಾಗ ರಾತ್ರಿ ಎಂದೂ ಜನರು ಅನ್ನುತ್ತಾರೆ ॥ ೧೭ ॥

ಗೀ ॥ ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ ।
ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತಸಂಜ್ಞಕೇ ॥ ೧೮ ॥

ಅ ॥ ಅಹರಾಗಮೇ = ಪರಬ್ರಹ್ಮನಿಗೆ ಹಗಲು ಬರೋಣ (ಮಹಾ ಪ್ರಲಯದ ಅಂತ್ಯಕಾಲದಲ್ಲಿ) ಅವ್ಯಕ್ತಾತ್ = ಶ್ರೀಪರಮಾತ್ಮನ ದೆಸೆಯಿಂದ, ಸರ್ವಾಃ ವ್ಯಕ್ತಯಃ = ಗುಣವೈಷಮ್ಯ ಮೊದಲಾದ ಎಲ್ಲಾ ಕಾರ್ಯಪದಾರ್ಥಗಳು ಪ್ರಭವಂತಿ = ಹುಟ್ಟುತ್ತವೆ. ರಾತ್ರ್ಯಾಗಮೇ = ರಾತ್ರಿಯು ಬರೋಣ (ಪ್ರಲಯಕಾಲವು ಬರೋಣ) ಅವ್ಯಕ್ತಸಂಜ್ಞಕೇ = ತನ್ನ (ಶ್ರೀಪರಮಾತ್ಮನ) ಅನುಗ್ರಹವಿಲ್ಲದೆ ಯಾರಿಗೂ ಕಾಣಿಸಿಕೊಳ್ಳದಿರುವುದರಿಂದ ಅವ್ಯಕ್ತ ಎಂದು ಹೆಸರುಳ್ಳ, ತತ್ರೈವ = ಶ್ರೀಪರಮಾತ್ಮನಲ್ಲಿಯೇ, ಪ್ರಲೀಯಂತೇ = ಲಯ (ನಾಶ) ಹೊಂದುತ್ತವೆ. ॥ ೧೮ ॥

ಹೀ — ಮಹಾಮಹಿಮೆಯನ್ನು ತೋರಿಸುವುದಕ್ಕಾಗಿ ಸೃಷ್ಟಿ ಪ್ರಲಯಗಳಿಗೆ ವಿಚ್ಛೇದವಿಲ್ಲವೆನ್ನುತ್ತಾರೆ-

ಗೀ ॥ ಭೂತಗ್ರಾಮಃ ಸ ಏವಾಯಂ ಭೂತ್ವಾಭೂತ್ವಾ ಪ್ರಲೀಯತೇ ।
ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯ ॥

ಅ ॥ ಪಾರ್ಥ = ಅರ್ಜುನನೇ, ಸ ಏವಾಯಂ ಭೂತಗ್ರಾಮಃ = ಮೊದಲು ಉತ್ಪತ್ತಿ ನಾಶವುಳ್ಳವುಗಳೆಂದು ಹೇಳಲ್ಪಟ್ಟ ಚೇತನಾಚೇತನ ವಸ್ತುಗಳ ಸಮುದಾಯವು, ಅಹರಾಗಮೇ = ಪರಬ್ರಹ್ಮನಿಗೆ ಹಗಲು

* [illegible] (864000000) [illegible] (360) [illegible] (100) [illegible]

ಆಗುವಾಗ, (ಪ್ರಾಣಿನಿಕೃವೂ.) ಪ್ರಭವತಿ=ಹುಟ್ಟುತ್ತದೆ. ಭೂತ್ವಾಭೂತ್ವಾ=ಬ್ರಹ್ಮದೇವರ ಹಗಲಿನಲ್ಲಿ ಪ್ರಾಣಿನಿಕೃವೂ ಹುಟ್ಟಿ ಹುಟ್ಟಿ, ರಾತ್ರ್ಯಾಗಮೇ—ರಾತ್ರಿಯು ಬರುವಾಗ, ಅವಶಃ=ವಿಶೇಷತಃ ಪರಮಾತ್ಮನ ಅಧೀನವಾಗಿಯೇ, ಪ್ರಲೀಯತೇ=ನಾಶಹೊಂದುತ್ತದೆ. ಪುನಃ ಹಗಲು ಬರುವಾಗ ಹುಟ್ಟುತ್ತದೆ.॥ ೧೯ ॥

ಗೀ॥ ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।
ಯಃ ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦ ॥

ಅ॥ ಅವ್ಯಕ್ತಸ್ತು=ಅವ್ಯಕ್ತ ಶಬ್ದವಾಚ್ಯನಾದ ಶ್ರೀಪರಮಾತ್ಮನಾದರೂ, ತಸ್ಮಾತ್=ಉತ್ಪತ್ತಿನಾಶಗಳಿಂದ ಯುಕ್ತವಾದ, ವ್ಯಕ್ತಾತ್=ಚೇತನಾಚೇತನಗಳ ಸಮುದಾಯಕ್ಕಿಂತ, ಅನ್ಯಃ=ವಿಲಕ್ಷಣನು, ಭಾವಃ=ಸರ್ವಸ್ವತಂತ್ರನು ಪರಃ=ಸರ್ವೋತ್ತಮನು, ಸನಾತನಃ=ಅನಾದಿಯು, ಯಃ ಸಃ=ಇಂತಹ ಶ್ರೀಪರಮಾತ್ಮನು, ಸರ್ವೇಷು ಭೂತೇಷು=ಎಲ್ಲಾ ಚೇತನಾಚೇತನ ವಸ್ತುಗಳು, ನಶ್ಯತ್ಸು=ನಾಶಹೊಂದಿದರೂ, ನ ವಿನಶ್ಯತಿ=ನಾಶಹೊಂದುವುದಿಲ್ಲ. ॥ ೨೦ ॥

ಪೀ—ಉತ್ತರ ಪ್ರಕರಣಕ್ಕೆ ಸಂಗತಿಯನ್ನು ಹೇಳುತ್ತಾರೆ—

ಭಾ॥ (೧) ಮಾಂ ಪ್ರಾಪ್ಯ ನ ಪುನರಾವೃತ್ತಿರಿತಿ ಸ್ಥಾಪಯಿತುಮವ್ಯಕ್ತಾಖ್ಯಾತ್ಮಸಾಮರ್ಥ್ಯಂ ದರ್ಶಯಿತುಂ ಪ್ರಲಯಾದಿ ದರ್ಶಯತಿ (೨) ಸಹಸ್ರಯುಗೇತ್ಯಾದಿನಾ ॥ ಸಹಸ್ರಶಬ್ದೋಽತ್ರಾನೇಕವಾಚೀ । ಬ್ರಹ್ಮಪರಂ ॥ (೩) ಸಾ ವಿಶ್ವರೂಪಸ್ಯ ರಜನೀತಿ ಶ್ರುತೇಃ । ದ್ವಿಪರಾರ್ಧಪ್ರಲಯ ಏವಾತ್ರ ವಿವಕ್ಷಿತಃ । ಅವ್ಯಕ್ತಾದ್ವ್ಯಕ್ತಯಃ ಸರ್ವಾ ಇತ್ಯುಕ್ತೇಃ ॥ (೪) ಉಕ್ತಂ ಚ ಮಹಾಕೌರ್ಮೇ । ಅನೇಕಯುಗಪರ್ಯಂತಮಹರ್ವಿಷ್ಣೋಸ್ತಥಾ ನಿಶಾ । ರಾತ್ರ್ಯಾದೌ ಲೀಯತೇ ಸರ್ವಮಹರಾದೌ ಚ ಜಾಯತ ಇತಿ ॥ (೫) ಯಃ ಸರ್ವೇಷು ಭೂತೇಷ್ವಿತಿ ವಾಕ್ಯಶೇಷಾಚ್ಚ ॥ ೧೭,೧೮,೧೯,೨೦ ॥

ಅ॥ (೧) ನನ್ನನ್ನು ಹೊಂದಿ ಇರುವವರಿಗೆ ಪುನರಾವೃತ್ತಿಯಿಲ್ಲ (ಅಂದರೆ ಜನನ ಮರಣಗಳು ಇಲ್ಲ.) ಎಂಬುವುದನ್ನು ದೃಢಪಡಿಸುವುದಕ್ಕಾಗಿ ಅವ್ಯಕ್ತ ಎಂದು ಹೆಸರುಳ್ಳ, ತನ್ನ ಸಾಮರ್ಥ್ಯವನ್ನು ತೋರಿಸುತ್ತಾ ತನ್ನಿಂದಲೇ ಪ್ರಲಯ ಸೃಷ್ಟಿ ಮೊದಲಾದುವುಗಳು ಆಗುತ್ತವೆಂಬುವುದನ್ನು ಸಹಸ್ರಯುಗ ಇತ್ಯಾದಿಗಳಿಂದ ತೋರಿಸುತ್ತಾರೆ. (೨) ಸಹಸ್ರಯುಗ ಎಂಬುವ ಈ ಶ್ಲೋಕದಲ್ಲಿದ್ದ ಸಹಸ್ರ ಶಬ್ದವು ಪ್ರಸಿದ್ಧ ಸಹಸ್ರ ಸಂಖ್ಯಾವಾಚಕವಲ್ಲ, ಎಂಬುವ ಅಭಿಪ್ರಾಯದಿಂದ ಸಹಸ್ರಶಬ್ದವು ಇಲ್ಲಿ ಬಹು ಎಂಬುವ ಅರ್ಥವನ್ನು ಹೇಳುತ್ತದೆ. ಇಲ್ಲಿದ್ದ ಬ್ರಹ್ಮಶಬ್ದಕ್ಕೆ ಚತುರ್ಮುಖ ಬ್ರಹ್ಮನೆಂದು ಅರ್ಥವಲ್ಲ. ಮತ್ತೆ ಪರಬ್ರಹ್ಮನೆಂದು ಅರ್ಥವು. (೩) (ಪರಬ್ರಹ್ಮನು ನಿತ್ಯನಾದುದರಿಂದ ಆತನಿಗೆ ಹಗಲು ರಾತ್ರಿಗಳೇ ಇಲ್ಲದಕಾರಣ ಪರಬ್ರಹ್ಮನನ್ನು ಇಟ್ಟುಕೊಳ್ಳುವುದು ಹೇಗೆಂದರೆ—) ಗುಣಪರಿಪೂರ್ಣನಾದ ಶ್ರೀಪರಮಾತ್ಮನಿಗೆ ಪ್ರಲಯಕಾಲದಲ್ಲಿರುವ ನಿವ್ಯಾಪಾರಾವಸ್ಥೆಯು ರಾತ್ರಿ ಎನಿಸಿಕೊಳ್ಳುತ್ತದೆ. (ಹೀಗೆ ಸೃಷ್ಟಿಕಾಲದಲ್ಲಿರುವ ಸೃಷ್ಟ್ಯಾದಿವ್ಯಾಪಾರಾವಸ್ಥೆಯು ಅಹಃ ಎನಿಸುತ್ತದೆ.) ಇಲ್ಲಿ ಹೇಳಿದ ಪ್ರಲಯವು ಬ್ರಹ್ಮನ ದೈನಂದಿನ ಪ್ರಲಯವಲ್ಲ ಮತ್ತೆ ದ್ವಿಪರಾರ್ಧ ಪ್ರಲಯವೇ, (ಅಂದರೆ ಚತುರ್ಮುಖ ಬ್ರಹ್ಮನಿಗೆ 100 ವರ್ಷವಾದ ಮೇಲೆ ಆಗುವ ಮಹಾಪ್ರಲಯವೇ ವಿವಕ್ಷಿತವು) (ಹೀಗೆ ಸೃಷ್ಟಿಯೂ ಆದಿಸೃಷ್ಟಿಯೆಂದೇ ಇಟ್ಟುಕೊಳ್ಳಬೇಕು.) ಏಕೆಂದರೆ—ಅವ್ಯಕ್ತನೆನಿಸಿದ ಶ್ರೀಪರಮಾತ್ಮನಿಂದ ಆದಿಸೃಷ್ಟಿಯಲ್ಲಿ ಎಲ್ಲಾ ಗುಣ

ವ್ಯಕ್ತಮ್ಯಾದಿ ಪದಾರ್ಥಗಳೂ ಹುಟ್ಟುತ್ತವೆಂದು ಹೇಳಿರುತ್ತಾರೆ (೪) ಈ ವಿಷಯವು ಮಹಾಕೌರ್ಮ ಪುರಾಣದಲ್ಲಿ ಉಕ್ತವಾಗಿದೆ. ಬಹುಯುಗಪರ್ಯಂತವಾಗಿ ಪರಮಾತ್ಮನ ನಿದ್ರ್ಯಾವಸ್ಥೆಯು ರಾತ್ರಿ ಎನಿಸಿಕೊಳ್ಳುತ್ತದೆ. ರಾತ್ರಿಯ ಆದಿಯಲ್ಲಿ ಎಲ್ಲವೂ ನಾಶಹೊಂದುತ್ತದೆ. ಹಗಲಿನ ಆದಿಯಲ್ಲಿ ಎಲ್ಲವೂ ಹುಟ್ಟುತ್ತದೆ. (೫) ಮತ್ತು ಪಂಚಮಹಾಭೂತಗಳು ನಾಶಹೊಂದಿದರೂ ಯಾವ ಶ್ರೀಪರಮಾತ್ಮನು ನಾಶ ಹೊಂದುವುದಿಲ್ಲವೆಂಬುವ ವಾಕ್ಯದಿಂದಲೂ ಶ್ರೀಪರಮಾತ್ಮನಿಗೆ ನಾಶವಿಲ್ಲವೆಂದು ಸಿದ್ಧವಾಗುತ್ತದೆ.

ವಿ ॥ ಬ್ರಹ್ಮಾಂಡಕ್ಕೆ ಆವರಣಭೂತಗಳಾದ ಪೃಥಿವೀ ಮೊದಲಾದ ಪಂಚಮಹಾಭೂತಗಳು ನಾಶ ಹೊಂದಿದ ಮೇಲೆ ಅಹಂಕಾರತತ್ತ್ವಕ್ಕೆ ನಾಶವು. ಆ ಮೇಲೆ ಚತುರ್ಮುಖಬ್ರಹ್ಮನಿಗೆ ಶರೀರಭೂತವಾದ ಮಹತ್ತತ್ತ್ವವೂ ನಾಶಹೊಂದುತ್ತದೆ. ಅಂತೂ ಪ್ರಲಯಕಾಲದಲ್ಲಿ ಚತುರ್ಮುಖನ ದೇಹಕ್ಕೆ ನಾಶವಾಗುತ್ತದೆ. ಆದಕಾರಣ ಚತುರ್ಮುಖನಿಗೆ ಶ್ರೀಪರಮಾತ್ಮನಂತೆ ಪ್ರಲಯಕಾಲದಲ್ಲಿ ನಾಶವಿಲ್ಲವೆಂದಲ್ಲ.
॥ ೧೭, ೧೮, ೧೯, ೨೦ ॥

**ಗೀ ॥ ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಂ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೨೧ ॥**

ಅ ॥ ಅವ್ಯಕ್ತಃ=ಶ್ರೀಪರಮಾತ್ಮನು, ಅಕ್ಷರಃ ಇತ್ಯುಕ್ತಃ=ಸರ್ವಾತ್ಮನಾ ನಾಶವಿಲ್ಲದಿರುವುದರಿಂದಲೇ ಅಕ್ಷರನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ. (ಆದುದರಿಂದ) ತಂ=ಅಂತಹ ಶ್ರೀಪರಮಾತ್ಮನನ್ನು, ಪರಮಾಂ ಗತಿಂ=ತಸ್ಮಾದಕ್ಷರಂ ಎಂಬುವ ವೇದಾದಿಗಳಲ್ಲಿ ಮುಖ್ಯ ಪ್ರಾಪ್ಯನನ್ನಾಗಿ ಆಹುಃ=ಹೇಳುತ್ತಾರೆ. ಯಂ=ಯಾವ ಪರಬ್ರಹ್ಮಸ್ವರೂಪವನ್ನು, ಪ್ರಾಪ್ಯ=ಹೊಂದಿ, ನ ನಿವರ್ತಂತೇ=ಹಿಂತಿರುಗುವುದಿಲ್ಲವೋ, ತತ್=ಅದು, ಮಮ=ನನ್ನ, ಪರಮಂ ಧಾಮ=ಮುಖ್ಯ ಸ್ವರೂಪವು. ॥ ೨೧ ॥

**ಭಾ ॥ (೧) ಅವ್ಯಕ್ತೋ ಭಗವಾನ್ । ಯಂ ಪ್ರಾಪ್ಯ ನ ನಿವರ್ತಂತ ಇತಿ ಮಾಮುಪೇತ್ಯೇತ್ಯುಕ್ತಸ್ಯ ಪರಾಮರ್ಶಾತ್ । ಅವ್ಯಕ್ತಂ ಪರಮಂ ವಿಷ್ಣುಮಿತಿ ಪ್ರಯೋಗಾಚ್ಚ ಗಾರುಡೇ ॥ (೨) ಧಾಮ ಸ್ವರೂಪಂ । ತೇಜಃ ಸ್ವರೂಪಂ ಚ ಗೃಹಂ ಪ್ರಾಜ್ಞೈರ್ಧಾಮೇತಿ ಗೀಯತ ಇತ್ಯಭಿಧಾನಾತ್ ॥ ೨೧ ॥**

ಅ ॥ (೧) ಅವ್ಯಕ್ತಃ=ಶ್ರೀಪರಮಾತ್ಮನು. ಮಾಮುಪೇತ್ಯ ಎಂದು ಹೇಳಿದ ಅರ್ಥವನ್ನು ಯಂ ಪ್ರಾಪ್ಯ ನ ನಿವರ್ತಂತೇ ಎಂದು ಅವ್ಯಕ್ತವಿಷಯವಾಗಿ ಪರಾಮರ್ಶ ಮಾಡಿದ್ದಾರೆ. ಮತ್ತು ಸರ್ವೋತ್ತಮನಾದ ಶ್ರೀವಿಷ್ಣುವನ್ನು ಅವ್ಯಕ್ತಶಬ್ದವಾಚ್ಯನನ್ನಾಗಿ ಹೇಳುತ್ತಾರೆ, ಎಂದು ಗಾರುಡದಲ್ಲಿ ಅವ್ಯಕ್ತಶಬ್ದವನ್ನು ವಿಷ್ಣುವಿನಲ್ಲಿ ಪ್ರಯೋಗಿಸಿರುವರು. (೨) ಪ್ರಾಜ್ಞರು ಧಾಮ ಶಬ್ದಕ್ಕೆ ತೇಜಸ್ಸು, ಸ್ವರೂಪವು, ಮನೆಯು, ಇವು ಅರ್ಥಗಳೆಂದು, ಎಂದು ಹೇಳುತ್ತಾರೆ. ಎಂದು ಶಬ್ದಶಕ್ತಿಗ್ರಾಹಕವಾದ ಪ್ರಮಾಣದಿಂದ ಧಾಮ ಶಬ್ದಕ್ಕೆ ಸ್ವರೂಪವೆಂದರ್ಥವು. ॥ [illegible] ॥

ಟೀ—ಮೋಕ್ಷಸಾಧನಗಳ ಮಧ್ಯದಲ್ಲಿ ಭಕ್ತಿಯು ಮುಖ್ಯಸಾಧನವೆನ್ನುತ್ತಾರೆ—

**ಗೀ ॥ ಪುರುಷಃ ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಂ ॥ ೨೨ ॥**

ಅ ॥ ಪಾರ್ಥ=ಅರ್ಜುನನೇ, ಭೂತಾನಿ=ಜೇತನಾಜೇತನ ಎಲ್ಲಾ ವಸ್ತುಗಳೂ, ಯಸ್ಯ=ಯಾವ ಶ್ರೀಪರಮಾತ್ಮನ, ಅಂತಃಸ್ಥಾನಿ=ಒಳಗೆ ಇರುತ್ತವೋ, ಸರ್ವಮಿದಂ=ಈ ಸಂಪೂರ್ಣ ಜಗತ್ತೂ, ಯೇನ= ಯಾರಿಂದ, ತತಂ=ವ್ಯಾಪ್ತವಾಗಿದೆಯೋ, ಸ ಪರಃ=ಆ ಸರ್ವೋತ್ತಮನಾದ ಪುರುಷಃ=ಗುಣಪೂರ್ಣನಾದ ಶ್ರೀಪರಮಾತ್ಮನು, ಅನನ್ಯಯಾ=ಇತರಾಸಾಧಾರಣವಾದ, ಭಕ್ತ್ಯಾ ತು=ಭಕ್ತಿಯಿಂದಲೇ, ಲಭ್ಯಃ= ಹೊಂದಲ್ಪಡತಕ್ಕವನು. ॥ ೨೨ ॥

ಭಾ ॥ ಪರಮಸಾಧನಮಾಹ । ಪುರುಷ ಇತಿ ॥ ೨೨ ॥

ಅ ॥ ಮೋಕ್ಷಸಾಧನಗಳ ಮಧ್ಯದಲ್ಲಿ ಭಕ್ತಿಯು ಮುಖ್ಯಸಾಧನವೆಂದು ಪುರುಷಃ ಎಂಬುವ ಶ್ಲೋಕದಿಂದ ಹೇಳುತ್ತಾರೆ. ॥ ೨೨ ॥

ಟೀ—ಶ್ರೀಪರಮಾತ್ಮನನ್ನು ಹೊಂದಿದರೇನೇ ಪುನರಾವೃತ್ತಿಯಿಲ್ಲದಿರುವುದು, ಎಂದು ಹೇಳಿದ್ದನ್ನು ದೃಢಪಡಿಸುವುದಕ್ಕಾಗಿ ಶ್ರೀಪರಮಾತ್ಮನೇ ಸೃಷ್ಟಿ ಪ್ರಲಯಾದಿ ಕರ್ತನೆಂದು ಸಹಸ್ರ ಎಂಬುವ ಶ್ಲೋಕದಿಂದ ಹೇಳುತ್ತಾರೆ. ಆ ಶ್ಲೋಕದಲ್ಲಿದ್ದ ಸಹಸ್ರ ಎಂಬುವ ಪದವು ಸಹಸ್ರಸೂರರನ್ನು ಹೇಳುತ್ತದೆಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ಟಾ ॥ (೧) ಸಹಸ್ರಮಿತಿ ಬಹ್ವೇವ । ಬ್ರಹ್ಮಣಃ ಪರಬ್ರಹ್ಮಣಃ । ಅವ್ಯಕ್ತಾದ್ವ್ಯಕ್ತಯಃ ಸರ್ವಾಃ ಪ್ರಭವಂತ್ಯಹರಾಗಮೇ । ರಾತ್ರ್ಯಾಗಮೇ ಪ್ರಲೀಯಂತೇ ತತ್ರೈವಾವ್ಯಕ್ತ-ಸಂಜ್ಞಕೆ ಇತಿ ವಾಕ್ಯಶೇಷಾತ್ ॥ (೨) ನ ಹಿ ವಿರಿಂಚಾಹನ್ಯೇವ ಸರ್ವವ್ಯಕ್ತ-(ಕ್ತ)ಲಯಃ ॥ (೩) ನಿತ್ಯಸ್ಯಾಪಿ ಹರೇಃ ಕಾಲೋ ದ್ವಿಪರಾರ್ಧಾತ್ಮಕಸ್ತ್ವಯಂ । ಅಹಸ್ತ್ವಾಸೌ ನಿಮೇಷಶ್ಚೇತ್ಯಪ್ರವೃತ್ತ್ಯೋಪಚರ್ಯತ ಇತಿ ಚ ॥ ೧೭,೨೨ ॥

ಅ ॥ (೧) ಸಹಸ್ರ ಎಂಬುವ ಪದಕ್ಕೆ ಬಹು ಎಂದೇ ಅರ್ಥವು. (ಚತುರ್ಯುಗಸಹಸ್ರಾಣಿ ಬ್ರಹ್ಮಣೋ ದಿನಮುಚ್ಯತೇ ಇತ್ಯಾದಿಗಳಲ್ಲಿ ನಾಲ್ಕು ಸಹಸ್ರಯುಗಗಳು ಚತುರ್ಮುಖನ ದಿನವೆಂದು ಹೇಳಿದ್ದರಿಂದ ಸಹಸ್ರಪದಕ್ಕೆ ಬಹು (ಅದಕ್ಕಿಂತಲೂ ಹೆಚ್ಚು) ಎಂಬುವ ಅರ್ಥವು ಹೇಗೆ ಆಗುವುದು ಎಂದರೆ—) ಅವ್ಯಕ್ತಾದ್ವ್ಯಕ್ತಯಃ ಎಂಬುವ ವಾಕ್ಯಶೇಷದಿಂದ ಬ್ರಹ್ಮಣಃ ಎಂಬುವುದಕ್ಕೆ ಪರಬ್ರಹ್ಮನ ಎಂದರ್ಥವು (ಅಂದರೆ ಇಲ್ಲಿ ಚತುರ್ಮುಖ ಬ್ರಹ್ಮನ ಅಹೋರಾತ್ರವನ್ನು ಹೇಳುವುದಲ್ಲ ಮತ್ತೆ ಪರಬ್ರಹ್ಮನ ದ್ವಿಪರಾರ್ಧಾತ್ಮಕವಾದ ಅಹೋರಾತ್ರವು) (ಇಲ್ಲಿ ಬ್ರಹ್ಮಪದದಿಂದ ಪರಬ್ರಹ್ಮನನ್ನು ಇಟ್ಟುಕೊಳ್ಳದೆ, ಚತುರ್ಮುಖ ಬ್ರಹ್ಮನ ಅಹೋರಾತ್ರವೆಂದು ಇಟ್ಟುಕೊಂಡರೆ ಅವ್ಯಕ್ತಾದ್ವ್ಯಕ್ತಯಃ ಎಂಬುವ ಪ್ರಮಾಣವಿರೋಧವು ಬರುವುದು.) (೨) (ಅವ್ಯಕ್ತಾತ್ ಎಂಬುವ ವಾಕ್ಯವಿದ್ದರೂ ಚತುರ್ಮುಖನ ಅಹೋರಾತ್ರವೆಂದು ಏಕೆ ಅರ್ಥಮಾಡಕೂಡದೆಂದರೆ—) ಚತುರ್ಮುಖ ಬ್ರಹ್ಮನ ಹಗಲಿನ ಅವಸಾನದಲ್ಲಿಯೇ ಸಮಸ್ತವಸ್ತುಗಳಿಗೆ ಲಯವಾಗುವುದಿಲ್ಲವಷ್ಟೇ. (ಹೀಗೆಯೇ ಚತುರ್ಮುಖನಿಗೆ ಹಗಲು ಆಗುವಾಗ ಸಮಸ್ತ ವಸ್ತುಗಳು ಹುಟ್ಟುವುದೂ ಇಲ್ಲವಷ್ಟೆ) (೩) (ಶ್ರೀಪರಮಾತ್ಮನಿಗೆ ಕಾಲತ್ರಯಾತ್ತ ವಿಕಾರವಿಲ್ಲದಿರುವುದರಿಂದಲೂ ಮತ್ತು ಪರನಾಮನಿಮೇಷಕಾಂತೇ ಇತ್ಯಾದಿಗಳಲ್ಲಿ ದ್ವಿಪರಾರ್ಧಾತ್ಮಕ ಕಾಲವನ್ನು ನಿಮೇಷವೆಂದು ಹೇಳಿದ್ದರಿಂದಲೂ, ಅದು ಅಹೋರಾತ್ರರೂಪಕಾಲವು ಹೇಗೆ ಆಗುವುದು, ಎಂಬುವ ಆಕಾಂಕ್ಷೆಯನ್ನು ಸ್ಮೃತಿಯಿಂದಲೇ ಪರಿಹರಿಸುತ್ತಾರೆ.) ಶ್ರೀಪರಮಾತ್ಮನು ನಿರ್ವಿಕಾರನಾಗಿ ಯಾವಾ

ಗಲೂ ಒಂದೇ ಪ್ರಕಾರವಿರುವವನಾದರೂ ದ್ವಿಪರಾರ್ಧಾತ್ಮಕವಾದ ಕಾಲವು ಅತನ ಹಗಲು ನಿಮಿಷ ವೆಂದೂ ಪ್ರವೃತ್ತಿಯಿಲ್ಲದಿರುವುದರಿಂದ ಅಮುಖ್ಯವಾಗಿ ಹೇಳಲ್ಪಡುತ್ತದೆ.

ವಿ ॥ ರಾತ್ರಿಯಲ್ಲಿ ಹೇಗೋ ಹಾಗೆಯೇ ಪ್ರಲಯಕಾಲದಲ್ಲಿ ವಿಶೇಷವಾಗಿ ಸೃಷ್ಟ್ಯಾದಿ ವ್ಯಾಪಾರ ವಿಷಯದಲ್ಲಿ ಪ್ರವೃತ್ತಿಯಿಲ್ಲದಿರುವುದರಿಂದಲೂ, ಹಗಲಿನಲ್ಲಿದ್ದಂತೆಯೇ ಇತರ ಕಾಲದಲ್ಲಿ ಪ್ರವೃತ್ತಿಯಿದ್ದುದ ರಿಂದಲೂ ಪ್ರಲಯಾದಿಕಾಲವು ರಾತ್ರಿ ಮೊದಲಾದ ರೂಪದಿಂದ ಹೇಳಲ್ಪಡುತ್ತದೆ. ॥ ೧೭—೨೦ ॥

ಟೀ—ಯಾವ ದೇವತಾಧಿಷ್ಠಿತವಾದ ಮಾರ್ಗದಲ್ಲಿ ಹೋದವರಿಗೆ ಅಪುನರಾವೃತ್ತಿ ಪುನರಾವೃತ್ತಿ ಗಳಾಗುತ್ತವೋ, ಅಂತಹ ದೇವತೆಗಳನ್ನು ಹೇಳುತ್ತಾರೆ—

**ಗೀ ॥ ಯತ್ರ ಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾಂತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥ ೨೩ ॥**

ಅ ॥ ಭರತರ್ಷಭ—ಅರ್ಜುನನೇ, ಯತ್ರ ಕಾಲೇ—ಯಾವ ಕಾಲಾಭಿಮಾನಿಗಳಾದ ದೇವತೆಗ ಳಿಂದ ನಿಯಮ್ಯವಾದ ಮಾರ್ಗದಲ್ಲಿ, ಮತ್ತು ಕಾಲಾನಭಿಮಾನಿಯಾದ ದೇವತಾಧಿಷ್ಠಿತ ಮಾರ್ಗದಲ್ಲಿ, ಪ್ರಯಾತಾಃ—ದೇಹ ಬಿಟ್ಟು ಹೋಗಿರುವ, ಯೋಗಿನಃ—ಯೋಗಿಗಳು, ಅನಾವೃತ್ತಿಂ—ಹಿಂತಿರುಗಿ ಈ ಲೋಕಕ್ಕೆ ಬಾರದಿರುವಿಕೆಯನ್ನೂ, ಮತ್ತು ಆವೃತ್ತಿಂ ಚೈವ—ಹಿಂತಿರುಗಿ ಪುನಃ ಈ ಲೋಕಕ್ಕೆ ಬರುವಿಕೆ ಯನ್ನೂ, ಯಾಂತಿ ಏವ—ಹೊಂದಿಯೇ ಹೊಂದುತ್ತಾರೋ, ಭರತರ್ಷಭ—ಭರತಕುಲದಲ್ಲಿ ಶ್ರೇಷ್ಠನಾದ ಅರ್ಜುನನೇ, ತಂ ಕಾಲಂ—ಅಂತಹ ಕಾಲಕ್ಕೆ ಅಭಿಮಾನಿಗಳಾದ ದೇವತೆಗಳನ್ನೂ, ಕಾಲಕ್ಕೆ ಅಭಿಮಾನಿ ಗಳಾಗದ ದೇವತೆಗಳನ್ನೂ, ವಕ್ಷ್ಯಾಮಿ—ಹೇಳುವೆನು. ॥ ೨೩ ॥

ಟೀ—ಯಾವ ಕಾಲದಲ್ಲಿ ಮೃತರಾದವರು, ಆವೃತ್ತ್ಯನಾವೃತ್ತಿಗಳನ್ನು (ಅಂದರೆ ಮೇಲಿನ ಲೋಕ ಗಳಿಗೆ ಹೋದವರು ಹಿಂತಿರುಗಿ ಬರುವುದು, ಬಾರದಿರುವುದು ಇವುಗಳನ್ನು) ಹೊಂದುತ್ತಾರೋ, ಆ ಕಾಲ ವನ್ನು ಪ್ರತಿಪಾದಿಸುವುದಕ್ಕಾಗಿ ಮೇಲಿನ ಗ್ರಂಥವು ಎಂಬ ಅನ್ಯಥಾಪ್ರತೀತಿಯನ್ನು ಹೋಗಲಾಡಿಸು ತ್ತಾರೆ—

**ಭಾ ॥ (೧) ಯತ್ಕಾಲಾದ್ಯಭಿಮಾನಿದೇವತಾ ಗತಾ ಆವೃತ್ತ್ಯನಾವೃತ್ತೀ ಗಚ್ಛಂತಿ ತಾ ಆಹ। ಯತ್ರೇತ್ಯಾದಿನಾ । (೨) ಕಾಲ ಇತ್ಯುಪಲಕ್ಷಣಂ । ಅಗ್ನ್ಯಾದೇರಪಿ ವಕ್ಷ್ಯಮಾಣ- ತ್ವಾತ್ ॥ ೨೩ ॥**

ಅ ॥ (೧) ಕಾಲಾದಿಗಳಿಗೆ ಅಭಿಮಾನಿಗಳಾದ ಯಾವ ದೇವತೆಗಳಿಂದಲೂ, ಅಭಿಮಾನಿಗಳಾಗದ ದೇವತೆಗಳಿಂದಲೂ ಅಧಿಷ್ಠಿತವಾದ ಮಾರ್ಗಗಳಿಂದ ಹೋದವರು ಆವೃತ್ತ್ಯನಾವೃತ್ತಿಗಳನ್ನು ಹೊಂದು ತ್ತಾರೋ, ಅಂತಹ ಎರಡುವಿಧ ಮಾರ್ಗಾಭಿಮಾನಿ ದೇವತೆಗಳನ್ನು ಯತ್ರ ಎಂಬುವ ಶ್ಲೋಕದಿಂದ ಹೇಳು ತ್ತಾರೆ. (೨) ಮಾರ್ಗಾಭಿಮಾನಿ ದೇವತೆಗಳಾದ ಅಗ್ನಿಜ್ಯೋತಿರ್ಧೂಮರೆಂಬುವ ಕಾಲಾನಭಿಮಾನಿ ದೇವತೆಗಳನ್ನು ಮುಂದೆ ಹೇಳುವುದರಿಂದ ಕಾಲ ಎಂಬುವ ಶಬ್ದದಿಂದ ಕಾಲಾಭಿಮಾನಿ ದೇವತೆಗಳನ್ನೂ ಕಾಲಾನಭಿಮಾನಿ ದೇವತೆಗಳನ್ನೂ ತಿಳಿದುಕೊಳ್ಳಬೇಕು. ॥ ೨೩ ॥

ಟೀ—ಶ್ರೀಹರಿಯನ್ನು ಹೊಂದಿದವರಿಗೆ ಪುನರಾವೃತ್ತಿಯಿಲ್ಲ. ಶ್ರೀಹರಿಯನ್ನು ಹೊಂದದೆ ಇತರ ದೇವತೆಗಳನ್ನು ಹೊಂದಿದವರಿಗೆ ಪುನರಾವೃತ್ತಿಯುಂಟೆಂದು ಹೇಳಿದೆ. ಅದರಲ್ಲಿ ಪುನರಾವೃತ್ತಿಯು

ವರೂ, ಪುನರಾವೃತ್ತಿಯಿಲ್ಲದವರೂ ಯಾವ ಮಾರ್ಗದಿಂದ ಹೋಗುತ್ತಾರೆಂದರೆ ಯತ್ರ ಎಂಬುವ ಶ್ಲೋಕದಿಂದ ಸಮಾಧಾನ ಹೇಳುತ್ತಾರೆ. ಯಾವ ಕಾಲದಲ್ಲಿ ಮರಣ ಹೊಂದಿದವರು ಹಿಂತಿರುಗದೆ ಅಲ್ಲಿಯೇ ಇರುತ್ತಾರೋ, ಯಾವ ಕಾಲದಲ್ಲಿ ಮೃತರಾದವರು ಪುನರಾವೃತ್ತಿಯನ್ನು ಹೊಂದುತ್ತಾರೋ, ಅಂತಹ ಕಾಲವನ್ನು ಹೇಳುತ್ತೇನೆಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

**ತಾ ॥ (೧) ಯತ್ರ ಕಾಲಾಭಿಮಾನಿದೇವತಾಸು ಮೃತ್ಯನಂತರಂ ಪ್ರಯಾತಾಃ ॥ (೨) ಅಗ್ನಿಜ್ಯೋತಿರ್ಧೂಮಾನಾಮಕಾಲಾಭಿಮಾನಿತ್ವೇಽಪಿ ಕಾಲಪ್ರಾಚುರ್ಯಾತ್ಕಾಲ ಇತ್ಯುಚ್ಯತೇ ॥ (೩) ಅಗ್ನಿರ್ಜ್ಯೋತಿರಿತಿ ದ್ವೇಧಾ ವಹ್ನೇಃ ಪುತ್ರೋ ವ್ಯವಸ್ಥಿತಃ । ತಂ ಪ್ರಾಪ್ಯ ಯಾತಿ ಬ್ರಹ್ಮಿಷ್ಠೋ ದಿವಸಾದ್ಯಭಿಮಾನಿನ ಇತಿ ಸತ್ತತ್ತ್ವೇ ॥ (೪) ತತ್ಕಾಲಮರಣವಿವಕ್ಷಾಯಾಮಗ್ನಿಜ್ಯೋತಿರ್ಧೂಮಾನಾಮಯೋಗಃ ॥ ೧ ॥**

ಅ ॥ (೧) ಮರಣ (ದೇಹವಿಯೋಗ)ವಾದ ಮೇಲೆ ಯಾವ ಕಾಲಾಭಿಮಾನಿಗಳಾದ ದೇವತೆಗಳಿಂದ ನಿಯಮ್ಯ ಮಾರ್ಗಗಳಲ್ಲಿ ಹೋದವರು. (೨) ಪ್ರಾಪ್ಯರೆಂದು ಹೇಳಲ್ಪಡತಕ್ಕ ಅಗ್ನಿಃ ಜ್ಯೋತಿಃ ಧೂಮರು ಕಾಲಕ್ಕೆ ಅಭಿಮಾನಿಗಳಾಗದಿದ್ದರೂ ಕಾಲಕ್ಕೆ ಪ್ರಾಚುರ್ಯವಿದ್ದುದರಿಂದ ಅವರು ಕಾಲವೆಂದು ಹೇಳಲ್ಪಡುತ್ತಾರೆ. (ಅಂದರೆ ಮಾರ್ಗದಲ್ಲಿ ಪ್ರಾಪ್ಯರೆಂದು ಹೇಳಲ್ಪಡುವ ದೇವತೆಗಳಲ್ಲಿ ಕಾಲಾಭಿಮಾನಿ ದೇವತೆಗಳು ಹೆಚ್ಚು ಇದ್ದ ಪ್ರಯುಕ್ತ ಕಾಲಪದದಿಂದ ಕಾಲಾಭಿಮಾನಿಗಳಾಗದೆ ಇದ್ದ ಮಾರ್ಗಕ್ಕೆ ಅಭಿಮಾನಿಗಳಾದ ಅಗ್ನ್ಯಾದಿಗಳನ್ನು ಇಟ್ಟುಕೊಳ್ಳಬೇಕು. ಅಂದರೆ ಮರಣಾನಂತರದಲ್ಲಿ ಪ್ರಾಪ್ಯರಾದ ದೇವತೆಗಳಲ್ಲಿ ಕಾಲಾನಭಿಮಾನಿ ದೇವತೆಗಳಿಂದಲೂ, ಕಾಲಾಭಿಮಾನಿ ದೇವತೆಗಳು ಬಹಳ ಇರುವುದರಿಂದ ಗೀತಾದಲ್ಲಿ **ಕಾಲ** ಎಂಬುವ ಪದದಿಂದ ಕಾಲಾಭಿಮಾನಿಗಳನ್ನು ಅಂಶತಃ ಹೇಳಿದ್ದು.) (೩) **ತೇಽರ್ಚಿಷಮಭಿಸಂಭವಂತಿ, ಅರ್ಚಿರಾದಿನಾ ತತ್ಪ್ರಥಿತೇಃ** ಇತ್ಯಾದಿಗಳಲ್ಲಿ ಜ್ಯೋತಿರಭಿಮಾನಿ ದೇವತಾನಿಯಮ್ಯ ಲೋಕವು ಪ್ರಥಮಪ್ರಾಪ್ಯವೆಂದು ಹೇಳಿದ್ದರಿಂದ ಜ್ಯೋತಿರ್ಲೋಕಕ್ಕಿಂತ ಪ್ರಥಮತಃ ಅಗ್ನಿಲೋಕಪ್ರಾಪ್ತಿಯು ಹೇಗೆ ಹೇಳಲ್ಪಡುತ್ತದೆ? ಮತ್ತು ಅಹಃ ಮೊದಲಾದ ಪದಗಳಿಂದ ಅಹರಾದ್ಯಭಿಮಾನಿ ದೇವತೆಗಳನ್ನು ಇಟ್ಟುಕೊಳ್ಳುವುದು ಹೇಗೆ? ಎಂಬುವ ಆಶಂಕೆಯನ್ನು ಸ್ಮೃತಿಯಿಂದಲೇ ಪರಿಹರಿಸುತ್ತಾರೆ—) ಪ್ರಧಾನ ವಹ್ನಿಯ ಪುತ್ರನು, ಅಗ್ನಿ, ಜ್ಯೋತಿಃ, ಎಂದು ಎರಡು ಪ್ರಕಾರವಿರುವವನು. ಬ್ರಹ್ಮಜ್ಞಾನಿಯು ಕ್ರಮವಾಗಿ ಆ ಅಗ್ನಿಲೋಕ ಜ್ಯೋತಿರ್ಲೋಕಗಳನ್ನು ಹೊಂದಿ ದಿವಸಾದಿಗಳಿಗೆ ಅಭಿಮಾನಿಗಳಾದ ದೇವತೆಗಳ ಲೋಕಗಳನ್ನು ಹೊಂದುತ್ತಾನೆಂದು ಸತ್ತತ್ತ್ವವೆಂಬುವ ಗ್ರಂಥದಲ್ಲಿದೆ (೪) (ಹೀಗೆ ಸ್ಮೃತಿಯಿಂದ ಹಿಂದೆ ಹೇಳಿದ ಅರ್ಥವನ್ನೇ ಇಟ್ಟುಕೊಳ್ಳಬೇಕು ಅಹರಾದಿಕಾಲದಲ್ಲಿ ಮರಣ ಹೊಂದಿದವರಿಗೆ ಪುನರಾವೃತ್ತಿಯಿದೆ ಎಂದು ಸಮರ್ಥಿಸಿದರು. (ಕಾಲಾಭಿಮಾನಿ ದೇವತೆಗಳನ್ನು ಇಟ್ಟುಕೊಳ್ಳದೆ ಅಹರಾದಿ ಕಾಲವನ್ನು ಇಟ್ಟುಕೊಂಡರೆ ಬಾಧಕವನ್ನು ಹೇಳುತ್ತಾರೆ—) ಅಹರಾದಿಕಾಲಗಳಲ್ಲಿ ಮರಣವಾದರೆ ಅಪುನರಾವೃತ್ತ್ಯಾದಿಗಳು ಆಗುವವು, ಎಂದು ವಿವಕ್ಷೆಯಿದ್ದರೆ ಅಗ್ನಿಃ ಜ್ಯೋತಿಃ ಧೂಮಗಳು ಮರಣಕಾಲಗಳು ಆಗದೆ ಇದ್ದುದರಿಂದ ಅಗ್ನಿಃ ಜ್ಯೋತಿಃ ಧೂಮಃ ಎಂದು ಹೇಳಿದ್ದು ಕೂಡದೆ ಹೋಗುವುದು. ಏಕೆಂದರೆ ಅಹರಾದಿಕಾಲಗಳಲ್ಲಿ ಮರಣವು ಇದ್ದಂತೆ ಅಗ್ನಿಃ ಜ್ಯೋತಿಃ ಧೂಮಗಳಲ್ಲಿ ಮರಣವೆಂಬುವುದು ಇಲ್ಲವಷ್ಟೆ ॥ ೧ ॥

ಹೀ— ಪ್ರಮಾಣಾಂತರದಿಂದಲೂ ಹಿಂದೆ ಹೇಳಿದ ಅರ್ಥವನ್ನೇ ದೃಢೀಕರಿಸುತ್ತಾರೆ

**ತಾ ॥ (೧) ಅಥ ಯೋ ದಕ್ಷಿಣೇ ಪ್ರಮೀಯತೇ ಪಿತೄಣಾಮೇವ ಮಹಿಮಾನಂ ಗತ್ವಾ ಚಂದ್ರಮಸಃ ಸಾಯುಜ್ಯಂ ಸಲೋಕತಾಮಾಪ್ನೋ(ತಿಂಗಚ್ಛ)ತ್ಯೇತೌ ವೈ ಸೂರ್ಯಾ-**

ಚಂದ್ರಮಸೋರ್ಮಹಿಮಾನೌ ಬ್ರಾಹ್ಮಣೋ ವಿದ್ವಾನಭಿಜಯತಿ ತಸ್ಮಾದ್ಬ್ರಹ್ಮ-
ಣೋ ಮಹಿಮಾನಮಾಪ್ನೋತೀತಿ ವಿದುಷೋ ದಕ್ಷಿಣಾಯನಮರಣೇಽಪ್ಯಪುನರಾ-
ವೃತ್ತ್ಯಾ ಬ್ರಹ್ಮಪ್ರಾಪ್ತಿಶ್ರುತೇಃ ॥ (೨) ವಿದ್ವಾನ್ಬ್ರಹ್ಮ ಸಮಾಪ್ನೋತಿ ಯತ್ರ ತತ್ರ
ಮೃತೋಽಪಿ ಸನ್ನಿತಿ ಚ ಪಾದ್ಮೇ ॥ ೨ ॥ ॥ ೨೩ ॥

ಅ ॥ (೧) ಯಾವನು ದಕ್ಷಿಣಾಯನದಲ್ಲಿ ಮೃತನಾಗುತ್ತಾನೋ, ಅವನು ಪಿತೃಗಳ ಪೂಜೆಯನ್ನೇ ಹೊಂದಿ ಚಂದ್ರನ ಸಾಯುಜ್ಯವನ್ನೂ ಸಮಾನಲೋಕವನ್ನೂ ಹೊಂದುತ್ತಾನೆ ಪರಬ್ರಹ್ಮನನ್ನು ಹೊಂದಲು ಯೋಗ್ಯನಾದ ಅಪರೋಕ್ಷಜ್ಞಾನಿಯು ಸೂರ್ಯಚಂದ್ರರಿಂದ ತನ್ನ ಯೋಗ್ಯತಾನುಸಾರ ಪೂಜೆಗಳನ್ನು ಹೊಂದುತ್ತಾನೆ. ಆದುದರಿಂದ ಅಪರೋಕ್ಷಜ್ಞಾನಿಯು ಆ ಲೋಕದ್ದೆಶೆಯಿಂದ ಪರಬ್ರಹ್ಮನನ್ನು ಹೊಂದಿ ತನ್ನಿಂದ ಅಪರೋಕ್ಷೀಕೃತ ಬ್ರಹ್ಮನಿಂದ ಯಥೋಚಿತವಾದ ಮರ್ಯಾದೆಯನ್ನು ಹೊಂದುತ್ತಾನೆ. ಹೀಗೆ ಅಪರೋಕ್ಷಜ್ಞಾನಿಗೆ ದಕ್ಷಿಣಾಯನದಲ್ಲಿ ಮರಣಬಂದರೂ ಪುನರಾವೃತ್ತಿಯಿಲ್ಲದೆ ಪರಬ್ರಹ್ಮಪ್ರಾಪ್ತಿಯಾಗುತ್ತದೆಂದು ಹೇಳುವ ವೇದರೂಪವಾದ ಪ್ರಮಾಣವಿದೆ. (೨) (ಈ ವಿಷಯದಲ್ಲಿ ಸ್ಮೃತಿರೂಪ ಪ್ರಮಾಣವನ್ನು ಹೇಳುತ್ತಾರೆ -) ಅಪರೋಕ್ಷಜ್ಞಾನಿಯು ಅಹರಾದಿಗಳಲ್ಲಿ ಆಗಲೀ ರಾತ್ರ್ಯಾದಿಗಳಲ್ಲಿ ಆಗಲೀ ಯಾವಾಗ ಮರಣಹೊಂದಿದರೂ ಪರಬ್ರಹ್ಮನನ್ನು ಹೊಂದಿಯೇ ಹೊಂದುತ್ತಾನೆ, ಎಂದು ಪಾದ್ಮಪುರಾಣದಲ್ಲಿ ಅಪರೋಕ್ಷಜ್ಞಾನಿಗೆ ಮೋಕ್ಷವು ನಿಶ್ಚಿತವೇ ಎಂದು ಹೇಳಿದೆ.

ವಿ ॥ (೧) ಯ ಏವಂ ವಿದ್ವಾನುದಗಯನೇ ಪ್ರಮೀಯತೇ ದೇವಾನಾಮೇವ ಮಹಿಮಾನಂ ಗತ್ವಾಽದಿತ್ಯಸ್ಯ ಸಾಯುಜ್ಯಂ ಗಚ್ಛತ್ಯಥ ಯೋ ದಕ್ಷಿಣೇ ಪ್ರಮೀಯತೇ ಎಂಬುವ ಶ್ರುತಿಯಲ್ಲಿ ಉತ್ತರಾಯಣದಲ್ಲಿ ಮರಣಹೊಂದಿದ ಅಪರೋಕ್ಷಜ್ಞಾನಿಯು ಪುನಃ ಹಿಂತಿರುಗದೆ ಪರಬ್ರಹ್ಮನನ್ನು, ದಕ್ಷಿಣಾಯನದಲ್ಲಿ ಮರಣ ಹೊಂದಿದ ಕರ್ಮಿಯು ಹಿಂತಿರುಗಿ ಚಂದ್ರನನ್ನು ಹೊಂದುತ್ತಾನೆಂದು ಹೇಳಿ ಪುನಃ ಜ್ಞಾನಿಯಾದವನು ಉತ್ತರಾಯಣದಲ್ಲಿ ಆಗಲೀ ದಕ್ಷಿಣಾಯನದಲ್ಲಿ ಆಗಲೀ ಮೃತನಾದವನು ಹಿಂತಿರುಗದೆ ಪರಬ್ರಹ್ಮನನ್ನು ಹೊಂದುತ್ತಾನೆಂದು ಹೇಳಿದೆ. ಆದಕಾರಣ ಉತ್ತರಾಯಣದಲ್ಲಿ ಮೃತರಾದವರು ಅಪುನರಾವೃತ್ತಿಯನ್ನು ಹೊಂದುತ್ತಾರೆಂದು ನಿಯಮವಿಲ್ಲದಿರುವುದರಿಂದ ಬೇರೆ ಅರ್ಥವನ್ನು ಅಂಗೀಕರಿಸ ಕೂಡದು ॥ ೨೩ ॥

ಗೀ ॥ ಅಗ್ನಿರ್ಜ್ಯೋತಿರಹಃ ಶುಕ್ಲಃ ಷಣ್ಮಾಸಾ ಉತ್ತರಾಯಣಂ ।
ತತ್ರ ಪ್ರಯಾತಾ ಗಚ್ಛಂತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥ ೨೪ ॥

ಅ ॥ ಅಗ್ನಿಃ = ಅಗ್ನಿ ಎಂಬ ದೇವತೆಯು, ಜ್ಯೋತಿಃ = ಅರ್ಚಿರ್ನಾಮಕ ದೇವತೆಯು, ಅಹಃ = ಅಭಿಜದ್ದೇವತೆಯಿಂದ ಕೂಡಿದ ಅಹಃ (ಹಗಲಿಗೆ) ಅಭಿಮಾನಿದೇವತೆಯೂ, ಶುಕ್ಲಃ = ಪೌರ್ಣಮಾಸ್ಯಭಿಮಾನಿಯಾದ ದೇವತೆಯಿಂದ ಕೂಡಿಕೊಂಡು ಇದ್ದ ಶುಕ್ಲಪಕ್ಷಾಭಿಮಾನಿ ದೇವತೆಯೂ, ಷಣ್ಮಾಸಾಃ = ಆರು ತಿಂಗಳಿಗೆ ಅಭಿಮಾನಿಯಾದ ದೇವತೆಯೂ. ಉತ್ತರಾಯಣಂ = ವಿಷುವಿಗೆ ಅಭಿಮಾನಿಯಾದ ದೇವತೆಯಿಂದ ಕೂಡಿಕೊಂಡು ಇದ್ದ ಉತ್ತರಾಯಣಾಭಿಮಾನಿ ದೇವತೆಯು (ಹೀಗೆ ಈ ದೇವತೆಗಳು ಇರುತ್ತಾರೆ) ತತ್ರ - ಕ್ರಮದಿಂದ ನಿರ್ದಿಷ್ಟರಾದ ಅಗ್ನ್ಯಾದಿ ದೇವತೆಗಳಿಂದ ನಿಯಮ್ಯಗಳಾದ ಮಾರ್ಗಗಳಲ್ಲಿ, ಪ್ರಯಾತಾಃ = ಹೋಗಿರುವ, ಬ್ರಹ್ಮವಿದಃ = ಪರಬ್ರಹ್ಮನ ಜ್ಞಾನಿಗಳಾದ, ಜನಾಃ = ಜನರು, ಬ್ರಹ್ಮ = ಪರಬ್ರಹ್ಮನನ್ನು ಗಚ್ಛಂತಿ = ಹೊಂದುತ್ತಾರೆ. ॥ ೨೪ ॥

ಗೀ || ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ |
ತತ್ರ ಚಾಂದ್ರಮಸಂ ಜ್ಯೋತಿರ್ಯೋಗೀ ಪ್ರಾಪ್ಯ ನಿವರ್ತತೇ || ೨೫ ||

ಅ || ಧೂಮಃ=ಧೂಮಾಭಿಮಾನಿ ದೇವತೆಯೂ, ರಾತ್ರಿಃ=ರಾತ್ರ್ಯಭಿಮಾನಿ ದೇವತೆಯೂ, ತಥಾ=ಹಾಗೆಯೇ, ಕೃಷ್ಣಃ=ಕೃಷ್ಣಪಕ್ಷಾಭಿಮಾನಿ ದೇವತೆಯೂ, ಷಣ್ಮಾಸಾಃ=ಆರು ತಿಂಗಳಿಗೆ ಅಭಿಮಾನಿಯಾದ ದೇವತೆಯೂ. ದಕ್ಷಿಣಾಯನಂ=ದಕ್ಷಿಣಾಯನಾಭಿಮಾನಿ ದೇವತೆಯೂ, (ಇರುತ್ತಾರೆ.) ತತ್ರ=ಆ ಧೂಮಾದ್ಯಭಿಮಾನಿದೇವತೆಗಳಿಂದ ನಿಯಮ್ಯಗಳಾದ ಮಾರ್ಗಗಳಲ್ಲಿ ಹೋಗುವ, ಯೋಗೀ=ಕರ್ಮಯೋಗಿಯು, ಚಾಂದ್ರಮಸಂ ಜ್ಯೋತಿಃ=ಚಂದ್ರನಿಂದ ನಿಯಮ್ಯವಾದ ಲೋಕವನ್ನು, ಪ್ರಾಪ್ಯ=ಹೊಂದಿ, ನಿವರ್ತತೇ=ಪುನಃ ಆ ಲೋಕದಿಂದ ಹಿಂತಿರುಗಿ ಸಂಸಾರಕ್ಕೆ ಬರುತ್ತಾನೆ. || ೨೫ ||

ಗೀ || ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಃ ಶಾಶ್ವತೇ ಮತೇ |
ಏಕಯಾ ಯಾತ್ಯನಾವೃತ್ತಿಮನ್ಯಯಾಽಽವರ್ತತೇ ಪುನಃ || ೨೬ ||

ಅ || ಏತೇ=ಹಿಂದೆ ಹೇಳಿದ, ಶುಕ್ಲಕೃಷ್ಣೇ=ಶುಕ್ಲಪಕ್ಷಾಭಿಮಾನಿ ದೇವತೆಯಿಂದಲೂ, ಕೃಷ್ಣಪಕ್ಷಾಭಿಮಾನಿ ದೇವತೆಯಿಂದಲೂ, ನಿಯಮ್ಯಗಳಾದ, ಗತೀ=ಮಾರ್ಗಗಳು, ಜಗತಃ=ಜ್ಞಾನಿಯೋಗಿ ಕರ್ಮಯೋಗಿಗಳಾದ ಜನರಿಗೆ ಸಂಬಂಧಪಟ್ಟವುಗಳು. ಶಾಶ್ವತೇ ಮತೇ=ಶಾಶ್ವತವಾದವುಗಳೆಂದು ಸಮ್ಮತಗಳಾಗಿವೆ. ಏಕಯಾ=ಶುಕ್ಲಪಕ್ಷಾಭಿಮಾನಿದೇವತೆಯಿಂದ ನಿಯಮ್ಯವಾದ ಮಾರ್ಗದಿಂದ ಹೋಗುವವನು, ಅನಾವೃತ್ತಿಂ=ಪುನಃ ಹಿಂತಿರುಗಿ ಭೂಲೋಕಕ್ಕೆ ಬಾರದಿರುವಿಕೆಯನ್ನು, ಯಾತಿ=ಹೊಂದುತ್ತಾನೆ. (ಅಂದರೆ ದುಃಖಮಯವಾದ ಸಂಸಾರವನ್ನು ಹೊಂದದೆ ಮೋಕ್ಷವನ್ನು ಹೊಂದುತ್ತಾನೆ.) ಅನ್ಯಯಾ=ಕೃಷ್ಣಪಕ್ಷಾಭಿಮಾನಿಯಾದ ದೇವತೆಯಿಂದ ನಿಯಮ್ಯವಾದ ಮಾರ್ಗದಿಂದ ಹೋಗುವ ಕರ್ಮಯೋಗಿಯು ಪುನಃ=ತಿರುಗಿ, ಆವರ್ತತೇ=ಹಿಂತಿರುಗಿ ಭೂಲೋಕಕ್ಕೆ ಬರುತ್ತಾನೆ (ಜನನಮರಣಾದಿರೂಪವಾದ ಸಂಸಾರವನ್ನು ಹೊಂದುತ್ತಾನೆ.) || ೨೬ ||

ಟೀ—ಜ್ಯೋತಿಃಶಬ್ದಕ್ಕೆ ಅನೇಕಾರ್ಥಗಳು ಇದ್ದುದರಿಂದ ವಿವಕ್ಷಿತವಾದ ಅರ್ಥವನ್ನು ಹೇಳುತ್ತಾರೆ—

ಭಾ || (೧) ಜ್ಯೋತಿರರ್ಚಿಃ | ತೇಽರ್ಚಿಷಮಭಿಸಂಭವಂತೀತಿ ಹಿ ಶ್ರುತಿಃ || (೨) ತಥಾ ಚ ನಾರದೀಯೇ | ಅಗ್ನಿಂ ಪ್ರಾಪ್ಯ ತತಶ್ಚಾರ್ಚಿಸ್ತತಶ್ಚಾಪ್ಯಹರಾದಿಕಮಿತಿ || (೩) ಅಭಿಮಾನಿದೇವತಾಶ್ಚಾಗ್ನ್ಯಾದಯಃ | ಕಥಮನ್ಯಥಾ ಅಪ್ಯ ಅಪೂರ್ಯಮಾಣಪಕ್ಷಮಿತಿ ಯುಜ್ಯತೇ || (೪)ದಿವಾದಿದೇವತಾಭಿಸ್ತು ಪೂಜಿತೋ ಬ್ರಹ್ಮ ಯಾತಿ ಹೀತಿ ಚ ಬ್ರಾಹ್ಮೇ || (೫) ಮಾಸಾಭಿಮಾನಿಭ್ಯೋಽಯನಾಭಿಮಾನೀ ಚ ಪೃಥಕ್ || ೧ ||

ಅ || (೧) ಆ ಜ್ಞಾನಿಗಳು ಅರ್ಚಿರ್ಲೋಕವನ್ನು ಹೊಂದುತ್ತಾರೆ, ಅರ್ಚಿಷೋಽಹಃ ಅರ್ಚಿರ್ಲೋಕದಿಂದ ಅಹರ್ಲೋಕಕ್ಕೆ ಹೋಗುತ್ತಾರೆ ಎಂದು ಶ್ರುತಿಯಲ್ಲಿ ಹೇಳಿದ್ದರಿಂದ ಜ್ಯೋತಿಃ=ಅಂದರೆ ಅರ್ಚಿರಭಿಮಾನಿ ದೇವತೆಯು. (೨) ಅಗ್ನಿಲೋಕವನ್ನು ಹೊಂದಿ ಅಲ್ಲಿಂದ ಅರ್ಚಿರ್ಲೋಕಕ್ಕೆ ಅಲ್ಲಿಂದ ಅಹರಾದಿಲೋಕಗಳಿಗೆ ಹೋಗುತ್ತಾನೆ ಎಂದು ನಾರದೀಯಪುರಾಣದಲ್ಲಿ ಹಾಗೆಯೇ ಹೇಳಿದೆ (೩) (ಅಭಿಮಾನಿದೇವತೆಗಳೆಂದು ಏಕೆ ಹೇಳಬೇಕು? ಸಾಮಾನ್ಯವಾಗಿ ತಿಳಿಯುವ ಅರ್ಥವೇ ಏಕೆ ಆಗಬಾರದು ... )

ಅಗ್ನಿ ಮೊದಲಾದ ಶಬ್ದಗಳಿಂದ ಅಭಿಮಾನಿ ದೇವತೆಗಳನ್ನೇ ಇಟ್ಟುಕೊಳ್ಳಬೇಕು. ಹೀಗೆ ಇಟ್ಟುಕೊಳ್ಳದೆ ಪುರಾಣಕಾಲವನ್ನು ತೆಗೆದುಕೊಂಡರೆ (ಅಹೋರಾತ್ರ ಬಿಟ್ಟು ಬೇರೆ ಪಕ್ಷವು ಇಲ್ಲದಿರುವುದರಿಂದ) ಹಗಲಿನ ದ್ವಿತೆಯಿಂದ ಶುಕ್ಲಪಕ್ಷವನ್ನು ಹೊಂದುತ್ತಾನೆಂಬುವುದು ಹೇಗೆ ಕೂಡುತ್ತದೆ? (ದೇವತೆಯೆಂದು ಇಟ್ಟುಕೊಂಡರೆ ಕೂಡುತ್ತದೆ ಹೇಗೆಂದರೆ ಹಗಲಿಗೆ ಅಭಿಮಾನಿಯಾದ ದೇವತೆಯ ಲೋಕದಿಂದ ಶುಕ್ಲಪಕ್ಷಾಭಿಮಾನಿಯಾದ ದೇವತೆಯ ಲೋಕವನ್ನು ಹೊಂದುತ್ತಾನೆಂದು ಸಂಗತವಾಗುತ್ತದೆ.) (೪) ದಿವಸಾದಿಗಳಿಗೆ ಅಭಿಮಾನಿಗಳಾದ ದೇವತೆಗಳಿಂದ ಜ್ಞಾನಿಯು ಪೂಜಿಸಿಕೊಳ್ಳಲ್ಪಟ್ಟವನಾಗಿ ಪರಬ್ರಹ್ಮನನ್ನು ಹೊಂದುತ್ತಾನೆಂದು ಬ್ರಹ್ಮಪುರಾಣದ ವಾಕ್ಯದಿಂದಲೂ ಅಹರಾದಿ ಶಬ್ದಗಳು (ದೇವತಾಪರಗಳೇ ಆಗಬೇಕೆಂದು ಸ್ಪಷ್ಟವಾಗುತ್ತದೆ.) (೫) (ಮಾಸಗಳನ್ನು ಬಿಟ್ಟು ಅಯನಗಳು ಪ್ರತ್ಯೇಕ ಇಲ್ಲದಿರುವುದರಿಂದ. ಷಣ್ಮಾಸಾ ಉತ್ತ-ರಾಯಣಂ, ಷಣ್ಮಾಸಾ ದಕ್ಷಿಣಾಯನಂ ಎಂಬುವ ಉಕ್ತಿಯು ಮಾಸ ಅಯನ ಶಬ್ದಗಳು ಅಭಿಮಾನಿ ದೇವತಾಪರಗಳೆಂದು ತಿಳಿಸುತ್ತದೆ. ಮಾಸ, ಅಯನಗಳಿಗೆ ಅಭಿಮಾನಿಗಳಾದ ದೇವತೆಗಳು ಪ್ರತ್ಯೇಕ ಪ್ರತ್ಯೇಕವಿದ್ದ ಪ್ರಯುಕ್ತ ಷಣ್ಮಾಸಾಃ ಉತ್ತರಾಯಣಂ ಎಂಬ ಪ್ರತ್ಯೇಕ ಉಕ್ತಿಯೂ ಕೂಡುತ್ತದೆನ್ನುತ್ತಾರೆ-) ಮಾಸಗಳಿಗೆ ಅಭಿಮಾನಿಗಳಾದ ದೇವತೆಗಳಿಗಿಂತ ಅಯನಗಳಿಗೆ ಅಭಿಮಾನಿಗಳಾದ ದೇವತೆಗಳು ಪ್ರತ್ಯೇಕವೇ ಇದ್ದಾರೆ (ಇದರಿಂದ ಷಣ್ಮಾಸಗಳೇ ಅಯನವು ಎಂಬ ಪರರ ವ್ಯಾಖ್ಯಾನವು ಪುರಾಣವಿರೋಧವಿದ್ದಪ್ರಯುಕ್ತ ಅಯುಕ್ತವೆಂದುಕ್ತವಾಯ್ತು) ॥೧॥

**ಭಾ ॥ (೧) ತಚ್ಚೋಕ್ತಂ ಗಾರುಡೇ । ಪೂಜಿತಸ್ತ್ವಯನೇನಾಸೌ ಮಾಸೈಃ ಪರಿವೃತೇನ ಹಿತಿ । ಅಹರಭಿಜಿತಾ ಶುಕ್ಲಪೌರ್ಣಮಾಸ್ಯಾ ಅಯನಂ ವಿಷುವಾ ಸಹ ॥ (೨) ತಚ್ಚೋಕ್ತಂ ಬ್ರಹ್ಮವೈವರ್ತೇ । ಸಾಹ್ನಾ ಮಧ್ಯಂದಿನೇನಾಥ ಶುಕ್ಲೇನ ಚ ಸಪೂರ್ಣಿಮಾ । ಸವಿಷ್ವಾ ಚಾಯನೇನಾಸೌ ಪೂಜಿತಃ ಕೇಶವಂ ವ್ರಜೇದಿತಿ ॥೨॥೨೪-೨೬॥**

ಅ ॥ (೧) ಮಾಸಾಭಿಮಾನಿದೇವತೆಗಳಿಂದ ಕೂಡಿದ ಅಯನಾಭಿಮಾನಿದೇವತೆಗಳಿಂದ ಅಪರೋಕ್ಷಜ್ಞಾನಿಯು ಯಥಾಯೋಗ್ಯವಾಗಿ ಬಹುಮಾನಿಸಿಕೊಳ್ಳಲ್ಪಟ್ಟವನಾಗಿ (ಅಭಿಜಿತಾ —) ಮಧ್ಯಾಹ್ನಾಭಿಮಾನಿಯಾದ ದೇವತೆಯಿಂದ ಕೂಡಿರತಕ್ಕ ಹಗಲಿಗೆ ಅಭಿಮಾನಿಯಾದ ದೇವತೆಯಿಂದ ನಿಯಮ್ಯವಾದ ಲೋಕವನ್ನು, ಪೂರ್ಣಮಾತಿಥಿಗೆ ಅಭಿಮಾನಿಯಾದ ದೇವತೆಯಿಂದ ಕೂಡಿರತಕ್ಕ ಶುಕ್ಲಪಕ್ಷಕ್ಕೆ ಅಭಿಮಾನಿಯಾದ ದೇವತೆಯಿಂದ ನಿಯಮ್ಯವಾದ ಲೋಕವನ್ನು ‡ ವಿಷುವಿಗೆ ಅಭಿಮಾನಿಯಾದ ದೇವತೆಯಿಂದ ಕೂಡಿದ ಅಯನಕ್ಕೆ ಅಭಿಮಾನಿಯಾದ ದೇವತೆಯಿಂದ ನಿಯಮ್ಯವಾದ ಲೋಕವನ್ನು ಅಂದರೆ ಮೇಷಸಂಕ್ರಮಣಾಭಿಮಾನಿ ದೇವತೆಯಿಂದ ಕೂಡಿರತಕ್ಕ ಉತ್ತರಾಯಣ ಕಾಲಾಭಿಮಾನಿ ದೇವತೆಯಿಂದ ನಿಯಮ್ಯವಾದ ಲೋಕವನ್ನೂ ತುಲಾಸಂಕ್ರಮಣಾಭಿಮಾನಿ ದೇವತೆಯಿಂದ ಕೂಡಿರತಕ್ಕ ದಕ್ಷಿಣಾಯನಕ್ಕೆ ಅಭಿಮಾನಿಯಾದ ದೇವತೆಯಿಂದ ನಿಯಮ್ಯವಾದ ಲೋಕವನ್ನೂ ಹೊಂದುತ್ತಾನೆ. ಎಂದು ಗಾರುಡಪ್ರಮಾಣದಿಂದ (ಅಭಿಮಾನಿ ದೇವತೆಗಳನ್ನು ಇಟ್ಟುಕೊಳ್ಳಬೇಕೆಂದು ಸಿದ್ಧವಾಯ್ತು.) (೨) ಹಾಗೆಯೇ ಹಗಲಿಗೆ ಅಭಿಮಾನಿಯಾದ ದೇವತೆಯಿಂದ ಕೂಡಿದ ಮಧ್ಯಂದಿನಕ್ಕೆ ಅಭಿಮಾನಿಯಾದ ದೇವತೆಯಿಂದಲೂ, ಪೂರ್ಣಮಾತಿಥಿಗೆ ಅಭಿಮಾನಿಯಾದ ದೇವತೆಯಿಂದ ಕೂಡಿರತಕ್ಕ ಶುಕ್ಲಪಕ್ಷಾಭಿಮಾನಿ ದೇವತೆ

‡ ಯಾವ ಸಂಕ್ರಮಣದಲ್ಲಿ ಅಹೋರಾತ್ರಿಗಳಿಗೆ ಸಾಮ್ಯ ಬರುವುದೋ, ಅದು ವಿಷು ಎನಿಸುತ್ತದೆ. ಅದು ಉತ್ತರಾಯಣದಲ್ಲಿ ಮೇಷಸಂಕ್ರಮಣವಾಗುವುದು ದಕ್ಷಿಣಾಯನದಲ್ಲಿ ತುಲಾಸಂಕ್ರಮಣವಾಗುವುದು. ಏವಂಚ ಉತ್ತರಾಯಣ ಕಾಲಾಭಿಮಾನಿ ದೇವತೆಯನ್ನು ಇಟ್ಟುಕೊಂಡರೆ ವಿಷು ಎಂಬುವದಕ್ಕೆ ಮೇಷಸಂಕ್ರಮಣಾಭಿಮಾನಿ ದೇವತೆಯೆಂಬ ಅರ್ಥವನ್ನು ದಕ್ಷಿಣಾಯನಾಭಿಮಾನಿ ದೇವತೆಯನ್ನು ಇಟ್ಟುಕೊಂಡರೆ ವಿಷು ಎಂಬುವದಕ್ಕೆ ತುಲಾ ಸಂಕ್ರಮಣಾಭಿಮಾನಿದೇವತೆಯು ಎಂದು ಅರ್ಥ ಇಟ್ಟುಕೊಳ್ಳಬೇಕು

ಯಿಂದಲೂ, ವಿಷ್ಣುವಿಗೆ ಅಭಿಮಾನಿಯಾದ ದೇವತೆಯಿಂದ ಕೂಡಿದ ಅಯನಾಭಿಮಾನಿ ದೇವತೆಯಿಂದಲೂ ಅಪರೋಕ್ಷಜ್ಞಾನಿಯು ಪೂಜಿಸಿಕೊಳ್ಳಲ್ಪಟ್ಟವನಾಗಿ ಪರಮಾತ್ಮನನ್ನು ಹೊಂದುತ್ತಾನೆಂದು ಬ್ರಹ್ಮವೈವರ್ತ ಪುರಾಣದಿಂದಲೂ ಆ ಅರ್ಥವು ಸಿದ್ಧವಾಗುತ್ತದೆ. ॥ ೨ ॥ ॥ ೨೪, ೨೫, ೨೬ ॥

ಗೀ ॥ ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।
ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥ ೨೭ ॥

ಅ ॥ ಪಾರ್ಥ = ಅರ್ಜುನನೇ, ಏತೇ = ಹಿಂದೆ, ಹೇಳಿದ ಸೃತೀ = ಮಾರ್ಗಗಳನ್ನು, ಜಾನನ್ = ತಿಳಿಯುತಕ್ಕ, ಯೋಗೀ = ಮಾರ್ಗಕ್ಕೆ ಕಾರಣಗಳಾದ ಜ್ಞಾನಕರ್ಮಗಳನ್ನು ಮಾಡಿಕೊಂಡಿರುವವನು, ಕಶ್ಚನ = ಯಾವನೊಬ್ಬನೂ, ಅಥವಾ ಯೋಗೀ = ಬ್ರಹ್ಮಾಪರೋಕ್ಷಜ್ಞಾನವುಳ್ಳ, ಏತೇ ಸೃತೀ = ಹಿಂದೆ ಹೇಳಿದ ಮಾರ್ಗಗಳನ್ನು, ಜಾನನ್ = ಪ್ರತ್ಯಕ್ಷೀಕರಿಸುವ, ಕಶ್ಚನ = ಯಾವನೊಬ್ಬನೂ, ನ ಮುಹ್ಯತಿ = ಶ್ರೀಪರಮಾತ್ಮನ ವಿಸ್ಮರಣರೂಪವಾದ ಮೋಹವನ್ನು ಹೊಂದುವುದಿಲ್ಲ. ತಸ್ಮಾತ್ = ಯೋಗವು ಪುರುಷಾರ್ಥಕ್ಕೆ ಕಾರಣವಾಗಿರುವುದರಿಂದ, ಸರ್ವೇಷು ಕಾಲೇಷು = ಎಲ್ಲಾ ಕಾಲಗಳಲ್ಲಿ. ಅರ್ಜುನ = ಅರ್ಜುನನೇ ಯೋಗಯುಕ್ತಃ = ಶ್ರೀಪರಮಾತ್ಮನ ಜ್ಞಾನಭಕ್ತಿಪೂರ್ವಕವಾಗಿ ತಮಗೆ (ಕ್ಷತ್ರಿಯರಿಗೆ) ಯೋಗ್ಯವಾದ ನಿವೃತ್ತಕರ್ಮಾನುಷ್ಠಾನರೂಪವಾದ ಯೋಗದಿಂದ ಕೂಡಿದವನು ಭವ = ಆಗು. ॥ ೨೭ ॥

ಗೀ ॥ ವೇದೇಷು ಯಜ್ಞೇಷು ತಪಸ್ಸು ಚೈವ
ದಾನೇಷು ಯತ್ಪುಣ್ಯಫಲಂ ಪ್ರದಿಷ್ಟಂ ।
ಅತ್ಯೇತಿ ತತ್ಸರ್ವಮಿದಂ ವಿದಿತ್ವಾ
ಯೋಗೀ ಪರಂ ಸ್ಥಾನಮುಪೈತಿ ಚಾದ್ಯಂ ॥ ೨೮ ॥

ಅ ॥ ಯೋಗೀ = ಜ್ಞಾನೋಪಾಯವುಳ್ಳವನು, ಇದಂ = ಹಿಂದೆ ಹೇಳಿದ ಅಧ್ಯಾತ್ಮಾದಿಸ್ವರೂಪಗಳನ್ನೂ, ಪರಮಾತ್ಮನು ಸರ್ವ ಜಗತ್ತಿಗೂ, ಸೃಷ್ಟಿಕರ್ತನು ಎಂಬುವುದನ್ನೂ ಶುಕ್ಲಪಕ್ಷ ಕೃಷ್ಣಪಕ್ಷ ಮಾರ್ಗಾದಿಗಳನ್ನೂ, ವಿದಿತ್ವಾ = ತಿಳಿದುಕೊಂಡು, ವೇದೇಷು = ವೇದಾಧ್ಯಯನದಲ್ಲಿಯೂ, ಯಜ್ಞೇಷು = ಯಾಗಾನುಷ್ಠಾನದಲ್ಲಿಯೂ ತಪಸ್ಸು ಕೃಚ್ಛ್ರ ಚಾಂದ್ರಾಯಣ ಮೊದಲಾದ ತಪಸ್ಸನ್ನು ಮಾಡುವ ವಿಷಯದಲ್ಲಿಯೂ, ದಾನೇಷು = ಸತ್ಪಾತ್ರದಲ್ಲಿ ದ್ರವ್ಯದಾನಮಾಡುವುದರಲ್ಲಿಯೂ, ಯದೇವ ಪುಣ್ಯಫಲಂ = ಯಾವುದೇ ಪುಣ್ಯಫಲವು, ಪ್ರದಿಷ್ಟಂ = ಹೇಳಲ್ಪಟ್ಟಿದೆಯೋ, ತತ್ಸರ್ವಮೇವ = ಆ ಎಲ್ಲಾ ಫಲವನ್ನೇ, ಅತ್ಯೇತಿ = ಅತಿಕ್ರಮಿಸುತ್ತಾನೆ. (ಅಂದರೆ ವೇದಾಧ್ಯಯನಾದಿಗಳಿಂದುಂಟಾಗತಕ್ಕ ಫಲಕ್ಕಿಂತಲೂ ಹೆಚ್ಚು ಫಲವನ್ನು ಹೊಂದುತ್ತಾನೆ.) ಯೋಗೀ = ಜ್ಞಾನೋಪಾಯವುಳ್ಳವನು ಆದ್ಯಂ = ಅತಿಪ್ರಾಚೀನವಾದ, ಪರಂ = ಸರ್ವೋತ್ತಮವಾದ, ಸ್ಥಾನಂ = ವೈಕುಂಠಾದಿ ಸ್ಥಾನವನ್ನು, ಉಪೈತಿ ಚ = ಹೊಂದುತ್ತಾನೆ ॥ ೨೮ ॥

ಗೀ ॥ ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಅಕ್ಷರಪರಬ್ರಹ್ಮಯೋಗೋ ನಾಮ ಅಷ್ಟಮೋಽಧ್ಯಾಯಃ ॥ ೮ ॥

ಅ ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಅಕ್ಷರಪರಬ್ರಹ್ಮಯೋಗವೆಂಬ ಎಂಟನೇ ಅಧ್ಯಾಯವು ಮುಗಿಯಿತು.

ಟೀ – ಮಾರ್ಗವನ್ನು ತಿಳಿಯೋಣಮಾತ್ರದಿಂದ ಮೋಹವಿಲ್ಲವೆಂದಾಗುತ್ತದೆಂಬುವ ಪ್ರತೀತಿಯನ್ನು ಹೋಗಲಾಡಿಸುತ್ತಾರೆ-

ಭಾ ॥ (೧) ಏತೇ ಸೃತೀ ಸೋಪಾಯೇ ಜ್ಞಾತ್ವಾಽನುಷ್ಠಾಯ ನ ಮುಹ್ಯತಿ ॥ (೨) ತಚ್ಚಾಹ ಸ್ಕಾಂದೇ । ಸೃತೀ ಜ್ಞಾತ್ವಾ ತು ಸೋಪಾಯೇ ಅನುಷ್ಠಾಯ ಚ ಸಾಧನಂ । ನ ಕಶ್ಚಿನ್ಮೋಹಮಾಪ್ನೋತಿ ನ ಚಾನ್ಯಾ ತತ್ರ ವೈ ಗತಿರಿತಿ ॥ ೨೭,೨೮ ॥

ಅ ॥ (೧) ಮಾರ್ಗದ ಉಪಾಯಭೂತಗಳಾದ ಜ್ಞಾನಕರ್ಮಗಳಿಂದ ಕೂಡಿದ ಈ ಮಾರ್ಗಗಳನ್ನು ತಿಳಿದು (ಬ್ರಹ್ಮಾಪರೋಕ್ಷಜ್ಞಾನಿಯಾದುದರಿಂದ) ಮಾರ್ಗಪ್ರಾಪ್ತಿಯ ಉಪಾಯವನ್ನು ಅನುಷ್ಠಾನಮಾಡಿ ಪರಮಾತ್ಮನನ್ನು ಮರೆಯುವುದಿಲ್ಲ. (೨) ಮಾರ್ಗದ ಉಪಾಯದಿಂದ ಕೂಡಿರುವ ಮಾರ್ಗಗಳನ್ನು ತಿಳಿದು ಮಾರ್ಗಸಾಧನವನ್ನು ಮಾಡಿ ಯಾವನೊಬ್ಬನೂ ಶ್ರೀಪರಮಾತ್ಮನನ್ನು ಮರೆಯುವುದಿಲ್ಲ. ಭಗವದ್ವಿಷಯಕ ಮೋಹವನ್ನು ದಾಟಲಿಕ್ಕೆ ಭಗವತ್ಪ್ರಾಪ್ತಿಯಿಂದ ಬೇರೆ ಸಾಧನವಿಲ್ಲ. (ಏವಂಚ ಶ್ರೀಪರಮಾತ್ಮನ ವಿಸ್ಮರಣರೂಪವಾದ ಮೋಹವು ಹೋದಮೇಲೆ ಅವರಿಗೆ ಭಗವತ್ಪ್ರಾಪ್ತಿಯಿಂದ ಬೇರೆ ಗತಿಯು ಇಲ್ಲ. ಮುಕ್ತಿ ಭಗವತ್ಪ್ರಾಪ್ತಿಯೇ ಆಗುತ್ತದೆ) ॥ ೨೭, ೨೮ ॥

ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ಅಷ್ಟಮೋಽಧ್ಯಾಯಃ ॥ ೮ ॥

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಶ್ರೀಭಗವದ್ಗೀತಾಭಾಷ್ಯದಲ್ಲಿ ಎಂಟನೇ ಅಧ್ಯಾಯವು ಮುಗಿಯಿತು. ॥ ೮ ॥

ತಾ ॥ ಮಾರ್ಗೌ ಬ್ರಹ್ಮ ಚ ಯಃ ಪಶ್ಯೇತ್ಸಾಕ್ಷಾದೇವಾಪರೋಕ್ಷತಃ । ಸರ್ವಪುಣ್ಯಾತಿಗೋಽಮುಹ್ಯನ್ನಾಪ್ನುಯಾತ್ ಬ್ರಹ್ಮ ತತ್ಪರಮಿತಿ ಚ ॥ ೨೭,೨೮ ॥

ಅ ॥ ಯಾವನು ಮಾರ್ಗಗಳನ್ನೂ ಗಮ್ಯನಾದ ಪರಬ್ರಹ್ಮನನ್ನೂ ಮರೆಯದೆ ಸರ್ವದಾ ಶ್ರೀಪರಮಾತ್ಮನ ಸ್ಮರಣೆಮಾಡುತ್ತಾ ಮಾರ್ಗಗಳನ್ನೂ ಪರಬ್ರಹ್ಮನನ್ನೂ ಮುಖ್ಯವಾಗಿಯೇ ಪ್ರತ್ಯಕ್ಷವಾಗಿಯೇ ನೋಡುತ್ತಾನೋ, ಅಂತಹ ಅಪರೋಕ್ಷಜ್ಞಾನಿಯು ವೇದಾದಿಗಳಲ್ಲಿ ಹೇಳಲ್ಪಟ್ಟ ಪುಣ್ಯಫಲವನ್ನು ಹೊಂದಿ ಅದಕ್ಕಿಂತಲೂ ಹೆಚ್ಚು ಫಲವನ್ನು ಹೊಂದಿದವನಾಗಿ ಶ್ರೀಪರಮಾತ್ಮನನ್ನು ಮರೆಯದವನಾಗಿ ಆ ಪರಬ್ರಹ್ಮನನ್ನು ಹೊಂದುತ್ತಾನೆ, ಎಂದೂ ಹೇಳಿದೆ. ॥ ೨೭, ೨೮ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾತಾತ್ಪರ್ಯನಿರ್ಣಯೇ ಅಷ್ಟಮೋಽಧ್ಯಾಯಃ ॥ ೮ ॥

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾತಾತ್ಪರ್ಯನಿರ್ಣಯದಲ್ಲಿ ಎಂಟನೇ ಅಧ್ಯಾಯವು ಮುಗಿಯಿತು ॥ ೮ ॥

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಃ ॥

# ಒಂಭತ್ತನೇ ಅಧ್ಯಾಯವು.

---

ಟೀ—ಏಳನೇ ಅಧ್ಯಾಯದಲ್ಲಿ ಸಾಧಿಭೂತಾಧಿದೈವಂ ಮಾಂ ಇತ್ಯಾದಿಗಳಿಂದ ಹೇಳಲ್ಪಟ್ಟ ಶ್ರೀಹರಿಯ ಮಹಿಮೆಯನ್ನು ಈ ಅಧ್ಯಾಯದಲ್ಲಿ ವಿವರಿಸುತ್ತಾರೆ. ಆ ಮಹಿಮೆಗಳಲ್ಲಿ ಅತಿವಿಚಿತ್ರವಾದ ಮಹಿಮೆಯನ್ನು ಹೇಳುವುದಕ್ಕೋಸ್ಕರ ಅದರಲ್ಲಿ ಜನರಿಗೆ ವಿಶ್ವಾಸ ಹುಟ್ಟುವುದಕ್ಕಾಗಿ ಅದನ್ನು ಹೊಗಳುತ್ತಾರೆ—

ಗೀ ॥ ॥ ಶ್ರೀಭಗವಾನುವಾಚ ॥

ಓಂ ॥ ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।
ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್ ॥ ೧ ॥

ಅ ॥ ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸುತ್ತಾನೆ-(ಎಲೋ ಅರ್ಜುನನೇ) ಯತ್=ಯಾವ ಸಾಮಾನ್ಯತಃ ತಿಳಿಯಲರ್ಹವಾದ ಮಹಿಮೆ ವಿಶೇಷತಃ ತಿಳಿಯಲರ್ಹವಾದ ಮಹಿಮೆ ಇವುಗಳನ್ನು. ಜ್ಞಾತ್ವಾ=ತಿಳಿದುಕೊಂಡು, ಅಶುಭಾತ್=ಜನನಮರಣಾದಿರೂಪವಾದ ದುಃಖಮಯ ಸಂಸಾರದಿಂದ, ಮೋಕ್ಷ್ಯಸೇ=ಬಿಡುಗಡೆ ಹೊಂದುವಿಯೋ, ಇದಂ=ಅಂತಹ ಮುಂದೆ ಹೇಳುವ, ಗುಹ್ಯತಮಂ=ಅತಿಗೋಪ್ಯವಾದ, ವಿಜ್ಞಾನಸಹಿತಂ=ವಿಶೇಷವಾಗಿ ತಿಳಿಯಬೇಕಾದ ಮಹಿಮೆಯಿಂದ ಕೂಡಿರುವ, ಜ್ಞಾನಂ ತು=ತಿಳಿಯಲು ಯೋಗ್ಯವಾದ ಸಾಮಾನ್ಯ ಭಗವನ್ಮಹಿಮೆಯನ್ನು, ಅನಸೂಯವೇ=ಅಸೂಯಾ ಮೊದಲಾದ ದೋಷಗಳಿಲ್ಲದ, ತೇ=ನಿನಗಾಗಿ, ಪ್ರವಕ್ಷ್ಯಾಮಿ=ಹೇಳುವೆನು. ॥ ೧ ॥

ಭಾ ॥ ಓಂ ॥ ಸಪ್ತಮಾಧ್ಯಾಯೋಕ್ತಂ ಸ್ಪಷ್ಟಯತ್ಯಸ್ಮಿನ್ನಧ್ಯಾಯೇ ॥ ೧ ॥

ಅ ॥ ಏಳನೇ ಅಧ್ಯಾಯದಲ್ಲಿ ಹೇಳಿದ ಶ್ರೀಪರಮಾತ್ಮನ ಮಹಿಮೆಯನ್ನು (ಅಂದರೆ ೭ನೇ ಅಧ್ಯಾಯದಲ್ಲಿ ಹೇಳಿದ ಬ್ರಹ್ಮ ಅಧ್ಯಾತ್ಮ ಮೊದಲಾದ ಪದಾರ್ಥಗಳನ್ನು ೮ನೇ ಅಧ್ಯಾಯದಲ್ಲಿ ವ್ಯಾಖ್ಯಾನಮಾಡಿ) ಈ ೯ನೇ ಅಧ್ಯಾಯದಲ್ಲಿ (ತೇ ಬ್ರಹ್ಮ ತದ್ವಿದುಃ ಇತ್ಯಾದಿ ವಾಕ್ಯಗಳ ಅರ್ಥಭೂತವಾದ ಭಗವನ್ಮಹಿಮೆಯನ್ನು) ಸ್ಪಷ್ಟೀಕರಿಸುತ್ತಾರೆ. ॥ ೧ ॥

ತಾ ॥ ಓಂ ॥ ಸಪ್ತಮೋಕ್ತಂ ಪ್ರಪಂಚಯತಿ ॥ ೧ ॥

ಅ ॥ ೭ನೇ ಅಧ್ಯಾಯದಲ್ಲಿ ಹೇಳಿದ ಭಗವನ್ಮಹಿಮೆಯನ್ನು ವಿವರಿಸುತ್ತಾರೆ. ॥ ೧ ॥

ಗೀ ॥ ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಂ ।
ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಂ ॥ ೨ ॥

ಅ ॥ ಇದಂ=ಮುಂದೆ ಹೇಳುವುದು. ರಾಜವಿದ್ಯಾ=ವಿದ್ಯೆಗಳಲ್ಲಿ ಪ್ರಧಾನ ವಿದ್ಯೆಯು, ರಾಜಗುಹ್ಯಂ=ಗೋಪ್ಯಗಳಲ್ಲಿ ಅತಿಗೋಪ್ಯವು. ಪವಿತ್ರಂ=ಪಾವಿತ್ರ್ಯವನ್ನು ಹೊಂದಿಸತಕ್ಕದ್ದು, ಉತ್ತಮಂ=

।

ಅತ್ಯುತ್ತಮವು, ಪ್ರತ್ಯಕ್ಷಾವಗಮಂ=ಸರ್ವೇಂದ್ರಿಯಗಳಿಗೆ ಪ್ರೇರಕನಾದ ಶ್ರೀಪರಮಾತ್ಮನ ಅಪರೋಕ್ಷಜ್ಞಾನಕ್ಕೆ ಸಾಧನವಾದುದು, ಅವ್ಯಯಂ=ನಾಶರಹಿತವಾದುದು. ಧರ್ಮ್ಯಂ=ಸರ್ವಧಾರಕನಾದ ಶ್ರೀಪರಮಾತ್ಮನ ವಿಷಯಕವಾದ ಅಪರೋಕ್ಷಜ್ಞಾನಕ್ಕೆ ಸಾಧನವಾದ ಪರೋಕ್ಷಜ್ಞಾನವನ್ನು, ಕರ್ತುಂ=ಸಂಪಾದಿಸುವುದಕ್ಕೆ, ಸುಸುಖಂ=ಅತಿಶಯ ಸುಖಸಾಧನವಾದುದು. ॥ ೨ ॥

ಪೀ—ಇಂತಹ ಭಗವದ್ವಿಷಯಕವಾದ ಪರೋಕ್ಷಜ್ಞಾನವು ಸುಲಭಸಾಧ್ಯವೇದಾದರೆ ಯಾರೊಬ್ಬನೂ ಸಂಸಾರಿಯಾಗದೆ ಹೋದಾನು ಎಂದರೆ—

**ಗೀ॥ ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥ ೩ ॥**

ಅ॥ ಪರಂತಪ=ಎಲೋ ಅರ್ಜುನನೇ, ಧರ್ಮಸ್ಯ=ಭಗವದ್ವಿಷಯಕವಾದ, ಅಸ್ಯ=ಈ ಜ್ಞಾನವನ್ನು (ದಲ್ಲಿ), ಅಶ್ರದ್ದಧಾನಾಃ=ಮೋಕ್ಷಾದಿರೂಪ ಪುರುಷಾರ್ಥಕ್ಕೆ ಕಾರಣವೆಂದು ಶ್ರದ್ಧೆಮಾಡದಿರುವ, ಪುರುಷಾಃ=ಜನರು, ಮಾಂ=ನನ್ನನ್ನು, ಅಪ್ರಾಪ್ಯ=ಹೊಂದದೆ, ಮೃತ್ಯುಸಂಸಾರವರ್ತ್ಮನಿ=ಜನನ ಮರಣಾದಿರೂಪವಾದ ಸಂಸಾರಮಾರ್ಗದಲ್ಲಿ, ನಿವರ್ತಂತೇ=ಬೀಳುತ್ತಾರೆ. ॥ ೩ ॥

ಪೀ—ಅಶ್ವಪತಿ ಜನಕ ಮೊದಲಾದ ರಾಜರ ವಿದ್ಯೆಯು ರಾಜವಿದ್ಯೆಯೆನಿಸುತ್ತದೆ, ಎಂಬೀ ಪರರ ವ್ಯಾಖ್ಯಾನವು ಅಯುಕ್ತವೆಂಬುವ ಅಭಿಪ್ರಾಯದಿಂದ ಸರಿಯಾದ ಅರ್ಥವನ್ನು ಹೇಳುತ್ತಾರೆ—

**ಭಾ॥ (೧) ರಾಜವಿದ್ಯಾ ಪ್ರಧಾನವಿದ್ಯಾ ॥ (೨) ಪ್ರತ್ಯಕ್ಷಂ ಬ್ರಹ್ಮಾವಗಮ್ಯತೇ ಯೇನ ತತ್ಪ್ರತ್ಯಕ್ಷಾವಗಮಂ । ಅಕ್ಷೇಷ್ವಿಂದ್ರಿಯೇಷು ಪ್ರತಿ ಪ್ರತಿಷ್ಠಿತ ಇತಿ ಪ್ರತ್ಯಕ್ಷಃ ॥ (೩) ತಥಾ ಚ ಶ್ರುತಿಃ । (1) ಯಃ ಪ್ರಾಣೇ ತಿಷ್ಠನ್ಪ್ರಾಣಾದಂತರೋ ಯಂ ಪ್ರಾಣೋ ನ ವೇದ ಯಸ್ಯ ಪ್ರಾಣಃ ಶರೀರಂ ಯಃ ಪ್ರಾಣಮಂತರೋ ಯಮಯತ್ಯೇಷ ತ ಆತ್ಮಾಂತರ್ಯಾಮ್ಯಮೃತಃ । (2) ಯೋ ವಾಚಿ ತಿಷ್ಠನ್........ । (3) ಯಶ್ಚಕ್ಷುಷಿ ತಿಷ್ಠನ್....ಇತ್ಯಾದೇಃ । (4) ಯ ಏಷೋಽಂತರಕ್ಷಿಣಿ ಪುರುಷೋ ದೃಶ್ಯತ ಇತಿ ಚ । (5) ಅಂಗುಷ್ಠಮಾತ್ರಃ ಪುರುಷೋಽಂಗುಷ್ಠಂ ಚ ಸಮಾಶ್ರಿತ ಇತಿ ಚ । (6) ತ್ವಂ ಮನಸ್ತ್ವಂ ಚಂದ್ರಮಾಸ್ತ್ವಂ ಚಕ್ಷುರಾದಿತ್ಯ ಇತ್ಯಾದೇಶ್ಚ ಮೋಕ್ಷಧರ್ಮೇ ॥ ೧ ॥**

ಅ॥ (೧) ರಾಜವಿದ್ಯಾ=ವಿದ್ಯೆಗಳಲ್ಲಿ ಪ್ರಧಾನ ವಿದ್ಯೆಯು. (೨) (ಭಗವಂತನ ಮಹಿಮೆಯನ್ನು ಕೇವಲ ಶಾಸ್ತ್ರಗಳಿಂದಲೇ ತಿಳಿಯಬೇಕಾದುದರಿಂದ ಪ್ರತ್ಯಕ್ಷೇಣಾವಗಮೋ ಯಸ್ಯ ಪ್ರತ್ಯಕ್ಷದಿಂದ ತಿಳಿಯಲ್ಪಡತಕ್ಕವನು ಎಂಬುವ ಪರರ ವ್ಯಾಖ್ಯಾನವು ಅಯುಕ್ತವೆಂಬುವ ಅಭಿಪ್ರಾಯದಿಂದ ಸರಿಯಾದ ಅರ್ಥವನ್ನು ಹೇಳುತ್ತಾರೆ—) ಪ್ರತ್ಯಕ್ಷನೆನಿಸಿದ ಪರಬ್ರಹ್ಮನು ಯಾವ ಶಾಸ್ತ್ರಜನ್ಯ ಪರೋಕ್ಷಜ್ಞಾನದಿಂದ ಹುಟ್ಟುವ ಅಪರೋಕ್ಷಜ್ಞಾನಕ್ಕೆ ವಿಷಯನಾಗುತ್ತಾನೋ, ಅಂತಹ ಅಪರೋಕ್ಷಜ್ಞಾನಕ್ಕೆ ಸಾಧನವಾದ ಪರೋಕ್ಷಜ್ಞಾನವು ಪ್ರತ್ಯಕ್ಷಾವಗಮವೆನಿಸುತ್ತದೆ. (ಕೇವಲ ಶಾಸ್ತ್ರಗಳಿಂದಲೇ ತಿಳಿಯಲ್ಪಡುವ ಬ್ರಹ್ಮನು ಪ್ರತ್ಯಕ್ಷ ಎಂದು ಎನಿಸಿಕೊಳ್ಳುವನು ಹೇಗೆ ಎಂದರೆ—) ಶ್ರೀಪರಮಾತ್ಮನು ಪ್ರತಿ ಇಂದ್ರಿಯಗಳಿಗೆ ಅಭಿಮಾನಿಗಳಾದ ದೇವತೆಗಳಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ನಿಯಾಮಕನಾಗಿರುವುದರಿಂದ ಪ್ರತ್ಯಕ್ಷನೆನಿಸಿಕೊ

ಳ್ಳುತ್ತಾನೆ. (೩) ಪರಮಾತ್ಮನು ಎಲ್ಲಾ ಇಂದ್ರಿಯಾಭಿಮಾನಿ ದೇವತೆಗಳಲ್ಲಿಯೂ ನಿಯಾಮಕನಾಗಿದ್ದಾನೆಂಬುವ ವಿಷಯದಲ್ಲಿ ಶ್ರುತಿಯಿದೆ. (1) ಯಾವ ಶ್ರೀಪರಮಾತ್ಮನು (ಪ್ರಾಣೇ=) (ಮೂಗು ಎಂಬುವ ಇಂದ್ರಿಯಕ್ಕೆ ಅಭಿಮಾನಿಯಾದ ಅಹಂಕಾರಿಕ ಪ್ರಾಣ ಎನಿಸಿಕೊಂಡ ನಾಸಿಕ್ಯವಾಯುವಿನಲ್ಲಿ, ಇರುತ್ತಾನೋ, ಯಾವ ಶ್ರೀಹರಿಯು ಅಂತಹ ನಾಸಿಕ್ಯವಾಯುವಿನಿಂದ ಭಿನ್ನನೋ, ಯಾವ ಶ್ರೀಹರಿಯನ್ನು ನಾಸಿಕಾಭಿಮಾನಿ ದೇವತೆಯು ತಿಳಿಯುವುದಿಲ್ಲವೋ, ಯಾವ ಶ್ರೀಹರಿಗೆ ನಾಸಿಕಾಭಿಮಾನಿಯಾದ ದೇವತೆಯು ಶರೀರಸ್ಥಾನೀಯಳೋ ಯಾವ ಶ್ರೀಹರಿಯು ನಾಸಿಕಾಭಿಮಾನಿ ದೇವತೆಯೊಳಗೆ ಇದ್ದು ಆ ದೇವತೆಯನ್ನು ನಿಯಮಿಸುತ್ತಾನೋ ಗರುಡನಿಗೆ ಸ್ವಾಮಿಯಾದ ಅಂತಹ ಶ್ರೀಪರಮಾತ್ಮನೇ ನಿನಗೆ (ಉದ್ದಾಲಕರಿಗೆ) ಸ್ವಾಮಿಯು, ಅಂತರ್ಯಾಮಿಯು, ನಿತ್ಯನು, ಸರ್ವಸ್ವತಂತ್ರನಾಗಿ ನಿಯಮಿಸುವವನು. (2) ಯಾವ ಶ್ರೀಹರಿಯು ವಾಗಿಂದ್ರಿಯಾಭಿಮಾನಿ ದೇವತೆಯಲ್ಲಿ ನಿಯಾಮಕನಾಗಿರುತ್ತಾನೋ (3) ಯಾವ ಶ್ರೀಹರಿಯು ಚಕ್ಷುರಿಂದ್ರಿಯಕ್ಕೆ ಅಭಿಮಾನಿಯಾದ ದೇವತೆಯಲ್ಲಿರುತ್ತಾನೋ ಇದು ಮೊದಲಾದ (ಬೃ ಉ. ೨೬೦) ವೇದ ಪ್ರಮಾಣಗಳಿಂದಲೂ (4) ಯಾವ ಶ್ರೀಪರಮಾತ್ಮನು ಕಣ್ಣಿನೊಳಗೆ ನಿಯಾಮಕನಾಗಿದ್ದು ದಿವ್ಯದೃಷ್ಟಿಯಿಂದ ಕಾಣಿಸಿಕೊಳ್ಳಲ್ಪಡುತ್ತಾನೋ ಎಂದೂ (5) ಯಾವ ಶ್ರೀ ಪರಮಾತ್ಮನು ರೂಪವಿಶೇಷದಿಂದ ಜೀವರ ಅಂಗುಷ್ಠದ ಪರಿಮಾಣದಷ್ಟು ಪರಿಮಾಣವುಳ್ಳವನು. ಜೀವರ ಅಂಗುಷ್ಠವನ್ನಾಶ್ರಯಿಸಿಕೊಂಡಿದ್ದಾನೆ ಅಂತರೆ ಎಲ್ಲಾ ಜೀವರ ಕರ್ಮೇಂದ್ರಿಯಗಳಲ್ಲಿ ನಿಯಾಮಕನಾಗಿರುತ್ತಾನೆ ಎಂದೂ, (6) ಮತ್ತು ನೀನು ಮನಸ್ಸಿಗೆ ನಿಯಾಮಕನು. ಪ್ರೇರಕನು. ನೀನು ಚಂದ್ರಾಂತರ್ಯಾಮಿಯು. ಚಕ್ಷುರಂತರ್ಗತನು. ಸೂರ್ಯಾಂತರ್ಯಾಮಿಯು, ಇದು ಮೊದಲಾದ ಮೋಕ್ಷಧರ್ಮದಲ್ಲಿ ಹೇಳಿದ ಪ್ರಮಾಣಗಳಿಂದಲೂ ಎಲ್ಲಾ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೂ ಅವುಗಳಿಗೆ ಅಭಿಮಾನಿಗಳಾದ ದೇವತೆಗಳಿಗೂ ನಿಯಾಮಕನೆಂಬುವುದು ಸಿದ್ಧವಾಗುತ್ತದೆ ॥ ೧ ॥

ಹೀ - ಪ್ರತ್ಯಕ್ಷವೆಂಬುವ ಶಬ್ದವು ಪರಮಾತ್ಮನನ್ನು ಹೇಳುತ್ತದೆ, ಎಂಬುವ ವಿಷಯದಲ್ಲಿ ಶ್ರುತಿಯನ್ನು ಹೇಳುತ್ತಾರೆ—

ಭಾ ॥ (೧) ಸ ಪ್ರತ್ಯಕ್ಷಃ ಪ್ರತಿಪ್ರತಿ ಹಿ ಸೋಽಕ್ಷೇಷ್ವಕ್ಷವಾನ್ಸ್ಯ ಸ ಭವತಿ ಯ ಏವಂ ವಿದ್ವಾನ್ಪ್ರತ್ಯಕ್ಷಂ ವೇದೇತಿ ಸಾಮವೇದೇ ವಾರುಣಶಾಖಾಯಾಂ ॥ (೨) ಧರ್ಮೋ ಭಗವಾನ್ ತದ್ವಿಷಯಂ ಧರ್ಮ್ಯಂ । ಸರ್ವಂ ಜಗದ್ಧತ್ತ ಇತಿ ಧರ್ಮಃ । (೩) ಪೃಥಿವೀ ಧರ್ಮಮೂರ್ಧನೀತಿ ಪ್ರಯೋಗಾನ್ಮೋಕ್ಷಧರ್ಮೇ ॥ (೪) ಭಾರಭೃತ್ಕಥಿತೋ ಯೋಗೀತಿ ಚ । (೫) ಭರ್ತಾ ಸನ್ ಭ್ರಿಯಮಾಣೋ ಬಿಭರ್ತೀತಿ ಚ ಶ್ರುತಿಃ ॥ (೬) ಧರ್ಮೋ ವಾ ಇದಮಗ್ರ ಆಸೀನ್ನ ಪೃಥಿವೀ ನ ವಾಯುರ್ನಾಕಾಶೋ ನ ಬ್ರಹ್ಮಾ ನ ರುದ್ರೋ ನ ದೇವಾ ನ ಋಷಯಃ ಸೋಽಧ್ಯಾಯದಿತಿ ಚ ಸಾಮವೇದೇ ಬಾಭ್ರವ್ಯಶಾಖಾಯಾಂ ॥ ೨ ॥ ॥ ೨,೩ ॥

ಟೀ ॥ (೧) ಆ ಶ್ರೀಹರಿಯು ಎಲ್ಲಾ ಇಂದ್ರಿಯ ಇಂದ್ರಿಯಾಭಿಮಾನಿ ದೇವತೆಗಳಲ್ಲಿ ಪ್ರತ್ಯೇಕಪ್ರತ್ಯೇಕ ನಿಯಾಮಕನಾಗಿದ್ದು ಪ್ರಶಸ್ತ ಇಂದ್ರಿಯಗಳುಳ್ಳವನು. ಆದುದರಿಂದ ಪ್ರತ್ಯಕ್ಷ ಎಂದು ಹೇಳಿಸಿಕೊಳ್ಳಲ್ಪಡುತ್ತಾನೆ. ಯಾವನು ಹೀಗೆ ಪ್ರತ್ಯಕ್ಷಶಬ್ದದ ಅರ್ಥವನ್ನು ತಿಳಿಯುತ್ತಾನೋ, ಹೀಗೆ ಸಾಮವೇದದಲ್ಲಿ ಬಾಭ್ರವ್ಯಶಾಖೆಯಲ್ಲಿ (ಪ್ರತ್ಯಕ್ಷಶಬ್ದವು ಭಗವದ್ವಾಚಕವೆಂದು ಹೇಳಿದೆ.) (೨) ಚೇತನಾಚೇತನಾತ್ಮಕವಾದ ಎಲ್ಲಾ ಜಗತ್ತನ್ನು ಧರಿಸಿಕೊಂಡಿರುವುದರಿಂದ ಶ್ರೀಪರಮಾತ್ಮನು ಧರ್ಮ ಎನಿಸಿಕೊಳ್ಳುತ್ತಾನೆ

ಅಂತಹ ಭಗವದ್ವಿಷಯಕವಾದ ಪರೋಕ್ಷಜ್ಞಾನವು ಧರ್ಮ್ಯವು ಎನಿಸಿಕೊಳ್ಳುತ್ತದೆ. (೩) (ಧಾರಕವಸ್ತುವಿನಲ್ಲಿ ಧರ್ಮಶಬ್ದಪ್ರವೃತ್ತಿಯು ಹೇಗೆ? ಎಂದರೆ—) ಪೃಥಿವಿಯು ಪರ್ವತದ ಮೇಲೆ ಇದೆ. ಪೃಥಿವಿಯು ಪರ್ವತವೇ ಆಧಾರವಾಗಿ ಉಳ್ಳದ್ದಾಗಿದೆ. ಅಂದರೆ ಪರ್ವತವು ಪೃಥಿವಿಗೆ ಆಧಾರವಾಗಿರುವುದರಿಂದ ಭೂಧರವೆಂದು ಪ್ರಸಿದ್ಧವಾಗಿದೆ. ಹೀಗೆ ಮೋಕ್ಷಧರ್ಮದಲ್ಲಿ ಧಾರಕವಸ್ತುವಿನಲ್ಲಿ ಧರ್ಮಶಬ್ದಪ್ರಯೋಗವು ಇದೆ. (೪) (ಶ್ರೀಪರಮಾತ್ಮನು ಸರ್ವಧಾರಕನೆಂಬುವಲ್ಲಿ ಪ್ರಮಾಣವೇನೆಂದರೆ–) ಶ್ರೀಪರಮಾತ್ಮನು ಸಮಸ್ತ ಭೂಭಾರಗಳನ್ನು ಹೊತ್ತುಕೊಂಡಿರುವವನು. ಸರ್ವೇ ವೇದಾ ಯತ್ಪದಮಾಮನಂತಿ ಇತ್ಯಾದಿ ಪ್ರಮಾಣಗಳಿಂದ ಸಮಸ್ತವೇದಗಳಿಂದಲೂ ಇತಿಹಾಸ ಪುರಾಣಗಳಿಂದಲೂ ಪ್ರತಿಪಾದಿಸಿಕೊಳ್ಳಲ್ಪಟ್ಟವನು. ತನ್ನನ್ನು ತಾನೇ ಧ್ಯಾನಿಸಿಕೊಂಡಿರುವವನು. (೫) (ಶ್ರೀಪರಮಾತ್ಮನು ಸರ್ವತ್ರ ಇರುವವನಾದುದರಿಂದ ಎಲ್ಲರಿಂದ ಧರಿಸಲ್ಪಡುತ್ತಾನೆ. ಆದಕಾರಣ ಶ್ರೀಪರಮಾತ್ಮನು ಸರ್ವಧಾರಕನು ಎಂಬುವುದು ಹೇಗೆ ಎಂದರೆ–) ಸರ್ವಧಾರಕನಾಗಿಯೇ ಇತರರಿಂದ ಧರಿಸಲ್ಪಟ್ಟವನಾಗಿ ಸರ್ವರನ್ನು ಧರಿಸುತ್ತಾನೆ. (ತನ್ನ ಸ್ಥಿತಿಗಾಗಿ ಇನ್ನೊಬ್ಬರಲ್ಲಿರುವುದಲ್ಲ.) ಎಂದು ಶ್ರುತಿಯಿದೆ. (೬) (ಧರ್ಮಶಬ್ದವು ಭಗವದ್ವಾಚಕವು ಹೇಗೆ ಆಗುವುದೆಂದರೆ–) ಸರ್ವಧಾರಕನಾಗಿರುವುದರಿಂದ ಧರ್ಮ ಎನಿಸಿದ ಶ್ರೀಪರಮಾತ್ಮನೇ ಪ್ರಳಯಕಾಲದಲ್ಲಿ ಇರುತ್ತಿದ್ದನು. ಪೃಥಿವಿಯೂ, ಆಕಾಶವೂ, ಚತುರ್ಮುಖ ಬ್ರಹ್ಮನೂ, ರುದ್ರನೂ, ದೇವತೆಗಳೂ, ಋಷಿಗಳೂ, ಯಾರೂ ಇರಲಿಲ್ಲ. ಆ ಶ್ರೀಹರಿಯೊಬ್ಬನೇ ಆಲೋಚಿಸುತ್ತಿದ್ದನು, ಎಂದು ಸಾಮವೇದ ಶಾಖೆಯಲ್ಲಿ ಹೇಳಿದೆ. ॥ ೨ ॥ ॥ ೨, ೩ ॥

ಟೀ—ಆ ಜ್ಞಾನವಿಜ್ಞಾನಗಳ ಮಧ್ಯದಲ್ಲಿ ಜ್ಞಾನ ಎನಿಸಿದ ತಿಳಿಯಲು ಯೋಗ್ಯವಾದ ಮಹಿಮೆಯನ್ನು ಹೇಳುತ್ತಾರೆ—

**ಗೀ ॥ ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೪ ॥**

ಅ ॥ ಇದಂ ಸರ್ವಂ ಜಗತ್=ಚೇತನಾಚೇತನಾತ್ಮಕವಾದ ಈ ಎಲ್ಲಾ ಜಗತ್ತು, ಅವ್ಯಕ್ತಮೂರ್ತಿನಾ=ಎಲ್ಲರಿಗೆ ಪ್ರಕಟವಾಗದಿರುವ ದೇಹವುಳ್ಳ, ಮಯಾ=ನನ್ನಿಂದ, ತತಂ=ವ್ಯಾಪ್ತವಾಗಿದೆ. ಸರ್ವಭೂತಾನಿ=ಜಡಸಹಿತರಾದ ಜೀವರ ಸಮುದಾಯಗಳು, ಮತ್ಸ್ಥಾನಿ=ನನ್ನನ್ನು ಆಶ್ರಯಿಸಿಯೇ ಇರುತ್ತವೆ. ತೇಷು ಚ=ಜಡಸಹಿತರಾದ ಆ ಜೀವರಲ್ಲಿ, ಅಹಂ=ನಾನು, ನಾವಸ್ಥಿತಃ=ಇರುವುದಿಲ್ಲ. (ಅಂದರೆ ಅಂತಹ ಜೀವರನ್ನು ಆಶ್ರಯಿಸಿಕೊಂಡು ನಾನು ಇರುವವನಲ್ಲ.) ॥ ೪ ॥

**ಭಾ ॥ ಪ್ರತ್ಯಕ್ಷಾವಗಮಶಬ್ದೇನಾಪರೋಕ್ಷಜ್ಞಾನಸಾಧನತ್ವಮುಕ್ತಮ್ । ತಜ್ಜ್ಞಾನಾದ್ಯಾಹ ಮಯೇತಿ । ತರ್ಹಿ ಕಿಮಿತಿ ನ ದೃಶ್ಯತ ಇತ್ಯತ ಆಹ । ಅವ್ಯಕ್ತಮೂರ್ತಿನೇತಿ ॥ ೪ ॥**

ಅ ॥ ಪ್ರತ್ಯಕ್ಷಾವಗಮ ಶಬ್ದದಿಂದ ಪರೋಕ್ಷಜ್ಞಾನಕ್ಕೆ ಅಪರೋಕ್ಷಜ್ಞಾನಸಾಧನತ್ವವು ಹೇಳಲ್ಪಟ್ಟಿದೆ. ಮಯಾ ಎಂಬುವ ಶ್ಲೋಕದಿಂದ ಹಿಂದೆ ಪ್ರತಿಜ್ಞೆಮಾಡಿದ ಅಪರೋಕ್ಷಜ್ಞಾನಕ್ಕೆ ಸಾಧನವಾದ ಭಗವಂತನ ಸಾಮಾನ್ಯ ಮಹಿಮೆಯನ್ನೂ ವಿಶೇಷ ಮಹಿಮೆಯನ್ನೂ ಹೇಳುತ್ತಾರೆ. ಶ್ರೀಪರಮಾತ್ಮನು ಸರ್ವವ್ಯಾಪಿಯಾದರೆ ಎಲ್ಲರಿಂದ ಎಲ್ಲ ಕಡೆ ಏಕೆ ಕಾಣಿಸಿಕೊಳ್ಳಲ್ಪಡುವುದಿಲ್ಲ. ಎಂದರೆ ಅವ್ಯಕ್ತಮೂರ್ತಿನಾ ಎಂದು ಹೇಳಿದ್ದಾರೆ ॥ ೪ ॥

ಟೀ—ನಿನ್ನಲ್ಲಿ (ಶ್ರೀಕೃಷ್ಣನಲ್ಲಿ) ಸಮಸ್ತ ಪ್ರಾಣಿಗಳೂ ಇರುತ್ತವೆ ಎಂದಾದರೆ ಭೂಮಿಯಲ್ಲಿ ನಾವು ಇರುತ್ತೇವೆ ಎಂದು ಹೇಳುವಂತೆಯೇ ಶ್ರೀಕೃಷ್ಣನಲ್ಲಿ ನಾವು ಇರುತ್ತೇವೆಂದು ಜ್ಞಾನವು ಬರಬೇಕಾಗುತ್ತದೆ.

ಹಾಗೆಯೇ ಶೀತಲವಾದ ನೀರಿನಲ್ಲಿ ಅಗ್ನಿಯ ಸಂಬಂಧದಿಂದ (ಉಷ್ಣವಿದೆ) ಬಿಸಿ ಎಂದು ಹೇಳಿದಂತೆಯೇ ಶ್ರೀಕೃಷ್ಣನಲ್ಲಿ ಇತರ ವಸ್ತುವಿನಲ್ಲಿರುವ ಉಷ್ಣತ್ವ ಮೊದಲಾದ ಧರ್ಮವೂ ಸೇರಬೇಕಾಗುವುದು, ಎಂದರೆ—

ಗೀ ॥ ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಂ ।
ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫ ॥

ಅ ॥ ಭೂತಾನಿ=ಸಮಸ್ತ ಪ್ರಾಣಿಗಳೂ ಮತ್ಸ್ಥಾನಿ=ನನ್ನಲ್ಲಿರುವವುಗಳು ನ ಚ=ಅಲ್ಲ. (ಅಂದರೆ ಬೆಂಕಿ ಮೊದಲಾದವುಗಳು ಇತರ ವಸ್ತುಗಳಲ್ಲಿ ತಮ್ಮ ಧರ್ಮವನ್ನು ಹೊಂದಿಸಿಕೊಳ್ಳುವಂತೆ ಈ ಪ್ರಾಣಿಗಳು ನನ್ನಲ್ಲಿ ತಮ್ಮ ಧರ್ಮಗಳನ್ನು ಹೊಂದಿಸಿಕೊಳ್ಳುವವುಗಳಲ್ಲ.) (ಮತ್ತು ಶ್ರೀಕೃಷ್ಣನಿಗೆ ಪ್ರಾಕೃತ ಸ್ಪರ್ಶವು ಇಲ್ಲದಿರುವುದರಿಂದ ತ್ವಗಿಂದ್ರಿಯದಿಂದ ಶ್ರೀಕೃಷ್ಣನನ್ನು ತಿಳಿಯು ಜೀವರು ಪರಸ್ಪರ ಧರ್ಮ ಸಂಬಂಧವನ್ನು ಹೊಂದಿ ಇರುವುದಿಲ್ಲ.) (ಭೂತಗಳಿಗೆ ಆಧಾರನಾಗಿದ್ದಾಗ್ಯೂ ಶ್ರೀಹರಿಯು ಭೂತಗಳಿಗೆ ಆಧಾರನಲ್ಲವೆಂಬುತ್ತದು ಹೇಗೆಂದರೆ–) ಐಶ್ವರಂ=ಈಶ್ವರ ಸಂಬಂಧಿಯಾದ, ಮೇ=ನನ್ನ, ಯೋಗಂ=ಅಂತಹ ಸಾಮರ್ಥ್ಯವನ್ನು, ಪಶ್ಯ=ನೋಡು. ಭೂತಭಾವನಃ=ಜಡಸಹಿತಗಳಾದ ಸಮಸ್ತ ಪ್ರಾಣಿಗಳನ್ನು ಸೃಷ್ಟಿಮಾಡುವ, ಮಮ=ನನ್ನ, ಆತ್ಮಾ=ದೇಹವೂ. (ನನ್ನಂತೆಯೇ) ಭೂತಭೃತ್=ಸಮಸ್ತ ಪ್ರಾಣಿಗಳನ್ನು ಪೋಷಿಸುವಂತಾದ್ದು ಭೂತಸ್ಥಶ್ಚ=ಸಮಸ್ತ ಪ್ರಾಣಿಗಳಲ್ಲಿರುವಂಥಾದ್ದು, ನ ಚ=ಅಲ್ಲ. (ಅಂದರೆ ನಾನು ಭೂತಗಳಲ್ಲಿದ್ದರೂ ಭೂತಗಳಲ್ಲಿರುವ ಪ್ರಾಕೃತಗುಣಗಳ ಸಂಬಂಧವು ನನಗೆ ಬರುವುದಿಲ್ಲ. ನನ್ನಲ್ಲಿರುವ ಅಪ್ರಾಕೃತ ದಿವ್ಯಗುಣಗಳು ಭೂತಗಳಿಗೆ ಬರುವುದಿಲ್ಲ.) ॥ ೫ ॥

ಭಾ ॥ (೧) ಮತ್ಸ್ಥತ್ವೇಽಪಿ ಯಥಾ ಪೃಥಿವ್ಯಾಂ ಸ್ಪೃಷ್ಟ್ವಾ ಸ್ಥಿತಾನಿ ನ ತಥಾ ಮಯಿ। ತ್ಯಾಹ । ನ ಚೇತಿ । ನ ದೃಶ್ಯಶ್ಚಕ್ಷುಷಾ ಚಾಸೌ ನ ಸ್ಪೃಶ್ಯಃ ಸ್ಪರ್ಶನೇನ ಚೇತಿ ಚ ಮೋಕ್ಷಧರ್ಮೇ ॥ (೨) ಸಂಜ್ಞಾಸಂಜ್ಞ ಇತಿ ಚ । ಮಮಾತ್ಮಾ ದೇಹ ಏವ ಭೂತಭಾವನಃ । ಮಹಾವಿಭೂತೇ ಮಾಹಾತ್ಮ್ಯಶರೀರ ಇತಿ ಚ ಮೋಕ್ಷಧರ್ಮೇ ॥ ೫ ॥

ಅ ॥ (೧) ಸಮಸ್ತ ಪ್ರಾಣಿಗಳು ನನ್ನಲ್ಲಿದ್ದರೂ ಪೃಥಿವಿಯಲ್ಲಿದ್ದವರು ತ್ವಗಿಂದ್ರಿಯದಿಂದ ಪೃಥಿವಿಯನ್ನು ಮುಟ್ಟಿಕೊಂಡು (ಅಂದರೆ ಪೃಥಿವಿಯನ್ನು ತಿಳಿದುಕೊಂಡು ಮತ್ತು ಪರಸ್ಪರ ಧರ್ಮಸಂಬಂಧಗಳನ್ನು ಹೊಂದಿಕೊಂಡು) ಹೇಗೆ ಇರುತ್ತಾರೋ, ಹಾಗೆಯೇ ನನ್ನಲ್ಲಿ ಇದ್ದವರು ಅಲ್ಲ, ಎಂದು ನಚ ಎಂಬುವ ಶ್ಲೋಕದಿಂದ ಹೇಳುತ್ತಾರೆ. (ಶ್ರೀಪರಮಾತ್ಮನೇ ತ್ವಗಾದಿ ಇಂದ್ರಿಯಗಳಿಂದ ತಿಳಿಯಲಿಕ್ಕೆ ಸಾಧ್ಯನಲ್ಲವೆಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ–) ಶ್ರೀಪರಮಾತ್ಮನು ಕಣ್ಣಿನಿಂದ ನೋಡಲರ್ಹನಲ್ಲ, ತ್ವಗಿಂದ್ರಿಯದಿಂದ ತಿಳಿಯಲ್ಪಡಶಕ್ಯನಲ್ಲ, ಎಂದು ಮೋಕ್ಷಧರ್ಮದಲ್ಲಿದೆ (೨) ಆಗಮ ಪ್ರಮಾಣಗಳಿಂದಲೇ ತಿಳಿಯಲ್ಪಡಶಕ್ಯನು. (ಮೊದಲು ಶ್ರೀಪರಮಾತ್ಮನು ಸಮಸ್ತ ಪ್ರಾಣಿಗಳಿಗೆ ಆಧಾರನೆಂದು ಹೇಳಿರುತ್ತಾರೆ ಈಗ ಅವ್ಯಕ್ತಮೂರ್ತಿನಾ ಎಂಬುದರಿಂದ ಶ್ರೀಪರಮಾತ್ಮನ ದೇಹಕ್ಕೆ ಭೂತಾಧಾರತ್ವವನ್ನು ಹೇಳುವಾಗ ನಮ್ಮ ದೇಹವು ನಮ್ಮಿಂದ ಹೇಗೆ ಭಿನ್ನವೋ, ಹಾಗೆಯೇ ಶ್ರೀಹರಿಯ ದೇಹವು ಶ್ರೀಹರಿಯಿಂದ ಭಿನ್ನವೆಂಬುವ ಭ್ರಾಂತಿಯನ್ನು ಕಳೆಯುವುದಕ್ಕಾಗಿ ತನ್ನ ಲಕ್ಷಣವನ್ನು ತನ್ನ ದೇಹಕ್ಕೆ ಹೇಳುತ್ತಾರೆ—) ನನ್ನ ದೇಹವೇ ಸಮಸ್ತ ಪ್ರಾಣಿಗಳನ್ನು ಸೃಷ್ಟಿಸಿರುತ್ತದೆ. ಮಹಾ [illegible] ಮಹಾತ್ಮ್ಯ, (ಸಮಸ್ತ ಜಗತ್ತನ್ನು ಸೃಷ್ಟಿಮಾಡುವ) ಶರೀರವುಳ್ಳವನೇ ಎಂದು ಮೋಕ್ಷಧರ್ಮದಲ್ಲಿ (ಹೇಳಿದ

ಪ್ರಕಾರ ಶ್ರೀಹರಿಯ ಶರೀರವೂ ಚೇತನಾಚೇತನ ಜಗತ್ತನ್ನು ಸೃಷ್ಟಿಸುವಂಥಾದ್ದು ಎಂದು ಸಿದ್ಧವಾಗುತ್ತದೆ.) ॥ ೫ ॥

ಪೀ— ಶ್ರೀಪರಮಾತ್ಮನು ಸರ್ವರಿಗೆ ಆಶ್ರಯನಾದಾಗ್ಯೂ ಹಿಂದೆ ಹೇಳಿದ ಪ್ರಕಾರ ಪರಸ್ಪರ ಧರ್ಮಸಂಬಂಧಾದಿಗಳು ಇಲ್ಲ, ಎಂಬುದನ್ನು ದೃಷ್ಟಾಂತಕೊಟ್ಟು ತೋರಿಸುತ್ತಾರೆ—

ಗೀ ॥ ಯಥಾಽಽಕಾಶಸ್ಥಿತೋ ನಿತ್ಯಂ ವಾಯುಃ ಸರ್ವತ್ರಗೋ ಮಹಾನ್ ।
ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬ ॥

ಅ ॥ ಯಥಾ=ಹೇಗೆ, ನಿತ್ಯಂ=ನಿತ್ಯದಲ್ಲಿಯೂ, ಆಕಾಶಸ್ಥಿತಃ—ಆಕಾಶದಲ್ಲಿರತಕ್ಕ, ಮಹಾನ್ ವಾಯುಃ—ದೊಡ್ಡ ಗಾಳಿಯು, ಸರ್ವತ್ರಗಃ=ಎಲ್ಲಾ ಕಡೆಗಳಲ್ಲಿದ್ದರೂ. (ಆಯಾಯ ವಸ್ತುಗಳ ಧರ್ಮಗಳನ್ನು ಹೊಂದುವುದಿಲ್ಲವೋ.) (ಶೈತ್ಯ ಸೌರಭಾದಿಗಳು ವಾಯುಸಂಬದ್ಧಗಳಾದ ಜಲಾದ್ಯವಯವಗಳಲ್ಲಿಯೇ ಇರುವವು. ವಾಯುವಿನಲ್ಲಿರತಕ್ಕುದಲ್ಲವೋ) ತಥಾ=ಹಾಗೆಯೇ, ಸರ್ವಾಣಿ ಭೂತಾನಿ=ಸಮಸ್ತ ಪ್ರಾಣಿಗಳೂ, ಮತ್ಸ್ಥಾನಿ=ನನ್ನಲ್ಲಿಯೇ ಇರುವವುಗಳು, (ಹಿಂದೆ ಹೇಳಿದ ಪ್ರಕಾರ ಪರಸ್ಪರ ಧರ್ಮಸಂಬಂಧವುಳ್ಳವುಗಳಲ್ಲ.) ಇತಿ=ಹೀಗೆ. ಉಪಧಾರಯ=ನಿಶ್ಚಯಮಾಡಿಕೊಳ್ಳು. ॥ ೬ ॥

ಭಾ ॥ ಮತ್ಸ್ಥಾನಿ ನ ಚ ಮತ್ಸ್ಥಾನೀತ್ಯಸ್ಯ ದೃಷ್ಟಾಂತಮಾಹ । ಯಥಾಽಽಕಾಶಸ್ಥಿತ ಇತಿ ।
ನ ಹ್ಯಾಕಾಶಸ್ಥಿತೋ ವಾಯುಃ ಸ್ಪರ್ಶಾದ್ಯಾಪ್ನೋತಿ ॥ ೬ ॥

ಅ ॥ ಮತ್ಸ್ಥಾನಿ ಸರ್ವಭೂತಾನಿ, ನ ಚ ಮತ್ಸ್ಥಾನಿ ಎಂದು ಹಿಂದೆ ಹೇಳಿದ ಪ್ರಕಾರ ಅನ್ಯೋನ್ಯ ಧರ್ಮಸಂಬಂಧವಿಲ್ಲವೆಂಬುವ ವಿಷಯದಲ್ಲಿ ಯಥಾಽಽಕಾಶಸ್ಥಿತಃ ಎಂಬುವ ಶ್ಲೋಕದಿಂದ ದೃಷ್ಟಾಂತವನ್ನು ಹೇಳುತ್ತಾರೆ. ಆಕಾಶದಲ್ಲಿರತಕ್ಕ ವಾಯುವು ಸ್ಪರ್ಶಾದಿಗಳನ್ನು ಹೊಂದುವುದಿಲ್ಲವಷ್ಟೆ.

ವಿ ॥ ಆಕಾಶದಲ್ಲಿರತಕ್ಕ ನೀಲರೂಪತ್ವ ಮೊದಲಾದ ಧರ್ಮಗಳ ಸಂಬಂಧವನ್ನು ಹೊಂದುವುದಿಲ್ಲ. ಹಾಗೆಯೇ ಆಕಾಶವು ವಾಯುವಿನಲ್ಲಿರತಕ್ಕ ಸ್ಪರ್ಶ ನೀರೂಪತ್ವಾದಿ ಸಂಬಂಧಗಳನ್ನು ಹೊಂದುವುದಿಲ್ಲ. ತಥಾಚ ಪರಸ್ಪರ ಧರ್ಮಗಳ ಸಂಬಂಧವು ಆಗುವುದಿಲ್ಲವೆಂಬುವಲ್ಲಿ ಇದು ದೃಷ್ಟಾಂತವು. ॥ ೬ ॥

ಪೀ—ಶ್ರೀಪರಮಾತ್ಮನು ಪ್ರಲಯಾದಿಗಳಿಗೆ ಕಾರಣನೆನ್ನುತ್ತಾರೆ—

ಗೀ ॥ ಸರ್ವಭೂತಾನಿ ಕೌಂತೇಯ ಪ್ರಕೃತಿಂ ಯಾಂತಿ ಮಾಮಿಕಾಂ ।
ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಂ ॥ ೭ ॥

ಅ ॥ ಕೌಂತೇಯ=ಅರ್ಜುನನೇ, ಕಲ್ಪಕ್ಷಯೇ=ಪ್ರಲಯಕಾಲದಲ್ಲಿ, ಸರ್ವಭೂತಾನಿ=ಜಡಸಹಿತ ಜೀವರ ಸಮುದಾಯಗಳು ಮಾಮಿಕಾಂ=ನನ್ನ ಅಧೀನವಾದ ಪ್ರಕೃತಿಂ=ಸತ್ವರಜಸ್ತಮೋಗುಣಾತ್ಮವಾದ ಪ್ರಕೃತಿಯನ್ನು, ಯಾಂತಿ=ಹೊಂದುತ್ತವೆ. (ಅಂದರೆ ಜಡಪ್ರಕೃತಿಯಲ್ಲಿ ಲಯಹೊಂದುತ್ತವೆ.) ಪುನಃ=ತಿರುಗಿ ತಾನಿ=ಆ ಜಡಸಹಿತ ಜೀವರ ಸಮುದಾಯಗಳನ್ನು, ಕಲ್ಪಾದೌ=ಸೃಷ್ಟಿಕಾಲದ [illegible] [illegible] ಅಹಂ=ನಾನು, ವಿಶೇಷವಾಗಿ [illegible] [illegible] ಸೃಷ್ಟಿಮಾಡುತ್ತೇನೆ ॥ [illegible]

ಭಾ ॥ ಜ್ಞಾನಪ್ರದರ್ಶನಾರ್ಥಂ ಪ್ರಲಯಾದಿ ಪ್ರಪಂಚಯತಿ । ಸರ್ವಭೂತಾನೀತ್ಯಾದಿನಾ ॥ ೭ ॥

ಅ ॥ ಪ್ರತಿಜ್ಞಾತವಾದ ಮಹಿಮೆಯನ್ನು ತೋರಿಸುವುದಕ್ಕಾಗಿ ಶ್ರೀಪರಮಾತ್ಮನು ಪ್ರಲಯಾದಿಗಳಿಗೆ ಕಾರಣನೆಂಬುವುದನ್ನು ಸರ್ವಭೂತಾನಿ ಇತ್ಯಾದಿಗಳಿಂದ ವಿವರಿಸುತ್ತಾರೆ. ॥ ೭ ॥

ಪೀ—ಹಿಂದೆ ಹೇಳಿದ್ದನ್ನು ವಿವರಿಸುತ್ತಾರೆ—

ಗೀ ॥ ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃಪುನಃ ।
ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ ೮ ॥

ಅ ॥ ಸ್ವಾಂ=ತನ್ನ ಅಧೀನವಾದ, ಪ್ರಕೃತಿಂ=ಸತ್ವರಜಸ್ತಮೋರೂಪವಾದ ಜಡ ಪ್ರಕೃತಿಯನ್ನು, ಅವಷ್ಟಭ್ಯ=ಉಪಾದಾನಕಾರಣವನ್ನಾಗಿ ಇಟ್ಟುಕೊಂಡು. ಪ್ರಕೃತೇರ್ವಶಾತ್=ನನ್ನ ಅಧೀನವಾದ ಪ್ರಕೃತಿಗೂ ಅಧೀನವಾಗಿರುವುದರಿಂದ, ಅವಶಂ=ಅತ್ಯಂತ ಪರಾಧೀನವಾದ. ಅಥವಾ ನನ್ನ ಅಧೀನದಲ್ಲಿರುವ ಪ್ರಕೃತಿಯ ಅಧೀನವಾಗಿರುವುದರಿಂದಲೇ ಅ ಎನಿಸಿಕೊಂಡ ಪರಬ್ರಹ್ಮರೂಪನಾದ ನನ್ನ ಅಧೀನದಲ್ಲಿರುವ, ಇಮಂ=ಈದಾವ, ಕೃತ್ಸ್ನಂ=ಎಲ್ಲಾ, ಭೂತಗ್ರಾಮಂ=ಜಡಸಹಿತ ಜೀವರ ಸಮುದಾಯವನ್ನು, ಪುನಃಪುನಃ=ತಿರುಗಿತಿರುಗಿ, ವಿಸೃಜಾಮಿ=ಬಹುಪ್ರಕಾರ ಸೃಷ್ಟಿಮಾಡುತ್ತೇನೆ. ॥ ೮ ॥

ಪೀ—ಪ್ರಕೃತಿಂ ಸ್ವಾಮವಷ್ಟಭ್ಯ ಎಂಬುವ ವಚನದಿಂದ ಪ್ರಕೃತಿಯ ಆಶ್ರಯವು ಇಲ್ಲವಾದರೆ ಶ್ರೀಪರಮಾತ್ಮನಿಗೆ ಜಗತ್ಸೃಷ್ಟಿಯಲ್ಲಿ ಸಾಮರ್ಥ್ಯವಿಲ್ಲ ಎಂಬುವ ಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ಭಾ ॥ (೧) ಪ್ರಕೃತ್ಯವಷ್ಟಂಭಸ್ತು ಯಥಾ ಕಶ್ಚಿತ್ಸಮರ್ಥೋಽಪಿ ಪಾದೇನ ಗಂತುಂ ಲೀಲಯಾ ದಂಡಮವಷ್ಟಭ್ಯ ಗಚ್ಛತಿ । ಸರ್ವಭೂತಗುಣೈರ್ಯುಕ್ತಂ ನೈವಂ ತ್ವಂ ಜ್ಞಾತುಮರ್ಹಸೀತಿ ಮೋಕ್ಷಧರ್ಮೇ ॥ (೨) ಸರ್ವಭೂತಗುಣೈರ್ಯುಕ್ತಂ ನೈವಂ ಮಾಂ ಜ್ಞಾತುಮರ್ಹಸೀತಿ ಚ ॥ (೩) ವಿದಿತ್ವಾ ಸಪ್ತ ಸೂಕ್ಷ್ಮಾಣಿ ಷಡಂಗಂ ಚ ಮಹೇಶ್ವರಂ । ಪ್ರಧಾನವಿನಿಯೋಗಸ್ಥಃ ಪರಂ ಬ್ರಹ್ಮಾಧಿಗಚ್ಛತೀತಿ ಚ ॥ (೪) ನ ಕುತ್ರಚಿಚ್ಛಕ್ತಿರನಂತರೂಪಾ ವಿಹನ್ಯತೇ ತಸ್ಯ ಮಹೇಶ್ವರಸ್ಯ । ತಥಾಪಿ ಮಾಯಾಮಧಿರುಹ್ಯ ದೇವಃ ಪ್ರವರ್ತಕೇ ಸೃಷ್ಟಿವಿಲಾಪನೇಷ್ವಿತ್ಯೃಗ್ವೇದಖಿಲೇಷು ॥ ೮ ॥

ಅ ॥ (೧) ಹೇಗೆ ಒಬ್ಬನು ಪಾದಚಾರಿಯಾಗಿ ಹೋಗಲು ಸಮರ್ಥನಾದಾಗ್ಯೂ ಕ್ರೀಡೆಯಿಂದ ಕೋಲನ್ನು ಹಿಡಿದುಕೊಂಡು ಹೋಗುತ್ತಾನೋ, ಹಾಗೆಯೇ ಕ್ರೀಡಾರ್ಥವಾಗಿಯೇ ಪ್ರಕೃತಿಯನ್ನು ತನ್ನ ಯಾಸಿ ಉಪಾದಾನಕಾರಣವನ್ನಾಗಿ ಇಟ್ಟುಕೊಂಡು ಪರಮಾತ್ಮನು ಸೃಷ್ಟಿಮಾಡುತ್ತಾನೆ. (ಪ್ರಕೃತಿಯನ್ನು ಬಿಟ್ಟು, ಸೃಷ್ಟಿಮಾಡಲಿಕ್ಕೆ ಕೇವಲ ತನಗೇನೇ ಸಾಮರ್ಥ್ಯವಿಲ್ಲವೆಂದಲ್ಲ.) (೨) (ಏಕೆ ಹೀಗೆ ಅರ್ಥಮಾಡ ಬೇಕೆಂದರೆ) ಶ್ರೀಪರಮಾತ್ಮನಿಗೆ ಸರ್ವ ಸಾಮರ್ಥ್ಯವೂ ಪರಿಪೂರ್ಣವಾಗಿದೆ, ಎಂಬುವುದು ಪ್ರಮಾಣ ಸಿದ್ಧವಾಗಿದೆ. ಎನ್ನುತ್ತಾರೆ-) ನೀನು ಸಮಸ್ತ ವಸ್ತುಗಳ ಸಾಮರ್ಥ್ಯದಿಂದೊಡಗೂಡಿದ ಶ್ರೀಪರಮಾತ್ಮನನ್ನು ಭೂತಗಳಂತೆ ಪಾರತಂತ್ರ್ಯಾದಿಗಳಿಂದೊಡಗೂಡಿದವನನ್ನಾಗಿ ತಿಳಿಯಲು ಯೋಗ್ಯನಲ್ಲ

ಎಂದು. ಮತ್ತು ಸರ್ವ ವಸ್ತುಗಳ ಸಾಮರ್ಥ್ಯಗಳಿಂದ ಕೂಡಿದ ಬ್ರಹ್ಮರುದ್ರಾದಿ ದೇವತೆಗಳಿಂದುತ್ತಮನಾದ ನನ್ನನ್ನು ತಿಳಿಯಲು ಯೋಗ್ಯನಾಗಿರುತ್ತಿ. ಎಂದು ಮೋಕ್ಷಧರ್ಮದಲ್ಲಿದೆ. (೩) ಪೃಥಿವೀ ಮೊದಲಾದ ಐದು ಮಹಾ ಭೂತಗಳೂ ಮಹತ್ತತ್ತ್ವ ಅಹಂಕಾರತತ್ತ್ವಗಳೆರಡು ಹೀಗೆ ಏಳು ಸೂಕ್ಷ್ಮಗಳನ್ನು, ಸರ್ವಜ್ಞತಾ ತೃಪ್ತಿರನಾದಿಬೋಧಃ ಸ್ವತಂತ್ರತಾ ನಿತ್ಯಮಲುಪ್ತಶಕ್ತಿಃ । ಅನಂತಶಕ್ತಿಶ್ಚ ವಿಭೋರ್ವಿಧಿಜ್ಞಾಃ ಸಂತಃ ಷಡಂಗಾನಿ ವದಂತಿ ವಿಷ್ಣೋಃ ಎಂದು ಹೇಳಿದ ಪ್ರಕಾರ ಆರು ಅಂಗಗಳುಳ್ಳ ಶ್ರೀಪರಮಾತ್ಮನನ್ನು ತಿಳಿದು ಮೂಲಪ್ರಕೃತಿಯ ಕಾರ್ಯಗಳಲ್ಲಿರತಕ್ಕ ವ್ಯಾಪಾರವನ್ನು ತಿಳಿದವನು ಪರಬ್ರಹ್ಮನನ್ನು ಹೊಂದುತ್ತಾನೆ. (೪) ಸರ್ವೋತ್ತಮನಾದ ಶ್ರೀಪರಮಾತ್ಮನ ಬಹುವಿಧವಾದ ಶಕ್ತಿಯು ಎಲ್ಲಿಯೂ ಹಾಳಾಗುವುದಿಲ್ಲ. (ವ್ಯತ್ಯಾಸವಾಗುವುದಿಲ್ಲ) ಆದರೂ ಶ್ರೀಪರಮಾತ್ಮನು ಪ್ರಕೃತಿಯನ್ನಾಶ್ರಯಿಸಿ ಸೃಷ್ಟಿನಾಶಗಳನ್ನು ಪ್ರವರ್ತಿಸುತ್ತಾನೆಂದು ಋಗ್ವೇದಖಿಲಗಳಲ್ಲಿದೆ. ॥ ೧ ॥

**ಭಾ ॥ (೧) ಮಯ್ಯನಂತಗುಣೇಽನಂತೇ ಗುಣತೋಽನಂತವಿಗ್ರಹ ಇತಿ ಭಾಗವತೇ ॥ (೨)**
**(1) ಅಥ ಕಸ್ಮಾದುಚ್ಯತೇ ಪರಂ ಬ್ರಹ್ಮ ಬೃಹತಿ ಬೃಂಹಯತಿ ಚೇತ್ಯಥರ್ವಣೇ । (2)**
**ಪರಾಽಸ್ಯ ಶಕ್ತಿರ್ವಿವಿಧೈವ ಶ್ರೂಯತ ಇತಿ ಚ ॥ (೩) ವಿಷ್ಣೋರ್ನು ಕಂ ವೀರ್ಯಾಣಿ**
**ಪ್ರವೋಚಂ ಯಃ ಪಾರ್ಥಿವಾನಿ ವಿಮಮೇ ರಜಾಂಸಿ ॥ (೪) ನ ತೇ ವಿಷ್ಣೋ ಜಾ-**
**ಯಮಾನೋ ನ ಜಾತೋ ದೇವ ಮಹಿಮ್ನಃ ಪರಮಂತಮಾಪೇತ್ಯಾದೇಶ್ಚ ॥ (೫)**
**ಪ್ರಕೃತೇರ್ವಶಾದವಶಂ । ತ್ವಮೇವೈತತ್ಸರ್ಜನೇ ಸರ್ವಕರ್ಮಣ್ಯನಂತಶಕ್ತೋಽಪಿ**
**ಸ್ವಮಾಯಯೈವ । ಮಾಯಾವಶಂ ಚಾವಶಂ ಲೋಕಮೇತತ್ತಸ್ಮಾತ್ ಪ್ರಕೃಷ್ಯ ಸೃಷ್ಟಿ**
**ಪಾಸೀತ ವಿಷ್ಣೋ । ಇತಿ ಗೌತಮಖಿಲೇಷು ॥ ೨ ॥ ॥ ೮ ॥**

ಅ ॥ (೧) ಅಪರಿಮಿತಗುಣಗಳುಳ್ಳ ಪ್ರತ್ಯೇಕವಾಗಿಯೂ ನಿರವಧಿಕ ಗುಣಗಳುಳ್ಳ, ಅನಂತರೂಪಗಳುಳ್ಳ ನನ್ನಲ್ಲಿ (ಬ್ರಹ್ಮನು ಹುಟ್ಟಿದನು) ಎಂದು ಭಾಗವತದಲ್ಲಿದೆ (೨) (1) ಪರಂಬ್ರಹ್ಮನೆಂದು ಯಾವ ಕಾರಣದಿಂದ ಹೇಳಲ್ಪಡುತ್ತಾನೆ. ತಾನು ಗುಣಪೂರ್ಣನಾಗಿದ್ದಾನೆ. ಇತರರನ್ನು ಯಥಾಯೋಗ್ಯವಾದ ಗುಣಗಳಿಂದ ಪೂರ್ಣೀಕರಿಸುತ್ತಾನೆ. ಆದುದರಿಂದ ಬ್ರಹ್ಮ ಎನಿಸುತ್ತಾನೆ. ಹೀಗೆ ಅಥರ್ವಣದಲ್ಲಿದೆ (2) ಶ್ರೀಪರಮಾತ್ಮನ ಶಕ್ತಿಯು ಉತ್ಕೃಷ್ಟವಾದುದು ಬಹುವಿಧವಾದುದು ಎಂದು ಶ್ರುತಿಸಿದ್ಧವಾಗಿದೆ (೩) ಶ್ರೀವಿಷ್ಣುವಿನ ಸಾಮರ್ಥ್ಯಗಳನ್ನು ಯಾರು ಸಂಪೂರ್ಣ ಹೇಳುವನು? ಯಾವ ಚತುರ್ಮುಖನು ಪೃಥ್ವಿಯಲ್ಲಿರುವ ಧೂಳಿಗಳನ್ನು ಗಣನೆ ಮಾಡುವನೋ. (ಅವನು ಸಹಾ ಸಂಪೂರ್ಣವಾಗಿ ಪರಮಾತ್ಮನ ಸಾಮರ್ಥ್ಯವನ್ನು ಹೇಳಲಿಕ್ಕೆ ಶಕ್ತನಲ್ಲ.) (೪) ಎಲೋ ಶ್ರೀವಿಷ್ಣುವೇ. ಹುಟ್ಟುವವನೂ ಹುಟ್ಟಿದವನೂ ಹುಟ್ಟಲಿರುವವನೂ ಯಾರೊಬ್ಬನೂ ನಿನ್ನ ಮಹಿಮೆಯ ಅಂತ್ಯವನ್ನು ತಿಳಿಯಲಿಲ್ಲ. ಇದು ಮೊದಲಾದ ಪ್ರಮಾಣಗಳಿಂದ ಪರಮಾತ್ಮನಿಗೆ ಸಂಪೂರ್ಣ ಸಾಮರ್ಥ್ಯವು ಪ್ರಮಾಣಸಿದ್ಧವಾಗಿದೆ. (೫) ನನ್ನ ಅಧೀನವಾದ ಪ್ರಕೃತಿಯ ಅಧೀನದಲ್ಲಿರುವುದರಿಂದ ಅತ್ಯಂತ ಪರಾಧೀನವಾದುದು (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ-) ಸರ್ವಸಾಮರ್ಥ್ಯವಾದ ಶ್ರೀಪರಮಾತ್ಮನೇ, ನೀನೇ ಸರ್ವ ಜಗತ್ತನ್ನು ಸೃಷ್ಟಿಸುವ ವಿಷಯದಲ್ಲಿಯೂ, ಸೃಷ್ಟಿಗಿಂತ ಇತರವಾದ ಪಾಲನ ಮೊದಲಾದ ಸರ್ವಕರ್ಮಗಳಲ್ಲಿಯೂ ಅಪರಿಮಿತ ಶಕ್ತಿಯುಳ್ಳವನಾದಾಗ್ಯೂ ತನ್ನ ಇಚ್ಛೆಯಿಂದಲೇ ಪ್ರಕೃತ್ಯಧೀನವಾದ. ಪ್ರಕೃತ್ಯಧೀನವಾಗಿರುವುದರಿಂದಲೇ ಅತ್ಯಂತ ಪರಾಧೀನವಾದ, ಈ ಲೋಕಗಳನ್ನು ಸೃಷ್ಟಿಮಾಡುತ್ತಿ. ಸಂಹರಿಸುತ್ತಿ. ರಕ್ಷಿಸುತ್ತಿ. ಹೀಗೆ ಗೌತಮಖಿಲಗ್ರಂಥಗಳಲ್ಲಿ (ಹೇಳಿದ ಪ್ರಕಾರ ಶ್ರೀಪರಮಾತ್ಮನೇ ಸರ್ವ ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವವನೆಂದು ಸಿದ್ಧವಾಗುತ್ತದೆ.) ॥ ೮ ॥

ಪೀ—ಶ್ರೀಪರಮಾತ್ಮನು ನಾನಾವಿಧಗಳಾದ ಸೃಷ್ಟಿಗಳನ್ನು ಮಾಡಿದರೂ ಶ್ರೀಪರಮಾತ್ಮನಿಗೆ ಜೀವರಿಗೆ ಇದ್ದಂತೆ ಕರ್ಮಬಂಧವಿಲ್ಲವೆನ್ನುತ್ತಾರೆ—

**ಗೀ॥ ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೯ ॥**

ಅ॥ ಧನಂಜಯ=ಅರ್ಜುನನೇ, ತಾನಿ ಕರ್ಮಾಣಿ=ಸೃಷ್ಟಿ ಮೊದಲಾದ ಆ ಕರ್ಮಗಳು, ತೇಷು ಕರ್ಮಸು=ಸೃಷ್ಟ್ಯಾದಿಕರ್ಮಗಳಲ್ಲಿ, ಅಸಕ್ತಂ=ಆಸಕ್ತಿಯಿಲ್ಲದಿರುವ, (ಕರ್ಮಗಳಲ್ಲಿ ಸ್ನೇಹವು ಇಲ್ಲದ ಕಾರಣ) ಉದಾಸೀನವದಾಸೀನಂ=ವಸ್ತುತಃ ಉದಾಸೀನನಾಗದಿರುವವನಾದರೂ ಉದಾಸೀನನಿಗೆ ಸದೃಶನಾಗಿರುವ, ಮಾಂ=ನನ್ನನ್ನು, ನ ಚ ನಿಬಧ್ನಂತಿ=ಬಂಧಿಸುವುದಿಲ್ಲ. (ಅಂದರೆ ಉದಾಸೀನನಿಗೆ ಹೇಗೆ ಕರ್ಮದಲ್ಲಿ ಆಸಕ್ತಿಯಿಲ್ಲವೋ, ಹಾಗೆಯೇ ನನಗೂ ಸೃಷ್ಟಿ ಮೊದಲಾದ ಕರ್ಮಗಳಲ್ಲಿ ಆದರವಾಗಲೀ ಅಭಿಯೋಗವಾಗಲೀ ಇಲ್ಲ) ಆದಕಾರಣ ಅವುಗಳಿಂದ ನನಗೆ ಸುಖದುಃಖಗಳು ಹುಟ್ಟುವುದಿಲ್ಲ. ॥ ೯ ॥

ಪೀ - ಶ್ರೀಪರಮಾತ್ಮನು ಸರ್ವ ಜಗತ್ತನ್ನು ಸೃಷ್ಟಿಸುವವನೆಂದಾದರೆ ಅವನನ್ನು ಉದಾಸೀನನೆಂದು ಹೇಳಿದ್ದು ಹೇಗೆಂದರೆ—

**ಭಾ॥ (೧) ಉದಾಸೀನವನ್ನ ತೂದಾಸೀನಃ । ತದರ್ಥಮಾಹ । ಅಸಕ್ತಮಿತಿ । ಅವಾಕ್ಯ-ನಾದರ ಇತಿ ಹಿ ಶ್ರುತಿಃ ॥ (೨) ದ್ರವ್ಯಂ ಕರ್ಮ ಚ ಕಾಲಶ್ಚ ಸ್ವಭಾವೋ ಜೀವ ಏವ ಚ । ಯದನುಗ್ರಹತಃ ಸಂತಿ ನ ಸಂತಿ ಯದುಪೇಕ್ಷಯೇತಿ ಭಾಗವತೇ । (೩) ಯ-ಸ್ಮಾಸಕ್ತ್ಯೈವ ಸರ್ವಕರ್ಮಶಕ್ತಿಃ ಕುತಸ್ತಸ್ಯ ಸರ್ವಕರ್ಮಬಂಧ ಇತಿ ಭಾವಃ । ನ ಕರ್ಮಣಾ ವರ್ಧತೇ ನೋ ಕನೀಯಾನಿತಿ ಚ ಶ್ರುತಿಃ । ಯಃ ಕರ್ಮಾಪಿ ನಿಯಾ-ಮಯತಿ ಕಥಂ ಚ ತತ್ತಂ ಬಧ್ನಾತಿ ॥ ೯ ॥**

ಅ॥ (೧) ಉದಾಸೀನನಾದ ಮನುಷ್ಯನಿಗೆ ಸದೃಶನಾಗಿರುತ್ತಾನೆ. ಉದಾಸೀನನಲ್ಲ. ಉದಾಸೀನವತ್ ಎಂಬುವಲ್ಲಿದ್ದ ವತಿಪ್ರತ್ಯಯದ ಅರ್ಥವಾದ ಸಾದೃಶ್ಯವನ್ನು ಅಸಕ್ತಂ ಎಂಬುವುದರಿಂದ ತಾನೇ ವಿವರಿಸುತ್ತಾರೆ. (ಪರಮಾತ್ಮನಿಗೆ ಸೃಷ್ಟ್ಯಾದಿ ಕರ್ಮಗಳಲ್ಲಿ ಆಸಕ್ತಿಯಿಲ್ಲ ಎಂಬುವಲ್ಲಿ ಪ್ರಮಾಣ ಹೇಳುತ್ತಾರೆ—) ಶ್ರೀಪರಮಾತ್ಮನು ಆತನ ಅನುಗ್ರಹವಿಲ್ಲದೆ ವಾಕ್ಯದಿಂದ ತಿಳಿಯದವನು, ಸೃಷ್ಟ್ಯಾದಿಕರ್ಮಗಳಲ್ಲಿ ಆಸಕ್ತಿಯಿಲ್ಲದವನು, ಎಂದು ಶ್ರುತಿಯು. (೨) (ಶ್ರೀಪರಮಾತ್ಮನು ಸರ್ವದಾ ಉದಾಸೀನನಲ್ಲ. ಸಕಲ ಪದಾರ್ಥಗಳ ಸ್ಥಿತಿಯು ಸಹ ಅವನ ಅಧೀನವೇ, ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ-) ಪ್ರಕೃತಿ ಮೊದಲಾದ ತತ್ವಗಳೂ, ಧರ್ಮ ಅಧರ್ಮಗಳೂ, ಕಾಲವೂ, ಪ್ರಕೃತ್ಯಾದಿಗಳ ಪರಿಣಾಮಾದಿಗಳೂ, ಪ್ರಕೃತ್ಯಾದಿ ತತ್ವಗಳ ಮತ್ತು ಅವರ ಪರಿಣಾಮಗಳ ಅಭಿಮಾನಿಯು ಅಂದರೆ ಎಲ್ಲಾ ಚೇತನರೂ ಸಹ ಯಾವ ಶ್ರೀಪರಮಾತ್ಮನ ಅನುಗ್ರಹದಿಂದಲೇ ಇರುತ್ತವೋ, ಯಾವ ಶ್ರೀಪರಮಾತ್ಮನ ಅನುಗ್ರಹವಿಲ್ಲದೆ ಇರುವುದಿಲ್ಲವೋ, ಎಂದು ಭಾಗವತದಲ್ಲಿ ಹೇಳಿದ ಪ್ರಕಾರ (ಉತ್ಪತ್ತಿಯುಳ್ಳ ವಸ್ತುಗಳ ಉಪಾದಾನ ಕಾರಣ ನಿಮಿತ್ತಕಾರಣಗಳ ಸ್ಥಿತಿಯೂ ಕೂಡ ಶ್ರೀಪರಮಾತ್ಮನ ಅಧೀನವೇ, ಎಂದು ಉಕ್ತವಾಯಿತು.) (೩) (ಶ್ರೀಪರಮಾತ್ಮನಿಗೆ ಸ್ವತಃ ಕರ್ತೃತ್ವವಿದ್ದರೆ - ಉದಾಸೀನವದಾಸೀನಂ - ಕರ್ಮದಲ್ಲಿ ಆಸಕ್ತಿಯಿಲ್ಲವೆಂಬುವುದು ನ ಚ ಮಾಂ ತಾನಿ ಕರ್ಮಾಣಿ ನಿಬಧ್ನಂತಿ ಎಂಬುವಲ್ಲಿ ಹೇತುವಾಗುವುದು ಹೇಗೆ?

ಎಂದರೆ—) ಯಾವ ಶ್ರೀಪರಮಾತ್ಮನಿಗೆ ಅನಾದರದಿಂದ (ಅನಾಯಾಸದಿಂದಲೇ) ಜಗತ್ತಿನ ಸೃಷ್ಟಿ ಮೊದಲಾದ ಕರ್ಮಗಳಲ್ಲಿ ಸಾಮರ್ಥ್ಯವಿದೆಯೋ, ಅಂತಹ ಶ್ರೀಪರಮಾತ್ಮನಿಗೆ ಎಲ್ಲಾ ಕರ್ಮಗಳ ಬಂಧವು ಹೇಗೆ ಬರುವುದು, ಎಂದಭಿಪ್ರಾಯವು (೪)(ಶ್ರೀಪರಮಾತ್ಮನಿಗೂ ಕರ್ಮಬಂಧವಿದೆ, ಎಂದು ಮಾಯಾವಾದಿಗಳು **ಬ್ರಹ್ಮಾ ಯೇನ ಕುಲಾಲವನ್ನಿಯಮಿತೋ ಬ್ರಹ್ಮಾಂಡಭಾಂಡೋದರೇ ವಿಷ್ಣುರ್ಯೇನ ದಶಾವತಾರಗಹನೇ ಕ್ಷಿಪ್ತೋ ಮಹಾಸಂಕಟೇ । ರುದ್ರೋ ಯೇನ ಕಪಾಲಪಾಣಿಪುಟಕೇ ಭಿಕ್ಷಾಟನಂ ಕಾರಿತಃ ಸೂರ್ಯೋ ಭ್ರಾಮ್ಯತಿ ನಿತ್ಯಮೇವ ಗಗನೇ ತಸ್ಮೈ ನಮಃ ಕರ್ಮಣೇ** ಇತ್ಯಾದಿ ಪ್ರಕಾರ ಹೇಳುವರು. ಅದನ್ನು ನಿರಾಕರಿಸುವುದಕ್ಕಾಗಿ ಶ್ರುತಿಯುಕ್ತಿಗಳನ್ನು ಹೇಳುತ್ತಾರೆ—) (೧) ಶ್ರೀಪರಮಾತ್ಮನಿಗೆ ಒಳ್ಳೆ ಕರ್ಮಗಳಿಂದ ಹೊಂದಲು ಯೋಗ್ಯ ಪ್ರಯೋಜನವಿಶೇಷವೂ (ವೃದ್ಧಿಯು) ಇಲ್ಲ. ಕರ್ಮಮಾತದಿಂದ ಅಗತ್ಯ ಹ್ರಾಸವೂ ಇಲ್ಲ (ಅಂತೂ ಕರ್ಮಬಂಧವಿಲ್ಲ.) (೨)ಯಾವ ಶ್ರೀಹರಿಯು ಕರ್ಮಗಳನ್ನು ನಿಯಮಿಸುತ್ತಾನೋ, ಅಂತಹ ಶ್ರೀಹರಿಯನ್ನು ಹೇಗೆ ಶ್ರೀಹರಿಯಿಂದ ನಿಯಮ್ಯವಾದ ಕರ್ಮವು ಬಂಧಿಸುತ್ತದೆ. (ಅಂತೂ ಬಂಧಕವಾಗಲಾರದು.) ॥ ೯ ॥

ಟೀ—ಪ್ರತಿಜ್ಞಾತವಾದ ಶ್ರೀವಿಷ್ಣುವಿನ ಸಾಮಾನ್ಯ ಮಹಿಮೆಯನ್ನು ಮಯಾ ಎಂಬುವ ಶ್ಲೋಕದಿಂದ ಹೇಳುತ್ತಾರೆ. ಅದರಲ್ಲಿ **ಮತ್ಸ್ಥಾನಿ ಸರ್ವಭೂತಾನಿ ನ ಚ ಮತ್ಸ್ಥಾನಿ ಭೂತಾನಿ** ಎಂಬುವುದು ವ್ಯಾಹತವಾಗಿದೆ, ಎಂಬುವ ಆಶಂಕೆಯನ್ನು ಸ್ಮೃತಿಯಿಂದಲೇ ಪರಿಹರಿಸುತ್ತಾರೆ—

**ತಾ ॥ (೧) ವಿಷ್ಣುಗಾನ್ಯಪ್ಯತತ್ಸ್ಥಾನಿ ಭೂತಾನ್ಯೇಷ ಹ್ಯಸಂಗತ ಇತಿ ಚ ॥ (೨) ಮಮಾತ್ಮಾ ಮಮ ದೇಹ ಏವ । ತದನನ್ಯತ್ವಾತ್ ॥ (೩) ದೇಹಸ್ಯಾಚೇತನತ್ವಶಂಕಾನಿವೃತ್ತಯೇ ಮಮಾತ್ಮೇತ್ಯಾಹ** ॥ ೨—೯ ॥

ಟೀ ॥ (೧)ಯಾವ ಕಾರಣದಿಂದ ಶ್ರೀಪರಮಾತ್ಮನು ತನ್ನನ್ನು ಆಶ್ರಯಿಸುತ್ತಿರುವ ಜೀವರ ತ್ವಗಿಂದ್ರಿಯದಿಂದ ಸಂಬದ್ಧನಾಗುವುದಿಲ್ಲವೋ. (ತ್ವಗಿಂದ್ರಿಯದಿಂದ ಗ್ರಾಹ್ಯನಲ್ಲವೋ.) ಆದಕಾರಣ ಜೀವಜಡ ಸಮುದಾಯಗಳು ಶ್ರೀಪರಮಾತ್ಮನಲ್ಲಿರತಕ್ಕವುಗಳಾದಾಗ್ಯೂ (ಪರಮಾತ್ಮನನ್ನಾಶ್ರಯಿಸುತ್ತಿರುವವುಗಳಾದಾಗ್ಯೂ) ಪರಮಾತ್ಮನಲ್ಲಿರತಕ್ಕವುಗಳಲ್ಲ. (ಅಂದರೆ ಶ್ರೀಪರಮಾತ್ಮನಿಗೆ ಪ್ರಾಕೃತಸ್ಪರ್ಶವಿಲ್ಲದಿರುವುದರಿಂದ ತ್ವಗಿಂದ್ರಿಯದಿಂದ ಶ್ರೀಹರಿಯನ್ನು ಜೀವರು ತಿಳಿಯುವುದಿಲ್ಲ ಮತ್ತು ಅನ್ಯೋನ್ಯ ಧರ್ಮಸಂಬಂಧವನ್ನು ಹೊಂದುವುದಿಲ್ಲ. ಅಂದರೆ ಜೀವಾದಿಗಳಲ್ಲಿರುವ ಪ್ರಾಕೃತಗುಣಗಳು ಶ್ರೀಪರಮಾತ್ಮನಿಗೂ, ಪರಮಾತ್ಮನಲ್ಲಿರುವ ದಿವ್ಯ ಗುಣಗಳು ಜೀವಾದಿಗಳಿಗೂ ಬರುವುದಿಲ್ಲ.) (೨)(**ಮತ್ಸ್ಥಾನಿ ಸರ್ವಭೂತಾನಿ**, (೩) **ನ ಚಾಹಂ ತೇಷ್ವವಸ್ಥಿತಃ** (೪) ಎಂದು ಹೇಳಿದ **ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ** (೫) ಎಂದು ಹೇಳಿದ್ದರಿಂದ ಎರಡು ಸಲ ಹೇಳಿದಂತೆಯೇ ಆಯಿತು. ಆದಕಾರಣ ಪುನರುಕ್ತವಾಯಿತೆಂದರೆ—) ಮಮ ಆತ್ಮಾ—ನನ್ನ ದೇಹವೇ, (ಮೊದಲು ಶ್ರೀಪರಮಾತ್ಮನು ಪ್ರಾಣಿಗಳಿಗೆ ಆಧಾರನೆಂದು ಹೇಳಿದ್ದು. ಈಗ ಶ್ರೀಪರಮಾತ್ಮನ ಶರೀರವು ಭೂತಾಧಾರವೆಂದು ಹೇಳಿದ ಕಾರಣ ಪುನರುಕ್ತಿದೋಷವಿಲ್ಲ.) (ಶ್ರೀಪರಮಾತ್ಮನಿಗೆ ಹೇಳಿದ ಭೂತಾಧಾರತ್ವ ಮೊದಲಾದ ಲಕ್ಷಣವು ಶ್ರೀಹರಿಯ ದೇಹಕ್ಕೆ ಹೇಗೆ ಕೂಡುವುದೆಂದರೆ—) ಪರಮಾತ್ಮನ ದೇಹಕ್ಕೂ, ಪರಮಾತ್ಮನಿಗೂ ಸರ್ವದಾ ಭೇದವಿಲ್ಲದಿರುವುದರಿಂದ ಪರಮಾತ್ಮನಿಗೆ ಹೇಳಿದ ಲಕ್ಷಣವು ಆತನ ದೇಹಕ್ಕೂ ಕೂಡುತ್ತದೆ (೩) (ಪರಮಾತ್ಮನಿಗೂ ಪರಮಾತ್ಮನ ದೇಹಕ್ಕೂ ಭೇದವಿಲ್ಲವೆಂದಾದರೆ ಎರಡು ಸಲ ಹೇಳಿದಂತೆಯೇ ಆಯಿತು. ಆದಕಾರಣ ಪುನರುಕ್ತಿದೋಷವು ತಪ್ಪಲಿಲ್ಲ ಎಂದರೆ) ಪರಮಾತ್ಮನಿಗೂ ಪರಮಾತ್ಮನ ದೇಹಕ್ಕೂ ವಸ್ತುತಃ ಭೇದವಿದೆ ಮತ್ತು ಅದೂ ಅಚೇತನವು ಎನ್ನುವವರುಗಳಿಗೆ ಶಂಕೆಯನ್ನು

ಹೋಗಲಾಡಿಸುವುದಕ್ಕಾಗಿ ಪರಮಾತ್ಮನ ದೇಹದಲ್ಲಿಯೂ ಭೂತಾಧಾರತ್ವ ಮೊದಲಾದ ಶ್ರೀಹರಿಯ ಲಕ್ಷಣ ವಿದ್ದ ಕ್ರಯುಕ್ತ ಅಭೇದವೂ ಚೇತನತ್ವವೂ ಇದೆ, ಎಂಬುವ ಅಭಿಪ್ರಾಯದಿಂದ ಮಮ ಆತ್ಮಾ ಎಂದು ಹೇಳಿದ್ದಾರೆ. (ಆದಕಾರಣ ಪುನರುಕ್ತಿ ದೋಷವಿಲ್ಲ.) (ಅಥವಾ ಇಲ್ಲಿ ದೇಹವು ವಿವಕ್ಷಿತವಾಗಿದ್ದರೆ ಮಮ ದೇಹಃ ಎಂಬುವ ಪ್ರಸಿದ್ಧ ಶಬ್ದವನ್ನು ಬಿಟ್ಟು ಆತ್ಮಾ ಎಂದು ಶಬ್ದ ಪ್ರಯೋಗಕ್ಕೆ ಕಾರಣವೇನೆಂದರೆ—) ಮಮ ದೇಹಃ ಎಂದಿಷ್ಟೇ ಹೇಳಿದರೆ ಅಚೇತನವಾದ ದೇಹಕ್ಕೆ ಭಗವಲ್ಲಕ್ಷಣವು ಹೇಗೆ ಬರುವುದು ಎಂಬುವ ಆಶಂಕೆಯು ಬರುವುದು. ಅದನ್ನು ಪರಿಹರಿಸುವುದಕ್ಕಾಗಿ ದೇಹವೂ ಚೇತನರೂಪವೇ ಎಂದು ತೋರಿಸುವುದಕ್ಕಾಗಿ ಆತ್ಮಾ ಎಂದು ಹೇಳಿರುವರು. ಆತ್ಮಶಬ್ದದಿಂದ ಚೇತನರೂಪವಾದ ದೇಹವೆಂಬುವ ಅರ್ಥವು ಅವಶ್ಯಕವೆಂದು ತೋರಿಸುವುದಕ್ಕಾಗಿ ಮಮಾತ್ಮಾ ಎಂದು ಹೇಳಿರುವರು. ॥ ೨—೯ ॥

ಪೀ—'ಪ್ರಕೃತಿಂ ಸ್ವಾಮವಷ್ಟಭ್ಯ' ಮತ್ತು ಉದಾಸೀನವದಾಸೀನಂ ಎಂಬುವ ಉಕ್ತಿಯಿಂದ ಶ್ರೀಪರಮಾತ್ಮನು ನಿಷ್ಕ್ರಿಯನೆಂದು ತೋರುತ್ತದೆ. ಹೀಗಾದರೆ ಪ್ರಕೃತಿಯೇ ಸ್ವತಂತ್ರವಾಗಿ ಜಗತ್ತನ್ನು ಸೃಷ್ಟಿಸುತ್ತದೆ. ಶ್ರೀಕೃಷ್ಣನಲ್ಲಿ ಪ್ರಕೃತಿಯ ಸನ್ನಿಧಾನದಿಂದಲೇ ಕರ್ತೃತ್ವವು, ವಾಸ್ತವಿಕವಾಗಿ ಇಲ್ಲ. ಕರ್ತೃತ್ವವಿದೆ ಎಂದು ಹೇಳಿದ್ದು ಔಪಚಾರಿಕವೆಂದಾಯಿತು, ಎಂದರೆ –

**ಗೀ॥ ಮಯಾಽಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಂ ।**
**ಹೇತುನಾಽನೇನ ಕೌಂತೇಯ ಜಗದ್ವಿಪರಿವರ್ತತೇ ॥ ೧೦ ॥**

ಅ॥ ಕೌಂತೇಯ = ಅರ್ಜುನನೇ, ಅಧ್ಯಕ್ಷೇಣ = ಸ್ವಾಮಿಯಾದ. ಮಯಾ = ನನ್ನಿಂದ ಪ್ರೇರಿತವಾಗಿ ಪ್ರಕೃತಿಃ = ಜಡಪ್ರಕೃತಿಯು, ಸಚರಾಚರಂ = ಚೇತನಾಚೇತನ ಜಗತ್ತನ್ನು, ಸೂಯತೇ = ಹುಟ್ಟಿಸುತ್ತದೆ. ಅನೇನ ಹೇತುನಾ = ನನ್ನಿಂದ ಪ್ರೇರಿಸಲ್ಪಟ್ಟ ಪ್ರಕೃತಿರೂಪ ಉಪಾದಾನ ಕಾರಣದಿಂದ, ಮತ್ತು ಸರ್ವದಾ ಎಲ್ಲಾ ವಸ್ತುಗಳನ್ನು ನೋಡಿಕೊಂಡಿರುವ ಸರ್ವಜಗತ್ಕರ್ತನಾದ ನನ್ನಿಂದ, ಜಗತ್ = ಜಗತ್ತು, ವಿಪರಿವರ್ತತೇ = ವಿಶೇಷವಾಗಿ ತಿರುಗಿತಿರುಗಿ ಹುಟ್ಟುತ್ತದೆ. ॥ ೧೦ ॥

**ಭಾ॥ (೧) ಉದಾಸೀನವದಿತಿ ಚೇತ್ ಸ್ವಯಮೇವ ಪ್ರಕೃತಿಃ ಸೂಯತ ಇತ್ಯತ ಆಹ ಮಯೇತಿ । ಪ್ರಕೃತಿಸೂತಿದ್ರಷ್ಟಾ ಕರ್ತಾಽಹಮೇವೇತ್ಯರ್ಥಃ ॥ (೨) ತಥಾ ಚ ಶ್ರುತಿಃ । ಯತಃ ಪ್ರಸೂತಾ ಜಗತಃ ಪ್ರಸೂತೀ ತೋಯೇನ ಜೀವಾನ್ ವ್ಯಸಸರ್ಜ ಭೂಮ್ಯಾಮಿತಿ ॥ ೧೦ ॥**

ಅ॥ (೧) ಶ್ರೀಪರಮಾತ್ಮನು ಉದಾಸೀನನಂತೆ ಆದರೆ ಜಡಪ್ರಕೃತಿಯು ತಾನೇ ಸ್ವತಂತ್ರವಾಗಿ ಜಗತ್ತನ್ನು ಹುಟ್ಟಿಸುತ್ತದೆ, ಎಂದರೆ ಮಯಾ ಎಂಬುವ ಶ್ಲೋಕದಿಂದ ಸಮಾಧಾನ ಹೇಳುತ್ತಾರೆ. ಜಡಪ್ರಕೃತಿಯಿಂದ ಹುಟ್ಟತಕ್ಕ ಎಲ್ಲಾ ಕಾರ್ಯಗಳನ್ನು ನೋಡುವವನೂ ಜಡಪ್ರಕೃತಿಯಿಂದ ಜಗತ್ತು ಹುಟ್ಟುವಂತೆ ಮಾಡುವವನೂ ಸರ್ವಜ್ಞನೂ ಸರ್ವಸ್ವಾಮಿಯೂ ಆದವನು ನಾನೇ, ಎಂದು ಅಧ್ಯಕ್ಷೇಣ ಎಂಬುದರಿಂದ ಉಕ್ತವಾಯಿತು. (ಅಂತೂ ಜಡಪ್ರಕೃತಿಗೆ ಸ್ವತಂತ್ರವಾಗಿ ಯಾವ ಕಾರ್ಯವನ್ನು ಮಾಡುವ ಶಕ್ತಿಯುಳ್ಳವೆಂದು ಉಕ್ತವಾಯಿತು.) (ನಾನು ನೋಡುವವನೇ ಜಡಪ್ರಕೃತಿಯೇ ಸ್ವತಂತ್ರವಾಗಿ ಚೇತನಾಚೇತನ ಜಗತ್ತನ್ನು ಹುಟ್ಟಿಸುತ್ತದೆ, ಎಂದು ಅಪಾತತಃ ತೋರುವ ಅರ್ಥವನ್ನು ನಿರಾಕರಿಸಿದೆ) ಅಧ್ಯಕ್ಷೇಣ ಮಯಾ = ಸರ್ವಸ್ವಾಮಿಯಾದ ನನ್ನಿಂದ ಪ್ರೇರಿಸಲ್ಪಟ್ಟುದರಿಂದ ಜಡಪ್ರಕೃತಿಯು ಜಗತ್ತನ್ನು ಹುಟ್ಟಿಸುತ್ತದೆ, ಎಂದು ಪ್ರಕೃತಿಗೆ ತನ್ನ (ಶ್ರೀಕೃಷ್ಣನ) ಅಧೀನತ್ವವನ್ನು ಹೇಳಿದ್ದು ಅಯುಕ್ತ

ವಾಗುವುದು. (೨) ಶ್ರೀಪರಮಾತ್ಮನು ಪ್ರಕೃತಿಗೂ, ಪ್ರಕೃತ್ಯಭಿಮಾನಿನಿಯಾದ ಲಕ್ಷ್ಮೀದೇವಿಗೂ ಪ್ರೇರಕನು, ಎಂದು ಹೇಳುವ ಶ್ರುತಿಯಿದೆ. ಜಗತ್ತಿಗೆ ಉಪಾದಾನಕಾರಣವಾದ ಜಡಪ್ರಕೃತಿಯು ಯಾವ ಶ್ರೀಹರಿಯಿಂದ ಸೃಷ್ಟಿಕಾರ್ಯದಲ್ಲಿ ಉದ್ಯುಕ್ತವಾಗಿದೆಯೋ, ಯಾವ ಶ್ರೀಹರಿಯು ಆವಾವ ಜೀವರ ಕರ್ಮದಿಂದ, ಅಥವಾ ತನ್ನ ವೀರ್ಯದಿಂದ, ಅಥವಾ ಜಲ ಮೊದಲಾದ ಪಂಚಭೂತಗಳಿಂದ ಪೃಥಿವ್ಯಾದಿಲೋಕಗಳಲ್ಲಿ ಜೀವರನ್ನು ಅನೇಕ ಪ್ರಕಾರ ಸೃಷ್ಟಿಮಾಡಿರುವನೋ. ಜಗಜ್ಜನನಿಯಾದ ಲಕ್ಷ್ಮೀದೇವಿಯು ಯಾವ ಶ್ರೀಹರಿಯಿಂದ ಪ್ರಾದುರ್ಭೂತಳಾಗಿ ಜಗತ್ಸೃಷ್ಟಿಮಾಡುವ ವಿಷಯದಲ್ಲಿ ಅಭಿಮುಖೀಭೂತಳಾಗಿದ್ದಾಳೋ, ಎಂದು ಹೇಳಿದೆ ॥ ೧೦ ॥

ಟೀ—ಅಧ್ಯಕ್ಷಪದದ ಅರ್ಥವನ್ನು ಹೇಳುತ್ತಾರೆ—

ತಾ ॥ ಅಧ್ಯಕ್ಷೋಽಧಿಪತಿಃ ಪ್ರೋಕ್ತೋ ಯದಕ್ಷ್ಣಾಸ್ಯ ಚೋಪರೀತಿ ಶಬ್ದನಿರ್ಣಯೇ ೧೦

ಅ ॥ ಚೇತನಾಚೇತನಾತ್ಮಕವಾದ ಸರ್ವ ಜಗತ್ತಿನ ಮೇಲೆ ಶ್ರೀಪರಮಾತ್ಮನ ಚಕ್ಷುರಿಂದ್ರಿಯಗಳು ಇರುವುದರಿಂದ ಅಂದರೆ ಎಲ್ಲಾ ಜಗತ್ತನ್ನು ಪ್ರತ್ಯಕ್ಷವಾಗಿಯೇ ತಿಳಿಯುವುದರಿಂದ ಶ್ರೀಪರಮಾತ್ಮನು ಅಧ್ಯಕ್ಷನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ. ಅಧ್ಯಕ್ಷಃ = ಸರ್ವಾಧಿಪತಿಯು, ಎಂದು ಶಬ್ದನಿರ್ಣಯದಲ್ಲಿ ಹೇಳಿದೆ. ॥ ೧೦ ॥

ಟೀ—ಸರ್ವಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳನ್ನು ನೀನು ಮಾಡಿದ್ದೆಂದಾದರೆ ಏಕೆ ನಿನ್ನನ್ನು ಕೆಲವರು ತಿರಸ್ಕರಿಸುವರು. ತಿರಸ್ಕರಿಸುತ್ತಿದ್ದರೂ ಅವರಿಗೆ ಅನರ್ಥವಾಗದಿರುವುದರಿಂದ ಸರ್ವಕರ್ತನು ತಾನೇ ಎಂದು ನೀನು (ಶ್ರೀಕೃಷ್ಣನು) ಹೇಳಿದ್ದು ಅಯುಕ್ತವೆಂದರೆ—

**ಗೀ ॥ ಅವಜಾನಂತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ ।**
**ಪರಂ ಭಾವಮಜಾನಂತೋ ಮಮ ಭೂತಮಹೇಶ್ವರಂ ॥ ೧೧ ॥**

ಅ ॥ ಮೂಢಾಃ = ತಾಮಸರು. ಭೂತಮಹೇಶ್ವರಂ = ಸದಾ ಒಂದೇ ರೀತಿಯಾಗಿ ಇರತಕ್ಕವನೂ, ಶ್ರೀಕೃಷ್ಣನೂ, ಸರ್ವಗುಣಪರಿಪೂರ್ಣನೂ ಆದ, ಪರಂ = ಸರ್ವೋತ್ಕೃಷ್ಟವಾದ ಮಮ = ನನ್ನ. ಭಾವಂ = ಯಥಾರ್ಥ ಸ್ವರೂಪವನ್ನು, ಅಜಾನಂತಃ = ತಿಳಿಯದವರಾಗಿ, ಮಾನುಷೀಂ ತನುಮಾಶ್ರಿತಂ = ಶ್ರೀಕೃಷ್ಣನು ಮನುಷ್ಯರ ದೇಹವನ್ನು ಹೊಂದಿದ್ದಾನೆಂಬುವ ಮೂಢಜನರ ಭ್ರಮೆಗೆ ವಿಷಯನಾದ, ಅಥವಾ ಮನುಷ್ಯರ ದೇಹದಂತೆ ತೋರುವ ದೇಹವನ್ನು ಹೊಂದಿರುವ, ಮಾಂ = ನನ್ನನ್ನು, ಅವಜಾನಂತಿ = ಅಧಮನೆಂದು ತಿಳಿಯುತ್ತಾರೆ. (ಸರ್ವೋತ್ತಮನೆಂದು ತಿಳಿಯುವುದಿಲ್ಲ.) ॥ ೧೧ ॥

**ಭಾ ॥ (೧) ತರ್ಹಿ ಕೇಚಿತ್ಕಥಂ ತ್ವಾಮವಜಾನಂತಿ । ಕಾ ಚ ತೇಷಾಂ ಗತಿರಿತ್ಯತ ಆಹ । ಅವಜಾನಂತೀತ್ಯಾದಿನಾ ॥ (೨) ಮಾನುಷೀಂ ತನುಂ ಮೂಢಾನಾಂ ಮಾನುಷವತ್ಪ್ರತೀತಾಂ ನ ತು ಮನುಷ್ಯರೂಪಾಂ ॥ (೩) ಉಕ್ತಂ ಚ ಮೋಕ್ಷಧರ್ಮೇ । ಯತ್ಕಿಂಚಿದಿಹ ಲೋಕೇ ವೈ ದೇಹಬದ್ಧಂ ವಿಶಾಂಪತೇ । ಸರ್ವಂ ಪಂಚಭಿರಾವಿಷ್ಟಂ ಭೂತೈರೀಶ್ವರಬುದ್ಧಿಜೈಃ ॥ (೪) ಈಶ್ವರೋ ಹಿ ಜಗತ್ಸ್ರಷ್ಟಾ ಪ್ರಭುರ್ನಾರಾಯಣೋ ವಿರಾಟ್ । ಭೂತಾಂತರಾತ್ಮಾ ವರದಃ ಸಗುಣೋ ನಿರ್ಗುಣೋಽಪಿ ಚ । ಭೂತಪ್ರಲಯಮವ್ಯಕ್ತಂ ಶುಶ್ರೂಷುರ್ನೃಪಸತ್ತಮೇತಿ ॥ ೧ ॥**

ಅ ॥ (೧) ನಾನೇ ಸರ್ವಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡಿದವನು. ಸರ್ವೋತ್ತಮನೆಂದಾದರೆ—ಕೆಲವರು ಏಕೆ ನಿನ್ನನ್ನು ಅವಮಾನಿಸುತ್ತಾರೆ? ಅವರಿಗೆ ಗತಿಯು ಯಾವುದು? ಎಂದರೆ—ಅವಜಾನಂತಿ ಇತ್ಯಾದಿಗಳಿಂದ ಸಮಾಧಾನವನ್ನು ಹೇಳುತ್ತಾರೆ. (೨) ಮಾನುಷೀಂ ತನುಂ=ಮೂಢರಿಗೆ ಮನುಷ್ಯರ ಶರೀರದಂತೆ ತೋರುವ ಶರೀರವನ್ನು. ಮನುಷ್ಯರೂಪ ಶರೀರವನ್ನು ಎಂದರ್ಥವಲ್ಲ. (೩) (ಏಕೆ ಅಲ್ಲವೆಂದರೆ—) ಮೋಕ್ಷಧರ್ಮದಲ್ಲಿ ಸ್ಪಷ್ಟವಾಗಿ ಹೇಳಿದೆ. ಎಲೋ ರಾಜನೇ ಈ ಭೂಮಿಯಲ್ಲಿರುವ ಈ ಜನರಲ್ಲಿ ದೇಹಸಂಬದ್ಧವಾದುದು ಯಾವುದಿದೆಯೋ, ಅವೆಲ್ಲವೂ ಶ್ರೀಹರಿಯ ಬುದ್ಧಿಯಿಂದ ಹುಟ್ಟಿರುವ ಪೃಥಿವೀ ಮೊದಲಾದ ಪಂಚಭೂತಗಳಿಂದ ಸಂಬದ್ಧವಾಗಿಯೇ ಇವೆ. (ಅಂದರೆ ಲೋಕದಲ್ಲಿರುವ ಎಲ್ಲಾ ಜನರ ಶರೀರಗಳು ಪಂಚಭೂತಗಳಿಂದ ಹುಟ್ಟಿದವುಗಳೇ ಆಗಿವೆ. ಪಂಚಭೂತಗಳು ಶ್ರೀಹರಿಯ ಬುದ್ಧಿಯಿಂದ ಹುಟ್ಟಿದವುಗಳು. ಆದಕಾರಣ ಪಂಚಭೂತಗಳು ಶ್ರೀಹರಿಗೆ ಹೇಗೆ ಬಂಧಕಗಳಾಗುವವು?) (೪) (ಶ್ರೀಪರಮಾತ್ಮನಿಗೆ ಪಂಚಭೂತಗಳು ಬಂಧಕಗಳಾಗುವುದಿಲ್ಲವೆಂಬುವಲ್ಲಿ ಬೇರೆ ಪ್ರಮಾಣಗಳನ್ನು ಹೇಳುತ್ತಾರೆ—) ಸರ್ವಸ್ವಾಮಿಯಾದ ಶ್ರೀನಾರಾಯಣನು ಸರ್ವೈಶ್ವರ್ಯವುಳ್ಳವನು. ಚೇತನಾಚೇತನ ಜಗತ್ತನ್ನು ಸೃಷ್ಟಿಸಿದವನು. ವಿಶೇಷವಾಗಿ ಪ್ರಕಾಶಿಸಿಕೊಂಡಿರುವವನು. (ಅಂದರೆ ನಿತ್ಯದಲ್ಲಿಯೂ ಅಭಿವ್ಯಕ್ತವಾದ ರೂಪವುಳ್ಳವನು.) ಸಮಸ್ತ ಪ್ರಾಣಿಗಳೊಳಗಿದ್ದು ನಿಯಾಮಕನು. ಮೋಕ್ಷವನ್ನು ಕೊಡುವವನು. ಸ್ವಾತಂತ್ರ್ಯ ಮೊದಲಾದ ಶುಭಗುಣಗಳುಳ್ಳವನು. ಸತ್ವರಜಸ್ತಮೋಗುಣರಹಿತನು ಇಂತಹ ಶ್ರೀಪರಮಾತ್ಮನನ್ನು ಎಲೋ ರಾಜಶ್ರೇಷ್ಠನೇ ಪಂಚಭೂತಗಳ ಲಯಕ್ಕೆ ಅಧಿಕಾರಣವಾದ ಮೂಲಪ್ರಕೃತಿಗೆ ಅಭಿಮಾನಿನಿಯಾದ ಲಕ್ಷ್ಮೀದೇವಿಯು ಸೇವಿಸುತ್ತಾ ಇರುತ್ತಾಳೆ. ॥ ೧ ॥

ಟೀ—ಶ್ರೀಪರಮಾತ್ಮನಿಗೆ ಭೌತಿಕಶರೀರವಿಲ್ಲವೆಂದು ಹೇಳಿದ್ದು ಮೂಲರೂಪವಿಷಯಕವಾಗಲಿ, ಶ್ರೀಕೃಷ್ಣನು ಅವತಾರರೂಪನಾಗಿರುವುದರಿಂದ ಅವನಿಗೆ ಮನುಷ್ಯ ಶರೀರವಿದೆ. ಎಂದಾಗಲಿ, ಎಂದರೆ—

ಭಾ ॥ (೧) ಅವತಾರಪ್ರಸಂಗೇ ಚೈತದುಕ್ತಂ । ಅತೋ ನಾವತಾರಾತ್ಪೃಥಕ್ಶಂಕ್ಯಾಃ ॥ (೨) ರೂಪಾಣ್ಯನೇಕಾನ್ಯಸೃಜತ್ಪ್ರಾದುರ್ಭಾವಭವಾಯ ಸಃ । ವಾರಾಹಂ ನಾರಸಿಂಹಂ ಚ ವಾಮನಂ ಮಾನುಷಂ ತಥೇತಿ ॥ (೩) ತತ್ರೈವ ಪ್ರಥಮಸರ್ಗಕಾಲ ಏವಾವತಾರರೂಪವಿಭಕ್ತ್ಯುಕ್ತೇಃ । ಅತೋ ನ ತೇಷಾಂ ಮಾನುಷತ್ವಾದಿರ್ವಿನಾ ಭ್ರಾಂತಿಂ ॥ (೪) ಭೂತಂ ಮಹದೀಶ್ವರಂ ಚೇತಿ ಭೂತಮಹೇಶ್ವರಂ ॥ (೫) ತಥಾ ಹಿ ಬಾಭ್ರವ್ಯಶಾಖಾಯಾಂ । ಅನಾದ್ಯನಂತಂ ಪರಿಪೂರ್ಣರೂಪಮಿತಂ ನರಾಣಾಮಪಿ ದೇವವೀರ್ಯಮಿತಿ ॥ (೬)(೧) ಅಸ್ಯ ಮಹತೋ ಭೂತಸ್ಯ ನಿಃಶ್ವಸಿತಮಿತಿ ಚ । (೨) ಬ್ರಹ್ಮ ಪುರೋಹಿತ ಬ್ರಹ್ಮ ಕಾಯಿಕ ಮಹಾರಾಜಿಕೇತಿ ಚ ಮೋಕ್ಷಧರ್ಮೇ ॥ ೨ ॥ ೧೧ ॥

ಅ ॥ (೧) ಯಸ್ತದ್ದದೃಶಿವಾನ್ ಬ್ರಹ್ಮಾ ರೂಪಂ ಹಯಶಿರೋಧರಂ ಎಂದು ಹಯಗ್ರೀವಾವತಾರ ಪ್ರಸಂಗದಲ್ಲಿ ಅವತಾರರೂಪಗಳಿಗೇನೇ ಭೌತಿಕದೇಹವಿಲ್ಲವೆಂದು ಉಕ್ತವಾಗಿದೆ. ಆದಕಾರಣ ಶ್ರೀಕೃಷ್ಣಾವಾದ್ಯವತಾರಗಳು ಮೂಲರೂಪದಿಂದ ಭಿನ್ನಗಳೆಂದೂ ಭೌತಿಕಶರೀರವುಳ್ಳವುಗಳೆಂದೂ ಶಂಕಿಸಕೂಡದು. (೨) (ಹಯಗ್ರೀವರೂಪಿಯಾದ ಶ್ರೀಪರಮಾತ್ಮನಂತೆ ಶ್ರೀಕೃಷ್ಣಾದಿಗಳಿಗೂ ಮೂಲರೂಪದಿಂದ ವ್ಯತ್ಯಾಸವಿಲ್ಲವೆಂಬುವಲ್ಲಿ ವಿಶೇಷಪ್ರಮಾಣವನ್ನು ಹೇಳುತ್ತಾರೆ) (ಬ್ರಹ್ಮೋದ್ಭೋಕ್ತ್ರಿಯ... ...ಲೆ ಬ್ರಹ್ಮನ ದೈನಂದಿನ ಕಲ್ಪದಲ್ಲಿ ಆದಾವ ಪ್ರಥಮಸೃಷ್ಟಿಕಾಲದಲ್ಲಿ...) ಶ್ರೀನಾರಾಯಣನು ಅವತಾರ ಮಾಡುವುದಕ್ಕಾಗಿ ವಾರಾಹ, ನಾರಸಿಂಹ, ವಾಮನ ಶ್ರೀಕೃಷ್ಣ, ರಾಮ...

ಲಾದ ಅನೇಕ ಅವತಾರಗಳನ್ನು ಪಂಚಾತ್ಮಕಃ ಸ ಭಗವಾನ್ ದ್ವಿಷಡಾತ್ಮಕೋಽಭೂತ್ ಎಂದು ಹೇಳಿದ ಪ್ರಕಾರ ಆದಿಸೃಷ್ಟಿಯಲ್ಲಿಯೇ ವ್ಯಕ್ತಪಡಿಸಿರುವನು. (೩) ಮೋಕ್ಷಧರ್ಮದಲ್ಲಿಯೇ ಆದಿಸೃಷ್ಟಿಯ ಕಾಲದಲ್ಲಿಯೇ (ಮನುಷ್ಯ ಮೊದಲಾದ ಜಾತಿಯು ಹುಟ್ಟುವುದಕ್ಕಿಂತ ಮೊದಲೇ) ವರಾಹ ಮೊದಲಾದ ಅವತಾರ ರೂಪಗಳ ವಿಭಾಗವನ್ನು (ಅಂದರೆ ಇಂತಹವುಗಳು ಅವತಾರರೂಪಗಳೆಂದು ಪ್ರತ್ಯೇಕ) ಹೇಳಿದ್ದಾರೆ. (ಕೃಷ್ಣಾದಿಗಳ ದೇಹವು ಮಾನುಷದೇಹವಲ್ಲ.) ಆದುದರಿಂದ ಆ ಅವತಾರಾದಿಗಳಿಗೆ ಭ್ರಾಂತಿಯಿಲ್ಲದೆ ಮನುಷ್ಯತ್ವಾದಿಗಳನ್ನು ಹೇಳಲಾಗುವುದಿಲ್ಲ. (ಅಂದರೆ ರಾಮಕೃಷ್ಣಾದಿಗಳ ದೇಹಗಳಲ್ಲಿ ಮನುಷ್ಯದೇಹದ ಸಾದೃಶ್ಯವಿದ್ದುದರಿಂದ ಮೂಢರಿಗೆ ಮಾತ್ರ ಮನುಷ್ಯದೇಹವೇ ಎಂಬ ಭ್ರಮೆಯು ಬರುವುದು.) (೪) ಭೂತಂ = ಸರ್ವದಾ ಇರತಕ್ಕುದು (ಸರ್ವಕಾಲದಲ್ಲಿರತಕ್ಕುದು.) ಮಹತ್ = ಸರ್ವದೇಶಗಳಲ್ಲಿರತಕ್ಕುದು, ಈಶ್ವರಂ = ಸರ್ವಗುಣಪರಿಪೂರ್ಣವೂ ಆದ ಯಥಾರ್ಥಸ್ವರೂಪವನ್ನು. (೫) ಉತ್ಪತ್ತಿ ನಾಶಗಳಿಲ್ಲದವನು. ಗುಣಪರಿಪೂರ್ಣಸ್ವರೂಪವುಳ್ಳವನು. ಇಂದ್ರಾದಿದೇವತೆಗಳಿಂದ ಶ್ರೇಷ್ಠರಾದ ರುದ್ರಾದಿಗಳಿಗೂ ಸ್ವಾಮಿಯು. ಬ್ರಹ್ಮಾದಿಗಳೇ ಪುತ್ರರಾಗಿವುಳ್ಳವನು. ಎಂದು ಬಾಭ್ರವ್ಯಶಾಖೆಯಲ್ಲಿ ಶ್ರೀಹರಿಗೆ ಗುಣಪರಿಪೂರ್ಣತ್ವ, ನಿತ್ಯತ್ವ, ವ್ಯಾಪ್ತತ್ವ ಮೊದಲಾದುವುಗಳು ಉಕ್ತವಾಗಿವೆ. (೬) (1) ಸರ್ವದೇಶಕಾಲಗಳಲ್ಲಿ ವ್ಯಾಪ್ತನಾದ ಸರ್ವೋತ್ತಮನಾದ ಶ್ರೀಪರಮಾತ್ಮನಿಂದ ಅನಾಯಾಸದಿಂದಲೇ (ಋಗ್ವೇದಾದಿಗಳೂ ಸರ್ವಜಗತ್ತೂ) ಹುಟ್ಟಿದವು. (2) ಪುರೋಹಿತವೆಂಬುವ ದೇವಗಣಗಳೂ, ಕಾಯಿಕವೆಂಬುವ ದೇವಗಣಗಳೂ ಮಹಾರಾಜಿಕವೆಂಬುವ ದೇವಗಣಗಳೂ, ಇವೆಲ್ಲವೂ ಪರಬ್ರಹ್ಮನಾದ ನಿನ್ನ ಅಧೀನಗಳೇ ಆಗಿವೆ, ಎಂದು ಮೋಕ್ಷಧರ್ಮದಲ್ಲಿ ಹೇಳಿದೆ. ॥ ೧೧ ॥

ಟೀ—ಶ್ರೀಪರಮಾತ್ಮನನ್ನು ನಿಂದಿಸುವವರಿಗೆ ಅನರ್ಥ ಫಲವನ್ನು ಹೇಳುತ್ತಾರೆ—

**ಗೀ ॥ ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೨ ॥**

ಅ ॥ ಮೋಘಾಶಾಃ = ವ್ಯರ್ಥವಾದ ಆಶೆಯುಳ್ಳವರು, (ಅಂದರೆ ಭಗವದ್ದ್ವೇಷಿಗಳು ಅಪೇಕ್ಷಿಸುವ ಪಾರಲೌಕಿಕ ಯಾವುದೊಂದು ಫಲವನ್ನು ಹೊಂದದಿರುವವರು) ಮೋಘಕರ್ಮಾಣಃ = ವ್ಯರ್ಥಗಳಾದ ಯಜ್ಞಾದಿ ಕರ್ಮಗಳುಳ್ಳವರು. (ಯಜ್ಞಾದಿಕರ್ಮಗಳಿಂದ ಪಾರತ್ರಿಕ ಪ್ರಯೋಜನವನ್ನು ಹೊಂದದಿರುವವರು) ಮೋಘಜ್ಞಾನಾಃ = ಭಗವತ್ಸ್ವರೂಪವಿಷಯಕ ಜ್ಞಾನವಿಲ್ಲದವರು. ವಿಚೇತಸಃ = ವಿರುದ್ಧವಾದ ಮನಸ್ಸುಳ್ಳವರು (ಅಂತೂ ಯಾವುದರಿಂದಲೂ ಆಮುಷ್ಮಿಕ ಪುರುಷಾರ್ಥವಿಲ್ಲದವರು.) ಇಂತಹ, ಮೋಹಿನೀಂ = ಬುದ್ಧಿಯನ್ನು ಕೆಡಿಸುವ, ರಾಕ್ಷಸೀಂ = ರಾಕ್ಷಸರ ಸಂಬಂಧಿಯಾದ, ಚ = ಮತ್ತು, ಆಸುರೀಂ = ಅಸುರರ ಸಂಬಂಧಿಯಾದ, ಪ್ರಕೃತಿಮೇವ = ಸ್ವಭಾವವನ್ನೇ, ಶ್ರಿತಾಃ = ಆಶ್ರಯಿಸಿಕೊಂಡಿರುವ ತಮೋಯೋಗ್ಯರು, (ಮಾಂ = ನನ್ನನ್ನು, ಅವಜಾನಂತಿ = ಸರ್ವೋತ್ತಮನೆಂದು ತಿಳಿಯದೆ ಅಧಮನೆಂದು ತಿಳಿಯುತ್ತಾರೆ) ॥ ೧೨ ॥

ಭಾ ॥ (೧) ತೇಷಾಂ ಫಲಮಾಹ । ಮೋಘಾಶಾ ಇತಿ । ವೃಥಾಶಾಃ । ಭಗವದ್ದ್ವೇಷಿಭಿರಾಶಾಸಿತಮಾಮುಷ್ಮಿಕಂ ನ ಕಿಂಚಿದಾಪ್ಯತೇ ॥ (೨) ಯಜ್ಞಾದಿಕರ್ಮಾಣಿ ಚ ತೇಷಾಂ ವೃಥೈವ । ಜ್ಞಾನಂ ಚ । ತೇನಾಪಿ ಬ್ರಹ್ಮರುದ್ರಾದಿಭಕ್ತ್ಯಾದ್ಯುಪಾಯೇನ ನ ಕಶ್ಚಿತ್ಪುರುಷಾರ್ಥ ಆಮುಷ್ಮಿಕಸ್ತೈರಾಪ್ಯತ ಇತ್ಯರ್ಥಃ । (೩) ವಕ್ಷ್ಯತಿ ಚ । (1) ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷ್ವಿತ್ಯಾದಿ ॥ (2) ಮೋಕ್ಷಧರ್ಮೇ ಚ । ಕರ್ಮಣಾ

ಮನಸಾ ವಾಚಾ ಯೋ ದ್ವಿಷ್ಯಾದ್ವಿಷ್ಣುಮವ್ಯಯಂ । ಮಜ್ಜಂತಿ ಪಿತರಸ್ತಸ್ಯ ನರಕೇ ಶಾಶ್ವತೀಃ ಸಮಾಃ ॥ (3) ಯೋ ದ್ವಿಷ್ಯಾದ್ವಿಬುಧಶ್ರೇಷ್ಠಂ ದೇವಂ ನಾರಾಯಣಂ ಹರಿಂ । ಕಥಂ ಸ ನ ಭವೇದ್ದ್ವೇಷ್ಯ ಆಲೋಕಾಂತಸ್ಯ ಕಸ್ಯಚಿದಿತಿ ॥ (4) ಸರ್ವೋತ್ಕೃಷ್ಟೇ ಜ್ಞಾನಭಕ್ತೀ ಹಿ ಯಸ್ಯ ನಾರಾಯಣೇ ಪುಷ್ಕರವಿಷ್ಟರಾದ್ಯೇ । ಸರ್ವಾವಮೋ ದ್ವೇಷಯುತಶ್ಚ ತಸ್ಮಿನ್ ಭ್ರೂಣಾನಂತಘ್ನೋಽಸ್ಯ ಸಮೋ ನ ಚೈವೇತಿ ಸಾಮವೇದೇ ಶಾಂಡಿಲ್ಯಶಾಖಾಯಾಂ ॥ (5) ದ್ವೇಷಾಚ್ಚೈದ್ಯಾದಯೋ ನೃಪಾಃ ॥ (6) ವೈರೇಣ ಯನ್ನೃಪತಯಃ ಶಿಶುಪಾಲಪೌಂಡ್ರಸಾಲ್ವಾದಯೋ ಗತಿವಿಲಾಸವಿಲೋಕನಾದ್ಯೈಃ । ಧ್ಯಾಯಂತ ಆಕೃತಧಿಯಃ ಶಯನಾಸನಾದೌ ತತ್ಸಾಮ್ಯಮಾಪುರನುರಕ್ತಧಿಯಃ ಪುನಃ ಕಿಮಿತ್ಯಾದಿ ತು ಭಗವತೋ ಭಕ್ತಪ್ರಿಯತ್ವಜ್ಞಾಪನಾರ್ಥಂ ॥ (ಅ) ನಿತ್ಯಧ್ಯಾನಸ್ತುತ್ಯರ್ಥಂ ಚ ॥ (ಆ) ಸ್ವಭಕ್ತಸ್ಯ ಕದಾಚಿಚ್ಛಾಪಬಲಾದ್ದ್ವೇಷಿಣೋಽಪಿ ಭಕ್ತಿಫಲಮೇವ ಭಗವಾನ್ದದಾತೀತಿ । ಭಕ್ತಾ ಏವ ಹಿ ತೇ ಪೂರ್ವಂ ಶಿಶುಪಾಲಾದಯಃ ಶಾಪಬಲಾದೇವ ದ್ವೇಷಿಣಃ ॥ (ಇ) ತತ್ರಶ್ಚೇ ಪೂರ್ವಪಾರ್ಷದತ್ವ ಶಾಪಾದಿಕಥನಾಚ್ಚೈತಜ್ಜ್ಞಾಯತೇ । ಅನ್ಯಥಾ ಕಿಮಿತಿ ತದಪ್ರಸ್ತುತಮುಚ್ಯತೇ॥ (ಈ) ಭಗವತಃ ಸಾಮ್ಯಕಥನಂ ತು ದ್ವೇಷಿಣಾಮಪಿ ದ್ವೇಷಮನಿರೂಪ್ಯ ಪೂರ್ವತನಭಕ್ತಿಫಲಮೇವ ದದಾತೀತಿ ಜ್ಞಾಪಯಿತುಂ ॥ (ಉ) ನ ಮೇ ಭಕ್ತಃ ಪ್ರಣಶ್ಯತೀತಿ ವಕ್ಷ್ಯತಿ ॥ ೧ ॥

ಅ ॥ **ಮೋಘಾಶಾಃ** ಎಂಬುವ ಶ್ಲೋಕದಿಂದ ಭಗವದ್ದ್ವೇಷಿಗಳಿಗೆ ಆಗುವ ಅನರ್ಥ ಫಲವನ್ನು ಹೇಳುತ್ತಾರೆ ಮೋಘಾಶಾಃ = ವ್ಯರ್ಥವಾದ ಆಶೆಯುಳ್ಳವರು. ಅಂದರೆ ಭಗವದ್ದ್ವೇಷಿಗಳಿಂದ ಅಪೇಕ್ಷಿಸಲ್ಪಡುವ ಯಾವುದೊಂದು ಪಾರತ್ರಿಕ ಫಲವೂ ಅವರಿಗೆ ಸಿಗುವುದಿಲ್ಲ. (ಆ) ಅವರು ಮಾಡುವ ಯಜ್ಞಾದಿ ಕರ್ಮಗಳೂ ವ್ಯರ್ಥಗಳೇ. ಅವರ ಜ್ಞಾನವೂ ವ್ಯರ್ಥವೇ, ಅಂದರೆ-ಬ್ರಹ್ಮರುದ್ರಾದಿಗಳಲ್ಲಿ ಮಾಡತಕ್ಕ ಜ್ಞಾನ ಭಕ್ತಿ ಮೊದಲಾದ ಯಾವುದೊಂದು ಸಾಧನದಿಂದಲೂ ಭಗವದ್ದ್ವೇಷಿಗಳಿಗೆ ಆಮುಷ್ಮಿಕವಾದ ಯಾವುದೊಂದು ಪುರುಷಾರ್ಥವೂ ಸಿಗುವುದಿಲ್ಲ. (ಇ) (ಮೋಕ್ಷಾದಿರೂಪ ಪುರುಷಾರ್ಥಪ್ರಾಪ್ತಿಯು ಮಾತ್ರ ಆಗದಿರುವುದು ಅಲ್ಲ. ಮತ್ತೆ ಮಹಾದುಃಖಪ್ರಾಪ್ತಿಯೂ ಆಗುತ್ತದೆಂಬುವ ಅಭಿಪ್ರಾಯದಿಂದ ಈ ವಿಷಯದಲ್ಲಿ ಪ್ರಮಾಣಗಳನ್ನು ಹೇಳುತ್ತಾರೆ (1) ನಾನು ಕ್ರೂರರಾದ ಅಂತಹ ಭಗವದ್ದ್ವೇಷಿಗಳನ್ನು ಸಂಸಾರಗಳಲ್ಲಿ (ಅವರಲ್ಲಿಯೂ ಅಸುರಯೋನಿಗಳಲ್ಲಿ ಕೆಡಹಾಕುವೆನು) ಇತ್ಯಾದಿ ಪ್ರಮೇಯವನ್ನು (ಮುಂದಕ್ಕೆ ಹೇಳುವರು) (2) (ಈ ವಿಷಯವನ್ನು ಮೋಕ್ಷಧರ್ಮದಲ್ಲಿಯೂ ಹೇಳಿರುತ್ತಾರೆ) ಕರ್ಮದಿಂದಲೂ ಮನಸ್ಸಿನಿಂದಲೂ ವಚನದಿಂದಲೂ ಯಾವನು ನಾಶವಿಲ್ಲದ ಶ್ರೀವಿಷ್ಣುವನ್ನು ದ್ವೇಷಿಸುವನೋ, ಅಂತಹವನ ಪಿತೃಗಳು ನರಕದಲ್ಲಿ ಬಹು ಸಂವತ್ಸರಗಳಲ್ಲಿ ಬೀಳುತ್ತಾರೆ (3) ಬ್ರಹ್ಮರುದ್ರಾದಿ ದೇವತೆಗಳಿಗಿಂತಲೂ ಶ್ರೇಷ್ಠನೂ, ಕ್ರೀಡಾದಿಗುಣವಿಶಿಷ್ಟನೂ ಪಾಪಸಂಹಾರಕನೂ ಆದ ಶ್ರೀನಾರಾಯಣನನ್ನು ಯಾವನು ದ್ವೇಷಿಸುವನೋ, ಆತನು ಚಂಡಾಲಪರ್ಯಂತನಾದ ಯಾವ ಮನುಷ್ಯನಿಗೆ ತಾನೆ ದ್ವೇಷ್ಯನು ಆಗದೆ ಹೋದಾನು? (ಸರ್ವಥಾ ಎಲ್ಲರಿಗೂ ದ್ವೇಷ್ಯನೇ ಆಗುವನು) (4) ಸರ್ವರಿಗಿಂತಲೂ ಉತ್ತಮನಾದ, ಚತುರ್ಮುಖ ಬ್ರಹ್ಮನಿಗೂ ತಂದೆಯಾದ ಶ್ರೀನಾರಾಯಣನಲ್ಲಿ ಯಾರಿಗೆ ಜ್ಞಾನಭಕ್ತಿಗಳು ಇವೆಯೋ ಆತನಲ್ಲಿ ದ್ವೇಷಮಾಡತಕ್ಕವನು ಸರ್ವರಿಗಿಂತಲೂ ಅತ್ಯಂತ ಅಧಮನು

ಅನಂತಭ್ರೂಣಹತ್ಯಮಾಡಿದವನು ಸಹ ಭಗವದ್ಭಕ್ತದ್ವೇಷಿಗೆ ಸಮಾನನಲ್ಲವೇ ಅಲ್ಲ. (ಅಂದರೆ ಭ್ರೂಣಹತ್ಯಮಾಡಿದವನಿಗಿಂತಲೂ ಭಗವದ್ಭಕ್ತದ್ವೇಷಿಯು ಅಧಮನು) ಎಂದು ಸಾಮವೇದದಲ್ಲಿ ಶಾಂಡಿಲ್ಯಶಾಖೆಯಲ್ಲಿದೆ. (5) (ಭಗವದ್ದ್ವೇಷವು ಅನರ್ಥಸಾಧನವಾದರೆ ಶ್ರೀಪರಮಾತ್ಮನ ದ್ವೇಷವು ಮೋಕ್ಷಕ್ಕೆ ಸಾಧನವೆಂದು ಭಾಗವತಾದಿಗಳಲ್ಲಿ ಹೇಳಿದ್ದು ಹೇಗೆಂದರೆ—) **ಗೋಪ್ಯಃ ಕಾಮಾದ್ಭಯಾತ್ಕಂಸೋ ದ್ವೇಷಾಚ್ಚೈದ್ಯಾದಯೋ ನೃಪಾಃ । ಸಂಬಂಧಾದ್ವೃಷ್ಣಯಃ ಸ್ನೇಹಾದ್ಯೂಯಂ ಭಕ್ತ್ಯಾ ವಯಂ ವಿಭೋ ।** ದ್ವೇಷದಿಂದ ಚೈದ್ಯ ಮೊದಲಾದ ರಾಜರು ಎಂಬುವ ವಾಕ್ಯಕ್ಕೆ **ಕಾಮಾತ್ ಸ್ನೇಹಾತ್ ಭಯಾದ್ದ್ವೇಷಾದ್ಯಥಾ ಭಕ್ತ್ಯೇಶ್ವರೇ ಮನಃ । ಆವೇಶ್ಯ ತದಘಂ ಹಿತ್ವಾ ಬಹವಸ್ತದ್ಗತಿಂ ಗತಾಃ** ಎಂಬುವಲ್ಲಿ ಹೇಳಿದ ಪ್ರಕಾರ ದ್ವೇಷದಿಂದಲಾದರೂ ಶ್ರೀಪರಮಾತ್ಮನಲ್ಲಿಯೇ ಮನಸ್ಸನ್ನು ಇಟ್ಟು ಪಾಪವನ್ನು ಕಳೆದುಕೊಂಡು ವೈಕುಂಠವನ್ನು ಹೊಂದಿರುತ್ತಾರೆ ಎಂದರ್ಥವು. ದ್ವೇಷದಿಂದ ಮೋಕ್ಷವು ಸರ್ವಥಾ ಆಗಲಾರದು. ಸರ್ವದಾ ಹಂಸ್ಮರಣರೂಪ ಧ್ಯಾನವು ಮೋಕ್ಷಕ್ಕೆ ಸಾಧನವು ಎಂಬುವಲ್ಲಿ ತಾತ್ಪರ್ಯವು.) (6) ಶಿಶುಪಾಲ ಪೌಂಡ್ರಕ ವಾಸುದೇವ, ಸಾಲ್ವ, ಮೊದಲಾದವರು ದ್ವೇಷದಿಂದ ಯಾವ ಶ್ರೀಪರಮಾತ್ಮನ ವಿಚಿತ್ರ ಗತಿ, ವಿಲಾಸ, ದರ್ಶನ, ಮೊದಲಾದುವುಗಳಿಂದ ಆಕೃಷ್ಟವಾದ ಬುದ್ಧಿಯುಳ್ಳವರಾಗಿ, ಯಾವ ಕಾರಣದಿಂದ ಶಯನ. ಅಶನ ಮೊದಲಾದುವುಗಳಲ್ಲಿಯೂ ಶ್ರೀಪರಮಾತ್ಮನನ್ನು ಸ್ಮರಿಸುವವರಾಗಿ ಆ ಶ್ರೀಹರಿಯ ಸಾಮ್ಯವನ್ನು (ವೈಕುಂಠವನ್ನು) ಹೊಂದಿರುತ್ತಾರೋ, ಹೀಗೆ ಇರಲು ಶ್ರೀಪರಮಾತ್ಮನಲ್ಲಿಯೇ ಭಕ್ತಿಯಿಂದ ಸಂಬದ್ಧವಾದ ಬುದ್ಧಿಯುಳ್ಳವರು ಶ್ರೀಹರಿಯ ಸಾಮ್ಯವನ್ನು ಹೊಂದುತ್ತಾರೆಂದು ಏನು ಹೇಳಬೇಕು, ಎಂದು ಶ್ರೀಪರಮಾತ್ಮನು ಭಕ್ತರಿಗೆ ಪ್ರಿಯನೆಂದು ತಿಳಿಸುವುದಕ್ಕಾಗಿ ಹೇಳಿದ್ದು. (೭) (ಶಿಶುಪಾಲ ಮೊದಲಾದವರು ಪೂರ್ವದಲ್ಲಿಯೇ ಭಕ್ತರಾಗಿದ್ದುದರಿಂದ ಅವರ ವಿಷಯದಲ್ಲಿ ಹೀಗೆ ಹೇಳಬಹುದು. ಆದರೆ ಭಕ್ತರಾಗದೆ ಇದ್ದ ಪೌಂಡ್ರಕವಾಸುದೇವ ಸಾಲ್ವ ಮೊದಲಾದವರ ವಿಷಯದಲ್ಲಿ ಹೀಗೆ ಹೇಳಲಾಗುವುದಿಲ್ಲವೆಂದರೆ—) ನಿತ್ಯದಲ್ಲಿಯೂ ಧ್ಯಾನಮಾಡುವುದು ಅತಿಪ್ರಶಸ್ತವು, ಎಂದು ಧ್ಯಾನವನ್ನು ಸ್ತುತಿಸುವುದಕ್ಕಾಗಿಯೂ ಹೀಗೆ ಹೇಳಿದ್ದು (ಅಂದರೆ—ಶಿಶುಪಾಲಾದಿಗಳ ದೇಹಗಳು ಜಯ ಮೊದಲಾದ ಶುಭಜೀವರ ಕರ್ಮಗಳಿಂದ ನಿರ್ಮಿತಗಳಾಗಿರುವುದರಿಂದ ಅವರು ಅಸುರರ ಆವೇಶನಿಮಿತ್ತವಾಗಿ ಕದಾಚಿತ್ ದ್ವೇಷಮಾಡಿದರೂ ದ್ವೇಷದ ಫಲವು ಜಯವಿಜಯರಿಗೆ ಆಗುವುದಿಲ್ಲ. ಅವರು ಮಾಡಿದ ಸ್ವಾಭಾವಿಕವಾದ ಭಕ್ತಿಯ ಫಲವೇ ಆಗುತ್ತದೆ ಅವರಲ್ಲಿ ಪ್ರವೇಶಿಸಿರುವ ಅಸುರರಿಗೇನೇ ದ್ವೇಷಫಲವಾದ ತಮಸ್ಸು. ಹೀಗೆ ಭಕ್ತರಲ್ಲಿ ಶ್ರೀಪರಮಾತ್ಮನು ಪ್ರೀತಿಯನ್ನೇ ಮಾಡುತ್ತಾನೆಂದು ತಾತ್ಪರ್ಯವನ್ನು ತಿಳಿಸಿಕೊಡುವುದಕ್ಕಾಗಿ **ದ್ವೇಷಾಚ್ಚೈದ್ಯಾದಯೋ ನೃಪಾಃ** ಎಂಬುವ ವಾಕ್ಯವು ಹೊರಟಿದ್ದು. ದ್ವೇಷವು ಮೋಕ್ಷಕ್ಕೆ ಸಾಧನವೆಂದು ಹೇಳಲಿಕ್ಕೆ ಹೊರಟಿದ್ದಲ್ಲ) **ಪೌಂಡ್ರಕೇ ನರಕೇ ಚೈವ ಸಾಲ್ವೇ ಕಂಸೇ ಚ ರುಗ್ಮಿಣಿ । ಆವಿಷ್ಟಾಸುರಾ ಹರೇರ್ಧರ್ಮಾತ್ತತ್ಕೃತ್ಯಾ ಹರಿಮಾಪಿರೇ ॥** ಇತ್ಯಾದಿ ಪ್ರಮಾಣಗಳಿಂದ ಪೌಂಡ್ರಕ ವಾಸುದೇವಾದಿಗಳಲ್ಲಿಯೂ ಸಜ್ಜೀವರ ಪ್ರವೇಶವಿದೆ. ಆದರೂ ಪೌಂಡ್ರಕಾದಿಗಳ ದೇಹಗಳು ವೇನ ಮೊದಲಾದ ಅಸುರರ ಕರ್ಮಗಳಿಂದ ನಿರ್ಮಿಸಲ್ಪಟ್ಟಿರುವುದರಿಂದ ಅವರಲ್ಲಿ ಪ್ರವಿಷ್ಟರಾದ ಶುಭಜೀವರಿಗೇನೇ ಶುಭಫಲವು ಪೌಂಡ್ರಕಾದ್ಯಸುರರು ಮಾಡಿದ ದ್ವೇಷಕ್ಕೆ ತಮಸ್ಸೇ ಫಲವು ಆದರೂ ನಿರಂತರದಲ್ಲಿಯೂ ದ್ವೇಷದಿಂದಲಾದರೂ ಶ್ರೀಹರಿಯನ್ನು ಸ್ಮರಿಸಿಕೊಂಡಿರುವುದರಿಂದ ನಿತ್ಯಧ್ಯಾನವು ಪ್ರಶಸ್ತವೆಂಬುವಲ್ಲಿಯೇ. **ವೈರೇಣ ಯನ್ನೃಪತಯಃ** ಎಂಬುವ ವಾಕ್ಯಕ್ಕೆ ತಾತ್ಪರ್ಯ ಹೊರತು ದ್ವೇಷದಿಂದ ಮೋಕ್ಷವಾಗುತ್ತದೆಂಬುವಲ್ಲಿ ತಾತ್ಪರ್ಯವಿಲ್ಲ. (೮) (ಹಿಂದೆ ಹೇಳಿದ ಅಭಿಪ್ರಾಯವನ್ನೇ ವಿವರಿಸುತ್ತಾರೆ—) ಶ್ರೀಪರಮಾತ್ಮನು ತನ್ನ ಭಕ್ತರಾದ ಜಯ ವಿಜಯಾದಿಗಳು ಕದಾಚಿತ್ ಸನಕಾದಿಗಳ ಶಾಪಬಲದಿಂದಲೇ ಅಸುರಾವೇಶದಿಂದ ಶ್ರೀಪರಮಾತ್ಮನಲ್ಲಿ ಕದಾಚಿತ್ ದ್ವೇಷ ಮಾಡಿದರೂ ವಸ್ತುತಃ ಭಕ್ತವತ್ಸಲನಾದ ಶ್ರೀಪರಮಾತ್ಮನು. ಆ ದ್ವೇಷವನ್ನು ಗಣನೆಮಾಡದೆ ಭಕ್ತರಾದ ಜಯಾದಿಗಳಿಗೆ ಅವರು ಮಾಡಿದ ಭಕ್ತಿಯ ಫಲಭೂತವಾದ ಮೋಕ್ಷಾದಿಗಳನ್ನೇ

ಶ್ರೀಪರಮಾತ್ಮನು ಕೊಡುತ್ತಾನೆ (ಹೀಗೆ ಭಕ್ತರಲ್ಲಿ ಮಹಾಪ್ರೀತಿಯಿರುವವನೆಂದು ತಿಳಿಸುವುದಕ್ಕಾಗಿಯೇ ಈ ವಾಕ್ಯವು ಹೊರಟಿದ್ದು.) ಶಿಶುಪಾಲ ಮೊದಲಾದವರು ಪೂರ್ವದಲ್ಲಿ ಜಯವಿಜಯಾದಿರೂಪದಿಂದ ಭಕ್ತರೇ ಆಗಿದ್ದರು. ಎಂದು ಭಾಗವತಾದಿಗಳಲ್ಲಿ ಪ್ರಸಿದ್ಧವೇ ಆಗಿದೆ ಸನಕಾದಿಗಳ ಶಾಪಬಲದಿಂದಲೇ ಕದಾಚಿತ್ ದ್ವೇಷಮಾಡಿದ್ದು. (ಯೋ ದ್ವಿಷ್ಯಾದ್ವಿಬುಧಶ್ರೇಷ್ಠಂ ಇತ್ಯಾದಿದ್ವೇಷಕ್ಕೆ ತಮಸ್ಸಾಧನತ್ವವನ್ನು ಹೇಳುವ ಪ್ರಮಾಣಾನುಸಾರ ಅವಾತತಃ ದ್ವೇಷಕ್ಕೆ ಮೋಕ್ಷಸಾಧನತ್ವವನ್ನು ಹೇಳುವಂತೆ ತೋರುವ ದ್ವೇಷಚೈದ್ಯಾದಯಃ ಇದು ಮೊದಲಾದಭಾಗವತವಾಕ್ಯಕ್ಕೂ ಹೀಗೆಯೇ ಅರ್ಥವನ್ನು ಹೇಳಬೇಕು.)(೬) (ಈ ವಾಕ್ಯಗಳಿಗೆ ಹೀಗೆಯೇ ಅರ್ಥವನ್ನು ಹೇಳಬೇಕೆನ್ನುವಲ್ಲಿ ಬೇರೆ ಜ್ಞಾಪಕವನ್ನು ಹೇಳುತ್ತಾರೆ-)( ಅಹೋ ಅತ್ಯದ್ಭುತಂ ಹ್ಯೇತತ್ ದುರ್ಲಭೈಕಾಂತಿನಾಮಪಿ । ವಾಸುದೇವೇ ಭಗವತಿ ಗತಿಶ್ಚೈದ್ಯಸ್ಯ ವಿದ್ವಿಷಃ ಎಂದು ಧರ್ಮರಾಜನು ದ್ವೇಷಿಯಾದ ಶಿಶುಪಾಲನಿಗೆ ಮುಕ್ತಿಯು ಹೇಗೆಂದು) ಆ ವಿಷಯದಲ್ಲಿ ಪ್ರಶ್ನೆಯನ್ನು ಮಾಡೋಣ ನಾರದರು ಮಾತೃಷ್ವಸೇಯೋ ವಶ್ಚೈದ್ಯೋ ದಂತವಕ್ರಶ್ಚ ಪಾಂಡವ । ಪಾರ್ಷದಪ್ರವರೌ ವಿಷ್ಣೋರ್ವಿಪ್ರಶಾಪಾತ್ಪದಚ್ಯುತೌ ಎಂದು ಪೂರ್ವದಲ್ಲಿ ಜಯವಿಜಯರೆಂಬುವ ದ್ವಾರಪಾಲಕರು ಶಾಪಾದಿಗಳನ್ನು ಹೊಂದಿರುವರು, ಎಂದು ಹೇಳಿದ್ದರಿಂದಲೂ ದ್ವೇಷವು ಮೋಕ್ಷಸಾಧನವೆಂಬುವುದು ತಿಳಿಯುತ್ತದೆ ದ್ವೇಷವು ಮೋಕ್ಷಸಾಧನವೆಂದಾಗಿದ್ದರೆ ಆಗ ಈ ವಿಷಯದಲ್ಲಿ ಆಶ್ಚರ್ಯ ವೇನು? ದ್ವೇಷವು ಭಕ್ತಿಯಂತೆ ಮೋಕ್ಷಕ್ಕೆ ಸಾಧನವೇ (ಮೋಕ್ಷಮಾರ್ಗವೇ) ಎಂದುತ್ತರಕೊಡಬೇಕಿತ್ತು. ಪೂರ್ವದಲ್ಲಿ ದ್ವಾರಪಾಲಕರಾಗಿದ್ದವರಿಗೆ ಶಾಪಾದಿಗಳ ಬಲದಿಂದ ನೀಚಯೋನಿಪ್ರಾಪ್ತಿಯು, ಇತ್ಯಾದಿಗಳು ಅಪ್ರಸ್ತುತಗಳೂ ಅನುಪಯುಕ್ತಗಳೂ ಆದ ವಿಷಯಗಳನ್ನು ಹೇಳಬೇಕಾಗಿರಲಿಲ್ಲ (೭)(ನಿಂದನಸ್ತವಸತ್ಕಾರ ನ್ಯಕ್ಕಾರಾರ್ಥಂ ಕಲೇವರಂ ಇತ್ಯಾದಿ ಶ್ಲೋಕಗಳಿಂದ ಶ್ರೀಪರಮಾತ್ಮನು ತನ್ನನ್ನು ನಿಂದಿಸುವವರ ಲ್ಲಿಯೂ ಸ್ತುತಿಸುವವರಲ್ಲಿಯೂ ಸಮನಾಗಿಯೇ ಇರುತ್ತಾನೆಂದು ನಾರದರು ಹೇಳಿದ್ದಾರೆ ನಿಂದೆಯು ಸ್ತುತಿಯಂತೆ ಮೋಕ್ಷಸಾಧನವೆಂದಾಗಿದ್ದರೆ ನಾರದರು ಹೇಳಿದ್ದು ಅಯುಕ್ತವಾಗುವುದು ಎಂದರೆ -) ಭಕ್ತ ವತ್ಸಲನಾದ ಶ್ರೀಪರಮಾತ್ಮನು ನಿಂದಾದಿಗಳನ್ನು ಮಾಡಿದವರಲ್ಲಿಯೂ ನಿರ್ವಿಕಾರನಾಗಿಯೇ ಇರುತ್ತಾ ನೆಂದು ಹೇಳಿದ್ದು. ಭಕ್ತರಾಗಿದ್ದವರು ಅಸುರರ ಆವೇಶನಿಮಿತ್ತವಾಗಿ ಕದಾಚಿತ್ ದ್ವೇಷಮಾಡಿದಾಗ್ಯೂ ಅವರು ಮಾಡಿದ ದ್ವೇಷರೂಪವಾದ ಅಪರಾಧವನ್ನು ಲೆಕ್ಕಿಸದೆ ಹಿಂದಿನ ಭಕ್ತಿಯ ಫಲವನ್ನೇ ಕೊಡುತ್ತಾ ನೆಂದು ತಿಳಿಸುವುದಕ್ಕಾಗಿಯೇ ಹೇಳಿದ್ದು ದ್ವೇಷವು ಮೋಕ್ಷಸಾಧನವೆಂಬುವ ಅಭಿಪ್ರಾಯದಿಂದಲ್ಲ. (ಶ್ರೀಪರಮಾತ್ಮನು ಭಕ್ತರ ಅಪರಾಧವನ್ನು ಎಣಿಸುವುದಿಲ್ಲ. ಸಹಿಸಿಕೊಳ್ಳುತ್ತಾನೆಂಬುವುದು ಗೀತೆಯ ಲ್ಲಿಯೇ ಹೇಳಿದ್ದಾರೆಂದು ಹೇಳುತ್ತಾರೆ—) (೮) ನನ್ನ ಭಕ್ತನು ಹಾಳಾಗುವುದಿಲ್ಲ. ಎಂದು ಮುಂದಕ್ಕೆ ಈ ಗ್ರಂಥದಲ್ಲಿಯೇ ಹೇಳುವರು ॥ ೧ ॥

ಟೀ—ದ್ವೇಷವು ಮುಕ್ತಿಗೆ ಸಾಧನವಲ್ಲವೆಂದು ಹೇಳುವುದಾದರೆ ಭಕ್ತಿಯಿಂದಾಗಲೀ ದ್ವೇಷದಿಂದ ಲಾಗಲೀ ಮಾಡಿದ ಸ್ಮರಣೆಯು ಮೋಕ್ಷಕ್ಕೆ ಕಾರಣವಾಗುತ್ತದೆಂದು ಹೇಳುವ ಭಾವೋ ಹಿ ಇದು ಮೊದ ಲಾದ ವಚನಗಳಿಂದ ವಿರೋಧವು ಬರುವುದು ಎಂದರೆ-

ಭಾ ॥ (೧) ನ ಚ ಭಾವೋ ಭವಕಾರಣಮಿತ್ಯಾದಿವಿರೋಧಃ । ದ್ವೇಷಭಾವಿನಾಂ ದ್ವೇಷ ಏವ ಭವತೀತಿ ಹಿ ಯುಕ್ತಂ ॥ (೨) ಅನ್ಯಥಾ ಗುರುದ್ವೇಷಿಣೋಽಪಿ ಗುರುತ್ವಂ ಭವ- ತೀತ್ಯಾದ್ಯನಿಷ್ಟಮಾಪದ್ಯತೇ ॥ (೩) ನ ಚಾಕೃತಧೀತ್ವೇ ವಿಶೇಷಃ । ತೇಷಾಮೇವ ಹಿರಣ್ಯಕಶಿಪ್ವಾದೀನಾಂ ಪಾಪಪ್ರತೀತೇಃ ॥ (೪) ಹಿರಣ್ಯಕಶಿಪುಶ್ಚಾಪಿ ಭಗವನ್ನಿಂ- ದಯಾ ತಮಃ । ವಿವಿಕ್ಷುರತ್ಯಗಾತ್ಸೂನೋಃ ಪ್ರಹ್ಲಾದಸ್ಯಾನುಭಾವತ ಇತಿ ॥ (೫)

ಯದನಿಂದತ್ಪಿತಾ ಮಹ್ಯಂ ತ್ವದ್ಭಕ್ತೇ ಮಯಿ ಚಾಘವಾನಿತ್ಯಾರಭ್ಯ ತಸ್ಮಾತ್ಪಿತಾ ಮೇ ಪೂಯೇತ ದುರಂತಾದ್ದುಸ್ತರಾದಘಾದಿತಿ ಪ್ರಹ್ಲಾದೇನ ಭಗವತೋ ವರಯಾಚನಾಚ್ಚ ॥ ೨ ॥

ಅ ॥ (೧) ಭಾವೋ ಹಿ ಭವಕಾರಣಂ ಇತ್ಯಾದಿ ವಚನಗಳಿಂದ ವಿರೋಧವು ಬರುತ್ತದೆಂದು ಹೇಳಕೂಡದು. (ಏಕೆ ಹೇಳಕೂಡದೆಂದರೆ –) ದ್ವೇಷದಿಂದ ಶ್ರೀಕೃಷ್ಣನನ್ನು ಧ್ಯಾನಿಸುವವರಿಗೆ ಶ್ರೀಕೃಷ್ಣನಲ್ಲಿ ದ್ವೇಷವೇ ಉಂಟಾಗುತ್ತದೆಂಬುವ ವಚನಕ್ಕೆ ದ್ವೇಷಭಾವವು (ದ್ವೇಷದಿಂದ ಮಾಡುವ ಧ್ಯಾನವು) ದ್ವೇಷಾಭಿವೃದ್ಧಿಗೇನೇ ಕಾರಣವಾಗುತ್ತದೆಂಬುವ ಅರ್ಥವನ್ನೇ ಹೇಳುವುದರಿಂದ ದ್ವೇಷವು ಮೋಕ್ಷಸಾಧನವೆಂಬುವ ಅರ್ಥವನ್ನು ಹೇಳುವುದೇ ಇಲ್ಲ. (ಯಾದೃಶೀ ಭಾವನಾ ಜ್ಞೇಯಾ ಸಿದ್ಧಿರ್ಭವತಿ ತಾದೃಶೀ ಎಂದು ಉಕ್ತವಾಗಿದೆ) (೨) ದ್ವೇಷದಿಂದ ಭಗವಂತನ ಧ್ಯಾನವು ದ್ವೇಷವಿಷಯವಾಗಿ ಶ್ರೀಪರಮಾತ್ಮನ ಸ್ವರೂಪತತ್ತ್ವರೂಪ ಮೋಕ್ಷಕ್ಕೆ ಕಾರಣವು ಎಂದು ಅರ್ಥವನ್ನು ಇಟ್ಟುಕೊಂಡರೆ ಲೋಕದಲ್ಲಿ ಗುರುದ್ವೇಷಿಗಳಿಗೂ ಗುರುತ್ವವು ಬರಬೇಕಾಗುವುದು, ಎಂಬುವ ಅನಿಷ್ಟವು ಪ್ರಾಪ್ತವಾದೀತು. (ಅದಕಾರಣ ನಾವು ಹೇಳಿದಂತೆಯೇ ಆ ವಾಕ್ಯಕ್ಕೆ ಅರ್ಥವನ್ನು ಹೇಳಬೇಕು.) (೩) (ಭಗವದ್ಭಕ್ತನು ಶ್ರೀಪರಮಾತ್ಮನಿಂದ ಅಭಿನ್ನವಾದ ಬುದ್ಧಿಯುಳ್ಳವನಾದುದರಿಂದ (ಅಂದರೆ-ಶ್ರೀಹರಿಯಲ್ಲಿಯೇ ಬುದ್ಧಿಯನ್ನು ಇಟ್ಟಿರುವುದರಿಂದ) ಹೇಗೆ ಮುಕ್ತಿಯನ್ನು ಹೊಂದುತ್ತಾನೋ ಹಾಗೆಯೇ ಪರಮಾತ್ಮನ ದ್ವೇಷಿಯು ಶ್ರೀಪರಮಾತ್ಮನಲ್ಲಿಯೇ ಬುದ್ಧಿಯನ್ನು ಇಟ್ಟಿರುವುದರಿಂದ ಮೋಕ್ಷವನ್ನು ಹೊಂದುತ್ತಾನೆ ಎಂದರೆ-) ಭಗವದ್ದ್ವೇಷಿ ಭಗವದ್ಭಕ್ತರಿಬ್ಬರೂ ಶ್ರೀಪರಮಾತ್ಮನಿಂದ ಅಭಿನ್ನವಾದ ಬುದ್ಧಿಯುಳ್ಳವರಾದರೂ ಅವರಿಬ್ಬರಿಗೂ ಸಿಗುವ ಫಲದಲ್ಲಿಯೂ ವಿಶೇಷ (ವ್ಯತ್ಯಾಸ) ವಿಲ್ಲವೆಂದು ಹೇಳಕೂಡದು. ದ್ವೇಷದಿಂದ ಪರಮಾತ್ಮನಲ್ಲಿಯೇ ಬುದ್ಧಿಯನ್ನು ಇಟ್ಟಿರುವ ಹಿರಣ್ಯಕಶಿಪು ಮೊದಲಾದವರಿಗೆ ಪಾತವು ಇದೆ. ಎಂದು ಹಿರಣ್ಯಕಶಿಪುಃ ಇತ್ಯಾದಿ ವಾಕ್ಯಗಳಿಂದ ಹೇಳಿದ್ದಾರೆ. (೪) ಹಿರಣ್ಯಕಶಿಪುವೂ ಕೂಡ ಶ್ರೀಪರಮಾತ್ಮನ ನಿಂದೆಯಿಂದ ಅಂಧಂತಮಸ್ಸನ್ನು ಹೊಂದಬೇಕಾದ ಸಾಧನಗಳಿದ್ದರೂ ತನ್ನ ಮಗನಾದ ಪ್ರಹ್ಲಾದನ ಪ್ರಭಾವದಿಂದ ಅಂಧಂತಮಸ್ಸನ್ನು ಅತಿಕ್ರಮಿಸಿದನು. (ಅಂದರೆ ಅನರ್ಥವನ್ನು ಕಳೆದುಕೊಂಡನು.) (೫) ನನ್ನ (ಪ್ರಹ್ಲಾದನ) ತಂದೆಯು ಶ್ರೀಪರಮಾತ್ಮನನ್ನು ಯಾವುದು ನಿಂದಿಸಿದನೋ, (ಪರಮಾತ್ಮನ ಭಕ್ತನಾದ ನನ್ನಲ್ಲಿ ಮಹಾಪರಾಧವನ್ನು ಮಾಡಿದನೋ,) ಎಂದಾರಂಭಿಸಿ, ಅದಕಾರಣ ನನ್ನ ತಂದೆಯಾದ ಹಿರಣ್ಯಕಶಿಪುವು ಅಂತವಿಲ್ಲದಿರುವ ತೀರಿಸಲಶಕ್ಯವಾದ ಪಾಪರಾಶಿಯಿಂದ ಬಿಡುಗಡೆಹೊಂದಿ ಪವಿತ್ರನಾಗಲಿ, ಎಂದು ಪ್ರಹ್ಲಾದನು ಶ್ರೀಪರಮಾತ್ಮನಿಂದ ವರವನ್ನು ಬೇಡಿದ್ದಾನೆ. (ಇದರಿಂದ ವಿಷ್ಣು ವೈಷ್ಣವದ್ವೇಷಿಗಳಿಗೆ ಮಹಾಪಾಪವಿದೆ. ಎಂದು ತಿಳಿಯುತ್ತದೆ.)

ಟೀ–ಯೋ ಧ್ಯಾಯತ್ ಇತ್ಯಾದಿಗಳು ದ್ವೇಷಾಚ್ಚೈದ್ಯಾದಯಃ ಇತ್ಯಾದಿಗಳನ್ನು ಬಾಧಿಸುವುದು ಹೇಗೆ? ಎಂದರೆ –

ಭಾ ॥ (೧) ಬಹುಷು ಗ್ರಂಥೇಷು ನಿಷೇಧಃ । ಕುತ್ರಚಿದೇವ ತದುಕ್ತಿರಿತಿ ವಿಶೇಷಃ ॥ (೨) ಯಸ್ಮಿಂಸ್ತದುಚ್ಯತೇ ತತ್ರೈವ ನಿಷೇಧ ಉಕ್ತಃ । ಮಹಾತಾತ್ಪರ್ಯವಿರೋಧಶ್ಚೋಕ್ತಃ ಪುರಸ್ತಾತ್ ॥ (೩) ಅಯುಕ್ತಿಮದ್ಭ್ಯೋ ಯುಕ್ತಿಮಂತ್ಯೇವ ಬಲವಂತಿ ವಾಕ್ಯಾನಿ । ಯುಕ್ತಯಶ್ಚೋಕ್ತಾ ಅನ್ಯೇಷಾಂ । ನ ತ್ವೇತೇಷಾಂ ಕಾಚಿದ್ಗತಿಃ । (೪) ಸಾಮ್ಯೇಽಪಿ ವಾಕ್ಯಯೋರ್ಲೋಕಾನುಕೂಲಮೇವ ಬಲವತ್ । ಲೋಕಾನುಕೂಲಂ

ಚ ಭಕ್ತಪ್ರಿಯತ್ವಂ ನೇತರಸ್ । ಉಕ್ತಂ ಚ ತೇಷಾಂ ಪೂರ್ವಭಕ್ತತ್ವಂ ॥ (೫)
ಮನ್ಯೇ ಸುರಾನ್ಭಾಗವತಾಂಸ್ತ್ರ್ಯಧೀಶೇ ಸಂರಂಭಮಾರ್ಗಾಭಿನಿವಿಷ್ಟಚಿತ್ತಾನಿತ್ಯಾದಿ ॥
(೬) ಅತೋ ನ ಭಗವದ್ದ್ವೇಷಿಣಾಂ ಕಾಚಿದ್ಗತಿರಿತಿ ಸಿದ್ಧಂ । ದ್ವೇಷಕಾರಣಮಾಹ ।
ರಾಕ್ಷಸೀಮಿತಿ ॥ ೩ ॥ ॥ ೧೨ ॥

ಅ ॥ (೧) ಬಹುಗ್ರಂಥಗಳಲ್ಲಿ ದ್ವೇಷವು ಮುಕ್ತಿಗೆ ಸಾಧನವೆಂಬುವುದನ್ನು ನಿಷೇಧಿಸಿಯದೆ ಕೆಲವು ಕಡೆ ಮಾತ್ರ ದ್ವೇಷವು ಮುಕ್ತಿಗೆ ಸಾಧನವೆಂದು ಹೇಳಿದ್ದು. ಹೀಗೆ ವಿಶೇಷವಿದೆ. (ಅಂದರೆ ದ್ವೇಷದಿಂದ ಮೋಕ್ಷವಾಗುವುದಿಲ್ಲ. ತಮಸ್ಸೇ ಆಗುತ್ತದೆ, ಎಂದು ಹೇಳುವ ಯೋ ದ್ವಿಷ್ಯಾತ್ ಇತ್ಯಾದಿ ವಚನಗಳು ಬಹಳ ಇವೆ ದ್ವೇಷವು ಮೋಕ್ಷಸಾಧನವೆಂದು ಹೇಳುವ ವಚನಗಳು ಅತ್ಯಲ್ಪವು. ಕೆಲವು ಕಡೆ ಮಾತ್ರ ಕಂಡುಬರುತ್ತದೆ. (೨) ಭಾಗವತ ಮೊದಲಾದ ಯಾವ ಗ್ರಂಥದಲ್ಲಿ ದ್ವೇಷದಿಂದ ಮುಕ್ತಿಯಾಗುತ್ತದೆ ಎಂದು ಹೇಳಿಯದೋ, ಆ ಗ್ರಂಥದಲ್ಲಿಯೇ ಭಗವನ್ನಿಂದಯಾ ತಮಃ ಎಂದು ಅಂಧಂತಮಸ್ಸು ಆಗುತ್ತದೆಂದು ಹೇಳಿದೆ. (ಆದಕಾರಣ ಆ ವಾಕ್ಯಗಳಿಗೆ ಯಥಾಶ್ರುತಾರ್ಥವನ್ನು ಇಟ್ಟುಕೊಳ್ಳಬಾರದು.) ಶ್ರೀಪರಮಾತ್ಮನು ಸರ್ವಗುಣಪರಿಪೂರ್ಣನು, ಸರ್ವೋತ್ತಮನು ಎಂಬುವಲ್ಲಿಯೇ ಸಮಸ್ತ ವೇದಶಾಸ್ತ್ರಗಳಿಗೆ ಮಹಾತಾತ್ಪರ್ಯವು ಇದೆ, ಎಂದು ಪ್ರಮಾಣಸಿದ್ಧವಾಗಿದೆಂದು ಹಿಂದೆ ಉಕ್ತವಾಗಿದೆ. ದ್ವೇಷದಿಂದ ಮುಕ್ತಿಯಾಗುತ್ತದೆಂದು ಹೇಳುವವರಿಗೆ ಮಹಾತಾತ್ಪರ್ಯ ವಿರೋಧವು ಬರುವುದು. (೩) ಯುಕ್ತಿಸಿದ್ಧವಾಗದಿರುವ ಅರ್ಥವನ್ನು ಹೇಳುವ ವಾಕ್ಯಗಳಿಗಿಂತ ಯುಕ್ತಿಸಿದ್ಧವಾದ ಅರ್ಥವನ್ನು ಹೇಳುವ ವಾಕ್ಯಗಳೇ ಪ್ರಬಲಗಳು ಆದಕಾರಣ ಪರಮಾತ್ಮನ ಪರಮಾನುಗ್ರಹದಿಂದಲೇ ಮೋಕ್ಷಾದಿ ಪುರುಷಾರ್ಥಗಳಾಗುತ್ತವೆ. ಪರಮಾತ್ಮನ ದ್ವೇಷದಿಂದ ಮಹಾನರ್ಥವೇ ಉಂಟಾಗುತ್ತದೆ, ಇದೇ ಮೊದಲಾದ ಅರ್ಥವನ್ನು ಸಾಧಿಸಿಕೊಡುವ ಯುಕ್ತಿಗಳ ಸಹಾಯಗಳು ನಾವು ಹೇಳಿದ ವಚನಗಳಿಗೆ ಇವೆ. ಪರರು ಹೇಳಿರುವ ವಚನಗಳಿಗೆ ಇಂತಹ ಯುಕ್ತಿಗಳ ಸಹಾಯಗಳು ಇಲ್ಲ. ದ್ವೇಷಕ್ಕೆ ತಮಸ್ಸಾಧನತ್ವವಿದೆ. ಎಂದು ಸ್ಪಷ್ಟವಾಗಿ ಹೇಳುವ ವಾಕ್ಯಗಳಿಗೆ ಬೇರೆ ಯಾವ ವಿಧದಿಂದಲೂ ಅರ್ಥವನ್ನು ಹೇಳಲಿಕ್ಕೆ ಬರುವುದಿಲ್ಲ. ದ್ವೇಷದಿಂದ ಮೋಕ್ಷವಾಗುತ್ತದೆಂದು ಹೇಳುವ ಕೆಲವು ವಚನಗಳಿಗೆ ನಾವು ಅರ್ಥಾಂತರವನ್ನು ಹೇಳಿರುತ್ತೇವೆ (೪) ಮತ್ತು ಭಗವದ್ದ್ವೇಷವು ಅನರ್ಥಸಾಧನವೆಂದು ಹೇಳುವ ವಾಕ್ಯಗಳಿಗೂ ಭಗವದ್ದ್ವೇಷವು ಮೋಕ್ಷಕ್ಕೆ ಸಾಧನವೆಂದು ಹೇಳುವ ವಾಕ್ಯಗಳಿಗೂ ಕಥಂಚಿತ್ ಗುಣಾಂತರದಿಂದ ಸಾಮ್ಯವಿದೆ, ಎಂದು ಹೇಳಿದರೂ ಲೋಕಾನುಭವಸಿದ್ಧವಾದ ಅರ್ಥವನ್ನು ಹೇಳುವ ವಾಕ್ಯಗಳಿಗೇನೇ ಲೋಕಾನುಭವವಿರುದ್ಧಾರ್ಥವನ್ನು ಹೇಳುವ ವಾಕ್ಯಗಳಿಗಿಂತ ಪ್ರಾಬಲ್ಯವೇ ಕಂಡುಬಂದದೆ ಲೋಕದಲ್ಲಿ ತನ್ನನ್ನೇ ದ್ವೇಷಿಸುವವನಲ್ಲಿ ಯಾರೂ ಅನುಗ್ರಹ ಮಾಡುವುದಿಲ್ಲ. ತನ್ನಲ್ಲಿ ವಿಶ್ವಾಸ ಮಾಡುವವನಲ್ಲಿಯೇ ಅನುಗ್ರಹ ಮಾಡುತ್ತಾನೆ. ಎಂಬುವುದು ಸರ್ವಾನುಭವಸಿದ್ಧವು ಲೋಕಾನುಕೂಲ ಲೋಕಾನನುಕೂಲ ವಾಕ್ಯಗಳಿಗೆ ಕಥಂಚಿತ್ ಗುಣಾಂತರದಿಂದ ಸಾಮ್ಯವಿದ್ದರೂ ಲೋಕಾನುಕೂಲವಾಕ್ಯವೇ ಪ್ರಬಲವು. ಭಕ್ತರಲ್ಲಿ ಪ್ರೀತಿಯುಳ್ಳವನು ಎಂಬುವುದು ಲೋಕಾನುಕೂಲವೂ ಆಗಿದೆ. ದ್ವೇಷಿಗಳಲ್ಲಿ ಪ್ರೀತಿಯಾದೆ, ಎಂಬುವುದು ಲೋಕಾನನುಕೂಲವು (ಶ್ರೀಪರಮಾತ್ಮನ ಪ್ರೀತಿಯಿಂದಲೇ ಮೋಕ್ಷವೆಂಬುವುದು ಪ್ರಸಿದ್ಧವೇ ಆಗಿದೆ.) ಶಿಶುಪಾಲಾದಿಗಳು ಪೂರ್ವದಲ್ಲಿ ದ್ವಾರಪಾಲಕರಾದುದರಿಂದ ಭಕ್ತರೆಂಬುವುದು ಪ್ರಸಿದ್ಧವೇ ಆಗಿದೆ, ಎಂದು ಮೊದಲೇ ಉಕ್ತವಾಗಿದೆ (೫) (ಮತ್ತು ಅವರು ದೇವತೆಗಳು ಎಂಬುವ ವಿಷಯದಲ್ಲಿ ಪ್ರಮಾಣವಿದೆ. ಎನ್ನುತ್ತಾರೆ) ಮೂರು ಲೋಕಗಳಿಗೆ ಸ್ವಾಮಿಯಾದ ಶ್ರೀಪರಮಾತ್ಮನಲ್ಲಿ ದ್ವೇಷದಿಂದ ಯುದ್ಧಮಾಡುವುದೆಂಬುವ (ಶ್ರೀಪರಮಾತ್ಮನಲ್ಲಿ ಮನಸ್ಸನ್ನು ಇಡುವುದರಲ್ಲಿ) ಮಾರ್ಗಮಾತ್ರದಿಂದ ಸಂಬದ್ಧವಾದ ಮನಸ್ಸುಳ್ಳ ಭಗವದ್ಭಕ್ತರಾದ ಶಿಶುಪಾಲಾದಿಗಳನ್ನು ದೇವತೆಗಳನ್ನಾಗಿ ತಿಳಿಯುತ್ತೇನೆ, ಇತ್ಯಾದಿ. (ಅಂದರೆ ದ್ವೇಷಾದಿಗಳಿಂದಲಾಗಲೀ ಶ್ರೀಪರ

ಮಾತ್ರನನ್ನೇ ಸ್ಮರಿಸುತ್ತಿದ್ದರು. ಆ ಶ್ರೀಹರಿಯಲ್ಲಿಯೇ ಚೆನ್ನಾಗಿ ಮನಸ್ಸನ್ನು ಇಟ್ಟಿದ್ದರಿಂದ ಮರಣಕಾಲದಲ್ಲಿ ಪರಮಾತ್ಮನಲ್ಲಿ ದ್ವೇಷವು ಕಳೆದುಹೋಗಿ ಭಕ್ತಿಯು ಅಭಿವೃದ್ಧಿಯಾಗೋಣ, ಶ್ರೀಪರಮಾತ್ಮನನ್ನು ಪ್ರವೇಶಮಾಡುತ್ತಾರೆ) (೬) ಆದಕಾರಣ ಭಗವದ್ದ್ವೇಷಿಗಳಿಗೆ ಸರ್ವಥಾ ಸದ್ಗತಿಯು ಆಗಲಾರದು, ಎಂದು ಸಿದ್ಧವಾಯ್ತು (ತಮ್ಮ ಮೌಢ್ಯದಿಂದಲೇ ನನ್ನನ್ನು ಅಧಮನೆಂದು ತಿಳಿಯುತ್ತಾರೆ. ನನ್ನಲ್ಲಿ ದೋಷವಿದ್ದ ಪ್ರಯುಕ್ತ ಎಂದಲ್ಲ. ಅವರಿಗೆ ಮಹಾ ಅನರ್ಥವುಂಟಾಗುವುದು.) ರಾಕ್ಷಸೀಂ ಎಂಬುವ ಶ್ಲೋಕದಿಂದ ದ್ವೇಷಕ್ಕೆ ಮೂಲಕಾರಣವನ್ನು ಹೇಳುತ್ತಾರೆ ॥ ೩ ॥ ॥ ೧೨ ॥

ಗೀ ॥ ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।
ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಂ ॥ ೧೩ ॥

ಅ ॥ ಪಾರ್ಥ=ಅರ್ಜುನನೇ, ದೈವೀಂ=ಮೋಕ್ಷಕ್ಕೆ ಯೋಗ್ಯರಾದ ಉತ್ತಮಜೀವರ ಸಂಬಂಧಿಯಾದ ಪ್ರಕೃತಿಂ=ಸ್ವಭಾವವನ್ನು, ಆಶ್ರಿತಾಃ=ಆಶ್ರಯಿಸಿರುವ, ಮಹಾತ್ಮಾನಃ=ಪರಿಶುದ್ಧವಾದ ಮನಸ್ಸುಳ್ಳವರಾದರೂ, ಭೂತಾದಿಂ=ಸಮಸ್ತ ಜಗತ್ತಿಗೆ ಕಾರಣನಾದ, ಅವ್ಯಯಂ=ನಾಲ್ಕುವಿಧ ನಾಶವಿಲ್ಲದ, ಮಾಂ=ನನ್ನನ್ನು, ಜ್ಞಾತ್ವಾ=ತಿಳಿದುಕೊಂಡು, ಅನನ್ಯಮನಸಃ=ಇತರ ವಿಷಯದಲ್ಲಿ ಮನಸ್ಸನ್ನು ಇಡದೆ ನನ್ನಲ್ಲಿಯೇ ಮನಸ್ಸನ್ನು ಇಟ್ಟವರಾಗಿ, ಮಾಂ=ನನ್ನನ್ನು, ಭಜಂತಿ=ಸೇವಿಸುತ್ತಾರೆ ॥ ೧೩ ॥

ಟೀ—ಭಜಿಸುವ ಪ್ರಕಾರವನ್ನು ಹೇಳುತ್ತಾರೆ—

ಗೀ ॥ ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।
ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ ೧೪ ॥

ಅ ॥ ಮಾಂ=ನನ್ನನ್ನು, ಸತತಂ=ನಿರಂತರದಲ್ಲಿಯೂ, ಕೀರ್ತಯಂತಃ=ಕೃಷ್ಣಕೃಷ್ಣ ಇತ್ಯಾದಿ ನಾಮಗಳನ್ನು ಹೇಳುತ್ತಾ, ಯತಂತಃ=ನನ್ನ ಪೂಜಾದಿಗಳಲ್ಲಿಯೇ ಪ್ರಯತ್ನಮಾಡುತ್ತಿರುವ ದೃಢವ್ರತಾಃ=ದೃಢವಾದ ಉಪವಾಸಾದಿ ನಿಯಮ ವ್ರತಗಳುಳ್ಳ, ನಿತ್ಯಯುಕ್ತಾಃ=ಯಾವಾಗಲೂ ನನ್ನಲ್ಲಿ ಮನಸ್ಸನ್ನು ಇಟ್ಟಿರುವ, ಅಥವಾ ನಿತ್ಯದಲ್ಲಿಯೂ ಕರ್ಮಜ್ಞಾನೋಪಾಯವುಳ್ಳ ಸಜ್ಜನರು, ಭಕ್ತ್ಯಾ=ಭಕ್ತಿಯಿಂದ, ಮಾಂ=ನನ್ನನ್ನು, ನಮಸ್ಯಂತಶ್ಚ=ನಮಸ್ಕಾರಮಾಡುತ್ತಾ, ಉಪಾಸತೇ=ಸೇವಿಸುತ್ತಾರೆ ॥ ೧೪ ॥

ಭಾ ॥ ಪ್ರೇತರೇ ದಿಶಂತೀತಿ ದರ್ಶಯಿತುಂ ದೇವಾನಾಹ । ಮಹಾತ್ಮಾನ ಇತ್ಯಾದಿನಾ ॥ ॥ ೧೩,೧೪ ॥

ಅ ॥ ಹಿಂದೆ ಹೇಳಿದ ತಾಮಸರಿಗಿಂತ ಇತರರಾದ ಉತ್ತಮಜೀವರು ನನ್ನನ್ನು ದ್ವೇಷಿಸುವುದಿಲ್ಲ ಎಂದು ತೋರಿಸುವುದಕ್ಕಾಗಿ ಮಹಾತ್ಮಾನಃ ಎಂಬುದರಿಂದ ದೇವತೆಗಳನ್ನು (ಉತ್ತಮ ಜೀವರನ್ನು) ಹೇಳುತ್ತಾರೆ. ॥ ೧೩, ೧೪ ॥

ತಾ ॥ (೧) ಮಾನುಷೀಂ ಮನುಷ್ಯಸದೃಶೀಂ ॥ (೨) ತನ್ನಾ ವಿಷ್ಣುರನನ್ಯೋಽಪಿ ಸ್ವಾಧೀನತ್ವಾತ್ತದಾಶ್ರಿತ ಇತಿ ಚ ॥ (೩) ಬ್ರಹ್ಮರುದ್ರರಮಾದೀನಾಂ ಸಾಮ್ಯದೃಷ್ಟಿರನನ್ಯತಾ । ಪ್ರಾದುರ್ಭಾವಗತಸ್ಯಾಪಿ ದೋಷದೃಷ್ಟಿರಪೂರ್ಣತಾ ॥ (೪) ಧರ್ಮದೇಹಾವತಾ

ರಾದೇರ್ಭೇದದೃಷ್ಟಿಶ್ಚ ಸಂಕರಃ । ಅವತಾರೇಷ್ವಿತಿ ಜ್ಞೇಯಮವಜ್ಞಾನಂ ಜನಾರ್ದನೇ ॥ (೫) ಸರ್ವಂ ಮೋಘಂ ಶುಭಂ ತಸ್ಯ ಯೋಽವಜಾನಾತಿ ಕೇಶವಂ । ಅಧ(ವ)ರಂ ಯಾತಿ ಚ ತಮಃ ಪ್ರಾದುರ್ಭಾವಗತೋಽಪ್ಯತಃ । ಜ್ಞೇಯಃ ಕೇವಲಚಿದ್ದೇಹೋ ನಿರ್ದೋ(ವಿದೋ)ಷಃ ಪೂರ್ಣಸದ್ಗುಣ ಇತಿ ಚ ಭವಿಷ್ಯತ್ಪರ್ವಣಿ ॥ ॥ ೧೧—೧೪ ॥

ಅ ॥ (೧) (11ನೇ ಶ್ಲೋಕದಲ್ಲಿದ್ದ) ಮಾನುಷೀಂ ಎಂಬುವುದಕ್ಕೆ ಮನುಷ್ಯಶರೀರಕ್ಕೆ ಸದೃಶವಾದುದು ಎಂದರ್ಥವು. (೨) ಶ್ರೀವಿಷ್ಣುವಿಗೂ ಅವನ ಶರೀರಕ್ಕೂ ಭೇದವಿಲ್ಲದಿದ್ದರೆ ಆ ಶ್ರೀಹರಿಯ ಅಧೀನದಲ್ಲಿದ್ದ ಪ್ರಯುಕ್ತ ಆ ಶರೀರವನ್ನು ಶ್ರೀಹರಿಯು ಆಶ್ರಯಿಸಿರುತ್ತಾನೆಂದು ಹೇಳಿದ್ದು. (೩) (ಅವಜಾನಂತಿ ಎಂದು ಹೇಳಿದ ಅವಜ್ಞಾನಶಬ್ದಾರ್ಥವನ್ನು ಹೇಳುತ್ತಾರೆ—) ಶ್ರೀಪರಮಾತ್ಮನಿಗೆ ಬ್ರಹ್ಮರುದ್ರಾದಿ ದೇವತೆಗಳ ಸಾಮ್ಯವನ್ನು ತಿಳಿದುಕೊಳ್ಳುವುದೂ ಬ್ರಹ್ಮರುದ್ರಾದಿಗಳಿಂದ ಅಭೇದವೆಂದು ತಿಳಿದುಕೊಳ್ಳುವುದೂ, ಅವತಾರಮಾಡಿದ ರಾಮಕೃಷ್ಣಾದಿ ರೂಪಗಳಲ್ಲಿ ದೋಷವದೆ ಎಂದು ತಿಳಿದುಕೊಳ್ಳುವುದೂ, ಗುಣಾದಿಗಳಿಂದ ದೇವರು ಪೂರ್ಣರಲ್ಲವೆಂದು ತಿಳಿದುಕೊಳ್ಳುವುದೂ, (೪) ಶ್ರೀಪರಮಾತ್ಮನ ಧರ್ಮ, ದೇಹ ಅವತಾರ ಮೊದಲಾದುವುಗಳಿಗೆ ಶ್ರೀಪರಮಾತ್ಮನಿಂದ ಭೇದವಿದೆ, ಎಂದು ತಿಳಿದುಕೊಳ್ಳುವುದೂ, (ಸಂಕರಃ=) ಶ್ರೀಪರಮಾತ್ಮನ ಸಾಕ್ಷಾತ್ ಅವತಾರಗಳಲ್ಲದ ಬಲರಾಮಾದಿಗಳನ್ನು ಸಾಕ್ಷಾತ್ ಅವತಾರಗಳೆಂದು ತಿಳಿದುಕೊಳ್ಳುವುದೂ, ಸಾಕ್ಷಾತ್ ಅವತಾರರೂಪಗಳಾದ ವೇದವ್ಯಾಸಾದಿಗಳನ್ನು ಅವತಾರರೂಪಗಳಲ್ಲವೆಂದು ತಿಳಿದುಕೊಳ್ಳುವುದೂ, ಇತ್ಯಾದಿಗಳು ಶ್ರೀಪರಮಾತ್ಮನಲ್ಲಿ ಅವಜ್ಞಾನವೆನಿಸುತ್ತದೆ. (೫) ಯಾರು ಹಿಂದೆ ಹೇಳಿದಪ್ರಕಾರ ಶ್ರೀಪರಮಾತ್ಮನನ್ನು ಅವಮಾನಿಸುತ್ತಾರೋ, ಅವರು ಮಾಡುವ ಎಲ್ಲಾ ಶುಭಕರ್ಮವೂ ವ್ಯರ್ಥವು. ಅವರು ಅಂಧಂತಮಸ್ಸನ್ನು ಹೊಂದುತ್ತಾರೆ. ಆದಕಾರಣ ಪ್ರಾದುರ್ಭಾವದಲ್ಲಿಂತಕ್ಕ ರೂಪಗಳು ಕೇವಲ ಚಿದಾನಂದಾತ್ಮಕಗಳೆಂದೂ ದೋಷಲೇಶರಹಿತಗಳೆಂದೂ ಪರಿಪೂರ್ಣನಿರ್ದುಷ್ಟ ಗುಣಾತ್ಮಕಗಳೆಂದೂ ತಿಳಿಯಬೇಕು, ಎಂದು ಭವಿಷ್ಯತ್ಪರ್ವದಲ್ಲಿದೆ. ॥ ೧೧—೧೪ ॥

ಗೀ ॥ ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।
ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಂ ॥ ೧೫ ॥

ಅ ॥ ಅನ್ಯೇಽಪಿ ಚ= ಇನ್ನಿತರ ಕೆಲವು ಮಹಾನುಭಾವರು, ವಿಶ್ವತೋಮುಖಂ=ಮುಖ ಮೊದಲಾದ ಸರ್ವಾಯವಗಳಿಂದ ಕೂಡಿಕೊಂಡೇ ಸಮಸ್ತ ದಿಕ್ಕುಗಳಲ್ಲಿಯೂ ವ್ಯಾಪಿಸಿಕೊಂಡಿರುವ, ಮಾಂ= ನನ್ನನ್ನು, ಜ್ಞಾನಯಜ್ಞೇನ=ಜ್ಞಾನರೂಪವಾದ ಯಜ್ಞದಿಂದ, ಯಜಂತಃ= ಪೂಜಿಸುವವರಾಗಿ. (ಅಂದರೆ ಶ್ರವಣ ಮನನ ಧ್ಯಾನಾದಿಗಳನ್ನು ಮಾಡುತ್ತಾ ಇತರರಿಗೆ ಉಪದೇಶಿಸುತ್ತಾ ಯಾವಾಗಲೂ ಶ್ರೀಹರಿಯ ಮಹಾತ್ಮ್ಯಜ್ಞಾನದಲ್ಲಿಯೇ ಆಸಕ್ತರಾದವರಾಗಿ.) ಏಕತ್ವೇನ=ಎಲ್ಲಾ ಪ್ರಾಣಿಗಳಲ್ಲಿ ಭಗವದ್ರೂಪಗಳಿದ್ದರೂ ಆ ರೂಪಗಳಿಗೆ ಭೇದವಿಲ್ಲವೆಂದೂ, ಪೃಥಕ್ತ್ವೇನ=ಚೇತನಾಚೇತನಾತ್ಮಕ ಸಮಸ್ತ ಜಗತ್ತಿಗಿಂತ ಬೇರೆ(ಭಿನ್ನ)ವೆಂದೂ, ಬಹುಧಾ ಚ=ಶುಕ್ಲ ನೀಲ ಪೀತಾದಿರೂಪಗಳುಳ್ಳವನೆಂದೂ, ಅಥವಾ ಕೇಶವಾದ್ಯನೇಕ ರೂಪಗಳುಳ್ಳವನೆಂದೂ, ಉಪಾಸತೇ=ಉಪಾಸನೆ ಮಾಡುತ್ತಾರೆ ॥ ೧೫ ॥

ಟೀ—ಏಕತ್ವೇನ ಎಂಬುವುದರಿಂದ ಜೀವಬ್ರಹ್ಮೈಕ್ಯವನ್ನು ತಿಳಿದುಕೊಂಡು ಉಪಾಸನೆ ಮಾಡಬೇಕೆಂಬುವುದು ಮಿಥ್ಯೋಪಾಸನೆಯಾಗಿರುವುದರಿಂದ ಅಯುಕ್ತವೆಂಬುವ ಅಭಿಪ್ರಾಯದಿಂದ ಸರಿಯಾದ ಅರ್ಥವನ್ನು ಹೇಳುತ್ತಾರೆ—

ಭಾ ॥ (೧) ಸರ್ವತ್ರೈಕ ಏವ ನಾರಾಯಣಃ ಸ್ಥಿತ ಇತ್ಯೇಕತ್ವೇನ । ಪೃಥಕ್ತ್ವೇನ । ಸರ್ವತೋ ವೈಲಕ್ಷಣ್ಯೇನ ॥ (೨) ಬಹುಧಾ ಹಿ ತಸ್ಯ ರೂಪಮಾಭಾತಿ । ಶುಕ್ಲಮಿವ ಲೋಹಿತಮಿವಾಥೋ ನೀಲಮಥಾರ್ಜುನಮಿತಿ ಹಿ ಸನತ್ಸುಜಾತೇ ॥ (೩) ದೈವಮೇವಾಪರ ಇತ್ಯುಕ್ತಪ್ರಕಾರೇಣ ಬಹವೋ ವಾ ಬಹುಧಾ ॥ ೧೫ ॥

ಅ ॥ (೧) ಚೇತನಾಚೇತನಸಮಸ್ತವಸ್ತುಗಳಲ್ಲಿ ನಿಯಾಮಕನಾಗಿರುವವನು ಶ್ರೀನಾರಾಯಣನೊಬ್ಬನೇ, ಎಂದು ಭಗವದ್ರೂಪಗಳಿಗೆ ಐಕ್ಯಾಭಿಪ್ರಾಯದಿಂದಲೂ. ಪೃಥಕ್ತ್ವೇನ=ಚೇತನಾಚೇತನ ವಸ್ತುಗಳಿಂದ ಶ್ರೀಪರಮಾತ್ಮನು ಅತ್ಯಂತ ಭಿನ್ನನೆಂದೂ, ಉಪಾಸನಾ ಮಾಡುತ್ತಾರೆ (ಶ್ರೀಪರಮಾತ್ಮನು ಆದಿತ್ಯಚಂದ್ರಾದಿ ನಾನಾರೂಪಗಳಿಂದ ಎಂದು ಅರ್ಥವಲ್ಲ.) (೨) ಆ ಶ್ರೀಪರಮಾತ್ಮನಿಗೆ ಶುಕ್ಲ ನೀಲಾದಿಭೇದದಿಂದ ಬಹುಪ್ರಕಾರ ರೂಪವು ತೋರುತ್ತದೆ. (ಆದಿತ್ಯ ಮೊದಲಾದ ಬಹುರೂಪವಿದೆ ಎಂದರ್ಥವಲ್ಲ.) (ಅದನ್ನು ಆಗಮದಿಂದಲೇ ತೋರಿಸುತ್ತಾರೆ—) ಶ್ರೀಪರಮಾತ್ಮನನ್ನು ಶುಕ್ಲರೂಪವುಳ್ಳವನನ್ನಾಗಿಯೂ. ಲೋಹಿತ ಮತ್ತು ನೀಲರೂಪವುಳ್ಳವನನ್ನಾಗಿಯೂ, ಶುಭ್ರರೂಪವಿಶೇಷವುಳ್ಳವನನ್ನಾಗಿಯೂ. ಎಂದು ಸನತ್ಸುಜಾತವೆಂಬುವ ಗ್ರಂಥದಲ್ಲಿದೆ. (೩) ಅಥವಾ ದೈವಮೇವ ಎಂದು ಹೇಳಿದ ಪ್ರಕಾರ ಬಹುಮಂದಿಜನರು ಯಜ್ಞಭೇದದಿಂದ ನನ್ನನ್ನು ಉಪಾಸನೆ ಮಾಡುತ್ತಾರೆ. ॥ ೧೫ ॥

ಟೀ—ಏಕತ್ವೇನ=ಸರ್ವರಿಂದ ಅಭಿನ್ನನೆಂದೂ, ಪೃಥಕ್ತ್ವೇನ=ಭಿನ್ನನೆಂದೂ, ಬಹುಧಾ=ಆದಿತ್ಯಾದಿರೂಪದಿಂದ ಎಂದೂ, ಅಥವಾ ಪೃಥಕ್ತ್ವೇನ=ಆದಿತ್ಯಾದಿಗಳಿಗೆ ದೇಹನೆಂದೂ, ಬಹುಧಾ=ಬಹುದೇವರೂಪದಿಂದ, ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಸ್ಮೃತಿಪ್ರಮಾಣ ಹೇಳಿ ಸರಿಯಾದ ಅರ್ಥವನ್ನು ಹೇಳುತ್ತಾರೆ—

ತಾ ॥ ಏಕಮೂರ್ತಿಶ್ಚತುರ್ಮೂರ್ತಿರಥವಾ ಪಂಚಮೂರ್ತಿಕಃ । ದ್ವಾದಶಾದಿಪ್ರಭೇದೋ ವಾ ಪೂಜ್ಯತೇ ಸಜ್ಜನೈರ್ಹರಿರಿತಿ ಚ ॥ ೧೫ ॥

ಅ ॥ ಸರ್ವರೂಪಾತ್ಮಕ ಶ್ರೀನಾರಾಯಣನೆಂಬುವ ಒಂದು ಮೂರ್ತಿಯುಳ್ಳ, ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂಬುವ ನಾಲ್ಕು ಮೂರ್ತಿಯುಳ್ಳ ಅಥವಾ ನಾರಾಯಣ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂಬುವ ಐದು ಮೂರ್ತಿಗಳುಳ್ಳ, ಅಥವಾ ಕೇಶವಾದಿ, ಸಂಕರ್ಷಣಾದಿ ಹನ್ನೆರಡು ಮೂರ್ತಿಗಳುಳ್ಳ. ಮತ್ಸ್ಯಾದಿ ೧೦ ರೂಪಗಳುಳ್ಳ ಆ ಶ್ರೀಹರಿಯು ಸಜ್ಜನರಿಂದ ಪೂಜಿಸಲ್ಪಡುತ್ತಾನೆ. ॥ ೧೫ ॥

ಟೀ—ಸಾಮಾನ್ಯ ಮಹಿಮೆಯನ್ನು ಹೇಳಿ ವಿಶೇಷ ಮಹಿಮೆಯನ್ನು ಹೇಳುತ್ತಾರೆ—

ಗೀ ॥ ಅಹಂ ಕ್ರತುರಹಂ ಯಜ್ಞಃ ಸ್ವಧಾಽಹಮಹಮೌಷಧಮ್ ।
ಮಂತ್ರೋಽಹಮಹಮೇವಾಜ್ಯಮಹಮಗ್ನಿರಹಂ ಹುತಮ್ ॥ ೧೬ ॥

ಅ ॥ ಅಹಂ=ನಾನು, ಕ್ರತುಃ=ಯಜ್ಞದೀಕ್ಷೆಯನ್ನಾರಂಭಿಸಿ ಅವಭೃಥಪರ್ಯಂತ ಕರ್ಮಗಳ ಸಮೂಹರೂಪವಾದ ಜ್ಯೋತಿಷ್ಟೋಮ ಮೊದಲಾದವುಗಳಿಗೆ ನಿಯಾಮಕನು ಮತ್ತು ಕ್ರತುವಿನ ಅಂಗ

ಗಾದ ಹವಿಸ್ಸು ಮೊದಲಾದವುಗಳನ್ನು ಭೋಗಿಸುವವನು. ಅಹಂ=ನಾನು, ಯಜ್ಞಃ=ದೇವತೆಗಳನ್ನುದ್ದೇಶಿಸಿ ದ್ರವ್ಯತ್ಯಾಗರೂಪವಾದ ಪ್ರಧಾನ ಕರ್ಮಕ್ಕೆ ನಿಯಾಮಕನು, ಮತ್ತು ಅದರ ಸಾರಭೋಕ್ತನು. ಸ್ವಧಾ=ಪಿತೃಗಳಿಗೆ ತಿಲೋದಕಾದಿಗಳನ್ನು ಕೊಡಲಿಕ್ಕೆ ಪ್ರೇರಕನು. ಅಹಂ=ನಾನು, ಔಷಧಂ=ಔಷಧಿಗಳಿಗೆ ನಿಯಾಮಕನಾಗಿ ಔಷಧದಲ್ಲಿರುವವನು. ಅಹಂ=ನಾನು, ಮಂತ್ರಃ=ಮಂತ್ರಪ್ರತಿಪಾದ್ಯನು, ಮಂತ್ರಗಳಿಗೆ ನಿಯಾಮಕನು. ಅಹಮೇವ=ನಾನೇ, ಆಜ್ಯಂ=ಆಜ್ಯಸಾರಭೋಕ್ತನು, ಆಜ್ಯನಿಯಾಮಕನು, ಅಹಂ=ನಾನು, ಅಗ್ನಿಃ=ಅಗ್ನಿಯಲ್ಲಿದ್ದು ಅಗ್ನಿಗೆ ಪ್ರೇರಕನು. ಅಹಂ=ನಾನು, ಹುತಂ=ಹೋಮಿಸಲ್ಪಟ್ಟ ಹವಿರಾದಿಗಳನ್ನೇ ಭೋಗಿಸುವವನು, ಹೋಮಕ್ರಿಯೆಗೆ ನಿಯಾಮಕನು. ಅಥವಾ ಪ್ರಯತ್ನಸ್ವರೂಪನಾದುದರಿಂದ ಕ್ರತುಃ ಎಂದೂ, ಪ್ರಮಾಣಸಿದ್ಧವಾದ ವಸ್ತುವನ್ನು ತಿಳಿಯುವುದರಿಂದ ಯಜ್ಞನೆಂದೂ, ತನ್ನನ್ನು ತಾನೇ ಧರಿಸಿಕೊಳ್ಳುವುದರಿಂದ ಸ್ವಧಾ ಎಂದೂ, ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕ ಎಂಬೀ ತಾಪತ್ರಯಗಳಿಂದ ನರಳುವವರಿಗೆ ಆಶ್ರಯನಾಗಿರುವುದರಿಂದ ಔಷಧನೆಂದೂ, ಜ್ಞಾನ ಕೊಟ್ಟು ರಕ್ಷಿಸುವುದರಿಂದ ಮಂತ್ರನೆಂದೂ, ಬ್ರಹ್ಮಾದಿಗಳಿಂದ ಚೆನ್ನಾಗಿ ಶ್ರೇಷ್ಠನಾಗಿರುವುದರಿಂದ ಆಜ್ಯನೆಂದೂ ಸ್ವತಃ ಗಮನಶಕ್ತಿಯಿಲ್ಲದಿರುವ ಜಗತ್ತಿಗೆ ಪ್ರೇರಕನಾಗಿರುವುದರಿಂದ ಅಗ್ನಿಯೆಂದೂ, ಯಜ್ಞಾದಿಗಳಲ್ಲಿ ಕರೆಯಲ್ಪಡುವುದರಿಂದ ಹುತನೆಂದೂ ಅನ್ನಿಸಿಕೊಳ್ಳುತ್ತಾನೆ. || ೧೬ ||

ಗೀ || ಪಿತಾಹಮಸ್ಯ ಜಗತೋ ಮಾತಾ ಧಾತಾ ಪಿತಾಮಹಃ |
ವೇದ್ಯಂ ಪವಿತ್ರಮೋಂಕಾರ ಋಕ್ಸಾಮ ಯಜುರೇವ ಚ || ೧೭ ||

ಅ || ಅಹಂ=ನಾನು, ಅಸ್ಯ ಜಗತಃ=ಈ ಜಗತ್ತನ್ನು, ಪಿತಾ=ಸೃಷ್ಟಿಸಿದವನು, ಅಹಂ=ನಾನು, ಮಾತಾ=ತಾಯಿಯಂತೆ ಪೋಷಕನು, ಧಾತಾ=ಧಾರಕನು, ಪಿತಾಮಹಃ=ಸರ್ವಪೂಜ್ಯನು, ವೇದ್ಯಂ=ಸರ್ವೋತ್ತಮನೆಂದು ತಿಳಿಯಲ್ಪಡುವವನೂ, ಪವಿತ್ರಂ=ಎಲ್ಲಾದಕ್ಕೂ ಪಾವಿತ್ರ್ಯಸಂಪಾದಕನೂ, ಅಹಮೇವ=ನಾನೇ, ಅಥವಾ ವೇದ್ಯಪವಿತ್ರವಸ್ತುಗಳಿಗೆ ವೇದ್ಯತ್ವವನ್ನೂ ಪಾವಿತ್ರ್ಯವನ್ನೂ ಕೊಡತಕ್ಕವನು ನಾನೇ. ಓಂಕಾರಃ ಋಕ್ ಸಾಮ ಯಜುರೇವ=ಓಂಕಾರದಿಂದಲೂ, ಋಕ್ಕಿನಿಂದಲೂ, ಸಾಮದಿಂದಲೂ, ಯಜುರ್ವೇದದಿಂದಲೂ ಪ್ರತಿಪಾದ್ಯನು ನಾನೇ. ಅಥವಾ ಓಂ ಎಂದು ಹೇಳಲ್ಪಡುವುದರಿಂದ ಓಂಕಾರನೆಂದು ಪೂಜಿಸಿಕೊಳ್ಳಲ್ಪಡುವುದರಿಂದ ಋಕ್ ಎಂದೂ ಸರ್ವರೂಪಗಳಲ್ಲಿ ಸಮನಾಗಿರುವುದರಿಂದ ಸಾಮನೆಂದೂ, ಪೂಜಿಸಿಕೊಳ್ಳಲ್ಪಡುವುದರಿಂದ ಯಜುಃ ಎಂದೂ ಹೆಸರುಳ್ಳವನು. || ೧೭ ||

ಭಾ || (೧) ಪ್ರತಿಜ್ಞಾತಂ ವಿಜ್ಞಾನಮಾಹ | ಅಹಂ ಕ್ರತುರಿತ್ಯಾದಿನಾ || (೨) ಕ್ರತವೋಽಗ್ನಿಷ್ಟೋಮಾದಯಃ | ಯಜ್ಞೋ ದೇವತಾಮುದ್ದಿಶ್ಯ ದ್ರವ್ಯತ್ಯಾಗಃ | ಉದ್ದಿಶ್ಯ ದೇವಾನ್ ದ್ರವ್ಯಾಣಾಂ ತ್ಯಾಗೋ ಯಜ್ಞ ಇತೀರಿತ ಇತ್ಯಭಿಧಾನಾತ್ || ೧೬,೧೭ ||

ಅ || (೧) ಅಹಂ ಕ್ರತುಃ ಇತ್ಯಾದಿಗಳಿಂದ ಪ್ರತಿಜ್ಞಾತವಾದ ವಿಜ್ಞಾನಶಬ್ದದಿಂದ ಹೇಳಲ್ಪಟ್ಟ ವಿಶೇಷ ಮಹಿಮೆಯನ್ನು ಹೇಳುತ್ತಾರೆ (೨) ಕ್ರತು ಯಜ್ಞಶಬ್ದಗಳಿಗೆ ಬೇರೆ ಬೇರೆ ಅರ್ಥವನ್ನು ಹೇಳುತ್ತಾರೆ. ಕ್ರತವಃ=ಅಗ್ನಿಷ್ಟೋಮ ಮೊದಲಾದವುಗಳು, ಯಜ್ಞಃ=ದೇವತೆಯನ್ನುದ್ದೇಶಿಸಿ ದ್ರವ್ಯಪರಿತ್ಯಾಗವು. ದೇವತೆಗಳನ್ನುದ್ದೇಶಿಸಿ ದ್ರವ್ಯಗಳತ್ಯಾಗವು ಯಜ್ಞವೆಂದು ಹೇಳಲ್ಪಡುತ್ತದೆ. ಎಂದು ಶಬ್ದಶಕ್ತಿಗ್ರಾಹಕ ಪ್ರಮಾಣವಿದೆ. || ೧೬, ೧೭ ||

ಗೀ || ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ |
ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಂ || ೧೮ ||

ಅ ॥ ಅಹಂ=ನಾನು, ಗತಿಃ=ಮುಮುಕ್ಷುಗಳಿಂದ ಹೊಂದಲ್ಪಡುವವನು, ಭರ್ತಾ=ಪೋಷಕನು, ಪ್ರಭುಃ=ಸರ್ವಸ್ವಾಮಿಯು. ಸಾಕ್ಷೀ=ಸರ್ವವನ್ನು ಪ್ರತ್ಯಕ್ಷವಾಗಿ ನೋಡುವವನು, ನಿವಾಸಃ=ಸರ್ವಾಶ್ರಯನು. ಶರಣಂ=ಭೀತರಕ್ಷಕನು (ಅಂದರೆ ಮುಕ್ತರಿಗೆ ಆಶ್ರಯನು.) ಸುಹೃತ್=ಪ್ರತ್ಯುಪಕಾರವನ್ನಪೇಕ್ಷಿಸದೆ ಉಪಕಾರ ಮಾಡುವವನು. ಪ್ರಭವಃ=ಜಗತ್ತಿಗೆ ಸೃಷ್ಟಿಕರ್ತನು, ಪ್ರಲಯಃ=ಜಗತ್ತಿಗೆ ನಾಶಕರ್ತನು, ಸ್ಥಾನಂ=ಸರ್ವರಿಗೂ ಆಧಾರನು. ನಿಧಾನಂ=ಚೆನ್ನಾಗಿ ಧಾರಕನು, ಅಥವಾ ಪ್ರಲಯಕಾಲದಲ್ಲಿ ಪ್ರಕೃತ್ಯಾದಿ ಜಗತ್ತನ್ನು ಹೊಟ್ಟೆಯಲ್ಲಿ ಧರಿಸಿಕೊಂಡಿರುವವನು. ಬೀಜಂ=ಜಗತ್ತನ್ನು ಪ್ರಕಟಿಸುವವನು, ಅವ್ಯಯಂ=ವಿಕಾರವಿಲ್ಲದವನು ॥೧೮॥

ಟೀ — ಗತಿಃ=ಕರ್ಮಫಲವು, ಎಂಬೀ ವ್ಯಾಖ್ಯಾನವು ಅಯುಕ್ತವೆನ್ನುತ್ತಾರೆ—

**ಭಾ ॥ (೧) ಗಮ್ಯತೇ ಮುಮುಕ್ಷುಭಿರಿತಿ ಗತಿಃ । ತಥಾ ಹಿ ಸಾಮವೇದೇ ವಾಸಿಷ್ಠಶಾಖಾಯಾಂ । ಅಥ ಕಸ್ಮಾದುಚ್ಯತೇ ಗತಿರಿತಿ । ಬ್ರಹ್ಮೈವ ಗತಿಸ್ತದ್ಧಿ ಗಮ್ಯತೇ ಪಾಪವಿಮುಕ್ತೈರಿತಿ ॥ (೨) ಸಾಕ್ಷಾದೀಕ್ಷತ ಇತಿ ಸಾಕ್ಷೀ । ತಥಾ ಹಿ ಬಾಷ್ಕಲಶಾಖಾಯಾಂ । ಸ ಸಾಕ್ಷಾದಿದಮದ್ರಾಕ್ಷೀದ್ಯದದ್ರಾಕ್ಷೀತ್ತತ್ಸಾಕ್ಷಿಣಃ ಸಾಕ್ಷಿತ್ವಮಿತಿ ॥ (೩) ಶರಣಮಾಶ್ರಯಃ ಸಂಸಾರಭೀತಸ್ಯ । ಪರಮಂ ಯಃ ಪರಾಯಣಮಿತಿ ಹ್ಯುಕ್ತಂ । ನಾರಾಯಣಂ ಮಹಾಜ್ಞೇಯಂ ವಿಶ್ವಾತ್ಮಾನಂ ಪರಾಯಣಮಿತಿ ಚ ॥ (೪) ಸಂಹಾರಕಾಲೇ ಪ್ರಕೃತ್ಯಾ ಜಗದತ್ರ ನಿಧೀಯತ ಇತಿ ನಿಧಾನಂ । ತಥಾ ಹ್ಯೃಗ್ವೇದಖಿಲೇಷು । ಅಪಶ್ಯಮಸ್ಯಯೇ ಮಾಯಯಾ ವಿಶ್ವಕರ್ಮಣ್ಯದೋ ಜಗನ್ನಿಹಿತಂ ಶುಭ್ರಚಕ್ಷುರಿತಿ ॥೧೮॥**

ಅ ॥ (೧) ಮೋಕ್ಷವನ್ನು ಇಚ್ಛಿಸುವವರಿಂದ ಹೊಂದಲ್ಪಡುವುದರಿಂದ ಗತಿಃ ಎನಿಸುತ್ತಾನೆ. ಹಾಗೆಯೇ ಸಾಮವೇದದಲ್ಲಿ ವಾಸಿಷ್ಠಶಾಖೆಯಲ್ಲಿ ಹೇಳಿದೆ. ಗತಿಃ ಎಂದು ಯಾವ ಕಾರಣದಿಂದ ಹೇಳಲ್ಪಡುತ್ತಾನೆ, ಎಂಬುವ ಪ್ರಶ್ನೆಗೆ ಆ ಪರಬ್ರಹ್ಮನು ಪಾಪಗಳಿಂದ ಬಿಡುಗಡೆ ಹೊಂದಿದ ಮುಕ್ತರಿಂದ ಹೊಂದಲ್ಪಡುವುದರಿಂದ ಪರಬ್ರಹ್ಮನೇ ಗತಿಃ ಎನಿಸುತ್ತಾನೆ (೨) ಪ್ರತ್ಯಕ್ಷದಿಂದ ಎಲ್ಲವನ್ನೂ ನೋಡುವುದರಿಂದ ಸಾಕ್ಷಿ ಎನಿಸಿಕೊಳ್ಳುತ್ತಾನೆ. ಹಾಗೆಯೇ ಬಾಷ್ಕಲಶಾಖೆಯಲ್ಲಿ ಹೇಳಿದೆ ಆ ಶ್ರೀಪರಮಾತ್ಮನು ಪ್ರತ್ಯಕ್ಷವಾಗಿ ಈ ಜಗತ್ತನ್ನು ಕಂಡನು. ಯಾವ ಕಾರಣದಿಂದ ಕಂಡಿರುವನೋ, ಆದಕಾರಣ ಸರ್ವದ್ರಷ್ಟನಾದ ಪರಮಾತ್ಮನು ಸಾಕ್ಷಿ ಎಂಬ ಶಬ್ದದಿಂದ ವಾಚ್ಯನಾಗುತ್ತಾನೆ. (೩) (ಶರಣ ಶಬ್ದದ ಅರ್ಥ ಹೇಳುತ್ತಾರೆ—) ಸಂಸಾರದಿಂದ ಭೀತನಾದ ಮುಕ್ತನಿಗೆ ಶರಣಂ=ಆಶ್ರಯನು. (ಶ್ರೀಪರಮಾತ್ಮನು ಮುಕ್ತರಿಗೆ ಆಶ್ರಯನೆಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ-) ಸರ್ವೋತ್ತಮನು, ಮುಕ್ತರಿಗೂ ಆಶ್ರಯನು, ಇತ್ಯಾದಿ ಪ್ರಕಾರ ಉಕ್ತವಾಗಿದೆ. ಶ್ರೀನಾರಾಯಣನು ಲಕ್ಷ್ಮಿಗೂ ಆಶ್ರಯನು. ಬ್ರಹ್ಮಾದಿಗಳಿಂದಲೂ ತಿಳಿಯಲ್ಪಡುವವನು. ಸರ್ವರಿಗೂ ಸ್ವಾಮಿಯು, ಅಂತರ್ಯಾಮಿಯು. ಮುಕ್ತರಿಗೂ ಆಶ್ರಯನು. ಎಂದೂ ಹೇಳಿದೆ. (೪) ಸಂಹಾರಕಾಲದಲ್ಲಿ ಪ್ರಕೃತಿದ್ವಾರಾ ಜಗತ್ತು ಶ್ರೀಹರಿಯಲ್ಲಿ ಇರಿಸಲ್ಪಡುವುದರಿಂದ ಶ್ರೀಪರಮಾತ್ಮನು ನಿಧಾನನೆನಿಸುತ್ತಾನೆ (ಅಂದರೆ ಜಗತ್ತು ಪ್ರಥಮತಃ ಪ್ರಕೃತಿಯನ್ನು ಹೊಂದಿ ಆ ಮೇಲೆ ಆ ಪ್ರಕೃತಿದ್ವಾರಾ ಶ್ರೀಪರಮಾತ್ಮನಲ್ಲಿ ಇರುತ್ತದೆ) ಹಾಗೆಯೇ ಋಗ್ವೇದಖಿಲಗಳಲ್ಲಿ ಹೇಳಿದೆ ಪರಿಶುದ್ಧವಾದ ದೃಷ್ಟಿಯುಳ್ಳ ನಾನು ಸರ್ವ ಜಗತ್ಕರ್ತನಾದ ಶ್ರೀಪರಮಾತ್ಮನಲ್ಲಿ ಮಾಯೆಯಿಂದ ಇಡಲ್ಪಟ್ಟ ಈ ಜಗತ್ತನ್ನು ನೋಡಿರುವೆನು. ॥೧

೧೯ ॥ ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।
ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯ ॥

ಅ ॥ ಅರ್ಜುನ=ಅರ್ಜುನನೇ, ಅಹಂ=ನಾನು. ತಪಾಮಿ=ಆದಿತ್ಯನಲ್ಲಿದ್ದವನಾಗಿ ತಾಪವನ್ನುಂಟು ಮಾಡುತ್ತೇನೆ. ಅಹಂ=ನಾನು, (ಮೇಘಚಕ್ರದಲ್ಲಿದ್ದವನಾಗಿ) ವರ್ಷಂ=ವೃಷ್ಟಿಯನ್ನು, ಉತ್ಸೃಜಾಮಿ=ಸುರಿಸುತ್ತೇನೆ. ನಿಗೃಹ್ಣಾಮಿ=ಮಳೆಯನ್ನು ನಿಲ್ಲಿಸುತ್ತೇನೆ. ಅಮೃತಂ=ನಾನು ದೇಹೇಂದ್ರಿಯಗಳಲ್ಲಿದ್ದು ಜೀವರ ದೇಹವನ್ನು ಧರಿಸಿಕೊಂಡು ಮರಣ ಬಾರದಂತೆ ಕಾಪಾಡಿಕೊಂಡಿರುವುದರಿಂದ ಅಮೃತಂ ಎನಿಸುತ್ತೇನೆ. ಮೃತ್ಯುಶ್ಚ=ಪ್ರಲಯಕಾಲಕ್ಕಿಂತ ಇತರ ಕಾಲದಲ್ಲಿಯೂ ಸಂಹಾರಕನಾದುದರಿಂದ ಮೃತ್ಯು ಎನಿಸುತ್ತೇನೆ. ಸತ್=ಕಾರ್ಯಗಳ ಸಮುದಾಯಕ್ಕೆ ನಿಯಾಮಕನು. ಅಸತ್=ಕಾರಣಗಳ ಸಮುದಾಯಕ್ಕೆ ಪ್ರೇರಕನು. ಅಥವಾ ಸಾಧುಗುಣಗಳಿಂದ ಪೂರ್ಣನಾದುದರಿಂದ ಸತ್ ಎನಿಸುತ್ತೇನೆ. ಅಸತ್=ಸಾಧುಗುಣಗಳಿಂದ ಪೂರ್ಣರಾದ ಬೇರೆ ಪುರುಷರು ಇಲ್ಲದಿರುವುದರಿಂದ ಅಸತ್ ಎನಿಸಿಕೊಂಡವನೂ ಅಹಮೇವ=ನಾನೇ. ॥ ೧೯ ॥

ಭಾ ॥ ಸತ್ಕಾರ್ಯಂ ಅಸತ್ಕಾರಣಂ । ಸದಭಿವ್ಯಕ್ತರೂಪತ್ವಾತ್ಕಾರ್ಯಮಿತ್ಯುಚ್ಯತೇ ಬುಧೈಃ ।
ಅಸದವ್ಯಕ್ತರೂಪತ್ವಾತ್ಕಾರಣಂ ಚಾಪಿ ಶಬ್ದಿತಮಿತ್ಯಭಿಧಾನಾತ್ ॥ ಅಸಚ್ಚ ಸಚ್ಚೈವ ಚ ಯದ್ವಿಶ್ವಂ ಸದಸತಃ ಪರಮಿತಿ ಚ ಭಾರತೇ ॥ ೧೯ ॥

ಅ ॥ ಕಾರ್ಯವು ಸತ್ ಎಂದೂ, ಕಾರಣವು ಅಸತ್ ಎಂದೂ ಹೇಳಿಸಿಕೊಳ್ಳಲ್ಪಡುತ್ತದೆ. ಅಭಿವ್ಯಕ್ತ ಸ್ವರೂಪವಾಗಿರುವುದರಿಂದ ಕಾರ್ಯವು ಸತ್ ಎಂದು ಪ್ರಾಜ್ಞರಿಂದ ಹೇಳಿಸಿಕೊಳ್ಳಲ್ಪಡುತ್ತದೆ. ಅಸ್ಪಷ್ಟ ರೂಪವುಳ್ಳದ್ದಾಗಿರುವುದರಿಂದ ಕಾರಣವು ಅಸತ್ ಎಂದು ಹೇಳಿಸಿಕೊಳ್ಳಲ್ಪಡುತ್ತದೆ, ಎಂದು ಶಬ್ದಶಕ್ತಿಗ್ರಾಹಕ ಪ್ರಮಾಣವು. (ಕಾರ್ಯಕಾರಣಗಳಲ್ಲಿ ಸದಸತ್‌ಶಬ್ದಗಳ ಪ್ರಯೋಗವನ್ನು ತೋರಿಸುತ್ತಾರೆ-) ಯಾವುದು ಕಾರಣರೂಪವಾದ ಜಗತ್ ಇದೆಯೋ, ಅದು ಅಸತ್ ಎಂದೂ, ಕಾರ್ಯರೂಪವಾದ ಜಗತ್ ಸತ್ ಎಂದೂ ಹೇಳಿಸಿಕೊಳ್ಳಲ್ಪಡುತ್ತದೆ. ಅಂತಹ ಕಾರ್ಯಕಾರಣರೂಪವಾದ ಜಗತ್ತಿಗಿಂತ ಶ್ರೀ ಪರಮಾತ್ಮನು ಭಿನ್ನನು ಎಂದು ಭಾರತದಲ್ಲಿದೆ. ॥ ೧೯ ॥

ಟೀ—ಅಹಂ ಕ್ರತುಃ ಇತ್ಯಾದಿಗಳಲ್ಲಿ ಶ್ರೀ ಹರಿಯು ಕ್ರತ್ವಾದಿಸ್ವರೂಪನೆಂದು ಹೇಳಲ್ಪಡುತ್ತಾನೆ. ಎಂಬೀ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಸ್ಮೃತಿಪ್ರಮಾಣವನ್ನು ಹೇಳಿ ಸರಿಯಾದ ಅರ್ಥವನ್ನು ಹೇಳುತ್ತಾರೆ—

ಕಾ ॥ (೧) ಅಚ್ಯುತತ್ವಾದ್ಯಕ್ಷಮತ್ವಾಚ್ಚ ನಿಜರೂಪೇಷು ಸಾಮ ಸಃ । ಯಾಜ್ಯತ್ವಾತ್ಸ ಯಜುರ್ಯಜ್ಞಃ ಸಾರ್ವಜ್ಞಾತ್ಪುರುಷೋತ್ತಮಃ ॥ (೨) ಕ್ರತುಃ ಕೃತಿಸ್ವರೂಪತ್ವಾತ್ ಸ್ವಧಾನನ್ಯಧೃತೋ ಯತಃ । ಮಾನಾತ್ತ್ರಾತೀತಿ ಮಂತ್ರೋಽಯಮುಷ್ಣಾನಾಂ ನಿಧಿರೌಷಧಂ ॥ (೩) ಆಜ್ಯಾಯಸ್ತ್ವಾದಾಜ್ಯನಾಮಾ ದರ್ಭೋಽದರಧರೋ ಯತಃ । ಆಹೂತತ್ವಾದ್ಧುತಂ ಚಾಯಮಗ್ನಿರ್ನೇತಾಗತೇರ್ಯತ ಇತ್ಯಾದಿ ಚ ॥ (೪) ತತ್ತತ್ಪದಾರ್ಥಭಿನ್ನೋಽಪಿ ತತ್ತನ್ನಾಮ್ನೈವಮುಚ್ಯತೇ । ಸ್ವಾತಂತ್ರ್ಯಾತ್ಸರ್ವಕರ್ತೃತ್ವಾದ್ಧ್ಯ-

ಜ್ಞಾನಂತ್ವಾಚ್ಚ ಕೇವಲಮಿತಿ ಚ ॥ (೫) ಓಮಿತ್ಯಾಕ್ರಿಯತೇ ಯಸ್ಮಾದೋಂಕಾರೋ
ಭಗವಾನ್ಹರಿರಿತಿ (ಪರ ಇತಿ) ಚ ॥ ೧ ॥

ಅ ॥ (೧) ಶ್ರೀ ಪರಮಾತ್ಮನು ಸಮಸ್ತರಿಂದ ಪೂಜಿಸಿಕೊಳ್ಳಲ್ಪಡುವುದರಿಂದ ಋಕ್ ಎಂದೂ, ತನ್ನ ರೂಪಗಳಲ್ಲಿ ಸರ್ವದಾ ವ್ಯತ್ಯಾಸವಿಲ್ಲದೆ ಇರುವುದರಿಂದ ಸಾಮನೆಂದೂ ಹೇಳಿಸಿಕೊಳ್ಳಲ್ಪಡುತ್ತಾನೆ. ಕ್ಷರಾಕ್ಷರ ಪುರುಷರಿಂದುತ್ತಮನಾದ ಆ ಶ್ರೀ ಹರಿಯು ಸರ್ವಪೂಜ್ಯನಾಗಿರುವುದರಿಂದ ಯಜುಃ ಎಂದೂ, ಸರ್ವಜ್ಞನಾದುದರಿಂದ ಯಜ್ಞಃ ಎಂದೂ ಅನಿಸಿಕೊಳ್ಳುತ್ತಾನೆ. (೨) ಶ್ರೀ ಪರಮಾತ್ಮನು ಸರ್ವಜಗತ್ತಿನ ಸೃಷ್ಟಿಗೆ ಅನುಕೂಲವಾದ ಪ್ರಯತ್ನ ಸ್ವರೂಪನಾಗಿರುವುದರಿಂದ ಕ್ರತುಃ ಎಂದೂ. ಇತರರಿಂದ ಧರಿಸಲ್ಪಡದಿರುವವನಾದುದರಿಂದ ಸ್ವಧಾ ಎಂದೂ, ಭಕ್ತರ ಧ್ಯಾನಕ್ಕೆ ವಿಷಯನಾಗಿ ಭಕ್ತರನ್ನು ರಕ್ಷಿಸುವುದರಿಂದ ಮಂತ್ರಃ ಎಂದೂ, ತಾಪತ್ರಯದಿಂದ ಬಳಲಿದವರಿಗೆ ಆಶ್ರಯನಾಗಿರುವುದರಿಂದ ಔಷಧನೆಂದೂ ಹೇಳಿಸಿಕೊಳ್ಳಲ್ಪಡುತ್ತಾನೆ. (೩) ಚೆನ್ನಾಗಿ ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನಾಗಿರುವುದರಿಂದ ಆಜ್ಯನೆಂದೂ, ತಂತುವನ್ನು ಧರಿಸಿಕೊಂಡಿರುವುದರಿಂದ ದರ್ಭನೆಂದೂ, ಯಜ್ಞಾದಿಗಳಲ್ಲಿ ಚೆನ್ನಾಗಿ ಕರೆಯಲ್ಪಡುವುದರಿಂದ ಹುತನೆಂದೂ, ತನ್ನ ಶಕ್ತಿಯಿಂದ ಸ್ವತಂತ್ರವಾಗಿ ಹೋಗಲಿಕ್ಕೆ ಸಾಮರ್ಥ್ಯವಿಲ್ಲದಿರುವ ಜಗತ್ತಿನ ಪ್ರೇರಕನಾಗಿರುವುದರಿಂದ ಅಗ್ನಿಃ ಎಂದೂ ಅನಿಸಿಕೊಳ್ಳುತ್ತಾನೆ. (೪) (ಪ್ರಸಿದ್ಧ ಕ್ರತು ಮೊದಲಾದವುಗಳಿಂದ ಭಿನ್ನನೇ ಆಗಿರತಕ್ಕ ಶ್ರೀಹರಿಗೆ ಶಕ್ತಿವೃತ್ತಿಯಿಂದ ಕ್ರತು ಮೊದಲಾದ ನಾಮಗಳಿವೆ. ಎಂಬುವಲ್ಲಿ ಇನ್ನೊಂದು ಸ್ಮೃತಿಯನ್ನು ಹೇಳುತ್ತಾರೆ—) ಶ್ರೀಪರಮಾತ್ಮನಿಗೆ ಸರ್ವಸ್ವಾತಂತ್ರ್ಯವಿದ್ದುದರಿಂದಲೂ ಸರ್ವಕರ್ತನಾಗಿರುವುದರಿಂದಲೂ ಶ್ರೀಪರಮಾತ್ಮನು ಆಯಾಯ ಪದಾರ್ಥಗಳಿಂದ ಭಿನ್ನನಾದಾಗ್ಯೂ ಮುಖ್ಯವಾಗಿ ಆಯಾಯ ಶಬ್ದಗಳ ಪ್ರವೃತ್ತಿಗೆ ಕಾರಣಗಳಾದ ಅನಂತಗುಣಗಳು ಇದ್ದುದರಿಂದಲೇ ಆಯಾಯ ಕ್ರತು ಮೊದಲಾದ ನಾಮಗಳುಳ್ಳವನು. (೫) ಐಶ್ವರ್ಯಾದಿಗುಣಗಳುಳ್ಳ ಶ್ರೀಹರಿಯು ಓಂ ಎಂದು ಯಜ್ಞದಲ್ಲಿ ಕರೆಯಲ್ಪಡುವುದರಿಂದ ಓಂಕಾರಃ ಎನಿಸುತ್ತಾನೆ. ॥ ೧ ॥

ತಾ ॥ (೧) ಪಾತೀತಿ ಸ ಪಿತಾ ಮಾನಾನ್ಮಾತಾ ಯತ್ನ ಪಿತುರ್ಮಹಾನ್ । ಪಿತಾಮಹೋ
ನಿಧಾತೃತ್ವಾನ್ನಿಧಾನಂ ಭೀತರಕ್ಷಣಾತ್ । ಶರಣಂ ವ್ಯಂಜನಾಚ್ಚೈವ ಬೀಜಮಿತ್ಯುಚ್ಯತೇ
ಪ್ರಭುರಿತಿ ಚ ॥ (೨) ಪ್ರಲಯಕಾಲೇ ಸಂಹರ್ತೃತ್ವಾತ್ಪ್ರಲಯಃ । ಅನ್ಯದಾಪಿ
ಮೃತ್ಯುಃ । ಪ್ರಾಣಗಃ ಪ್ರಾಣಧರ್ತಾ ಯದಮೃತಂ ಪ್ರವಿಲಾಪಯನ್ । ವಿಶ್ವಂ
ಪ್ರಲಯ ಇತ್ಯುಕ್ತೋ ಮೃತ್ಯುರನ್ಯತ್ರ ಮಾರಣಾದಿತಿ ಚ ॥ (೩) ಸತ್ಸಾಧುಗುಣಪೂ-
ರ್ಣತ್ವಾದಸ್ಮಾನ್ನಾನ್ಯೋ ಗುಣಾಧಿಕಃ । ಯತೋಽತೋ ಸದಿತಿ ಪ್ರೋಕ್ತಂ ವಿಷ್ಣ್ವಾ-
ಖ್ಯಂ ಪರಮಂ ಪದಮಿತಿ ಶಬ್ದನಿರ್ಣಯೇ ॥ ೨ ॥ ॥ ೧೯ ॥

ಅ ॥ (೧) ಶ್ರೀಪರಮಾತ್ಮನು ಸರ್ವಜಗತ್ತನ್ನು ರಕ್ಷಿಸುವುದರಿಂದ ಪಿತಾ ಎಂದೂ, ಜ್ಞಾನಕ್ಕೆ ವಿಷಯನಾಗಿ ರಕ್ಷಿಸುವುದರಿಂದ ಮಾತಾ ಎಂದೂ, ಜಗತ್ತನ್ನು ಸೃಷ್ಟಿಸುವ ಚತುರ್ಮುಖನಿಗಿಂತಲೂ ಶ್ರೇಷ್ಠನಾಗಿರುವುದರಿಂದ ಪಿತಾಮಹನೆಂದೂ, ಜಗತ್ತನ್ನು ಧರಿಸಿಕೊಂಡಿರುವುದರಿಂದ ನಿಧಾನನೆಂದೂ, ಭಯಗ್ರಸ್ತರನ್ನು ರಕ್ಷಿಸುವುದರಿಂದ ಶರಣನೆಂದೂ, ಜಗತ್ತನ್ನು ಅಭಿವ್ಯಕ್ತಿಗೊಳಿಸುವುದರಿಂದ ಬೀಜನೆಂದೂ ಹೇಳಿಸಿಕೊಳ್ಳಲ್ಪಡುತ್ತಾನೆ (೨) (ಪ್ರಲಯ ಮೃತ್ಯು ಶಬ್ದಗಳಿಗೆ ಬೇರೆ ಬೇರೆ ಅರ್ಥಗಳನ್ನು ಹೇಳುತ್ತಾರೆ—) ಪ್ರಲಯಕಾಲದಲ್ಲಿ ಸಂಹಾರಕನಾದುದರಿಂದ ಪ್ರಲಯನೆಂದೂ, ಪ್ರಲಯಕಾಲಕ್ಕಿಂತ ಬೇರೆ ಕಾಲದಲ್ಲಿಯೂ ಸಂಹಾರಕನಾದುದರಿಂದ ಮೃತ್ಯು ಎಂದೂ ಅನಿಸಿಕೊಳ್ಳುತ್ತಾನೆ. ಇಂದ್ರಿಯಗಳಲ್ಲಿ

ಜೀವರ ದೇಹವನ್ನು ಧರಿಸಿಕೊಂಡು ಮರಣವನ್ನು ಪರಿಹರಿಸುವುದರಿಂದ ಅಮೃತನೆಂದೂ, ಪ್ರಲಯಕಾಲದಲ್ಲಿ ಜಗತ್ತನ್ನು ನಾಶಮಾಡುವುದರಿಂದ ಪ್ರಲಯನೆಂದೂ, ಪ್ರಲಯಕಾಲಕ್ಕಿಂತ ಬೇರೆ ಕಾಲದಲ್ಲಿ ಜಗತ್ತನ್ನು ಸಂಹರಿಸುವುದರಿಂದ ಮೃತ್ಯು ಎಂದೂ ಅನಿಸಿಕೊಳ್ಳುತ್ತಾನೆ (೩) ಸರ್ವೋತ್ತಮನೂ, ಬ್ರಹ್ಮಾದಿಗಳಿಂದ ಹೊಂದಲ್ಪಡುವವನೂ ಆದ ಶ್ರೀವಿಷ್ಣುವೆಂದು ಹೆಸರುಳ್ಳ ಪರಬ್ರಹ್ಮನು ಸಾಧುಗುಣಗಳಿಂದ ಪೂರ್ಣನಾದುದರಿಂದ ಸತ್ ಎಂದೂ, ಶ್ರೀಹರಿಗಿಂತ ಇನ್ನೊಬ್ಬನು ಹೆಚ್ಚು ಗುಣಗಳುಳ್ಳವನಿಲ್ಲದಿರುವುದರಿಂದ ಅಸತ್ ಎಂದೂ ಹೇಳಿಸಿಕೊಳ್ಳಲ್ಪಡುತ್ತಾನೆ, ಎಂದು ಶಬ್ದನಿರ್ಣಯದಲ್ಲಿದೆ.॥ ೨ ॥ ॥ ೧೯ ॥

ಗೀ॥ ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾ
ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।
ತೇ ಪುಣ್ಯಮಾಸಾದ್ಯ ಸುರೇಂದ್ರಲೋಕ-
ಮಶ್ನಂತಿ ದಿವ್ಯಾನ್ದಿವಿ ದೇವಭೋಗಾನ್ ॥ ೨೦ ॥

ಅ॥ ತ್ರೈವಿದ್ಯಾಃ=ಶ್ರೀವಿಷ್ಣುವನ್ನು ಸರ್ವೋತ್ತಮನನ್ನಾಗಿ ತಿಳಿದರೂ, ಸ್ವರ್ಗಾದಿಗಳನ್ನು ಪಡೆಯುವುದಕ್ಕಾಗಿ ಋಗಾದಿ ಮೂರು ವೇದಗಳಲ್ಲಿ ಸಾಮಾನ್ಯತಃ ತೋರುವ ಇತರ ದೇವತೆಗಳ ತೃಪ್ತಿಗಾಗಿ ಮಾಡತಕ್ಕ ಯಾಗವನ್ನು ತಿಳಿದು ಹಾಗೆಯೇ ಮಾಡಿ ಅಂತ್ಯದಲ್ಲಿ ವಿಷ್ಣುವಿನಲ್ಲಿ ಸಮರ್ಪಿಸುವವರು, ಮಾಂ=ನನ್ನನ್ನು, ಯಜ್ಞೈಃ=ಯಾಗಗಳಿಂದ, ಇಷ್ಟ್ವಾ=ಪೂಜೆ ಮಾಡಿ, (ಕೊನೆಗೆ ನನ್ನಲ್ಲಿಯೇ ಯಾಗಫಲಾದಿಗಳನ್ನು ಸಮರ್ಪಿಸಿ) ಸೋಮಪಾಃ=ಹೋಮಿಸಿ ಅವಶಿಷ್ಟವಾದ ಸೋಮರಸವನ್ನು ಕುಡಿಯುವವರಾಗಿಯೇ, ಪೂತಪಾಪಾಃ=ಪಾಪಗಳನ್ನು ಕಳೆದುಕೊಂಡವರಾಗಿಯೇ, ಸ್ವರ್ಗತಿಂ=ಸ್ವರ್ಗಮಾರ್ಗವನ್ನು, ಅಥವಾ ಸ್ವರ್ಗ ಎನಿಸಿಕೊಂಡ ಪ್ರಾಪ್ಯವಾದ ಸ್ಥಾನವನ್ನು ಪಡೆಯುವುದಕ್ಕಾಗಿ, ಮಾಂ=ನನ್ನನ್ನು, ಪ್ರಾರ್ಥಯಂತೇ=ಪ್ರಾರ್ಥಿಸುತ್ತಾರೆ. ತೇ=ಅವರು, ಪುಣ್ಯಂ=ಪುಣ್ಯದಿಂದ ಸಿಗುವ, ಸುರೇಂದ್ರಲೋಕಂ=ದೇವೇಂದ್ರನ ಸ್ಥಾನವಾದ ಸ್ವರ್ಗವನ್ನು, ಆಸಾದ್ಯ=ಹೊಂದಿ. ದಿವಿ=ಸ್ವರ್ಗಲೋಕದಲ್ಲಿ, ದಿವ್ಯಾನ್=ಸ್ವರ್ಗದಲ್ಲಿ ಸಿಗುವ, ಅಥವಾ ಅಲೌಕಿಕಗಳಾದ, ದೇವಭೋಗಾನ್=ದೇವತೆಗಳಿಗೆ ಭೋಗ್ಯಗಳಾದ ಪದಾರ್ಥಗಳನ್ನು. ಅಶ್ನಂತಿ=ಅನುಭವಿಸುತ್ತಾರೆ. ॥ ೨೦ ॥

ಗೀ॥ ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ
ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।
ಏವಂ ತ್ರಯೀಧರ್ಮಮನುಪ್ರಪನ್ನಾ
ಗತಾಗತಂ ಕಾಮಕಾಮಾ ಲಭಂತೇ ॥ ೨೧ ॥

ಅ॥ ತೇ=ಸ್ವರ್ಗವನ್ನು ಪಡೆಯಬೇಕೆಂಬುವ ಇಚ್ಛೆಯಿಂದ ಇತರ ದೇವತೆಗಳ ತೃಪ್ತಿಗಾಗಿ ಯಜ್ಞಮಾಡುವವರು. ತಂ=ಆದಾಪ, ವಿಶಾಲಂ=ಬಹಳವಾದ. ಸ್ವರ್ಗಲೋಕಂ=ಸ್ವರ್ಗದಲ್ಲಿ ಸಿಗುವ ಸುಖವನ್ನು. ಭುಕ್ತ್ವಾ=ಅನುಭವಿಸಿ, ಕ್ಷೀಣೇ ಪುಣ್ಯೇ=ಪುಣ್ಯವು ನಾಶವಾದಾಗ ಮರ್ತ್ಯಲೋಕಂ=ಭೂಲೋಕವನ್ನು. ವಿಶಂತಿ=(ಅನುಭವಿಸಿ ಉಳಿದ ಪುಣ್ಯದಿಂದ ಕೂಡಿದವರಾಗಿ) ಹೊಂದುತ್ತಾರೆ (ಭೂಲೋಕದಲ್ಲಿ ಹುಟ್ಟುತ್ತಾರೆ) ಏವಂ=ಹೀಗೆಯೇ, ತ್ರಯೀಧರ್ಮಂ ಮೂರು ವೇದಗಳಲ್ಲಿ ಅನುಷ್ಠೇಯವಾಗಿ ಹೇಳಿದ ಕಾಮ್ಯಕರ್ಮವನ್ನು, ಅನುಪ್ರಪನ್ನಾಃ=ಮಾಡುತ್ತಾ, ಕಾಮಕಾಮಾಃ [illegible] ಗಳನ್ನು [illegible]

ರಾಗಿ, ಗತಾಗತಂ=ಭೂಲೋಕದಿಂದ ಸ್ವರ್ಗಕ್ಕೆ ಹೋಗುವುದು, ಸ್ವರ್ಗದಿಂದ ಭೂಲೋಕಕ್ಕೆ ಬರುವುದು ಎಂಬೀ ಗಮನಾಗಮನಗಳನ್ನು, ಲಭಂತೇ=ಹೊಂದುತ್ತಾರೆ. (ಇಂತಹ ಕಾಮ್ಯಕರ್ಮಿಗಳು ಯಾವಾಗಲೂ ಜನನ ಮರಣಾದಿರೂಪವಾದ ಸಂಸಾರವನ್ನು ಬಿಟ್ಟು ಮೋಕ್ಷವನ್ನು ಹೊಂದುವುದಿಲ್ಲ.) ॥ ೨೧ ॥

**ಭಾ ॥ ತಥಾಽಪಿ ಮದ್ಭಜನಮೇವಾನ್ಯದೇವತಾಭಜನಾದ್ವರಮಿತಿ ದರ್ಶಯತಿ । ತ್ರೈವಿದ್ಯಾ ಇತ್ಯಾದಿನಾ ॥ ೨೦,೨೧ ॥**

ಅ ॥ ಎಲ್ಲಾ ಚೇತನರಲ್ಲಿ ಶ್ರೀಪರಮಾತ್ಮನೇ ಇದ್ದು ಅವರು ಮಾಡುವ ಯಾಗಾದಿಗಳನ್ನು ಭೋಗಿಸುವವನಾದಾಗ್ಯೂ ಬೇರೆ ದೇವತೆಗಳೂ, ಪಿತ್ರಾದಿಗಳೂ, ಇವರನ್ನು ಸೇವಿಸುವುದಕ್ಕಿಂತ ಭಗವದ್ಭಕ್ತರು ಮಾಡತಕ್ಕ ನನ್ನ ಸೇವೆಯೇ ಶ್ರೇಷ್ಠವು ಎಂದು ತ್ರೈವಿದ್ಯಾ ಇತ್ಯಾದಿ ಮೂರು ಶ್ಲೋಕಗಳಿಂದ ತೋರಿಸುತ್ತಾರೆ. ॥ ೨೦, ೨೧ ॥

ಪೀ—ತ್ರೈವಿದ್ಯರಿಗೆ ಆಗುವ ಫಲವನ್ನು ಹೇಳಿ ಭಗವದ್ಭಕ್ತರಿಗೆ ಉಂಟಾಗುವ ಫಲವನ್ನು ಹೇಳುತ್ತಾರೆ.

**ಗೀ ॥ ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥೨೨॥**

ಅ ॥ ಯೇ ಜನಾಃ=ಯಾವ ಜನರು, ಅನನ್ಯಾಃ ಮಾಂ ಚಿಂತಯಂತಃ=ಇತರ ದೇವತೆಗಳನ್ನು ಸರ್ವೋತ್ತಮರೆಂದು ಧ್ಯಾನಮಾಡದೆ ನನ್ನನ್ನೇ ಸ್ಮರಿಸುವವರಾಗಿ, ಪರ್ಯುಪಾಸತೇ=ಭಕ್ತಿಪೂರ್ವಕವಾಗಿ ಸರ್ವೋತ್ತಮನೆಂದು ಉಪಾಸನೆಮಾಡುತ್ತಾರೋ, ತೇಷಾಂ=ಅಂತಹ, ನಿತ್ಯಾಭಿಯುಕ್ತಾನಾಂ=ಸರ್ವದಾ ಎಲ್ಲಾ ದೇಶಗಳಲ್ಲಿಯೂ ಶ್ರೀಪರಮಾತ್ಮನು ವ್ಯಾಪಿಸಿಕೊಂಡಿರುತ್ತಾನೆಂದು ಆ ಶ್ರೀಹರಿಯಲ್ಲಿ ಶರೀರ, ಇಂದ್ರಿಯ ಮನಸ್ಸುಗಳನ್ನು ಇಟ್ಟಿರುವ, ಅಂದರೆ ಶ್ರೀಪರಮಾತ್ಮನ ಸೇವೆಯಲ್ಲಿಯೇ ಉದ್ಯುಕ್ತರಾದ, ಅಥವಾ ಸರ್ವದಾ ಶ್ರೀಪರಮಾತ್ಮನನ್ನೇ ಸ್ಮರಿಸಿಕೊಂಡಿರುವ ಭಗವದ್ಭಕ್ತರ, ಯೋಗಕ್ಷೇಮಂ=ಯೋಗಕ್ಷೇಮಗಳನ್ನು (ಸಿಗದಿರುವ ವಸ್ತುವನ್ನು ಪಡೆಯುವುದು, ಇದ್ದುದನ್ನು ಕಾಪಾಡಿಕೊಂಡಿರುವುದು, ಇವುಗಳನ್ನು) ವಹಾಮಿ=ಕೊಡುತ್ತೇನೆ. ಅಥವಾ ಲಭಿಸಿರುವ ಮೋಕ್ಷಕ್ಕೆ ಕೆಡುಕು ಬಾರದಂತೆ ಮಾಡುತ್ತೇನೆ. (ಅಂದರೆ ತಾನು ನನ್ನನ್ನೇ ಸರ್ವೋತ್ತಮನೆಂದು ಉಪಾಸನೆಮಾಡುವವರಿಗೆ ಪುನರಾವೃತ್ತಿಯಾಗದಿರುವ ಮೋಕ್ಷವನ್ನು ಕೊಡುತ್ತೇನೆ.) ॥ ೨೨

ಪೀ—ಅದ್ವೈತ ಜ್ಞಾನಿಗಳು ಅನನ್ಯರು ಎಂಬುವ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಸರಿಯಾದ ಅರ್ಥವನ್ನು ಹೇಳುತ್ತಾರೆ—

**ಭಾ ॥ (೧) ಅನನ್ಯಾಃ ಅನ್ಯದಚಿಂತಯಿತ್ವಾ । ತಥಾ ಹಿ ಗೌತಮಖಿಲೇಷು । ಸರ್ವಂ ಪರಿತ್ಯಜ್ಯ ಮನೋಗತಂ ಯದ್ಧ್ಯಾತಾ ದೇವಂ ಕೇವಲಂ ಶುದ್ಧಮಾದ್ಯಂ । ಯೇ ಚಿಂತಯಂತೀಹ ತಮೇವ ಧೀರಾ ಅನನ್ಯಾಸ್ತೇ ದೇವಮೇವಾವಿಶಂತೀತಿ ॥ (೨) ಕಾಮಃ ಕಾಲೇನ ಮಹತಾ ವಿಶಾಂತಿತ್ಯಾತ್ಮಮಾಟಿಕ್ಷೈಃ । ತತ್ಕೋ ದ್ರಷ್ಟುಂ ಸ ಭಗವಾನ್ ಪ್ರಭಾಸಂದೃಶ್ಯಮಂಡಲ ಇತಿ ಮೋಕ್ಷಧರ್ಮೇ । ನಿತ್ಯಮಭಿತಃ ಸರ್ವತೋ ಯುಕ್ತಾನಾಂ ॥ ೨೨ ॥**

ಅ ॥ (೧) ಅನನ್ಯಾಃ=ಬ್ರಹ್ಮರುದ್ರಾದಿದೇವತೆಗಳನ್ನು ಸರ್ವೋತ್ತಮರೆಂದು ಧ್ಯಾನಿಸದಿರುವವರು. ಹೀಗೆಯೇ ಅರ್ಥ ಮಾಡಬೇಕೆಂದು ಗೌತಮಖಿಲ ಎಂಬುವ ಗ್ರಂಥದಲ್ಲಿ ಹೇಳಿದೆ. ಶ್ರೀಪರಮಾತ್ಮನನ್ನು ಬಿಟ್ಟು (ಅಂದರೆ ಪರಮಾತ್ಮನಿಂದ ಭಿನ್ನರಾದ) ಮನಸ್ಸಿಗೆ ವಿಷಯರಾದ ಎಲ್ಲಾ ಬ್ರಹ್ಮಾದಿಗಳ ಸಮುದಾಯವನ್ನು ಬಿಟ್ಟು (ಅಂದರೆ ಬ್ರಹ್ಮರುದ್ರಾದಿ ದೇವತೆಗಳನ್ನು ಸರ್ವೋತ್ತಮರೆಂದು ತಿಳಿಯದೆ) ಜಡಸಂಬಂಧವಿಲ್ಲದವನೂ, ಪರಿಶುದ್ಧನೂ, ಸರ್ವರಿಗೆ ಆದಿಭೂತನೂ, ಕ್ರೀಡಾದಿಗುಣವಿಶಿಷ್ಟನೂ ಆದ ಶ್ರೀಹರಿಯನ್ನೇ ಯಾರು ಸರ್ವೋತ್ತಮನೆಂದು ಸ್ಮರಣೆ ಮಾಡಿಕೊಂಡಿರುತ್ತಾರೋ, ಅಂತಹವರು ಅನನ್ಯರೆನಿಸುತ್ತಾರೆ. ಅಂತಹ ಧೀರರು ಆ ಶ್ರೀಹರಿಯನ್ನೇ (ಮೋಕ್ಷವನ್ನೇ) ಹೊಂದುತ್ತಾರೆ. (೨) ಬಹುಕಾಲಗಳನ್ನಾರಂಭಿಸಿ ಏಕಾಂತಭಕ್ತರಾಗಿರುವುದರಿಂದ ಇಚ್ಛಾನುಸಾರ ಪ್ರಶಸ್ತಮನಸ್ಸುಳ್ಳ ಭಕ್ತರಿಂದ ಜ್ಞಾನದೇಹಕಾಂತಿ ಇವುಗಳಿಂದ ಅತ್ಯಾದರದಿಂದ ನೋಡಲರ್ಹಸ್ವರೂಪವುಳ್ಳ ಶ್ರೀಪರಮಾತ್ಮನು ನೋಡಲು ಶಕ್ಯನು, ಎಂದು ಮೋಕ್ಷಧರ್ಮದಲ್ಲಿದೆ. ನಿತ್ಯಾಭಿಯುಕ್ತಾನಾಂ=ಸರ್ವದಾ ಎಲ್ಲಾ ದೇಶಗಳಲ್ಲಿಯೂ ಶರೀರ ಇಂದ್ರಿಯ, ಮನಸ್ಸುಗಳಿಂದ ಶ್ರೀಪರಮಾತ್ಮನನ್ನೇ ಸೇವಿಸುವುದರಲ್ಲಿ ಉದ್ಯುಕ್ತರಾದ ಭಕ್ತರಿಗೆ. ॥ ೨೨ ॥

ಪೀ—ಇತರ ದೇವತೆಗಳ ಪ್ರೀತಿಗಾಗಿ ಯಾಗ ಮಾಡುವವರಿಗೆ ಭಗವದ್ಭಕ್ತರಿಗೆ ಆಗತಕ್ಕ ಫಲಕ್ಕಿಂತ ಬೇರೆ ಫಲವು ಸಿಗುವುದು. ಎಂಬುವುದನ್ನು ವಿವರಿಸುತ್ತಾರೆ—

## ಗೀ ॥ ಯೇಽಪ್ಯನ್ಯದೇವತಾಭಕ್ತಾ ಯಜಂತೇ ಶ್ರದ್ಧಯಾಽನ್ವಿತಾಃ ।
## ತೇಽಪಿ ಮಾಮೇವ ಕೌಂತೇಯ ಯಜಂತ್ಯವಿಧಿಪೂರ್ವಕಂ ॥ ೨೩ ॥

ಅ ॥ ಅನ್ಯದೇವತಾಭಕ್ತಾಃ=ಶ್ರೀವಿಷ್ಣುವಿನಿಂದ ಇತರರಾದ ಬ್ರಹ್ಮಾದಿ ದೇವತೆಗಳಲ್ಲಿ ಭಕ್ತಿಯುಕ್ತರಾದ. ಯೇಽಪಿ=ಯಾವ ಜನರು, ಶ್ರದ್ಧಯಾ=ವಿಶ್ವಾಸದಿಂದ ಅನ್ವಿತಾಃ=ಕೂಡಿದವರಾಗಿ, ಅನ್ಯದೇವತಾಃ ಯಜಂತೇ=ಬೇರೆ ದೇವತೆಗಳನ್ನುದ್ದೇಶಿಸಿ ಹವಿಸ್ಸು ಮೊದಲಾದವುಗಳ ತ್ಯಾಗವನ್ನು ಮಾಡುತ್ತಾ ಅನ್ಯದೇವತೆಗಳನ್ನು ಸೇವಿಸುತ್ತಾರೋ, ತೇಽಪಿ=ಅವರೂ ಕೂಡ, ಕೌಂತೇಯ=ಅರ್ಜುನನೇ, ಅವಿಧಿಪೂರ್ವಕಂ=ಶಾಸ್ತ್ರದಲ್ಲಿ ಹೇಳಿದ ವಿಧಿಯನ್ನು ಬಿಟ್ಟು, ಮಾಮೇವ=ನನ್ನನ್ನೇ. ಯಜಂತಿ=ಹೋಮಿಸುತ್ತಾರೆ. (ಅಂದರೆ ನನ್ನನ್ನುದ್ದೇಶಿಸಿಯೇ ಕರ್ಮಗಳನ್ನು ಮಾಡಬೇಕಾಗಿದ್ದರೂ ಹಾಗೆ ಮಾಡದೆ ಬೇರೆ ದೇವತೆಗಳ ಉದ್ದೇಶದಿಂದ ಮಾಡಿ ಆ ಕರ್ಮವನ್ನು ಕೊನೆಗೆ ನನಗೆ ಅರ್ಪಿಸುತ್ತಾರೆ. ಆದಕಾರಣ ಅವಿಧಿಪೂರ್ವಕವಾಯ್ತು.) ॥ ೨೩ ॥

ಭಾ ॥ ಕರ್ತೃಹಂ ಕ್ರತುರಿತ್ಯಾದ್ಯಸತ್ಯಮಿತ್ಯತ ಆಹ । ಯೇಽಪೀತಿ ॥ ೨೩ ॥

ಅ ॥ ಎಲ್ಲಾ ದೇವತೆಗಳಲ್ಲಿದ್ದ ಶ್ರೀಪರಮಾತ್ಮನೇ ಯಾಗವನ್ನು ಭೋಗಿಸುವವನೆಂದಾದರೆ ತ್ರೈವಿದ್ಯರಿಗೂ ಭಗವದ್ಭಕ್ತರಿಗೂ ಫಲವು ಸಮವಾಗಬೇಕಾಗುವುದು. ಫಲದಲ್ಲಿ ವೈಲಕ್ಷಣ್ಯವಿದ್ದರೆ ಅಹಂ ಕ್ರತುಃ ಇತ್ಯಾದಿಗಳಿಂದ ಸರ್ವಯಜ್ಞಭೋಕ್ತೃತ್ವವನ್ನು ಹೇಳಿದ್ದು ಅಯುಕ್ತವಾಗುವುದು. ಯೇಽಪಿ ಎನ್ನುವುದರಿಂದ ಸಮಾಧಾನವನ್ನು ಹೇಳುತ್ತಾರೆ. ॥ ೨೩ ॥

ಪೀ—ಇತರ ದೇವತೆಗಳನ್ನುದ್ದೇಶಿಸಿ ಮಾಡುವ ಯಜ್ಞವು ಶ್ರೀಪರಮಾತ್ಮನಿಗೇನೇ ಭೋಗ್ಯವಾದರೆ ಅದು ಅವಿಧಿಪೂರ್ವಕವಾಗುವುದು ಹೇಗೆ? ಎಂದರೆ—

**ಗೀ || ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ |**
**ನ ತು ಮಾಮಭಿಜಾನಂತಿ ತತ್ವೇನಾತಶ್ಚ್ಯವಂತಿ ತೇ || ೨೪ ||**

ಅ || ಅಹಂ = ನಾನೇ, ಸರ್ವಯಜ್ಞಾನಾಂ=ಎಲ್ಲಾ ಯಜ್ಞಗಳನ್ನು, ಭೋಕ್ತಾ=ಭೋಗಿಸುವವನು, ಪ್ರಭುರೇವ=ಪ್ರವರ್ತಕನು, ಯಜ್ಞಗಳಿಗೆ ಉದ್ದೇಶ್ಯನು, ಮಾಂ ತು=ಅಂತಹ ನನ್ನನ್ನಾದರೂ, ತತ್ವೇನ= ಯಥಾರ್ಥವಾಗಿ, ನಾಭಿಜಾನಂತಿ = ಚೆನ್ನಾಗಿ ತಿಳಿಯುವುದಿಲ್ಲ. (ಅಂದರೆ ಸರ್ವೋತ್ತಮನೆಂದು ನನ್ನನ್ನು ತಿಳಿದರೂ ಯಜ್ಞಾದಿಗಳಿಗೂ ಶ್ರೀಹರಿಯೇ ಮುಖ್ಯವಾಗಿ ಉದ್ದೇಶ್ಯನು, ಇತ್ಯಾದಿ ಪ್ರಕಾರ ಮತ್ತು ಬ್ರಹ್ಮರುದ್ರಾದಿ ದೇವತೆಗಳು ಶ್ರೀಹರಿಯ ಪರಿವಾರಭೂತರೆಂದೂ ಚೆನ್ನಾಗಿ ತಿಳಿಯುವುದಿಲ್ಲ.) ಅತಃ= ಆದಕಾರಣ, ತೇ = ಅಂತಹರು, ಚ್ಯವಂತಿ = ಸ್ವರ್ಗಲೋಕದಿಂದ ಭೂಲೋಕಕ್ಕೆ ತಿರುಗಿ ಬರುತ್ತಾರೆ. || ೨೪ ||

ಭಾ || ಕಾರಣಮಾಹಾವಿಧಿಪೂರ್ವಕತ್ವೇ | ಅಹಂ ಹೀತಿ || ೨೪ ||

ಅ || (ಶ್ರೀಹರಿಯ ವಿದ್ಯಾದಿಗಳು ಮಾಡಿರತಕ್ಕ ಯಜ್ಞಗಳನ್ನು ಶ್ರೀಹರಿಯೇ ಭೋಗಿಸುವವನೆಂದಾದರೆ ಅದು ಅವಿಧಿಪೂರ್ವಕವೆಂಬುವುದು ಹೇಗೆಂದರೆ-) ಅಹಂ ಹಿ ಎಂಬುವ ಶ್ಲೋಕದಿಂದ ವಿಧಿಪೂರ್ವಕವಾಗದಿರ ಲಿಕ್ಕೆ ಕಾರಣವನ್ನು ಸ್ಪಷ್ಟವಾಗಿ ಹೇಳುತ್ತಾರೆ. || ೨೪ ||

ಟೀ — ಅಂತಹವರಿಗೆ ಆಗುವ ಫಲಭೇದವನ್ನು ವಿವರಿಸುತ್ತಾರೆ—

**ಗೀ || ಯಾಂತಿ ದೇವವ್ರತಾ ದೇವಾನ್ ಪಿತೄನ್ಯಾಂತಿ ಪಿತೃವ್ರತಾಃ |**
**ಭೂತಾನಿ ಯಾಂತಿ ಭೂತೇಜ್ಯಾ ಯಾಂತಿ ಮದ್ಯಾಜಿನೋಽಪಿ ಮಾಂ ||**
**|| ೨೫ ||**

ಅ || ದೇವವ್ರತಾಃ= ಇಂದ್ರಾದಿ ದೇವತೆಗಳಲ್ಲಿ ನಿಯಮವಿದ್ದು ಇಂದ್ರಾದಿದೇವತೆಗಳ ತೃಪ್ತಿಗಾಗಿ ಯಾಗಮಾಡುವವರು. (ದೇವತೆಗಳನ್ನು ಪೂಜಿಸುವವರು) ದೇವಾನ್ = ಇಂದ್ರಾದಿ ದೇವತೆಗಳನ್ನು, ಯಾಂತಿ = ಹೊಂದುತ್ತಾರೆ. ಪಿತೃವ್ರತಾಃ = ಪಿತೃಗಳನ್ನುದ್ದೇಶಿಸಿ ಶ್ರಾದ್ಧಾದಿ ಕ್ರಿಯೆಗಳನ್ನು ಮಾಡುವ ವರು. (ಪಿತೃಗಳನ್ನು ಪೂಜಿಸುವವರು) ಪಿತೄನ್=ಪಿತೃಗಳನ್ನು, ಯಾಂತಿ=ಹೊಂದುತ್ತಾರೆ. ಭೂತೇಜ್ಯಾಃ= ಯಕ್ಷಾದಿಗಳನ್ನು ಸಪ್ತಮಾತೃಕಾದಿಗಳನ್ನು ಪೂಜಿಸಿಕೊಂಡಿರುವವರು, ಭೂತಾನಿ = ಅಂತಹ ಯಕ್ಷಾದಿ ಗಳನ್ನೇ, ಯಾಂತಿ = ಹೊಂದುತ್ತಾರೆ. ಮದ್ಯಾಜಿನೋಽಪಿ = ನನ್ನನ್ನೇ ಪೂಜಿಸುವವರು, ಮಾಂ=ನನ್ನನ್ನು, ಯಾಂತಿ = ಹೊಂದುತ್ತಾರೆ. || ೨೫ ||

ಭಾ || ಫಲಂ ವಿವಿನಕ್ತಿ | ಯಾಂತೀತಿ || ೨೫ ||

ಅ || ಯಾಂತಿ ಎಂಬುವ ಶ್ಲೋಕದಿಂದ ಆಯಾಯ ದೇವತೆಗಳು ಪಿತ್ರಾದಿಗಳು ಇವರನ್ನು ಉಪಾಸನಾ ಮಾಡುವವರಿಗೆ ಆಗುವ ಫಲವನ್ನು ಹೇಳುತ್ತಾರೆ. || ೨೫ ||

ಟೀ — ಬ್ರಹ್ಮರುದ್ರಾದಿದೇವತೆಗಳನ್ನು ಭಜನಮಾಡಿದರೆ ಫಲವು ಅಲ್ಪವಾದುದಾಗ್ಯೂ ಅದು ಸುಲಭಸಾಧ್ಯವಾದುದರಿಂದ ಅದನ್ನೇ ಮಾಡಲು ಶಕ್ಯವು. ನಿನಗೆ ಬಹಳ ಮಹಿಮೆಗಳು ಇದ್ದುದರಿಂದ ನಿನ್ನ ಭಜನೆಯು ಹೆಚ್ಚು ಸಾಮರ್ಥ್ಯವಿಲ್ಲದವರಿಗೆ ಮಾಡಲಶಕ್ಯವು. ಎಂದರೆ—

ಗೀ || ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ |
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ || ೨೬ ||

ಅ || ಯಃ = ಯಾವಾತನು, ಪತ್ರಂ = ಶಾಸ್ತ್ರಗಳಲ್ಲಿ ನಿಷಿದ್ಧವಾಗದಿರುವ ಶಾಸ್ತ್ರವಿಹಿತ ಬಿಲ್ವಪತ್ರ ಮೊದಲಾದ ಪತ್ರಗಳನ್ನು, ಪುಷ್ಪಂ = ಪುಷ್ಪವನ್ನು, ಫಲಂ=ಫಲವನ್ನು, ತೋಯಂ = ನೀರನ್ನು, ಭಕ್ತ್ಯಾ= ಭಕ್ತಿಪೂರ್ವಕವಾಗಿ, ಮೇ = ನನಗೆ, ಪ್ರಯಚ್ಛತಿ = ಕೊಡುತ್ತಾನೋ, ಪ್ರಯತಾತ್ಮನಃ = ವಿಷಯಗಳಲ್ಲಿ ವಿರಕ್ತನಾದ ಅಂತಹ ಭಗವದ್ಭಕ್ತನ, ಭಕ್ತ್ಯುಪಹೃತಂ = ಭಕ್ತಿಯಿಂದ ಸಮರ್ಪಿಸಲ್ಪಟ್ಟ, ತತ್ = ಅಂತಹ ಪತ್ರಾದಿಗಳನ್ನು, ಅಹಂ=ನಾನು, ಅಶ್ನಾಮಿ=ಸ್ವೀಕರಿಸುತ್ತೇನೆ. (ಅಂದರೆ ಭಕ್ತಿಯಿಂದಲೇ ಸಂತುಷ್ಟನಾಗುತ್ತೇನೆ. ದ್ರವ್ಯಾದಿಗಳಿಂದ ಸಂತುಷ್ಟನಾಗಲಾರೆನು.) || ೨೬ ||

ಭಾ || (೧) ದುರ್ಬಲೈಸ್ತ್ವಂ ಪೂಜಯಿತುಮಶಕ್ಯೋ ಮಹತ್ತ್ವಾದಿತ್ಯಾಶಂಕ್ಯಾಽಹ | ಪತ್ರ-
ಮಿತಿ | ನ ತ್ವವಿಹಿತಪತ್ರಾದಿ | ತಸ್ಯಾಪರಾಧತ್ವೋಕ್ತೇರ್ವಾರಾಹಾದೌ | ಭಕ್ತ್ಯೈ-
ವಾಹಂ ತುಷ್ಟ ಇತಿ ಭಾವಃ || (೨) ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚೇತಿ
ಭಾರತೇ | ಏಕಾವಾನೇವ ಲೋಕೇಽಸ್ಮಿನ್ಪುಂಸಃ ಸ್ವಾರ್ಥಃ ಪರಃ ಸ್ಮೃತಃ || (೩)
ಏಕಾಂತಭಕ್ತಿರ್ಗೋವಿಂದೇ ಯತ್ಸರ್ವತ್ರಾತ್ಮದರ್ಶನಂ || ೨೬ ||

ಅ || (೧) ಬೇರೆ ದೇವತೆಗಳ ಸೇವೆಯಿಂದ ಫಲವು ಅಲ್ಪವಾದುದಾಗ್ಯೂ ಅದು ಸುಲಭಸಾಧ್ಯವಾಗಿರುವುದರಿಂದ ಬೇರೆ ದೇವತೆಗಳ ಪೂಜೆಯನ್ನು ಮಾಡುವುದು ಪ್ರಶಸ್ತವು. ನೀನು ಶ್ರೇಷ್ಠ ಮಹಿಮೆಗಳಿಂದ ಕೂಡಿದವನಾಗಿರುವುದರಿಂದ ದುರ್ಬಲರಿಗೆ (ಧನಾದ್ಯಾನುಕೂಲ್ಯವಿಲ್ಲದವರಿಗೆ) ನಿನ್ನನ್ನು ಪೂಜಿಸಲಿಕ್ಕೆ ಸಾಧ್ಯವಿಲ್ಲ, ಎಂದರೆ ಪತ್ರಂ ಎಂಬುವ ಶ್ಲೋಕದಿಂದ ಸಮಾಧಾನ ಹೇಳುತ್ತಾರೆ ಶಾಸ್ತ್ರದಲ್ಲಿ ವಿಹಿತಗಳಾದ ಬಿಲ್ವಪತ್ರ ಮೊದಲಾದವುಗಳನ್ನೇ ಸಮರ್ಪಿಸಬೇಕು. ಶಾಸ್ತ್ರ ನಿಷಿದ್ಧಗಳಾದ ಪತ್ರ ಮೊದಲಾದವುಗಳನ್ನು, ಸಮರ್ಪಿಸಬಾರದು. ಶಾಸ್ತ್ರದಲ್ಲಿ ನಿಷಿದ್ಧಗಳಾದ ಪತ್ರಾದಿಗಳ ಸಮರ್ಪಣೆಯು ಅಪರಾಧವೇ, ಎಂದು ವಾರಾಹಪುರಾಣಾದಿಗಳಲ್ಲಿ ಹೇಳಿದೆ. ಪರಮಭಕ್ತಿಯಿಂದಲೇ ನಾನು ಸಂತೋಷವನ್ನು ಹೊಂದತಕ್ಕವನು. (೨) ಭಕ್ತರಿಗೆ ಪ್ರಿಯನೂ, ಸಕಲ ಜನರಿಂದ ನಮಸ್ಕರಿಸಲ್ಪಟ್ಟವನೂ, ಆದ ಶ್ರೀಹರಿಯನ್ನು (ನಮಸ್ಕರಿಸುತ್ತೇನೆ) ಎಂದು ಭಾರತದಲ್ಲಿ ಭಕ್ತಪ್ರಿಯತ್ವವನ್ನು ಹೇಳಿದ್ದಾರೆ. (೩) ಶ್ರೀಪರಮಾತ್ಮನಲ್ಲಿ ನಿರವಧಿಕ ಪರಮಭಕ್ತಿಯು. ಎಲ್ಲಾ ಕಡೆಗಳಲ್ಲಿಯೂ ಪರಮಾತ್ಮನು ನಿಯಾಮಕನಾಗಿದ್ದಾನೆಂದು ತಿಳಿದುಕೊಳ್ಳುವುದು. ಇಷ್ಟೇ ಈ ಲೋಕದಲ್ಲಿ ಪುರುಷನಿಗೆ ಶ್ರೇಷ್ಠವಾದ ಸ್ವರೂಪಭೂತವಾದ ಆನಂದಾಭಿವ್ಯಕ್ತಿರೂಪವಾದ ಮೋಕ್ಷವನ್ನು ಸಂಪಾದಿಸುವುದರಲ್ಲಿ ಉಪಾಯವು, ಎಂದು ಸ್ಮೃತವಾಗಿದೆ. || ೨೬ ||

ಟೀ—ಭಕ್ತಿಪೂರ್ವಕವಾಗಿ ಕೊಟ್ಟದ್ದು ಅತ್ಯಲ್ಪವಾದುದಾಗ್ಯೂ ನನಗೆ ಪ್ರೀತಿಯನ್ನು ಹೊಂದಿಸಿಕೊಡುತ್ತದೆ. ಆದಕಾರಣ ನೀನೂ ಕೂಡ ಭಕ್ತಿಯಿಂದ ನೀನು ಮಾಡುವ ಎಲ್ಲಾ ಕರ್ಮಗಳನ್ನು ಸಮರ್ಪಿಸು ಎನ್ನುತ್ತಾರೆ—

ಗೀ || ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ |
ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ || ೨೭ ||

ಅ ॥ ಕೌಂತೇಯ=ಅರ್ಜುನನೇ, ತ್ವಂ=ನೀನು, ಯತ್=ಶಾಸ್ತ್ರದಲ್ಲಿ ವಿಹಿತವಾದ ಯಾವ ಕರ್ಮವನ್ನು, ಕರೋಷಿ=ಮಾಡುತ್ತೀಯೋ, ಯತ್=ಯಾವುದು ವಿಹಿತವಾದುದನ್ನು, ಅಶ್ನಾಸಿ=ತಿನ್ನುತ್ತೀಯೋ, ಯತ್=ಯಾವುದನ್ನು, ಜುಹೋಷಿ=ಹೋಮಿಸುತ್ತೀಯೋ, ಯತ್=ಯಾವ ದ್ರವ್ಯಾದಿಗಳನ್ನು, ದದಾಸಿ=ಸತ್ಪಾತ್ರದಲ್ಲಿ ದಾನಮಾಡುತ್ತೀಯೋ, ಯತ್=ಯಾವುದನ್ನು, ತಪಸ್ಯಸಿ=ತಪಸ್ಸನ್ನು ಮಾಡುತ್ತೀಯೋ, ತತ್=ಅವೆಲ್ಲವನ್ನು, ಮದರ್ಪಣಂ=ನನಗೆ ಸಮರ್ಪಣೆಯನ್ನು, ಕುರುಷ್ವ=ಮಾಡು. (ಅಂತೂ ಶಾಸ್ತ್ರಗಳಲ್ಲಿ ನಿಷಿದ್ಧವಾದವುಗಳನ್ನು ಮಾಡುವುದರಿಂದ ಪಾಪವು ಬರುವುದರಿಂದ ಶಾಸ್ತ್ರಗಳಲ್ಲಿ ವಿಹಿತಗಳಾದ ಎಲ್ಲಾ ಕರ್ಮಗಳನ್ನು ಮಾಡಿ ನನ್ನಲ್ಲಿಯೇ ಸಮರ್ಪಿಸು.) ॥ ೨೭ ॥

**ಗೀ ॥ ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸನ್ನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥ ೨೮ ॥**

ಅ ॥ ಏವಂ=ಹಿಂದೆ ಹೇಳಿದ ಪ್ರಕಾರ, ಎಲ್ಲಾ ಕರ್ಮ ಮೊದಲಾದವುಗಳನ್ನು ನನ್ನಲ್ಲಿಯೇ ಅರ್ಪಣ ಮಾಡಿದರೆ ಶುಭಾಶುಭಫಲೈಃ=ಶುಭ ಅಶುಭ ಫಲಗಳನ್ನು ಕೊಡುವ, ಕರ್ಮಬಂಧನೈಃ=ಕರ್ಮಬಂಧಗಳಿಂದ, (ಸಂಸಾರಬಂಧಕಗಳಾದ ಕರ್ಮಗಳಿಂದ) ಮೋಕ್ಷ್ಯಸೇ=ಬಿಡುಗಡೆ ಹೊಂದುವಿ. (ಅದನ್ನೇ ವಿವರಿಸುತ್ತಾರೆ—) ಸನ್ಯಾಸಯೋಗಯುಕ್ತಾತ್ಮಾ=ಕಾಮ್ಯಕರ್ಮಗಳನ್ನು ಮಾಡದೆ ಇರುವುದು, ಅಕಾಮ್ಯಕರ್ಮಗಳನ್ನು ಮಾಡುವುದು, ಇವುಗಳಿಂದ ಯುಕ್ತವಾದ ಮನಸ್ಸುಳ್ಳವನಾಗಿ, ವಿಮುಕ್ತಃ=ಸಂಸಾರಬಂಧದಿಂದ ಬಿಡುಗಡೆ ಹೊಂದಿದವನಾಗಿ, ಮಾಂ=ನನ್ನನ್ನು, ಉಪೈಷ್ಯಸಿ=ಹೊಂದುವಿ. ॥ ೨೮ ॥

**ಭಾ ॥ ಅತೋ ಯತ್ಕರೋಷಿ** ॥ ೨೭, ೨೮ ॥

ಅ ॥ ನಾನು ಭಕ್ತಿಯಿಂದಲೇ ಸಂತೋಷವನ್ನು ಹೊಂದತಕ್ಕವನಾದುದರಿಂದ ಸಮಸ್ತ ಕರ್ಮಗಳನ್ನು ಮಾಡುವಾಗಲೂ ಭಕ್ತಿಯೇ ಅವಶ್ಯಕವಾದ ಕಾರಣ ಯತ್ಕರೋಷಿ ಇತ್ಯಾದಿಗಳಿಂದ ಯಜ್ಞ ಅಶನಾದಿ ಕ್ರಿಯಾವಿಶೇಷಗಳನ್ನು ಭಕ್ತಿಪೂರ್ವಕವಾಗಿಯೇ ಶ್ರೀಹರಿಯಲ್ಲಿ ಅರ್ಪಣ ಮಾಡಬೇಕೆಂದು ವಿಶೇಷವಾಗಿಯೂ ಹೇಳುತ್ತಾರೆ. ॥ ೨೭, ೨೮ ॥

ಟೀ—ಶ್ರೀಪರಮಾತ್ಮನೇ ಸಮಸ್ತ ಯಜ್ಞಾದಿಗಳನ್ನು ಭುಜಿಸುವವನೆಂದಾದರೆ ತ್ರೈವಿದ್ಯರಿಗೂ ಭಗವದ್ಭಕ್ತರಿಗೂ ಬೇರೆಬೇರೆ ಫಲವು ಆಗದೆ ಹೋಗುವುದೆಂಬುವ ಶಂಕೆಯನ್ನು ತ್ರೈವಿದ್ಯಾಃ ಎಂಬುವದರಿಂದ ಶಂಕಿಸಿ ಯೇಽಪಿ ಎಂಬುವುದರಿಂದ ಪರಿಹಾರವನ್ನು ವಿವರಿಸಿದರು. ಅದರಲ್ಲಿ ತ್ರೈವಿದ್ಯರಿಗೂ ಭಗವದ್ಭಕ್ತರಿಗೂ ಬೇರೆಬೇರೆ ಫಲವೆಂಬುವುದನ್ನು ಸ್ಪಷ್ಟವಾಗಿ ಹೇಳುತ್ತಾರೆ—

**ಕಾ ॥ (೧) ಅನನ್ಯದೇವತಾಯಾಗಾದ್ಭಕ್ತ್ಯುದ್ರೇಕಾದಕಾಮನಾತ್ । ಸದಾಯೋಗಾಚ್ಚ ವೈ-**
**ಶಿಷ್ಟ್ಯಂ ತ್ರೈವಿದ್ಯಾದ್ವೈಷ್ಣವಾದಪಿ । ಸ್ಯಾದ್ಧಿ ಭಾಗವತಸ್ಯೈವ ॥ (೨) ತೇನ ಬ್ರ-**
**ಹ್ಮಾದಯೋಽಖಿಲಾಃ । ಅಶ್ವಮೇಧಾದಿಭಿರ್ಯಜ್ಞೈರಪಿ ಕೇಶವಯಾಜಿನಃ ॥ (೩)**
**ವೈಷ್ಣವಾ ಇತಿ ಬುದ್ಧ್ಯೈವ ಮಾನಯಂತ್ಯನ್ಯದೇವತಾ ಇತ್ಯಾಗ್ನೇಯೇ ॥ ೧ ॥**

ಅ ॥ (೧) ಬ್ರಹ್ಮರುದ್ರಾದಿ ದೇವತೆಗಳು ಸರ್ವೋತ್ತಮರಲ್ಲ. ಶ್ರೀಹರಿಯ ಪರಿವಾರಭೂತರು ಶ್ರೀಹರಿಯೇ ಸರ್ವೋತ್ತಮನು, ಎಂದು ತಿಳಿದು ಶ್ರೀಪರಮಾತ್ಮನ ಪ್ರೀತಿಗಾಗಿ ಯಾಗ ಪೂಜಾದಿಗಳನ್ನು

ಸಾತುತ್ವದಿಂದಲೂ, ಪರಮಭಕ್ತಿಯಿಂದ ಶ್ರೀ ಹರಿಯನ್ನೇ ಉಪಾಸನೆಮಾಡುವುದರಿಂದಲೂ ಪರಲೋಕ್ಷೆಯನ್ನು ತೊರೆದು ಶ್ರೀಹರಿಯನ್ನೇ ಉಪಾಸನೆ ಮಾಡುವುದರಿಂದಲೂ ಸರ್ವದಾ ಎಲ್ಲಾ ಕರ್ಮಗಳನ್ನು ಮಾಡುವಾಗಲೂ ಶ್ರೀ ಹರಿಯಸ್ಮರಣೋದ್ದೇಶಾದಿರೂಪ ಯೋಗವಿದ್ದುದರಿಂದಲೂ, ಭಗವದ್ಭಕ್ತನಾದವನಿಗೇನೇ ವಿಷ್ಣುಭಕ್ತನಾದ ತ್ರೈವಿದ್ಯನಿಗಿಂತಲೂ (ಅಂದರೆ ತ್ರೈವಿದ್ಯನೂ ಶ್ರೀ ಪರಮಾತ್ಮನನ್ನುದ್ದೇಶಿಸಿ ಪೂಜಿಸುವವನಾದಾಗ್ಯೂ ಅವನಿಗಿಂತಲೂ) ಉತ್ತಮತ್ವವು (ಹೆಚ್ಚು ಫಲ ಸಿಗುವುದು.) (೨) ಭಗವದ್ಭಕ್ತರಿಗೂ ತ್ರೈವಿದ್ಯರಿಗೂ ಭಗವದ್ವಿಷಯಕ ಯಜ್ಞಾದಿಗಳಲ್ಲಿ ವ್ಯತ್ಯಾಸವಿಲ್ಲದಿದ್ದರೂ ಹಿಂದೆ ಹೇಳಿದ ಅನನ್ಯದೇವತಾಯಾಜಿತ್ವ ಮೊದಲಾದ ಸಾಧನವಿಶೇಷಗಳಿಂದಲೇ ತ್ರೈವಿದ್ಯನಿಗಿಂತಲೂ ಭಗವದ್ಭಕ್ತನಿಗೇನೇ ಫಲಾಧಿಕ್ಯವಿದ್ದುದರಿಂದಲೇ ಬ್ರಹ್ಮರುದ್ರಮೊದಲಾದ ಎಲ್ಲಾ ದೇವತೆಗಳೂ (ಕೃತಯುಗದಲ್ಲಿದ್ದ ಎಲ್ಲಾ ಭಗವದ್ಭಕ್ತರೂ ಕೂಡ ಇಂದ್ರಾದಿ ಎಲ್ಲಾ ನಾಮಗಳೆಲ್ಲವೂ ಕೇವಲ ಭಗವದ್ವಾಚಕಗಳೇ ಎಂದನುಸಂಧಾನ ಮಾಡಿಕೊಂಡು) ಅಶ್ವಮೇಧಮೊದಲಾದ ಯಜ್ಞಗಳಿಗೂ ಶ್ರೀ ಪರಮಾತ್ಮನೇ ಮುಖ್ಯ ಉದ್ದೇಶ್ಯ ದೇವತೆಯೆಂದು ಆ ಯಜ್ಞಗಳಿಂದ ಶ್ರೀ ಪರಮಾತ್ಮನನ್ನೇ ಪೂಜಿಸುತ್ತಿದ್ದರು. ಇತರ ದೇವತೆಗಳು ಶ್ರೀ ಪರಮಾತ್ಮನ ಭಕ್ತರೆಂಬುವ ಬುದ್ಧಿಯಿಂದಲೇ ಆ ಬ್ರಹ್ಮಾದಿಗಳನ್ನು ಮಾನನಾ ಮಾಡುತ್ತಿದ್ದರು. ಆ ಬ್ರಹ್ಮರುದ್ರಾದಿಗಳನ್ನು ಮುಖ್ಯ ಉದ್ದೇಶ್ಯ ದೇವತೆಗಳೆಂಬ ಭಾವನೆಯಿಂದ ಪೂಜಿಸುತ್ತಿರಲಿಲ್ಲ. ಎಂದು ಆಗ್ನೇಯಪುರಾಣದಲ್ಲಿ ಹೇಳಿದೆ ॥ ೧ ॥

ಟೀ—೨೦ನೇ ಶ್ಲೋಕದಲ್ಲಿದ್ದ ಪರ್ಯುಪಾಸನಾಶಬ್ದಾರ್ಥವನ್ನು ಹೇಳುತ್ತಾರೆ—

**ಶಾ ॥ (೧) ಸಮ್ಯಗ್ಗುಣಗಣಜ್ಞಾನಾದುಪಾಸಾ ಪರ್ಯುಪಾಸನೇತಿ ಚ ॥ (೨) ಮಾಮಿಷ್ಟ್ವಾ ಪ್ರಾರ್ಥಯಂತ ಇತ್ಯುಕ್ತತ್ವಾಜ್ಞಾನಂತೋಽಪಿ ನಾಭಿತೋ ಜಾನಂತಿ ತತ್ತ್ವೇನ ॥ (೩) ಸರ್ವದೇವವರತ್ವೇನ ಯೋ ನ ಜಾನಾತಿ ಕೇಶವಂ । ತಸ್ಯ ಪುಣ್ಯಾನಿ ಮೋಘಾನಿ ಯಾತಿ ಚಾಂಧಂ ತಮೋ ಧ್ರುವಮಿತಿ ಚ ॥ (೪) ಮೋಘಾಶಾ ಮೋಘಕರ್ಮಾಣ ಇತ್ಯುಕ್ತತ್ವಾಚ್ಚ ನ ಕೇವಲಾಜ್ಞವಿಷಯಂ ಮಿಥ್ಯಾಜ್ಞಾನಿವಿಷಯಂ ವಾ ಚ್ಯವಂತಿ ತ ಇತ್ಯಾದಿ ॥ (೫)ಅತಃ ಸರ್ವಾಧಿಕ್ಯಂ ವಿಷ್ಣೋರಜ್ಞಾತ್ವಾಽಪಿ ಬ್ರಹ್ಮಾದೀನಾಂ ತತ್ಪರಿವಾರತ್ವಾದಿಕಮಜಾನತಾಮಿದಂ ಫಲಂ ॥ ೨ ॥ ॥ ೨೦—೨೮ ॥**

ಅ ॥ (೧) ಚೆನ್ನಾಗಿ ಶಾಸ್ತ್ರಗಳಲ್ಲಿ ಹೇಳಿದ ಪ್ರಕಾರ ಶ್ರೀ ಪರಮಾತ್ಮನ ಗುಣಗಳ ಸಮೂಹವನ್ನು ತಿಳಿದುಕೊಂಡು ಮಾಡುವ ಉಪಾಸನೆಯು ಪರ್ಯುಪಾಸನಾ ಎನಿಸುತ್ತದೆ (೨) ಮಾಮಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ಎಂದು ತ್ರೈವಿದ್ಯರಿಗೆ ಸ್ವರ್ಗಪ್ರಾರ್ಥನೆಯನ್ನು ಹೇಳಿದ್ದರಿಂದ ರಾಜಸಿಗೆ ಪ್ರಜೆಗಳಿಂದ ಶ್ರೀಕೃಷ್ಣವಿದ್ದಂತೆಯೇ ಶ್ರೀ ಪರಮಾತ್ಮನಿಗೆ ಬ್ರಹ್ಮರುದ್ರಾದಿ ದೇವತೆಗಳಿಂದ ಶ್ರೇಷ್ಠತ್ವವನ್ನು ತಿಳಿದವರಾದಾಗ್ಯೂ ಶ್ರೀ ಪರಮಾತ್ಮನು ಸರ್ವಸ್ವತಂತ್ರನು, ಸರ್ವಗುಣಪರಿಪೂರ್ಣನು ಬ್ರಹ್ಮರುದ್ರಾದಿ ದೇವತೆಗಳು ಶ್ರೀಹರಿಯ ಶ್ರೀಪರಿವಾರಭೂತರು ಶ್ರೀಪರಮಾತ್ಮನ ಅಧೀನರಾಗಿಯೇ ಇರುವವರು. ಇತ್ಯಾದಿಗಳನ್ನು ಸಂಪೂರ್ಣ ಚೆನ್ನಾಗಿ ತಿಳಿಯದೆ ಇದ್ದುದರಿಂದ **ತತ್ತ್ವೇನ ನಾಭಿಜಾನಂತಿ** ಎಂದು ಹೇಳಿದೆ (ಆದರೂ ತ್ರೈವಿದ್ಯರು ಸರ್ವಥಾ ಅಜ್ಞಾನಿಗಳೂ ಅಲ್ಲ. ಮಿಥ್ಯಾಜ್ಞಾನಿಗಳೂ ಅಲ್ಲ.) (ಏತಕ್ಕೆ ಈ ಅರ್ಥವನ್ನು ಕಲ್ಪಿಸಬೇಕು ಎಂದರೆ—) **ತ್ರೈವಿದ್ಯಾ ಮಾಂ.... ಪ್ರಾರ್ಥಯಂತೇ** ಎಂದು ತ್ರೈವಿದ್ಯರು ಕೊನೆಗೆ ಎಲ್ಲವನ್ನೂ ಶ್ರೀ ಹರಿಗೆ ಸಮರ್ಪಿಸುತ್ತಾ ವಿಷ್ಣೂದ್ದೇಶ್ಯಕವಾದ ಯಾಗ. ಶ್ರೀ ವಿಷ್ಣುವಿನ ಪ್ರಾರ್ಥನೆಯನ್ನೂ ಮಾಡುತ್ತಾರೆ. ಎಂದು ಹೇಳಿದ್ದಾರೆ ಶ್ರೀ ಪರಮಾತ್ಮನು ಸಮಸ್ತ ದೇವತೆಗಳಿಗಿಂತ ಶ್ರೇಷ್ಠನು. ತ್ರೈವಿದ್ಯರು ತಿಳಿಯದೆ ಶ್ರೀ ಹರಿಯ ಪ್ರಾರ್ಥನಾದಿಗಳನ್ನು ಮಾಡಿದ್ದು ಕೂಡದೆಹೋಗುವುದು (೩) ಯಾ ನ ಶ್ರೀಪರ

ಮಾತ್ರ ನನ್ನ ಸಮಸ್ತ ದೇವತೆಗಳಿಗಿಂತಲೂ ಶ್ರೇಷ್ಠನೆಂದು ತಿಳಿಯುವುದಿಲ್ಲವೋ, ಅವನು ಮಾಡುವ ಎಲ್ಲ ಪುಣ್ಯಕರ್ಮಗಳೂ ವ್ಯರ್ಥಗಳೇ. ನಿಶ್ಚಯವಾಗಿಯೂ ಅಂಧಂತಮಸ್ಸನ್ನು ಹೊಂದುತ್ತಾನೆ. (೪) (ಅಜ್ಞರು ಮಾಡತಕ್ಕ ಯಜ್ಞಾದಿ ಕರ್ಮಗಳು ವ್ಯರ್ಥಗಳು. ಮತ್ತು ಮಿಥ್ಯಾಜ್ಞಾನಿಗಳು ಮಾಡತಕ್ಕ ಯಜ್ಞಾದಿ ಕರ್ಮಗಳಿಗೆ ವಿಪರೀತಫಲಗಳು ಬರುತ್ತವೆಂದು ಹೇಳಿದ್ದರಿಂದ) ಮೋಘಾಶಾಃ ಎಂಬುವುದರಿಂದ ವಿಪರೀತ ಜ್ಞಾನಿಗಳು ಮಾಡುವ ಕರ್ಮಗಳು ವ್ಯರ್ಥಗಳೆಂದು ಹೇಳಿದ ಕಾರಣ ಸ್ವರ್ಗಭೋಗಾನಂತರದಲ್ಲಿ ಭೂಲೋಕಕ್ಕೆ ಅಜ್ಞರು ಬರುತ್ತಾರೆ ಮಿಥ್ಯಾಜ್ಞಾನಿಯಾದರೆ ಅಂಧಂತಮಸ್ಸನ್ನು ಹೊಂದುತ್ತಾನೆ (೫) ಆದಕಾರಣ ಶ್ರೀವಿಷ್ಣುವೇ ಸರ್ವೋತ್ತಮನೆಂದು ತಿಳಿದರೂ ಬ್ರಹ್ಮರುದ್ರಾದಿಗಳು ಶ್ರೀವಿಷ್ಣುವಿನ ಪರಿವಾರಭೂತರು ಸೇವಕರು ಇತ್ಯಾದಿಗಳನ್ನು ಚೆನ್ನಾಗಿ ತಿಳಿಯದವರಿಗೆ ಹಿಂದೆ ಹೇಳಿದ ಸ್ವರ್ಗದಿಂದ ಭೂಲೋಕಪ್ರಾಪ್ತಿರೂಪ ಫಲವು ॥ ೨ ॥ ॥ ೨೦—೨೮ ॥

ಗೀ ॥ ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ ।
ಯೇ ಭಜಂತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ॥೨೯॥

ಅ ॥ ಅಹಂ = ನಾನು, ಸರ್ವಭೂತೇಷು = ಸಮಸ್ತಪ್ರಾಣಿಗಳಲ್ಲಿಯೂ, ಸಮಃ = ಸಮನು. (ವೈಷಮ್ಯಾದಿಗಳುಳ್ಳವನಲ್ಲ.) (ಸಮನೆಂಬುವುದನ್ನು ವಿವರಿಸುತ್ತಾರೆ-) ಮೇ = ನನಗೆ ದ್ವೇಷ್ಯಃ = ಅವರವರು ಮಾಡಿದ ದ್ವೇಷಕ್ಕಿಂತ ಹೆಚ್ಚಿಗೆ ದ್ವೇಷಕ್ಕೆ ಪಾತ್ರನು, ನ ಅಸ್ತಿ = ಇಲ್ಲ. ಪ್ರಿಯಃ = ಅವರವರು ಮಾಡಿದ ಭಕ್ತಿಗಿಂತ ಹೆಚ್ಚು ಪ್ರೀತಿಪಾತ್ರನೂ, ನ = ಇಲ್ಲ ಅಂದರೆ (ಅವರವರ ದ್ವೇಷಭಕ್ತಿಗಳನ್ನನುಸರಿಸಿ ಅವುಗಳಿಗೆ ತಕ್ಕುದಾದ ಫಲವನ್ನೇ ಕೊಡುವೆನು ಆದಕಾರಣ ನಾನು ಸಮನು.) ಯೇ = ಯಾವ ಭಕ್ತರು, ಮಾಂ = ನನ್ನನ್ನು, ಭಕ್ತ್ಯಾ = ಶುದ್ಧಸ್ನೇಹದಿಂದ, ಭಜಂತಿ = ಸೇವಿಸುತ್ತಾರೋ. ತೇ = ಅವರು ಮಯಿ = ನನ್ನ ಅಧೀನರೆಂದು ಜ್ಞಾನವುಳ್ಳವರಾಗುತ್ತಾರೆ ಚ = ಮತ್ತು, ಅಹಂ = ನಾನು, ತೇಷು ಅಪಿ = ಭಕ್ತರ ವಶನಾಗಿ ಭಕ್ತರಿಗೆ ಅನುಗ್ರಹಮಾಡುತ್ತಿರುತ್ತೇನೆ. ಅಥವಾ ಸರ್ವಪ್ರಾಣಿಗಳಲ್ಲಿ ನನಗೆ ಭಕ್ತನಾದವನು ದ್ವೇಷ್ಯನಾಗುವುದಿಲ್ಲ. ಅಭಕ್ತನು ನನಗೆ ಪ್ರೀತಿಪಾತ್ರನೂ ಆಗುವುದಿಲ್ಲ. ಆದಕಾರಣ ಸಮನು ನಾನು ಭಕ್ತರಲ್ಲಿ ದ್ವೇಷವನ್ನು ಅಭಕ್ತರಲ್ಲಿ ಪ್ರೀತಿಯನ್ನು ಮಾಡಿದರೇನೇ ವಿಷಮನಾಗುವೆನು. ಹೀಗೆ ಇಲ್ಲವಷ್ಟೆ. ಅವರವರ ಭಕ್ತಿಯನ್ನು ಅನುಸರಿಸಿಯೇ ಫಲವನ್ನು ಕೊಡುವವನು, ನನ್ನಲ್ಲಿ ಪ್ರೀತಿ ಮಾಡುವವರಿಗೆ ಅನುಗ್ರಹ ಮಾಡುತ್ತಿರುತ್ತೇನೆ ॥ ೨೯ ॥

ಭಾ ॥ (೧) ತರ್ಹಿ ಸ್ನೇಹಾದಿಮತ್ತ್ವಾದಲ್ಪಭಕ್ತಸ್ಯಾಪಿ ಕಸ್ಯಚಿದ್ಬಹುಫಲಂ ದದಾಸಿ । ವಿಪರೀತಸ್ಯಾಪಿ ಕಸ್ಯಚಿದ್ವಿಪರೀತಮಿತ್ಯತ ಆಹ । ಸಮೋಽಹಮಿತಿ ॥ (೨) ತರ್ಹಿ ನ ಭಕ್ತಿಪ್ರಯೋಜನಮಿತ್ಯತ ಆಹ । ಯೇ ಭಜಂತೀತಿ ॥ (೩) ಮಯಿ ತೇ ತೇಷು ಚಾಪ್ಯಹಮಿತಿ ಮಮ ತೇ ವಶಾಸ್ತೇಷಾಮಹಂ ವಶ ಇತಿ ॥ (೪) ಉಕ್ತಂ ಚ ಪೈಂಗಿಖಿಲೇಷು ಯೇ ವೈ ಭಜಂತೇ ಪರಮಂ ಪುಮಾಂಸಂ ತೇಷಾಂ ವಶಃ ಸ ತು ತೇ ತದ್ವಶಾಶ್ಚೇತಿ ॥ (೫) ತದ್ವಶಾ ಏವ ತೇ ಸರ್ವೇ ಸರ್ವದಾ । ತಥಾಪಿ ಬುದ್ಧಿಪೂರ್ವಕತ್ವಾಬುದ್ಧಿಪೂರ್ವಕತ್ವೇನ ಭೇದಃ । ಉದ್ಧವಾದಿವತ್ಪೃಥುಕಪಾಲಾದಿವಚ್ಚ ॥ (೬) ತಚ್ಚೋಕ್ತಂ ತತ್ರೈವ ಅಬುದ್ಧಿಪೂರ್ವಂ ಯೋಽವಶಸ್ತಸ್ಯ ಧ್ಯಾನಾತ್ಸ ನಿರ್ವೃತೋ ಭವತೇ ಬುದ್ಧಿಪೂರ್ವಮಿತಿ ॥ ೨೯ ॥

ಅ॥ (೧) ಭಕ್ತ್ಯುಪಹೃತಮಶ್ನಾಮಿ ಎಂದು ಹೇಳಿದ ಪ್ರಕಾರ ಭಕ್ತರಿಗೆ ಪ್ರಿಯನೆಂದಾದರೆ ದ್ವೇಷಿಗಳಿಗೆ ಅಪ್ರಿಯನೆಂದೂ ಆಗುವಿ. ಅಂತೂ ಭಕ್ತರಲ್ಲಿ ಸ್ನೇಹವೂ ದ್ವೇಷಿಗಳಲ್ಲಿ ದ್ವೇಷವೂ ಉಳ್ಳವನಾಗಿರುವುದರಿಂದ ಅಲ್ಪ ಭಕ್ತನಾದವನೊಬ್ಬನಿಗೂ ಸುಖರೂಪ ಬಹುಫಲವನ್ನು ಕೊಡುತ್ತಿ. ಅತಿ ದ್ವೇಷ ಮಾಡುವವನೊಬ್ಬನಿಗೂ ದುಃಖರೂಪ ಬಹುಫಲವನ್ನು ಕೊಡುತ್ತಿ. ಎಂದಾಗುವುದು. (ಇದರಿಂದ ನಿನಗೆ ವೈಷಮ್ಯ ನೈರ್ಘೃಣ್ಯಗಳೆಂಬುವ ದೋಷಗಳು ಬರಬೇಕಾಗುವವು) ಎಂದರೆ ಸಮೋಽಹಂ ಎಂಬುದರಿಂದ ಸಮಾಧಾನವನ್ನು ಹೇಳುತ್ತಾರೆ. (೨) ಹಾಗಾದರೆ—ಭಕ್ತಿಯಿಂದ ಪ್ರಯೋಜನವಿಲ್ಲವೆಂದಾಗುವುದೆಂದರೆ ಯೇ ಭಜಂತಿ ಎಂದು ಹೇಳಿರುತ್ತಾರೆ. (ಅಂದರೆ ನಿನಗೆ ಪ್ರಿಯನಿಲ್ಲವೆಂದಾದರೆ ಮೋಕ್ಷರೂಪ ಪ್ರಯೋಜನಕ್ಕೆ ಭಕ್ತಿಯು ಪ್ರಯೋಜಕವಲ್ಲವೆಂದಾಗುವದು. ಏವಂಚ ಪತ್ರಂ ಪುಷ್ಪಂ ಇತ್ಯಾದಿಗಳಿಂದ ಭಕ್ತಿಯಿಂದಲೇ ನಾನು ತೃಪ್ತಿಯನ್ನು ಹೊಂದುವವನು ಎಂದು ಭಕ್ತಿಯು ಪ್ರಯೋಜಕವೆಂದು ಹೇಳಿದ್ದು ಅಯುಕ್ತವಾಗುವುದು ) (೩) ಮಯಿ ತೇ ತೇಷು ಚಾಪ್ಯಹಂ ಎಂಬುವುದಕ್ಕೆ ಆ ಭಕ್ತರು ನನ್ನ ಅಧೀನರು, ಅವರಿಗೆ ನಾನು ಅಧೀನನು (ಅವರಿಗೆ ನಾನು ಅನುಗ್ರಹವನ್ನು ಮಾಡುತ್ತಿರುವೆನು ಎಂದರ್ಥವು.) (೪) (ಹೀಗೆ ಏಕೆ ಅರ್ಥವನ್ನು ಮಾಡಬೇಕೆಂದರೆ—)ಯಾರು ಸರ್ವೋತ್ತಮನಾದ ಪುರುಷನೆನಿಸಿಕೊಂಡ ಶ್ರೀಪರಮಾತ್ಮನನ್ನು ಸೇವಿಸುತ್ತಾರೋ ಅವರಿಗೆ ಆ ಶ್ರೀಪರಮಾತ್ಮನು ಅಧೀನನಾಗಿಯೇ ಇರುವನು. ಆ ಭೃತ್ಯರು ನನ್ನ (ಶ್ರೀಹರಿಯ) ಅಧೀನರೇ, ಎಂದು ಪೈಂಗಿಖಿಲ ಗ್ರಂಥಗಳಲ್ಲಿ ಹೇಳಿದೆ. (೫) ಯದ್ಯಪಿ ಎಲ್ಲಾ ಪ್ರಾಣಿಗಳೂ ಸರ್ವದಾ ಶ್ರೀಪರಮಾತ್ಮನ ಅಧೀನರಾಗಿಯೇ ಇರುತ್ತಾರೆ ಆದರೂ ಉದ್ಧವಾದಿಗಳಂತೆ ಶ್ರೀಪರಮಾತ್ಮನ ಮುಖ್ಯ ಭಕ್ತರು ಸರ್ವರೂ ಪರಮಾತ್ಮನ ಅಧೀನರು ಅವನ ಪರಿವಾರರು, ಎಂದು ತಿಳಿದುಕೊಂಡಿದ್ದರೂ ಶಿಶುಪಾಲಾದಿಗಳಂತೆ ಅಭಕ್ತರು ಸರ್ವರೂ ಶ್ರೀಪರಮಾತ್ಮನ ಭೃತ್ಯರಲ್ಲ ಅವನ ಅಧೀನರಲ್ಲ. ಎಂದು ತಿಳಿದುಕೊಂಡಿದ್ದಾರೆ. ಹೀಗೆ ಬುದ್ಧಿಪೂರ್ವಕತ್ವೇನ ಅಬುದ್ಧಿಪೂರ್ವಕತ್ವೇನ ಭೇದವು. ಅಂದರೆ ಭಕ್ತರು ಸರ್ವರೂ ಶ್ರೀಹರಿಯ ವಶರೆಂದು ತಿಳಿದುಕೊಳುತ್ತಿದ್ದಾರೆ. ಇತರರು ಹಾಗೆ ತಿಳಿದುಕೊಳ್ಳುವುದಿಲ್ಲ, ಹೀಗೆ ಭೇದವು. (ಯಾರು ಬುದ್ಧಿಯಿಲ್ಲದೆ ತಾನು ಶ್ರೀಹರಿಯ ವಶನೆಂದು ತಿಳಿದುಕೊಳ್ಳಲಿಲ್ಲವೋ ಅವನು ಶ್ರೀಹರಿಯ ಧ್ಯಾನದಿಂದ ತಿರುಗಿ ಬುದ್ಧಿಪೂರ್ವಕವಾಗಿ ಶ್ರೀಹರಿಯ ವಶನಾಗುತ್ತಾನೆ.) (ನಾನು ಶ್ರೀಹರಿಯ ಅಧೀನನೇ ಎಂದು ತಿಳಿದುಕೊಳ್ಳುತ್ತಾನೆ.) (೬) ಯಾರು ಅಬುದ್ಧಿಪೂರ್ವಕವಾಗಿ ಶ್ರೀಹರಿಯ ಅಧೀನನಲ್ಲವೋ (ಶ್ರೀಹರಿಯ ಅಧೀನನೆಂದು ತಿಳಿದುಕೊಳ್ಳಲಿಲ್ಲವೋ)ಅಂತಹವನು ಆ ಶ್ರೀಹರಿಯ ಧ್ಯಾನದ ಮಹಿಮೆಯಿಂದ ಪುನಃ ಬುದ್ಧಿಪೂರ್ವಕವಾಗಿ ಶ್ರೀಹರಿಯ ಅಧೀನನಾಗುತ್ತಾನೆ (ಶ್ರೀಹರಿಯ ಅಧೀನನೆಂದು ತಿಳಿದುಕೊಳ್ಳುತ್ತಾನೆ.) ಎಂದು ಪೈಂಗಿಖಿಲವೆಂಬುವ ಗ್ರಂಥದಲ್ಲಿಯೇ ಹೇಳಿದೆ. ॥ ೨೯ ॥

ಟೀ—ಭಕ್ತನನ್ನು ಹೊಗಳುತ್ತಾರೆ -

**ಗೀ॥ ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೩೦ ॥**

ಅ॥ ಸುದುರಾಚಾರೋಽಪಿ=ಭಗವದ್ಭಕ್ತನಾದವನು ಯಾವನಾದರೊಬ್ಬನು ದೇವಾಂಶನಾಗಲಿ ಋಷ್ಯಾದಿಗಳಾಗಲೀ ದುರದೃಷ್ಟದಿಂದ ಅತ್ಯಂತ ದುರಾಚಾರವುಳ್ಳವನಾದಾಗ್ಯೂ, ಅನನ್ಯಭಾಕ್=ಬ್ರಹ್ಮರುದ್ರಾದಿಗಳನ್ನು ಸ್ವತಂತ್ರರೆಂದು ಭಜಿಸದಿರುವವನಾಗಿ, ಮಾಂ=ನನ್ನನ್ನು, ಭಜತೇ ಚೇತ್=ಭಜಿಸಿದ ಪಕ್ಷದಲ್ಲಿ. ಸಃ=ಅಂತ್ಯ. ಮತ್ತು ಸೂರ್ಯಾದಿಗಳ ಅಂತರನಾದವನು ಸಮ್ಯಗ್ವ್ಯವಸಿತಃ ಹಿ ಸವಿಶೇಷವಾದ ಭಗವದ್ವಿಷಯಕ ತತ್ವನಿಶ್ಚಯವುಳ್ಳವನಾದುದರಿಂದ, ಸಾಧುರೇವ=ಸಜ್ಜನ (ಶ್ರೇಷ್ಠ) ನೆಂದೇ ಮಂತವ್ಯಃ=ತಿಳಿಯಬೇಕು.

**ಭಾ ॥ ನ ಭವತ್ಯೇವ ಪ್ರಾಯಸ್ತದ್ಭಕ್ತೋ ದುರಾಚಾರಸ್ತಥಾಽಪಿ ಬಹುಪುಣ್ಯೇನ ಯದಿ ಕಥಂಚಿದ್ಭವತಿ ತರ್ಹಿ ಸ ಸಾಧುರೇವ ಮಂತವ್ಯಃ ॥ ೩೦ ॥**

ಅ ॥ ವಿಷ್ಣುಭಕ್ತನಾದವನು ಪ್ರಾಯಶಃ ಅತ್ಯಂತ ದುರಾಚಾರವುಳ್ಳವನಾಗುವುದೇ ಇಲ್ಲ. ಆದರೂ ತನ್ನ ಯೋಗ್ಯತೆಗಿಂತ ಹೆಚ್ಚು ಸಂಪಾದಿತವಾದ ಪುಣ್ಯವಿದ್ದರೆ ಆದರ ಹ್ರಾಸಕ್ಕಾಗಿ **ಸ್ವಾಧಿಕಾರಾಧಿಕೋ ಯಸ್ತು ತಥಂ ಚಿನ್ನೋಪಪದ್ಯತೇ । ಕಥಂಚಿದಧಿಕೇ ಯತ್ನೇ ದೋಷಃ ಕಶ್ಚಿತ್ಸಮಾಪತೇತ್, ಏಧಮಾನದ್ವಿಟ್** ಇತ್ಯಾದಿ ಹೇಳಿದ ಪ್ರಕಾರ ಕಥಂಚಿತ್ ದುರಾಚಾರವು ಅತನಲ್ಲಿ ಕಂಡರೂ ಅತನು ಸಜ್ಜನನೆಂದೇ ತಿಳಿಯಲ್ಪಡಬೇಕು. ॥ ೩೦ ॥

ಟೀ—ತತ್ವನಿಷ್ಟೆಯುಳ್ಳವನಾದರೂ ದುರಾಚಾರಿಯಾದರೆ ಅತನನ್ನು ಸಜ್ಜನನೆಂದು ಏಕೆ ತಿಳಿದುಕೊಳ್ಳಬೇಕೆಂದರೆ—

## ಗೀ ॥ ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ । ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧ ॥

ಅ ॥ (ದುರಾಚಾರವುಳ್ಳ ಭಗವದ್ವಿಷಯಕ ತತ್ವಜ್ಞಾನವುಳ್ಳವನು.) (ದೇವತೆಗಳು, ಅವರ ಅಂಶಭೂತರು, ಮತ್ತು ಋಷ್ಯಾದಿಗಳು ಚೆನ್ನಾಗಿ ಭಗವದ್ವಿಷಯಕ ತತ್ವಜ್ಞಾನವುಳ್ಳವರಾದುದರಿಂದ) ಕ್ಷಿಪ್ರಂ=ಶೀಘ್ರವಾಗಿ, ಧರ್ಮಾತ್ಮಾ ಭವತಿ=ಸದ್ಧರ್ಮ ಸದಾಚಾರಗಳಲ್ಲಿಯೇ ಮನಸ್ಸುಳ್ಳವನಾಗುತ್ತಾನೆ. ಶಶ್ವತ್ ಶಾಂತಿಂ=ಶಾಶ್ವತವಾದ ಮೋಕ್ಷವನ್ನು. ನಿಗಚ್ಛತಿ=ಚೆನ್ನಾಗಿ ಹೊಂದುತ್ತಾನೆ. ಕೌಂತೇಯ=ಅರ್ಜುನನೇ, ಪ್ರತಿಜಾನೀಹಿ=ಚೆನ್ನಾಗಿ ತಿಳಿದುಕೊಳ್ಳು, ಮೇ=ನನ್ನ. ಭಕ್ತಃ=ಭಕ್ತನಾದವನು (ದುರಾಚಾರವುಳ್ಳವನಾದಾಗ್ಯೂ,) ನ ಪ್ರಣಶ್ಯತಿ=ಸರ್ವಥಾ ನರಕಾದ್ಯನರ್ಥಗಳನ್ನು ಹೊಂದುವುದಿಲ್ಲ (ಇವು ದೇವತೆಗಳು ದೇವಾಂಶ ಸಂಭೂತರು, ಋಷ್ಯಾದಿಗಳು. ಇವರ ವಿಷಯಕವೇ, ಮನುಷ್ಯವಿಷಯಕವಲ್ಲ) ॥ ೩೧ ॥

ಟೀ—ಭಕ್ತ್ಯಾತಿತ್ಯರ್ಥಂ ಅತ್ಯಾಮಿ ಎಂದು ಭಕ್ತನಿಗೆ ಪ್ರಿಯನೆಂದು ಹೇಳಿದೆ. ಹಾಗಾದರೆ ಅಭಕ್ತರಲ್ಲಿ ಅಪ್ರೀತಿಯು ಬರಬೇಕಾಗುವುದು. ಆದರಿಂದ ಶ್ರೀಪರಮಾತ್ಮನಿಗೆ ವೈಷಮ್ಯಾದಿ ಬಂದಂತೆ ಆಗುವುದು ಎಂದರೆ **ಸಮೋಽಹಂ** ಎಂದು ಶ್ಲೋಕವು ಹೊರಟಿದೆ. ಆದರ ಅರ್ಥವನ್ನು ಸ್ಪಷ್ಟವಾಗಿ ಹೇಳುತ್ತಾರೆ—

**ತಾ ॥ ನಾಸ್ಯ ಭಕ್ತೋಽಪಿ ಯೋ ದ್ವೇಷ್ಯೋ ನ ಚಾಭಕ್ತೋಽಪಿ ಯಃ ಪ್ರಿಯಃ । ಕಿಂ ತು ಭಕ್ತ್ಯನುಸಾರೇಣ ಫಲದೋಽತಃ ಸಮೋ ಹರಿರಿತಿ ಪಾದ್ಮೇ । ಪ್ರೀತ್ಯಾ ಮಯಿ ತೇ ॥ ॥ ೨೯,೩೦,೩೧ ॥**

ಅ ॥ ಶ್ರೀಹರಿಯ ಭಕ್ತನಾದವನು ಯಾವನೊಬ್ಬನೂ ಶ್ರೀಹರಿಯ ದ್ವೇಷಕ್ಕೆ ಪಾತ್ರನಾದವನು ಇಲ್ಲ. ಅಭಕ್ತನಾದವನು ಯಾವನೊಬ್ಬನೂ. ಶ್ರೀಹರಿಗೆ ಪ್ರಿಯನಾದವನೂ ಇಲ್ಲ. ಅಂದರೆ ಅವರವರ ಭಕ್ತಿ ದ್ವೇಷಾನುಸಾರವಾಗಿಯೇ ಶುಭ ಅಶುಭ ಫಲಗಳನ್ನು ಕೊಡುವವನಾದುದರಿಂದ (ಅಂದರೆ ಭಕ್ತರಲ್ಲಿಯೇ ಪ್ರೀತಿಯನ್ನು ಮಾಡುತ್ತೇನೆ. ಅಭಕ್ತರಲ್ಲಿಯೇ ಅಪ್ರೀತಿಯನ್ನು ಮಾಡುತ್ತೇನೆ. ಭಕ್ತರಲ್ಲಿ ದ್ವೇಷವನ್ನೂ ಅಭಕ್ತರಲ್ಲಿ ಪ್ರೀತಿಯನ್ನೂ ಮಾಡಿದರೆ ನೇ ವಿಷಮನಾಗುವೆನು. ಹಾಗೆ ಮಾಡುವುದಿಲ್ಲ.) ಆದರಿಂದ ಶ್ರೀಹರಿಯು ಸಮನೇ. (ವಿಷಮನಲ್ಲ) ಭಕ್ತರು ನನ್ನಲ್ಲಿ ಪ್ರೀತಿಯಿಂದ ಇರುತ್ತಾರೆ. ॥ ೨೯,೩೦,೩೧ ॥

ಗೀ ॥ ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।
ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂ ಗತಿಂ ॥ ೩೨ ॥

ಅ ॥ ಪಾರ್ಥ=ಅರ್ಜುನನೇ, ಯೇಽಪಿ=ಯಾವ, ಪಾಪಯೋನಯಃ= (ಸ್ವತಃ ಉತ್ತಮವರ್ಣದವರೂ ಕೂಡ) ಪಾಪದಿಂದ ನೀಚಯೋನಿಯಲ್ಲಿ ಹುಟ್ಟಿದವರು, (ಸ್ವತಃ ಪುರುಷರಾದಾಗ್ಯೂ) ಸ್ತ್ರಿಯಃ= (ಪಾಪಕರ್ಮದಿಂದ ಸುದ್ಯುಮ್ನನಿಗೆ ಇಳಾ ಎಂಬುವ ಸ್ತ್ರೀತ್ವವು ಬಂದಂತೆಯೇ) ಸ್ತ್ರೀತ್ವವನ್ನು ಹೊಂದಿದವರು ವೈಶ್ಯಾಃ=ಸ್ವತಃ ಬ್ರಾಹ್ಮಣಾದಿಗಳೂ ಕೂಡ ಪಾಪಕರ್ಮದಿಂದ ವೈಶ್ಯ ಮೊದಲಾದ ನಿಕೃಷ್ಟವರ್ಣಭಾವವನ್ನು ಹೊಂದಿದವರು, ತಥಾ=ಹಾಗೆಯೇ, ಶೂದ್ರಾ ಅಪಿ=ಶೂದ್ರತ್ವವನ್ನು ಹೊಂದಿದವರು ಕೂಡ, ಮಾಂ=ನನ್ನನ್ನು, ವ್ಯಪಾಶ್ರಿತ್ಯ=ಆಶ್ರಯಿಸಿಕೊಂಡು, ಸ್ಯುಃ=ನನ್ನಲ್ಲಿ ಭಕ್ತಿಯುಳ್ಳವರು ಆಗುತ್ತಾರೋ, ತೇಽಪಿ=ಅವರೆಲ್ಲರೂ, ಪರಾಂ ಗತಿಂ=ಉತ್ತಮವಾದ ಗತಿಯನ್ನು (ಮೋಕ್ಷವನ್ನು) ಯಾಂತಿ=ಹೊಂದುತ್ತಾರೆ. ಹಿ=ನಿಶ್ಚಯವು. ॥ ೩೨ ॥

ಗೀ ॥ ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।
ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಂ ॥ ೩೩ ॥

ಅ ॥ ಭಕ್ತಾಃ=ಪರಮಾತ್ಮನ ಭಕ್ತರಾದ, ಪುಣ್ಯಾಃ=ಪುಣ್ಯವಂತರು, ಬ್ರಾಹ್ಮಣಾಃ=ಸ್ವರೂಪತಃ ಶೂದ್ರ ಮೊದಲಾದ ಹೀನವರ್ಣದವರಾದಾಗ್ಯೂ ಪುಣ್ಯವಶದಿಂದ ಬ್ರಾಹ್ಮಣರಾಗಿ ಹುಟ್ಟಿದವರೂ, ತಥಾ=ಹಾಗೆಯೇ ರಾಜರ್ಷಯಃ=ರಾಜರಾಗಿಯೂ ಋಷಿಗಳಾಗಿಯೂ ಹುಟ್ಟಿದವರು ಮೋಕ್ಷವನ್ನು ಹೊಂದುತ್ತಾರೆ. ಕಿಂ ಪುನಃ=ಹೀಗೆ ಇರಲು ಪರಮಾತ್ಮನ ಭಕ್ತರಾದವರು ಸ್ವಾಭಾವಿಕರಾದ ಸ್ತ್ರೀವೈಶ್ಯಾದಿಗಳು ಮೋಕ್ಷವನ್ನು ಹೊಂದುತ್ತಾರೆಂದು ಹೇಳತಕ್ಕದ್ದೇನಿದೆ. (ಭಕ್ತಿಯು ಸಾಧನಗಳಲ್ಲಿ ಉತ್ತಮವಾಗಿರುವುದರಿಂದಲೇ) ಅನಿತ್ಯಂ=ನಶ್ವರವಾದ, ಅಸುಖಂ=ಸುಖವಿಲ್ಲದ, ಇಮಂ=ಭಕ್ತ್ಯಾದಿಗಳಿಗೆ ಸಾಧನವಾದ, ಲೋಕಂ=ಮನುಷ್ಯದೇಹವನ್ನು ಭೂಲೋಕವನ್ನಾಗಲಿ, ಪ್ರಾಪ್ಯ=ಹೊಂದಿ, ಮಾಂ=ನನ್ನನ್ನು ಭಜಸ್ವ=ಶೀಘ್ರವಾಗಿ ಸೇವಿಸು. ॥ ೩೩ ॥

ಗೀ ॥ ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।
ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ೩೪ ॥

ಅ ॥ ಮನ್ಮನಾಃ ಭವ=ನನ್ನಲ್ಲಿಯೇ ಮನಸ್ಸುಳ್ಳವನಾಗು, ಮದ್ಭಕ್ತಃ=ನನ್ನ ಭಕ್ತನಾಗು, ಮದ್ಯಾಜೀ=ನನ್ನನ್ನು ಪೂಜಿಸುವವನಾಗು ಮಾಂ=ನನ್ನನ್ನು, ನಮಸ್ಕುರು=ನಮಸ್ಕರಿಸು, ಏವಂ=ಈ ಪ್ರಕಾರವಾಗಿ ಮತ್ಪರಾಯಣಃ=ನನ್ನನ್ನೇ ಮುಖ್ಯಾಶ್ರಯನನ್ನಾಗಿ ತಿಳಿದುಕೊಂಡು, ಆತ್ಮಾನಂ=ಮನಸ್ಸನ್ನು, ಮಯಿ=ನನ್ನಲ್ಲಿ, ಯುಕ್ತ್ವಾ=ಇರಿಸಿ, ಮಾಮೇವ=ನನ್ನನ್ನೇ, ಏಷ್ಯಸಿ=ಹೊಂದುವಿ. (ಅಂದರೆ ಮೋಕ್ಷವನ್ನು ಹೊಂದುವಿ) ॥ ೩೪ ॥

ಗೀ ॥ ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ರಾಜವಿದ್ಯಾರಾಜಗುಹ್ಯಯೋಗೋ ನಾಮ ನವಮೋಽಧ್ಯಾಯಃ ॥ ೯ ॥

ಅ ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ರಾಜವಿದ್ಯಾರಾಜಗುಹ್ಯಯೋಗವೆಂಬ ಒಂಭತ್ತನೇ ಅಧ್ಯಾಯವು ಮುಗಿಯಿತು. ॥ ೯ ॥

ಭಾ ॥ (೧) ಕುತಃ । ಕ್ಷಿಪ್ರಂ ಭವತಿ ಧರ್ಮಾತ್ಮಾ ॥ (೨) ದೇವದೇವಾಂಶಾದಿಷ್ವೇವಂ ಚೈತದ್ಭವತಿ ॥ (೩) ಉಕ್ತಂ ಚ ಶಾಂಡಿಲ್ಯಶಾಖಾಯಾಂ । ನಾವಿರತೋ ದುಶ್ಚರಿತಾನ್ನಾಭಕ್ತೋ ನಾಸಮಾಹಿತಃ । ಸಮ್ಯಗ್ಭಕ್ತೋ ಭವೇತ್ಕಶ್ಚಿದ್ವಾಸುದೇವೇಽಮಲಾಶಯಃ । ದೇವರ್ಷಯಸ್ತದಂಶಾಶ್ಚ ಭವಂತಿ ಕ್ವ ಚ ಜ್ಞಾನತ ಇತಿ ॥ (೪) ಅತೋಽನ್ಯಃ ಕಶ್ಚಿದ್ಭವತಿ ಚೇದ್ದಾಂಭಿಕತ್ವೇನ ಸೋಽನುಮೇಯಃ ॥ (೫) ಸಾಧಾರಣಪಾಪಾನಾಂ ತು ಸತ್ಸಂಗಾನ್ಮಹತ್ಯಪಿ ಕಥಂಚಿದ್ಭಕ್ತಿರ್ಭವತಿ । ಸಾಧಾರಣಭಕ್ತಿರ್ವೇತರೇಷಾಂ ॥ (೬) ನ ರತಮತಿರುಪಯಾತಿ ಯೋಽರ್ಥತೃಷ್ಣಾಂ ತಮಧಮಚೇಷ್ಟಮವೈಹಿ ನಾಸ್ಯ ಭಕ್ತಮಿತಿ ಹಿ ಶ್ರೀವಿಷ್ಣುಪುರಾಣೇ ॥ ೧ ॥

ಅ ॥ (೧) ಚೆನ್ನಾಗಿ ಭಗವದ್ವಿಷಯಕ ತತ್ವನಿಶ್ಚಯವಿದ್ದರೂ ಅತ್ಯಂತ ದುರಾಚಾರಿಯನ್ನು ಸಜ್ಜನನೆಂದು ಏತಕ್ಕೆ ತಿಳಿದುಕೊಳ್ಳುವುದೆಂದರೆ ಚೆನ್ನಾಗಿ ಯಥಾರ್ಥಜ್ಞಾನವುಳ್ಳವನಾದುದರಿಂದ ಶೀಘ್ರದಲ್ಲಿ ಸದ್ಧರ್ಮಾನುಷ್ಠಾನದಲ್ಲಿ ಮನಸ್ಸುಳ್ಳವನಾಗುತ್ತಾನೆ. (೨) ಶ್ರೀಹರಿಯ ಭಕ್ತಿಯೂ ಅತ್ಯಂತ ದುರಾಚಾರವೂ, ಎರಡೂ ಒಟ್ಟಿಗೆ ಸೇರಿದರೆ ಅವನು ಸಜ್ಜನನೆಂದು ಹೇಳಿದ್ದು ಮನುಷ್ಯರಿಗೆ ಸಂಬಂಧಪಟ್ಟದ್ದಲ್ಲ. ಮತ್ತೆ § ಚಂದ್ರ ಮೊದಲಾದ ದೇವತೆಗಳೂ, ದೇವತೆಗಳ ಅಂಶಭೂತರಾದ ಸುಗ್ರೀವಾದಿಗಳೂ ವಿಶ್ವಾಮಿತ್ರಾದಿಋಷಿಗಳೂ ಇವರ ವಿಷಯದಲ್ಲಿಯೇ ಎಂದು ತಿಳಿಯತಕ್ಕದ್ದು. (೩) ಈ ವಿಷಯವು ಶಾಂಡಿಲ್ಯಶಾಖೆಯಲ್ಲಿ ಹೇಳಿದೆ. ದುರಾಚಾರವನ್ನು ಬಿಡದಿರುವವನು, ಅಂದರೆ ಸದಾ ದುರಾಚಾರವುಳ್ಳವನು, ಮನುಷ್ಯನು ಯಾವನಾದರೊಬ್ಬನು ಸ್ವಚ್ಛಾಂತಃಕರಣವುಳ್ಳವನಾಗಿ ಶ್ರೀಪರಮಾತ್ಮನಲ್ಲಿ ಚೆನ್ನಾಗಿ ಭಕ್ತನಾಗಲಾರನು. ಹಾಗೆಯೇ ಅಭಕ್ತನು ಅಂದರೆ ಶ್ರವಣಂ ಕೀರ್ತನಂ ವಿಷ್ಣೋಃ ಸ್ಮರಣಂ ಪಾದಸೇವನಂ । **ಅರ್ಚನಂ ವಂದನಂ ದಾಸ್ಯಂ ಸಖ್ಯಮಾತ್ಮನಿವೇದನಂ । ಏವಂ ಪುಂಸಾಽರ್ಪಿತಾ ವಿಷ್ಣೌ ಭಕ್ತಿಶ್ಚೇನ್ನವಲಕ್ಷಣಾ ।** ಎಂಬುವ ಭಕ್ತಿಲಿಂಗವಿಲ್ಲದವನು ಯಾವನಾದರೊಬ್ಬನು ಸ್ವಚ್ಛಾಂತಃಕರಣವುಳ್ಳವನಾಗಿ ಶ್ರೀಹರಿಯಲ್ಲಿ ಭಕ್ತನಾಗಲಾರನು. ಮತ್ತು ವಿಷಯಗಳಲ್ಲಿಯೇ ಮನಸ್ಸನ್ನು ಇಟ್ಟವನೂ, ಯಾವನಾದರೊಬ್ಬನೂ ಸ್ವಚ್ಛಾಂತಃಕರಣವನ್ನು ಹೊಂದಿ ಶ್ರೀಕೃಷ್ಣನಲ್ಲಿ ಭಕ್ತನಾಗಲಾರನು. ಆದರೆ ದೇವತೆಗಳು ಋಷಿಗಳು ದೇವತೆಗಳ ಅಂಶದಿಂದ ಹುಟ್ಟಿದವರು ಕೆಲವು ಕಡೆ ಹಿಂದೆ ಹೇಳಿದ ಪ್ರಕಾರ ಕದಾಚಿತ್ ದುರಾಚಾರಿಗಳೂ, ಶ್ರವಣ ಕೀರ್ತನ ಮೊದಲಾದ ಭಕ್ತಿಲಿಂಗವಿಲ್ಲದವರೂ, ವಿಷಯಗಳಲ್ಲಿಯೇ ಮನಸ್ಸನ್ನು ಇಟ್ಟವರಾದಾಗ್ಯೂ ಶ್ರೀಪರಮಾತ್ಮನ ತತ್ವಜ್ಞಾನವುಳ್ಳವರಾದುದರಿಂದ ಶ್ರೀಪರಮಾತ್ಮನ ಭಕ್ತರೇ ಆಗಿರುತ್ತಾರೆ (೪) **(ಯೇ ಕಂಠಲಗ್ನತುಳಸೀನಲಿನಾಕ್ಷಮಾಲಾ ಯೇ ಬಾಹುಮೂಲಪರಿಚಿಹ್ನಿತಶಂಖಚಕ್ರಾಃ । ಯೇ ವಾ ಲಲಾಟಫಲಕೇ ಲಸದೂರ್ಧ್ವಪುಂಡ್ರಾಸ್ತೇ ವೈಷ್ಣವಾ ಭುವನಮಾಶು ಪವಿತ್ರಯಂತಿ** ಇತ್ಯಾದಿ ಪ್ರಮಾಣಗಳಿಂದ ಶಂಖಚಕ್ರಾದಿ ಚಿಹ್ನೆಗಳನ್ನು ಬಾಹುಮೂಲಗಳಲ್ಲಿ ಧರಿಸಿರುವರು ದೇವಾದಿಗಳಲ್ಲದ ಮನುಷ್ಯರೂ ಕೂಡ ದುರಾಚಾರಿಗಳಾಗಿ ಕಂಡರೂ ಶ್ರೀಹರಿಯ

§ ಚಂದ್ರನಿಗೆ ತನಗಿಂತ ಉತ್ಕೃಷ್ಟನಾದ ಬೃಹಸ್ಪತ್ಯಾಚಾರ್ಯರ ಪತ್ನೀ ಸಂಭೋಗ, ಸುಗ್ರೀವನಿಗೆ ತನ್ನ ಅಗ್ರಜನ ಭಾರ್ಯಾ ಸ್ತ್ರೀಸಂಭೋಗ, ವಿಶ್ವಾಮಿತ್ರ ಋಷಿಗಳಿಗೆ ಮೇನಕಾ ಊರ್ವಶೀ ಎಂಬ ಅಪ್ಸರ ಸ್ತ್ರೀಸಂಭೋಗ, [illegible] [illegible] [illegible] ಮೊದಲಾದ ದುರಾಚಾರವು ಕಂಡಿತ.

ಭಕ್ತರಾಗಿಯೇ ಕಾಣುವುದರಿಂದ ದೇವಮನುಷ್ಯಾದಿಗಳು ಮಾತ್ರ ದುರಾಚಾರಿಗಳಾದರೂ ಹರಿಭಕ್ತರೆಂದು ಹೇಳಿದ್ದು ಹೇಗೆ? ಎಂದರೆ—) ದೇವಮನುಷ್ಯಾದಿಗಳಲ್ಲದ ಯಾವನಾವನೊಬ್ಬ ಮನುಷ್ಯನು ಅತ್ಯಂತ ದುರಾಚಾರವುಳ್ಳವನೂ ಶ್ರವಣಕೀರ್ತನಾದಿರೂಪ ಭಕ್ತಿಚಿಹ್ನೆಗಳುಳ್ಳವನಾದರೂ, ಅತನು ಡಾಂಭಿಕ (ಶ್ರೀಪರತ್ವನ ಅಭಕ್ತ)ನೆಂದು ತಿಳಿಯಬೇಕು. (೫) (ತಮ್ಮಿಂದ ಉತ್ತಮ ಸ್ತ್ರೀಯರ ಸಂಭೋಗ, ಹರಿ ಗುರು ಸಜ್ಜನರ ನಿಂದಾದಿರೂಪವಾದ ಅತ್ಯಂತ ದುರಾಚಾರವುಳ್ಳವನು ಭಕ್ತನಾಗುವುದು ಬೇಡ ಅಗಮ್ಯಾಗಮನ ಅಭಕ್ಷ್ಯಭಕ್ಷಣ ಮೊದಲಾದ ಮಧ್ಯಮ ದುರಾಚಾರವುಳ್ಳವನು ಶಂಖ ಚಕ್ರ ಮೊದಲಾದ ಭಕ್ತಿಲಿಂಗವುಳ್ಳವನಾದರೆ ಅವನನ್ನು ಹೇಗೆ? ಎಂದರೆ—) ಅಲ್ಪ ಪಾಪಿಷ್ಠರಿಗೆ ಸತ್ಸಹವಾಸದಿಂದ ಕಥಂಚಿತ್ ಮಹಾಭಕ್ತಿಯು ಹುಟ್ಟುತ್ತದೆ. (ಅತ್ಯಂತ ದುರಾಚಾರಿಗಳಿಗೂ ಭಗವಂತನಲ್ಲಿಯೇ ಸ್ನೇಹರೂಪ ಭಕ್ತಿಯು ಅನುಭವಸಿದ್ಧವಾಗಿರುವುದರಿಂದ ಡಾಂಭಿಕನು (ಅಭಕ್ತನು) ಎನ್ನುವುದು ಹೇಗೆ ಕೂಡುತ್ತದೆ ಎಂದರೆ—) ಅತ್ಯಂತ ದುರಾಚಾರವುಳ್ಳ, ಶ್ರೀಹರಿಯ ಭಕ್ತಿಯುಳ್ಳವರಿಗೆ ಅಲ್ಪ ಭಕ್ತಿಯು ಹುಟ್ಟುತ್ತದೆ (ಮಹಾಭಕ್ತಿಯು ಹುಟ್ಟುವುದಿಲ್ಲವೆಂದು ಭಾವವು) (೬) (ಅತ್ಯಂತ ದುರಾಚಾರವುಳ್ಳವನಾದಾಗ್ಯೂ ಶ್ರವಣಾದಿರೂಪ ಭಕ್ತಿಲಿಂಗವುಳ್ಳವನು ಮಹಾಭಕ್ತನೇ ಆಗಲಿ. ಡಾಂಭಿಕನು ಅಂದರೆ ಮಹಾಭಕ್ತಿಯಿಲ್ಲದವನು ಎಂದು ಏಕೆ ಕಲ್ಪಿಸುವುದು. ಎಂದರೆ—)ಯಾವನು ವಿಷಯಗಳಲ್ಲಿಯೇ ಆಶೆಯನ್ನು ಮಾಡುತ್ತಾನೋ, ಅವನು ದಂಭಬುದ್ಧಿಯುಳ್ಳವನು. ಅಂತಹನನ್ನು ಅಧಮವ್ಯಾಪಾರವುಳ್ಳವನನ್ನಾಗಿ ತಿಳಿ. ಇಂತಹವನಿಗೆ ಮಹಾಭಕ್ತಿಯು ಹುಟ್ಟುವುದಿಲ್ಲ. ಎಂದು ಶ್ರೀವಿಷ್ಣುಪುರಾಣದಲ್ಲಿ ಹೇಳಿದೆ. ॥ ೧ ॥

ಟೀ—ಮಹಾಭಕ್ತಿಯು ದುರಾಚಾರಪರಿಹಾರಕ್ಕೆ ಕಾರಣವೆಂದು ಹೇಳಿದ್ದರಿಂದ ದುರಾಚಾರವೂ ಮಹಾಭಕ್ತಿಯೂ ಎರಡೂ ಏಕತ್ರ ಕೂಡುವುದಿಲ್ಲವೆನ್ನುತ್ತಾರೆ—

ಭಾ ॥ (೧) ಸಾ ಶ್ರದ್ದಧಾನಸ್ಯ ವಿವರ್ಧಮಾನಾ ವಿರಕ್ತಿಮನ್ಯತ್ರ ಕರೋತಿ ಪುಂಸಾಮಿತಿ ಚ ॥ (೨) ವೇದಾಸ್ತ್ವಧೀತಾ ಮಮ ಲೋಕನಾಥ ತಪ್ತಂ ತಪೋ ನಾನೃತಮುಕ್ತಪೂರ್ವಂ । ಪೂಜಾಂ ಗುರೂಣಾಂ ಸತತಂ ಕರೋಮಿ ಪರಸ್ಯ ಗುಹ್ಯಂ ನ ಚ ಭಿನ್ನಪೂರ್ವಂ । ಗುಪ್ತಾನಿ ಚತ್ವಾರಿ ಯಥಾಗಮಂ ಮೇ ಶತ್ರೌ ಚ ಮಿತ್ರೇ ಚ ಸಮೋಽಸ್ಮಿ ನಿತ್ಯಂ । ತಂ ಚಾಪಿ ದೇವಂ ಶರಣಂ ಪ್ರಪನ್ನ ಏಕಾಂತಭಾವೇನ ಭಜಾಮ್ಯಜಸ್ರಂ । ಏತೈರ್ವಿಶೇಷೈಃ ಪರಿಶುದ್ಧಸತ್ತ್ವಃ ಕಸ್ಮಾನ್ನ ಪಶ್ಯೇಯಮನಂತಮೇನಮಿತಿ ಮೋಕ್ಷಧರ್ಮೇ ಆಚಾರಸ್ಯ ಸಾಧನತ್ವೋಕ್ತೇಶ್ಚ । ಜ್ಞಾನಾಭಾವೇ ಚ ಸಮ್ಯಗ್ಭಕ್ತ್ಯಭಾವಾತ್॥ (೩) (1) ತಥಾ ಹಿ ಗೌತಮಖಿಲೇಷು । ವಿನಾ ಜ್ಞಾನಂ ಕುತೋ ಭಕ್ತಿಃ ಕುತೋ ಭಕ್ತಿಂ ವಿನಾ ಚ ತದಿತಿ । (2) ಭಕ್ತಿಃ ಪರೇಶಾನುಭವೋ ವಿರಕ್ತಿರನ್ಯತ್ರ ಚೈತತ್ತ್ರಿಕಮೇಕಕಾಲಮಿತಿ ಭಾಗವತೇ ॥ ೨ ॥ ॥ ೩೧—೩೪ ॥

ಅ ॥ (೧) ಹರಿಭಕ್ತಿಯು ಶ್ರದ್ಧೆಯನ್ನು ಹೊಂದಿರುವ ಪುರುಷನಿಗೆ ವಿಶೇಷವಾಗಿ ಅಭಿವೃದ್ಧಿಯನ್ನು ಹೊಂದಿ ವಿಷಯಗಳಲ್ಲಿ ವಿರಕ್ತಿಯನ್ನುಂಟುಮಾಡುತ್ತದೆ. (೨) ಸರ್ವಲೋಕಕ್ಕೆ ಸ್ವಾಮಿಯಾದವನೇ, ನಾನು ವೇದಗಳನ್ನು ವಿಧಿಪೂರ್ವಕವಾಗಿ ಅಧ್ಯಯನಮಾಡಿರುತ್ತೇನೆ. ತಪಸ್ಸನ್ನು ಮಾಡಿದ್ದೇನೆ, ಅನೃತವನ್ನು (ಸುಳ್ಳು ಮಾತನ್ನು) ಯಾವಾಗಲೂ ಹೇಳಲಿಲ್ಲ. ನಿರಂತರದಲ್ಲಿಯೂ ಗುರುಗಳ ಪೂಜೆಯನ್ನು ಮಾಡುತ್ತೇನೆ. ಇನ್ನೊಬ್ಬನ ಗೋಪ್ಯ ವಿಷಯವನ್ನು ರಾಜಾದಿಗಳಲ್ಲಿ ಸೂಚಿಸುವುದಿಲ್ಲ. ಉಪಸ್ಥ, ಉದರ, ಪಾಣಿ ವಾಕ್ ಎಂಬೀ ನಾಲ್ಕು ಕರ್ಮೇಂದ್ರಿಯಗಳು ಶಾಸ್ತ್ರಾನುಸಾರ ರಕ್ಷಿಸಲ್ಪಟ್ಟಿವೆ.

(ಅಂದರೆ (1) ಉಪಸ್ಥಗುಪ್ತಿ ಎಂದರೆ ಇತರ ಸ್ತ್ರೀಸಂಪರ್ಕ ಮಾಡದೆ ವಿಹಿತ ಕಾಲದಲ್ಲಿ ತನ್ನ ಪತ್ನಿಯನ್ನು ಸಂತೋಷಗೊಳಿಸುವುದು. (2) ಉದರಗುಪ್ತಿಃ= ಮಿತಾಹಾರದಿಂದ ಇರುವುದು. (3) ಬಾಹುಗುಪ್ತಿಃ= ದ್ಯೂತ, ಸ್ತ್ರೀಯ ಪರತಾಡನ ಇವುಗಳನ್ನು ಮಾಡದಿರುವುದು. (4) ವಾಗ್ಗುಪ್ತಿಃ= ಮಿತವಾದ ವಚನವು. ವ್ಯರ್ಥವಾಗಿ ಮಾತನಾಡದೆ ಇರುವುದು. ನಾನು ಶತ್ರುವಿನಲ್ಲಿಯೂ ಮಿತ್ರನಲ್ಲಿಯೂ ನಿತ್ಯದಲ್ಲಿಯೂ ಸಮನಾಗಿರುತ್ತೇನೆ. ನಿಗೃಹೀತವಾದ ಮನಸ್ಸಿನಿಂದ ಕ್ರೀಡಾದಿ ಗುಣವಿಶಿಷ್ಟನಾದ ರಕ್ಷಕನಾದ ಶ್ರೀಪರಮಾತ್ಮನನ್ನು ಶರಣು ಹೊಂದಿ ನಿರಂತರದಲ್ಲಿಯೂ ಭಜಿಸುತ್ತಿದ್ದೇನೆ. ಹಿಂದೆ ಹೇಳಿದ ಸದಾಚಾರರೂಪ ಉಪಾಯಗಳಿಂದ ಪರಿಶುದ್ಧವಾದ ಅಂತಃಕರಣವುಳ್ಳವನಾಗಿ ನಾಶವಿಲ್ಲದ ಶ್ರೀಪರಮಾತ್ಮನನ್ನು ಏಕೆ ನೋಡಲಾರೆನು, ಎಂದು ಮೋಕ್ಷಧರ್ಮದಲ್ಲಿ ಸದಾಚಾರವು ಜ್ಞಾನಕ್ಕೆ ಸಾಧನವೆಂದು ಹೇಳಿದೆ. ಯಥಾರ್ಥಜ್ಞಾನವು ಇಲ್ಲವಾದರೆ ಸಮ್ಯಕ್ ಭಕ್ತಿಯು ಹುಟ್ಟುವುದಿಲ್ಲ. (೩) (1) ಗೌತಮಖಿಲಗಳಲ್ಲಿ ಹೀಗೆಯೇ ಹೇಳಿದೆ. ಮಾಹಾತ್ಮ್ಯಜ್ಞಾನವು ಇಲ್ಲದೆ ಶುದ್ಧ ಭಕ್ತಿಯು ಹುಟ್ಟುವುದಿಲ್ಲ. ಭಕ್ತಿಯು ಇಲ್ಲದೆ ಅಪರೋಕ್ಷಜ್ಞಾನವು ಹುಟ್ಟುವುದಿಲ್ಲ. (2)ಭಕ್ತಿಯು, ಸರ್ವೋತ್ತಮನಾದ ಶ್ರೀಪರಮಾತ್ಮನ ಜ್ಞಾನವಿಶೇಷವು. ವಿಷಯಗಳಲ್ಲಿ ವಿರಕ್ತಿಯು ಇವು ಮೂರು ಏಕಕಾಲದಲ್ಲಿರುತ್ತವೆ, ಎಂದು ಭಾಗವತದಲ್ಲಿದೆ. ॥ ೨ ॥ ॥ ೩೧-೩೪ ॥

## ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ನವಮೋಽಧ್ಯಾಯಃ ॥ ೯ ॥

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಶ್ರೀಭಗವದ್ಗೀತಾಭಾಷ್ಯದಲ್ಲಿ ಒಂಭತ್ತನೇ ಅಧ್ಯಾಯವು ಮುಗಿಯಿತು. ॥ ೯ ॥

ಟೀ — ಸತ್ಯಾಧಿಕಃ ಪುಲ್ಕಸೋಽಪಿ ಯಸ್ತು ಭಾಗವತಸ್ಸದಾ ಇತ್ಯಾದಿ ಪ್ರಮಾಣಗಳಿಂದ ಶ್ರೀಪರಮಾತ್ಮನನ್ನು ಆಶ್ರಯಿಸಿಕೊಂಡಿರುವವರು ಎಲ್ಲರೂ ಪುಣ್ಯವಂತರೇ ಆಗಿರುತ್ತಾರೆ. ಆದಕಾರಣ ಮಾಂಹಿ ಪಾರ್ಥ ಎಂಬುವಲ್ಲಿ ಸ್ತ್ರೀ ವೈಶ್ಯ ಶೂದ್ರರಲ್ಲಿ ಪಾಪಯೋನಯಃ ಎಂಬುವ ವಿಶೇಷಣವು ಬ್ರಾಹ್ಮಣರಾಜರ್ಷಿಗಳಲ್ಲಿ ಪುಣ್ಯಾಃ ಎಂಬುವ ವಿಶೇಷಣವು ಹೇಳಿದ್ದು ಹೇಗೆ ಕೂಡುತ್ತದೆಂದರೆ—

**ತಾ ॥ (೧) ಪಾಪಾದಿಕಾರಿತಾಶ್ಚೈವ ಪುಂಸಾಂ ಸ್ವಾಭಾವಿಕಾ ಅಪಿ । ವಿಪ್ರತ್ವಾದ್ಯಾಸ್ತತ್ರ ಪುಣ್ಯಾಃ ಸ್ವಾಭಾವ್ಯಾ ಏವ ಮುಕ್ತಿಗಾಃ ॥ (೨) ಯಾಂತಿ ಸ್ತ್ರೀತ್ವಂ ಪುಮಾಂಸೋಽಪಿ ಪಾಪತಃ ಕಾಮತೋಽಪಿ ವಾ ॥ (೩) ನ ಸ್ತ್ರಿಯೋ ಯಾಂತಿ ಪುಂಸ್ತ್ವಂ ತು ಸ್ವಭಾವಾದೇವ ಯಾಃ ಸ್ತ್ರಿಯಃ ॥ (೪) ಪುಂಸಾ ಸಹೈವ ಪುಂದೇಹೇ (ಹ)ಸ್ಥಿತಿಃ ಸ್ಯಾದ್ವರದಾನತಃ । ತಜ್ಜನ್ಮನಿ ॥ (೫) ವರಾಃ ಪಾಪಜಾತಾಭ್ಯೋ ನಿಜಸತ್ಸ್ತ್ರಿಯಃ ॥ (೬) ಸರ್ವೇಷಾಮಪಿ ಜೀವಾನಾಮಂತ್ಯದೇಹೋ ಯಥಾ ನಿಜಃ । ಮುಕ್ತೌ ತು(ಚ) ನಿಜಭಾವಃ ಸ್ಯಾತ್ಕರ್ಮಭೋಗಾಂಸ್ತತೋಽಪಿ ಚೇತಿ ಭವಿಷ್ಯತ್ಪರ್ವವಚನಾತ್ಪಾಪಯೋನಯಃ ಪುಣ್ಯಾ ಇತಿ ವಿಶೇಷಣಂ ॥ ೩೨,೩೩,೩೯ ॥**

ಅ ॥ (೧) ಪುರುಷರಿಗೆ ವಿಪ್ರ ಮೊದಲಾದ ವರ್ಣಗಳು ಸ್ವಾಭಾವಿಕಗಳು ಪಾಪಪುಣ್ಯರೂಪ ಉಪಾಧಿನಿಮಿತ್ತಕಗಳಾಗಿಯೂ ಇರುತ್ತವೆ. (ಅಂದರೆ — ಬ್ರಾಹ್ಮಣಾದ್ಯುತ್ತಮವರ್ಣದವರಿಗೆ ಕ್ಷತ್ರಿಯಮೊದಲಾದ ಅಧಮವರ್ಣದ ಪ್ರಾಪ್ತಿಯು ಪಾಪಕರ್ಮದಿಂದ, ಸ್ವತಃ ಶೂದ್ರಮೊದಲಾದ ಅಧಮವರ್ಣದವರಿಗೆ ವೈಶ್ಯ

ಮೊದಲಾದ ಉತ್ತಮವರ್ಣಪ್ರಾಪ್ತಿಯು ಪುಣ್ಯಕರ್ಮದಿಂದ. ಅದರಲ್ಲಿ ಸ್ವಾಭಾವಿಕಗಳೇ ಆದ ಬ್ರಾಹ್ಮಣತ್ವಾದಿಗಳು ಪುಣ್ಯನಿಮಿತ್ತಕಗಳೆನಿಸುತ್ತವೆ. ಮುಕ್ತಿಯಲ್ಲಿ ಉಳಿಯುವ ಬ್ರಾಹ್ಮಣತ್ವಾದಿಗಳು ಸ್ವಾಭಾವಿಕಗಳು. (೨) (ಹೇಗೆ ಸ್ವತಃ ಬ್ರಾಹ್ಮಣಾದಿಗಳಿಗೆ ಕ್ಷತ್ರಿಯತ್ವಾದಿಗಳು, ಸ್ವತಃ ಕ್ಷತ್ರಿಯಾದಿಗಳಿಗೆ ಬ್ರಾಹ್ಮಣತ್ವಾದಿಗಳು ಬರುತ್ತವೋ, ಹಾಗೆಯೇ ಸ್ವಾಭಾವಿಕ ಪುರುಷರಿಗೆ ಪಾಪದಿಂದ ಸ್ತ್ರೀಜನ್ಮವು. ಸ್ವಾಭಾವಿಕ ಸ್ತ್ರೀಯರಿಗೆ ಪುರುಷ ಜನ್ಮವು ಬರುವುದೋ ಏನು? ಎಂದರೆ–) ಪುರುಷರೂ ಕೂಡ ಪಾಪಕರ್ಮದಿಂದ ಅಥವಾ ಕಾಮದಿಂದ ಸ್ತ್ರೀತ್ವವನ್ನು ಹೊಂದುತ್ತಾರೆ. (ಅಂದರೆ ಸುದ್ಯುಮ್ನನು ಪಾಪಕರ್ಮದಿಂದ ಇಳಾ ಎಂಬುವ ಸ್ತ್ರೀಯಾಗಿಯೂ ಅಗ್ನಿಪುತ್ರರು ಕಾಮದಿಂದ ಅಪ್ಸರ ಸ್ತ್ರೀಯರಾಗಿಯೂ ಹುಟ್ಟಿರುತ್ತಾರೆ.) (೩) (ಇಳಾ ಎಂಬುವಳು ಸುದ್ಯುಮ್ನನೆಂಬುವ ಪುರುಷನಾಗಿ ಹುಟ್ಟಿರುವುದರಿಂದ ಸ್ತ್ರೀಯರು ಪುರುಷರಾಗುವುದಿಲ್ಲ, ಎಂಬುವುದು ಹೇಗೆಂದರೆ–) ಸ್ವಾಭಾವಿಕವಾಗಿಯೇ ಯಾರು ಸ್ತ್ರೀಯರೋ, ಅಂತಹ ಸ್ತ್ರೀಯರು ಪುರುಷರಾಗಿ ಹುಟ್ಟುವುದಿಲ್ಲ. (೪) (ಸ್ವಾಭಾವಿಕವಾಗಿಯೇ ಸ್ತ್ರೀಯಳಾದ ಅಂಬಾದೇವಿಯು ಸ್ಥೂಣಾಕರ್ಣನೆಂಬುವ ಗಂಧರ್ವನ ವರದಿಂದ ಶಿಖಂಡಿಯಾಗಿ ಹುಟ್ಟಿದ್ದಾಳೆ, ಎಂದರೆ-) (ಅಂಬಾದೇವಿಯು) ಸ್ಥೂಣಾಕರ್ಣನ ವರದಿಂದ ಸ್ಥೂಣಾಕರ್ಣನ ದೇಹದಲ್ಲಿ ಸ್ಥೂಣಾಕರ್ಣನಿಂದ ಕೂಡಿಕೊಂಡೇ ಆ ಜನ್ಮದಲ್ಲಿ ಇದ್ದುದು ಮಾತ್ರ. (ಅವಳಿಗೆ ಸ್ವತಂತ್ರವಾಗಿ ಪುರುಷ ದೇಹವು ಬರಲೇ ಇಲ್ಲ)(೫) (ಸ್ವಭಾವತಃ ಪುರುಷರಿಗೆ ಪಾಪಕರ್ಮದಿಂದ ಸ್ತ್ರೀ ಜನ್ಮವು ಬಂದರೆ ಅಂತಹ ಸ್ತ್ರೀಯರೂ ಸ್ವಾಭಾವಿಕ ಸ್ತ್ರೀಯರೂ ಇವರ ಮಧ್ಯದಲ್ಲಿ ಶ್ರೇಷ್ಠರು ಯಾರು? ಎಂದರೆ) ಪಾಪಕರ್ಮಗಳಿಂದ ಹುಟ್ಟಿದ ಸ್ತ್ರೀಯರಿಗಿಂತ ಸ್ವಾಭಾವಿಕರೂ, ನಿರ್ದುಷ್ಟರೂ ಆದ ಸ್ತ್ರೀಯರು ಶ್ರೇಷ್ಠರು. (೬) ಸ್ವಾಭಾವಿಕ ದೇಹವು ಉಳಿಯಲಿಕ್ಕೆ ಮುಕ್ತಿಕಾಲಕ್ಕಿಂತ ಬೇರೆ ಕಾಲವಿದೆ ಎನ್ನುತ್ತಾರೆ–) ಎಲ್ಲಾ ಜೀವರಿಗೂ ಚರಮದೇಹವು ಸ್ವಭಾವವನ್ನನುಸರಿಸಿಕೊಂಡಿರುವುದು. ಮೋಕ್ಷದಲ್ಲಿ ಸ್ವಾಭಾವಿಕವಾದ ಬ್ರಾಹ್ಮಣತ್ವಾದಿಭಾವವು ಪ್ರಾರಬ್ಧಕರ್ಮವು ಮುಗಿದ ಮೇಲೆ ಚರಮದೇಹದಿಂದ ಹೊರಟು ಸಾಂತಾನಿಕ ಲೋಕದಲ್ಲಿ ಆವಾಸ ಮಾಡುವ ಸಮಯದಲ್ಲಿ ಅಥವಾ ಸ್ವತಃ ವೃಕ್ಷಾದಿ ಜೀವರಿಗೆ ಮನುಷ್ಯತ್ವಾದಿಗಳನ್ನು ಹೊಂದಿಸಿಕೊಡುವ ಕರ್ಮಭೋಗಾನಂತರದಲ್ಲಿ ಬರುವುದು, ಎಂಬುವ ಭವಿಷ್ಯತ್ಪರ್ವದ ವಚನವನ್ನನುಸರಿಸಿ ಅವಿರುದ್ಧವಾಗಿ ಅರ್ಥ ಹೇಳಲಿಕ್ಕೆ ಬರುವುದರಿಂದ ಪಾಪಯೋನಯಃ ಶುದ್ಧಾಃ ಎಂಬುವ ವಿಶೇಷಣವು ಯುಕ್ತವು. (ಏವಂಚ ನೀಚ ಯೋನಿಯಲ್ಲಿ ಹುಟ್ಟಿರುವ ಅಸ್ವಾಭಾವಿಕರಾದ ಸ್ತ್ರೀಯರೂ, ವೈಶ್ಯರೂ, ಶೂದ್ರರೂ, ಬ್ರಾಹ್ಮಣರೂ, ರಾಜರ್ಷಿಗಳೂ ಎಲ್ಲರೂ ಉತ್ತಮ ಗತಿಯನ್ನು ಹೊಂದುತ್ತಾರೆಂದನ್ನುವಾಗ ಪುಣ್ಯವಂತರಾದ ಸ್ವಾಭಾವಿಕರೇ ಆದ ಸ್ತ್ರೀಯರು ವೈಶ್ಯ ಮೊದಲಾದವರು ಮೋಕ್ಷವನ್ನು ಹೊಂದುತ್ತಾರೆಂದು ಹೇಳತಕ್ಕದ್ದೇನಿದೆ?) ಎಂದು ಹೇಳಿದಂತೆ ಆಯಿತು. ॥ ೩೨,೩೩ ॥

## ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾತಾತ್ಪರ್ಯನಿರ್ಣಯೇ ನವಮೋಽಧ್ಯಾಯಃ ॥ ೯ ॥

● ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾತಾತ್ಪರ್ಯನಿರ್ಣಯದಲ್ಲಿ ಶ್ರೀಮಹಿಮಾವರ್ಣನ ರೂಪವಾದ (ಭಕ್ತಿಯೋಗ ಎಂಬುವ) ಒಂಭತ್ತನೇ ಅಧ್ಯಾಯವು ಮುಗಿಯಿತು. ॥ ೯ ॥

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಃ ॥

# ಹತ್ತನೇ ಅಧ್ಯಾಯವು.

ಟೀ—೬ನೇ ಅಧ್ಯಾಯದಲ್ಲಿ ಧ್ಯಾನಯೋಗವನ್ನು ಹೇಳಿರುವರು. ಆ ಧ್ಯಾನಕ್ಕಾಗಿ ಶ್ರೀಪರಮಾತ್ಮನ ವಿಭೂತಿರೂಪಗಳನ್ನು ಈ ಅಧ್ಯಾಯದಲ್ಲಿ ಹಂತ ತೇ ಕಥಯಿಷ್ಯಾಮಿ ಇತ್ಯಾದಿಗಳಿಂದ ಮುಂದಕ್ಕೆ ಹೇಳುವರು. ಆದಿಯಲ್ಲಿ ಈಗ ದೇವತೆಗಳನ್ನೂ ಮಹರ್ಷ್ಯಾದಿಗಳನ್ನೂ ಸಾಮರ್ಥ್ಯಾತಿಶಯದಿಂದ ಕೂಡಿದವನಾಗಿ ಮಾಡೋಣರೂಪವಾದ ಮಹಿಮಾತಿಶಯವನ್ನು ಶ್ರೀಪರಮಾತ್ಮನಿಗೆ ಹೇಳುತ್ತಾರೆ—

ಗೀ ॥ ॥ ಶ್ರೀಭಗವಾನುವಾಚ ॥

**ಓಂ ॥ ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ ॥ ೧ ॥**

ಅ ॥ ಶ್ರೀಭಗವಾನ್=ಶ್ರೀಕೃಷ್ಣಪರಮಾತ್ಮನು. ಉವಾಚ=ಉಪದೇಶಮಾಡುತ್ತಾನೆ ಮಹಾಬಾಹೋ= ಅರ್ಜುನನೇ, ಭೂಯ ಏವ=ಮತ್ತು, ಯತ್=ಯಾವ ಮಾತನ್ನು. ಅಹಂ=ನಾನು, ಪ್ರೀಯಮಾಣಾಯ= ನನ್ನ ಮಾತನ್ನು ಕೇಳಿ ಸಂತೋಷವನ್ನು ಹೊಂದತಕ್ಕ, ತೇ=ನಿನಗೋಸ್ಕರ, ಹಿತಕಾಮ್ಯಯಾ=ಹಿತವನ್ನುಂಟುಮಾಡುವದೆಂಬುವ ಇಚ್ಛೆಯಿಂದ, ವಕ್ಷ್ಯಾಮಿ=ಹೇಳುವೆನೋ. ಮೇ=ನನ್ನ. ಪರಮಂ ವಚಃ=ಅತ್ಯುತ್ತಮಮಾಹಾತ್ಮ್ಯಪ್ರತಿಪಾದಕವಾದ ಮಾತನ್ನು, ಶೃಣು=ಕೇಳಿ ಅದರಲ್ಲಿ ಆಸಕ್ತಿಯನ್ನು ಮಾಡು. ॥೧॥

**ಭಾ ॥ ಓಂ ॥ ಉಪಾಸನಾರ್ಥಂ ವಿಭೂತೀರ್ವಿಶೇಷಕಾರಣತ್ವಂ ಚ ಕೇಷಾಂಚಿದನೇನಾಧ್ಯಾಯೇನಾಹ ॥ ಪ್ರೀಯಮಾಣಾಯ । ಶ್ರುತ್ವಾ ಸಂತೋಷಂ ಪ್ರಾಪ್ನುವತೇ ॥ ೧ ॥**

ಅ ॥ ಉತ್ತಮಾಧಿಕಾರಿಗಳಿಗೆ ಶ್ರೀಪರಮಾತ್ಮನನ್ನು ವಿಶೇಷತಃ ಉಪಾಸನಮಾಡುವುದಕ್ಕಾಗಿ ಶ್ರೀಪರಮಾತ್ಮನ ವಿಭೂತಿರೂಪಗಳನ್ನು ಮತ್ತು ಶ್ರೀಪರಮಾತ್ಮನು ಬುದ್ಧಿಮೊದಲಾದವುಗಳಿಗೂ ಮಹರ್ಷ್ಯಾದಿಗಳಿಗೂ ವಿಶೇಷಕಾರಣನೆಂಬುವುದನ್ನು ಈ ಅಧ್ಯಾಯದಲ್ಲಿ ವಿವರಿಸುತ್ತಾರೆ. ಪ್ರೀಯಮಾಣಾಯ= ಕೇಳಿ ಸಂತೋಷವನ್ನು ಹೊಂದತಕ್ಕ ನಿನಗೆ ॥೧॥

ಟೀ—ಶ್ರೀಪರಮಾತ್ಮನ ಮಹಿಮೆಯನ್ನು ಹೇಳುತ್ತಾನೆ—

**ಗೀ ॥ ನ ಮೇ ವಿದುಃ ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥ ೨ ॥**

ಅ ॥ ಸುರಗಣಾಃ=ದೇವತೆಗಳ ಸಮೂಹಗಳು, ಮಹರ್ಷಯಃ=ಮಹರ್ಷಿಗಳೂ, ಮೇ=ನನ್ನ ಪ್ರಭವಂ=ಮಹಿಮೆಯನ್ನು, ನ ವಿದುಃ=ತಿಳಿಯಲಾರರು ಚ=ಮತ್ತು, ಪ್ರಭವಂ=ದೇವತೆಗಳಿಗೆ ಮೊದಲಾದ ಜಗತ್ತಿಗೆ ನನ್ನಿಂದ ಆಗತಕ್ಕ ಉತ್ಪತ್ತಿಯನ್ನು, ನ ವಿದುಃ=ತಿಳಿಯುವುದಿಲ್ಲ. ಹಿ=ಏಕೆ ನನ್ನ ತಿಳಿಯಲಾರರೆಂದರೆ, ಅಹಂ=ನಾನು ದೇವಾನಾಂ=ಬ್ರಹ್ಮಾದಿ ದೇವತೆಗಳಿಗೂ, ಮಹರ್ಷೀಣಾಂ=ಮಹರ್ಷಿಗಳಿಗೂ, ಸರ್ವಶಃ=ಮನುಷ್ಯ ಮೊದಲಾದವರಿಗೆಲ್ಲರಿಗೂ, ಆದಿಃ=ಕಾರಣನು

ಭಾ ॥ (೧) ಪ್ರಭವಂ ಪ್ರಭಾವಂ । ಮದೀಯಾಂ ಜಗದುತ್ಪತ್ತಿಂ ವಾ । ತದ್ವರತ್ವಾತ್ತಸ್ಯೇತ್ಯುಚ್ಯತೇ ॥ (೨) ಯದ್ಯಸ್ತಿ ತರ್ಹಿ ದೇವಾದಯೋ ಜಾನಂತಿ ಸರ್ವಜ್ಞತ್ವಾದತೋ ನಾಸ್ತೀತಿ ಭಾವಃ ॥ (೩) ಅಹಮಾದಿರ್ಹೀತಿ ತೂತ್ಪತ್ತಿರಪಿ ಯಸ್ಯ ವಶಾ ಕುತಸ್ತಸ್ಯ ಜನಿರಿತಿ ಜ್ಞಾಪನಾರ್ಥಂ ॥ (೪) ಅಹಂ ಸರ್ವಸ್ಯ ಜಗತಃ ಪ್ರಭವಃ ಪ್ರಲಯಸ್ತಥೇತಿ ಚೋಕ್ತಂ ॥ (೫) ಉಕ್ತಂ ಚೈತತ್ಸರ್ವಮನ್ಯತ್ರಾಪಿ । ಕೋ ಅದ್ಧಾ ವೇದ ಕ ಇಹ ಪ್ರವೋಚತ್ । ಕುತ ಆಜಾತಾ ಕುತ ಇಯಂ ವಿಸೃಷ್ಟಿಃ । ಅರ್ವಾಗ್ದೇವಾ ಅಸ್ಯ ವಿಸರ್ಜನೇನಾಥಾ ಕೋ ವೇದ ಯತ ಆ ಬಭೂವೇತಿ ॥ (೬) ನ ತತ್ತ್ವಭಾಮೃಷಯಶ್ಚ ದೇವಾ ವಿದುಃ ಕುತೋಽನ್ಯೇಽಲ್ಪಧೃತಿಪ್ರಮಾಣಾ ಇತ್ಯೃಗ್ವೇದಖಿಲೇಷು ॥ (೭) ಅನ್ಯಸ್ತ್ವರ್ಥೋ ಯೋ ಮಾಮಜಮಿತಿ ವಾಕ್ಯಾದೇವ ಜ್ಞಾಯತೇ ॥ ೨ ॥

ಅ ॥ (೧) ಪ್ರಭವಂ=ಮಹಿಮೆಯನ್ನು, ಮತ್ತು ಸಾಮರ್ಥ್ಯಾತಿಶಯವನ್ನು, ಅಥವಾ ನಾನು ಮಾಡತಕ್ಕ ಬ್ರಹ್ಮರುದ್ರಾದಿ ಜಗತ್ತಿನ ಉತ್ಪತ್ತಿಯನ್ನು. (ಮೇ ಜಗದುತ್ಪತ್ತಿಃ=ನನ್ನ ಜಗತ್ತಿನ ಉತ್ಪತ್ತಿಯು ಎಂಬುದು ಹೇಗೆ ಕೂಡುತ್ತದೆ ಎಂದರೆ—) (ಜಗದುತ್ಪತ್ತಿಯು) ಶ್ರೀಪರಮಾತ್ಮನ ಅಧೀನವಾಗಿದ್ದ ಪ್ರಯುಕ್ತ, ತಸ್ಯ=ಅವನದ್ದು (ಮೇ=ನನ್ನದ್ದು) ಎಂದು ಹೇಳಲ್ಪಡುತ್ತದೆ. (೨) ಶ್ರೀಪರಮಾತ್ಮನ ಮಹಿಮೆಯಂತೆಯೂ, ಜಗತ್ತಿನ ಉತ್ಪತ್ತಿಯಂತೆಯೂ, ಶ್ರೀಪರಮಾತ್ಮನಿಗೂ ಉತ್ಪತ್ತಿಯು ಇರುತ್ತಿದ್ದರೆ ಸರ್ವಜ್ಞರಾದುದರಿಂದ ದೇವಾದಿಗಳೂ ಸಾಮಾನ್ಯವಾಗಿಯಾದರೂ ತಿಳಿಯುತ್ತಿದ್ದರು ದೇವಾದಿಗಳು ಸಾಮಾನ್ಯವಾಗಿಯೂ ಶ್ರೀಹರಿಯ ಉತ್ಪತ್ತಿಯನ್ನು ತಿಳಿಯುವುದೇ ಇಲ್ಲ ಆದಕಾರಣ ಶ್ರೀಹರಿಯ ಉತ್ಪತ್ತಿಯು ಸರ್ವಥಾ ಎಲ್ಲಿಯೂ ತೋರದಿರುವುದರಿಂದ ಶ್ರೀಪರಮಾತ್ಮನಿಗೆ ಸರ್ವಥಾ ಉತ್ಪತ್ತಿಯು ಇಲ್ಲವೇ ಇಲ್ಲ. (ಅಂದರೆ ಶ್ರೀಹರಿಯ ಮಹಿಮಾದಿಗಳನ್ನು ಸಾಮಾನ್ಯತಃ ತಿಳಿದಿದ್ದರೂ ವಿಶೇಷವಾಗಿಯೇ ತಿಳಿಯುವುದಿಲ್ಲ) (೩) ಸರ್ವಜಗತ್ತಿಗೆ ಅವಾಂತರಕಾರಣರೆಂದು ಪ್ರಸಿದ್ಧರಾದ ಬ್ರಹ್ಮಾದಿಗಳ ಉತ್ಪತ್ತಿಯೂ ಯಾವ ಶ್ರೀಪರಮಾತ್ಮನ ಅಧೀನವಾಗಿದೆಯೋ, ಅಂತಹ ಶ್ರೀಪರಮಾತ್ಮನಿಗೆ ಉತ್ಪತ್ತಿಯು ಯಾರಿಂದಾಗುವುದು? ಅಂದರೆ (ಅಂತಹ ಶ್ರೀಪರಮಾತ್ಮನಿಗೆ ಜನಕನು ಯಾರು? ಜನಕನು ಯಾರೂ ಬ್ಬನೂ ಇಲ್ಲ ಎಂದು ತಿಳಿಸುವುದಕ್ಕಾಗಿ ಅಹಮಾದಿರ್ಹಿ ಎಂದು ಹೇಳಿದ್ದು) (೪) (ಅಹಮಾದಿಃ ಎಂಬುವಲ್ಲಿ ಸರ್ವಜಗತ್ತಿನ ಉತ್ಪತ್ತಿಯು ಶ್ರೀಹರಿಯ ಅಧೀನವೆಂದು ಹೇಳುವುದಿಲ್ಲ. ಮತ್ತೆ ದೇವಾದಿಗಳ ಉತ್ಪತ್ತಿಯು ಮಾತ್ರ ಭಗವದಧೀನವೆಂದು ಹೇಳುತ್ತದೆ, ಎಂದರೆ ದೇವಾನಾಂ ಮಹರ್ಷೀಣಾಂ ಚ ಎಂಬುವ ಶಬ್ದದಿಂದ ಚೇತನ ಅಚೇತನ ನಿಖಿಲ ಜಗತ್ತನ್ನು ಇಟ್ಟುಕೊಳ್ಳಬೇಕು. ಏಕೆ [illegible] ವನ್ನು ಇಟ್ಟುಕೊಳ್ಳಬೇಕೆಂದರೆ-) ನಾನು ಚೇತನಾಚೇತನ ನಿಖಿಲ ಜಗತ್ತಿಗೆ ಉತ್ಪಾದಕನು, [illegible] ಕನು. ಎಂದೂ ಹೇಳಿದೆ. (೫) ಶ್ರೀಹರಿಯ ಮಹಿಮೆಯನ್ನು ವಿಶೇಷವಾಗಿ ತಿಳಿಯುವುದು [illegible] ಶ್ರೀಹರಿಯಿಂದಾಗುವ ಜಗದುತ್ಪತ್ತಿಯನ್ನು ವಿಶೇಷವಾಗಿ ತಿಳಿಯದಿರುವುದು. ಶ್ರೀಹರಿಗೆ ಉತ್ಪತ್ತಿಯೇ ಇಲ್ಲ ಎಂಬುವುದು. ಎಂಬೀ ಮೂರು ಅರ್ಥಗಳು ಬೇರೆ ಕಡೆಯಲ್ಲಿಯೂ [illegible] ವಿಧವಾದ ಜಗತ್ಸೃಷ್ಟಿಯು ಯಾವ ಕಾರಣದಿಂದ ಆಯಿತು? ಯಾವ ಪುರುಷನು [illegible] ವಿಶೇಷಾಕಾರವಾಗಿ ತಿಳಿಯುತ್ತಾನೆ ಯಾವನು ಈ ಲೋಕದಲ್ಲಿ ಉಪದೇಶಿಸಿರುವನು? [illegible] ವನ್ನು ಚೆನ್ನಾಗಿ ತಿಳಿಯಲಿಲ್ಲ) ಏಕೆಂದರೆ ದೇವತೆಗಳು ಶ್ರೀಪರಮಾತ್ಮನ ಸೃಷ್ಟಿಕ್ರಿಯೆಯ [illegible] ನವು ದೇಹವುಳ್ಳವರಾಗಿ ಹುಟ್ಟಿರುತ್ತಾರೆ. ಮತ್ತು ಯಾವ ಶ್ರೀಹರಿಯಿಂದ [illegible]

ಅಂತಹ ಶ್ರೀಪರಮಾತ್ಮನೇ ಚೆನ್ನಾಗಿ ತಿಳಿದಿರುತ್ತಾನೆ. (೬) ಶ್ರೀಹರಿಯ ಮಹಿಮೆಯನ್ನು ಋಷಿಗಳು ದೇವತೆಗಳೂ ಸಹ ತಿಳಿಯುವುದಿಲ್ಲ. ಅಲ್ಪವಾದ ಧೈರ್ಯ ಜ್ಞಾನವುಳ್ಳ ಮನುಷ್ಯಾದಿಗಳು ಹೇಗೆ ತಿಳಿದಾರು? ಎಂದು ಋಗ್ವೇದಮಂತ್ರಗಳಲ್ಲಿ ಹೇಳಿದೆ. (೭) ಶ್ರೀಪರಮಾತ್ಮನಿಗೆ ಉತ್ಪತ್ತಿಯಿಲ್ಲವೆಂಬುವ ಅರ್ಥವು ಯೋ ಮಾಮಜಂ ಎಂಬುವ ವಾಕ್ಯದಿಂದಲೇ ತಿಳಿಯುತ್ತದೆ ॥ ೨ ॥

ಟೀ—೬ನೇ ಅಧ್ಯಾಯದಲ್ಲಿ ಧ್ಯಾನವನ್ನು ಹೇಳಿದ್ದಾರೆ—ಅದರಲ್ಲಿ ಧ್ಯಾನಮಾಡುವುದಕ್ಕಾಗಿ ಶ್ರೀಪರಮಾತ್ಮನ ವಿಭೂತಿರೂಪಗಳನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ. ಅದರಲ್ಲಿ ನ ಮೇ ವಿದುಃ ಎಂಬುವಲ್ಲಿ ತನ್ನ ಮಹಿಮೆಯನ್ನು ದೇವತೆಗಳು ಋಷಿಗಳು ತಿಳಿಯಲಾರರೆಂದೇ ಹೇಳಿದ್ದರಿಂದ ಗಂಧರ್ವಾದಿಗಳು ತಿಳಿಯುತ್ತಾರೆಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ತಾ ॥ ಓಂ ॥ ಉಪಲಕ್ಷಣಾರ್ಥಂ ಸುರಗಣಾ ಇತ್ಯಾದಿ ॥ ೧,೨ ॥

ಅ ॥ ಸುರಗಣಾಃ ಮಹರ್ಷಯಃ ಎಂಬುವ ಎರಡು ಪದಗಳಿಂದ ಚೇತನ ಅಚೇತನ ನಿಖಿಲ ವಸ್ತುಗಳನ್ನು ಇಟ್ಟುಕೊಳ್ಳಬೇಕು.(ದೇವಾದಿಗಳೇ ಶ್ರೀಹರಿಯ ಮಹಿಮೆಯನ್ನು ತಿಳಿಯದಿದ್ದ ಮೇಲೆ ಅವರಿಂದ ಕೆಳಗಿನ ಗಂಧರ್ವಾದಿಗಳು ಸುತರಾಂ ತಿಳಿಯಲಾರರಷ್ಟೆ.) ॥ ೧,೨ ॥

ಟೀ—ತನ್ನ ಜ್ಞಾನದಿಂದ ಮೋಕ್ಷವಾಗುತ್ತದೆನ್ನುತ್ತಾರೆ—

ಗೀ ॥ ಯೋ ಮಾಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಂ ।
ಅಸಮ್ಮೂಢಃ ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥ ೩ ॥

ಅ ॥ ಯಃ=ಯಾವ ಅಧಿಕಾರಿಯು, ಮಾಂ=ನನ್ನನ್ನು, ಅಜಂ=ಉತ್ಪತ್ತಿರಹಿತನನ್ನಾಗಿಯೂ ಅನಾದಿಂ=ಸರ್ವ ಜಗಜ್ಜನ್ಮಕರನನ್ನಾಗಿಯೂ ಸರ್ವ ಜಗತ್ತಿಗೆ ಕಾರಣನನ್ನಾಗಿಯೂ, ಅಥವಾ ಮುಖ್ಯಪ್ರಾಣನಿಗೆ ಕಾರಣನನ್ನಾಗಿಯೂ ಲೋಕಮಹೇಶ್ವರಂ=ಸಮಸ್ತ ಲೋಕಗಳಿಗೆ ಮಹಾಸ್ವಾಮಿಯನ್ನಾಗಿಯೂ, ವೇತ್ತಿ=ತಿಳಿಯುತ್ತಾನೆಯೋ, ಸಃ=ಆ ಮನುಷ್ಯನು, ಮರ್ತ್ಯೇಷು=ಮನುಷ್ಯರಲ್ಲಿ, ಅಸಮ್ಮೂಢಃ=ಭ್ರಾಂತಿಯಿಲ್ಲದವನಾಗಿ, ಸರ್ವಪಾಪೈಃ=ಸಮಸ್ತ ಪಾಪಗಳಿಂದ, ಪ್ರಮುಚ್ಯತೇ=ಮುಕ್ತನಾಗುತ್ತಾನೆ. (ಮೋಕ್ಷವನ್ನು ಹೊಂದುತ್ತಾನೆ.) ॥ ೩ ॥

ಭಾ ॥ ಅನನ್ಯಾಪೇಕ್ಷಯಿತಾ ಸರ್ವಸ್ಯೇತ್ಯನಾದಿಃ । ಅಜತ್ವೇನ ಸಿದ್ಧೇರಿತರಸ್ಯ ॥ ೩ ॥

ಅ ॥ (ಅನಾದಿಂ) ಅನಃ=ಸರ್ವರಿಂದಲೂ ಚೇಷ್ಟೆಯನ್ನು (ವ್ಯಾಪಾರವನ್ನು) ಮಾಡಿಸುವವನು ಆದಿಃ=ಸರ್ವ ಜಗತ್ತಿಗೂ ಕಾರಣಭೂತನು. ಸರ್ವಥಾ ಉತ್ಪತ್ತಿಯಿಲ್ಲವೆಂದು ಹೇಳಿದ್ದರಿಂದ ಶ್ರೀಪರಮಾತ್ಮನಿಗೆ ಯಾವುದೊಂದು ಕಾರಣವೂ ಇಲ್ಲವೆಂದು ಸಿದ್ಧವಾಗುತ್ತದೆ. (ಅಂದರೆ ಪರಮಾತ್ಮನಿಗೆ ಉತ್ಪಾದಕನು ಇಲ್ಲವೇ ಇಲ್ಲ) ॥ ೩ ॥

ತಾ ॥ ಜನಸ್ಯಾಪ್ಯಾದಿರನಾದಿಃ ॥ ೩ ॥

ಅ ॥ ಸರ್ವಚೇಷ್ಟಕನಾದ ಮುಖ್ಯಪ್ರಾಣನಿಗೂ ಕಾರಣನು ಅನಾದಿಯು ॥ ೩ ॥

ಹೀ—ಭಕ್ತರಿಗೆ ಬುದ್ಧ್ಯಾದಿಗಳನ್ನು ಕೊಡತಕ್ಕವನು ಶ್ರೀಪರಮಾತ್ಮನೇ ಎನ್ನುತ್ತಾರೆ—

ಗೀ॥ ಬುದ್ಧಿರ್ಜ್ಞಾನಮಸಮ್ಮೋಹಃ ಕ್ಷಮಾ ಸತ್ಯಂ ದಮಃ ಶಮಃ ।
ಸುಖಂ ದುಃಖಂ ಭವೋ ಭಾವೋ ಭಯಂ ಚಾಭಯಮೇವ ಚ ॥೪॥

ಅ॥ ಬುದ್ಧಿಃ=ಅಂತಃಕರಣವು, ಅಥವಾ ಕಾರ್ಯಾಕಾರ್ಯ ನಿಶ್ಚಯವು, ಜ್ಞಾನಂ=ಜ್ಞಾನ ಸಾಮಾನ್ಯವು. ಅಸಮ್ಮೋಹಃ=ಅಕಾರ್ಯವನ್ನು ಮಾಡುವುದರಲ್ಲಿ ಇಚ್ಛೆಯಿಲ್ಲದಿರುವುದು, ಅಥವಾ ಮಿಥ್ಯಾ ಜ್ಞಾನವಿಲ್ಲದಿರುವುದು, ಕ್ಷಮಾ=ತಾನು ಸಿಟ್ಟನ್ನು ಮಾಡಿಕೊಳ್ಳದೆ ಅಪಕಾರ ಮಾಡಿದವರಿಗೆ ತಿರುಗಿ ಪ್ರತ್ಯಪ ಕಾರವನ್ನುಮಾಡದಿರುವುದು, ಸತ್ಯಂ=ನಿಜವಾಗಿ ತಿಳಿದುಕೊಂಡು ಕರ್ಮ ಮಾಡುವುದು, ಅಥವಾ ಯಥಾ ರ್ಥವಾಗಿ ಮಾತನ್ನಾಡುವುದು, ದಮಃ=ಇಂದ್ರಿಯಗಳನ್ನು ವಶಪಡಿಸಿಕೊಳ್ಳುವುದು, ಶಮಃ=ಶ್ರೀಪರ ಮಾತ್ಮನಲ್ಲಿ ಮನಸ್ಸನ್ನು ಇಡುವುದು, ಸುಖಂ=ಸುಖವು, ದುಃಖಂ=ದುಃಖವು, (ಪ್ರತಿಕೂಲವೆಂದು ತಿಳಿಯ ಲರ್ಹವು.) ಭವಃ=ಉತ್ಪತ್ತಿಯು, ಭಾವಃ=ಸರ್ವ ಪದಾರ್ಥಗಳ ಸ್ಥಿತಿಯು, ಭಯಂ ಚ=ಹೆದರಿಕೆಯು, ಅಭಯಂ ಚ=ಹೆದರದಿರುವುದು. (ಇವುಗಳೆಲ್ಲವೂ ನನ್ನಿಂದಲೇ ಆಗುತ್ತವೆ.) ॥೪॥

ಭಾ॥ (೧) ತತ್ಪ್ರಥಯತಿ । ಬುದ್ಧಿರಿತ್ಯಾದಿನಾ । ಕಾರ್ಯಾಕಾರ್ಯವಿನಿಶ್ಚಯೋ ಬುದ್ಧಿಃ ।
ಜ್ಞಾನಂ ಪ್ರತೀತಿಃ । ಜ್ಞಾನಂ ಪ್ರತೀತಿರ್ಬುದ್ಧಿಸ್ತು ಕಾರ್ಯಾಕಾರ್ಯವಿನಿರ್ಣಯ
ಇತ್ಯಭಿಧಾನಂ ॥ (೨)ದಮ ಇಂದ್ರಿಯನಿಗ್ರಹಃ । ಶಮಃ ಪರಮಾತ್ಮನಿಷ್ಠತಾ । ಶಮೋ
ಮನ್ನಿಷ್ಠತಾ ಬುದ್ಧೇರ್ದಮ ಇಂದ್ರಿಯನಿಗ್ರಹ ಇತಿ ಭಾಗವತೇ ॥೪॥

ಅ॥ (೧) ಶ್ರೀಪರಮಾತ್ಮನು ಸರ್ವಕರ್ತೃ, ಕಾರಣನೆಂಬುವುದನ್ನು ಬುದ್ಧಿರ್ಜ್ಞಾನಂ ಇತ್ಯಾದಿಗಳಿಂದ ವಿವರಿಸುತ್ತಾರೆ. ಇದು ಕಾರ್ಯವು, ಇದು ಅಕಾರ್ಯವು ಎಂಬುವ ವಿನಿಶ್ಚಯವು ಬುದ್ಧಿಯೆನಿಸುತ್ತದೆ. ಜ್ಞಾನಂ=ಪ್ರತೀತಿಯು. (ಆದುದರಿಂದ ಜ್ಞಾಯತೇ ಅನೇನೇತಿ ಜ್ಞಾನಂ=ಶಾಸ್ತ್ರವು ಎಂಬುವ ವ್ಯಾಖ್ಯಾನವು ಅಯುಕ್ತವು.) (ಏಕೆಂದರೆ ಬುದ್ಧಿ ಮೊದಲಾದ ಅಂತರ ಧರ್ಮಗಳನ್ನು ಹೇಳುವಾಗ ಜ್ಞಾನಶಬ್ದದಿಂದ ಶಾಸ್ತ್ರವನ್ನು ತೆಗೆದುಕೊಳ್ಳುವುದು ಯುಕ್ತವಲ್ಲ. ಜ್ಞಾನಂ=ಪ್ರತೀತಿಯು. ಬುದ್ಧಿಯು ಕಾರ್ಯಾಕಾರ್ಯ ವಿನಿಶ್ಚಯವು ಎಂದು ಅಭಿಧಾನವು (೨) (ದಮಃ=ಬಾಹ್ಯೇಂದ್ರಿಯಗಳನ್ನು ನಿಗ್ರಹಿಸಿಕೊಳ್ಳುವುದು, ಶಮಃ=ಅಂತಃಕರಣವನ್ನು ನಿಗ್ರಹಿಸಿಕೊಳ್ಳುವುದು. ಎಂದು ಕೆಲವರು. ಇನ್ನಿತರರು ದಮಃ ಗುರು ಮೊದ ಲಾದವರಿಗೆ ಪೂಜಾದಿಗಳನ್ನು ಮಾಡುವ ವಿಷಯದಲ್ಲಿ ವಿನಯವು. ಶಮಃ=ಬಾಹ್ಯವಸ್ತುಗಳ ವಿಷಯ ದಲ್ಲಿ ಅಂತಃಕರಣವನ್ನು ನಿಗ್ರಹಿಸಿಕೊಳ್ಳುವುದು, ಹೀಗೆ ಹೇಳುತ್ತಾರೆ ಇವೆರಡೂ ಅಯುಕ್ತವೆನ್ನುತ್ತಾರೆ-) ದಮಃ=ಎಲ್ಲಾ ಇಂದ್ರಿಯಗಳನ್ನು ತನ್ನ ವಶದಲ್ಲಿ ಇಟ್ಟುಕೊಳ್ಳುವುದು. ಶಮಃ ಶ್ರೀಪರಮಾತ್ಮನಲ್ಲಿ ಬುದ್ಧಿಯನ್ನು ಇಡುವುದು. (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ-) ಬುದ್ಧಿಗೆ ನನ್ನಲ್ಲಿ ಯೇ ನಿಷ್ಠೆಯು ಶಮವೆನಿಸುತ್ತದೆ. ಎಲ್ಲಾ ಇಂದ್ರಿಯಗಳನ್ನೇ ನಿಗ್ರಹಿಸಿಕೊಳ್ಳುವುದು ದಮವೆನಿಸುತ್ತದೆ. ಎಂದು ಭಾಗವತದಲ್ಲಿ ಹೇಳಿದೆ ॥೪॥

ಹೀ-ಬುದ್ಧಿಜ್ಞಾನ ಶಬ್ದಗಳಿಗೆ ಬೇರೆ ಬೇರೆ ಅರ್ಥಗಳಿವೆ ಎಂಬುವುದನ್ನು ಸ್ಪಷ್ಟವಾಗಿ ಹೇಳುತ್ತಾರೆ-

ತಾ॥ ಬುದ್ಧಿರ್ಬೋಧನಸಿದ್ಧತ್ವಾತ್ತದಂತಃಕರಣಮುಚ್ಯತ ಇತಿ ಶಬ್ದನಿರ್ಣಯೇ ॥೪॥

ಅ ॥ ಜ್ಞಾನಕ್ಕೆ ಆಶ್ರಯವಾಗಿರುವುದರಿಂದ ಅಂತಃಕರಣವು ಬುದ್ಧಿಯೆನಿಸುತ್ತದೆ. ॥ ೪ ॥

ಗೀ ॥ ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।
ಭವಂತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥ ೫ ॥

ಅ ॥ ಅಹಿಂಸಾ = ಬೇರೆ ಪ್ರಾಣಿಗಳಿಗೆ ಪೀಡೆಯನ್ನುಂಟುಮಾಡದಿರುವುದು, ಸಮತಾ = ಶೀತೋಷ್ಣಾದಿ ದ್ವಂದ್ವ ನಿಮಿತ್ತಕ ವಿಕಾರವಿಲ್ಲದಿರುವುದು, ತುಷ್ಟಿಃ = ವಿಷಯಗಳಲ್ಲಿ ಅಲಂಬುದ್ಧಿಯು, ತಪಃ = ಬ್ರಹ್ಮಚರ್ಯ ಮೊದಲಾದುದು, ದಾನಂ = ಧರ್ಮದಿಂದ ಸಂಪಾದಿತವಾದ ದ್ರವ್ಯವನ್ನು ಸತ್ಪಾತ್ರರಲ್ಲಿ ದಾನ ಕೊಡುವುದು, ಯಶಃ = ಕೀರ್ತಿಯು, ಅಯಶಃ = ಅಪಕೀರ್ತಿಯು, (ಹೀಗೆ) ಪೃಥಗ್ವಿಧಾಃ = ನಾನಾ ವಿಧಗಳಾದ, ಏತೇ ಭಾವಾಃ = ಹಿಂದೆ ಹೇಳಿದ ಧರ್ಮಗಳು, ಭೂತಾನಾಂ = ಪ್ರಾಣಿಗಳಿಗೆ, ಮತ್ತ ಏವ = ನನ್ನಿಂದಲೇ. ಭವಂತಿ = ಆಗುತ್ತವೆ. ॥ ೫ ॥

ಭಾ ॥ ತುಷ್ಟಿರಲಂಬುದ್ಧಿಃ । ಅಲಂಬುದ್ಧಿಸ್ತಥಾ ತುಷ್ಟಿರಿತ್ಯಭಿಧಾನಾತ್ ॥ ೫ ॥

ಅ ॥ ಅಲಂಬುದ್ಧಿಃ, ತುಷ್ಟಿಃ ಎಂಬವುಗಳು ಪರ್ಯಾಯಪದವು. ಈ ಕೋಶದಿಂದ ತುಷ್ಟಿಃ = ಅಲಂಬುದ್ಧಿಯು. ॥ ೫ ॥

ಪೀ — ಸಮಸ್ತಪ್ರಾಣಿಗಳ ಬುದ್ಧ್ಯಾದಿ ಧರ್ಮಗಳು ಮಾತ್ರ ನನ್ನಿಂದ ಆಗುವುದೆಂದಲ್ಲ. ಸಮಸ್ತ ಪ್ರಾಣಿಗಳು ಸಹ ನನ್ನಿಂದಲೇ ಹುಟ್ಟುತ್ತವೆನ್ನುತ್ತಾರೆ—

ಗೀ ॥ ಮಹರ್ಷಯಃ ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।
ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃ ಪ್ರಜಾಃ ॥ ೬ ॥

ಅ ॥ ಪೂರ್ವೇ = ಪೂರ್ವಮನ್ವಂತರದಲ್ಲಿದ್ದ, ಸಪ್ತ = ಏಳು ಮಂದಿ. ಮಹರ್ಷಯಃ = ಮರೀಚಿ ಮೊದಲಾದ ಋಷಿಗಳು, ತಥಾ = ಹಾಗೆಯೇ, ಲೋಕೇ = ಲೋಕದಲ್ಲಿ ಇಮಾಃ ಪ್ರಜಾಃ = ಈ ಪ್ರಜೆಗಳು, ಯೇಷಾಂ = ಯಾವ ಮನುಗಳಿಗೆ (ಪುತ್ರ ಪೌತ್ರಾದಿರೂಪದಿಂದ ಹುಟ್ಟಿರುತ್ತಾರೋ) ಅಂತಹ, ಮಾನಸಾಃ ಜಾತಾಃ = ಬ್ರಹ್ಮದೇವರ ಮನಸ್ಸಿನಿಂದ ಹುಟ್ಟಿರುವ. ಪೂರ್ವೇ = ಪೂರ್ವಕಲ್ಪದ. ಚತ್ವಾರಃ ಮನವಃ = ಸ್ವಾಯಂಭುವ, ಸ್ವಾರೋಚಿಷ, ರೈವತ, ಉತ್ತಮ, ಎಂಬುವ ನಾಲ್ಕು ಮಂದಿ ಮನುಗಳೂ ಕೂಡ, ಮದ್ಭಾವಾಃ = ಚತುರ್ಮುಖಬ್ರಹ್ಮನಲ್ಲಿ ಅಂತರ್ಯಾಮಿಯಾದ ನನ್ನಿಂದಲೇ ಹುಟ್ಟಿದವರು. (ಚತುರ್ಮುಖನು ದ್ವಾರ ಮಾತ್ರ) ॥ ೬ ॥

ಪೀ — ಪ್ರತಿ ಮನ್ವಂತರದಲ್ಲಿ ಬೇರೆ ಬೇರೆ ಸಪ್ತರ್ಷಿಗಳನ್ನು ಹೇಳಿದ್ದರಿಂದ ಇಲ್ಲಿ ಯಾವ ಸಪ್ತಋಷಿಗಳನ್ನು ಇಟ್ಟುಕೊಳ್ಳಬೇಕೆಂದರೆ ಪೂರ್ವ ಮನ್ವಂತರದಲ್ಲಿದ್ದವರನ್ನು ಇಟ್ಟುಕೊಳ್ಳಬೇಕೆನ್ನುವ ಅಭಿಪ್ರಾಯದಿಂದ ಅವರನ್ನು ಹೇಳುತ್ತಾರೆ—

ತಾ ॥ (೧) ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ । ವಸಿಷ್ಠಶ್ಚ ಮಹಾತೇಜಾಃ ಪೂರ್ವೇ ಸಪ್ತರ್ಷಯಃ ಸ್ಮೃತಾ ಇತಿ ಬ್ರಾಹ್ಮೇ ॥ (೨) ಮನವೋ ಬೋಧನ್ಯತೇಽಸ್ಮಾದ್ದೇವಾ ಬ್ರಹ್ಮಾದಯಃ ಸ್ಮೃತಾಃ । ವಿಪ್ರಾದಿವರ್ಣಭೇದೇನ ಚತ್ವಾರೋ

**ಬಹವೋಽಪಿ ತೇ ॥ (೩) ದೀನತ್ವಾದ್ದೇವನಾಮಾನಸ್ತ್ವನ್ಯೇ ಬ್ರಹ್ಮಾದಿನಾಮಕಾಃ ॥ (೪) ಅವೈಷ್ಣವಕೃತೋ ಯಜ್ಞೋ ದೀನೈರ್ದೇವೈಸ್ತು ಭುಜ್ಯತೇ । ವೈಷ್ಣವೈಸ್ತು ಕೃತೋ ಯಜ್ಞೋ ದೇವೈರ್ಹಿ ಮನುನಾಮಕೈಃ ॥ (೫) ಮರೀಚ್ಯಾದ್ಯಾಸ್ತು ತತ್ಪುತ್ರಾ ಮಾನವಾ ನಾಮತಃ ಸ್ಮೃತಾಃ । ತತ್ಪುತ್ರಪೌತ್ರಾ ಮುನಯಸ್ತಥಾ ಮಾನವಮಾನವಾಃ । ತೇಭ್ಯೋ ಮನುಷ್ಯಾ ಇತ್ಯೇಷಾ ಸೃಷ್ಟಿರ್ವಿಷ್ಣೋಃ ಸಮುತ್ಥಿತೇತಿ ಮಹಾವಿಷ್ಣುಪುರಾಣೇ ॥ ೬ ॥**

ಅ ॥ (೧) ಮರೀಚಿ, ಅತ್ರಿ, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ಮಹಾ ತೇಜಸ್ಸುಳ್ಳ ವಸಿಷ್ಠ ಋಷಿ, ಹೀಗೆ ಪೂರ್ವ ಮನ್ವಂತರದಲ್ಲಿದ್ದವರು ಏಳು ಮಂದಿ ಋಷಿಗಳು. ಹೀಗೆ ಬ್ರಹ್ಮಪುರಾಣದಲ್ಲಿ. (೨) (ಗೀತೆಯಲ್ಲಿದ್ದ ಮನು ಶಬ್ದದಿಂದ ಸ್ವಾಯಂಭುವ ಮೊದಲಾದ ಮನುಗಳು ಮಾತ್ರ ವಿವಕ್ಷಿತರಲ್ಲ. ಮತ್ತೆ ಬ್ರಹ್ಮಾದಿದೇವತೆಗಳನ್ನು ಇಟ್ಟುಕೊಳ್ಳಬೇಕು. ಬ್ರಹ್ಮಾದಿಗಳಲ್ಲಿ ಬ್ರಾಹ್ಮಣಾದಿ ನಾಲ್ಕು ಜಾತಿ ಇದ್ದುದರಿಂದ ಚತ್ವಾರಃ ಎಂದು ಹೇಳಿದ್ದು. ಎಂಬುವ ವಿಶೇಷಾರ್ಥವನ್ನು ಇಟ್ಟುಕೊಳ್ಳಬೇಕೆಂಬುವಲ್ಲಿ ಸ್ಮೃತಿಯನ್ನು ಹೇಳುತ್ತಾರೆ—) ವಿಶೇಷಜ್ಞಾನವಿದ್ದುದರಿಂದ ಮನು ಎನಿಸಿದ ಬ್ರಹ್ಮರುದ್ರಾದಿ ದೇವತೆಗಳು ಬಹು ಮಂದಿ ಇದ್ದಾಗ್ಯೂ * ಬ್ರಾಹ್ಮಣಕ್ಷತ್ರಿಯಾದಿ ಭೇದದಿಂದ ನಾಲ್ಕು ಜಾತಿಯವರು ಎಂಬುವ ಅಭಿಪ್ರಾಯವು ಚತ್ವಾರಃ ಎದು ಹೇಳಿದ್ದು. (೩) ಹೀಗಾದರೆ ದೇವ ಎಂಬುವ ಪ್ರಸಿದ್ಧ ಶಬ್ದವನ್ನು ಬಿಟ್ಟು ಮನು ಎಂಬುವ ವಿಶೇಷ ಶಬ್ದವನ್ನು ಏಕೆ ಹೇಳಿದ್ದೆಂದರೆ ದುಃಖಯುಕ್ತರಾಗಿರುವುದರಿಂದ ದೇವ ಎಂದು ಹೆಸರುಳ್ಳ ಅಸುರರೂ ಬ್ರಹ್ಮರುದ್ರಾದಿ ನಾಮಗಳುಳ್ಳವರು ಇರುತ್ತಾರೆ (ಅಂದರೆ—)ದೇವಾದಿ ಶಬ್ದಗಳು ಅಸುರರಲ್ಲಿಯೂ ಇವೆ ಮನು ಶಬ್ದವೇ ದೇವತೆಗಳಲ್ಲಿ ಮುಖ್ಯವಾದುದು. ಆದಕಾರಣ ಮನು ಶಬ್ದವನ್ನೇ ಪ್ರಯೋಗಿಸಿದ್ದು. (೪) ವಿಷ್ಣುಭಕ್ತಿಯಿಲ್ಲದವರು ಮಾಡುವ ಯಜ್ಞವನ್ನು ದುಃಖಯುಕ್ತರಾಗಿರುವುದರಿಂದ ದೇವ ಎನಿಸಿದ ಬ್ರಹ್ಮಾದಿ ನಾಮಗಳುಳ್ಳ ಅಸುರರು ಭುಜಿಸುತ್ತಾರೆ. ವೈಷ್ಣವರು ಮಾಡುವ ಯಜ್ಞವನ್ನು ಮನು ಎನಿಸಿದ ದೇವತೆಗಳು ಭುಜಿಸುತ್ತಾರೆ. (೫) ಮನು ಎನಿಸಿದ ದೇವತೆಗಳ ಪುತ್ರರಾದ ಮರೀಚಿ ಮೊದಲಾದ ಋಷಿಗಳು ಮಾನವರೆನಿಸುತ್ತಾರೆ ಅವರ ಮಕ್ಕಳೂ ಮೊಮ್ಮಕ್ಕಳೂ ಆದ ಮುನಿಗಳು ಮಾನವ ಮಾನವರೆನಿಸುತ್ತಾರೆ. ಅವರಿಂದ ಮನುಷ್ಯರು ಹುಟ್ಟುತ್ತಾರೆ. ಹೀಗೆ ಶ್ರೀವಿಷ್ಣುವಿನಿಂದ ಸೃಷ್ಟಿಯು ಉಂಟಾಗುತ್ತವೆ, ಎಂದು ಮಹಾವಿಷ್ಣುಪುರಾಣದಲ್ಲಿದೆ. ॥ ೬ ॥

ಹೀ—ಹಿಂದೆ ಹೇಳಿದ ಪ್ರಕಾರ ಶ್ರೀಹರಿಯ ಮಹಿಮೆಯನ್ನು ತಿಳಿದುಕೊಂಡರೆ ಅದರ ಫಲವನ್ನು ಹೇಳುತ್ತಾರೆ—

ಗೀ ॥ ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।
ಸೋಽವಿಕಂಪೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥ ೭ ॥

* (1) ವಿಶೇಷ್ಯೋಬ್ರಾಹ್ಮಣದಂತಿಃ ಸನ್ ಜಜ್ಞೇ ಬ್ರಹ್ಮಾ ಚತುರ್ಮುಖಃ । ಎಂಬುವ ಪ್ರಮಾಣದಿಂದ ಚತುರ್ಮುಖಬ್ರಹ್ಮನು ಬ್ರಾಹ್ಮಣಜಾತಿಯಾಗಿ ಹುಟ್ಟಿದನು. (2) ತಸ್ಮಾತ್ ಕ್ಷತ್ರಜಾತಿರಜಾಯತ । ವಾಯುಃ ಸದಾಶಿವೋ ... ಗರುಡಃ ತಥಾ । ಇತ್ಯಾದಿಗಳು ಕ್ಷತ್ರಿಯ ಜಾತಿಯವರು (3) ವಿವಸ್ವದಿಂದ್ರವರುಣ ವಿಷ್ವಕ್ಸೇನ ... ರುದ್ರಾದನ್ಯೇ ತಥಾ ರುದ್ರಾ ಮಯೋಽನ್ಯೇ ಚ ವಾಯವಃ । ಇತ್ಯಾದಿಗಳು ವೈಶ್ಯಜಾತಿಯವರು ... ಕೃತ ಕಾಲೋ ಮೃತ್ಯುವ ಏವ ಚ । ಶೂದ್ರದೇವಾಃ ಸಮುದ್ದಿಷ್ಟಾ । ಇತ್ಯಾದಿಗಳು ...

ಅ ॥ ಯಃ=ಯಾವ ಅಧಿಕಾರಿಯು, ಮಮ=ನನ್ನ, ಏತಾಂ ವಿಭೂತಿಂ=ನಮೇ ವಿದುಃ ಸುರಗಣಾಃ ಇತ್ಯಾದಿಗಳಿಂದ ಹೇಳಲ್ಪಟ್ಟ ಮಹಿಮೆಯನ್ನು, ಮತ್ತು ನಾನಾವಿಧ ಅವತಾರವನ್ನು, ಯೋಗಂ ಚ=ಬುದ್ಧ್ಯಾದಿ ಸರ್ವಸ್ರಷ್ಟೃತ್ವರೂಪವಾದ ಸಾಮರ್ಥ್ಯವನ್ನು, ತತ್ವತಃ=ಯಥಾರ್ಥವಾಗಿ, ವೇತ್ತಿ=ತಿಳಿಯುತ್ತಾನೋ, ಸಃ=ಆ ಅಧಿಕಾರಿಯು, ಅವಿಕಂಪೇನ=ದೃಢವಾದ, ಯೋಗೇನ=ಧ್ಯಾನರೂಪವಾದ ಉಪಾಯದಿಂದ, ಯುಜ್ಯತೇ=ಯುಕ್ತನಾಗುತ್ತಾನೆ ಅತ್ರ=ಈ ವಿಷಯದಲ್ಲಿ, ಸಂಶಯಃ=ಸಂದೇಹವು, ನ=ಇಲ್ಲ. ।೭।

ಟೀ—ಪೂರ್ವೇ ಎಂದು ವಿಶೇಷಣವನ್ನು ಕೊಟ್ಟ ಪ್ರಯುಕ್ತ ಪೂರ್ವ ಮನ್ವಂತರದಲ್ಲಿದ್ದವರನ್ನೇ ತೆಗೆದುಕೊಳ್ಳಬೇಕಾದುದರಿಂದಲೂ, ಮೋಕ್ಷಧರ್ಮವಾಕ್ಯದಿಂದಲೂ ಭೃಗ್ವಾದಿಗಳು ಸಪ್ತರ್ಷಿಗಳೆಂದು ಪರಭಾಷ್ಯದಲ್ಲಿ ಹೇಳಿದ್ದು ಅಯುಕ್ತವೆನ್ನುತ್ತಾರೆ—

ಭಾ ॥ (೧) ಪೂರ್ವೇ ಸಪ್ತ ಋಷಯಃ । ಮರೀಚಿರತ್ರ್ಯಂಗಿರಸೌ ಪುಲಸ್ತ್ಯಃ ಪುಲಹಃ ಕ್ರತುಃ ।
ವಸಿಷ್ಠಶ್ಚ ಮಹಾತೇಜಾ ಇತಿ ಮೋಕ್ಷಧರ್ಮೋಕ್ತಾಃ । ತೇ ಹಿ ಸರ್ವಪುರಾಣೇಷೂಚ್ಯಂತೇ ॥ (೨) ಚತ್ವಾರಃ ಪ್ರಥಮಾಃ ಸ್ವಾಯಂಭುವಾದ್ಯಾಃ । ತೇಷಾಂ ಹೀಮಾಃ ಪ್ರಜಾಃ ನ ಹಿ ಭವಿಷ್ಯತಾಮಿಮಾಃ ಪ್ರಜಾ ಇತಿ ಹ್ಯುಕ್ತಂ ॥ (೩) ವಿಭಾಗಃ ಪ್ರಾಧಾನ್ಯಂ ಚ ಪ್ರಾಥಮಿಕತ್ವಾದೇವ ಭವತಿ ॥ (೪) ಗೌತಮಖಿಲೇಷು ಚೋಕ್ತಂ । ಸ್ವಾಯಂಭುವಂ ರೋಚಿಷಂ ಚ ರೈವತಂ ಚ ತಥೋತ್ತಮಂ । ವೇದ ಯಃ ಸ ಪ್ರಜಾವಾನಿತಿ । ಪೂರ್ವೇಭ್ಯೋ ಹ್ಯುತ್ತರಾ ಜಾಯಂತ ಇತಿ ಚ ತೇಷಾಂ ಪ್ರಾಧಾನ್ಯಂ । ಅಜಾತೇಷು ಚ ಜ್ಯೈಷ್ಠ್ಯಂ ॥ ೧ ॥

ಅ ॥ ಪೂರ್ವ ಮನ್ವಂತರದಲ್ಲಿದ್ದ ಏಳು ಋಷಿಗಳು ಮರೀಚಿ, ಅತ್ರಿ ಅಂಗಿರಸಋಷಿ, ಪುಲಸ್ತ್ಯ ಪುಲಹ, ಕ್ರತು, ಮಹಾ ತೇಜಸ್ವಿಗಳ ವಸಿಷ್ಠಋಷಿ ಹೀಗೆ ಮೋಕ್ಷಧರ್ಮದಲ್ಲಿ ಹೇಳಲ್ಪಟ್ಟವರು. ನಿರುಪಪದವಾದ ಸಪ್ತರ್ಷಿಪದದಿಂದ ಪೂರ್ವಕಲ್ಪದಲ್ಲಿರುತ್ತಿದ್ದ ಆ ಮರೀಚಿ ಋಷಿ ಮೊದಲಾದವರೇ ಎಲ್ಲಾ ಪುರಾಣಗಳಲ್ಲಿಯೂ ಹೇಳಲ್ಪಡುತ್ತಾರೆ. (೨) (ಬ್ರಹ್ಮಸಾವರ್ಣ್ಯಃ, ರುದ್ರಸಾವರ್ಣ್ಯಃ, ದಕ್ಷಸಾವರ್ಣ್ಯಃ, ಧರ್ಮಸಾವರ್ಣ್ಯಃ, ಹೀಗೆ ಮುಂದಿನ ಕಲ್ಪದಲ್ಲಿ ನಾಲ್ವರು ಮನುಗಳೆಂದು ಇತರರು ಹೇಳುತ್ತಾರೆ. ಅದು ಅಯುಕ್ತವೆನ್ನುತ್ತಾರೆ.) ಪ್ರಥಮ ಕಲ್ಪದಲ್ಲಿದ್ದ ಸ್ವಾಯಂಭುವ, ಸ್ವಾರೋಚಿಷ, ರೈವತ, ಉತ್ತಮ, ಎಂಬುವರು ನಾಲ್ವರು ಮನುಗಳು. ಈಗ ಇರತಕ್ಕ ಪ್ರಜೆಗಳೆಲ್ಲರೂ ಅವರ ಮಕ್ಕಳೇ. ಈಗ ಇದ್ದ ಪ್ರಜೆಗಳು ಮುಂದಿನ ಕಲ್ಪದಲ್ಲಿ ಬರತಕ್ಕ ಮನುಗಳ ಮಕ್ಕಳೆಂಬುದು ಕೂಡಲಾರದಷ್ಟೆ (೩) (ಪರರು ಹೇಳುವ ಬ್ರಹ್ಮಸಾವರ್ಣ್ಯ ಮೊದಲಾದವ ಮುಂದಿಯಲ್ಲಿ ನಾಮಸಾಮ್ಯವು ಪ್ರತ್ಯೇಕ ಮಾಡಲಿಕ್ಕೆ ಕಾರಣವಿದೆ. ನೀವು ಹೇಳಿದ ಈ ಮನುಗಳಲ್ಲಿ ಸ್ವಾಯಂಭುವ ಮೊದಲಾದವ ಮನುಗಳನ್ನು ಪ್ರತ್ಯೇಕ ಹೇಳಲಿಕ್ಕೆ ವಿಶೇಷವೇನು ಇಲ್ಲವೆಂದರೆ) ಪ್ರಾಧಾನ್ಯವಿದ್ದ ಪ್ರಯುಕ್ತವೇ ವಿಭಾಗವು (ಈ ನಾಲ್ಕು ಮಂದಿಯನ್ನು ಹೇಳಿದ್ದು) ಯುಕ್ತವಾಗುತ್ತದೆ. ಸ್ವಾಯಂಭುವಾದಿಗಳಿಗೆ ಪ್ರಾಧಾನ್ಯ (ಉತ್ತಮತ್ವ)ವಾದರೂ ಪ್ರಾಥಮಿಕತ್ವವಿದ್ದ ಪ್ರಯುಕ್ತವೇ (ಪ್ರಥಮದಲ್ಲಿ ಗಣನೆಮಾಡಿದ ಪ್ರಯುಕ್ತವೇ) ಕೂಡುತ್ತದೆ (ಎಂಬಂತೆ ಪರರು ಹೇಳಿದ ನಾಮಸಾಮ್ಯವ ಮೇರುಸಾವರ್ಣಿಯಲ್ಲಿಯೂ ಇದ್ದ ಪ್ರಯುಕ್ತ ಅದು ಪ್ರತ್ಯೇಕ ವಿಭಾಗ ಮಾಡಿ ಹೇಳಲಿಕ್ಕೆ ಕಾರಣವಾಗಿ ಹೇಳಲಿಕ್ಕೆ ಬರುವುದಿಲ್ಲ।) (೪) (ಮತ್ತು ಶ್ರುತಿಯಲ್ಲಿ ಸ್ವಾಯಂಭುವಾದಿಗಳನ್ನೇ ಪ್ರತ್ಯೇಕವಾಗಿ ಹೇಳಿದ ಪ್ರಯುಕ್ತವೂ ಅವರನ್ನೇ ತಕ್ಕೊಳ್ಳಬೇಕೆನ್ನುತ್ತಾರೆ.) ಪ್ರತ್ಯೇಕ ಮಾಡಲಿಕ್ಕೆ ಗೌತಮಖಿಲದಲ್ಲಿ

ಫಲವೂ ಹೇಳಲ್ಪಟ್ಟಿದೆ. (1) ಸ್ವಾಯಂಭುವ, ರೋಚಿಷ, ರೈವತ, ಉತ್ತಮ ಈ ನಾಲ್ಕು ಮಂದಿ ಮನುಗಳನ್ನು ತಿಳಿದವನು ಸತ್ಸಂತಾನವುಳ್ಳವನಾಗುತ್ತಾನೆ, ಎಂದು ಫಲವನ್ನು ಹೇಳಿದ್ದಾರೆ. (2) (ಪ್ರಾಥಮಿಕತ್ವವಿದ್ದ ಪ್ರಯುಕ್ತವೇ ಪ್ರಾಧಾನ್ಯವಿದೆ, ಎಂಬುವುದನ್ನು ಪಪಾದಿಸುತ್ತಾರೆ– ಆ ಸಂತತಿಯಲ್ಲಿ ಮೊದಲು ಮೊದಲಿನವರಿಂದ ಮೇಲುಮೇಲಿನವರು ಹುಟ್ಟುತ್ತಾರೆ. ಹೀಗೆ ಮೊದಲುಮೊದಲಿನವರಿಗೆ ಉತ್ತರೋತ್ತರರಿಗಿಂತ ಉತ್ತಮತ್ವವು. (ಆ ಸಂತತಿಯಲ್ಲಿ ಸಾಕ್ಷಾತ್ ಹುಟ್ಟಿದಿರುವ ಸ್ವಾರೋಚಿಷಾದಿಗಳಿಗಿಂತ ಸ್ವಾಯಂಭುವಾದಿಗಳಿಗೆ ಪ್ರಾಧಾನ್ಯವು ಹೇಗೆಂದರೆ–) ಆ ಸಂತತಿಯಲ್ಲಿ ಹುಟ್ಟಿದಿರುವ ಸ್ವಾರೋಚಿಷಾದಿಗಳ ವಿಷಯಗಳಲ್ಲಿ ಸ್ವಾಯಂಭುವಾದಿಗಳಿಗೆ ವಯಸ್ಸಿನಿಂದ ಜ್ಯೇಷ್ಠತ್ವವು ಪ್ರಾಧಾನ್ಯ ಪ್ರಯೋಜಕವು.(ಅಂತೂ ಸ್ವಾಯಂಭುವಾದಿಗಳು ವಯೋಜ್ಯೇಷ್ಠರು.) || ೧ ||

ಟೀ—ಪ್ರಥಮದಲ್ಲಿ ಹೇಳಿದವರನ್ನು ಇಟ್ಟುಕೊಳ್ಳುವುದಾದರೆ ಉತ್ತಮನ ಭ್ರಾತನಾದ ನಾಲ್ಕನೆಯವನಾದ ತಾಪಸನು ಗೀತೆಗೆ ಅಭಿಪ್ರೇತನೆಂದು ಏಕೆ ಹೇಳಲಿಲ್ಲ ಎಂದರೆ—

ಭಾ || (೧) ತಾಪಸಸ್ಯ ಭಗವದವತಾರತ್ವಾದನುಕ್ತಿಃ | ತಚ್ಚ ಭಾಗವತೇ ಪ್ರಸಿದ್ಧಂ || (೨) ಮಾನಸತ್ವಂ ಚ ಸರ್ವೇಷಾಂ ಮನೂನಾಮುಕ್ತಂ ಭಾಗವತೇ | ತತೋ ಮನೂನ್ ಸಸರ್ಜಾಂತೇ ಮನಸಾ ಲೋಕಭಾವನಾನಿತಿ || (೩) ಅನ್ಯಪುತ್ರತ್ವಂ ತ್ವಪರಿತ್ಯಜ್ಯಾಪಿ ಶರೀರಂ ತದ್ಭವತಿ || (೪) ಪ್ರಮಾಣಂ ಚೋಭಯವಿಧವಾಕ್ಯಾನ್ಯಥಾನುಪಪತ್ತಿರೇವ | ಪೂರ್ವ ಇತಿ ವಿಶೇಷಣಾಚ್ಚೈತತ್ಸಿದ್ಧಿಃ || (೫) ಮತ್ತೋ ಭಾವೋ ಯೇಷಾಂ ತೇ ಮದ್ಭಾವಾಃ | ಏತೇ ಬ್ರಹ್ಮಣೋ ಮನಸಾ ಜಾತಾಸ್ತೇ ಮತ್ತ ಏವ ಜಾತಾ ಇತಿ ಭಾವಃ || ೨ || || ೬,೭ ||

ಅ || (೧) ತಾಪಸನು ಶ್ರೀಪರಮಾತ್ಮನ ಅವತಾರನಾದುದರಿಂದ (ಶ್ರೀಪರಮಾತ್ಮನಲ್ಲಿ ಮದ್ಭಾವಾಃ ಮಾನಸಾ ಜಾತಾಃ ಎಂಬುವ ವಿಶೇಷಣಗಳು ಕೂಡದಿರುವುದರಿಂದ) ಆತನನ್ನು ಒಬ್ಬನೇ ಮನುವನ್ನಾಗಿ ಹೇಳಲಿಲ್ಲ (ತಾಪಸನು ಶ್ರೀಪರಮಾತ್ಮನ ಅವತಾರನೆಂದು ಹೇಗೆ ತಿಳಿಯುತ್ತದೆಂದರೆ—) ಚತುರ್ಥ ಉತ್ತಮಭ್ರಾತಾ ಮನುರ್ನಾಮ್ನಾ ಚ ತಾಪಸಃ | ಹರಿರಿತ್ಯಾಹುತೋ ಯೇನ ಗಜೇಂದ್ರೋ ಮೋಚಿತೋ ಗ್ರಹಾತ್ ಇತ್ಯಾದಿ ಪ್ರಮಾಣಗಳಿಂದ ತಾಪಸನು ಶ್ರೀಹರಿಯ ಅವತಾರನೆಂದು ಭಾಗವತದಲ್ಲಿ ಪ್ರಸಿದ್ಧವಾಗಿದೆ. (೩) (ಮಾನಸಾ ಜಾತಾಃ ಎಂಬುವ ವಿಶೇಷಣವು ಕೂಡದಿರುವುದರಿಂದ ರೈವತನಕ್ಕಿಂತ ಮೊದಲ ನಾಲ್ಕನೇದ್ದಾಗಿ ಪ್ರಾಪ್ತನಾದ ತಾಪಸನನ್ನು ಬಿಟ್ಟಿದ್ದೆಂದರೆ- ಸ್ವಾಯಂಭುವಾದಿಗಳು ಪ್ರಿಯವ್ರತಾದಿಗಳ ಪುತ್ರರಾದುದರಿಂದ ಈ ವಿಶೇಷಣವು ಸ್ವಾಯಂಭುವಮನು ಮೊದಲಾದವರಲ್ಲಿಯೂ ಚತುರ್ಮುಖನ ಮಾನಸಪುತ್ರತ್ವವು ಕೂಡದಿರುವುದರಿಂದ ಅವರನ್ನು ತೆಗೆದುಕೊಳ್ಳಲಿಕ್ಕೆ ಆಗುವುದಿಲ್ಲವೆಂದರೆ ಎಲ್ಲಾ ಮನುಗಳೂ ಬ್ರಹ್ಮನ ಮನಸ್ಸಿನಿಂದ ಹುಟ್ಟಿದವರು, ಆ ಮೇಲೆ ಅಂತ್ಯದಲ್ಲಿ ಲೋಕಗಳನ್ನು ಸೃಷ್ಟಿಸುವ ಮನುಗಳನ್ನು ಬ್ರಹ್ಮನು ಮನಸ್ಸಿನಿಂದ ಸೃಷ್ಟಿಸಿದನು ಎಂದು ಭಾಗವತದಲ್ಲಿ ಹೇಳಿದೆ. (ಸ್ವಾಯಂಭುವಾದಿಗಳಿಗೆ ಪ್ರಿಯವ್ರತಾದಿಗಳ ಪುತ್ರತ್ವವು ಪ್ರಸಿದ್ಧವಾಗಿರುವುದರಿಂದ ಮನುತ್ವದಶೆಯಲ್ಲಿ ಚತುರ್ಮುಖನ ಮಾನಸಪುತ್ರತ್ವವು ಕೂಡಲಾರದೆಂದರೆ) ಆ ಬ್ರಹ್ಮನ ಮನಸ್ಸಿನಿಂದ ಹುಟ್ಟಿದ ಶರೀರವನ್ನು ಬಿಡದೇನೇ ಸ್ವಾಯಂಭುವಾದಿಮನುಗಳು ಪ್ರಿಯವ್ರತಾದಿಗಳ ಪುತ್ರರಾಗುತ್ತಾರೆ. (ಅಂದರೆ ಪ್ರಿಯವ್ರತಾದಿಗಳಿಂದ ಎರಡನೇ ಶರೀರವುಂಟಾದೊಡನೆ ಆ ಎರಡನೇ ಶರೀರವು ಒಂದೇ ಆಗುತ್ತದೆ.) (೪) ಹೀಗೆ ಏಕೆ ಇಟ್ಟುಕೊಳ್ಳಬೇಕೆಂದರೆ ಮನುಗಳು ಬ್ರಹ್ಮದೇವರ ಮನಸ್ಸಿನಿಂದ ಹುಟ್ಟಿದವರೆಂದು ಹೇಳುವ ವಾಕ್ಯವು, ಪ್ರಿಯವ್ರ

ರಿಗಳ ಮಕ್ಕಳೆಂದು ಹೇಳುವ ವಾಕ್ಯವೂ, ಈ ಎರಡು ವಿಧ ವಾಕ್ಯವು ಬೇರೆ ರೀತಿ ಅರ್ಥ ಹೇಳಲಿಕ್ಕೆ ಬಾಧ ದಿರುವುದರಿಂದ ಈ ವಾಕ್ಯಾನುಸಾರವಾಗಿ ಹಿಂದೆ ಹೇಳಿದ ರೀತಿಯಿಂದಲೇ ಅರ್ಥವನ್ನು ಹೇಳಬೇಕು. ಮತ್ತು ಪೂರ್ವೇ ಎಂಬುವ ವಿಶೇಷಣವಿದ್ದುದರಿಂದಲೂ ಪ್ರಾಥಮಿಕ ನಾಲ್ಕು ಮನುಗಳನ್ನು ತೆಗೆದು ಕೊಳ್ಳಬೇಕೆಂಬುವ ಅರ್ಥವು ಸಿದ್ಧವಾಗುತ್ತದೆ. (ಸ) ನನ್ನಿಂದಲೇ ಹುಟ್ಟಿದವರು ಯಾವ ಮನುಗಳು ಬ್ರಹ್ಮನ ಮನಸ್ಸಿನಿಂದ ಹುಟ್ಟಿದ್ದಾರೋ, ಅವರು ಬ್ರಹ್ಮಾಂತರ್ಗತನಾದ ನನ್ನಿಂದಲೇ ಹುಟ್ಟಿದವರು (ಅಂದರೆ ಯಾವ ಮನುಗಳು ಬ್ರಹ್ಮದೇವನ ಮನಸ್ಸಿನಿಂದ ಹುಟ್ಟಿದವರೋ, ಅವರು ನನ್ನಿಂದಲೇ ಹುಟ್ಟಿದವರು ಎಂದು ಅಭಿಪ್ರಾಯವು.) ॥ ೬, ೭ ॥

ಟೀ—ಇಲ್ಲಿ ಕರ್ಮಯೋಗ ಸಮಾಧಿಯೋಗಗಳು ವಿವಕ್ಷಿತವಲ್ಲ, ಎಂಬುವ ಅಭಿಪ್ರಾಯದಿಂದ ಯೋಗ ಶಬ್ದದ ಅರ್ಥವನ್ನು ಹೇಳುತ್ತಾರೆ—

ತಾ ॥ ಯುಜ್ಯತೇ ಯೇನ ಯೋಗೋಽಸಾವುಪಾಯಃ ಶಕ್ತಿರೇವ ಚೇತಿ ಚ । ವಿಶಿಷ್ಟಭವನಃ ವಿಭೂತಿಃ । ಮಹತ್ತ್ವಂ ವಿವಿಧಭವನಂ ವಾ । ಯೋಗಃ ಸಾಮರ್ಥ್ಯಂ ॥ ೭ ॥

ಅ ॥ ಯಾವುದರಿಂದ ಹೊಂದಲ್ಪಡುತ್ತದೋ ಅದು ಯೋಗವು. ಅಂದರೆ ಉಪಾಯವು. ಮತ್ತು ಶಕ್ತಿಯು. (ಅಣಿಮಾದ್ಯೈಶ್ವರ್ಯಗಳನ್ನು ಹೇಳದಿದ್ದುದರಿಂದ ವಿಶಾಂ ವಿಭೂತಿಂ ಎಂದದ್ದು ಹೇಗೆಂದರೆ) ವಿಭೂತಿಃ ಸರ್ವೋತ್ಕೃಷ್ಟವಾಗಿ ಇರುವಿಕೆ. ಮಹತ್ತ್ವವು. ದೇವತೆಗಳ ಸಮೂಹಗಳಿಂದಲೂ ತಿಳಿಯಲ್ಪಡ ದಿರುವಿಕೆ. ಅಥವಾ ನಾನಾವಿಧವಾದ ಅವತಾರವು ಯೋಗಃ=ಸಾಮರ್ಥ್ಯವು. ॥ ೭ ॥

ಗೀ ॥ ಅಹಂ ಸರ್ವಸ್ಯ ಪ್ರಭವೋ ಮತ್ತಃ ಸರ್ವಂ ಪ್ರವರ್ತತೇ ।
ಇತಿ ಮತ್ವಾ ಭಜಂತೇ ಮಾಂ ಬುಧಾ ಭಾವಸಮನ್ವಿತಾಃ ॥ ೮ ॥

ಅ ॥ ಅಹಂ=ನಾನು. ಸರ್ವಸ್ಯ=ಚೇತನಾಚೇತನ ನಿಖಿಲ ಜಗತ್ತಿಗೆ. ಪ್ರಭವಃ=ಉತ್ಪಾದಕನು. ಮತ್ತಃ=ನನ್ನಿಂದಲೇ, ಪ್ರವರ್ತತೇ=ಇಷ್ಟಪ್ರಾಪ್ತಿ ಅನಿಷ್ಟಪರಿಹಾರಗಳಿಗೆ ಅನುಕೂಲವಾದ ವ್ಯಾಪಾರ ವುಳ್ಳದ್ದಾಗುತ್ತದೆ. (ನಾಶ ಮೊದಲಾದುದೂ ನನ್ನ ಅಧೀನವೇ) ಇತಿ=ಹೀಗೆ, ಮತ್ವಾ=ತಿಳಿದು ಕೊಂಡು, ಬುಧಾಃ=ಜ್ಞಾನಿಗಳು, ಭಾವಸಮನ್ವಿತಾಃ=ಭಕ್ತಿಯಿಂದ ಕೂಡಿದವರಾಗಿ, ಮಾಂ=ನನ್ನನ್ನು ಭಜಂತೇ=ಪತ್ರಪುಷ್ಪಾದಿಗಳಿಂದ ಪೂಜಿಸುತ್ತಾರೆ ಮತ್ತು ಧ್ಯಾನಿಸುತ್ತಾರೆ. ॥ ೮ ॥

ಭಾ ॥ ಸಂತಿ ಚ ಭಜಂತಃ ಕೇಚಿದಿತ್ಯಾಹ । ಅಹಮಿತ್ಯಾದಿನಾ ॥ ೮ ॥

ಅ ॥ ಹಿಂದೆ ಹೇಳಿದ ಫಲದಲ್ಲಿ ವಿಶ್ವಾಸ ಹುಟ್ಟುವುದಕ್ಕಾಗಿ, ಹಾಗೆ ಪೂಜಿಸುವವರು ಕೆಲವರು ಇದ್ದಾರೆ, ಎಂದು ಅಹಂ ಇತ್ಯಾದಿಗಳಿಂದ ಹೇಳುತ್ತಾರೆ. ॥ ೮ ॥

ತಾ ॥ ಭಜಂತೇ ಮಾಮಿತ್ಯನೇನ ಜೀವೇಶ್ವರೈಕ್ಯಾಶಂಕಾಂ ನಿವರ್ತಯತಿ ॥ ೮ ॥

ಅ ॥ ಭಜಂತೇ ಮಾಂ ಎನ್ನುವುದರಿಂದ ಜೀವನಿಗೂ ಶ್ರೀಹರಿಗೂ ಐಕ್ಯವೆಂಬುವ ಶಂಕೆಯನ್ನು ಪರಿ ಹರಿಸುತ್ತಾರೆ ॥ ೮ ॥

ಗೀ ॥ ಮಚ್ಚಿತ್ತಾ ಮದ್ಗತಪ್ರಾಣಾ ಬೋಧಯಂತಃ ಪರಸ್ಪರಂ ।
ಕಥಯಂತಶ್ಚ ಮಾಂ ನಿತ್ಯಂ ತುಷ್ಯಂತಿ ಚ ರಮಂತಿ ಚ ॥ ೯ ॥

ಅ ॥ ಮಚ್ಚಿತ್ತಾಃ=(ಜ್ಞಾನಿಗಳು) ನನ್ನಲ್ಲಿಯೇ ಸಂಪೂರ್ಣ ಮನಸ್ಸನ್ನು ಇಟ್ಟವರಾಗಿ, ಮದ್ಗತಪ್ರಾಣಾಃ=ನನ್ನ ಪ್ರೀತಿಗಾಗಿಯೇ ಎಲ್ಲಾ ವ್ಯಾಪಾರವನ್ನು ಮಾಡುವವರಾಗಿ, ನಿತ್ಯಂ=ನಿರಂತರದಲ್ಲಿಯೂ, ಬೋಧಯಂತಃ=ಶಿಷ್ಯರಿಗೆ ನನ್ನನ್ನುಪದೇಶಮಾಡುತ್ತಿರುವ, ಪರಸ್ಪರಂ=ಅನ್ಯೋನ್ಯವಾಗಿ, ಮಾಂ=ನನ್ನನ್ನು, ಕಥಯಂತಶ್ಚ=ಸಂಕೀರ್ತನ ಮಾಡುತ್ತಾ, ತುಷ್ಯಂತಿ ಚ=ತೃಪ್ತಿಯುಳ್ಳವರಾಗುತ್ತಾರೆ. (ವಿಷಯಗಳಲ್ಲಿ ಅಲಂಬುದ್ಧಿಯುಳ್ಳವರಾಗುತ್ತಾರೆ.) ರಮಂತಿ ಚ=ಸುಖವನ್ನೇ ಅನುಭವಿಸುತ್ತಾರೆ. ॥ ೯ ॥

ತಾ ॥ ಮದ್ಗತಪ್ರಾಣಾ ಮದ್ವಿಷಯಚೇಷ್ಟಾಃ ॥ ೯ ॥

ಅ ॥ ಮದ್ಗತಪ್ರಾಣಾಃ=ನನ್ನ ವಿಷಯಕ ವ್ಯಾಪಾರವುಳ್ಳವರು. ॥ ೯ ॥

ಗೀ ॥ ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ ।
ದದಾಮಿ ಬುದ್ಧಿಯೋಗಂ ತಂ ಯೇನ ಮಾಮುಪಯಾಂತಿ ತೇ ॥೧೦॥

ಅ ॥ ಸತತಯುಕ್ತಾನಾಂ=ಯಾವಾಗಲೂ ನನ್ನಲ್ಲಿಯೇ ಮನಸ್ಸನ್ನು ಇಟ್ಟಿರುವ, ಪ್ರೀತಿಪೂರ್ವಕಂ=ಸ್ವಪ್ರಕಾಶಹಪೂರ್ವಕವಾಗಿ, ಮಾಂ=ನನ್ನನ್ನೇ, ಭಜತಾಂ=ಭಜನೆಮಾಡುತ್ತಿರುವ. ತೇಷಾಂ=ಅವರಿಗೆ ಯೇನ=ಯಾವ ಬುದ್ಧಿಯೋಗದಿಂದ, ಮಾಂ=ನನ್ನನ್ನು, ಉಪಯಾಂತಿ=ಹೊಂದುತ್ತಾರೋ, ತಂ ಬುದ್ಧಿಯೋಗಂ=ಅಂತಹ ಜ್ಞಾನರೂಪವಾದ ಮೋಕ್ಷೋಪಾಯವನ್ನು. ದದಾಮಿ=ಕೊಡುತ್ತೇನೆ ॥ ೧೦ ॥

ಗೀ ॥ ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ ೧೧ ॥

ಅ ॥ ತೇಷಾಂ=ಆ ಭಕ್ತರಿಗೆ. ಅನುಕಂಪಾರ್ಥಮೇವ=ಅನುಗ್ರಹಮಾಡುವುದಕ್ಕಾಗಿಯೇ, (ಯಾವುದಾದರೊಂದು ಫಲವನ್ನುದ್ದೇಶಿಸಿ ಅಲ್ಲ.) ಅಹಂ=ನಾನು, ಅಜ್ಞಾನಜಂ=ಅಜ್ಞಾನದಿಂದ ಹುಟ್ಟಿದ, ತಮಃ=ಸುಖದುಃಖಾದಿಬಂಧವನ್ನು, ಭಾಸ್ವತಾ=ಪ್ರಕಾಶಿಸಿಕೊಂಡಿರುವ, ಜ್ಞಾನದೀಪೇನ=ಜ್ಞಾನವೆಂಬುವ ದೀಪದಿಂದ. ಆತ್ಮಭಾವಸ್ಥಃ=ಭಕ್ತರ ಮನೋವ್ಯಾಪಾರಕ್ಕೆ ವಿಷಯನಾಗಿ, ನಾಶಯಾಮಿ=ನಾಶಮಾಡುತ್ತೇನೆ. ॥ ೧೧ ॥

ಗೀ ॥ ॥ ಅರ್ಜುನ ಉವಾಚ ॥
ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।
ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಂ ॥ ೧೨ ॥

ಅ ॥ ಅರ್ಜುನಃ=ಅರ್ಜುನನು, (ಹೀಗೆ ಸಂಕ್ಷೇಪದಿಂದ ಹೇಳಿದ ವಿಭೂತಿಯನ್ನು ಯೋಗವನ್ನೂ ಇನ್ನೂ ವಿಸ್ತಾರವಾಗಿ ತಿಳಿಯಲಿಚ್ಛಿಸಿದವನಾಗಿ ಅದನ್ನು ಸ್ತುತಿಸುತ್ತಾ ಅದನ್ನು ಹೇಳುವುದಕ್ಕಾಗಿ) ಉವಾಚ=ಪ್ರಾರ್ಥಿಸುತ್ತಾನೆ. (ಎಲೋ ಶ್ರೀಪರಮಾತ್ಮನೇ) ಭವಾನ್=ನೀನು, ಪರಂಬ್ರಹ್ಮ=ಸರ್ವೋತ್ಕೃಷ್ಟನಾದ

ಸರ್ವಗುಣಪರಿಪೂರ್ಣನಾದ ಪರಬ್ರಹ್ಮನು, ಪರಂ=ಸರ್ವೋತ್ತಮನಾದ, ಧಾಮ=ಆಶ್ರಯನು, ಪರಮಂ=ಉತ್ತಮನಾದ, ಪವಿತ್ರಂ=ನಿರ್ದೋಷಸ್ವರೂಪನು. ತ್ವಾಂ=ನಿನ್ನನ್ನು. (ವಸಿಷ್ಠಾದಿ ಋಷಿಗಳು), ಶಾಶ್ವತಂ=ವಿಕಾರರಹಿತನನ್ನಾಗಿಯೂ, ದಿವ್ಯಂ=ಲೋಕವಿಲಕ್ಷಣನನ್ನಾಗಿಯೂ, ಆದಿದೇವಂ=ಬ್ರಹ್ಮಾದಿ ದೇವತೆಗಳಿಗೂ ಮುಖ್ಯ ಕಾರಣನನ್ನಾಗಿಯೂ, ಅಜಂ=ಉತ್ಪತ್ತಿರಹಿತನನ್ನಾಗಿಯೂ, ವಿಭುಂ=ಸರ್ವತ್ರ ವ್ಯಾಪಕನನ್ನಾಗಿಯೂ, ಪುರುಷಂ=ಪರಿಪೂರ್ಣಗುಣಗಳುಳ್ಳವನನ್ನಾಗಿಯೂ (ಜ್ಞಾನಿಗಳು ಹೇಳುತ್ತಾರೆ.)॥ ೧೨ ॥

ಗೀ॥ ಆಹುಸ್ತ್ವಾಮೃಷಯಃ ಸರ್ವೇ ದೇವರ್ಷಿರ್ನಾರದಸ್ತಥಾ ।
ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥ ೧೩ ॥

ಅ॥ ದೇವರ್ಷಿಃ=ದೇವರ್ಷಿಗಳಾದ, ನಾರದಃ=ನಾರದಮುನಿಗಳೂ, ಅಸಿತಃ=ಅಸಿತಮುನಿಗಳೂ, ದೇವಲಃ=ದೇವಲಮುನಿಗಳೂ, ವ್ಯಾಸಃ=ವೇದವ್ಯಾಸರು, ಸರ್ವೇ ಋಷಯಃ=ಇನ್ನಿತರ ಎಲ್ಲಾ ಋಷಿಗಳೂ ಕೂಡ, ತಥಾ=ಅದೇ ಪ್ರಕಾರ, ತ್ವಾಂ=ನಿನ್ನನ್ನು, (ಸರ್ವೋತ್ತಮನಾದ ಶ್ರೀಪರಮಾತ್ಮನನ್ನಾಗಿ) ಆಹುಃ=ಹೇಳುತ್ತಾರೆ. ಸ್ವಯಂ=ನೀನೂ ಕೂಡ ತಥೈವ=ಅದೇ ಪ್ರಕಾರವೇ, ಮೇ=ನನಗೋಸ್ಕರ, ಬ್ರವೀಷಿ=ಉಪದೇಶಮಾಡುತ್ತಿ. ॥ ೧೩ ॥

ಗೀ॥ ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।
ನ ಹಿ ತೇ ಭಗವನ್ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥ ೧೪ ॥

ಅ॥ ಕೇಶವ=ಶ್ರೀಪರಮಾತ್ಮನೇ, (ನೀನು) ಯತ್=ಯಾವ ಮಹಿಮೆಯನ್ನು, ಮಾಂ=ನನ್ನನ್ನು ಕುರಿತು, ವದಸಿ=ಹೇಳಿದ್ದಿಯೋ, ಏತತ್ಸರ್ವಂ=ಹಿಂದೆ ಹೇಳಿದ ಎಲ್ಲಾ ಮಹಿಮೆಯನ್ನು ಋತಂ=ಸತ್ಯವನ್ನಾಗಿಯೇ, ಮನ್ಯೇ=ತಿಳಿಯುತ್ತೇನೆ ಭಗವನ್=ಭಗವಂತನೇ, ತೇ=ನಿನ್ನ, ವ್ಯಕ್ತಿಂ=ಸಾಮರ್ಥ್ಯಾತಿಶಯವನ್ನು, ದೇವಾಃ=ದೇವತೆಗಳೂ, ನ ವಿದುಃ=ತಿಳಿಯುವುದಿಲ್ಲ. ದಾನವಾಶ್ಚ=ದಾನವರೂ ಕೂಡ, ನ ವಿದುಃ=ತಿಳಿಯುವುದಿಲ್ಲ. ಹಿ=ಈ ವಿಷಯವು ನ ಯಸ್ಯೇಂದ್ರೋ ವರುಣೋ ನ ಮಿತ್ರಃ ಇತ್ಯಾದಿ ವೇದಗಳಲ್ಲಿ ಪ್ರಸಿದ್ಧವೇ ಆಗಿದೆ. ॥ ೧೪ ॥

ಗೀ॥ ಸ್ವಯಮೇವಾತ್ಮನಾತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।
ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥ ೧೫ ॥

ಅ॥ ಭೂತಭಾವನ=ಸಮಸ್ತ ಪ್ರಾಣಿಗಳಿಗೂ ಉತ್ಪತ್ತಿಕಾರಣನಾದ, ಭೂತೇಶ=ಸಮಸ್ತಪ್ರಾಣಿಗಳಿಗೆ ನಿಯಾಮಕನಾದ, ದೇವದೇವ=ಬ್ರಹ್ಮಾದಿಗಳಿಗೆ ಸ್ವಾಮಿಯಾದ, ಜಗತ್ಪತೇ=ಸರ್ವ ಜಗತ್ತನ್ನು ಕಾಪಾಡುವ ಪುರುಷೋತ್ತಮ=ಕ್ಷರಾಕ್ಷರ ಪುರುಷರಿಂದ ಶ್ರೇಷ್ಠನಾದ ಶ್ರೀಕೃಷ್ಣನೇ. ತ್ವಂ=ನೀನು, ಸ್ವಯಮೇವ=ಬೇರೆ ಯಾರನ್ನು ಅಪೇಕ್ಷಿಸದೆ, ಆತ್ಮನಾ=ತನ್ನ ಸಾಮರ್ಥ್ಯದಿಂದ. ಆತ್ಮಾನಂ=ನಿನ್ನನ್ನು ವೇತ್ಥ=ಚೆನ್ನಾಗಿ ತಿಳಿದಿರುತ್ತಿ ॥ ೧೫ ॥

ಪೀ—ಬ್ರಹ್ಮವಿಭೂತಿಗಳಿಗೆ ಬೇರೆ ಬೇರೆ ಅರ್ಥವನ್ನು ಹೇಳುತ್ತಾರೆ—

ಭಾ ॥ (೧) ಬ್ರಹ್ಮ ಪರಿಪೂರ್ಣಂ । ಅಥ ಕಸ್ಮಾದುಚ್ಯತೇ ಪರಂ ಬ್ರಹ್ಮ ಬೃಹತಿ ಬೃಂಹಯತಿ ಚೇತಿ ಶ್ರುತಿಃ । ಬೃಹ ಬೃಹಿ ವೃದ್ಧಾವಿತಿ ಪಠಂತಿ । ಪರಮಂ ಯೋ ಮಹದ್ವ್ಯಶ್ನೋತಿ ಚ ॥ (೨) ವಿವಿಧರೂಪೀದಿತಿ ವಿಭುಃ । ತಥಾ ಹಿ ವಾರುಣಶಾಖಾಯಾಂ । ವಿಭುಃ ಪ್ರಭುಃ ಪ್ರಥಮಂ ಮೇಹನಾವತ ಇತಿ । ಸ ಹ್ಯೇವ ಪ್ರಾಭವದ್ವಿವಿಧೋಽಭವದಿತಿ । ಸೋಽಕಾಮಯತ ಬಹು ಸ್ಯಾಂ ಪ್ರಜಾಯೇಯೇತ್ಯಾದೇಶ್ಚ ॥ ೧೨—೧೫ ॥

ಅ ॥ (೧) ಬ್ರಹ್ಮ=ಸರ್ವಗುಣಪರಿಪೂರ್ಣನು. ಸರ್ವೋತ್ಕೃಷ್ಟವಾದ ವಸ್ತುವು ಬ್ರಹ್ಮ ಎಂದು ಶ್ರುತಿಯಿಂದ ಹೇಳಲ್ಪಡುತ್ತದೆ, ಎಂದರೆ ತಾನು ಸಮಸ್ತಗುಣಗಳಿಂದ ಪೂರ್ಣನಾಗಿದ್ದು ಬೇರೆಯವರನ್ನು ಅವರವರ ಯೋಗ್ಯತಾನುಸಾರ ಗುಣಗಳಿಂದ ಪೂರ್ಣೀಕರಿಸುತ್ತಾನೆ ಎಂದು ವೇದವು. ಬೃಹಧಾತುವು ಬೃಹಿಧಾತುವೂ ವೃದ್ಧಿಯೆಂಬುವ ಅರ್ಥದಲ್ಲಿದೆ, ಎಂದು ಅಭಿಜ್ಞರು ಹೇಳುತ್ತಾರೆ. ಸರ್ವೋತ್ತಮನಾದ ವಸ್ತು ಮಹದ್ಬ್ರಹ್ಮ ಎನಿಸುತ್ತಾನೆ. (೨) ಅನೇಕ ರೂಪಗಳನ್ನು ಹೊಂದಿರುವುದರಿಂದ ವಿಭುಃ ಎನಿಸುತ್ತಾನೆ. ಅದೇ ಅಭಿಪ್ರಾಯವನ್ನು ವಾರುಣಶಾಖೆಯಲ್ಲಿ ಹೇಳಿದೆ ಭಕ್ತರಿಗೆ ಅಭಿಲಷಿತವಾದುದನ್ನು ಕೊಡುವ ಶ್ರೀಪರಮಾತ್ಮನ ಪ್ರಥಮ ರೂಪವು ವಿಭು ಎಂದೂ ಪ್ರಭು ಎಂದೂ ಆಯಿತು. ಹೇಗೆಂದರೆ ಆ ಶ್ರೀಪರಮಾತ್ಮನು ಸರ್ವಸಮರ್ಥನಾದುದರಿಂದ ಪ್ರಭು ಎಂದೂ, ಅನೇಕರೂಪಗಳನ್ನು ಹೊಂದಿರುವುದರಿಂದ ವಿಭುಃ ಎಂದೂ ಆದನು. ಮತ್ತು ಆ ಶ್ರೀಪರಮಾತ್ಮನು ನಿಯಮ್ಯ ಬಹುವಸ್ತುಗಳಲ್ಲಿ ನಿಯಾಮಕ ಬಹುರೂಪಗಳಿಂದ ವ್ಯಕ್ತನಾಗುವೆನು ಎಂದು ಇಚ್ಛಿಸಿದನು ಇದು ಮೊದಲಾದ ಪ್ರಮಾಣಗಳಿಂದಲೂ (ಶ್ರೀಹರಿಯು ಅನೇಕ ರೂಪಗಳುಳ್ಳವನಾದನು) ॥ ೧೨—೧೫ ॥

ಟೀ ಅರ್ಜುನನು ಈ ಪ್ರಕಾರ ಸ್ತೋತ್ರಮಾಡಿ ಪ್ರಾರ್ಥಿಸುತ್ತಾನೆ—

ಗೀ ॥ ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।
ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥ ೧೬ ॥

ಅ ॥ ತ್ವಂ=ನೀನು ಯಾಭಿಃ=ಯಾವ, ವಿಭೂತಿಭಿಃ=ವಿಭೂತಿರೂಪಗಳಿಂದ ಇಮಾನ್ ಲೋಕಾನ್=ಈ ಲೋಕಗಳನ್ನು, ವ್ಯಾಪ್ಯ=ವ್ಯಾಪಿಸಿಕೊಂಡು, ತಿಷ್ಠಸಿ=ಇರುತ್ತೀಯೋ. (ಯಾಃ=ಯಾವ) ಆತ್ಮವಿಭೂತಯಃ=ನಿನ್ನ ರಾಮಕೃಷ್ಣಾದ್ಯನೇಕ ವಿಭೂತಿರೂಪಗಳು, ಅಥವಾ ಆಯಾಯ ವಸ್ತುಗಳಲ್ಲಿ ನಿನ್ನ ಸನ್ನಿಧಾನವಿಶೇಷದಿಂದ ಅವುಗಳಿಗೆ ಆಯಾಯ ಜಾತಿಗಳಲ್ಲಿ ಶ್ರೇಷ್ಠತ್ವವನ್ನು ಹೊಂದಿಸಿಕೊಡುವ ವಿಭೂತಿರೂಪಗಳು, ದಿವ್ಯಾಃ=ತೇಜಸ್ಸು ಮಹತ್ವಗಳಿಂದ ಅತ್ಯದ್ಭುತಗಳಾಗಿ ಅಪ್ರಾಕೃತಗಳಾಗಿವೆಯೋ, (ಅಂತಹ ನಿನ್ನ ವಿಭೂತಿರೂಪಗಳನ್ನು) ಅಶೇಷೇಣ=ಸಂಪೂರ್ಣವಾಗಿ, (ನನ್ನ ಯೋಗ್ಯತೆಗೆ ಅನುಗುಣವಾಗಿ) ವಕ್ತುಂ=ಹೇಳುವುದಕ್ಕೆ, ಅರ್ಹಸಿ=ಯೋಗ್ಯನಾಗಿರುತ್ತಿ. (ಹೇಳು) ॥ ೧೬ ॥

ಟೀ—ನಿರಂತರದಲ್ಲಿಯೂ ಶ್ರೀಕೃಷ್ಣನನ್ನು ಧ್ಯಾನಿಸಿಕೊಂಡಿರುವುದರಿಂದ ಶ್ರೀಕೃಷ್ಣನ ವಿಭೂತಿರೂಪಗಳನ್ನು ತಿಳಿದಿರುವ ಕಾರಣ ಹೇಳಬೇಕೆಂದು ಪ್ರಾರ್ಥಿಸಿದ್ದು ಏತಕ್ಕೆಂದರೆ—

ಗೀ ॥ ಕಥಂ ವಿದ್ಯಾಮಹಂ ಯೋಗಿಂಸ್ತ್ವಾಂ ಸದಾ ಪರಿಚಿಂತಯನ್ ।
ಕೇಷುಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ಮಯಾ ॥ ೧೭ ॥

ಅ ॥ ಯೋಗಿನ್ = ಅನಂತಾನಂತ ಶಕ್ತಿಯುಳ್ಳ ಶ್ರೀಪರಮಾತ್ಮನೇ, ತ್ವಾಂ = ನಿನ್ನನ್ನು, ಸದಾ = ಯಾವಾಗಲೂ, ಪರಿಚಿಂತಯನ್ನಪಿ = ಧ್ಯಾನವಮಾಡುತ್ತಿದ್ದಾಗ್ಯೂ, ಅಹಂ = ನಾನು, (ನಿನ್ನ ಉಪದೇಶವಿಲ್ಲವಾದರೆ) ಕಥಂ = ಹೇಗೆ, (ವಿಭೂತೀಃ = ನಿನ್ನ ವಿಭೂತಿರೂಪಗಳನ್ನು,) ವಿದ್ಯಾಂ = ತಿಳಿದೇನು. (ಆದಕಾರಣ) ಭಗವನ್ = ಶ್ರೀಕೃಷ್ಣನೇ, ಕೇಷುಕೇಷು ಚ ಭಾವೇಷು = ಯಾವ ಯಾವ ಪದಾರ್ಥಗಳಲ್ಲಿ, (ಆಯಾ ಪದಾರ್ಥಗಳಿಗೆ ಆಯಾವ ಜಾತಿಗಳಲ್ಲಿ ಉತ್ತಮತ್ವವನ್ನು ಹೊಂದಿಸಿಕೊಟ್ಟು ಇದ್ದವನಾಗಿ,) (ನನ್ನಿಂದ) ಚಿಂತ್ಯಃ = ಧ್ಯಾನಿಸಲ್ಪಡತಕ್ಕವನು, ಅಸಿ = ಆಗುತ್ತಿ. ॥ ೧೭ ॥

ಭಾ ॥ ವಿಭೂತಯೋ ವಿವಿಧಭೂತಯಃ ॥ ೧೬,೧೭ ॥

ಅ ॥ ವಿಭೂತಯಃ = ಶ್ರೀ ರಾಮ ಕೃಷ್ಣ ಮೊದಲಾದ ಅನೇಕ ವಿಭೂತಿರೂಪಗಳು. ॥ ೧೬, ೧೭ ॥

ಗೀ ॥ ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।
ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಂ ॥ ೧೮ ॥

ಅ ॥ ಜನಾರ್ದನ = ಶ್ರೀಕೃಷ್ಣನೇ, ಆತ್ಮನಃ = ನಿನ್ನ, ಯೋಗಂ = ಸಾಮರ್ಥ್ಯವನ್ನು, ವಿಭೂತಿಂ ಚ = ನಿನ್ನ ಸನ್ನಿಧಾನ ವಿಶೇಷದಿಂದ ಆಯಾವ ಪದಾರ್ಥಗಳಿಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಆಯಾವ ವಸ್ತುಗಳಲ್ಲಿ ನಿಯಾಮಕವಾಗಿರುವ ರೂಪಗಳನ್ನು, ಮತ್ತು ನಾನಾ ವಿಧಗಳಾಗಿರುವ ರೂಪಗಳನ್ನು, ವಿಸ್ತರೇಣ = ವಿಸ್ತಾರವಾಗಿ, ಭೂಯಃ = ಮತ್ತು ಮತ್ತು, ಕಥಯ = ಉಪದೇಶಿಸು. ತೇ = ನಿನ್ನ, ಅಮೃತಂ = ವಚನಾಮೃತವನ್ನು, ಶೃಣ್ವತಃ = ಕೇಳತಕ್ಕ, ಮೇ = ನನಗೆ, ತೃಪ್ತಿಃ = ಅಲಂಬುದ್ಧಿಯು, ನಾಸ್ತಿ = ಇಲ್ಲ. ಹಿ = ನಿಶ್ಚಯವು. ॥ ೧೮ ॥

ಗೀ ॥ ॥ ಶ್ರೀಭಗವಾನುವಾಚ ॥
ಹಂತ ತೇ ಕಥಯಿಷ್ಯಾಮಿ ದಿವ್ಯಾ ಹ್ಯಾತ್ಮವಿಭೂತಯಃ ।
ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯಂತೋ ವಿಸ್ತರಸ್ಯ ಮೇ ॥ ೧೯ ॥

ಅ ॥ ಶ್ರೀಭಗವಾನ್ = ಶ್ರೀಕೃಷ್ಣಪರಮಾತ್ಮನು, ಉವಾಚ = ಉಪದೇಶಿಸುತ್ತಾನೆ. ಕುರುಶ್ರೇಷ್ಠ = ಅರ್ಜುನನೇ, ದಿವ್ಯಾಃ = ಲೋಕವಿಲಕ್ಷಣಗಳಾದ, ಆತ್ಮವಿಭೂತಯಃ = ವಸ್ತುಗಳಿಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಡುವ ನನ್ನ ವಿಭೂತಿರೂಪಗಳು ಅಥವಾ ಅನೇಕ ವಿಧ ರೂಪಗಳು ಯಾವುವು ಇರುತ್ತವೆಯೋ,) ಪ್ರಾಧಾನ್ಯತಃ = ಎಲ್ಲರಿಗಿಂತಲೂ ಶ್ರೇಷ್ಠವಾಗಿರುವ ಅಂತಹ ರೂಪಗಳನ್ನು, ತೇ = ನಿನಗಾಗಿ, ಹಂತ = ಸಂತೋಷದಿಂದ, ಕಥಯಿಷ್ಯಾಮಿ = ಹೇಳುವೆನು ಹಿ = ಏಕೆಂದರೆ, ಮೇ = ನನ್ನ ವಿಸ್ತರಸ್ಯ = ನನ್ನ ಸನ್ನಿಧಾನ ವಿಶೇಷದಿಂದ ವಸ್ತುಗಳಿಗೆ ಉತ್ತಮತ್ವವನ್ನು ಹೊಂದಿಸಿಕೊಡುವ ವಿಭೂತಿರೂಪಗಳ ವಿಸ್ತಾರಕ್ಕೆ ಅಂತಃ = ಸಮಾಪ್ತಿಯು, ನಾಸ್ತಿ = ಇಲ್ಲ (ಆದಕಾರಣ ಸಂಪೂರ್ಣ ಹೇಳಲಿಕ್ಕೆ ಸಾಧ್ಯವೇ ಇಲ್ಲ.) ॥ [illegible]

ಗೀ ॥ ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।
ಅಹಮಾದಿಶ್ಚ ಮಧ್ಯಂ ಚ ಭೂತಾನಾಮಂತ ಏವ ಚ ॥ ೨೦ ॥

ಅ ॥ ಗುಡಾಕೇಶ=ನಿದ್ರೆಯನ್ನು ವಶಪಡಿಸಿಕೊಂಡಿರುವ ಅರ್ಜುನನೇ, ಅಹಂ=ನಾನು, ಆತ್ಮಾ=ವ್ಯಾಪ್ತನಾದಾಗ್ಯೂ, (ಸಮಸ್ತ ಪ್ರಾಣಿಗಳ ವ್ಯಾಪಾರಗಳಿಗೆ ಪ್ರವರ್ತಕನಾಗಿ) ಸರ್ವಭೂತಾಶಯಸ್ಥಿತಃ=ಎಲ್ಲಾ ಪ್ರಾಣಿಗಳ ಹೃದಯಗುಹೆಯಲ್ಲಿ ನಿಯಾಮಕನಾಗಿರುತ್ತೇನೆ. ಅಹಂ=ನಾನೇ. ಭೂತಾನಾಂ=ಪ್ರಾಣಿಗಳನ್ನು, ಆದಿಶ್ಚ=ಸೃಷ್ಟಿಮಾಡುವವನು. ಮಧ್ಯಂ ಚ=ಇರುವಂತೆ ಮಾಡಿ ರಕ್ಷಿಸಿಕೊಂಡಿರುವವನು, ಅಂತ ಏವ ಚ=ನಾಶಗೊಳಿಸುವವನು. ॥ ೨೦ ॥

ಟೀ—ಅರ್ದ ಗತೌ ಯಾಚನೇ ಚ ಎಂಬುವ ವಚನದಿಂದ ಅಸುರಜನರಿಗೆ ನರಕಾದಿಗಳನ್ನು ಹೊಂದಿಸಿಕೊಡುವುದರಿಂದಲೂ ಜನರಿಂದ ಪ್ರಾರ್ಥಿಸಿಕೊಳ್ಳಲ್ಪಡುವುದರಿಂದಲೂ ಜನಾರ್ದನಃ ಎನಿಸುತ್ತಾನೆಂದು ಪರಭಾಷ್ಯದಲ್ಲಿ ಹೇಳಿದ್ದು ಅಯುಕ್ತವೆನ್ನುತ್ತಾರೆ—

ಭಾ ॥ ನ ಜಾಯತೇಽರ್ದಯತಿ ಚ ಸಂಸಾರಮಿತಿ ಜನಾರ್ದನಃ । ತಥಾ ಚ ಬಾಭ್ರವ್ಯಶಾಖಾಯಾಂ । ಸ ಭೂತಃ ಸ ಜನಾರ್ದನ ಇತಿ ಸ ಹ್ಯಾಸೀತ್ಸ ನಾಸೀತ್ಸೋಽರ್ದಯತೀತಿ ॥ ೧೮, ೧೯, ೨೦ ॥

ಅ ॥ ತಾನು ಹುಟ್ಟದಿದ್ದು ಭಕ್ತರ ಜನನ ಮರಣಾದಿ ದುಃಖ ಪ್ರಚುರವಾದ ಸಂಸಾರವನ್ನು ಹೋಗಲಾಡಿಸಿ ಮೋಕ್ಷವನ್ನು ಕೊಡುವುದರಿಂದ ಜನಾರ್ದನಃ ಎನಿಸುತ್ತಾನೆ. ಅದೇ ಅಭಿಪ್ರಾಯವನ್ನು ಬಾಭ್ರವ್ಯಶಾಖೆಯಲ್ಲಿ ಹೇಳಿದೆ. ಆ ಶ್ರೀಹರಿಯು ಅನಾದಿಕಾಲವನ್ನಾರಂಭಿಸಿ ಇರುವವನು. ಅವನು ಜನಾರ್ದನಃ ಎನಿಸುತ್ತಾನೆ ಏಕೆಂದರೆ ಆ ಜನಾರ್ದನನು ಅನಾದಿಕಾಲವನ್ನಾರಂಭಿಸಿ ಸದಾ ಏಕಪ್ರಕಾರನು ಅವನು ಹುಟ್ಟುವವನಲ್ಲ. ಆ ಶ್ರೀಹರಿಯು ಸಂಸಾರವನ್ನು ನಾಶಗೊಳಿಸಿ ಮೋಕ್ಷಾದಿರೂಪ ಪುರುಷಾರ್ಥವನ್ನು ಕೊಡುವವನು. ॥ ೧೮, ೧೯, ೨೦ ॥

ಟೀ—ಶ್ರೀಪರಮಾತ್ಮನ ವಿಭೂತಿರೂಪವು, ಪ್ರತ್ಯಕ್ಷ, ತಿರೋಹಿತ ಎಂದು ಎರಡು ಪ್ರಕಾರವು ಅದರಲ್ಲಿ ವಿಷ್ಣು, ಕಪಿಲ, ವ್ಯಾಸ ರಾಮ ಮೊದಲಾದ ರೂಪವು ಪ್ರತ್ಯಕ್ಷವೆನಿಸುತ್ತದೆ. ಪದಾರ್ಥಗಳಲ್ಲಿದ್ದು ಅವುಗಳಿಗೆ ಉತ್ತಮತ್ವವನ್ನು ಹೊಂದಿಸಿಕೊಡುವ ರೂಪವು ತಿರೋಹಿತವೆನಿಸುತ್ತದೆ ಅಂತಹ ಎರಡು ವಿಧ ವಿಭೂತಿರೂಪಗಳನ್ನು ಹೇಳುತ್ತಾರೆ

ಗೀ ॥ ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।
ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ ೨೧ ॥

ಅ ॥ ಅಹಂ=ನಾನು, ಆದಿತ್ಯಾನಾಂ=ಹನ್ನೆರಡು ಆದಿತ್ಯರ ಮಧ್ಯದಲ್ಲಿ, ವಿಷ್ಣುಃ (ಸರ್ವತ್ರ ವ್ಯಾಪಿಸಿಕೊಂಡಿರುವುದರಿಂದಲೂ ಸರ್ವರಲ್ಲಿ ಪ್ರವೇಶಿಸಿಕೊಂಡಿರುವುದರಿಂದಲೂ,) ವಿಷ್ಣುವೆಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. (ಇದು ಪ್ರತ್ಯಕ್ಷರೂಪವು) (ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಎಂಬ ಅರ್ಜುನನ ಪ್ರಶ್ನೆಗೆ ಉತ್ತರ ಹೇಳುತ್ತಾರೆ—) ಅಹಂ=ನಾನು, ಜ್ಯೋತಿಷಾಂ ಪ್ರಕಾಶಿಸುವ ವಸ್ತುಗಳ ಮಧ್ಯದಲ್ಲಿ, ಅಂಶುಮಾನ್=ಜಗತ್ತಿನಲ್ಲಿ ವ್ಯಾಪಿಸಿಕೊಂಡಿರುವ ಕಿರಣಗಳುಳ್ಳ [illegible] ಸೂರ್ಯನಿಗೆ ನಿಯಾಮಕನಾಗಿ ಪ್ರಕಾಶವುಳ್ಳ, ಬೇರೆ ವಸ್ತುಗಳಿಗಿಂತ ಸೂರ್ಯನಿಗೆ ಶ್ರೇಷ್ಠತ್ವವನ್ನು [illegible] [illegible]ಗಳಿಂದ ತಿಳಿಯಲ್ಪಡುವುದರಿಂದ ರವಿ ಎಂದು ಹೆಸರುಳ್ಳವನಾಗಿ ರವಿಯ [illegible]

ಟಿತ್ತೀನೆ. ಮರುತಾಂ=ನಲ್ವತ್ತೊಂಭತ್ತು ವಾಯುಗಳ ಮಧ್ಯದಲ್ಲಿ, ಮರೀಚಿಃ=ಮರೀಚಿ ಎಂಬುವ ವಾಯುವಿಗೆ ನಿಯಾಮಕನಾಗಿ ಬೇರೆ ವಾಯುಗಳಿಗಿಂತ ಮರೀಚಿ ಎಂಬ ವಾಯುವಿಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಜಲಧರಿತವಾದ ಮೇಘವನ್ನು ಚಲಿಸುವಂತೆ ಮಾಡುವುದರಿಂದ ಮರೀಚಿ ಎಂದು ಹೆಸರುಳ್ಳವನಾಗಿ ಮರೀಚಿ ಎಂಬುವ ವಾಯುವಿನಲ್ಲಿ ಸನ್ನಿಹಿತನು, ಅಸ್ಮಿ=ಆಗಿರುತ್ತೀನೆ ಅಹಂ=ನಾನು, ನಕ್ಷತ್ರಾಣಾಂ=ನಕ್ಷತ್ರಗಳ ಮಧ್ಯದಲ್ಲಿ, ಶಶೀ=ಚಂದ್ರನಿಗೆ ನಿಯಾಮಕನಾಗಿ ನಕ್ಷತ್ರಗಳಿಗಿಂತ (ಅಹ್ಲಾದವನ್ನುಂಟುಮಾಡುವ ವಸ್ತುಗಳಿಗಿಂತ) ಚಂದ್ರನಿಗೆ ಶ್ರೇಷ್ಠತ್ವವನ್ನು ಕೊಡುತ್ತಾ ಅತಿಶಯ ಸುಖವುಳ್ಳವನಾದುದರಿಂದ ಶಶೀ ಎಂದು ಹೆಸರುಳ್ಳವನಾಗಿ ಚಂದ್ರನಲ್ಲಿ ನಿಯಾಮಕನಾಗಿ, ಅಸ್ಮಿ=ಇರುತ್ತೀನೆ (ಹೀಗೆಯೇ ಎಲ್ಲಾ ಕಡೆಗಳಲ್ಲಿಯೂ ಪರಮಾತ್ಮನ ತಿರೋಹಿತರೂಪಗಳಲ್ಲಿ ಅರ್ಥವನ್ನು ಇಟ್ಟುಕೊಳ್ಳಬೇಕು.) ॥ ೨೧ ॥

## ಗೀ ॥ ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।
## ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥ ೨೨ ॥

ಅ ॥ ಅಹಂ=ನಾನು. ವೇದಾನಾಂ=ವೇದಗಳ ಮಧ್ಯದಲ್ಲಿ, ಸಾಮವೇದಃ=ಸಾಮವೇದಕ್ಕೆ ನಿಯಾಮಕನಾಗಿದ್ದು, ಬೇರೆ ವೇದಗಳಿಗಿಂತ ಸಾಮವೇದಕ್ಕೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಸಾಮವೇದದಲ್ಲಿದ್ದು ಎಲ್ಲಾ ಕಡೆ ಸಮನಾಗಿರುವುದರಿಂದಲೂ ಎಲ್ಲವನ್ನು ತಿಳಿದವನಾಗಿರುವುದರಿಂದಲೂ ಸಾಮವೇದವೆಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೀನೆ. ದೇವಾನಾಂ=ದೇವತೆಗಳ ಮಧ್ಯದಲ್ಲಿ, ವಾಸವಃ=ಇಂದ್ರನಿಗೆ ನಿಯಾಮಕನಾಗಿ ಇಂದ್ರನಲ್ಲಿದ್ದು ಬೇರೆ ದೇವತೆಗಳಿಗಿಂತ ಇಂದ್ರನಿಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಸರ್ವ ದೇಶಗಳಲ್ಲಿ ನಿಯಾಮಕನಾಗಿದ್ದುದರಿಂದ ವಾಸವಃ ಎಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೀನೆ ಇಂದ್ರಿಯಾಣಾಂ=ಇಂದ್ರಿಯಗಳ ಮಧ್ಯದಲ್ಲಿ. ಮನಃ=ಮನಸ್ಸಿಗೆ ನಿಯಾಮಕನಾಗಿ ಮನಸ್ಸಿನಲ್ಲಿದ್ದು ಬೇರೆ ಇಂದ್ರಿಯಗಳಿಗಿಂತ ಮನಸ್ಸೆಂಬ ಇಂದ್ರಿಯಕ್ಕೆ ಶ್ರೇಷ್ಠತ್ವವನ್ನು ಕೊಟ್ಟು ಜ್ಞಾನಸ್ವರೂಪನಾದುದರಿಂದ ಮನಃ ಎಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೀನೆ ಭೂತಾನಾಂ=ಪ್ರಾಣಿಗಳ ಮಧ್ಯದಲ್ಲಿ ಚೇತನಾ=ಬುದ್ಧಿಸ್ಮರಣಶಕ್ತಿಗೆ ನಿಯಾಮಕನಾಗಿ ಸ್ತ್ರೀರೂಪದಿಂದ ಚೇತನಾದಲ್ಲಿದ್ದುದರಿಂದ ಚೇತನಾ ಎಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೀನೆ. ॥ ೨೨ ॥

## ಗೀ ॥ ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಂ ।
## ವಸೂನಾಂ ಪಾವಕಶ್ಚಾಸ್ಮಿ ಮೇರುಃ ಶಿಖರಿಣಾಮಹಂ ॥ ೨೩ ॥

ಅ ॥ ರುದ್ರಾಣಾಂ=೧೧ ರುದ್ರರ ಮಧ್ಯದಲ್ಲಿ, ಶಂಕರಶ್ಚ=ಶಂಕರನೆಂಬುವ ರುದ್ರನಿಗೆ ನಿಯಾಮಕನಾಗಿ ಶಂಕರನಲ್ಲಿದ್ದು ಇತರ ರುದ್ರರಿಗಿಂತ ಶಂಕರನಿಗೆ ಉತ್ಕೃಷ್ಟತ್ವವನ್ನು ಹೊಂದಿಸಿಕೊಟ್ಟು ಸುಖಕ್ಕೆ ಕಾರಣನಾಗಿರುವುದರಿಂದ ಶಂಕರ ಎಂದು ಹೆಸರುಳ್ಳವನು ಅಸ್ಮಿ=ಆಗಿರುತ್ತೀನೆ. ಯಕ್ಷರಕ್ಷಸಾಂ=ಯಕ್ಷರೂ ರಾಕ್ಷಸರೂ ಇವರ ಮಧ್ಯದಲ್ಲಿ, ವಿತ್ತೇಶಃ=ಕುಬೇರನಿಗೆ ನಿಯಾಮಕನಾಗಿ ಕುಬೇರನಲ್ಲಿದ್ದು ಯಕ್ಷ ರಾಕ್ಷಸರಿಗಿಂತ ಕುಬೇರನಿಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಧನಕ್ಕೆ ಸ್ವಾಮಿಯಾಗಿರುವುದರಿಂದ ವಿತ್ತೇಶನೆಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೀನೆ. ವಸೂನಾಂ=ಅಷ್ಟವಸುಗಳ ಮಧ್ಯದಲ್ಲಿ. ಪಾವಕಶ್ಚ=ಅಗ್ನಿಗೆ ನಿಯಾಮಕನಾಗಿ ಅಗ್ನಿಯಲ್ಲಿದ್ದು ೭ ವಸುಗಳಿಗಿಂತ ಈತನಿಗೆ ಅಧಿಕ್ಯವನ್ನು ಹೊಂದಿಸಿಕೊಟ್ಟು ಎಲ್ಲಾ ವಸ್ತುಗಳನ್ನು ಶುದ್ಧೀಕರಿಸುವುದರಿಂದ ಪಾವಕನೆಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೀನೆ. ಅಹಂ=ನಾನು ಶಿಖರಿಣಾಂ=ಪರ್ವತಗಳ ಮಧ್ಯದಲ್ಲಿ ಮೇರುಃ=ಮೇರುಪರ್ವತಕ್ಕೆ ನಿಯಾ

ಮಕನಾಗಿ ಮೇರುಪರ್ವತದಲ್ಲಿದ್ದು ಬೇರೆ ಪರ್ವತಗಳಿಗಿಂತ ಮೇರುಪರ್ವತಕ್ಕೆ ಶ್ರೇಷ್ಠತ್ವವನ್ನು ಹೊಂದಿಸಿ ಕೊಟ್ಟು, ತನಗೆ ಇನ್ನೊಬ್ಬ ಪ್ರೇರಕನು ಸರ್ವಥಾ ಇಲ್ಲದಿರುವುದರಿಂದ ಮೇರು ಎಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. ॥ ೨೩ ॥

## ಗೀ॥ ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಂ ।
## ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥ ೨೪ ॥

ಆ॥ ಪಾರ್ಥ=ಅರ್ಜುನನೇ, ಮಾಂ=ನನ್ನನ್ನು, ಪುರೋಧಸಾಂ ಚ=ಪುರೋಹಿತರ ಮಧ್ಯದಲ್ಲಿ, ಮುಖ್ಯಂ=ಶ್ರೇಷ್ಠನಾದ, ಬೃಹಸ್ಪತಿಂ=ಬೃಹಸ್ಪತ್ಯಾಚಾರ್ಯರಿಗೆ ನಿಯಾಮಕನಾಗಿ, ಬೃಹಸ್ಪತ್ಯಾಚಾರ್ಯರಲ್ಲಿದ್ದು ಎಲ್ಲಾ ಪುರೋಹಿತರಿಗಿಂತಲೂ ಬೃಹಸ್ಪತ್ಯಾಚಾರ್ಯರಿಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಶ್ರೇಷ್ಠರಾದ ಬ್ರಹ್ಮರುದ್ರಾದಿಗಳಿಗೆ ಸ್ವಾಮಿಯಾಗಿರುವುದರಿಂದ ಬೃಹಸ್ಪತಿ ಎಂದು ಹೆಸರುಳ್ಳವನನ್ನಾಗಿ, ವಿದ್ಧಿ=ತಿಳಿ. ಅಹಂ=ನಾನು, ಸೇನಾನೀನಾಂ=ಸೇನಾಧಿಪತಿಗಳ ಮಧ್ಯದಲ್ಲಿ, ಸ್ಕಂದಃ=ಸ್ಕಂದನಿಗೆ ನಿಯಾಮಕನಾಗಿ ಸ್ಕಂದನಲ್ಲಿದ್ದು ಬೇರೆ ಸೇನಾಧಿಪತಿಗಳಿಗಿಂತ ಸ್ಕಂದನಿಗೆ ಉತ್ತಮತ್ವವನ್ನು ಹೊಂದಿಸಿ ಕೊಟ್ಟು ಪ್ರಲಯಕಾಲದಲ್ಲಿ ತನ್ನಲ್ಲಿರುವ ಜಗತ್ತನ್ನು ಸೃಷ್ಟಿಕಾಲದಲ್ಲಿ ಹೊರಪಡಿಸುವುದರಿಂದ ಸ್ಕಂದ ಎಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. ಸರಸಾಂ=ಸರೋವರಗಳ ಮಧ್ಯದಲ್ಲಿ, ಸಾಗರಃ=ಸಮುದ್ರಕ್ಕೆ ನಿಯಾಮಕನಾಗಿ ಸಮುದ್ರದಲ್ಲಿದ್ದು ಸರೋವರಾದಿಗಳಿಗಿಂತ ಸಮುದ್ರಕ್ಕೆ ಉತ್ತಮತ್ವವನ್ನು ಹೊಂದಿಸಿಕೊಟ್ಟು ಸಮಸ್ತ ವಸ್ತುಗಳ ಸಾರಭೋಕ್ತನಾದುದರಿಂದ ಸಾಗರನೆಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ॥ ೨೪ ॥

## ಗೀ॥ ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಂ ।
## ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ ॥ ೨೫ ॥

ಆ॥ ಅಹಂ=ನಾನು, ಮಹರ್ಷೀಣಾಂ=ಮಹರ್ಷಿಗಳ ಮಧ್ಯದಲ್ಲಿ, ಭೃಗುಃ=ಭೃಗುಋಷಿಗೆ ನಿಯಾಮಕನಾಗಿ ಭೃಗುಋಷಿಯಲ್ಲಿದ್ದು ಬೇರೆ ಮಹರ್ಷಿಗಳಿಗಿಂತ ಭೃಗುಋಷಿಗೆ ಶ್ರೇಷ್ಠತ್ವವನ್ನು ಹೊಂದಿಸಿ ಕೊಟ್ಟು, ವಿರೋಧಿಗಳನ್ನು ಸುಡುವುದರಿಂದ (ಅಂದರೆ ಸಂಹರಿಸುವುದರಿಂದ) ಭೃಗು ಎಂದು ಹೆಸರುಳ್ಳವನು. (ಆಗಿರುತ್ತೇನೆ) ಗಿರಾಂ=ವಾಕ್ಯಗಳ ಮಧ್ಯದಲ್ಲಿ ಏಕಂ ಅಕ್ಷರಂ=ಮುಖ್ಯವಾದ ಓಂ ಎಂಬುವ ಪ್ರಣವಕ್ಕೆ ನಿಯಾಮಕನಾಗಿ, ಪ್ರಣವದಲ್ಲಿದ್ದು ಓಂ ಎಂಬುವುದಕ್ಕೆ ಬೇರೆ ಅಕ್ಷರಗಳಿಗಿಂತ ಉತ್ತಮತ್ವವನ್ನು ಹೊಂದಿಸಿಕೊಟ್ಟು ಸರ್ವರಿಗಿಂತ ಮುಖ್ಯನಾದುದರಿಂದಲೂ ನಾಲ್ಕುವಿಧ ನಾಶಗಳಿಲ್ಲದಿರುವವನಾದುದರಿಂದಲೂ, ಏಕಂ ಎಂದೂ ಅಕ್ಷರನೆಂದೂ ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ಯಜ್ಞಾನಾಂ=ಯಜ್ಞಗಳ ಮಧ್ಯದಲ್ಲಿ, ಜಪಯಜ್ಞಃ=ಜಪವೆಂಬುವ ಯಜ್ಞಕ್ಕೆ ನಿಯಾಮಕನಾಗಿ ಜಪವೆಂಬುವ ಯಜ್ಞದಲ್ಲಿದ್ದು ಬೇರೆ ಎಲ್ಲಾ ಯಜ್ಞಗಳಿಗಿಂತಲೂ ಇದಕ್ಕೆ ಆಧಿಕ್ಯವನ್ನು ಹೊಂದಿಸಿಕೊಟ್ಟು ಜಪಿಸುವವರೆಲ್ಲರನ್ನು ರಕ್ಷಿಸುವುದರಿಂದಲೂ, ಬ್ರಹ್ಮಾದಿಗಳಿಂದ ಪೂಜಿಸಲ್ಪಡುವುದರಿಂದಲೂ ಜಪಯಜ್ಞನೆಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ ಸ್ಥಾವರಾಣಾಂ=ಹಂದಾಡದಿರುವ ವಸ್ತುಗಳ ಮಧ್ಯದಲ್ಲಿ, ಹಿಮಾಲಯಃ=ಹಿಮಾಲಯ ಪರ್ವತಕ್ಕೆ ನಿಯಾಮಕನಾಗಿ ಹಿಮಾಲಯ ಪರ್ವತದಲ್ಲಿದ್ದು ಬೇರೆ ಪರ್ವತಗಳಿಗಿಂತ ಹಿಮವತ್ಪರ್ವತಕ್ಕೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಹ್ರೀ, ಶ್ರೀ ಎಂಬುವ ಎರಡು ಲಕ್ಷ್ಮೀರೂಪಗಳಿಗೆ ಆಶ್ರಯನಾಗಿರುವುದರಿಂದ ಹಿಮಾಲಯನೆಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ ॥ ೨೫ ॥

ಟೀ—ಪ್ರತ್ಯಕ್ಷ ಪರೋಕ್ಷ ಎಂದು ವಿಭೂತಿರೂಪವು ಎರಡು ವಿಧವು. ಅದರಲ್ಲಿ ವಿಷ್ಣ್ವಾದಿಗಳು ಪ್ರತ್ಯಕ್ಷ ವಿಭೂತಿಯುತವೆಂದು ತಿಳಿಸುವುದಕ್ಕಾಗಿ ವಿಷ್ಣು ಮೊದಲಾದ ಶಬ್ದಗಳಿಗೆ ಅರ್ಥವನ್ನು ಹೇಳುತ್ತಾ ಆದಿತ್ಯಾನಾಮಹಂ ವಿಷ್ಣುಃ ಎಂಬುವಲ್ಲಿದ್ದ ವಿಷ್ಣು ಶಬ್ದಕ್ಕೆ ಅರ್ಥವನ್ನು ಹೇಳುತ್ತಾರೆ—

**ಭಾ ॥ (೧) ವಿಷ್ಣುಃ ಸರ್ವವ್ಯಾಪಿತ್ವಪ್ರವೇಶಿತ್ವಾದೇಃ । ವಿಷ್ಲ್ಯ ವ್ಯಾಪ್ತೌ ವಿಶ ಪ್ರವೇಶನ ಇತಿ ಚ ಪಠಂತಿ ॥ (೨) ಗತಿಶ್ಚ ಸರ್ವಭೂತಾನಾಂ ಪ್ರಜಾನಾಂ ಚಾಪಿ ಭಾರತ । ವ್ಯಾಪ್ತೌ ಮೇ ರೋದಸೀ ಪಾರ್ಥ ಕಾಂತಿಶ್ಚಾಭ್ಯಧಿಕಾ ಮಮ ॥ (೩) ಅಧಿಭೂತನಿವಿಷ್ಟಶ್ಚ ತದಿಚ್ಛುಶ್ಚಾಸ್ಮಿ ಭಾರತ । ಕ್ರಮಣಾಚ್ಚಾಪ್ಯಹಂ ಪಾರ್ಥ ವಿಷ್ಣುರಿತ್ಯಭಿಸಂಜ್ಞಿತ ಇತಿ ಮೋಕ್ಷಧರ್ಮೇ ॥ ೨೧—೨೫ ।**

ಅ ॥ (೧) ಸರ್ವತ್ರ ವ್ಯಾಪ್ತಿ. ಎಲ್ಲವನ್ನು ಪ್ರವೇಶಿಸಿಕೊಂಡಿರುವುದು, ಇದು ಮೊದಲಾದವುಗಳಿಂದ ವಿಷ್ಣುಃ ಎನಿಸುತ್ತಾನೆ. ವಿಷ್ಲ್ಯ ಧಾತುವು ವ್ಯಾಪ್ತಿ (ಸರ್ವತ್ರ ವ್ಯಾಪಿಸಿಕೊಂಡಿರುವುದು) ಎಂಬುವ ಅರ್ಥದಲ್ಲಿದೆ. ವಿಶ್ ಧಾತುವು ಪ್ರವೇಶ (ಸರ್ವವನ್ನು ಪ್ರವೇಶಿಸಿಕೊಂಡಿರುವುದು) ಎಂಬುವ ಅರ್ಥದಲ್ಲಿದೆ, ಎಂದು (ಪ್ರಾಜ್ಞರು ಹೇಳುತ್ತಾರೆ.) (೨) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ–) ಭರತಕುಲೋತ್ಪನ್ನನೇ ಪೃಥಿವೀ ಮೊದಲಾದ ಭೂತಗಳಿಗೂ, ಬ್ರಹ್ಮರುದ್ರಾದಿ ಪ್ರಜೆಗಳಿಗೂ ನಾನು ಗತಿಪ್ರದನು. ಎಲೋ ಕುಂತೀಪುತ್ರನೇ ನಾನು ಸ್ವರ್ಗ ಭೂಮಿಗಳನ್ನು ವ್ಯಾಪಿಸಿಕೊಂಡಿದ್ದೇನೆ. ನನಗೆ ಅತ್ಯಧಿಕವಾದ ಕಾಂತಿಯೂ ಇದೆ. (೩) ಎಲೋ ಕುಂತೀಪುತ್ರನೇ ನಾನು ದೇಹಸಹಿತರಾದ ಜೀವರಿಗೆ ಉಪಕಾರಕಗಳಾದ ವಸ್ತುಗಳಲ್ಲಿ ಪ್ರವಿಷ್ಟನಾಗಿದ್ದೇನೆ. ಅಧಿಭೂತಗಳಿಗೆ ಅನ್ನಾದಿಗಳನ್ನು ಇಚ್ಛಿಸುವವನೂ ಆಗಿದ್ದೇನೆ. (ಅನ್ನಾದಿಗಳನ್ನು ಕೊಡುತ್ತೇನೆ.) ನಾನು ಸರ್ವ ಜಗತ್ತನ್ನು ತ್ರಿವಿಕ್ರಮರೂಪದಿಂದ ಮೂರು ಲೋಕಗಳನ್ನು ಆಕ್ರಮಿಸಿಕೊಂಡಿದ್ದುದರಿಂದಲೂ ವಿಷ್ಣು ಎಂದು ಹೆಸರುಳ್ಳವನು. ಎಂದು ಮೋಕ್ಷಧರ್ಮದಲ್ಲಿದೆ. ॥ ೨೧—೨೫ ॥

**ಗೀ ॥ ಅಶ್ವತ್ಥಃ ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗಂಧರ್ವಾಣಾಂ ಚಿತ್ರರಥಃ ಸಿದ್ಧಾನಾಂ ಕಪಿಲೋ ಮುನಿಃ ॥ ೨೬ ॥**

ಅ ॥ ಸರ್ವವೃಕ್ಷಾಣಾಂ=ಎಲ್ಲಾ ವೃಕ್ಷಗಳ ಮಧ್ಯದಲ್ಲಿ, ಅಶ್ವತ್ಥಃ=ಅಶ್ವತ್ಥ ವೃಕ್ಷಕ್ಕೆ ನಿಯಾಮಕನಾಗಿ ಅಶ್ವತ್ಥ ವೃಕ್ಷದಲ್ಲಿದ್ದು ಬೇರೆ ಎಲ್ಲಾ ವೃಕ್ಷಗಳಿಗಿಂತಲೂ ಅಶ್ವತ್ಥವೃಕ್ಷಕ್ಕೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಕುದುರೆಯಂತೆ ಇರುವವನಾದುದರಿಂದ ಅಂದರೆ ಹಯಗ್ರೀವರೂಪ ಅಥವಾ ವಡವಾಸ್ಯ ಮೊದಲಾದ ಹಯರೂಪವುಳ್ಳವನಾದುದರಿಂದ ಅಶ್ವತ್ಥಃ ಎಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ದೇವರ್ಷೀಣಾಂ ಚ=ದೇವರ್ಷಿಗಳ ಮಧ್ಯದಲ್ಲಿ, ನಾರದಃ=ನಾರದಋಷಿಗೆ ನಿಯಾಮಕನಾಗಿ ನಾರದಋಷಿಗಳಲ್ಲಿದ್ದು ಬೇರೆ ದೇವರ್ಷಿಗಳಿಗಿಂತ ನಾರದರಿಗೆ ಉತ್ತಮತ್ವವನ್ನು ಹೊಂದಿಸಿಕೊಡುವವನಾಗಿ ಮನುಷ್ಯರಿಗೆ ಅಪೇಕ್ಷಿತವಾದ ಜ್ಞಾನವನ್ನು ಕೊಡುವವನಾದುದರಿಂದ ನಾರದನೆಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ಗಂಧರ್ವಾಣಾಂ=ಗಂಧರ್ವರ ಮಧ್ಯದಲ್ಲಿ, ಚಿತ್ರರಥಃ=ಚಿತ್ರರಥನೆಂಬುವ ಗಂಧರ್ವನಿಗೆ ನಿಯಾಮಕನಾಗಿ ಅತನಲ್ಲಿದ್ದು ಬೇರೆ ಗಂಧರ್ವರಿಗಿಂತ ಚಿತ್ರರಥನಿಗೆ ಉತ್ತಮತ್ವವನ್ನು ಹೊಂದಿಸಿಕೊಡುವವನಾಗಿ ವಿಚಿತ್ರರಾದ ಅಧಿದೇವಾದಿಗಳು ರಥಸ್ಥಾನೀಯರಾಗಿ ಉಳ್ಳವನಾದುದರಿಂದ ಚಿತ್ರರಥನೆಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ಸಿದ್ಧಾನಾಂ=ಸಿದ್ಧ

ಮಧ್ಯದಲ್ಲಿ. ಮುನಿಃ=ಮನನಸ್ವಭಾವವುಳ್ಳ, ಕಪಿಲಃ=ಆನಂದ ಸ್ವರೂಪನಾಗಿರುವುದರಿಂದಲೂ, ಜಗತ್ತನ್ನು ರಕ್ಷಿಸುತ್ತಿರುವುದರಿಂದಲೂ, ಜಗತ್ತನ್ನು ತನ್ನಲ್ಲಿಯೇ ಪ್ರಲಯಕಾಲದಲ್ಲಿ ಇಂಗಿಸಿಕೊಳ್ಳುವುದರಿಂದಲೂ ಕಪಿಲನೆಂದು ಹೆಸರುಳ್ಳವನು. ಅಥವಾ ಕ್ರೀಡೆಯಿಂದ ಆನಂದವನ್ನೇ ಸರ್ವದಾ ಅನುಭವಿಸಿ ಕೊಂಡಿರುವುದರಿಂದಲೂ ಕಪಿಲನೆಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ॥ ೨೬ ॥

ಗೀ॥ ಉಚ್ಚೈಃಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಂ ।
ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಂ ॥ ೨೭ ॥

ಅ॥ ಮಾಂ=ನನ್ನನ್ನು, ಅಶ್ವಾನಾಂ=ಕುದುರೆಗಳ ಮಧ್ಯದಲ್ಲಿ, ಅಮೃತೋದ್ಭವಂ=ಕ್ಷೀರಸಮುದ್ರದಲ್ಲಿ ಹುಟ್ಟಿದ, ಉಚ್ಚೈಃಶ್ರವಸಂ=ಉಚ್ಚೈಃಶ್ರವಾಃ ಎಂಬುವ ಕುದುರೆಗೆ ನಿಯಾಮಕನಾಗಿ ಆ ಅಶ್ವದಲ್ಲಿದ್ದು ಬೇರೆ ಕುದುರೆಗಳಿಗಿಂತ ಆ ಉಚ್ಚೈಃಶ್ರವಾಃ ಎಂಬುವ ಕುದುರೆಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಅತ್ಯುತ್ಕೃಷ್ಟವಾದ ಕೀರ್ತಿಯುಳ್ಳವನಾದುದರಿಂದ ಉಚ್ಚೈಃಶ್ರವಾಃ ಎಂದು ಹೆಸರುಳ್ಳವನನ್ನಾಗಿ, ವಿದ್ಧಿ=ತಿಳಿ. ಮಾಂ=ನನ್ನನ್ನು. ಗಜೇಂದ್ರಾಣಾಂ=ಶ್ರೇಷ್ಠ ಆನೆಗಳ ಮಧ್ಯದಲ್ಲಿ, ಐರಾವತಂ=ಐರಾವತವೆಂಬುವ ಇಂದ್ರನ ಆನೆಗೆ ನಿಯಾಮಕನಾಗಿ, ಆ ಆನೆಯಲ್ಲಿದ್ದು ಬೇರೆ ಆನೆಗಳಿಗಿಂತ ಐರಾವತವೆಂಬುವ ಆನೆಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಡುವವನಾಗಿ ಮೋಕ್ಷದಲ್ಲಿರುವ ಲಕ್ಷ್ಮ್ಯುತ್ಪಾದಕವಾದ ಐರವೆಂಬುವ ಸರೋವರವನ್ನು ರಕ್ಷಿಸುವವನಾದುದರಿಂದ ಐರಾವತನೆಂದು ಹೆಸರುಳ್ಳವನನ್ನಾಗಿ, ವಿದ್ಧಿ=ತಿಳಿ. ನರಾಣಾಂ=ಮನುಷ್ಯರ ಮಧ್ಯದಲ್ಲಿ, ನರಾಧಿಪಂ=ಚಕ್ರವರ್ತಿಗೆ ನಿಯಾಮಕನಾಗಿ ಅವನಲ್ಲಿದ್ದು ಬೇರೆ ರಾಜರಿಗಿಂತ ಚಕ್ರವರ್ತಿಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಮನುಷ್ಯರಿಗೆ ನಿಯಾಮಕನಾದುದರಿಂದ ನರಾಧಿಪನೆಂದು ಹೆಸರುಳ್ಳವನನ್ನಾಗಿ, ವಿದ್ಧಿ=ತಿಳಿ. ॥ ೨೭ ॥

ಗೀ॥ ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।
ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ ೨೮ ॥

ಅ॥ ಅಹಂ=ನಾನು, ಆಯುಧಾನಾಂ=ಆಯುಧಗಳ ಮಧ್ಯದಲ್ಲಿ, ವಜ್ರಂ=ವಜ್ರಾಯುಧಕ್ಕೆ ನಿಯಾಮಕನಾಗಿ, ಇಂದ್ರಾಯುಧದಲ್ಲಿದ್ದವನಾಗಿ ಬೇರೆ ಎಲ್ಲಾ ಆಯುಧಗಳಿಗಿಂತಲೂ ವಜ್ರಾಯುಧಕ್ಕೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ದೋಷಲೇಶರಹಿತನಾದುದರಿಂದ ಅಥವಾ ಶತ್ರುಗಳು ಶ್ರೀಹರಿಯನ್ನು ಬಿಟ್ಟಿರುವುದರಿಂದ ವಜ್ರನೆಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ಧೇನೂನಾಂ ಧೇನುಗಳ ಮಧ್ಯದಲ್ಲಿ, ಕಾಮಧುಕ್=ಕಾಮಧೇನುವಿಗೆ ನಿಯಾಮಕನಾಗಿ ಕಾಮಧೇನುವಿನಲ್ಲಿದ್ದವನಾಗಿ ಬೇರೆ ಎಲ್ಲಾ ಗೋವುಗಳಿಗಿಂತಲೂ ಕಾಮಧೇನುವಿಗೆ ಶ್ರೇಷ್ಠತ್ವವನ್ನು ಕೊಟ್ಟು ಇಚ್ಛಿಸುವ ವಸ್ತುಗಳನ್ನೆಲ್ಲಾ ಕೊಡುವವನಾದುದರಿಂದ ಕಾಮಧುಕ್ ಎಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ಪ್ರಜನಃ=ಪ್ರಕೃಷ್ಟವಾದ ಉತ್ಪತ್ತಿಗೆ ಕಾರಣನಾದ, ಕಂದರ್ಪಃ=ಮನ್ಮಥನಿಗೆ ನಿಯಾಮಕನಾಗಿ ಮನ್ಮಥನಲ್ಲಿದ್ದು ಅನಿರುದ್ಧಾದಿಗಳಿಗಿಂತ ಶ್ರೇಷ್ಠತ್ವವನ್ನು ಕೊಟ್ಟು ಬಹುಪ್ರಕಾರಗಳಾದ ಆನಂದ ವಿಶೇಷಗಳನ್ನು ಸರ್ವದಾ ಅನುಭವಿಸುವವನಾದುದರಿಂದ ಕಂದರ್ಪನೆಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ಸರ್ಪಾಣಾಂ ಒಂದು ಶಿರಸ್ಸುಳ್ಳ ಸರ್ಪಗಳ ಮಧ್ಯದಲ್ಲಿ, ವಾಸುಕಿಃ ವಾಸುಕಿ ಎಂಬ ಸರ್ಪಕ್ಕೆ ನಿಯಾಮಕನಾಗಿ ವಾಸುಕಿಯಲ್ಲಿದ್ದವನಾಗಿ ಬೇರೆ ಒಂದು ತಲೆಯುಳ್ಳ ಸರ್ಪಗಳಿಗಿಂತ ವಾಸುಕಿಗೆ ಶ್ರೇಷ್ಠತ್ವವನ್ನು ಕೊಟ್ಟು ತನ್ನ ಲೋಕದಲ್ಲಿ ಆವಾಸಮಾಡುವವರಿಗೆ ಅತಿಶಯ ಸುಖವನ್ನು ಕೊಡುವವನಾದುದರಿಂದ ವಾಸುಕಿ ಎಂದು ಹೆಸರುಳ್ಳವನು ಅಸ್ಮಿ=ಆಗಿರುತ್ತೇನೆ. ॥ ೨೮ ॥

ಗೀ || ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಂ |
ಪಿತೄಣಾಮರ್ಯಮಾ ಚಾಸ್ಮಿ ಯಮಃ ಸಂಯಮತಾಮಹಂ || ೨೯ ||

ಅ || ನಾಗಾನಾಂ = ಬಹು ಶಿರಸ್ಸುಗಳುಳ್ಳ ಸರ್ಪಗಳ ಮಧ್ಯದಲ್ಲಿ, ಅನಂತಶ್ಚ = ಶೇಷನಿಗೆ ನಿಯಾಮಕನಾಗಿ ಶೇಷನಲ್ಲಿದ್ದು ಶೇಷನಿಗೆ ಬಹುಶಿರಸ್ಸುಗಳುಳ್ಳ ಬೇರೆ ಸರ್ಪಗಳಿಗಿಂತ ಶ್ರೇಷ್ಠತ್ವವನ್ನು ಕೊಟ್ಟು ಸರ್ವ ದೇಶಕಾಲಗಳಲ್ಲಿ ವ್ಯಾಪಿಸಿಕೊಂಡಿದ್ದು ಸರ್ವಗುಣಪರಿಪೂರ್ಣನಾದುದರಿಂದ ಅನಂತನೆಂದು ಹೆಸರುಳ್ಳವನು. ಅಸ್ಮಿ = ಆಗಿರುತ್ತೇನೆ. ಅಹಂ = ನಾನು, ಯಾದಸಾಂ = ನೀರಿನಲ್ಲಿರುವ ಪ್ರಾಣಿಗಳ ಮಧ್ಯದಲ್ಲಿ, ವರುಣಃ = ವರುಣನಿಗೆ ನಿಯಾಮಕನಾಗಿ ವರುಣನಲ್ಲಿದ್ದವನಾಗಿ ಬೇರೆ ಜಲಚರ ಪ್ರಾಣಿಗಳಿಗಿಂತ ವರುಣನಿಗೆ ಶ್ರೇಷ್ಠತ್ವವನ್ನು ಕೊಟ್ಟು ಉತ್ಕೃಷ್ಟವಾದ ಆನಂದವನ್ನು ಕೊಡುವವನಾದುದರಿಂದ ವರುಣನೆಂದು ಹೆಸರುಳ್ಳವನು. ಅಸ್ಮಿ = ಆಗಿರುತ್ತೇನೆ. ಪಿತೄಣಾಂ = ಪಿತೃದೇವತೆಗಳ ಮಧ್ಯದಲ್ಲಿ. ಅರ್ಯಮಾ ಚ = ಅರ್ಯಮಾ ಎಂಬುವ ಪಿತೃದೇವತೆಗೆ ನಿಯಾಮಕನಾಗಿ ಆ ಅರ್ಯಮಾ ಎಂಬುವ ಪಿತೃದೇವತೆಯಲ್ಲಿದ್ದು ಬೇರೆ ಪಿತೃದೇವತೆಗಳಿಗಿಂತ ಈತನಿಗೆ ಶ್ರೇಷ್ಠತ್ವವನ್ನು ಕೊಡುತ್ತಾ ತಿಳಿಯಲು ಯೋಗ್ಯವಾದುದೆಲ್ಲವನ್ನು ತಿಳಿಯುವವನಾದುದರಿಂದ ಅರ್ಯಮಾ ಎಂದು ಹೆಸರುಳ್ಳವನು. ಅಸ್ಮಿ = ಆಗಿರುತ್ತೇನೆ. ಅಹಂ = ನಾನು, ಸಂಯಮತಾಂ = ನಿಗ್ರಹ ಮಾಡುವವರ ಮಧ್ಯದಲ್ಲಿ, ಯಮಃ = ಯಮನಿಗೆ ನಿಯಾಮಕನಾಗಿ ಯಮನಲ್ಲಿದ್ದು ನಿಯಮನಮಾಡುವವರೆಲ್ಲರಿಗಿಂತಲೂ ಯಮನಿಗೆ ಶ್ರೇಷ್ಠತ್ವವನ್ನು ಕೊಟ್ಟು ನಿಯಮನಕ್ಕೆ ಕಾರಣನಾಗಿರುವುದರಿಂದ ಯಮನೆಂದು ಹೆಸರುಳ್ಳವನಾಗಿ ಯಮ ಎಂಬುವ ಅಹಿಂಸಾ ಸತ್ಯಮಸ್ತೇಯಂ ಇತ್ಯಾದಿ ಶ್ರೇಷ್ಠಗಳಾದ ಧರ್ಮಗಳನ್ನು ಕೊಡುವವನು. ಅಸ್ಮಿ = ಆಗಿರುತ್ತೇನೆ. || ೨೯ ||

ಗೀ || ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾಮಹಂ |
ಮೃಗಾಣಾಂ ಚ ಮೃಗೇಂದ್ರೋಽಹಂ ವೈನತೇಯಶ್ಚ ಪಕ್ಷಿಣಾಂ || ೩೦ ||

ಅ || ದೈತ್ಯಾನಾಂ = ದೈತ್ಯರ ಮಧ್ಯದಲ್ಲಿ, ಪ್ರಹ್ಲಾದಶ್ಚ = ಪ್ರಹ್ಲಾದನೆಂಬುವ ದೈತ್ಯನಿಗೆ ನಿಯಾಮಕನಾಗಿ ಆತನಲ್ಲಿದ್ದು ಎಲ್ಲಾ ದೈತ್ಯರಿಗಿಂತಲೂ ಪ್ರಹ್ಲಾದನಿಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಸರ್ವೋತ್ಕೃಷ್ಟವಾದ ಆನಂದವುಳ್ಳವನಾಗಿರುವುದರಿಂದ ಪ್ರಹ್ಲಾದನೆಂದು ಹೆಸರುಳ್ಳವನಾಗಿ ಅಸ್ಮಿ = ಆಗಿರುತ್ತೇನೆ ಕಲಯತಾಂ = ಚೆನ್ನಾಗಿ ತಿಳಿದುಕೊಳ್ಳುವವರಿಗೆ ಅಥವಾ ಬಂಧನವೇ ಮೊದಲಾದವುಗಳನ್ನು ಮಾಡುವವರಿಗೆ, ಕಾಲಃ = ನಿಯಾಮಕನಾಗಿ ಕಾಲದಲ್ಲಿದ್ದು ಬಂಧನಾದಿಗಳನ್ನು ಮಾಡುವ ಇತರರಿಗಿಂತ ಕಾಲಕ್ಕೆ ಶ್ರೇಷ್ಠತ್ವವನ್ನು ಕೊಡುತ್ತಾ ಸಮಸ್ತವನ್ನು ಚೆನ್ನಾಗಿ ತಿಳಿದುಕೊಳ್ಳುವವನಾದುದರಿಂದ ಕಾಲನೆಂದು ಹೆಸರುಳ್ಳವನು. ಅಸ್ಮಿ = ಆಗಿರುತ್ತೇನೆ ಅಹಂ = ನಾನು. ಮೃಗಾಣಾಂ ಚ = ಮೃಗಗಳ ಮಧ್ಯದಲ್ಲಿ, ಮೃಗೇಂದ್ರಃ = ಸಿಂಹಕ್ಕೆ ನಿಯಾಮಕನಾಗಿ ಸಿಂಹದಲ್ಲಿದ್ದು ಎಲ್ಲಾ ಮೃಗಗಳಿಗಿಂತಲೂ ಸಿಂಹಕ್ಕೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಭಕ್ತಿಪೂರ್ವಕವಾಗಿ ಪರಮಾತ್ಮನನ್ನು ಹುಡುಕುವ ಭಕ್ತರಿಗೆ ಅಧಿಪತಿಯಾಗಿರುವುದರಿಂದ ಮೃಗೇಂದ್ರನೆಂದು ಹೆಸರುಳ್ಳವನು. ಅಸ್ಮಿ = ಆಗಿರುತ್ತೇನೆ. ಪಕ್ಷಿಣಾಂ = ಹಕ್ಕಿಗಳ ಮಧ್ಯದಲ್ಲಿ ವೈನತೇಯಶ್ಚ = ಗರುಡನಿಗೆ ನಿಯಾಮಕನಾಗಿ ಗರುಡನಲ್ಲಿದ್ದು ಎಲ್ಲಾ ಹಕ್ಕಿಗಳಿಗಿಂತಲೂ ಗರುಡನಿಗೆ ಶ್ರೇಷ್ಠತ್ವವನ್ನು ಕೊಟ್ಟು ವಿಶೇಷವಾಗಿ ನಮಸ್ಕರಿಸುವ ಭಕ್ತರಿಗೆ ಆಶ್ರಯನಾಗಿರುವುದರಿಂದ ವೈನತೇಯನೆಂದು ಹೆಸರುಳ್ಳವನು. ಅಸ್ಮಿ = ಆಗಿರುತ್ತೇನೆ. || ೩೦ ||

ಟೀ–ಸಿದ್ಧಾನಾಂ ಕಪಿಲೋ ಮುನಿಃ ಎಂಬುವಲ್ಲಿದ್ದ ಕಪಿಲಶಬ್ದದ ಅರ್ಥವನ್ನು ಹೇಳುತ್ತಾರೆ–

ಭಾ || (೧) ಸುಖರೂಪಃ ಪಾಲ್ಯತೇ ಲೀಯತೇ ಚ ಜಗದನೇನೇತಿ ಕಪಿಲಃ | ಪ್ರೀತಿಸ್ಸುಖಂ ಕಮಾನಂದ ಇತ್ಯಭಿಧಾನಾತ್ || (೨) ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮೇತಿ ಚ || (೩) ಋಷಿಂ ಪ್ರಸೂತಂ ಕಪಿಲಂ ಯಸ್ತಮಗ್ರೇ ಜ್ಞಾನೈರ್ಬಿಭರ್ತಿ ಜಾಯಮಾನಂ ಚ ಪಶ್ಯೇತ್ | ಸುಖಾದನಂತಾತ್ಪಾಲನಾಲ್ಲಾಪನಾಚ್ಚ ಯಂ ವೈದೇವಂ ಕಪಿಲಮುದಾಹರಂತೀತಿ ಬಾಭ್ರವ್ಯಶಾಖಾಯಾಂ || ೨೬—೩೦ ||

ಅ || (೧) ಶ್ರೀಹರಿಯು ಆನಂದರೂಪನು ಜಗತ್ತಿಗೆ ಪಾಲಕನು, ಜಗತ್ತಿಗೆ ನಾಶಕನು ಈ ಸಾಮರ್ಥ್ಯದಿಂದ ಕಪಿಲ ಎನಿಸುತ್ತಾನೆ (ಕ ಶಬ್ದಕ್ಕೆ ಸುಖವೆಂಬುವ ಅರ್ಥವಿದೆ ಎಂಬುವಲ್ಲಿ ಅಭಿಧಾನವನ್ನು ಪ್ರಯೋಗವನ್ನು ಹೇಳುತ್ತಾರೆ.) ಪ್ರೀತಿ, ಸುಖ, ಕ ಆನಂದ ಇವು ಪರ್ಯಾಯಪದವು ಎಂದು ಕ ಶಬ್ದವು ಸುಖ ಎಂಬುವ ಅರ್ಥವನ್ನು ಹೇಳುತ್ತದೆ, ಎಂದಭಿದಾನವು. (೨) ಸರ್ವಚೇಷ್ಟಕನಾದ ಶ್ರೀಪರಮಾತ್ಮನು ಪೂರ್ಣಸುಖಸ್ವರೂಪನು ಪೂರ್ಣ ಜ್ಞಾನಸ್ವರೂಪನು. (೩) (ಹಿಂದೆ ಹೇಳಿದ ಎಲ್ಲಾ ಅರ್ಥಗಳಲ್ಲಿ ಶ್ರುತಿಯನ್ನು ಹೇಳುತ್ತಾರೆ-) ಯಾವಾತನು ಪೂರ್ವಕಲ್ಪಗಳಲ್ಲಿ ಹುಟ್ಟಿದ, ಈಗ ಹುಟ್ಟುತ್ತಿರುವ, ಮುಂದಿನ ಕಲ್ಪಗಳಲ್ಲಿ ಹುಟ್ಟಲಿರುವ ಜಗತ್ತನ್ನು ಮೊದಲು ಜ್ಞಾನಗಳಿಂದ ತಿಳಿಯುತ್ತಾನೋ, ಅಂತಹ ಪರಮಾತ್ಮನನ್ನು ಸರ್ವಜ್ಞನಾಗಿರುವುದರಿಂದ ಋಷಿಯನ್ನಾಗಿ ತಿಳಿಯಬೇಕು. ಅವಿನಾಶಿಯಾದ ಆನಂದದಿಂದಲೂ ಸರ್ವ ಜಗತ್ತನ್ನು ರಕ್ಷಿಸುವುದರಿಂದಲೂ ಸರ್ವ ಜಗತ್ತನ್ನು ಪ್ರಲಯಕಾಲದಲ್ಲಿ ನಾಶಗೊಳಿಸುವುದರಿಂದಲೂ ಕ್ರೀಡಾವಿಶಿಷ್ಟನಾದ ಶ್ರೀಹರಿಯನ್ನು ಕಪಿಲನನ್ನಾಗಿ ಹೇಳುತ್ತಾರೆ, ಎಂದು ಬಾಭ್ರವ್ಯಶಾಖೆಯಲ್ಲಿ ಹೇಳಿದೆ || ೨೬ – ೩೦ ||

ಗೀ || ಪವನಃ ಪವತಾಮಸ್ಮಿ ರಾಮಃ ಶಸ್ತ್ರಭೃತಾಮಹಂ |
ಝಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ || ೩೧ ||

ಅ || ಪವತಾಂ=ಶೋಧಕ ಪದಾರ್ಥಗಳ ಮಧ್ಯದಲ್ಲಿ ಅಥವಾ ವೇಗವುಳ್ಳ ಪದಾರ್ಥಗಳ ಮಧ್ಯದಲ್ಲಿ, ಪವನಃ=ವಾಯುವಿಗೆ ನಿಯಾಮಕನಾಗಿ ವಾಯುವಿನಲ್ಲಿದ್ದವನಾಗಿ, ಶೋಧಕ ಅಥವಾ ವೇಗವುಳ್ಳ ಎಲ್ಲಾ ಪದಾರ್ಥಗಳಿಗಿಂತಲೂ ವಾಯುವಿಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಜಗದ್ರಕ್ಷಕರಿಂದ ದೇವತೆಗಳಿಂದ ಪೂಜಿಸಲ್ಪಡುವುದರಿಂದ ಪವನಃ ಎಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. ಅಹಂ=ನಾನು ಶಸ್ತ್ರಭೃತಾಂ=ಶಸ್ತ್ರಧಾರಿಗಳ ಮಧ್ಯದಲ್ಲಿ, ರಾಮಃ=ತಾನು ಯಾವಾಗಲೂ ಸಂತೋಷವನ್ನು ಹೊಂದಿಕೊಂಡಿರುವುದರಿಂದಲೂ ಲೋಕವನ್ನು ಸಂತೋಷಗೊಳಿಸುವುದರಿಂದಲೂ ರಾಮಃ ಎಂದು ಹೆಸರುಳ್ಳವನು ನಾನು ಝಷಾಣಾಂ=ಮೀನುಗಳ ಮಧ್ಯದಲ್ಲಿ, ಮಕರಃ=ಮೊಸಳೆಗೆ ನಿಯಾಮಕನಾಗಿ ಮೊಸಳೆಯಲ್ಲಿದ್ದವನಾಗಿ ಬೇರೆ ಮೀನುಗಳಿಗಿಂತ ಮೊಸಳೆಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು, ಸಾಧಾರಣ ಜನರಿಗೆ ಅಲ್ಪ ಜ್ಞಾನವನ್ನುಂಟುಮಾಡುವುದರಿಂದ ಮಕರನೆಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. ಸ್ರೋತಸಾಂ=ನದಿಗಳ ಮಧ್ಯದಲ್ಲಿ, ಜಾಹ್ನವಿ=ಭಾಗೀರಥಿಗೆ ನಿಯಾಮಕನಾಗಿ ಭಾಗೀರಥಿಯಲ್ಲಿದ್ದವನಾಗಿ ಬೇರೆ ನದಿಗಳಿಗಿಂತ ಭಾಗೀರಥಿಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಸಂಸಾರವು ನಿಸ್ಸಾರವೆಂದು ತಿಳಿದು ಸಂಸಾರವನ್ನು ಬಿಡುವ ಭಕ್ತರನ್ನು ರಕ್ಷಿಸುವವನಾದುದರಿಂದ ಜಾಹ್ನವೀ ಎಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. || ೩೧ ||

ಗೀ ॥ ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।
ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಂ ॥ ೩೨ ॥

ಅ ॥ ಅರ್ಜುನ=ಅರ್ಜುನನೇ, ಸರ್ಗಾಣಾಂ=ಸೃಷ್ಟಿಸಲ್ಪಡುವ ಪ್ರಾಣಿಗಳಿಗೆ, ಅಹಮೇವ=ನಾನೇ, ಆದಿಃ=ಕಾರಣನು, ಅಂತಶ್ಚ=ನಾಶಮಾಡುವವನು, ಮಧ್ಯಂ ಚ=ಸ್ಥಿತಿಕರ್ತನು, (ಅಂದರೆ ಸೃಷ್ಟಿ ಸ್ಥಿತಿ ಸಂಹಾರಗಳಿಗೆ ಕಾರಣನು ನಾನೇ.) ವಿದ್ಯಾನಾಂ=ವಿದ್ಯೆಗಳ ಮಧ್ಯದಲ್ಲಿ, ಅಧ್ಯಾತ್ಮವಿದ್ಯಾ=ಸರ್ವೋ ತ್ಕೃಷ್ಟವಾದ ಬ್ರಹ್ಮವಿದ್ಯೆಗೆ ನಿಯಾಮಕನಾಗಿ ಬ್ರಹ್ಮವಿದ್ಯೆಯಲ್ಲಿರುವವನಾಗಿ ಬೇರೆ ವಿದ್ಯೆಗಳಿಗಿಂತ ಬ್ರಹ್ಮ ವಿದ್ಯೆಗೆ ಶ್ರೇಷ್ಠತ್ವವನ್ನು ಕೊಟ್ಟು ಸಮಸ್ತ ಜೀವರಿಗೆ ಅಧಿಪತಿಯಾಗಿರುವುದರಿಂದಲೂ ಜ್ಞಾನಸ್ವರೂಪ ನಾಗಿರುವುದರಿಂದಲೂ, ಅಧ್ಯಾತ್ಮವಿದ್ಯಾ ಎಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. ಅಹಂ= ನಾನು, ಪ್ರವದತಾಂ=ವಾದ ಜಲ್ಪ ವಿತಂಡಾ ಕಥೆಗಳನ್ನು ಮಾಡುವ ಜನರಲ್ಲಿ, ನಡೆಯಲ್ಪಡುವ ವಾದಃ=ವಾದವೆಂಬುವ ಕಥೆಗೆ ನಿಯಾಮಕನಾಗಿ ವಾದ ಕಥೆಯಲ್ಲಿದ್ದು ಬೇರೆ ಕಥೆಗಳಿಗಿಂತ ವಾದ ಕಥೆಗೆ ಶ್ರೇಷ್ಠತ್ವವನ್ನು ಕೊಟ್ಟು ವೇದಗಳಿಂದ ವಾಚ್ಯನಾಗಿರುವುದರಿಂದ ವಾದ ಎಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. ॥ ೩೨ ॥

ಗೀ ॥ ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಃ ಸಾಮಾಸಿಕಸ್ಯ ಚ ।
ಅಹಮೇವಾಕ್ಷಯಃ ಕಾಲೋ ಧಾತಾಽಹಂ ವಿಶ್ವತೋಮುಖಃ ॥ ೩೩ ॥

ಅ ॥ ಅಕ್ಷರಾಣಾಂ=ಅಕ್ಷರಗಳ ಮಧ್ಯದಲ್ಲಿ, ಅಕಾರಃ=ಅ ಎಂಬುವ ಅಕ್ಷರಕ್ಕೆ ನಿಯಾಮಕನಾಗಿ ಅ ಎಂಬುವ ಅಕ್ಷರದಲ್ಲಿದ್ದು ಬೇರೆ ಅಕ್ಷರಗಳಿಗಿಂತ ಅ ಎಂಬುವ ಅಕ್ಷರಕ್ಕೆ ಶ್ರೇಷ್ಠತ್ವವನ್ನು ಹೊಂದಿಸಿ ಕೊಟ್ಟು ಅ ಎಂದು ಕರೆಯಲ್ಪಡುವವನಾದುದರಿಂದ ಅ ಎಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. ಸಾಮಾಸಿಕಸ್ಯ=ಸಮಾಸಸಮೂಹದಲ್ಲಿ, ದ್ವಂದ್ವಃ=ದ್ವಂದ್ವಸಮಾಸಕ್ಕೆ ನಿಯಾಮಕನಾಗಿ ದ್ವಂದ್ವ ಸಮಾಸದಲ್ಲಿದ್ದು ಬೇರೆ ಸಮಾಸಗಳಿಗಿಂತ ದ್ವಂದ್ವಸಮಾಸಕ್ಕೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಸರ್ವ ಪದಾರ್ಥಗಳಲ್ಲಿಯೂ ಹೊರಗೂ ಒಳಗೂ ಎರಡು ರೂಪಗಳಿಂದ ಇರುವುದರಿಂದ ದ್ವಂದ್ವ ನೆಂದು ಹೆಸರು ಳ್ಳವನು, ಅಸ್ಮಿ=ಆಗಿರುತ್ತೇನೆ. ಅಹಮೇವ=ನಾನೇ ಅಕ್ಷಯಃ=ನಾಶವಿಲ್ಲದಿರುವುದರಿಂದ ಅಕ್ಷಯ ನೆಂದು ಹೆಸರುಳ್ಳವನು, ಕಾಲಃ=ಪ್ರಲಯಕಾಲದಲ್ಲಿ ಜಗತ್ತನ್ನು ಸಂಹಾರಮಾಡುವುದರಿಂದ ಕಾಲ ನೆಂದು ಹೆಸರುಳ್ಳವನೂ ಆಗಿ ಅಕ್ಷಯಕಾಲದಲ್ಲಿರುವವನು (ಅಂದರೆ ಭೂತ ಭವಿಷ್ಯತ್ ವರ್ತಮಾನ ಗಳೆಂಬುವ ಮೂರು ಕಾಲಗಳಲ್ಲಿಯೂ ಇರುವವನು.) ಆಗಿರುತ್ತೇನೆ. ಧಾತಾ=ಜಗತ್ತಿನ ಧಾರಣ ಪೋಷಣಗಳನ್ನು ಮಾಡುವವನು, ವಿಶ್ವತೋಮುಖಃ=ಸಮಸ್ತ ದಿಕ್ಕುಗಳಲ್ಲಿಯೂ ಮುಖಗಳುಳ್ಳವನಾದುದ ರಿಂದ ವಿಶ್ವತೋಮುಖನೆಂದು ಹೆಸರುಳ್ಳವನಾಗಿ ಚತುರ್ಮುಖನಲ್ಲಿ ನಿಯಾಮಕನಾಗಿರುವವನು, ಅಥವಾ ಎಲ್ಲಾ ಕಡೆಗಳಲ್ಲಿಯೂ ಇರುವ ಮುಖ ಮೊದಲಾದ ಸಮಸ್ತ ಅವಯವಗಳುಳ್ಳವನು (ಆಗಿರುತ್ತೇನೆ.) ॥ ೩೩ ॥

ಗೀ ॥ ಮೃತ್ಯುಃ ಸರ್ವಹರಶ್ಚಾಹಮುದ್ಭವಶ್ಚ ಭವಿಷ್ಯತಾಂ ।
ಕೀರ್ತಿಃ ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥ ೩೪ ॥

ಅ ॥ ಅಹಂ=ನಾನು, ಸರ್ವಹರಃ=ಎಲ್ಲವನ್ನು ಸಂಹಾರಮಾಡುವವನಾದುದರಿಂದ, ಮೃತ್ಯುಃ= ಮೃತ್ಯುವೆಂದು ಹೆಸರುಳ್ಳವನಾಗಿ ಮೃತ್ಯುವಿಗೆ ನಿಯಾಮಕನಾಗಿ, ಮೃತ್ಯುವಿನಲ್ಲಿರುವವನು. ಭವಿ

ಣಾಂ=ಮುಂದೆ ಹುಟ್ಟುವವರ, ಉದ್ಭವಶ್ಚ=ಹುಟ್ಟುವಿಕೆಗೆ ನಿಯಾಮಕನಾಗಿ, ಹುಟ್ಟುವಂತೆ ಮಾಡುವುದ ರಿಂದ ಉದ್ಭವ ಎಂದು ಹೆಸರುಳ್ಳವನಾಗಿ, ಉದ್ಭವದಲ್ಲಿರುವವನು ಆಗಿರುತ್ತೇನೆ. ನಾರೀಣಾಂ=ಸ್ತ್ರೀಯರ, ಕೀರ್ತಿಃ=ಕೀರ್ತಿಗೆ ನಿಯಾಮಕನಾಗಿ ಕೀರ್ತಿಯಲ್ಲಿದ್ದು ಸ್ತುತಿಸಲ್ಪಡುವುದರಿಂದ ಕೀರ್ತಿ ಎಂದು ಹೆಸರು ಳ್ಳವನು. ಶ್ರೀಃ=ಕಾಂತಿಗೆ ನಿಯಾಮಕನಾಗಿ ಕಾಂತಿಯಲ್ಲಿದ್ದು ಕಾಂತಿಗೆ ಆಶ್ರಯನಾಗಿರುವುದರಿಂದ ಶ್ರೀಃ ಎಂದು ಹೆಸರುಳ್ಳವನು. ವಾಕ್=ವಾಕ್ಯಗಳಿಗೆ ನಿಯಾಮಕನಾಗಿ ವಾಕ್ಯದಲ್ಲಿದ್ದು ಸರ್ವವನ್ನು ಹೇಳುವವ ನಾದುದರಿಂದ ವಾಕ್ ಎಂದು ಹೆಸರುಳ್ಳವನು. ಸ್ಮೃತಿಃ=ಸ್ಮರಿಸುವುದಕ್ಕೆ ನಿಯಾಮಕನಾಗಿ ಸ್ಮರಿಸು ವುದರಲ್ಲಿದ್ದು ಸ್ಮರಿಸಿಕೊಳ್ಳಲಿಕ್ಕೆ ಯೋಗ್ಯನಾಗಿರುವುದರಿಂದ ಸ್ಮೃತಿ ಎಂದು ಹೆಸರುಳ್ಳವನು, ಮೇಧಾ= ಜ್ಞಾನವಿಶೇಷಕ್ಕೆ (ಧಾರಣಶಕ್ತಿಯುಳ್ಳ ಬುದ್ಧಿಗೆ) ನಿಯಾಮಕನಾಗಿ ಮೇಧಾದಲ್ಲಿದ್ದು ಮೇಧಾಸ್ವರೂಪ ನಾಗಿರುವುದರಿಂದ ಮೇಧಾ ಎಂದು ಹೆಸರುಳ್ಳವನು. ಧೃತಿಃ=ಧೈರ್ಯಕ್ಕೆ ನಿಯಾಮಕನಾಗಿ ಧೈರ್ಯ ದಲ್ಲಿದ್ದು ಸರ್ವ ಜಗತ್ತನ್ನು ತಾನೇ ಧರಿಸುವುದರಿಂದ ಧೃತಿ ಎಂದು ಹೆಸರುಳ್ಳವನು. ಕ್ಷಮಾ=ಸಹನೆಗೆ (ತಾಳ್ಮೆಗೆ) ನಿಯಾಮಕನಾಗಿ ಕ್ಷಮೆಯಲ್ಲಿದ್ದು ಕ್ಷಮಾಸ್ವರೂಪನಾದುದರಿಂದ ಕ್ಷಮಾ ಎಂದು ಹೆಸರುಳ್ಳ ವನು, ಅಸ್ಮಿ=ಆಗಿರುತ್ತೇನೆ. ॥ ೩೪ ॥

## ಗೀ ॥ ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಂ ।
## ಮಾಸಾನಾಂ ಮಾರ್ಗಶೀರ್ಷೋಽಹಮೃತೂನಾಂ ಕುಸುಮಾಕರಃ॥೩೫॥

ಅ ॥ ಸಾಮ್ನಾಂ=ರಥಂತರ ವೈರೂಪ, ವೈರಾಜ, ಶಾಕ್ವರ ಮೊದಲಾದ ಸಾಮಗಳ ಮಧ್ಯದಲ್ಲಿ, ಅಹಂ=ನಾನು, ಬೃಹತ್ಸಾಮ=ಬೃಹತ್ಸಾಮಕ್ಕೆ ನಿಯಾಮಕನಾಗಿ ಬೃಹತ್ಸಾಮದಲ್ಲಿದ್ದು ಬೇರೆ ಎಲ್ಲಾ ಸಾಮಗಳಿಗಿಂತ ಬೃಹತ್ಸಾಮಕ್ಕೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಸರ್ವಗುಣಪರಿಪೂರ್ಣನೂ ಸರ್ವೋ ತ್ತಮನೂ ಸಂಪೂರ್ಣ ತಿಳಿಯಲಶಕ್ಯನೂ ಆದುದರಿಂದ ಬೃಹತ್ಸಾಮನೆಂದು ಹೆಸರುಳ್ಳವನು, ತಥಾ= ಹಾಗೆಯೇ, ಅಹಂ=ನಾನು, ಛಂದಸಾಂ=ತ್ರಿಷ್ಟುಪ್ ಜಗತೀ ಮೊದಲಾದ ಛಂದಸ್ಸುಗಳ ಮಧ್ಯದಲ್ಲಿ ಗಾಯತ್ರೀ=ಗಾಯತ್ರೀ ಛಂದಸ್ಸಿಗೆ ನಿಯಾಮಕನಾಗಿ ಗಾಯತ್ರೀ ಛಂದಸ್ಸಿನಲ್ಲಿದ್ದು ಬೇರೆ ಎಲ್ಲಾ ಛಂದಸ್ಸುಗಳಿಗಿಂತ ಗಾಯತ್ರೀ ಛಂದಸ್ಸಿಗೆ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ತನ್ನ ಸ್ತುತಿಯನ್ನು ಮಾಡು ವವರನ್ನು ರಕ್ಷಿಸುವುದರಿಂದ ಗಾಯತ್ರೀ ಎಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ ಮಾಸಾನಾಂ= ಚೈತ್ರ ಮೊದಲಾದ ಮಾಸಗಳ ಮಧ್ಯದಲ್ಲಿ, ಮಾರ್ಗಶೀರ್ಷಃ=ಮಾರ್ಗಶೀರ್ಷ ಮಾಸಕ್ಕೆ ನಿಯಾಮಕನಾಗಿ ಮಾರ್ಗಶೀರ್ಷಮಾಸದಲ್ಲಿದ್ದು ಚೈತ್ರಾದಿ ಮಾಸಗಳಿಗಿಂತ ಮಾರ್ಗಶೀರ್ಷಮಾಸಕ್ಕೆ ಶ್ರೇಷ್ಠತ್ವವನ್ನು ಹೊಂದಿಸಿ ಕೊಟ್ಟು ಅರ್ಚಿರಾದಿ ಮಾರ್ಗಗಳಿಗೆ ಅಂತಿಮನಾಗಿ ಶೀರ್ಷಸ್ಥಾನನಾಗಿರುವುದರಿಂದ ಮಾರ್ಗಶೀರ್ಷನೆಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. ಋತೂನಾಂ=ಋತುಗಳ ಮಧ್ಯದಲ್ಲಿ, ಕುಸುಮಾಕರಃ=ವಸಂತಋತು ವಿಗೆ ನಿಯಾಮಕನಾಗಿ ವಸಂತಋತುವಿನಲ್ಲಿದ್ದು ಬೇರೆ ಋತುಗಳಿಗಿಂತ ವಸಂತಋತುವಿಗೆ ಶ್ರೇಷ್ಠತ್ವವನ್ನು ಕೊಟ್ಟು ಕುತ್ಸಿತವಾದ ಜ್ಞಾನವನ್ನು ಯಥಾರ್ಥವಾದ ಜ್ಞಾನವನ್ನುಂಟುಮಾಡುವುದರಿಂದ ಕುಸುಮಾಕರ ನೆಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. ॥ ೩೫ ॥

## ಗೀ ॥ ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಂ ।
## ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಂ ॥ ೩೬ ॥

ಅ ॥ ಛಲಯತಾಂ=ಕಪಟವನ್ನು ಮಾಡುವುದರಲ್ಲಿರುವ, ದ್ಯೂತಂ=ಜೂಜಾಟಕ್ಕೆ ನಿಯಾಮಕನಾಗಿ ಜೂಜಾಟದಲ್ಲಿದ್ದು ಕ್ರೀಡೆಯಲ್ಲಿ ಆಸಕ್ತನಾಗಿರುವುದರಿಂದ ದ್ಯೂತನೆಂದು ಹೆಸರುಳ್ಳವನು, ಅಸ್ಮಿ=ಆಗಿರು

ತ್ತೇನೆ. ಅಹಂ=ನಾನು. ತೇಜಸ್ವಿನಾಂ=ತೇಜಸ್ಸುಳ್ಳವರ ಮಧ್ಯದಲ್ಲಿ, ತೇಜಃ=ತೇಜಸ್ಸಿಗೆ ನಿಯಾಮಕನಾಗಿ ತೇಜಸ್ಸಿನಲ್ಲಿದ್ದು ಪ್ರಕಾಶಪಡಿಸುವನಾದುದರಿಂದ ತೇಜಃ ಎಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. (ಜಯತಾಂ=ಜಯವುಳ್ಳವರಿಗೆ) ಜಯಃ=ಜಯಕ್ಕೆ ನಿಯಾಮಕನಾಗಿ ಜಯದಲ್ಲಿದ್ದು ಜಯರೂಪ ಶ್ರೇಷ್ಠಧರ್ಮವನ್ನು ಕೊಡತಕ್ಕವನಾದುದರಿಂದ ಜಯನೆಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. ವ್ಯವಸಾಯಃ=ನಿಶ್ಚಯಜ್ಞಾನಕ್ಕೆ ನಿಯಾಮಕನಾಗಿ ನಿಶ್ಚಯಜ್ಞಾನದಲ್ಲಿದ್ದು ನಿಶ್ಚಯಜ್ಞಾನವುಳ್ಳವರಿಗೆ ವ್ಯವಸಾಯ (ನಿಶ್ಚಯ) ರೂಪವಾದ ಶ್ರೇಷ್ಠಧರ್ಮವನ್ನು ಕೊಡತಕ್ಕವನಾದುದರಿಂದ ವ್ಯವಸಾಯನೆಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ. ಅಹಂ=ನಾನು, ಸತ್ವವತಾಂ=ಬಲವುಳ್ಳವರಲ್ಲಿ, ಸತ್ವಂ=ಬಲಕ್ಕೆ ನಿಯಾಮಕನಾಗಿ ಬಲದಲ್ಲಿದ್ದು ಸತ್ವರೂಪಶ್ರೇಷ್ಠಧರ್ಮವನ್ನು ಕೊಡತಕ್ಕವನಾದುದರಿಂದ ಸತ್ವನೆಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ॥ ೩೬ ॥

ಟೀ—ರಾಮಃ ಶಸ್ತ್ರಭೃತಾಮಹಂ ಎಂಬುವಲ್ಲಿದ್ದ ರಾಮಶಬ್ದಾರ್ಥವನ್ನು ಹೇಳುತ್ತಾರೆ—

**ಭಾ ॥ (೧) ಆನಂದರೂಪತ್ವಾತ್ಪೂರ್ಣತ್ವಾಲ್ಲೋಕರಮಣತ್ವಾಚ್ಚ ರಾಮಃ ॥ (೨) ಆನಂದರೂಪೋ ನಿಷ್ಪರಿಮಾಣ ಏಷ ಲೋಕಶ್ಚೈತಸ್ಮಾದ್ರಮತೇ ತೇನ ರಾಮ ಇತಿ ಶಾಂಡಿಲ್ಯಶಾಖಾಯಾಂ । ರಕ್ಷಾಮಶ್ಚೇತಿ ವ್ಯುತ್ಪತ್ತಿಃ ॥ ೩೧—೩೬ ॥**

ಅ ॥ (೧) ಆನಂದರೂಪನಾಗಿರುವುದರಿಂದಲೂ, ಸರ್ವಗುಣಪರಿಪೂರ್ಣನಾದುದರಿಂದಲೂ ಮತ್ತು ಎಲ್ಲಾ ಲೋಕಗಳನ್ನು ಸಂತೋಷಗೊಳಿಸುವುದರಿಂದಲೂ, ರಾಮಃ ಎನಿಸುತ್ತಾನೆ (೨) ಆನಂದರೂಪನು, ಪರಿಮಿತಿಯಿಲ್ಲದವನು. (ಸರ್ವ ಗುಣಪರಿಪೂರ್ಣನು) ಎಲ್ಲಾ ಲೋಕಕ್ಕೆ ಸಂತೋಷಕಾರಣನೂ ಆಗಿರುತ್ತಾನೆ. ಆದರಿಂದ ರಾಮನೆನಿಸುತ್ತಾನೆ, ಎಂದು ಶಾಂಡಿಲ್ಯಶಾಖೆಯಲ್ಲಿ (ಸುಖರೂಪನು ಗುಣಪೂರ್ಣನು ಎಂಬುವ ಅರ್ಥದಲ್ಲಿ ವಿಗ್ರಹ ತೋರಿಸುತ್ತಾರೆ.) ಸುಖಸ್ವರೂಪನು ಪರಿಮಿತಿಯಿಲ್ಲದವನುಎಂಬ ವ್ಯುತ್ಪತ್ತಿಯು. ॥ ೩೧—೩೬ ॥

**ಗೀ ॥ ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾಃ ಕವಿಃ ॥ ೩೭ ॥**

ಅ ॥ ಅಹಂ=ನಾನು. ವೃಷ್ಣೀನಾಂ=ಯಾದವರಲ್ಲಿ, ವಾಸುದೇವಃ=ಸರ್ವವನ್ನು ಮರೆಮಾಡಿಕೊಂಡಿದ್ದ ಪ್ರಯುಕ್ತವೂ. ಸರ್ವರನ್ನು ಆವಾಸಗೊಳಿಸುವುದರಿಂದಲೂ ತಾನು ಸರ್ವ ದೇಶ ಕಾಲಗಳಲ್ಲಿ ಆವಾಸಮಾಡಿಕೊಂಡಿರುವುದರಿಂದಲೂ. ವಾಸು ಎಂದೂ ಕ್ರೀಡಾದಿಗುಣವಿಶಿಷ್ಟನಾದುದರಿಂದ ದೇವನೆಂದೂ, ಹೀಗೆ ವಾಸುದೇವನೆಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. (ಇದು ಶ್ರೀಪರಮಾತ್ಮನ ಪ್ರತ್ಯಕ್ಷ ವಿಭೂತಿ ರೂಪವು.) ಪಾಂಡವಾನಾಂ=ಪಾಂಡವರ ಮಧ್ಯದಲ್ಲಿ, ಧನಂಜಯಃ=ಅರ್ಜುನನಿಗೆ ನಿಯಾಮಕನಾಗಿ ಅರ್ಜುನನಲ್ಲಿದ್ದು ಭೀಮಸೇನನನ್ನು ಬಿಟ್ಟು, ಬೇರೆ ಧರ್ಮರಾಜಾದಿಗಳಿಗಿಂತ ಅರ್ಜುನನಿಗೆ ಶ್ರೇಷ್ಠತ್ವವನ್ನು ಕೊಟ್ಟು ಧನಕ್ಕಾಗಿ ಸರ್ವರಾಜರನ್ನು ಗೆಲ್ಲುವವನಾದುದರಿಂದ ಧನಂಜಯನೆಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ಅಹಂ=ನಾನು. ಮುನೀನಾಮಪಿ=ಋಷಿಗಳ ಮಧ್ಯದಲ್ಲಿ ವ್ಯಾಸಃ=ಸರ್ವಸ್ಪಷ್ಟನೂ ಸರ್ವತ್ರವ್ಯಾಪ್ತನೂ ಆದುದರಿಂದ ವ್ಯಾಸನೆಂದು ಹೆಸರುಳ್ಳವನು, ಅಸ್ಮಿ=ಆಗಿರುತ್ತೇನೆ (ಇದೂ ಪ್ರತ್ಯಕ್ಷ ವಿಭೂತಿರೂಪವು) ಕವೀನಾಂ=ಕವಿಗಳ ಮಧ್ಯದಲ್ಲಿ, ಉಶನಾಃ ಕವಿಃ=ಶುಕ್ರಾಚಾರ್ಯ

ಗೆ ನಿಯಾಮಕನಾಗಿ ಶುಕ್ರಾಚಾರ್ಯರಲ್ಲಿದ್ದು ಬೇರೆ ಕವಿಗಳಿಗಿಂತ ಶ್ರೇಷ್ಠತ್ವವನ್ನು ಹೊಂದಿಸಿಕೊಟ್ಟು ಜಗತ್ತಿಗೆ ಕೃಷ್ಯಾದಿಗಳನ್ನು ಮಾಡಬೇಕೆಂದು ಇಚ್ಛೆಯುಳ್ಳವನಾದುದರಿಂದ ಉಶನಾಃ ಎಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ॥ ೩೭ ॥

ಗೀ ॥ ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಂ ।
ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಂ ॥ ೩೮ ॥

ಅ ॥ ದಮಯತಾಂ=ಶಿಕ್ಷಿಸುವವರ ಮಧ್ಯದಲ್ಲಿ. ದಂಡಃ=ಶಿಕ್ಷೆಗೆ ನಿಯಾಮಕನಾಗಿ, ಶಿಕ್ಷೆಯಲ್ಲಿದ್ದು ತಪ್ಪರನ್ನು ಶಿಕ್ಷಿಸುತ್ತಿರುವುದರಿಂದ ದಂಡನೆಂದು ಹೆಸರುಳ್ಳವನು. ಶಿಕ್ಷೆಯನ್ನು ಮಾಡುವವರಿಗೆ ಶಿಕ್ಷಾರೂಪಧರ್ಮವನ್ನು ಕೊಡುವವನು. ಅಸ್ಮಿ=ಆಗಿರುತ್ತೇನೆ. ಜಿಗೀಷತಾಂ=ಜಯವನ್ನು ಹೊಂದಲಿಚ್ಛಿಸುವವರಲ್ಲಿ, ನೀತಿಃ=ನೀತಿರೂಪಧರ್ಮಕ್ಕೆ ನಿಯಾಮಕನಾಗಿ ನೀತಿಯಲ್ಲಿದ್ದು ನೀತಿರೂಪ ಶ್ರೇಷ್ಠಧರ್ಮವನ್ನು ಕೊಡುವವನಾದುದರಿಂದ ನೀತಿ ಎಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ಗುಹ್ಯಾನಾಂ=ಗೋಪ್ಯಗಳಾದ ವಸ್ತುಗಳ ಮಧ್ಯದಲ್ಲಿ, ಮೌನಂ ಚ=ಮೌನಕ್ಕೆ ನಿಯಾಮಕನಾಗಿ, ಮೌನದಲ್ಲಿದ್ದು ಸರ್ವದಾ ಮುನಿಗಳಿಂದ ಪೂಜಿಸಿಕೊಳ್ಳಲ್ಪಡುವವನಾದುದರಿಂದ ಮೌನನೆಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ಅಹಂ=ನಾನು ಜ್ಞಾನವತಾಂ=ಜ್ಞಾನವುಳ್ಳವರಲ್ಲಿ. ಜ್ಞಾನಂ=ಜ್ಞಾನಕ್ಕೆ ನಿಯಾಮಕನಾಗಿ ಜ್ಞಾನದಲ್ಲಿದ್ದು ಜ್ಞಾನಿಗಳಿಗೆ ಜ್ಞಾನನೆಂಬುವ ಸಾರಧರ್ಮವನ್ನು ಕೊಡುತ್ತಾ ಜ್ಞಾನರೂಪನಾದುದರಿಂದ ಜ್ಞಾನನೆಂದು ಹೆಸರುಳ್ಳವನು. ಅಸ್ಮಿ=ಆಗಿರುತ್ತೇನೆ. ॥ ೩೮ ॥

ಟೀ—ವೃಷ್ಣೀನಾಂ ವಾಸುದೇವೋಽಸ್ಮಿ ಎಂಬುವಲ್ಲಿದ್ದ ವಾಸುದೇವ ಶಬ್ದದ ಅರ್ಥ ಹೇಳಲಿಕ್ಕೆ ಇಚ್ಛಿಸುತ್ತಾ ವಾಸು ಎಂಬುವ ಶಬ್ದದ ಅರ್ಥವನ್ನು ಹೇಳುತ್ತಾರೆ—

ಛಾ ॥ (೧) ಆಚ್ಛಾದಯತಿ ಸರ್ವಂ ವಾಸಯತಿ ವಸತಿ ಸರ್ವತ್ರೇತಿ ವಾಸುಃ । ದೇವಶಬ್ದಾರ್ಥ ಉಕ್ತಃ ಪುರಸ್ತಾತ್ ॥ (೨) ಛಾದಯಾಮಿ ಜಗದ್ವಿಶ್ವಂ ಭೂತ್ವಾ ಸೂರ್ಯ ಇವಾಂಶುಭಿಃ । ಸರ್ವಭೂತಾಧಿವಾಸಶ್ಚ ವಾಸುದೇವಸ್ತತೋ ಹ್ಯಹಮಿತಿ ಮೋಕ್ಷಧರ್ಮೇ ॥ (೩) ವಿಶಿಷ್ಟಃ ಸರ್ವಸ್ಮಾದಾ ಸಮಂತಾತ್ಸ ಏವೇತಿ ವ್ಯಾಸಃ ॥ (೪) ತಥಾ ಚಾಗ್ನೇಯಶಾಖಾಯಾಂ । ಸ ವ್ಯಾಸೋ ವೀತಿ ತಮುಚ್ಯ್ವಿ ಸೋಽಧಸ್ತಾತ್ಸ ಉತ್ತರತಃ ಸ ಪಶ್ಚಾತ್ಸ ಪೂರ್ವಸ್ಮಾತ್ಸ ದಕ್ಷಿಣತಃ ಸ ಉತ್ತರತ ಇತೀತಿ ॥ (೫) ಯಚ್ಚ ಕಿಂಚಿಜ್ಜಗತ್ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ । ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತ ಇತಿ ಚ ॥ ೩೭,೩೮ ॥

ಅ ॥ (೧) ಎಲ್ಲಾ ವಸ್ತುಗಳನ್ನು ಮರೆಮಾಡುತ್ತಾನೆ. ಸರ್ವರನ್ನು ಆವಾಸಗೊಳಿಸುತ್ತಾನೆ ತಾನು ಸರ್ವ ದೇಶ ಕಾಲಗಳಲ್ಲಿ ಸರ್ವರಿಗೂ ನಿಯಾಮಕನಾಗಿ ಆವಾಸವಾಡುತ್ತಾನೆ. ಈ ಕಾರಣಗಳಿಂದ ವಾಸುಃ ಎನಿಸುತ್ತಾನೆ. ಕ್ರೀಡಾದಿಗುಣವಿಶಿಷ್ಟನಾದ ಪ್ರಯುಕ್ತ ದೇವ ಎನಿಸುತ್ತಾನೆಂದು ಮೊದಲೇ ಹೇಳಿದೆ ಹೀಗೆ ವಾಸುದೇವನೆಂದು ಹೆಸರುಳ್ಳವನು. (೨) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ನಾನು ಸಂಪೂರ್ಣ ಜಗತ್ತನ್ನು ಮರೆಮಾಡುತ್ತೇನೆ. ಸಮಸ್ತ ಪ್ರಾಣಿಗಳನ್ನು ಆವಾಸಮಾಡಿಸುವವನು. ಮತ್ತು ಸೂರ್ಯನು ಕಿರಣಗಳಿಂದ ಜಗತ್ತನ್ನು ವ್ಯಾಪಿಸುವಂತೆ ಸಮಸ್ತ ಪ್ರಾಣಿಗಳಲ್ಲಿ ವ್ಯಾಪಿಸಿ

ಕೊಂಡು ನಿಯಾಮಕನಾಗಿ ಆವಾಸವಮಾಡುವವನು. ಆದಕಾರಣ ವಾಸು ಎನಿಸುತ್ತೇನೆ. (ಕ್ರೀಡಾದಿ ಗುಣವಿಶಿಷ್ಟನಾದ ಪ್ರಯುಕ್ತ ದೇವನು.) ಹೀಗೆ ವಾಸುದೇವನೆಂದು ಹೆಸರುಳ್ಳವನು, ಎಂದು ಮೋಕ್ಷ ಧರ್ಮದಲ್ಲಿದೆ. (೩) ಸರ್ವರಿಗಿಂತ ಉತ್ತಮನೂ ಚೆನ್ನಾಗಿ ಸರ್ವತ್ರ ವ್ಯಾಪಿಸಿಕೊಂಡಿರುವವನೂ ಆದುದ ರಿಂದ ವ್ಯಾಸನೆಂದು ಹೆಸರುಳ್ಳವನು. (೪) ಹಾಗೆಯೇ ಅಗ್ನಿವೇಶ್ಯಶಾಖೆಯಲ್ಲಿ ಹೇಳಿದೆ. ಆ ಶ್ರೀಹರಿಯು ವಿ (ವಿಶೇಷ, ಸರ್ವೋತ್ತಮತ್ವ ನಿಮಿತ್ತವಾಗಿ) ವಿ ಎನಿಸುತ್ತಾನೆ. ವಿ ಶಬ್ದಕ್ಕೆ ತಮಪ್ ಪ್ರತ್ಯಯದ ಅರ್ಥವು. ಮತ್ತು ಶ್ರೀಹರಿಯು ಕೆಳಗೂ ಮೇಲೆಯೂ ಹಿಂದುಗಡೆಯೂ ಮುಂದುಗಡೆಯೂ ಬಲಭಾಗ ದಲ್ಲಿಯೂ ಎಡಭಾಗದಲ್ಲಿಯೂ ಸರ್ವತ್ರ ಇರುತ್ತಾನೆ. ಆದಕಾರಣ ಆಸ ಎನಿಸುತ್ತಾನೆ. ಹೀಗೆ ಸರ್ವೋತ್ತಮತ್ವ ಸರ್ವತ್ರ ವ್ಯಾಪ್ತತ್ವರೂಪನಿಮಿತ್ತಗಳಿಂದ ವ್ಯಾಸನೆನಿಸಿಕೊಳ್ಳುತ್ತಾನೆ.) (೫) (ಶ್ರೀಪರ ಮಾತ್ಮನು ಸರ್ವತ್ರವ್ಯಾಪ್ತನು ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಯಾವುದು ಯಾವುದು ಜಗ ತ್ತಿಲ್ಲವೂ ಕಾಣಲ್ಪಡುತ್ತದೋ. ಕೇಳಲ್ಪಡುತ್ತದೋ, ಅವೆಲ್ಲವನ್ನೂ ಶ್ರೀನಾರಾಯಣನು ಒಳಗೂ ಹೊರಗೂ ವ್ಯಾಪಿಸಿಕೊಂಡು ಇದ್ದಾನೆ. ॥ ೩೭, ೩೮ ॥

## ಗೀ ॥ ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।
## ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಂ ॥ ೩೯ ॥

ಅ ॥ ಅರ್ಜುನ—ಅರ್ಜುನನೇ. ಸರ್ವಭೂತಾನಾಂ—ಸಮಸ್ತ ಪ್ರಾಣಿಗಳಿಗೆ, ಯತ್—ಯಾವುದು, ಬೀಜಂ—ಕಾರಣವಿದೆಯೋ, ತದಪಿ—ಅದೂ ಕೂಡ. ಅಹಂ—ನಾನೇ. (ಅಂದರೆ ಆ ಕಾರಣಕ್ಕೂ ನಿಯಾ ಮಕನಾಗಿ ಕಾರಣದಲ್ಲಿದ್ದು ಇತರ ವಸ್ತುಗಳಿಗಿಂತ ಕಾರಣಕ್ಕೆ ಶ್ರೇಷ್ಠತ್ವವನ್ನು ಕೊಟ್ಟು ಕಾರಣನೆನಿ ಸಿಕೊಂಡವನು ನಾನೇ.) (ಶ್ರೀಪರಮಾತ್ಮನು ಸರ್ವಗತನೆಂದು ಯಾವ ಪ್ರಮಾಣದಿಂದ ತಿಳಿಯುತ್ತದೆ ಎಂದರೆ—) ಮಯಾ ವಿನಾ—ಸರ್ವಪ್ರೇರಕನಾದ ನಾನು ಹೊರತು, ಚರಾಚರಂ—ಚೇತನಾಚೇತನಾತ್ಮಕ ವಾದ, ಯತ್—ಯಾವ, ಭೂತಂ—ವಸ್ತುವು, ಸ್ಯಾತ್—ಇರುವುದೋ, ತತ್—ಅಂತಹ ವಸ್ತುವು, (ನಾನು ಪ್ರೇರಕನಾಗದೆ) ನಾಸ್ತಿ—ಇಲ್ಲ. (ಅಂದರೆ ನಾನು, ಭೂತ ಭವಿಷ್ಯದ್ವರ್ತಮಾನ ಕಾಲಗಳ ಲ್ಲಿಯೂ ಸರ್ವ ದೇಶಗಳಲ್ಲಿಯೂ ಸರ್ವರಿಗೂ ನಿಯಾಮಕನೇ ಆಗಿರುತ್ತೇನೆ.) ॥ ೩೯ ॥

ಪೀ – ಸಂಕ್ಷೇಪತಃ ಹೇಳಲಿಕ್ಕೆ ಕಾರಣವನ್ನು ತೋರಿಸುತ್ತಾ ಉಪಸಂಹಾರಮಾಡುತ್ತಾರೆ—

## ಗೀ ॥ ನಾಂತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರಂತಪ ।
## ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥ ೪೦ ॥

ಅ ॥ ಪರಂತಪ—ಶತ್ರುಗಳಿಗೆ ಸಂತಾಪಕಾರಿಯಾದ ಅರ್ಜುನನೇ, ಮಮ—ನನ್ನ, ದಿವ್ಯಾನಾಂ—ಅಲೌಕಿಕಗಳಾದ (ಅಂದರೆ ಅಪ್ರಾಕೃತಗಳಾದ) ವಿಭೂತೀನಾಂ—ವಿಭೂತಿರೂಪಗಳಿಗೆ, ಅಂತಃ—ಪರ್ಯಾವಸಾನವು, ನಾಸ್ತಿ—ಇಲ್ಲ. ಏಷಃ ತು—ಆದಿತ್ಯಾನಾಮಹಂ ವಿಷ್ಣುಃ ಇತ್ಯಾದಿಗಳಿಂದ ಇಷ್ಟರವರೆಗೆ ಹೇಳಿದ ವಿಭೂತಿರೂಪಗಳ ಸಂಕ್ಷೇಪವು. ಉದ್ದೇಶತಃ—ಇದು ಎಂದು ಸ್ಪಷ್ಟವಾಗಿ ಪ್ರತ್ಯೇಕ ಪ್ರತ್ಯೇಕವಾಗಿ ನಿರ್ದೇಶವಮಾಡಿ ಮಯಾ—ನನ್ನಿಂದ, ಪ್ರೋಕ್ತಃ—ಹೇಳಲ್ಪಟ್ಟಿತ್ತದೆ ವಿಷಃ—ಮುಂದೆ ಹೇಳುವ, ವಿಭೂತೇಃ—ವಿಭೂತಿರೂಪಗಳ ವಿಸ್ತರಃ—ವಿಸ್ತಾರವು, ಪ್ರೋಕ್ತಃ—ಲಕ್ಷಣವನ್ನು ಹೇಳಿ ಹೇಳಲ್ಪಡುತ್ತದೆ. ॥ ೪೦ ॥

ಭಾ ॥ (೧) ಮಯಾ ವಿನಾ ಯದ್ಭೂತಂ ಸ್ಯಾನ್ನ ತನ್ನಾಸ್ತಿ ॥ (೨) ವಿಶ್ವರೂಪ ಅನಂತಗತಿ-
ರನಂತಭಾಗ ಅನಂತಗತ ಅನಂತ ಇತ್ಯಾದಿ ಮೋಕ್ಷಧರ್ಮೇ ॥ ೩೯,೯೦ ॥

ಅ ॥ (೧) ನನ್ನ ಸಂಬಂಧವಿಲ್ಲದಿರುವುದು ಯಾವುದೂ ಇರುವುದಿಲ್ಲ. (ಅಂದರೆ ನಾನು ಅನಂತ ರೂಪಗಳಿಂದ ಸರ್ವ ಪದಾರ್ಥಗಳನ್ನು ವ್ಯಾಪಿಸಿಕೊಂಡಿದ್ದೇನೆ) (೨) (ಶ್ರೀಪರಮಾತ್ಮನು ಅನಂತರೂಪಗಳಿಂದ ಸರ್ವ ಪದಾರ್ಥಗಳನ್ನು ವ್ಯಾಪಿಸಿಕೊಂಡಿದ್ದಾನೆಂಬುವಲ್ಲಿ ಪ್ರಮಾಣವನು ಹೇಳುತ್ತಾರೆ—) ಸಂಪೂರ್ಣ ಜಗತ್ತೂ ಪ್ರತಿಮೆಯಾಗಿ ಉಳ್ಳವನು (ಅಂದರೆ ಸರ್ವತ್ರ ವ್ಯಾಪಿಸಿಕೊಂಡಿದ್ದೇನೆ) ಅನಂತ ಜೀವರಿಗೆ ಆಶ್ರಯನು, ಅನಂತಾನಂತ ಅವತಾರಗಳುಳ್ಳವನು, ಅನಂತ ಪದಾರ್ಥಗಳನ್ನು ಹೊಂದಿದವನು. ಸರ್ವ ದೇಶ ಕಾಲಗಳಲ್ಲಿ ವ್ಯಾಪ್ತನು ಗುಣಪರಿಪೂರ್ಣನು ಇತ್ಯಾದಿ ಪ್ರಮೇಯವು ಮೋಕ್ಷಧರ್ಮದಲ್ಲಿ ಹೇಳಿದೆ. ॥ ೩೯ ೯೦ ॥

ಟೀ –ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮ ವಿಭೂತಯಃ (ಶ್ಲೋ ೧೬) ಎಂದು ವಿಭೂತಿರೂಪಗಳನ್ನು ಹೇಳಬೇಕೆಂದು ಅರ್ಜುನನು ಪ್ರಾರ್ಥಿಸಿದಾಗ ಶ್ರೀಕೃಷ್ಣನು ಜ್ಯೋತಿಷಾಂ ರವಿರಂಶುಮಾನ್ (ಶ್ಲೋ ೨೧) ಇತ್ಯಾದಿಗಳಿಂದ ವಿಭೂತಿರೂಪಗಳನ್ನು ಉಪದೇಶಿಸುತ್ತಾನೆ. ಅದರಲ್ಲಿ ಆಯಾವ ಜಾತ್ಯಾದಿಗಳಿಂದ ಕೂಡಿದ ವಸ್ತುಗಳೇ ಶ್ರೀಪರಮಾತ್ಮನ ವಿಭೂತಿರೂಪಗಳೆಂದು ಪರರು ಹೇಳುವುದು ಅಯುಕ್ತವೆಂದು ಸ್ಮೃತಿಪ್ರಮಾಣದಿಂದಲೇ ತೋರಿಸುತ್ತಾರೆ—

ಭಾ ॥ (೧) ಯೇಷಾಂ ವಿಷ್ಣುಸ್ವರೂಪಾಣಾಂ ಸನ್ನಿಧೇರನ್ಯವಸ್ತುಷು । ವಿಶಿಷ್ಟತ್ವಂ ಸ್ವಜಾತೇಃ ಸ್ಯಾದ್ವಿಭೂತ್ಯಾಖ್ಯಾನಿ ತಾನಿ ತು ॥ (೨) ಬ್ರಹ್ಮನಾಮಾ ಬ್ರಹ್ಮಗತಃ ಸರ್ವದೈವತಸಂಚಯಾತ್ । ಆಧಿಕ್ಯಹೇತುರ್ಭಗವಾನ್ಸಾಮಸ್ಥಃ ಸಾಮನಾಮಕಃ । ಆಧಿಕ್ಯಹೇತುರ್ವೇದೇಭ್ಯಸ್ತಥಾಽಶ್ವತ್ಥಸ್ಥಿತೋ ಹರಿಃ । ಉತ್ಕರ್ಷಹೇತುರ್ವೃಕ್ಷೇಭ್ಯೋ ಯ ಏವಾಶ್ವತ್ಥನಾಮಕ ಇತ್ಯಾದಿ ವಿಭೂತಿತತ್ತ್ವೇ ॥ (೩) ಕೇಷುಕೇಷು ಚ ಭಾವೇಷ್ವಿತ್ಯುಕ್ತತ್ವಾಚ್ಚ ಬ್ರಹ್ಮಾದಿಜೀವೇಭ್ಯೋಽನ್ಯದೇವ ವಿಭೂತಿರೂಪಂ ॥ (೪) ದ್ವಿವಿಧಂ ವೈಭವಂ ರೂಪಂ ಪ್ರತ್ಯಕ್ಷಂ ಚ ತಿರೋಹಿತಂ । ಕಪಿಲವ್ಯಾಸಕೃಷ್ಣಾದ್ಯಂ ಪ್ರತ್ಯಕ್ಷಂ ವೈಭವಂ ಸ್ಮೃತಂ । ಭಿನ್ನಂ ಬ್ರಹ್ಮಾದಿಜೀವೇಭ್ಯೋ ಜಡೇಭ್ಯಶ್ಚಾಪಿ ತದ್ಗತಂ । ಸ್ವಜಾತ್ಯಾಧಿಕ್ಯದಂ ತೇಷಾಂ ತತ್ತಿರೋಹಿತವೈಭವಮಿತ್ಯಾದಿ ಚ ॥ ೧ ॥

ಅ ॥ (೧) ಬೇರೆ ಪದಾರ್ಥಗಳಲ್ಲಿ ಯಾವ ಭಗವತ್ಸ್ವರೂಪಗಳ ಸನ್ನಿಧಾನವಿಶೇಷದಿಂದ ಆ ಪದಾರ್ಥಗಳು ಆಯಾವ ಜಾತಿಯ ಪದಾರ್ಥಗಳಲ್ಲಿ ಶ್ರೇಷ್ಠಗಳಾಗುತ್ತವೋ, ಆ ಭಗವತ್ಸ್ವರೂಪಗಳು ವಿಭೂತಿರೂಪಗಳೆನಿಸುತ್ತವೆ. (೨) (ಅದನ್ನೇ ವಿವರಿಸುತ್ತಾರೆ—) ಶ್ರೀಪರಮಾತ್ಮನು ಸಮಸ್ತ ದೇವತೆಗಳ ಸಮೂಹಕ್ಕಿಂತ ಚತುರ್ಮುಖ ಬ್ರಹ್ಮನಿಗೆ ಉತ್ತಮತ್ವಕ್ಕೆ ಕಾರಣನಾಗಿ ಚತುರ್ಮುಖನಲ್ಲಿದ್ದವನಾಗಿ ಬ್ರಹ್ಮನೆಂದು ಹೆಸರುಳ್ಳವನು. ಹಾಗೆಯೇ ಸಮಸ್ತ ವೇದಗಳ ಡಿಕೆಯಿಂದ ಸಾಮವೇದಕ್ಕೆ ಶ್ರೇಷ್ಠತ್ವಕ್ಕೆ ಕಾರಣನಾಗಿ ಸಾಮವೇದದಲ್ಲಿ ಪ್ರೇರಕನಾಗಿ ಇದ್ದವನಾಗಿ ಸಾಮ ಎಂದು ಹೆಸರುಳ್ಳವನು ಹಾಗೆಯೇ ಎಲ್ಲಾ ವೃಕ್ಷಗಳಿಗಿಂತ ಅಶ್ವತ್ಥ ವೃಕ್ಷವು ಶ್ರೇಷ್ಠವಾಗಲಿಕ್ಕೆ ಕಾರಣನಾಗಿ ಶ್ರೀಹರಿಯು ಅಶ್ವತ್ಥವೃಕ್ಷದಲ್ಲಿ ನಿಯಾಮಕನಾಗಿ ಇದ್ದವನಾಗಿ ಅಶ್ವತ್ಥ ಎಂದು ಹೆಸರುಳ್ಳವನು. ಇತ್ಯಾದಿ ಪ್ರಮೇಯವು ವಿಭೂತಿತತ್ತ್ವವೆಂಬ ಗ್ರಂಥದಲ್ಲಿದೆ (೩) (ರವಿ ಮೊದಲಾದವರೇ ಶ್ರೀಪರಮಾತ್ಮನ ವಿಭೂತಿರೂಪಗಳು ಎಂ[illegible]

ಆ ಸೂರ್ಯಾದಿಗಳಲ್ಲಿ ನಿಯಾಮಕವಾಗಿರುವ ಶ್ರೀಪರಮಾತ್ಮನ ರೂಪವೇ ವಿಭೂತಿರೂಪವೆನ್ನುತ್ತಾರೆ—) ಕೇಷು ಕೇಷು ಚ ಭಾವೇಷು ಯಾವ ಯಾವ ವಸ್ತುಗಳಲ್ಲಿ ನಿನ್ನನ್ನು ಧ್ಯಾನಿಸಬೇಕು ಎಂದು ಹೇಳಿದ್ದರಿಂದ ಶ್ರೀಪರಮಾತ್ಮನ ವಿಭೂತಿರೂಪವು ಬ್ರಹ್ಮ ಮೊದಲಾದ ಜೀವರಿಗಿಂತಲೂ ಜಡಪದಾರ್ಥಗಳಿಗಿಂತಲೂ ಬೇರೆಯೇ ಎಂದು ಹೇಳಿದಂತೆಯೇ ಆಯಿತು. (ಅಂದರೆ ಇಲ್ಲಿ ಸೂರ್ಯ ಮೊದಲಾದವರೇ ವಿಭೂತಿರೂಪವು, ಸೂರ್ಯನಲ್ಲಿ ಅಂತರ್ಗತವಾದುದು ಅಲ್ಲವೆಂದಾಗಿದ್ದರೆ—ಆಗ ಕೇಷು ಕೇಷು ಚ ಭಾವೇಷು ಚಿಂತ್ಯಃ ಎಂಬ ವಿಭೂತಿರೂಪಾಶಯತ್ವವನ್ನು ಹೇಳಿದ್ದು ಅಯುಕ್ತವಾಗುವುದು. (ಆಯಾವ ಪದಾರ್ಥಗಳಲ್ಲಿದ್ದುದೇ ವಿಭೂತಿರೂಪವೆಂದಾಗಿದ್ದರೆ—(1) ಸಿದ್ಧಾನಾಂ ಕಪಿಲೋ ಮುನಿಃ (2) ಮುನೀನಾಮಪ್ಯಹಂ ವ್ಯಾಸಃ (3) ವೃಷ್ಣೀನಾಂ ವಾಸುದೇವೋಽಸ್ಮಿ, (4) ರಾಮಃ ಶಸ್ತ್ರಭೃತಾಮಹಂ (5) ಆದಿತ್ಯಾನಾಮಹಂ ವಿಷ್ಣುಃ. ಎಂದು ಹೇಳಲ್ಪಟ್ಟ, ಕಪಿಲಾದಿಗಳಲ್ಲಿ ಅಂತರ್ಗತ ಭಗವದ್ರೂಪಗಳಾಗದೆ ಹೋಗುವವು. ಎಂಬುವ ಆಶಂಕೆಯನ್ನು ಸ್ಮೃತಿಯಿಂದಲೇ ಪರಿಹರಿಸುತ್ತಾರೆ.) (೪) ಶ್ರೀಪರಮಾತ್ಮನ ವಿಭೂತಿರೂಪವು ಪ್ರಕೃಷ್ಟ ತಿರೋಹಿತ ಎಂದು ಎರಡು ವಿಧವು. ಅದರಲ್ಲಿ (1) ಕಪಿಲ ವ್ಯಾಸ ಕೃಷ್ಣ ಮೊದಲಾದ ಶ್ರೀಪರಮಾತ್ಮನ ರೂಪವು ಪ್ರಕೃಷ್ಟ ವಿಭೂತಿರೂಪ ಎನಿಸುತ್ತದೆ. ಬ್ರಹ್ಮ ರುದ್ರ ಮೊದಲಾದ ಜೀವರಿಂದಲೂ ಜಡಪದಾರ್ಥಗಳಿಂದಲೂ ಭಿನ್ನವಾದುದು, ಅವರಿಗೆ ನಿಯಾಮಕವಾದುದು ಆ ವಸ್ತುಗಳಿಗೆ ಆ ಜಾತಿಯ ವಸ್ತುಗಳಿಗಿಂತ ಶ್ರೇಷ್ಠತ್ವವನ್ನು ಹೊಂದಿಸಿಕೊಡುವುದು ಶ್ರೀಪರಮಾತ್ಮನ ರೂಪವು ತಿರೋಹಿತ ವಿಭೂತಿರೂಪವೆನಿಸುತ್ತದೆ, ಇತ್ಯಾದಿ ಪ್ರಮೇಯವು ಉಕ್ತವಾಗಿದೆ ॥ ೧ ॥

ಟೀ—ಆಯಾವ ವಸ್ತುಗಳಲ್ಲಿ ನಿಯಾಮಕವಾಗಿದ್ದು ಆಯಾವ ನಾಮಧೇಯವುಳ್ಳದ್ದು ವಿಭೂತಿರೂಪವು. ಎಂದುಕ್ತವಾಗಿದೆ. ಅದರಲ್ಲಿ ಆ ವಿಭೂತಿರೂಪಗಳಿಗೆ ಆಯಾವ ಪದಾರ್ಥಗಳಿಂದ (ಅಂದರೆ ರವಿ ಮೊದಲಾದವರಿಂದ) ವಿಶೇಷವಿಲ್ಲವಾದರೆ—ರವಿ ಮೊದಲಾದ ನಾಮಧೇಯವು ಕೂಡಲಾರದು. ಎಂದರೆ ಅವಯವ ಶಕ್ತಿಯಿಂದ ಆ ವಿಭೂತಿರೂಪಗಳಿಗೆ ಆಯಾವ ನಾಮಧೇಯವು ಕೂಡುತ್ತದೆ. ಎಂಬುವುದನ್ನು ಸ್ಮೃತಿಯಿಂದಲೇ ತೋರಿಸುತ್ತಾರೆ—

**ತಾ ॥ (೧) ಅತ್ಯಂತತತಗುಣತ್ವೇನ ರವಣೀಯೋ ಯತೋ ರವಿಃ । ಉದವನ್ಮೇಘಜಲನಾನ್ಮರೀಚಿಃ ನಾಮ ನಾಮ್ಯತಃ । (೨) ಸುಖಾತ್ಸುಖತ್ವಾತ್ತು ಶಶೀ ವೇದೋ ವೇದನತೋ ಹರಿಃ । ವಾಸವಶ್ಚ ವಾಸವೋಽಸೌ ಚೇತೋಽನೇತಾ ತು ಚೇತನಾ । (೩) ಪಾಲನೈರ್ವರ್ತನೀಯತ್ವಾತ್ಪವನೋ ಬೋಧನಾನ್ಮನಃ । ಪಾವಕಃ ಶೋಧನಾನ್ಮೇರುರೀರೋಯನ್ನ್ಯಾಸ್ಯ ಸಾಗರಃ । (೪) ಸಾರಸ್ಯ ಗರಣಾತ್ಸ್ಕಂದೋ ಜಗತಃ ಸ್ಕಂದನಾದ್ಭೃಗುಃ । ಭರ್ಜನಾಜ್ಜಪ ಯಜ್ಞಶ್ಚ ಜಾತಪೋ ಯಾಜ್ಞ ಏವ ಚ । (೫) ಅತ್ಯಾಕಾರಸ್ಥಿತೋಽಶ್ವತ್ಥೋ ನರಂ ಶ್ರೀಶ್ಚ ಪದಾಶ್ರಯಃ । ನರಾವಶೋ ನರಾಣಾಂ ಯದ್ದದ್ಯಾತ್ಸರ್ವಂ ಸ ನಾರದಃ । (೬) ಹ್ರೀ ಶ್ರೀ ಸಮಾಶ್ರಯತ್ವಾಚ್ಚ ಹಿಮಾಲಯ ಇತೀರಿತಃ । ವಜ್ರಾತ್ತ್ವಾದರಿಭಿರ್ವಜ್ರೋ ವೈನತೇಯೋ ನತಾಸ್ಪದಃ । ವಾಸುಕಿರ್ವಾಸಸುಖದಃ ಕಂದರ್ಪಃ ಸುಖಭೇದಪಃ ॥ ೨ ॥**

ಅ ॥ (೧) ಶ್ರೀಹರಿಯು ಸರ್ವತತ್ವಾತ್ಮಕನಾದ ಪೂರ್ಣಗುಣಗಳುಳ್ಳವನಾದುದರಿಂದ ಅತ್ಯಾ ಎನಿಸುತ್ತಾನೆ. ವೇದರೂಪತಲಗಳಿಂದ ತಿಳಿಯಲ್ಪಡುವವನಾದುದರಿಂದ ರವಿಃ ಎನಿಸುತ್ತಾನೆ. ಜಲಪೂರ್ಣವಾದ ಮೇಘವನ್ನು ಚಲಿಸುವಹಾಗೆ ಮಾಡುವುದರಿಂದ ಮರೀಚಿಃ ಎನಿಸುತ್ತಾನೆ. ಲತ್ಯಾದಿಗಳ ಸ್ವರೂಪ

ಸುಖದಿಂದಲೂ ಅತಿಶಯ ಸುಖಸ್ವರೂಪನಾದುದರಿಂದ ಶಶೀ ಎನಿಸುತ್ತಾನೆ. (೨) ಸರ್ವತ್ರ ಸಮನಾಗಿರುವುದರಿಂದ ಸಾಮ ಎನಿಸುತ್ತಾನೆ. ಶ್ರೀಹರಿಯು ಸರ್ವವನ್ನು ತಿಳಿಯುವವನಾದುದರಿಂದ ವೇದನೆನಿಸುತ್ತಾನೆ. ಈ ರೀತಿ ಸಾಮವೇದವೆನಿಸಿಕೊಂಡವನು. ಶ್ರೀಹರಿಯು ಸರ್ವ ದೇಶ ಕಾಲಗಳಲ್ಲಿ ವ್ಯಾಪಿಸಿಕೊಂಡಿದ್ದುದರಿಂದ ವಾಸವನೆನಿಸುತ್ತಾನೆ. ಸರ್ವರ ಮನಸ್ಸಿಗೆ ಪ್ರೇರಕನಾದುದರಿಂದ ಚೇತನಾ ಎನಿಸುತ್ತಾನೆ. (೩) ಜಗದ್ರಕ್ಷಕರಾದ ಬ್ರಹ್ಮರುದ್ರಾದಿಗಳಿಂದ ಸೇವಿಸಲ್ಪಡುವುದರಿಂದ ಪವನಃ ಎನಿಸುತ್ತಾನೆ. ಸರ್ವವನ್ನು ತಿಳಿಯುವವನಾದುದರಿಂದ ಮನಃ ಎನಿಸುತ್ತಾನೆ ಸರ್ವವಸ್ತುಗಳನ್ನು ಶುದ್ಧೀಕರಿಸುವುದರಿಂದ ಪಾವಕಃ ಎನಿಸುತ್ತಾನೆ. ಶ್ರೀಪರಮಾತ್ಮನಿಗೆ ಪ್ರೇರಕನು ಇನ್ನೊಬ್ಬನಿಲ್ಲದಿರುವುದರಿಂದ ಮೇರುಃ ಎನಿಸುತ್ತಾನೆ. (೪) ಸರ್ವ ಪದಾರ್ಥಗಳ ಸಾರವಿಷಯವನ್ನು ಭೋಗಿಸುವವನಾದುದರಿಂದ ಸಾಗರಃ ಎನಿಸುತ್ತಾನೆ. ಪ್ರಳಯಕಾಲದಲ್ಲಿ ಹೊಟ್ಟೆಯೊಳಗೆ ಇಟ್ಟುಕೊಂಡಿದ್ದ ಜಗತ್ತನ್ನು ಸೃಷ್ಟಿಕಾಲದಲ್ಲಿ ಹೊರಗೊಳಿಸುವವನಾದುದರಿಂದ ಸ್ಕಂದಃ ಎನಿಸುತ್ತಾನೆ. ವಿರೋಧಿಗಳನ್ನು ನಾಶಗೊಳಿಸುವವನಾದುದರಿಂದ ಭೃಗುಃ ಎನಿಸುತ್ತಾನೆ. ಹುಟ್ಟಿದವರೆಲ್ಲರನ್ನು ರಕ್ಷಿಸುವುದರಿಂದ ಜಪನೆಂದೂ ಬ್ರಹ್ಮಾದಿಗಳಿಂದ ಪೂಜಿಸಲ್ಪಡುವವನಾದುದರಿಂದ ಯಜ್ಞನೆಂದು ಏವಂ ಚ ಜಪಯಜ್ಞನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ (೫) ಅಶ್ವದಂತೆ ಇರುವವನಾದುದರಿಂದ ಅಂದರೆ—ಹಯಗ್ರೀವರೂಪದಿಂದ ಅಥವಾ ವಡವಾವಕ್ತ್ರರೂಪದಿಂದ ಇರುವವನಾದುದರಿಂದ ಅಶ್ವತ್ಥನೆನಿಸಿಕೊಂಡವನು. ಮತ್ತು ಮುಕ್ತಿಯೋಗ್ಯರಾದ ಅಶ್ವಾಕಾರರಾದ ಜೀವರಲ್ಲಿ ಶ್ರೀಪರಮಾತ್ಮನು ಬಿಂಬರೂಪನಾಗಿ ಅಶ್ವಾಕಾರನಾಗಿಯೇ ಇದ್ದಾನೆ. ಆದುದರಿಂದಲೂ ಅಶ್ವತ್ಥನೆನಿಸುತ್ತಾನೆ, (ತದ್ವೈರಂ ಮದೀಯಂ ಸರಃ ಶ್ವೇತದ್ವೀಪದಲ್ಲಿ ಮಧುರವಾದ ಲಕ್ಷ್ಮೀಸ್ವರೂಪವಾದ ಸರೋವರವಿದೆ, ಇತ್ಯಾದಿ ಪ್ರಮಾಣಗಳಿಂದ) ಐರ ಎನಿಸಿಕೊಂಡವಳು ಲಕ್ಷ್ಮೀದೇವಿಯು. ಅವಳಿಗೆ ಆಶ್ರಯನಾಗಿ ಆ ಲಕ್ಷ್ಮೀದೇವಿಯನ್ನು ರಕ್ಷಿಸಿಕೊಂಡಿರುವುದರಿಂದ ಐರಾವತನೆನಿಸಿಕೊಂಡವನು ಶ್ರೀಹರಿಯು. ಮನುಷ್ಯರಿಗೆ ಅಪೇಕ್ಷಿತವಾದ ತತ್ತ್ವಜ್ಞಾನಾದಿಗಳನ್ನು ಕೊಡುವವನಾದುದರಿಂದ ಶ್ರೀಹರಿಯು ನಾರದನೆನಿಸಿಕೊಂಡಿರುತ್ತಾನೆ. (೬) ಹ್ರೀ, ಶ್ರೀ, ಎಂದು ಎರಡು ರೂಪಗಳುಳ್ಳ ಲಕ್ಷ್ಮೀದೇವಿಗೆ ಆಶ್ರಯನಾಗಿರುವುದರಿಂದ ಶ್ರೀಹರಿಯು ಹಿಮಾಲಯನೆಂದು ಹೆಸರುಳ್ಳವನು. ಶತ್ರುಗಳಿಂದ ಬಿಡಲ್ಪಟ್ಟಿರುವವನಾದುದರಿಂದ ವಜ್ರನೆಂದು ಹೆಸರುಳ್ಳವನು. ವಿಶೇಷವಾಗಿ ನಮ್ರಾಭೂತರಾದ ದೇವಾದಿಗಳಿಗೆ ಆಶ್ರಯನಾಗಿರುವುದರಿಂದ ವೈನತೇಯನೆಂದು ಹೆಸರುಳ್ಳವನು. ವಾಸವಾಡಲಿಕ್ಕೆ ಅತ್ಯಧಿಕಸುಖವನ್ನು ಹೃದಯದೊಳಗೆ ಅನಿರುದ್ಧರೂಪದಿಂದ ಇದ್ದು ಕೊಡುವುದರಿಂದ ವಾಸುಕಿ ಎಂದು ಹೆಸರುಳ್ಳವನು. ಸುಖಪ್ರಭೇದಗಳನ್ನು (ಅಂದರೆ ನಿರವಧಿಕ ಆನಂದಗಳನ್ನ)ನುಭವಿಸುವವನಾದುದರಿಂದ ಕಂದರ್ಪನೆನಿಸುತ್ತಾನೆ. ॥ ೨ ॥

**ತಾ ॥ (೧) ಅರ್ಯಮಾ ಜ್ಞೇಯಮಾತ್ರತ್ವಾತ್ಕಾಲ ಆಕಲನಾದಪಿ । ವರುಣೋ ವರಣಾದ್ಯಂದ್ಯೋ ದ್ವಿರೂಪೋಽಂತರ್ಬಹಿರ್ಯತಃ ॥ (೨) ಮಕರೋ ಮಾನಕರ್ತೃತ್ವಾದ್ಯಮಃ ಸಂಯಮನಾದ್ವಿಭುಃ । ಪ್ರಹ್ಲಾದಃ ಸ ಮಹಾನಂದೋ ಮೃಗೇಂದ್ರೋ ಮೃಗಯತ್ಪತಿಃ ॥ (೩) ಜಾಹ್ನವೀ ಜಹತಾಂ ಸ್ಥಾನಮಧ್ಯಾತ್ಮಂ ಚಾತ್ಮನಾಂ ಪತಿಃ । ವಿದ್ಯಾಜ್ಞಪ್ತಿಸ್ವರೂಪತ್ವಾದ್ವಾದೋ ವಾಚ್ಯತ್ವತೋ ಹರಿಃ ॥ (೪) ಕೀರ್ತ್ಯಾದೇ (ರ್ತ್ಯಾ) ವತ್ವಾತ್ತ್ರಯಃ ಕೀರ್ತಿರ್ವಾಕ್ ಶ್ರೀರಿತಿ ಚ ನಾಮಕಃ(ಕಾಃ) । ಸ್ಮರಣೀಯಾ ಸ್ಮೃತಿರ್ಮೇಧಾ ಕ್ಷಮಾರೂಪಸ್ತಥೇರ್ಯತೇ ॥ (೫) ದ್ಯೂತಂ ಕ್ರೀಡಾಪರತ್ವಾಚ್ಚ ಗಾಯತ್ರೀ ತ್ರಾತಿ ಗಾಯಕಾನ್ । ಸತ್ತ್ವಂ ಸಾಧುಗುಣತ್ವಾಚ್ಚ ದಂಡನಾದ್ದಂಡ ಉಚ್ಯತೇ ॥ ೩ ॥**

ಅ ॥ (೧) ಜ್ಞೇಯವಾದುದೆಲ್ಲವನ್ನು ತಿಳಿಯುವವನಾದುದರಿಂದ ಅರ್ಯಮಾ ಎನಿಸುತ್ತಾನೆ. ಜ್ಞಾನಸ್ವರೂಪನಾದುದರಿಂದ ಕಾಲಃ ಎನಿಸುತ್ತಾನೆ ಅತ್ಯುತ್ಕೃಷ್ಟ ಆನಂದವುಳ್ಳವನಾದುದರಿಂದ ವರುಣ

ಎನಿಸುತ್ತಾನೆ. ಅಥವಾ ಭಕ್ತರನ್ನಾಗಿ ಸ್ವೀಕರಿಸುವುದರಿಂದ ವರುಣಃ ಎನಿಸುತ್ತಾನೆ. ಒಳಗೂ ಹೊರಗೂ ಎರಡು ರೂಪಗಳಿಂದ ವ್ಯಾಪಿಸಿಕೊಂಡಿದ್ದುದರಿಂದ ದ್ವಂದ್ವಃ ಎನಿಸುತ್ತಾನೆ. (೨) ಸಾಮಾನ್ಯ ಜನರಿಗೆ ಅಲ್ಪಜ್ಞಾನವನ್ನುಂಟುಮಾಡುವವನಾದುದರಿಂದ ಮಕರಃ ಎನಿಸುತ್ತಾನೆ. ಶ್ರೀಪರಮಾತ್ಮನು ಚೆನ್ನಾಗಿ ನಿಗ್ರಹಿಸುವವನಾದುದರಿಂದ ಯಮನೆನಿಸುತ್ತಾನೆ. ಮಹಾ ಆನಂದವುಳ್ಳವನಾದುದರಿಂದ ಪ್ರಹ್ಲಾದನೆನಿಸುತ್ತಾನೆ. ಸರ್ವಸ್ವಾಮಿಯಾದ ಶ್ರೀಪರಮಾತ್ಮನು ಭಕ್ತಿಪೂರ್ವಕವಾಗಿ ತನ್ನನ್ನು ಹುಡುಕುವ ಭಕ್ತರಿಗೆ ಅಧಿಪತಿಯಾಗುವವನಾದುದರಿಂದ ಮೃಗೇಂದ್ರನೆನಿಸುತ್ತಾನೆ. (೩) ಜನನಮರಣಾದಿರೂಪವಾದ ಸಂಸಾರವು ನಿಸ್ಸಾರವೆಂದು ತಿಳಿದು ಸಂಸಾರವನ್ನು ಬಿಡುವ ಭಕ್ತರಿಗೆ ಆಶ್ರಯನಾಗಿರುವವನಾದುದರಿಂದ ಜಾಹ್ನವೀ ಎನಿಸುತ್ತಾನೆ. ಜೀವರಿಗೆಲ್ಲಾ ಅಧಿಪತಿಯಾಗಿರುವವನಾದುದರಿಂದ ಅಧ್ಯಾತ್ಮನೆಂದೂ ಜ್ಞಾನಸ್ವರೂಪನಾಗಿರುವುದರಿಂದ ವಿದ್ಯಾ ಎಂದೂ ಹೀಗೆ ಅಧ್ಯಾತ್ಮವಿದ್ಯಾ ಎನಿಸುತ್ತಾನೆ. ಶ್ರೀಹರಿಯು ವೇದಗಳಿಂದ ಹೇಳಲ್ಪಡುವವನಾದುದರಿಂದ ವಾದಃ ಎನಿಸುತ್ತಾನೆ. (೪) ಸ್ತುತಿಸಲ್ಪಡುವವನಾದುದರಿಂದ ಕೀರ್ತಿಃ, ಎಂದೂ ಸರ್ವವನ್ನು ಹೇಳುವವನಾದುದರಿಂದ ವಾಕ್ ಎಂದೂ, ಸೇವಕರಿಗೆ ಫಲವನ್ನು ಕೊಟ್ಟು ಅನುಗ್ರಹಿಸುವವನಾದುದರಿಂದ ಶ್ರೀಃ ಎಂದೂ, ಹೆಸರುಳ್ಳವನು ಆಗಿರುತ್ತಾನೆ. ಭಕ್ತರಿಂದ ಸ್ಮರಿಸಲ್ಪಡುವವನಾದುದರಿಂದ ಸ್ಮೃತಿ ಎಂದೂ ವಿಶೇಷಜ್ಞಾನಸ್ವರೂಪನಾದುದರಿಂದ ಮೇಧಾ ಎಂದೂ ಭಕ್ತರ ಅಪರಾಧವನ್ನು ಕ್ಷಮಿಸುವ ಸ್ವಭಾವವುಳ್ಳವನಾದುದರಿಂದ ಕ್ಷಮಾ ಎಂದೂ ಹೇಳಲ್ಪಡುತ್ತಾನೆ. (೫) ಕ್ರೀಡೆಯಲ್ಲಿ ಆಸಕ್ತನಾಗಿರುವುದರಿಂದ ದ್ಯೂತನೆಂದೂ ತನ್ನನ್ನು ಗಾನಮಾಡುವವರನ್ನು ರಕ್ಷಿಸುವವನಾದುದರಿಂದ ಗಾಯತ್ರೀ ಎಂದೂ ಸಾಧುಗುಣಗಳ ಸ್ವರೂಪನಾದುದರಿಂದ ಸತ್ವನೆಂದು ಹೇಳಲ್ಪಡುತ್ತಾನೆ. (ಅಂದರೆ ಸಾಧು ಗುಣಗಳುಳ್ಳವರಿಗೆ ನಾನು ಸಾಧುಗುಣನು ಅಂದರೆ ಅವರಿಗೆ ಅನುಗುಣವಾದ ಬಿಂಬಭೂತವಾದ ಸಾಧುಗುಣಸ್ವರೂಪನು. ಎಂಥ ಅವರಿಗೆ ಸಾಧುಗುಣ ಸ್ವರೂಪವಾದ ಸಾರಧರ್ಮವನ್ನು ಕೊಡುವವನು.) ದುಷ್ಟರನ್ನು ಶಿಕ್ಷಿಸುವವನಾದುದರಿಂದ ದ್ವಂದ್ವನೆಂದೂ ಹೇಳಲ್ಪಡುತ್ತಾನೆ ॥೩॥

ತಾ ॥ (೧) ಬೃಹತ್ಸಾರೋಽಪ್ಯಮೇಯಶ್ಚ ಬೃಹತ್ಸಾಮೋಽತನೋಽತತೇಃ । ಶುಭಾಶುಭಜ್ಞಾನಕರಃ ಕುಸುಮಾಕರ ಈರಿತಃ ॥ (೨) ಜ್ಞಾನಂ ಜ್ಞಾನಾತ್ಮಕೋ ಮೌನಂ ಮುನಿಜೋ ನೀತಿರಾನಯನ್ । ಮಾರ್ಗಾಣಾಮಂತಗತ್ವಾತ್ತು ಮಾರ್ಗಶೀರ್ಷಃ ಪ್ರಕೀರ್ತಿತಃ ॥ (೩) ಸುಖಂ ಪಿಬನ್ ಲೀಲಯೈವ ಕಪಿಲೋ ವ್ಯಾಸ ಏವ ಚ । ವಿಶಿಷ್ಟತ್ವಾದ್ವಿಷ್ಣುನಾಮಾ ವಿಶಿಷ್ಟಪ್ರಾಣಸೌಖ್ಯತಃ ॥ (೪) ಏವಂ ನಾನಾಗುಣೈರ್ವಿಷ್ಣುರ್ನಾನಾನಾಮಭಿರೀರಿತಃ । ನಾನಾಪ್ರಾಣ್ಯಾದಿಸಂಸ್ಥಶ್ಚ ವಿಭೂತಿರಿತಿ ಶಬ್ದಿತಃ ॥೪॥

ಅ ॥ (೧) ಶ್ರೇಷ್ಠರಾದ ಬ್ರಹ್ಮಾದಿಗಳಿಗೂ ಶ್ರೇಷ್ಠನಾಗಿರುವುದರಿಂದ ಬೃಹತ್ಸನೆಂದೂ, ಹೀಗೆಯೇ ಇದ್ದಾನೆಂದು ತಿಳಿಯಲಶಕ್ಯನಾದುದರಿಂದ ಅಮನೆಂದೂ ಹೀಗೆ ಬೃಹತ್ಸಾಮನೆನಿಸುತ್ತಾನೆ. ಜಗತ್ಸೃಷ್ಟ್ಯಾದಿಗಳನ್ನು ಮಾಡಬೇಕೆಂದು ಇಚ್ಛೆಯುಳ್ಳವನಾದುದರಿಂದ ಉಶನಾ ಎನಿಸುತ್ತಾನೆ. ಸಜ್ಜೀವರಿಗೆ ಶುಭಜ್ಞಾನವನ್ನೂ ಅಶುಭರಿಗೆ ಅಶುಭ ಜ್ಞಾನವನ್ನೂ ಹುಟ್ಟಿಸುವವನಾದುದರಿಂದ ಕುಸುಮಾಕರನೆಂದು ಹೇಳಲ್ಪಡುತ್ತಾನೆ. (೨) ಜ್ಞಾನವೆಂಬುವ ಗುಣಸ್ವರೂಪನಾದುದರಿಂದಲೂ ಜ್ಞಾನಾತ್ಮಾ ಎಂಬುವ ರೂಪವಿಶೇಷವಿರುವುದರಿಂದಲೂ ಜ್ಞಾನನೆನಿಸುತ್ತಾನೆ. ಮುನಿಗಳಿಂದ ಸ್ತುತಿಸಲ್ಪಡುವವನಾದುದರಿಂದ ಮೌನ ಎನಿಸುತ್ತಾನೆ. ನೀತಿರೂಪವಾದ ಸಾರಧರ್ಮವನ್ನು ಕೊಡುವವನಾದುದರಿಂದಲೂ, ಸುಪ್ತಿಯಲ್ಲಿಯೂ ಮುಕ್ತಿಯಲ್ಲಿಯೂ ಜೀವನನ್ನು ತನ್ನ ಸಮೀಪಕ್ಕೆ ಕರೆದುಕೊಳ್ಳುವುದರಿಂದಲೂ ನೀತಿ ಎಂದು ಹೆಸರು

ವನು. **ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ** ಎಂಬ ವೇದಪ್ರಮಾಣ ದಿಂದ **ಅರ್ಚಿರಾದಿ** ಮಾರ್ಗಗಳಿಗೆ ಶ್ರೀವಿಷ್ಣುವು ಅಂತದಲ್ಲಿದ್ದ ಪ್ರಯುಕ್ತ ಶಿರಃಸ್ಥಾನೀಯನಾದುದರಿಂದ **ಮಾರ್ಗಶೀರ್ಷಃ**ನೆಂದು ಹೆಸರುಳ್ಳವನು. (೩) ವಿಶಿಷ್ಟವಾದ ಸುಖವನ್ನು ಕ್ರೀಡೆಯಿಂದಲೇ ಅನುಭವಿಸು ವವನಾದುದರಿಂದ **ಕಪಿಲಃ**ನೆಂದು ಹೆಸರುಳ್ಳವನು. ಸರ್ವೋತ್ಕೃಷ್ಟನೂ ಸರ್ವತ್ರವ್ಯಾಪ್ತನೂ ಆದುದರಿಂದ **ವ್ಯಾಸಃ** ಎನಿಸುತ್ತಾನೆ. ಅಥವಾ ಸರ್ವೋತ್ಕೃಷ್ಟನಾಗಿ ಇರುವವನಾದುದರಿಂದ **ವ್ಯಾಸಃ** ಎನಿಸುತ್ತಾನೆ. (**ಪಕಾರಃ ಪ್ರಾಣಾ ಅಕ್ಷಾ ಋಷ್ಟ ನಿರ್ವೃತಿವಾಚಕಃ** ಎಂಬುವ ಪ್ರಮಾಣಗಳಿಂದ ಚೆನ್ನಾಗಿ ಸರ್ವರಿಗೆ ಪ್ರೇರಕನೂ ವಿಶಿಷ್ಟ ಅನಂದ ಸ್ವರೂಪನೂ ಆಗಿರುವುದರಿಂದ **ವಿಷ್ಣುಃ** ಎನಿಸುತ್ತಾನೆ ) (೪) ಹಿಂದೆ ಹೇಳಿದ ಪ್ರಕಾರ ಶ್ರೀವಿಷ್ಣುವು ನಾನಾ ಗುಣಗಳಿಂದ ರವಿ ಮೊದಲಾದ ಬಹು ವಿಧ ನಾಮಗಳಿಂದ ಹೇಳಿಸಿಕೊಳ್ಳುತ್ತಾ ಅನೇಕ ಪ್ರಾಣ್ಯಾದಿಗಳಲ್ಲಿದ್ದು ನಿಯಾಮಕನಾಗಿದ್ದವನು, ವಿಭೂತಿ ಎಂದು ಹೇಳಲ್ಪಡುತ್ತಾನೆ ॥ ೪ ॥

**ಶಾ ॥ (೧) ಶಶ್ಯಾದಿಷು ವಿಜಾತೀಯಸ್ವಾಮ್ಯದಃ ಸಾರದಃ ಕ್ವಚಿತ್ । ಶರ್ವಾದಿಷು ಸಜಾತೀಯಶ್ರೈಷ್ಠ್ಯದಸ್ತೇನ ಸಂಸ್ಥಿತಃ ॥ (೨) ಶಕ್ರೋಶನಾರ್ಜುನಾದ್ಯೇಷು ಸಜಾತೀಯೈಕದೇಶತಃ । ದೇವೇಷ್ವಪ್ಯ(ಭ್ಯ)ಧಿಕೋ ಬ್ರಹ್ಮಾ ಯತೋ ವಿಷ್ಣೋರನಂತರಃ ॥ (೩) ಕವಿತ್ವಾದಿಗುಣೇಷ್ವೇವ (ವಂ) ಯತ್ಸಮೋ ನಾಸ್ತಿ ಕಶ್ಚನ । ತಥಾ ಭೀಮಶ್ಚ ಪಾರ್ಥೇಷು ಜ್ಞಾನಂಯಜ್ಞೇಷು ಚೋತ್ತಮಂ । ಸುದರ್ಶನಂ ಚಾ(ನಶ್ಚಾ)-ಯುಧೇಷು ವೇದೇಷ್ವೃಗ್ವೇದ ಉಚ್ಯತ (ಏವ ಚ) ಇತ್ಯಾದಿ ವಿಭೂತಿತತ್ತ್ವೇ ॥ (೪) ಕ್ವಚಿತ್ಸಾಮ್ಯ ಅಧಿಕ್ಯಮಭಿಮಾನ್ಯಪೇಕ್ಷಯಾ । ಯಚಃ ಶ್ರೀರ್ಗೀರುಮಾದ್ಯಾಸ್ತ ಸಾಮ್ಯಃ ಪ್ರಾಣಶಿವಾದಯ ಇತ್ಯಾದ್ಯಭಿಮಾನಿಭೇದಾತ್ । ತತ್ರಾಪಿ ಯಥಾಯೋಗ್ಯಂ॥ ॥ ಶ ॥** ॥ ೧೦—೪೦ ॥

ಅ ॥ (೧) ಚಂದ್ರಾದಿಗಳಲ್ಲಿದ್ದ ಪರಮಾತ್ಮನು ಚಂದ್ರಾದಿಗಳಿಗೆ ವಿಜಾತೀಯಗಳಾದ ನಕ್ಷತ್ರಾದಿಗಳನ್ನು ಕುರಿತು ಸ್ವಾಮಿತ್ವವನ್ನು ಕೊಡತಕ್ಕವನು. **ಸತ್ವಂ ಸತ್ವವತಾಮಹಂ** ಇತ್ಯಾದಿಗಳಲ್ಲಿ ಬಲ ವುಳ್ಳವರಿಗೆ ಸತ್ವರೂಪ ಸಾರಧರ್ಮವನ್ನು ಕೊಡುವವನು. **ರುದ್ರಾಣಾಂ ಶಂಕರಶ್ಚಾಸ್ಮಿ** ಇತ್ಯಾದಿಗಳಲ್ಲಿ ಶಂಕರಾದಿಗಳಿಗೆ ಸಜಾತೀಯ ಇತರ ರುದ್ರಾದಿಗಳಿಗಿಂತ ಶ್ರೇಷ್ಠತ್ವವನ್ನು ಕೊಡುವವನು (೨) **ದೇವಾನಾಮಸ್ಮಿ ವಾಸವಃ । ಕವೀನಾಮುಶನಾಃ ಕವಿಃ, ಪಾಂಡವಾನಾಂ ಧನಂಜಯಃ, ಯಜ್ಞಾನಾಂ ಜಪ ಯಜ್ಞೋಽಸ್ಮಿ, ಆಯುಧಾನಾಮಹಂ ವಜ್ರಂ ವೇದಾನಾಂ ಸಾಮವೇದೋಽಸ್ಮಿ** ಇತ್ಯಾದಿಗಳಲ್ಲಿ ಇಂದ್ರಾದಿಗಳಿಗೆ ಸಜಾತಿಯರಲ್ಲಿ ಏಕದೇಶದಿಂದ ಶ್ರೇಷ್ಠತ್ವವನ್ನು ಕೊಡುವವನು. (ಇಂದ್ರಾದಿಗಳಿಗೆ ಸಜಾತಿಯರಲ್ಲಿ ಏಕದೇಶದಿಂದಲೇ ಶ್ರೇಷ್ಠತ್ವವೆಂದು ಏಕೆ ಹೇಳಬೇಕು ಎಂದರೆ ) ವಿಷ್ಣುವು ಹೊರತು ದೇವತೆಗಳಲ್ಲಿ ಅಧಿಕನಾದವನು ಬ್ರಹ್ಮನೇ. ವಿಷ್ಣುವು ಸರ್ವೋತ್ತಮನು (ಅಂದರೆ ದೇವತೆಗಳಲ್ಲಿ ಬ್ರಹ್ಮಾದಿಗಳೇ ಶ್ರೇಷ್ಠರಾದುದರಿಂದ ಇಂದ್ರಾದಿದೇವತೆಗಳಿಗೆ ಸಜಾತೀಯರಾದ ಅಸುರಾದಿಗಳ ಏಕದೇಶದಿಂದಲೇ ಶ್ರೇಷ್ಠತ್ವವೆಂದು ಹೇಳಬೇಕು ) (೩) ಕವಿತ್ವ ಮೊದಲಾದ ಗುಣಗಳಲ್ಲಿಯೇ ಯಾರೊಬ್ಬನೂ ಶುಕ್ರಾಚಾರ್ಯರಿಗೆ ಸಮಾನಿಕನು ಇಲ್ಲವೇ ಇಲ್ಲ. ಪಾಂಡವರಲ್ಲಿ ಭೀಮಸೇನನು ಶ್ರೇಷ್ಠನು ಯಜ್ಞಗಳಲ್ಲಿ ಜ್ಞಾನವು ಶ್ರೇಷ್ಠವು. ಆಯುಧಗಳಲ್ಲಿ ಸುದರ್ಶನವು ಶ್ರೇಷ್ಠವು. ವೇದಗಳಲ್ಲಿ ಋಗ್ವೇದವು ಶ್ರೇಷ್ಠವು ಇತ್ಯಾದಿ ಪ್ರಮೇಯವು ವಿಭೂತಿತತ್ವದಲ್ಲಿದೆ (೪) (ಕೆಲವು ಕಡೆ ಸಾಮ್ಯವೇ ಎಂದು

ದಿಗಳಿಂದ ಆಧಿಕ್ಯವನ್ನು ಹೇಳಿದ್ದು ಅಭಿಮಾನಿದೇವತೆಯನ್ನು ಇಟ್ಟುಕೊಂಡು. (ವೇದಸ್ವರೂಪವನ್ನು ಇಟ್ಟುಕೊಂಡು ಹೇಳಿದ್ದಲ್ಲ) ಋಗ್ವೇದಕ್ಕೆ ಲಕ್ಷ್ಮೀ ಸರಸ್ವತೀ ಭಾರತೀ ಪಾರ್ವತ್ಯಾದಿಗಳು. ಅಭಿಮಾನಿಯರು. ಸಾಮವೇದಕ್ಕೆ ಪ್ರಾಣ ರುದ್ರಾದಿದೇವತೆಗಳು ಅಭಿಮಾನಿಗಳು ಇತ್ಯಾದಿ ಪ್ರಕಾರ ಅಭಿಮಾನಿಗಳು ಬೇರೆ ಬೇರೆ. ಅಲ್ಲಿಯೂ ಯಥಾಯೋಗ್ಯವಾಗಿ ಇಟ್ಟುಕೊಳ್ಳಬೇಕು

ವಿ ॥ ಸಾಮವೇದಕ್ಕೆ ಅಭಿಮಾನಿಗಳಾದ ಪ್ರಾಣಶಿವಾದಿಗಳಿಗೆ ಋಗ್ವೇದಕ್ಕೆ ಅಭಿಮಾನಿಗಳಾದ ಲಕ್ಷ್ಮ್ಯಾದಿಗಳಿಗಿಂತ ಶ್ರೇಷ್ಠತ್ವವಿಲ್ಲದಿರುವುದರಿಂದ ಸಾಮವೇದಕ್ಕೆ ಋಗ್ವೇದಕ್ಕಿಂತ, ಅಭಿಮಾನಿ ವಿವಕ್ಷೆಯಿಂದಲಾದರೂ ಆಧಿಕ್ಯ ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ – ಸಾಮವೇದಕ್ಕೆ ಋಗ್ವೇದಕ್ಕಿಂತ ಆಧಿಕ್ಯವನ್ನು ಎಲ್ಲಿ ಹೇಳಿದ್ದಾರೋ ಆಗ ಸಾಮವೇದಕ್ಕೆ ಮುಖ್ಯಪ್ರಾಣನು ಅಭಿಮಾನಿಯೆಂದೂ ಋಗ್ವೇದಕ್ಕೆ ಲಕ್ಷ್ಮೀದೇವಿಯನ್ನು ಬಿಟ್ಟು ಭಾರತೀ ಸರಸ್ವತೀ ಪಾರ್ವತ್ಯಾದಿಗಳು ಅಭಿಮಾನಿಗಳೆಂದೂ ಇಟ್ಟುಕೊಳ್ಳಬೇಕು. ಸಾಮವೇದಕ್ಕೆ ರುದ್ರನನ್ನು ಅಭಿಮಾನಿಯೆಂದು ಇಟ್ಟುಕೊಂಡರೆ—ಋಗ್ವೇದಕ್ಕೆ ಅಭಿಮಾನಿಯಾದ ಪಾರ್ವತಿಗಿಂತ ಆಧಿಕ್ಯವನ್ನು ಇಟ್ಟುಕೊಂಡು ಹೇಳಿದ್ದೆಂದು ತಿಳಿಯಬೇಕು. ಅಂದರೆ ಋಗ್ವೇದಕ್ಕೆ ಅಭಿಮಾನಿನಿಯಾದ ಲಕ್ಷ್ಮೀದೇವಿಯನ್ನು ಬಿಟ್ಟು ಭಾರತೀ ಪಾರ್ವತ್ಯಾದಿಗಳಿಗಿಂತ ಸಾಮವೇದಾಭಿಮಾನಿಗಳಾದ ಪ್ರಾಣಶಿವಾದಿಗಳಿಗೆ ಆಧಿಕ್ಯದಿಂದ ಹೇಳಿದ್ದೆಂದು ತಿಳಿಯಬೇಕು. ಋಗ್ವೇದಕ್ಕೆ ಲಕ್ಷ್ಮೀದೇವಿಯು ಅಭಿಮಾನಿನಿ ಎಂದು ಇಟ್ಟುಕೊಂಡರೆ ಆಗ ಋಗ್ವೇದವೇ ಸರ್ವಪ್ರಕಾರದಿಂದಲೂ ವೇದಗಳಲ್ಲಿ ಶ್ರೇಷ್ಠವೇ ಆಗಿದೆ. ॥ ೫ ॥ ॥ ೧೦–೪೦ ॥

ಟೀ—ಶ್ರೀಪರಮಾತ್ಮನ ವಿಭೂತಿರೂಪಗಳ ವಿಸ್ತಾರಕ್ಕೆ ಲಕ್ಷಣವನ್ನು ಹೇಳುತ್ತಾರೆ—

**ಗೀ ॥ ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಮ್ ॥ ೪೧ ॥**

ಅ ॥ ಯದ್ಯತ್ ಸತ್ತ್ವಂ—ಯಾವ ಯಾವ ಪದಾರ್ಥವು, ವಿಭೂತಿಮತ್—ಆಯಾ ಜಾತೀಯ ಪದಾರ್ಥಗಳಿಗಿಂತ ಶ್ರೇಷ್ಠವಾಗಿದೆಯೋ, ಶ್ರೀಮತ್=ಸಂಪತ್ತಿನಿಂದ ಕೂಡಿಕೊಂಡಿದೆಯೋ, ಊರ್ಜಿತಮೇವ=ಅಭಿವೃದ್ಧಿಯುಳ್ಳದ್ದು ಆಗಿದೆಯೋ, ತತ್ತತ್=ಆಯಾ ಪದಾರ್ಥವನ್ನು, ಮಮ=ನನ್ನ, ತೇಜೋಽಂಶಸಂಭವಮೇವ=ಪ್ರಕಾಶರೂಪವಾದ ಅಂಶದಿಂದೊಡಗೂಡಿರುವುದನ್ನಾಗಿಯೇ, ತ್ವಂ=ನೀನು, ಅವಗಚ್ಛ-ತಿಳಿದುಕೊಳ್ಳು. ॥ ೪೧ ॥

**ಭಾ ॥ (೧) ಯದ್ಯದ್ವಿಭೂತಿಮದಿತಿ ವಿಸ್ತರಃ । ವಿಷ್ಣ್ವಾದೀನಿ ತತ್ಸ್ವರೂಪಾಣ್ಯೇವ । ಅನ್ಯಾನಿ ತು ತೇಜೋಯುಕ್ತಾನಿ ॥ (೨) ತಥಾ ಚ ಪೈಂಗಿಖಿಲೇಷು । ವಿಶೇಷತಾ ರುದ್ರವೈನ್ಯೇಂದ್ರದೇವರಾಜನ್ಯಾದ್ಯಾ ಅಂಶಯುತಾ ಅನ್ಯದೇವಾಃ । ಕೃಷ್ಣವ್ಯಾಸೌ ರಾಮಕೃಷ್ಣೌ ಚ ರಾಮಕಪಿಲೌ ಯಜ್ಞಪ್ರಮುಖಾಃ ಸ್ವಯಂ ಸ ಇತಿ ॥ (೩) ಸವಿವೈತೇ ಭಾರ್ಗವದಾಶರಥಿಕೃಷ್ಣಾದ್ಯಾಸ್ತ್ವಂಶಯುತಾ ಅನ್ಯದೇವಾ ಇತಿ ಗೌತಮಖಿಲೇಷು ॥ (೪) ಋಷಯೋ ಮನವೋ ದೇವಾ ಮನುಪುತ್ರಾ ಮಹೌಜಸಃ । ಕಲಾಃ ಸರ್ವೇ ಹರೇರೇವ ಸಪ್ರಜಾಪತಯಃ ಸ್ಮೃತಾಃ । ಏತೇ ಸ್ವಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಮಿತಿ ಭಾಗವತೇ ॥ (೫) ಋಷ್ಯಾದಿನಾಪಿ**

ಯುಕತ್ವೇನೋಕ್ತ್ವಾ ವರಾಹಾದೀನ್ ಸ್ವರೂಪತ್ವೇನಾಹ । ತುಶಬ್ದ ಏವಾರ್ಥೇ । ಅನ್ಯಸ್ತು ವಿಶೇಷೋ ನ ಕುತ್ರಾಪ್ಯವಗತಃ । ಅಂಶತ್ವಂ ತತ್ರಾಪ್ಯವಗತಂ । ಉದ್ವಬರ್ಹಾತ್ಮನಃ ಕೇಶಾವಿತಿ ॥ (೬) ಮೃಡಯಂತೀತಿ ಬಹುವಚನಂ ಚಾಯುಕ್ತಂ । ನ ಹ್ಯಂತರಾsನ್ಯದುಕ್ತ್ವಾ ಪೂರ್ವಮುಪರಾಮೃಶ್ಯ ತತ್ಕ್ರಿಯೋಚ್ಯಮಾನಾ ದೃಷ್ಟಾ ಕುತ್ರಚಿತ್ ॥ ೪೧ ॥

ಅ ॥ (೧) ಯದ್ಯದ್ವಿಭೂತಿಮತ್ ಎಂಬುವುದು ಏಷಃ ವಿಭೂತೇಃ ವಿಸ್ತರಃ ಎಂದು ಹೇಳಿದ ವಿಭೂತಿ ರೂಪಗಳ ವಿಸ್ತಾರರೂಪವು. ಅದರಲ್ಲಿ ಆದಿತ್ಯಾನಾಮಹಂ ವಿಷ್ಣುಃ ಇದು ಮೊದಲಾದವುಗಳು ಶ್ರೀಪರಮಾತ್ಮನ ಸ್ವರೂಪಗಳೇ. (ತೇಜೋರೂಪವಾದ ಅಂಶದಿಂದ ಕೂಡಿದವುಗಳಲ್ಲ.) ಜ್ಯೋತಿಷಾಂ ರವಿರಂಶುಮಾನ್ ಇತ್ಯಾದಿಗಳಲ್ಲಿ ಹೇಳಿದ ಸೂರ್ಯ ಮೊದಲಾದವರು ಪರಮಾತ್ಮನ ತೇಜೋರೂಪವಾದ ಅಂಶದಿಂದ ಕೂಡಿದವರು. (೨) ಈ ಪ್ರಮೇಯವನ್ನು ಪೈಂಗಿಖಿಲ ಎಂಬುವ ಗ್ರಂಥದಲ್ಲಿ ಹೇಳಿದೆ. ಗರುಡ, ಶೇಷ, ಬ್ರಹ್ಮ, ರುದ್ರ, ವೈನ್ಯ (ಪೃಥುರಾಜ) ಇಂದ್ರ, ಇತರದೇವತೆಗಳು, ರಾಜರಾದಕ್ಷತ್ರಿಯರೇ ಮೊದಲಾದ ಬೇರೆ ಜೀವರು ಶ್ರೀಪರಮಾತ್ಮನ ಅಂಶದಿಂದ ಕೂಡಿದವರು. ಯಮುಧರ್ಮನ ಪುತ್ರನಾದ ಶ್ರೀಕೃಷ್ಣ, ವೇದವ್ಯಾಸ, ದಶರಥ ಪುತ್ರನಾದ ಶ್ರೀರಾಮ, ಯಾದವ ಕೃಷ್ಣ, ಪರಶುರಾಮ, ಕಪಿಲ, ಯಜ್ಞ ಮೊದಲಾದವರು ಸಾಕ್ಷಾತ್ ಶ್ರೀಪರಮಾತ್ಮನ ಸ್ವರೂಪಭೂತರೇ. (ಅಂಶದಿಂದ ಕೂಡಿದವರಲ್ಲ) (೩) ಪರಶುರಾಮ, ದಶರಥನ ಪುತ್ರನಾದ ಶ್ರೀರಾಮ, ಶ್ರೀಕೃಷ್ಣ ಮೊದಲಾದ ವ್ಯಾಸ ಕಪಿಲಾದಿಗಳೂ ಸಾಕ್ಷಾತ್ ಶ್ರೀನಾರಾಯಣ ಸ್ವರೂಪರೇ. ಬ್ರಹ್ಮ ಮೊದಲಾದ ಬೇರೆ ಎಲ್ಲಾ ಜೀವರಾದರೂ ಶ್ರೀಪರಮಾತ್ಮನ ಅಂಶದಿಂದ ಕೂಡಿದವರು. ಹೀಗೆ ಗೌತಮಖಿಲ ಗ್ರಂಥಗಳಲ್ಲಿ ಹೇಳಿದೆ. (೪) ಋಷಿಗಳು, ಮನುಗಳು, ದೇವತೆಗಳು ಮಹಾಸಾಮರ್ಥ್ಯವುಳ್ಳ ಮನುಪುತ್ರರು ದಕ್ಷಪ್ರಜಾಪತಿಯಿಂದ ಸಹಿತರಾದವರೆಲ್ಲರೂ ಶ್ರೀಪರಮಾತ್ಮನ ಅಂಶಯುಕ್ತರೇ. (ಪರಮಾತ್ಮನ ಸ್ವರೂಪಭೂತರಲ್ಲ.) ಶ್ರೀಪರಮಾತ್ಮನ ಸ್ವರೂಪಾಂಶಭೂತರಾದ ವರಾಹಾದ್ಯವತಾರಗಳು ಸರ್ವೋತ್ತಮನಾದ ನೀಲಮೇಘಶ್ಯಾಮನಾದ ಮೂಲರೂಪಿಯಾದ ಶ್ರೀನಾರಾಯಣನೇ. (ಕೃಷ್ಣೋ ಮುಕ್ತೈರಿಜ್ಯತೇ ವೀತಮೋಹೈಃ ಎಂದು ಮೂಲರೂಪದಲ್ಲಿಯೂ ಕೃಷ್ಣವೆಂಬುವ ಶಬ್ದ ಪ್ರಯೋಗವಿದ್ದುದರಿಂದ ಇಲ್ಲಿದ್ದ ಕೃಷ್ಣ ಶಬ್ದದಿಂದ ಮೂಲರೂಪವನ್ನೇ ಇಟ್ಟುಕೊಳ್ಳಬೇಕು. ಶ್ರೀಪರಮಾತ್ಮನ ಕೃಷ್ಣಕೇಶಾವತಾರನಾದ ಯಾದವಕೃಷ್ಣನನ್ನು ಇಟ್ಟುಕೊಳ್ಳಬಾರದು ) ಎಂದು ಭಾಗವತದಲ್ಲಿದೆ. (೫) ಋಷಿ ಮೊದಲಾದವರನ್ನು ಶ್ರೀಹರಿಯ ಅಂಶಯುಕ್ತರೆಂದು ಹೇಳಿ ವರಾಹಾದಿಗಳನ್ನು ಶ್ರೀಹರಿಯ ಸ್ವರೂಪಗಳೆಂದು ಹೇಳಿರುತ್ತಾರೆ. ಕೃಷ್ಣಸ್ತು ಎಂಬುವಲ್ಲಿದ್ದ ತು ಶಬ್ದಕ್ಕೆ ಏವ ಶಬ್ದದ ಅರ್ಥವು. ಸ್ವಯಂ ತು = ಮೂಲರೂಪಿಯೇ ಎಂದೇ ಅರ್ಥವು. (ಹೀಗೆ ಅರ್ಥವನ್ನು ಮಾಡದಿದ್ದರೆ ಕೃಷ್ಣವ್ಯಾಸೌ ಇತ್ಯಾದಿ ಪ್ರಮಾಣಗಳ ವಿರೋಧವು ಬರುವುದು. ಈ ಅರ್ಥವನ್ನು ಹೊರತು ಬೇರೆ ಅರ್ಥವನ್ನು ಹೇಳುವ ಪ್ರಮಾಣವೂ ಇಲ್ಲವೆನ್ನುತ್ತಾರೆ.) ವರಾಹಾದಿ ಅವತಾರಗಳು ಶ್ರೀಪರಮಾತ್ಮನ ಅಂಶಭೂತರು, ಶ್ರೀಯಾದವ ಕೃಷ್ಣನು ಮಾತ್ರ ಅಂಶಿಯು ಎಂಬೀ ವಿಶೇಷವು ಎಲ್ಲಿ ಯಾವ ಪ್ರಮಾಣದಲ್ಲಿಯೂ ಹೇಳಿಲ್ಲ. ಮತ್ತು ಉದ್ವಬರ್ಹಾತ್ಮನಃ ಕೇಶೌ ಕೃಷ್ಣಕೇಶೋ ಹಿ ಯಾದವಃ ಶ್ರೀಮೂಲರೂಪಿಯ ಕೃಷ್ಣಕೇಶದಿಂದ ಯಾದವಕೃಷ್ಣನು ಆದನೆಂದು ಹೇಳಿದೆ ಇದರಿಂದ ಶ್ರೀಕೃಷ್ಣನಲ್ಲಿಯೂ ಶ್ರೀಪರಮಾತ್ಮನ ಅಂಶತ್ವವೇ ತಿಳಿಯಲ್ಪಟ್ಟಿದೆ. (೬) ಮತ್ತು ಇಂದ್ರಾರಿವ್ಯಾಕುಲಂ ಲೋಕಂ ಮೃಡಯಂತಿ ಯುಗೇಯುಗೇ ಎಂದು ಹೇಳಿದ ಬಹುವಚನವು ವರಾಹಾದಿಗಳನ್ನು ಶ್ರೀಪರಮಾತ್ಮನ ಸ್ವರೂಪಾಂಶರೆಂದು ಇಟ್ಟುಕೊಳ್ಳದೆ ಶ್ರೀ ಯಾದವಕೃಷ್ಣನನ್ನು ಮಾತ್ರ ಇಟ್ಟು

ಕೊಂಡರೆ ಬಹುವಚನವೂ ಕೂಡದೆ ಹೋಗುವುದು (ತ್ವಿಷಯಂತಿ ಎಂಬುವಲ್ಲಿ ವರಾಹಾದಿಗಳನ್ನು ಇಟ್ಟುಕೊಳ್ಳುತ್ತೀವೆಂದರೆ ಕೃಷ್ಣಸ್ತು ಭಗವಾನ್ ಸ್ವಯಂ ಎಂದು ಹೇಳಿದ ಪ್ರಕಾರ ಕೃಷ್ಣನನ್ನು ಇಟ್ಟುಕೊಳ್ಳುವುದಿಲ್ಲವೆಂದು ಹೇಳಕೂಡದು. ಏಕೆಂದರೆ ವರಾಹಾದ್ಯವತಾರಗಳನ್ನು ಸವಿಷಯದಲ್ಲಿ ಹೇಳದಿರುವುದರಿಂದ ಆಸನ್ನಿಹಿತದಿಂದ ಅನ್ವಯವು ಎಲ್ಲಿಯೂ ಕಂಡುಬರುವುದಿಲ್ಲ, ಎಂಬುವ ಅಭಿಪ್ರಾಯದಿಂದ ಹೇಳುತ್ತಾರೆ—) ಮಧ್ಯದಲ್ಲಿ ಇನ್ನೊಂದು ವಿಷಯವನ್ನು ಹೇಳಿ ಮೊದಲು ಹೇಳಿದ್ದನ್ನು ಇಟ್ಟುಕೊಳ್ಳದೆ ಅವರ ಕ್ರಿಯೆಯನ್ನು ಉತ್ತರತ್ರ ಹೇಳುತ್ತದೆ, ಎಂಬುವುದು ಎಲ್ಲಿಯೂ ಕಂಡು ಬರಲಿಲ್ಲ. (ಆದುದರಿಂದ ವರಾಹಾದಿ ಸ್ವರೂಪಾಂಶರು, ಸರ್ವೋತ್ತಮನಾದ ನೀಲಮೇಘ ಶ್ಯಾಮನಾದ ಮೂಲರೂಪಿಯಾದ ಶ್ರೀನಾರಾಯಣನೇ ಎಂಬುವ ಅರ್ಥವನ್ನು ಇಟ್ಟುಕೊಳ್ಳಬೇಕು. ॥ ೪೧

ತಾ ॥ ಮಮ ತೇಜೋಂಶೇನ ಸಂಯುಕ್ತಂ ಭವತಿ ॥ ೪೧ ॥

ಅ ॥ ನನ್ನ ಪ್ರಕಾಶರೂಪವಾದ ಅಂಶದಿಂದ ಯುಕ್ತವಾಗುತ್ತದೆ, ಎಂದು ತೇಜೋಂಶಸಂಭವ ಎಂಬುವುದು ಅರ್ಥವು. ತೇಜಸ್ಸಿನ ಅಂಶದಿಂದ ಹುಟ್ಟಿದೆಂದು ಅರ್ಥವಲ್ಲ. ॥ ೪೧ ॥

ಪೀ — ಆಯಾಯ ವಸ್ತುಗಳಲ್ಲಿದ್ದ ವಿಭೂತಿರೂಪಗಳ ವಿಸ್ತಾರದಿಂದಲೂ ಹೆಚ್ಚು ವಿಭೂತಿ ವಿಸ್ತಾರವನ್ನು ಹೇಳುತ್ತಾರೆ—

ಗೀ ॥ ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।
ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥ ೪೨ ॥

ಅ ॥ ಅಥವಾ — ಅಥವಾ, ಅರ್ಜುನ — ಅರ್ಜುನನೇ, ಏತೇನ ಬಹುನಾ = ಮೊದಲು ಹೇಳಿದ ವಿಭೂತ್ಯಾದಿಗಳಿಂದ ಯುಕ್ತರಾದ ಸೂರ್ಯಾದಿಗಳಿಗೆ ನಿಯಾಮಕಗಳಾದ ಸೂರ್ಯಾದಿಗಳಲ್ಲಿರತಕ್ಕ ಪರಿಚ್ಛಿನ್ನಗಳಾದ ವಿಭೂತಿರೂಪಗಳ ವಿಸ್ತಾರದಿಂದ, ಜ್ಞಾತೇನ = ತಿಳಿಯೋಣದರಿಂದ, ತವ = ನಿನಗೆ, ಕಿಂ = ವಿಶೇಷ ಪ್ರಯೋಜನವು? ಅಂದರೆ ಇನ್ನು ಮುಂದೆ ಹೇಳುವ ವ್ಯಾಪ್ತಭಗವದ್ರೂಪಗಳ ಜ್ಞಾನದಿಂದುಂಟಾಗುವ ಫಲಕ್ಕಿಂತಲೂ ಹಿಂದೆ ಹೇಳಿದ ಸೂರ್ಯಾದಿಗಳಲ್ಲಿ ನಿಯಾಮಕವಾಗಿರುವ ಶ್ರೀಪರಮಾತ್ಮನ ವಿಭೂತಿರೂಪಗಳ ಜ್ಞಾನದಿಂದುಂಟಾಗುವ ಫಲವು ಕಡಿಮೆ ಎಂದೇ ತಾತ್ಪರ್ಯವು ಹೊರತು ಫಲವಿಲ್ಲವೆಂದರ್ಥವಲ್ಲ (ಹಾಗಾದರೆ ಯಾವುದನ್ನು ತಿಳಿಯಬೇಕೆಂದರೆ—) ಅಹಂ = ನಾನು, ಇದಂ = ಪ್ರತ್ಯಕ್ಷಾದಿ ಪ್ರಮಾಣಗಳಿಂದ ಸಿದ್ಧವಾಗಿರುವ, ಕೃತ್ಸ್ನಂ ಜಗತ್ = ಎಲ್ಲಾ ಜಗತ್ತನ್ನು, ಏಕಾಂಶೇನ = ಅನಂತಾನಂತ ಅಂಶಗಳ ಮಧ್ಯದಲ್ಲಿ ಒಂದು ಅಂಶದಿಂದಲೇ, ವಿಷ್ಟಭ್ಯ = ವ್ಯಾಪಿಸಿಕೊಂಡು, ಸ್ಥಿತಃ = ಇರುತ್ತೇನೆ

ವಿ ॥ (1) (ಸರ್ವಾಂಶದಿಂದ ವ್ಯಾಪಿಸಲಿಕ್ಕೆ ಸಾವಿರಾರು ಜಗತ್ತೂ ಸಾಕಾಗದು. ಆದರಿಂದ ಅಂತಹ ಅಪರ್ಯವಸಿತ ವ್ಯಾಪ್ತಿಯುಳ್ಳವನು ನಾನು. ಸರ್ವತ್ರವ್ಯಾಪ್ತನೆಂದು ನನ್ನ ಜ್ಞಾನವು ಅವಶ್ಯಕ (2) ಹಾಗಾದರೆ ಇಂತಹ ಜ್ಞಾನದಿಂದಲೇ ಮೋಕ್ಷವು ಸಿದ್ಧವಾಗುವಾಗ ಹಿಂದೆ ಹೇಳಿದ ಪರಿಚ್ಛಿನ್ನ ವಿಭೂತಿರೂಪಗಳ ಜ್ಞಾನವು ವ್ಯರ್ಥವೆಂದರೆ— ಅಜ್ಞಾತ್ವೈವಂ ಇತ್ಯಾದಿ ಪ್ರಮಾಣಗಳಿಂದ ಅವುಗಳ ಜ್ಞಾನವು ಸಾಧಾರಣ ಜನರಿಗೆ ಅವಶ್ಯಕವೇ (3) ನೀನು ಮಹಾಫಲದಲ್ಲಿ ಅಧಿಕಾರವುಳ್ಳವನಾದುದರಿಂದ ನಿನಗೆ ಎರಡು ವಿಧ ವಿಭೂತಿರೂಪಗಳ ಜ್ಞಾನವೂ ಅವಶ್ಯಕವೇ ವಿಶೇಷಜ್ಞಾನಮಾತ್ರವು ಸಾಕಾಗದು ಈ ಅಭಿಪ್ರಾಯದಿಂದಲೇ ತವ ಏತೇನ ಜ್ಞಾತೇನ ಕಿಂ ಎಂದು ಹೇಳಿದ್ದು. ೪೨

೧೬ ॥ ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ವಿಭೂತಿಯೋಗೋ ನಾಮ ದಶಮೋಽಧ್ಯಾಯಃ ॥ ೧೦ ॥

ಅ ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ವಿಭೂತಿಯೋಗವೆಂಬ ಹತ್ತನೇ ಅಧ್ಯಾಯವು ಮುಗಿಯಿತು. ॥ ೧೦ ॥

ಭಾ ॥ (೧) ಕಿಮಿತಿ ವಕ್ಷ್ಯಮಾಣಪ್ರಾಧಾನ್ಯಜ್ಞಾಪನಾರ್ಥಂ । ನ ತೂಕ್ತನಿಷ್ಫಲತ್ವಜ್ಞಾಪನಾಯ । ತಥಾಸತಿ ನೋಚ್ಯೇತ ॥ (೨) ಅಜ್ಞಾತ್ವೈನಂ ಸರ್ವವಿಶೇಷಯುಕ್ತಂ ದೇವಂ ಪರಂ ಕೋ ವಿಮುಚ್ಯೇತ ಬಂಧಾದಿತಿ ಚ ಋಗ್ವೇದಖಿಲೇಷು ॥ (೩) ತ್ವಂ ತು ಬಹುಫಲಪ್ರಾಪ್ತಿಯೋಗ್ಯ ಇತಿ ತವೇತಿ ವಿಶೇಷಣಂ ॥ (೪) ಅನ್ಯಸ್ತುತ್ಯರ್ಥತ್ವೇನ ಪ್ರಸಿದ್ಧಶ್ಚೈಕತ್ರ ಕಿಂಶಬ್ದಃ । ರಾಗದ್ವೇಷೌ ಯದಿ ಸ್ಯಾತಾಂ ತಪಸಾ ಕಿಂ ಪ್ರಯೋಜನಂ । ತಾವುಭೌ ಯದಿ ನ ಸ್ಯಾತಾಂ ತಪಸಾ ಕಿಂ ಪ್ರಯೋಜನಮಿತ್ಯಾದೌ । ಪ್ರಾಧಾನ್ಯಂ ಚ ಪ್ರಸಿದ್ಧಮೇಕತ್ರ ದರ್ಶನಾತ್ಸರ್ವತ್ರ ಭಗವದ್ದರ್ಶನಸ್ಯ ಯೋ ಮಾಂ ಪಶ್ಯತಿ ಸರ್ವತ್ರೇತ್ಯಾದೌ ॥ ೪೨ ॥

ಅ ॥ (೧) ಬಹುನೈತೇನ ಕಿಂ ಜ್ಞಾತೇನ ಎಂಬುವಲ್ಲಿದ್ದ ಕಿಂ ಎಂಬುವ ಆಕ್ಷೇಪವು ಮುಂದೆ ಹೇಳುವ ಸರ್ವತ್ರವ್ಯಾಪ್ತಗಳಾದ ಭಗವದ್ರೂಪಗಳ ಜ್ಞಾನವು ಹಿಂದೆ ಹೇಳಿದ ಸೂರ್ಯನೇ ಮೊದಲಾದ ಪರಿಚ್ಛಿನ್ನಗಳಾದ ವಸ್ತುಗಳಲ್ಲಿರುವ ಶ್ರೀಪರಮಾತ್ಮನ ವಿಭೂತಿರೂಪಗಳ ಜ್ಞಾನಕ್ಕಿಂತ ಪ್ರಧಾನವು, ಎಂದು ತಿಳಿಸುವುದಕ್ಕಾಗಿಯೇ. ಹಿಂದೆ ಹೇಳಿದ ವಿಶೇಷಜ್ಞಾನವು ನಿಷ್ಫಲವೆಂದು ತಿಳಿಸುವುದಕ್ಕಾಗಿ ಅಲ್ಲ. ನಿಷ್ಫಲವಾಗಿದ್ದರೆ ಅದನ್ನು ಹೇಳದೇನೇ ಇರುತ್ತಿದ್ದರು. (೨) (ವ್ಯಾಪ್ತಜ್ಞಾನದಿಂದಲೇ ಮೋಕ್ಷವು ಸಿಗುವುದರಿಂದ ವಿಶೇಷಜ್ಞಾನವು ವ್ಯರ್ಥವೆಂದು ಏಕೆ ಆಗಲಾರದು, ಎಂದರೆ—) ವಿಭೂತಿರೂಪಗಳಾದ ಸಮಸ್ತ ವಿಶೇಷಗಳಿಂದ ಕೂಡಿದ ಕ್ರೀಡಾದಿಗುಣವಿಶಿಷ್ಟನಾದ ಸರ್ವೋತ್ತಮನಾದ ಶ್ರೀಪರಮಾತ್ಮನನ್ನು ತಿಳಿಯದೆ ಸಂಸಾರಬಂಧದಿಂದ ಯಾವನು ಮುಕ್ತನಾಗುವನು? ಎಂದು ಋಗ್ವೇದಖಿಲದಲ್ಲಿ ಹೇಳಿದೆ (೩) ನೀನು (ಮಹಾ ಫಲದಲ್ಲಿ ಅಧಿಕಾರಿಯಾದುದರಿಂದ) ಬಹುಫಲವನ್ನು ಹೊಂದಲಿಕ್ಕೆ ಯೋಗ್ಯನು. (ಆದಕಾರಣ ನಿನಗೆ ವಿಶೇಷ ಜ್ಞಾನವು ಮಾತ್ರ ಸಾಕಾಗದು, ಎಂದು ತಿಳಿಸುವದಕ್ಕಾಗಿ) ತವ ಎಂದು ವಿಶೇಷಣವು. (೪) ಇನ್ನೊಂದನ್ನು ಸ್ತೋತ್ರಮಾಡುವುದಕ್ಕಾಗಿಯೇ ಕೆಲವು ಕಡೆ ಕಿಂ ಶಬ್ದ ಪ್ರಯೋಗವು ಪ್ರಸಿದ್ಧವಾಗಿದೆ. (ನಿಷ್ಫಲತ್ವವನ್ನು ತಿಳಿಸಿಕೊಡುವುದಿಲ್ಲ.) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ -) ರಾಗದ್ವೇಷಗಳು ಇದ್ದರೆ ತಪಸ್ಸಿನಿಂದ ಪ್ರಯೋಜನವೇನು? ಅವುಗಳು ಇಲ್ಲದಾದರೂ ತಪಸ್ಸಿನಿಂದ ಪ್ರಯೋಜನವೇನು (ಅಂದರೆ ರಾಗ ದ್ವೇಷಗಳ ಪರಿಹಾರಸ್ತುತಿಗಾಗಿಯೇ ಹೀಗೆ ಹೇಳಿದ್ದು. ತಪಸ್ಸಿಗೆ ನಿಷ್ಫಲತ್ವವನ್ನು ಹೇಳಲಿಕ್ಕೆ ಹೋದದ್ದಲ್ಲ.) ಇತ್ಯಾದಿಗಳಲ್ಲಿ ಪ್ರಸಿದ್ಧವಾಗಿದೆ. (೫) (ಪರಿಚ್ಛಿನ್ನಜ್ಞಾನಕ್ಕಿಂತ ವ್ಯಾಪ್ತಜ್ಞಾನಕ್ಕೆ ಪ್ರಾಧಾನ್ಯವು ಎಲ್ಲಿ ಕಂಡಿದೆ ಎಂದರೆ—) ಯೋ ಮಾಂ ಪಶ್ಯತಿ ಸರ್ವತ್ರ ಇತ್ಯಾದಿಗಳಲ್ಲಿ ಯೋ ಮಾಂ ಎಂಬುವಲ್ಲಿ ವಿಶಿಷ್ಟ ಫಲವನ್ನು ಹೇಳಿದುದರಿಂದ ವಿಶೇಷ ವಿಭೂತಿರೂಪವನ್ನು ತಿಳಿಯುವುದಕ್ಕಿಂತ ಸರ್ವತ್ರವ್ಯಾಪ್ತ ಭಗವದ್ರೂಪವನ್ನು ತಿಳಿಯುವುದು ಪ್ರಧಾನವೆಂದು

ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾ ಭಾಷ್ಯೇ ದಶಮೋಽಧ್ಯಾಯಃ ॥ ೧೦ ॥

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಶ್ರೀಭಗವದ್ಗೀತಾ ಭಾಷ್ಯದಲ್ಲಿ ಹತ್ತನೇ ಅಧ್ಯಾಯವು ಮುಗಿಯಿತು. ॥ ೧೦ ॥

ಹೀ—ಅಲ್ಲಿ ಹೇಳಿದ ಬಹಳವಾಗಿ ತಿಳಿದುಕೊಳ್ಳುವುದರಿಂದ ಯಾವುದೂ ಫಲವಿಲ್ಲ, ಎಂಬುವ ಅನ್ಯಥಾ ಪ್ರತೀತಿಯನ್ನು ನಿರಾಕರಿಸುತ್ತಾರೆ –

ತಾ ॥ (೧) ಕಿಂ ಜ್ಞಾತೇನೇತಿ ವಕ್ಷ್ಯಮಾಣಸ್ಯಾಧಿಕಫಲತ್ವಜ್ಞಾಪಕಮೇವ । ಅನ್ಯಥೋಕ್ತೇರೇವ ವೈಯರ್ಥ್ಯಾತ್ ॥ (೨) ಅನ್ಯಾಧಿಕ್ಯಜ್ಞಾಪನಾರ್ಥಂ ಶುಭಂ ಚಾಪ್ಯುಕ್ತೇ ಕ್ವಚಿತ್ । ನ ತಾವತಾಽಸ್ಯ ನಿಂದ್ಯತ್ವಂ ಜ್ಞೇಯ್ಯೈವಾನ್ಯವರಿಷ್ಠತಾ । ಉಭಯಮಿಲಿತಂ ಚೈವ ತತೋಽಪ್ಯಧಿಕಶೋಭನಮಿತಿ ಚ ॥ ೪೨ ॥

ಅ ॥ (೧) ಕಿಂ ಜ್ಞಾತೇನ ಎಂಬುವ ವಚನವು ಹಿಂದೆ ಹೇಳಿದ ಜ್ಞಾನಕ್ಕಿಂತಲೂ ಮುಂದೆ ಹೇಳುವ ವ್ಯಾಪ್ತ ಭಗವದ್ರೂಪಗಳ ಜ್ಞಾನಕ್ಕೆ ಅಧಿಕ ಫಲವಿದೆ, ಎಂದು ತಿಳಿಸುವುದಕ್ಕಾಗಿಯೇ. ಅಲ್ಲದೆ ಹಿಂದಿನ ಜ್ಞಾನವು ನಿಷ್ಫಲವೆಂದು ಹೇಳತಕ್ಕದಲ್ಲ. ಹಾಗಿದ್ದರೆ ಅದನ್ನು ಹೇಳಿದ್ದೇ ವ್ಯರ್ಥವಾಗುವುದು. (೨) (ಒಂದು ವಿಷಯದಲ್ಲಿ ಸ್ತುತಿಯನ್ನು ಹೇಳುತ್ತಾರೆ–) ಇತರವಾದುದಕ್ಕೆ ಆಧಿಕ್ಯವಿದೆ, ಎಂದು ತಿಳಿಸುವುದಕ್ಕಾಗಿ ಕ್ವಚಿತ್ ಶುಭವೂ ಕೂಡ ಅಕ್ತಿಪ್ರವಾಗುತ್ತದೆ. ಅಷ್ಟರಿಂದ ಹಿಂದೆ ಹೇಳಿದ್ದಕ್ಕೆ ನಿಂದ್ಯತ್ವವೂ ಹೇಯತ್ವವೂ ತಿಳಿಯಕೂಡದು. ಇನ್ನೊಂದು ಶ್ರೇಷ್ಠವೆಂದೇ ತಿಳಿಯಬೇಕು. ಶ್ರೇಷ್ಠವಾದುದು ಲಭಿಸಿದೊಡನೆ ಅಲ್ಪವಾದುದನ್ನು ಬಿಡಕೂಡದು. ಎರಡೂ ಸೇರಿದರೇನೇ ಅತ್ಯಧಿಕ ಮಂಗಲವಾಗುತ್ತದೆ. (ಅತ್ಯಧಿಕ ಫಲವು ಲಭಿಸುತ್ತದೆ.) ॥ ೪೨ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾ ತಾತ್ಪರ್ಯನಿರ್ಣಯೇ ದಶಮೋಽಧ್ಯಾಯಃ ॥ ೧೦ ॥

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾ ತಾತ್ಪರ್ಯನಿರ್ಣಯದಲ್ಲಿ ಹತ್ತನೇ ಅಧ್ಯಾಯವು ಮುಗಿಯಿತು. ॥ ೧೦ ॥

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಃ ॥

# ಹನ್ನೊಂದನೇ ಅಧ್ಯಾಯವು.

ಪೀ—ಹಿಂದಿನ ಅಧ್ಯಾಯದ ಅಂತ್ಯದಲ್ಲಿ ವಿಷ್ಟಭ್ಯಾಹಮಿದಂ ಕೃತ್ಸ್ನಂ ಎಂದು ಸಂಕ್ಷೇಪದಿಂದ ಹೇಳಿದ ವ್ಯಾಪ್ತರೂಪೋಪಾಸನವು ಬುದ್ಧಿಯಲ್ಲಿ ನಿಲ್ಲಲು ಅಶಕ್ಯವಾಗಿರುವುದರಿಂದ ಆ ಧ್ಯಾನಸೌಕರ್ಯಕ್ಕಾಗಿ ಮೊದಲು ಸಂಕ್ಷೇಪದಿಂದ ಹೇಳಿದುದನ್ನು ಈ ಅಧ್ಯಾಯದಲ್ಲಿ ವಿಸ್ತಾರವಾಗಿ ಹೇಳುತ್ತಾರೆ—

ಗೀ ॥ ॥ ಅರ್ಜುನ ಉವಾಚ ॥

ಓಂ ॥ ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಂ ।
ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ ॥೧॥

ಅ ॥ ಅರ್ಜುನಃ=(ಶ್ರೀಹರಿಯ ವಿಶ್ವರೂಪವನ್ನು ತಿಳಿಯುವುದಕ್ಕಾಗಿ ಅದನ್ನು ಪ್ರಶ್ನೆಮಾಡಲಿಕ್ಕೆ ಇಚ್ಛಿಸಿದ) ಅರ್ಜುನನು, ಉವಾಚ=(ಹಿಂದೆ ಹೇಳಿದುದನ್ನು) ಅನುವಾದಮಾಡುತ್ತಾನೆ. ಪರಮಂ ಗುಹ್ಯಂ=ಅತಿಗೋಪ್ಯವಾದ, ಅಧ್ಯಾತ್ಮಸಂಜ್ಞಿತಂ=ಪರಮಾತ್ಮನ ಸ್ವರೂಪವನ್ನು ಬೋಧಿಸುವುದರಿಂದ ಅಧ್ಯಾತ್ಮ ಎಂದು ಹೆಸರುಳ್ಳ. ಯದ್ವಚಃ=ಯಾವ ಮಾತು ತ್ವಯಾ=ನಿನ್ನಿಂದ, ಮದನುಗ್ರಹಾಯ=ನನಗೆ ಅನುಗ್ರಹ ಮಾಡುವುದಕ್ಕಾಗಿ, ಉಕ್ತಂ=ಹೇಳಲ್ಪಟ್ಟದೋ, ತೇನ=ಆ ಮಾತಿನಿಂದ, ಮಮ=ನನ್ನ, ಅಯಂ ಮೋಹಃ=ಬಂಧುಸ್ನೇಹಾದಿರೂಪವಾದ ಈ ಮೋಹವು ವಿಗತಃ=ನಷ್ಟವಾಯಿತು. ॥೧॥

ಗೀ ॥ ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।
ತ್ವತ್ತಃ ಕಮಲಪತ್ರಾಕ್ಷ ಮಾಹಾತ್ಮ್ಯಮಪಿ ಚಾವ್ಯಯಂ ॥ ೨ ॥

ಅ ॥ ಕಮಲಪತ್ರಾಕ್ಷ=ಕಮಲದಳಗಳಂತೆ ವಿಶಾಲಗಳಾದ ಕಣ್ಣುಗಳುಳ್ಳ ಶ್ರೀಕೃಷ್ಣನೇ, ತ್ವತ್ತಃ=ನಿನ್ನಿಂದ ಆಗುವ, ಭೂತಾನಾಂ=ಸಮಸ್ತಪ್ರಾಣಿಗಳಿಗೆ, ಭವಾಪ್ಯಯೌ=ಉತ್ಪತ್ತಿನಾಶಗಳು, ವಿಸ್ತರಶಃ=(ಅಹಂ ಕೃತ್ಸ್ನಸ್ಯ ಜಗತಃ ಇತ್ಯಾದಿ ೭ನೇ ಅಧ್ಯಾಯಾದಿಗಳಲ್ಲಿ ಹೇಳಿದ ಪ್ರಕಾರ) ವಿಸ್ತಾರವಾಗಿ, ಶ್ರುತೌ=ಕೇಳಲ್ಪಟ್ಟವು. ಚ=ಮತ್ತು, ಅವ್ಯಯಂ=ಅವಿನಾಶಿಯಾದ, (ಅಂದರೆ ಶಾಶ್ವತವಾದ), ಮಾಹಾತ್ಮ್ಯಮಪಿ=ಮಹಿಮೆಯೂ ಕೂಡ, (ಶ್ರುತಂ)ಚ=ಕೇಳಲ್ಪಟ್ಟಿತು. ಹಿ=ಪ್ರಸಿದ್ಧವು. ॥ ೨ ॥

ಪೀ—ಶ್ರೀಕೃಷ್ಣನ ಮಾತನ್ನು ಸ್ತುತಿಸುತ್ತಾ ತಿಳಿಯಲು ಇಚ್ಛಿಸುವ ವಿಶ್ವರೂಪವನ್ನು ತೋರಿಸಬೇಕೆಂದು ಪ್ರಾರ್ಥಿಸುತ್ತಾನೆ—

ಗೀ ॥ ಏವಮೇತದ್ಯಥಾಽಽತ್ಥ ತ್ವಮಾತ್ಮಾನಂ ಪರಮೇಶ್ವರ ।
ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ ಪುರುಷೋತ್ತಮ ॥ ೩ ॥

ಅ ॥ ಪರಮೇಶ್ವರ=ಸರ್ವೋತ್ತಮನಾದ ಶ್ರೀಕೃಷ್ಣನೇ, ತ್ವಂ=ನೀನು, ಆತ್ಮಾನಂ=ಶ್ರೀಪರಮಾತ್ಮನಾದ ನಿನ್ನನ್ನು, ಯಥಾ=ಯಾವಪ್ರಕಾರದಿಂದ, ಆತ್ಥ=ಹೇಳುತ್ತೀಯೋ, ಏತತ್ ಈ ಮಾತು ಏವಂ—

ಹೀಗೆಯೇ, (ಸತ್ಯವೇ) ಪುರುಷೋತ್ತಮ=ಕ್ಷರಾಕ್ಷರ ಪುರುಷರಿಂದುತ್ತಮನಾದ ಶ್ರೀಕೃಷ್ಣನೇ, ತೇ=ನಿನ್ನ, ಐಶ್ವರಂ=ಈಶ್ವರ ಸಂಬಂಧಿಯಾದ, (ಅಂದರೆ ಆಲೋಚಿಸಲಿಕ್ಕೂ ಅಶಕ್ಯವಾದ ಸಾಮರ್ಥ್ಯವುಳ್ಳ) ರೂಪ= ವಿಶ್ವರೂಪವನ್ನು, ದ್ರಷ್ಟುಂ=ನೋಡುವುದಕ್ಕಾಗಿ, ಇಚ್ಛಾಮಿ= ಇಚ್ಛಿಸುತ್ತೇನೆ. ॥ ೩ ॥

ಟೀ—ಈ ಅಧ್ಯಾಯದಲ್ಲಿ ಹೇಳತಕ್ಕ ಅರ್ಥವನ್ನು ಹೇಳುತ್ತಾರೆ—

ಭಾ ॥ ಓಂ ॥ ಯಥಾಶ್ರುತೇ ಧ್ಯಾನಂ ಶಕ್ಯಂ ತಥಾ ಸ್ವರೂಪಸ್ಥಿತಿರನೇನಾಧ್ಯಾಯೇನೋ- ಚ್ಯತೇ ॥ ೧,೨,೩ ॥

ಅ ॥ ೧೦ನೇ ಅಧ್ಯಾಯದ ಅಂತ್ಯದಲ್ಲಿ ವಿಷ್ಟಭ್ಯಾಹಮಿದಂ ಕೃತ್ಸ್ನಂ ಎಂದು ವ್ಯಾಪ್ತವಾದ ಭಗವದ್ರೂಪೋಪಾಸನೆಯನ್ನು ಸಂಕ್ಷೇಪದಿಂದ ಹೇಳಿರುವರು. ಸಂಕ್ಷೇಪದಿಂದ ಹೇಳಿದ್ದು ಬುದ್ಧಿಯಲ್ಲಿ ಸ್ಥಿರವಾಗಿ ನಿಲ್ಲದಿರುವುದರಿಂದ ಧ್ಯಾನಮಾಡಲಿಕ್ಕೆ ಸಾಧ್ಯವಾಗುವುದಿಲ್ಲ. ಆದಕಾರಣ ಸರ್ವತ್ರವ್ಯಾಪ್ತವಾದ ರೂಪವನ್ನು ಹೇಗೆ ವಿಸ್ತಾರವಾಗಿ ಕೇಳಿದರೆ ಧ್ಯಾನಮಾಡಲಿಕ್ಕೆ ಸುಲಭದಿಂದ ಸಾಧ್ಯವಾಗುತ್ತದೋ ಹಾಗೆಯೇ (ಅರ್ಜುನನಿಗೆ ತೋರಿಸಿದ ವ್ಯಾಪ್ತರೂಪವನ್ನು ಅನುವಾದ ಮಾಡಿಕೊಂಡು) ಅ ರೀತಿಯಾಗಿ ವ್ಯಾಪ್ತವಾಗಿರುವ ಪರಮಾತ್ಮನ ವಿಶ್ವರೂಪವನ್ನು ಈ ೧೧ನೇ ಅಧ್ಯಾಯದಿಂದ ಹೇಳುತ್ತಾರೆ ॥ ೧—೩ ॥

ಗೀ ॥ ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।
ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಂ ॥ ೪ ॥

ಅ ॥ ಪ್ರಭೋ=ಸರ್ವಸಮರ್ಥನಾದ ಶ್ರೀಕೃಷ್ಣನೇ, ತದ್ರೂಪಂ—ನಿನ್ನ ವಿಶ್ವರೂಪವು, ಮಯಾ= ನನ್ನಿಂದ, ದ್ರಷ್ಟುಂ=ನೋಡಲಿಕ್ಕೆ, ಶಕ್ಯಮಿತಿ—ಸಾಧ್ಯವಾದುದೆಂದು, ಯದಿ ಮನ್ಯಸೇ=ನೀನು ತಿಳಿದರೆ ತತ್=ಆ ಪಕ್ಷದಲ್ಲಿ, ಯೋಗೇಶ್ವರ—ಎಲ್ಲಾ ಉಪಾಯಗಳಿಗೂ ಅಧಿಪತಿಯಾದ ಶ್ರೀಕೃಷ್ಣನೇ, ತ್ವಂ= ನೀನು, ಅವ್ಯಯಂ—ನಾಶವಿಲ್ಲದೆ ಶಾಶ್ವತವಾಗಿರುವ, ಆತ್ಮಾನಂ—ನಿನ್ನ ವಿಶ್ವರೂಪವನ್ನು, ಮೇ=ನನಗೆ ದರ್ಶಯ=ತೋರಿಸು. (ಎಂದು ಅರ್ಜುನನು ಪ್ರಾರ್ಥಿಸಿದನು. ಶ್ರೀಕೃಷ್ಣನು ಅತಿಶಯವಾಗಿ ಸಮರ್ಥನಾದುದರಿಂದ ಆತನ ಶಕ್ತಿಯಿಂದಲೇ ಅತೀಂದ್ರಿಯವಾದ ವಿಶ್ವರೂಪ ದರ್ಶನವೂ ಅರ್ಜುನನಿಗೆ ದೊರಕಬಹುದೆಂದು ತಿಳಿಸುವುದಕ್ಕಾಗಿ ಪ್ರಭೋ ಎಂದು ಹೇಳಿದ್ದು) ॥ ೪ ॥

ಗೀ ॥ ॥ ಶ್ರೀಭಗವಾನುವಾಚ ॥

ಗೀ ॥ ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।
ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫ ॥

ಅ ॥ ಶ್ರೀಭಗವಾನ್=(ವಿಶ್ವರೂಪವನ್ನು ನೋಡಲಿಕ್ಕೆ ಅತಿ ಲವಲವಿಕೆ ಹೊಂದಿಕೊಂಡಿರುವ ಅರ್ಜುನನಿಂದ ಪ್ರಾರ್ಥಿಸಿಕೊಳ್ಳಲ್ಪಟ್ಟ) ಶ್ರೀಕೃಷ್ಣನು, ಉವಾಚ=(ಅರ್ಜುನನಿಗೆ ವಿಶ್ವರೂಪವನ್ನು ತೋರಿಸಲಿಕ್ಕೆ ಸುತ್ತಾ ಅರ್ಜುನನೇ ನೀನು ವಿಶ್ವರೂಪವನ್ನು ನೋಡೆಂದು) ಹೇಳಿದನು. ಪಾರ್ಥ=ಎಲೈ ಅರ್ಜುನನೇ (ನೀನು) ಮೇ—ನನ್ನ, ನಾನಾವಿಧಾನಿ—ಅನೇಕ ಪ್ರಕಾರಗಳಾದ, ಅಂದರೆ ನಾನಾವರ್ಣಾಕೃತೀನಿ ಎಂಬುದರಿಂದ ಪ್ರತ್ಯೇಕವಾದ ವರ್ಣಗಳೂ ಅನೇಕ ಆಕಾರವಿಶೇಷಗಳೂ ಇರುವ, ದಿವ್ಯಾನಿ ಚ—ಪ್ರಾಕೃತ ಸಂಬಂಧವಿಲ್ಲದಿರುವ, (ಅಲೌಕಿಕ ಇರುವ) ಶತಶಃ—ನೂರಾರು ಸಂಖ್ಯಾತಗಳಾದ, ಅಥ—ಮತ್ತು ಸ

ಶ್ಶಃ = ಸಾವಿರಾರು ಸಂಖ್ಯಾಕಗಳಾದ, ರೂಪಾಣಿ=ರೂಪಗಳನ್ನು (ಅಂದರೆ ಅಪರಿಮಿತ ರೂಪಗಳನ್ನು) ಪಶ್ಯ = ನೋಡು. (ಅಂದರೆ ಶ್ರೀಹರಿಯ ಒಂದೇ ರೂಪವು ಶ್ರೀಹರಿಯ ಅಚಿಂತ್ಯ ಶಕ್ತಿಯಿಂದಲೂ ವಿಶೇಷ ಬಲದಿಂದಲೂ ಅನಂತರೂಪವೂ ಆಗುತ್ತದೆ.) ॥ ೫ ॥

ಗೀ॥ ಪಶ್ಯಾದಿತ್ಯಾನ್ವಸೂನ್ರುದ್ರಾನಶ್ವಿನೌ ಮರುತಸ್ತಥಾ ।
ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಽಽಶ್ಚರ್ಯಾಣಿ ಭಾರತ ॥ ೬ ॥

ಅ॥ ಭಾರತ=ಭರತಕುಲೋತ್ಪನ್ನನಾದ ಅರ್ಜುನನೇ. ಆದಿತ್ಯಾನ್=೧೨ ಸೂರ್ಯರನ್ನು, ವಸೂನ್=೮ ವಸುಗಳನ್ನು, ರುದ್ರಾನ್ = ೧೧ ರುದ್ರರನ್ನು, ಅಶ್ವಿನೌ=೨ ಅಶ್ವಿನೀ ದೇವತೆಗಳನ್ನು, ಮರುತಃ=ಮುಖ್ಯಪ್ರಾಣನಿಂದ ಕೂಡಿ ೫೦ ವಾಯುಗಳನ್ನು, ಪಶ್ಯ=ನೋಡು ತಥಾ=ಹಾಗೆಯೇ, ಅದೃಷ್ಟಪೂರ್ವಾಣಿ=ಇಷ್ಟರವರೆಗೂ ಸರ್ವಥಾ ಕಾಣಲ್ಪಡದಿರುವ. ಬಹೂನಿ = ಅನೇಕ ವಿಧಗಳಾದ, ಆಶ್ಚರ್ಯಾಣಿ = ಅತ್ಯದ್ಭುತಗಳಾದ ವಸ್ತುಗಳನ್ನು, ಪಶ್ಯ = ನೋಡು. ॥ ೬ ॥

ಗೀ॥ ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಂ ।
ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥ ೭ ॥

ಅ॥ ಗುಡಾಕೇಶ = ನಿದ್ರೆಯನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವ ಅರ್ಜುನನೇ, ಕೃತ್ಸ್ನಂ= ಸಮಸ್ತವಾದ, ಅಂದರೆ ಸಚರಾಚರಂ = ಚೇತನಾಚೇತನ ನಿಖಿಲ ವಸ್ತುಗಳಿಂದ ಕೂಡಿರುವ ಜಗತ್ = ಜಗತ್ತನ್ನು, ಇಹ = ನಿನಗೆ ತೋರಿಸಲಿಕ್ಕೆ ಯೋಗ್ಯವಾದ. ಮಮ = ನನ್ನ, ದೇಹೇ = ಶರೀರದಲ್ಲಿ ಏಕಸ್ಥಂ = ನನ್ನ ಏಕದೇಶದಲ್ಲಿರುವುದನ್ನಾಗಿ, ಅದ್ಯ = ಈಗ, ಪಶ್ಯ = ನೋಡು. ಯಚ್ಚ = ಯಾವುದು ಅನ್ಯತ್= ಇದಕ್ಕಿಂತ ಬೇರೆಯಾದುದನ್ನು, ದ್ರಷ್ಟುಂ = ನೋಡಲಿಕ್ಕೆ, ಇಚ್ಛಸಿ = ಇಚ್ಛಿಸುತ್ತಿಯೋ, (ಅವೆಲ್ಲವನ್ನು ನನ್ನ ದೇಹದಲ್ಲಿ ನೋಡು.) ॥ ೭ ॥

ಗೀ॥ ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ ॥ ೮ ॥

ಅ॥ (ಎಲೋ ಅರ್ಜುನನೇ ನೀನು ನನ್ನ ವಿಶ್ವರೂಪವನ್ನು ನೋಡಲಿಚ್ಛಿಸುತಿ. ನಾನೂ ತೋರಿಸೆಂದು ಹೇಳುತ್ತೇನೆ) ತು = ಆದರೂ ಅನೇನ ಸ್ವಚಕ್ಷುಷಾ ಏವ = ಈ ನಿನ್ನ ಲೌಕಿಕವಾದ ಕಣ್ಣಿನಿಂದಲೇ, ಮಾಂ = ನನ್ನನ್ನು, ದ್ರಷ್ಟುಂ = ನೋಡಲಿಕ್ಕೆ. ನ ಶಕ್ಯಸೇ = (ನೀನು) ಸಮರ್ಥನಾಗುವುದಿಲ್ಲ. (ಆದಕಾರಣ) ತೇ = ನಿನಗಾಗಿ, ದಿವ್ಯಂ = ಲೋಕವಿಲಕ್ಷಣವಾದ, ಚಕ್ಷುಃ = ಕಣ್ಣನ್ನು, ದದಾಮಿ = ಕೊಡುತ್ತೇನೆ. (ಅಂದರೆ ನೋಡಲಾವಶ್ಯಕವಾದ ಶಕ್ತಿಯನ್ನು ಕೊಡುತ್ತೇನೆ) ಮೇ = ನನ್ನ, ಐಶ್ವರಂ = ಈಶ್ವರನ ಸಂಬಂಧಿಯಾದ ಅಚಿಂತ್ಯವಾದ, ಯೋಗಂ = ಸಾಮರ್ಥ್ಯವನ್ನು, ಪಶ್ಯ = ನೋಡು. ॥ ೮ ॥

ಭಾ॥ ಪ್ರಭುಃ ಸಮರ್ಥಃ । ನಾಸ್ತಿ ತಸ್ಮಾತ್ಪರಂ ಭೂತಂ ಪುರುಷಾದ್ವೈ ಸನಾತನಾದಿತಿ ಮೋಕ್ಷಧರ್ಮೇ । ಪ್ರಭುರೀಶಃ ಸಮರ್ಥಶ್ಚೇತ್ಯಭಿಧಾನಂ ॥ ೬—೮ ॥

ಅ ॥ ಮನ್ಯಸೇ ಯದಿ ಎಂಬುವಲ್ಲಿದ್ದ ಪ್ರಭು ಶಬ್ದಕ್ಕೆ ಸ್ವಾಮಿಯೆಂದು ಮಾತ್ರ ಅರ್ಥವಲ್ಲ ಮತ್ತೆ ಶ್ರೀಕೃಷ್ಣನೇ ನೀನು ಅತಿ ಸಮರ್ಥನಾದ ಪ್ರಯುಕ್ತ ನಿನ್ನ ಸಾಮರ್ಥ್ಯದಿಂದಲೇ ಅತೀಂದ್ರಿಯವಾದ (ಅಂದರೆ ನಿನ್ನ ಅನುಗ್ರಹವಿಲ್ಲದೆ ಸಾಮಾನ್ಯ ಜನರಿಗೆ ನೋಡಲಶಕ್ಯವಾದ) ನಿನ್ನ ವಿಶ್ವರೂಪ ದರ್ಶನವನ್ನು ಕೊಡಬಹುದೆಂಬುವ ಅಭಿಪ್ರಾಯದಿಂದಲೇ ಪ್ರಭುಃ ಎಂಬುವ ಶಬ್ದವನ್ನು ಹೇಳಿರುವರು.) ಪ್ರಭುಃ= ಸರ್ವಸಮರ್ಥನು. ಶಶ್ವದೇಕ ಪ್ರಕಾರನಾದ ಶ್ರೀಪರಮಾತ್ಮನಿಂದ ಬೇರೆ ಸರ್ವೋತ್ಕೃಷ್ಟನಾದವನು, ಸಮರ್ಥನಾದವನು ಯಾವನೊಬ್ಬನೂ ಇಲ್ಲ, ಎಂದು ಮೋಕ್ಷಧರ್ಮದಲ್ಲಿ ಹೇಳಿದೆ. (ಪ್ರಭುಶಬ್ದಕ್ಕೆ ಸಮರ್ಥವೆಂಬುವ ಅರ್ಥವಿದೆ ಎಂಬುವಲ್ಲಿ ಕೋಶವನ್ನು ಹೇಳುತ್ತಾರೆ—) ಪ್ರಭುಃ ಈಶಃ ಸಮರ್ಥಃ ಈ ಪದಗಳು ಪರ್ಯಾಯ (ಒಂದೇ ಅರ್ಥವನ್ನು ಹೇಳುವ) ಪದಗಳೆಂದು ಕೋಶವಿದೆ. ॥ ೪—೮ ॥

ಗೀ ॥ ॥ ಸಂಜಯ ಉವಾಚ ॥

ಏವಮುಕ್ತ್ವಾ ತತೋ ರಾಜನ್ಮಹಾಯೋಗೇಶ್ವರೋ ಹರಿಃ ।
ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ ॥ ೯ ॥

ಅ ॥ ಸಂಜಯಃ—ಸಂಜಯನು, ಉವಾಚ=(ಧೃತರಾಷ್ಟ್ರನಿಗೆ ಮುಂದೆ ನಡೆಯುತ್ತಿರುವ ವೃತ್ತಾಂತವನ್ನು) ಹೇಳಿದನು. ರಾಜನ್—ಎಲೋ ಧೃತರಾಷ್ಟ್ರರಾಜನೇ, ಮಹಾಯೋಗೇಶ್ವರಃ=ಅತ್ಯಂತ ಶ್ರೇಷ್ಠಗಳಾದ ಉಪಾಯಗಳಿಗೂ ಅನಂತಾನಂತ ಶಕ್ತಿಗಳಿಗೂ ಸ್ವಾಮಿಯಾದ, ಹರಿಃ—ಸಮಸ್ತ ಯಜ್ಞಾದಿಗಳ ಭಾಗವನ್ನು ಸ್ವೀಕರಿಸುವುದರಿಂದ ಹರಿ ಎನಿಸಿಕೊಂಡ ಶ್ರೀಕೃಷ್ಣನು, ಏವಂ—ಪಶ್ಯ ಮೇ ಪಾರ್ಥ ರೂಪಾಣಿ ಇತ್ಯಾದಿ ಪ್ರಕಾರ, ಉಕ್ತ್ವಾ—ಹೇಳಿ. ತತಃ—ಆ ಮೇಲೆ, ಪಾರ್ಥಾಯ=ಅರ್ಜುನನಿಗೋಸ್ಕರ, ಪರಮಂ=ಅನೇಕ ವಿಭವ (ಸಾಮರ್ಥ್ಯಾದಿಗಳು) ಗಳಿಂದ ಯುಕ್ತವಾದ, ಐಶ್ವರಂ—ಸರ್ವರಿಗೂ ಸ್ವಾಮಿಯಾದ ಶ್ರೀಪರಮಾತ್ಮನದ್ದಾದ, ರೂಪಂ=ವಿಶ್ವರೂಪವನ್ನು, ದರ್ಶಯಾಮಾಸ—ತೋರಿಸಿದನು. ॥ ೯ ॥

ಟೀ—ಆ ರೂಪವನ್ನು ಹೇಳುತ್ತಾರೆ—

ಗೀ ॥ ಅನೇಕವಕ್ತ್ರನಯನಮನೇಕಾದ್ಭುತದರ್ಶನಂ ।
ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಂ ॥ ೧೦ ॥

ಅ ॥ ಅನೇಕವಕ್ತ್ರನಯನಂ=ಅನಂತ ಮುಖಗಳೂ, ಕಣ್ಣುಗಳೂ, ಉಳ್ಳದ್ದು. ಅನೇಕಾದ್ಭುತದರ್ಶನಂ=ತನ್ನಲ್ಲಿ ಆಶ್ಚರ್ಯಕರಗಳಾದ, ಅನಂತ ಪದಾರ್ಥಗಳನ್ನು ತೋರಿಸುವಂತಾದ್ದು. ಅನೇಕದಿವ್ಯಾಭರಣಂ—ಅನಂತಗಳಾದ ಲೋಕವಿಲಕ್ಷಣಗಳಾದ (ಅಪ್ರಾಕೃತಗಳಾದ) ಆಭರಣಗಳುಳ್ಳದ್ದು. ದಿವ್ಯಾನೇಕೋದ್ಯತಾಯುಧಂ—ದಿವ್ಯಗಳಾದ ಅನಂತ ಸನ್ನದ್ಧಗಳಾದ ಆಯುಧಗಳುಳ್ಳದ್ದು. (ಇಂತಹ ರೂಪವನ್ನು ತೋರಿಸಿದನು.) ॥ ೧೦ ॥

ಟೀ—ಮಹಾಯೋಗೇಶ್ವರೋ ಹರಿಃ ಎಂಬುವಲ್ಲಿದ್ದ ಹರಿ ಶಬ್ದಕ್ಕೆ ಪ್ರತ್ಯತೋಪಯುಕ್ತವಾದ ಅರ್ಥವನ್ನು ಹೇಳುತ್ತಾರೆ—

ಭಾ ॥ ಹರಿಃ ಸರ್ವಯಜ್ಞಾದಿಭಾಗಹಾರಿತ್ವಾತ್ । ಇಡೋಪಹೂತಂ ಗೇಹೇಷು ಹರೇ
ಭಾಗಂ ಕ್ರತುಷ್ವಹಂ । ವರ್ಣೋ ಮೇ ಹರಿತಃ ಶ್ರೇಷ್ಠಸ್ತಸ್ಮಾದ್ಧರಿರಿತಿ ಸ್ಮೃತಃ ಇತಿ
ಮೋಕ್ಷಧರ್ಮೇ ॥ ೯,೧೦ ॥

ಅ ॥ ಸಮಸ್ತ ಯಜ್ಞಗಳ ಭಾಗಗಳನ್ನು ಸ್ವೀಕಾರಮಾಡುವವನಾದುದರಿಂದ ಹರಿಃ ಎನಿಸುತ್ತಾನೆ. ಇಷ್ಟಿಗೃಹಗಳಲ್ಲಿ ಜ್ಯೋತಿಷ್ಟೋಮಾದಿ ಯಾಗಗಳಲ್ಲಿ. ಇಡಾ ಎಂಬುವ ಮಂತ್ರವಿಶೇಷಗಳಲ್ಲಿ ಪ್ರತಿಪಾದ್ಯವಾದ ಸ್ವಭಾಗವನ್ನು, ಅಥವಾ ಯಜ್ಞದಲ್ಲಿ ಕೊಡಲ್ಪಟ್ಟ ತನ್ನ ಭಾಗವನ್ನು, ಸ್ವೀಕರಿಸುತ್ತಾ, ಮತ್ತು ನನಗೆ ಸರ್ವೋತ್ಕೃಷ್ಟವಾದ ಅಪ್ರಾಕೃತವಾದ ಹಸುರು ಬಣ್ಣವು ಇದೆ. ಈ ಕಾರಣದಿಂದಲೂ ಹರಿಃ ಎನಿಸಿಕೊಳ್ಳುತ್ತೇನೆ, ಎಂದು ಮೋಕ್ಷಧರ್ಮದಲ್ಲಿದೆ.

ವಿ ॥ ಅಪ್ರಾಕೃತವಿಗ್ರಹವುಳ್ಳ ಶ್ರೀಪತಿಪರಮಾತ್ಮನು ಅನಂತಪೂಜಾಸ್ಥಾನಗಳಲ್ಲಿ ಸ್ವರೂಪದಿಂದಲೇ ಏಕಕಾಲದಲ್ಲಿ ಸನ್ನಿಹಿತನಾಗಿ ಆಯಾಯ ಪೂಜೆಯನ್ನು ಸ್ವೀಕರಿಸುವುದರಿಂದಲೇ ಮಹಾಯೋಗೇಶ್ವರನೆಂದು ಸಿದ್ಧವಾಗುತ್ತದೆ. ॥ ೯, ೧೦ ॥

ಗೀ ॥ ದಿವ್ಯಮಾಲ್ಯಾಂಬರಧರಂ ದಿವ್ಯಗಂಧಾನುಲೇಪನಂ ।
ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಂ ॥ ೧೧ ॥

ಅ ॥ ದಿವ್ಯಮಾಲ್ಯಾಂಬರಧರಂ = ಲೋಕವಿಲಕ್ಷಣ (ಅಪ್ರಾಕೃತ)ಗಳಾದ ಮಾಲಿಕೆಗಳೂ ಪೀತಾಂಬರವೂ ವಸ್ತ್ರಗಳನ್ನು ಧರಿಸುತ್ತಿರುವ, ದಿವ್ಯಗಂಧಾನುಲೇಪನಂ=ಲೋಕವಿಲಕ್ಷಣ ಗಂಧವನ್ನು ಚೆನ್ನಾಗಿ ಹಚ್ಚಿಕೊಂಡಿರುವ, ಸರ್ವಾಶ್ಚರ್ಯಮಯಂ = ಸರ್ವರಿಗೂ ಆಶ್ಚರ್ಯಸ್ವರೂಪವಾದುದು, ದೇವಂ = ಕ್ರೀಡಾದಿಗುಣಗಳುಳ್ಳ, ಅನಂತಂ = ಸರ್ವದೇಶಗಳಲ್ಲಿ ವ್ಯಾಪಿಸಿಕೊಂಡಿರುವುದು, ಸರ್ವಕಾಲಗಳಲ್ಲಿರುವುದು, ಸರ್ವಗುಣಪರಿಪೂರ್ಣವಾದುದು, ವಿಶ್ವತೋಮುಖಂ = ಸರ್ವದಿಕ್ಕುಗಳಲ್ಲಿಯೂ ಮುಖ ಮೊದಲಾದ ಎಲ್ಲಾ ಅವಯವಗಳುಳ್ಳ, (ಇಂತಹ ರೂಪವನ್ನು ತೋರಿಸಿದನು.) ॥ ೧೧ ॥

ಭಾ ॥ ಸರ್ವಾಶ್ಚರ್ಯಮಯಂ ಸರ್ವಾಶ್ಚರ್ಯಾತ್ಮಕಂ ॥ ೧೧ ॥

ಅ ॥ ಸರ್ವಾಶ್ಚರ್ಯಮಯಂ = ಸಮಸ್ತ ಲೋಕಗಳಲ್ಲಿ ಎಲ್ಲಾ ವಸ್ತುಗಳಿಗಿಂತಲೂ ಅತ್ಯಾಶ್ಚರ್ಯಭೂತಗಳಾದ ಯಾವ ಗುಣಗಳು ಇವೆಯೋ, ಆ ಗುಣಸ್ವರೂಪವಾದುದು ॥ ೧೧ ॥

ಗೀ ॥ ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।
ಯದಿ ಭಾಃ ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ ೧೨ ॥

ಅ ॥ ದಿವಿ = ಆಕಾಶದಲ್ಲಿ. (ಏಕಕಾಲದಲ್ಲಿ ಉದಯಿಸಿದ್ದಾದರೆ ಅಂತಹ), ಸೂರ್ಯಸಹಸ್ರಸ್ಯ ಅನಂತಾನಂತ ಸೂರ್ಯರ, ಭಾಃ = ಕಾಂತಿಯು, ಯುಗಪತ್ = ಏಕಕಾಲದಲ್ಲಿ, ಉತ್ಥಿತಾ ಭವೇತ್ ಯದಿ = ಉದಯಿಸಿದ ಪಕ್ಷದಲ್ಲಿ, ಸಾ = ಆ ಕಾಂತಿಯು, ತಸ್ಯ ಮಹಾತ್ಮನಃ = ಆ ಮಹಾಮಹಿಮೆಯುಳ್ಳ ವಿಶ್ವರೂಪದ, ಭಾಸಃ = ಕಾಂತಿಗೆ, ಸದೃಶೀ = ಸಮಾನವಾದುದು ಸ್ಯಾತ್ = ಆಗುವುದು, (ಬೇರೆ ಯಾವುದೂ ಇದಕ್ಕೆ ಸದೃಶವಾದುದು ಇಲ್ಲ.) ॥ ೧೨ ॥

ಗೀ ॥ ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।
ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥ ೧೩ ॥

ಅ ॥ ಪಾಂಡವಃ = ಅರ್ಜುನನು. (ಶ್ರೀಕೃಷ್ಣನು ವಿಶ್ವರೂಪವನ್ನು ತೋರಿಸುತ್ತಿರಲು) ತದಾ=ಆಗ, ದೇವದೇವಸ್ಯ = ಬ್ರಹ್ಮಾದಿದೇವತೆಗಳಿಗೆ ಸ್ವಾಮಿಯಾದ ಶ್ರೀಕೃಷ್ಣನ, ಶರೀರೇ = ವಿಶ್ವರೂಪದಲ್ಲಿ, ಅನೇಕಧಾ = ದೇವತೆಗಳು ದಾನವರು ಮನುಷ್ಯರು ಮೊದಲಾಗಿ ಅನೇಕ ಪ್ರಕಾರವಾಗಿ, ಪ್ರವಿಭಕ್ತಂ = ವಿಭಾಗವಾಗಿರುವ, ಕೃತ್ಸ್ನಂ = ಸಮಸ್ತವಾದ, ಜಗತ್ = ಜಗತ್ತನ್ನು, ಏಕಸ್ಥಂ = ಏಕದೇಶದಲ್ಲಿರುವುದನ್ನಾಗಿ, ಅಪಶ್ಯತ್ = ಕಂಡನು. ॥ ೧೩ ॥

ಗೀ ॥ ತತಃ ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।
ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ ೧೪ ॥

ಅ ॥ ತತಃ = ಆ ವಿಶ್ವರೂಪವನ್ನು ನೋಡಿದ ಮೇಲೆ, ವಿಸ್ಮಯಾವಿಷ್ಟಃ = ಆಶ್ಚರ್ಯದಿಂದ ಕೂಡಿರುವ, ಹೃಷ್ಟರೋಮಾ = ಸಂತುಷ್ಟವಾದ ರೋಮಗಳುಳ್ಳ, (ಅಂದರೆ ರೋಮಾಂಚಗಳುಳ್ಳ) ಸಃ ಧನಂಜಯಃ = ಆ ಅರ್ಜುನನು, ದೇವಂ = ಕ್ರೀಡಾದಿ ಗುಣವಿಶಿಷ್ಟನಾದ ಶ್ರೀ ಪರಮಾತ್ಮನನ್ನು, ಶಿರಸಾ = ಶಿರಸ್ಸಿನಿಂದ, ಪ್ರಣಮ್ಯ = ಭಕ್ತಿಪೂರ್ವಕವಾಗಿ ನಮಸ್ಕರಿಸಿ, ಕೃತಾಂಜಲಿಃ = ಕೈಜೋಡಿಸಿ ನಮಸ್ಕರಿಸಿದವನಾಗಿ, ಅಭಾಷತ = ಮಾತನಾಡಿದನು. ॥ ೧೪ ॥

ಟೀ — ಕಂಡ ವಿಶ್ವರೂಪವನ್ನು ಅನುವಾದಮಾಡುತ್ತಾ ಸ್ತೋತ್ರಮಾಡಿದನೆನ್ನುತ್ತಾರೆ—

ಗೀ ॥ ॥ ಅರ್ಜುನ ಉವಾಚ ॥
ಪಶ್ಯಾಮಿ ದೇವಾಂಸ್ತವ ದೇವ ದೇಹೇ
ಸರ್ವಾಂಸ್ತಥಾ ಭೂತವಿಶೇಷಸಂಘಾನ್ ।
ಬ್ರಹ್ಮಾಣಮೀಶಂ ಕಮಲಾಸನಸ್ಥ-
ಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫ ॥

ಅ ॥ ಅರ್ಜುನಃ = ಅರ್ಜುನನು, ಉವಾಚ = ಹೇಳಿದನು. ದೇವ = ಶ್ರೀಕೃಷ್ಣನೇ, ತವ = ನಿನ್ನ ದೇಹೇ = ಶರೀರದಲ್ಲಿ, ಸರ್ವಾನ್ ದೇವಾನ್ = ಎಲ್ಲಾ ದೇವತೆಗಳನ್ನು, ತಥಾ = ಹಾಗೆಯೇ, ಭೂತವಿಶೇಷಸಂಘಾನ್ = ಪ್ರಾಣಿವಿಶೇಷಗಳ ಸಮೂಹಗಳನ್ನು. ಬ್ರಹ್ಮಾಣಂ = ಚತುರ್ಮುಖ ಬ್ರಹ್ಮನನ್ನು, ಕಮಲಾಸನಸ್ಥಂ = ಚತುರ್ಮುಖ ಬ್ರಹ್ಮನ ತೊಡೆಯ ಮೇಲೆ ಇರುವ, ಈಶಂ = ರುದ್ರನನ್ನೂ, ಚ = ಮತ್ತು, ಸರ್ವಾನ್ ಋಷೀನ್ = ಎಲ್ಲಾ ಋಷಿಗಳನ್ನು, ದಿವ್ಯಾನ್ = ಆಶ್ಚರ್ಯಕರಗಳಾದ, ಉರಗಾಂಶ್ಚ = ಸರ್ಪಗಳನ್ನು ಕೂಡ, ಪಶ್ಯಾಮಿ = ನೋಡುತ್ತೇನೆ. ॥ ೧೫ ॥

ಟೀ — ದಿವಿ ಸೂರ್ಯಸಹಸ್ರಸ್ಯ ಎಂಬುವಲ್ಲಿ ವಿಶ್ವರೂಪಕ್ಕೆ ಸಹಸ್ರಸೂರ್ಯರಿಗೆ ಸದೃಶವಾದ ಕಾಂತಿಯಿರುತ್ತದೆಂದು ಹೇಳಿಯದೆ. ಗೀತೆಯಲ್ಲಿರುವ ಸಹಸ್ರ ಶಬ್ದಕ್ಕೆ ಹತ್ತುನೂರು ಎಂಬುವ ಶಂಕೆಯನ್ನು ಹೋಗಲಾಡಿಸುತ್ತಾರೆ—

ಭಾ ॥ (೧) ಸಹಸ್ರಶಬ್ದೋಽನಂತವಾಚೀ । ತದಪಿ ಪಾಕಶಾಸನವಿಕ್ರಮ ಇತ್ಯಾದಿವತ್ಸ್ತ-
ಯನಾರ್ಥಮೇವ ॥ (೨) ತಥಾ ಹ್ಯೃಗ್ವೇದಖಿಲೇಷು । ಅನಂತಶಕ್ತಿಃ ಪರಮೋಽನ-

ತಮೀರ್ಯಃ ಸೋಽನಂತತೇಜಾಶ್ಚ ತತಸ್ತತೋಽಪೀತಿ ॥ (೩) ಮಹಾತಾತ್ಪರ್ಯಾಚ್ಚ ಪ್ರಾಬಲ್ಯಂ । ನ ಚ ಪರಿಮಾಣೋಕ್ತ್ಯಾ ಕಿಂಚಿತ್ಪ್ರಯೋಜನಂ ॥ ೧೨—೧೪ ॥

ಅ ॥ (೧) ಸಹಸ್ರಶಬ್ದಕ್ಕೆ ಅನಂತವೆಂದರ್ಥವು. (ಅನಂತಸೂರ್ಯರಿಗೆ ಸದೃಶವಾದ ಕಾಂತಿ ಯಿದೆ ಎಂಬುವುದೂ ಕೂಡ ಶ್ರೀಪರಮಾತ್ಮನಿಗೆ ಅಷ್ಟೇ ಕಾಂತಿಯಿರುವುದೆಂದು ತಾತ್ಪರ್ಯವಲ್ಲ. ಏಕೆಂದರೆ ಶ್ರೀಪರಮಾತ್ಮನಿಗೆ ಅಸದೃಶವಾದ ಕಾಂತಿಯಿದೆ. ಆದಕಾರಣ ಶ್ರೀಪರಮಾತ್ಮನಿಗೆ ಉಪಮಾನವೇ ಇಲ್ಲ. ಹಾಗಾದರೆ ಹಾಗೆ ಹೇಳಿದ್ದು ಏತಕ್ಕೆಂದರೆ—) ದಶರಥಪುತ್ರನಾದ ಶ್ರೀರಾಮನಿಗೆ ಇಂದ್ರನ ಪರಾಕ್ರಮಕ್ಕೆ ಸದೃಶವಾದ ಪರಾಕ್ರಮವಿದೆ. ಇತ್ಯಾದಿಗಳಲ್ಲಿ ಹೇಳಿದಂತೆ ಅಲ್ಪಜನರಿಗೆ ತಿಳಿಸುದಕ್ಕಾಗಿ ಮಾತ್ರ ಹೇಳಿದ್ದು. (೨) (ಸಹಸ್ರಶಬ್ದಕ್ಕೆ ಪ್ರಸಿದ್ಧವಾದ ಅರ್ಥವನ್ನು ಬಿಡುವದು ಏತಕ್ಕೆಂದರೆ-) ಶ್ರೀಪರಮಾತ್ಮನು ಅನಂತಾನಂತ ಸಾಮರ್ಥ್ಯವುಳ್ಳವನು, ಸರ್ವೋತ್ತಮನು, ಪರಿಮಿತಿಯಿಲ್ಲದ ಪರಾಕ್ರಮವುಳ್ಳವನು. ಅನಂತ ತೇಜಸ್ಸುಳ್ಳವನು, ಆದಕಾರಣ ಸೂರ್ಯಾದಿಗಳಿಂದಲೂ ಅತ್ಯಂತ ವಿಲಕ್ಷಣ ಪ್ರಕಾಶವುಳ್ಳವನು, ಹೀಗೆ ಋಗ್ವೇದಪಿಲ ಗಳಲ್ಲಿ ಹೇಳಿದೆ (ಏವಂಚ ಶ್ರುತಿಯು ನಿರವಕಾಶವಾದ ಪ್ರಯುಕ್ತ ಪ್ರಬಲವು. ಗೀತಾವಾಕ್ಯವು ಸಾವ ಕಾಶವು. ಆದಕಾರಣ ಶ್ರುತ್ಯನುಸಾರವಾಗಿಯೇ ಸಹಸ್ರಶಬ್ದಕ್ಕೆ ಅನಂತ ಎಂದು ಅರ್ಥ ಹೇಳುವುದು ಯುಕ್ತವು.) (೩) ಎಲ್ಲಾ ಆಗಮಗಳಿಗೂ ಮೋಕ್ಷರೂಪ ಮಹಾ ಪ್ರಯೋಜನಕ್ಕಾಗಿ ಶ್ರೀಪರಮಾತ್ಮನ ಲ್ಲಿಯೇ ಮಹಾತಾತ್ಪರ್ಯವು ಪ್ರಮಿತವಾಗಿದೆ ಆದಕ್ಕೆ ಅನುಕೂಲವಾದ ಅನಂತ ಸಾಮರ್ಥ್ಯಾದಿಗಳನ್ನು ಹೇಳುವ ಶ್ರುತಿಯು ಪ್ರಬಲವಾಗಿದೆ. ಆ ಶ್ರುತಿಗೆ ಅನುಕೂಲವಾಗಿ ಗೀತೆಯಲ್ಲಿದ್ದ ಸಹಸ್ರಶಬ್ದಕ್ಕೂ ಅನಂತ ಎಂದೇ ಅರ್ಥವನ್ನು ಹೇಳಬೇಕು. ಮತ್ತು ಹೀಗೆ ಶ್ರುತಿಪ್ರಮಿತವಾದ ಅಪರಿಮಿತ ಪ್ರಭೆಯುಳ್ಳ ಶ್ರೀಪರಮಾತ್ಮನಿಗೆ ಸಹಸ್ರಸೂರ್ಯರ ಕಾಂತಿಯಿರುವುದೆಂದು ಇಷ್ಟು ಮಾತ್ರ ಹೇಳಿದರೆ ಸಕಲ ಶ್ರುತಿ ಸ್ಮೃತಿ ಇತಿಹಾಸ ಪುರಾಣಾದಿಗಳಿಂದ ವಿರೋಧವೂ ಬರುತ್ತದೆ. ಆದಕಾರಣ ಮಹಾಮಹಿಮೆಯುಳ್ಳ ಶ್ರೀಪರಮಾತ್ಮನಿಗೆ ಅಲ್ಪ ಪರಿಮಾಣವನ್ನು ಹೇಳಿದರೆ ಯಾವುದೊಂದು ಪ್ರಯೋಜನವೂ ಸಿದ್ಧವಾಗ ಲಾರದು. ಮಹಾಪ್ರಯೋಜನವೂ ಸುತರಾಂ ಸಿದ್ಧವಾಗಲಾರದು. ॥ ೧೨—೧೪ ॥

ಟೀ—ಈ ಅಧ್ಯಾಯದಲ್ಲಿ ಶ್ರೀಪರಮಾತ್ಮನನ್ನು ಧ್ಯಾನಿಸುವುದಕ್ಕಾಗಿ ವಿಶ್ವರೂಪ ಸ್ಥಿತಿಯು ಹೇಳಲ್ಪ ಡುತ್ತದೆ, ಎಂದು ಅಧ್ಯಾಯದಲ್ಲಿ ಹೇಳಲ್ಪಡತಕ್ಕ ಅರ್ಥವು ಸ್ಪಷ್ಟವಾಗಿ ತೋರುವುದರಿಂದ ಅದನ್ನು ಇಲ್ಲಿ ಹೇಳಿಲ್ಲ. ಅದರಲ್ಲಿ ವಿಶ್ವರೂಪವನ್ನು ತೋರಿಸುವುದಕ್ಕಿಂತ ಮೊದಲು ಮೇಲೆಯೂ ಅದು ಕಾಣದಿರುವುದರ ಿಂದ ಆ ವಿಶ್ವರೂಪವನ್ನು ತೋರಿಸುವ ಕಾಲದಲ್ಲಿಯೇ ಯತ್ಕಿಂಚಿತ್ ಜಡಪ್ರಕೃತ್ಯಾದಿಗಳನ್ನು ಉಪಾದಾನ (ಪರಿಣಾಮ) ಕಾರಣವನ್ನಾಗಿ ಇಟ್ಟುಕೊಂಡು ಶ್ರೀಕೃಷ್ಣನು ನಿರ್ಮಾಣಮಾಡಿ ಅರ್ಜುನನಿಗೆ ವಿಶ್ವರೂಪವನ್ನು ತೋರಿಸಿ ನಾಟಕಮಾಡಿಸಿದ್ದಾನೆ, ಎಂಬುವ ಶಂಕೆಯನ್ನು ನಿವಾರಣೆಮಾಡುತ್ತಾರೆ—

ತಾ ॥ ಓಂ ॥ (೧) ಆತ್ಮಾನಮವ್ಯಯಂ । ಪರಮಂ ರೂಪಮೈಶ್ವರಂ ॥ (೨) ಸರ್ವಾಶ್ಚ-ರ್ಯಮಯಂ ದೇವಮನಂತಂ ವಿಶ್ವತೋಮುಖಮಿತ್ಯಾದಿರೂಪವಿಶೇಷಣಾಚ್ಚ ರೂಪಸ್ಯೇಶ್ವರಸಾತ್ಮ್ಯಾತ್ಮಸ್ವರೂಪತ್ವಂ ನಿತ್ಯತ್ವಂ ತತ ಏವ ಚಿದಾನಂದಾದ್ಯಾತ್ಮಕತ್ವಂ ಚ ಸಿದ್ಧಂ ॥ (೩) ಮಮ ದೇಹ ಇತ್ಯುಕ್ತತ್ವಾಚ್ಚಾದಿತ್ಯಾದೀನಾಂ ಭೇದಃ ಸಿದ್ಧಃ ॥ (೪) ಮೇ ರೂಪಾಣಿ ಸರ್ವತೋಽನಂತರೂಪಮಿತ್ಯಾದೇಃ ದ್ರಷ್ಟುಮಿಚ್ಛಾಮಿ ತೇ ರೂಪಮಿತ್ಯಾದೇಶ್ಚೈಕಸ್ಯೈವಾಭಿನ್ನಾನಂತರೂಪತ್ವಂ ಚ ॥ ೧ ॥

ಅ॥ ದರ್ಶಯಾತ್ಮಾನಮವ್ಯಯಂ (ಶ್ಲೋ. ೪.) ಇತ್ಯಾದಿಗಳಿಂದ ನಿನ್ನ ರೂಪವನ್ನು ತೋರಿಸು ಎಂದು ಪ್ರಾರ್ಥಿಸಿದ ಮೇಲೆ ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ (ಶ್ಲೋ. ೯.) ಎಂದು ವಿಶ್ವರೂಪವನ್ನು ತೋರಿಸಿದನೆಂದು ಹೇಳಿದ ಪ್ರಯುಕ್ತ, ವಿಶ್ವರೂಪವು ಸಾಕ್ಷಾತ್ ಈಶ್ವರ ಸ್ವರೂಪವೆಂದು ಸಿದ್ಧವಾಯಿತು. (ವಿಶ್ವರೂಪವು ಸಾಕ್ಷಾತ್ ಈಶ್ವರಸ್ವರೂಪವಲ್ಲ, ಉತ್ಪತ್ತಿಯುಳ್ಳದ್ದು. ನಾಶವುಳ್ಳದ್ದೆಂದಾದರೆ ಅವ್ಯಯಂ=ನಾಶವಿಲ್ಲದಿರುವ ರೂಪವನ್ನು ತೋರಿಸು, ಎಂದು ಹೇಳಿದ ಪ್ರಾರ್ಥನೆಗೆ ಅನುಗುಣವಾಗದೆ ಹೋಗುವುದು.) (೨) ಸರ್ವಾಶ್ಚರ್ಯಮಯಂ ದೇವಮನಂತಂ ವಿಶ್ವತೋಮುಖಂ (ಶ್ಲೋ. ೧೧.) ಎಂಬುವಲ್ಲಿ ದೇವಂ ಎಂದು ಹೇಳಿದ್ದರಿಂದ ಸಾಕ್ಷಾತ್ ಈಶ್ವರನ ಸ್ವರೂಪವೆಂದು ಸಿದ್ಧವಾಯಿತು. ಮತ್ತು ಅವ್ಯಯಂ ಪರಮಂ, ಸರ್ವಾಶ್ಚರ್ಯಮಯಂ, ಅನಂತಂ ವಿಶ್ವತೋಮುಖಂ ಇತ್ಯಾದಿಗಳು ಶ್ರೀಹರಿಯ ಅಸಾಧಾರಣಗಳಾದ ಧರ್ಮಗಳನ್ನು ವಿಶ್ವರೂಪಕ್ಕೆ ಹೇಳಿದ್ದರಿಂದಲೂ ಆ ವಿಶ್ವರೂಪವು ಸಾಕ್ಷಾತ್ ಶ್ರೀಹರಿಯ ಸ್ವರೂಪವೆಂದು ಸಿದ್ಧವಾಯಿತು. ಸಾಕ್ಷಾತ್ ಈಶ್ವರಸ್ವರೂಪತ್ವ ಸಿದ್ಧವಾದ ಮೇಲೆ (ಶ್ರೀಪರಮಾತ್ಮನು ನಿತ್ಯನೂ ಚಿದಾನಂದಾದ್ಯಾತ್ಮಕನೂ ಆದುದರಿಂದ ವಿಶ್ವರೂಪಕ್ಕು) ನಿತ್ಯತ್ವವೂ, ಚಿದಾನಂದಾದ್ಯಾತ್ಮಕತ್ವವೂ ಸಿದ್ಧವಾಯಿತು. (ಆದಕಾರಣ ವಿಶ್ವರೂಪವನ್ನು ಅಚೇತನ ಪ್ರಕೃತಿಯನ್ನು ಉಪಾದಾನಕಾರಣವನ್ನಾಗಿ ಇಟ್ಟುಕೊಂಡು ತತ್ಕಾಲದಲ್ಲಿ ನಿರ್ಮಾಣಮಾಡಿದ್ದೆಂದು ಹೇಳಿದ್ದು ಅಯುಕ್ತವು.) (೩) ಶಶಿಸೂರ್ಯನೇತ್ರಂ ಇತ್ಯಾದಿ ಗೀತಾವಾಕ್ಯಗಳಿಂದ ವಿಶ್ವಮೇವ ರೂಪಂ ವಿಶ್ವರೂಪಂ ಜಗತ್ತೇ ರೂಪವೆಂದೂ ತೋರುತ್ತದೆ. ಆದಕಾರಣ ವಿಶ್ವರೂಪವು ಸಾಕ್ಷಾತ್ ಭಗವತ್ಸ್ವರೂಪವೇ ಎಂದದ್ದು ಹೇಗೆ ಎಂದರೆ-) ಪಶ್ಯಾದಿತ್ಯಾನ್ ವಸೂನ್ ರುದ್ರಾನ್ (ಶ್ಲೋ. ೬) ಆದಿತ್ಯಾದಿ ಸಕಲ ಜಗತ್ತನ್ನು, ಮಮ ದೇಹೇ ಗುಡಾಕೇಶ (ಶ್ಲೋ. ೭.) ನನ್ನ ದೇಹದಲ್ಲಿ ನೋಡು. ಎಂದು ಸಂಪೂರ್ಣ ಜಗತ್ತು ವಿಶ್ವರೂಪವನ್ನಾಶ್ರಯಿಸಿಕೊಂಡಿದೆ ಎಂದು ಹೇಳಿದ್ದರಿಂದ ಸೂರ್ಯಾದಿ ಜಗತ್ತಿಗಿಂತ ವಿಶ್ವರೂಪವು ಭಿನ್ನವೆಂದು ಸಿದ್ಧವಾಗುವುದರಿಂದ ಸೂರ್ಯಾದಿ ಜಗತ್ತಿನ ಭೇದವು ಕೂಡುವುದಿಲ್ಲ. ಆದಕಾರಣ ವಿಶ್ವರೂಪವು ಸಾಕ್ಷಾದ್ಭಗವತ್ಸ್ವರೂಪವೆಂದು ಹೇಳುವುದು ಯುಕ್ತವು. (ಶಶಿಸೂರ್ಯನೇತ್ರಂ ಎಂಬುವುದಕ್ಕೆ ಚಂದ್ರಸೂರ್ಯರಿಗೆ ಆಶ್ರಯವಾದ ಕಣ್ಣು ಉಳ್ಳವನೆಂದರ್ಥವು.) (೪) (ಹಾಗಾದರೆ ವಿಶ್ವರೂಪವು ಅನಂತರೂಪಗಳ ಸಮುದಾಯವಾದುದರಿಂದ ಭಗವತ್ಸ್ವರೂಪವೆಂಬುವುದು ಯುಕ್ತವಲ್ಲ. ಏಕೆಂದರೆ ಒಂದು ರೂಪಕ್ಕೆ ಅನೇಕ ರೂಪಗಳಿಂದ ಅಭೇದವು ವಿರುದ್ಧವಷ್ಟೆ, ಎಂದರೆ—) (ವಿಶ್ವರೂಪವು ಅನಂತರೂಪಗಳ ಸಮುದಾಯವಾಗಿರುವುದರಿಂದ ಪರಮಾತ್ಮನ ರೂಪವಲ್ಲವೆಂದು ಹೇಳಕೂಡದು.) (1) ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ (ಶ್ಲೋ. ೫) (2) ಪಶ್ಯಾಮಿ ತ್ವಾಂ ಸರ್ವತೋಽನಂತರೂಪಂ (ಶ್ಲೋ. ೧೬.) ಇತ್ಯಾದಿ ಗೀತಾವಾಕ್ಯಗಳಿಂದ ಶ್ರೀಪರಮಾತ್ಮನು ಅನಂತ ರೂಪಗಳನ್ನು ತೋರಿಸಿದ್ದಾನೆಂದು ತಿಳಿದು ಬರುವುದರಿಂದಲೂ, (೩) ದ್ರಷ್ಟುಮಿಚ್ಛಾಮಿ ತೇ ರೂಪ (ಶ್ಲೋ. ೩.) ಇತ್ಯಾದಿಗಳಿಂದ ಒಂದು ರೂಪವನ್ನು ತೋರಿಸು ಎಂದೇ ಪ್ರಾರ್ಥಿಸಿದ್ದಾನೆಂದು ತಿಳಿದು ಬರುವುದರಿಂದಲೂ ತನ್ನ ಅಚಿಂತ್ಯಾದ್ಭುತ ಶಕ್ತಿಯಿಂದ ಒಬ್ಬನೇ ಅನಂತರೂಪಗಳನ್ನು ಹೊಂದಿದ್ದಾನೆಂದೂ ಆ ಅನಂತರೂಪಗಳು ಪರಸ್ಪರ ಅಭಿನ್ನಗಳೆಂದೂ ಸಿದ್ಧಗಳಾಗುತ್ತವೆ.

ಟೀ—ಅನಂತರೂಪಗಳು ಅಭಿನ್ನಗಳೆಂದು ಹೇಳಿದ್ದು ಯುಕ್ತವಲ್ಲ. ರೂಪಗಳಿಗೆ ಪರಸ್ಪರ ಅನಂತತ್ವವು ಕೂಡಲಾರದು, ಎಂಬುವ ಆಶಂಕೆಯನ್ನು ಬೃಹತ್ತರ್ಕವಾಕ್ಯದಿಂದ ಪರಿಹರಿಸುತ್ತಾರೆ-

ತಾ॥ (೧) ಏಕಂ ರೂಪಂ ಹರೇರ್ನಿತ್ಯಮಚಿಂತ್ಯೈಶ್ವರ್ಯಯೋಗತಃ। ಬಹುಸಂಖ್ಯಾಗುಣಾ-
ಕಾರಂ ಚ ವಿಶೇಷಾದೇವ ಕೇವಲಂ ॥ (೨) ಅಭಾವೋ ಯತ್ರ ಭೇದಸ್ಯ ಪ್ರಮಾಣಾ-

**ವಶಿತೋ ಭವೇತ್ । ವಿಶೇಷೋ ನಾಮ ತತ್ರೈವ ವಿಶೇಷವ್ಯವಹಾರವಾನ್ ॥ (೩)**
**ವಿಶೇಷೋಽಪಿ ಸ್ವರೂಪಂ ಸ ಸ್ವನಿರ್ವಾಹಕ ಏವ ಚ ॥ ೨ ॥**

ಅ ॥ (೧) ಅಘಟಿತಘಟಕವಾದ ಅಚಿಂತ್ಯ ಐಶ್ವರ್ಯಯೋಗದಿಂದ ಶ್ರೀಹರಿಯ ಒಂದು ರೂಪವು ಅನಂತವೆಂಬುವ ವ್ಯವಹಾರಕ್ಕೆ ವಿಷಯವಾಗುತ್ತದೆ. ಮತ್ತು ಭೇದವಿಲ್ಲದಿದ್ದರೂ ಭೇದಪ್ರತಿನಿಧಿಯಾದ ವಿಶೇಷದಿಂದಲೇ ಭೇದವ್ಯವಹಾರಕ್ಕೂ ವಿಷಯವಾಗುತ್ತದೆ. (೨) (ಭೇದವು ಇಲ್ಲವಾದರೆ-ವಿಶೇಷಮಾತ್ರದಿಂದ ವ್ಯವಹಾರವಿಶೇಷವು ಹೇಗೆ ಕೂಡುತ್ತದೆ ಎಂದರೆ—) ಯಾವ ವಸ್ತುವಿನಲ್ಲಿ ಭೇದವಿಲ್ಲವೆಂಬುವುದು ಪ್ರಮಾಣಗಳಿಂದ ನಿಶ್ಚಿತವಾಗುತ್ತದೋ, ಅಲ್ಲಿ ಭೇದವು ಇಲ್ಲದಿದ್ದರೂ ಭೇದಪ್ರತಿನಿಧಿಯಾದ ಭೇದ ವ್ಯವಹಾರ ನಿರ್ವಾಹಕವಾಗಿಯೇ ಇರುವ ವಿಶೇಷವು ಸಿದ್ಧವಾಗುತ್ತದೆ. (ಆದಕಾರಣ ಭಗವದ್ರೂಪಗಳಲ್ಲಿ ಭೇದವಿಲ್ಲವೆಂದು ಪ್ರಮಾಣದಿಂದ ನಿಶ್ಚಿತವಾದ ಪ್ರಯುಕ್ತ ವಿಶೇಷದಿಂದಲೇ ಅಂತಹ ಭಗವದ್ರೂಪಗಳಲ್ಲಿ ವ್ಯವಹಾರವಿಶೇಷವು ಕೂಡುತ್ತದೆ.) (ಭಗವದ್ರೂಪಗಳಿಗೆ ಭೇದವಿಲ್ಲದಿದ್ದರೂ ವಿಶೇಷದಿಂದಲೇ. ಭಗವದ್ರೂಪಗಳಲ್ಲಿ ವ್ಯವಹಾರವಿಶೇಷವು ಆಗುತ್ತದೆ, ಎಂದಾದರೆ ಗೋವು, ಕುದುರೆ ಮೊದಲಾದುವುಗಳಲ್ಲಿಯೂ ವಿಶೇಷದಿಂದಲೇ ಭೇದವ್ಯವಹಾರ ವಿಶೇಷವು ಆಗುವುದೆಂದಾದರೆ—) ಎಲ್ಲಿ ಭೇದವಿಲ್ಲವೆಂದು ಪ್ರಮಾಣದಿಂದ ನಿಶ್ಚಿತವಾಗುತ್ತದೋ, ಅಲ್ಲಿಯೇ ವಿಶೇಷವು ಭೇದವ್ಯವಹಾರವಿಶೇಷವನ್ನು ಮಾಡುತ್ತದೆ ಎಂದು ಅಂಗೀಕರಿಸುತ್ತೇವೆ. (ಗೋವು ಕುದುರೆ ಮೊದಲಾದುವುಗಳಲ್ಲಿ ಅದರೂ ಭೇದವೇ ಪ್ರಮಾಣದಿಂದ ನಿಶ್ಚಿತವಾದ ಪ್ರಯುಕ್ತ. ಗವಾಶ್ವಾದಿಗಳಲ್ಲಿದ್ದ ಭೇದವ್ಯವಹಾರವು ಭೇದಪ್ರಯುಕ್ತವೇ ಹೊರತು ವಿಶೇಷ (ಭೇದವಿಲ್ಲದಿದ್ದರೂ ಭೇದಕಾರ್ಯನಿರ್ವಾಹಕವಾದುದು) ಪ್ರಯುಕ್ತವಲ್ಲ. (೩) (ಈ ವಿಶೇಷವೂ ವಿಶೇಷಿಯಿಂದ (1) ಭಿನ್ನವೋ (2) ಅಭಿನ್ನವೋ. (1) ಭಿನ್ನವೆಂದಾದರೆ ಭೇದವು ಭೇದಿಗಳಿಂದ ಭಿನ್ನವೋ ಅಭಿನ್ನವೋ, ಇತ್ಯಾದಿ ಪ್ರಕಾರ ಭೇದಪರಂಪರೆಯಿಂದ ಹೇಗೆ ಅನವಸ್ಥಾ ದೋಷವು ಬರುತ್ತದೋ, ಹಾಗೆಯೇ ವಿಶೇಷಪರಂಪರೆಯಿಂದಲೂ ಅನವಸ್ಥಾದೋಷವು (2) ಅಭಿನ್ನವೆಂದಾದರೆ ವಿಶೇಷ ವಿಶೇಷಿ ಎಂಬುವ ವ್ಯವಹಾರವೇ ಕೂಡಲಾರದು, ಎಂದರೆ—) ವಿಶೇಷವೂ ವಿಶೇಷಿಯ ಸ್ವರೂಪವೇ. (ಆದಕಾರಣ ವಿಶೇಷಪರಂಪರೆಯಿಂದ ಅನವಸ್ಥಾದೋಷವಿಲ್ಲ. ಭೇದವಿಲ್ಲದಿದ್ದರೂ ವಿಶೇಷದಿಂದಲೇ ವಿಶೇಷ ವಿಶೇಷಿ ವ್ಯವಹಾರವು ಸಿದ್ಧವಾಗುತ್ತದೆ) ವಿಶೇಷವೂ ತಾನೇ ತನ್ನಲ್ಲಿ ಸ್ವನಿರ್ವಾಹಕವಾಗಿರುವುದರಿಂದ ತನ್ನಲ್ಲಿ ಬೇರೆ ವಿಶೇಷವಿಲ್ಲದಿದ್ದರೂ ವ್ಯವಹಾರ ವಿಶೇಷವನ್ನು ಮಾಡುತ್ತದೆ ಆದುದರಿಂದ (ಮತ್ತೊಂದು ವಿಶೇಷವನ್ನು ಅಂಗೀಕರಿಸದಿರುವುದರಿಂದ ವಿಶೇಷಪರಂಪರೆಯಿಂದ ಅನವಸ್ಥಾದೋಷವೂ ಇಲ್ಲ.) ॥ ೨ ॥

ಟೀ—ಆ ವಿಶೇಷವನ್ನೇ ವಿಭಾಗಮಾಡಿ ತೋರಿಸುತ್ತಾರೆ—

**ಕಾ ॥ (೧) ದ್ರವ್ಯಾತ್ಮನಾ ಸ ನಿತ್ಯೋಽಪಿ ವಿಶೇಷಾತ್ಮೈವ ಜಾಯತೇ । ನಿತ್ಯಾ ಏವ ವಿಶೇಷಾಶ್ಚ ಕೇಚಿದೇವಂ ದ್ವಿಧೈವ ಸಃ ॥ (೨) ವಸ್ತುಸ್ವರೂಪಮಸ್ಯೈವೇತ್ಯೇವ-ಮಾದಿಷ್ವಭೇದಿನಃ ॥ ೩ ॥**

ಅ ॥ (೧) (ಚೇತನಾಚೇತನ ಸಮಸ್ತವಸ್ತುಗಳಲ್ಲಿಯೂ ಈ ವಿಶೇಷವದೆ ಈ ವಿಶೇಷವು ಹುಟ್ಟತಕ್ಕದ್ದು ನಿತ್ಯವಾದುದು. ಎಂದು ಎರಡು ವಿಧವು ಹೇಗೆಂದರೆ—) ಚೇತನದಲ್ಲಿ ಕೆಲವು ವಿಶೇಷವು ಹುಟ್ಟುತ್ತದೆ ಕೆಲವು ನಿತ್ಯವು. ಎಂದು ವಿಶೇಷವು ಎರಡು ವಿಧವು. ಆ ವಿಶೇಷಕ್ಕೆ ಚೇತನ ದ್ರವ್ಯರೂಪದಿಂದ ಉತ್ಪತ್ತಿಯಿಲ್ಲದಿದ್ದರೂ ಅಭಿವ್ಯಕ್ತಿವಿಶೇಷವನ್ನು ಇಟ್ಟುಕೊಂಡು ಹುಟ್ಟುತ್ತದೆಂಬುವುದು ವ್ಯವಹಾರವು

ಕೊಡುತ್ತವೆ.) (ಅಚೇತನದಲ್ಲಿಯೂ ಯಾವ ದ್ರವ್ಯಧಾವಿ, ಅಯಾವದ್ದ್ರವ್ಯಧಾವಿ, ಎಂದು ವಿಶೇಷವು ಎರಡು ವಿಧವು. ಅಂದರೆ ಅಚೇತನದಲ್ಲಿ ಧರ್ಮಭೂತ ಚೂತಫಲಾದಿಗಳು ಆಗಂತುಕವಾದ ಪೀತ ರೂಪಕ್ಕೆ ಉಪಾದಾನ ಕಾರಣವಾಗಿರುವುದರಿಂದ) ಪೀತಾದಿರೂಪವಾದ ವಿಶೇಷವು ಉಪಾದಾನವಿಶೇಷ್ಯ ದ್ರವ್ಯರೂಪದಿಂದ ದ್ರವ್ಯವಿರುವ ಪರ್ಯಂತ ಇರುತಕ್ಕದಾಗ್ಯೂ ಕಾರ್ಯರೂಪದಿಂದ ಕೆಲವು ವಿಶೇಷವು ಹುಟ್ಟುತ್ತದೆ. (ಅಂದರೆ ಯಾವದ್ದ್ರವ್ಯಧಾವಿಯಲ್ಲ.) ಚೂತಫಲತ್ವಾದಿರೂಪ ವಿಶೇಷವು ನಿತ್ಯವು. (ಅಂದರೆ ಯಾವ ದ್ರವ್ಯಧಾವಿಯು.) ಹೀಗೆ ವಿಶೇಷವು ಎರಡು ವಿಧವು. (೨) (ಚೇತನಾಚೇತನಗಳಲ್ಲಿ ಪ್ರತ್ಯೇಕವಾಗಿ ಎರಡುವಿಧ ವಿಶೇಷಗಳನ್ನು ಆಯಾಯ ಸ್ಥಳಗಳಲ್ಲಿ ಉದಾಹರಿಸುತ್ತಾರೆ–) ವಸ್ತುಸ್ವರೂಪವು ಇದ್ದೇ ಇದೆ. ಇತ್ಯಾದಿಗಳಲ್ಲಿ ಅಭಿನ್ನಗಳು. ಅಂದರೆ ಚೇತನವಾದ ವಸ್ತುವಿನ ಸ್ವರೂಪವು ಇದೆ, ಎಂಬಲ್ಲಿ ಚೇತನತ್ವ, ವಸ್ತುತ್ವ, ಸ್ವರೂಪತ್ವ ಅಸ್ತಿತ್ವ ವಿಶೇಷಗಳು ನಿತ್ಯದಲ್ಲಿಯೂ ಅಭಿವ್ಯಕ್ತಗಳಾಗಿವೆ. ಚೇತನಃ ಕರೋತಿ ಭುಂಕ್ತೇ ಗಚ್ಛತಿ, ಎಂಬುವಲ್ಲಿ ಕರಣ ಗಮನ ಭೋಜನವಿಶೇಷಗಳು ಶಕ್ತಿ ರೂಪದಿಂದ ನಿತ್ಯಗಳು, ವ್ಯಕ್ತಿರೂಪದಿಂದ ಹುಟ್ಟುತ್ತವೆ. ಆದಕಾರಣ ವ್ಯಕ್ತ್ಯವ್ಯಕ್ತಿವುಳ್ಳವುಗಳು ಹೀಗೆ ಎರಡು ವಿಧವಾಗಿ ಇರುವ ವಿಶೇಷಗಳು ದ್ರವ್ಯರೂಪವಾದ ವಿಶೇಷಿಯಿಂದ ಅತ್ಯಂತಾಭಿನ್ನಗಳು. ಹಾಗೆಯೇ ಚೂತಫಲಸ್ವರೂಪವಿದೆ, ಎಂಬುವಲ್ಲಿ ಚೂತತ್ವ ಫಲತ್ವ ಮೊದಲಾದ ವಿಶೇಷಗಳು ದ್ರವ್ಯವಿರುವ ಪರ್ಯಂತ ಇರುವವುಗಳಾಗಿ ದ್ರವ್ಯರೂಪವಿಶೇಷಿಯಿಂದ ಅತ್ಯಂತಾಭಿನ್ನಗಳು. ಪೀತಂ ಚೂತಫಲಂ ಎಂಬುವಲ್ಲಿ ಹಸುರುಬಣ್ಣ ಹೋಗಿ ಬೇರೆ ಬಣ್ಣವು ಬರುವುದರಿಂದ ಫಲದಲ್ಲಿರತಕ್ಕ ಪೀತತ್ವಾದಿ ವಿಶೇಷಗಳು ಕದಾಚಿತ್ ಇರತಕ್ಕವುಗಳಾದುದರಿಂದ ದ್ರವ್ಯದಿಂದ (ಚೂತಫಲದಿಂದ) ಭಿನ್ನಾಭಿನ್ನಗಳು. ॥ ೩ ॥

ಪೀ—ಇಂತಹ ವಿಶೇಷವಿದೆ, ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ—

**ತಾ ॥ (೧) ವಿಶೇಷೋಽನುಭವಾದೇವ ಜ್ಞಾಯತೇ ಸರ್ವವಸ್ತುಷು ॥ (೨) ನ ಚಾವಿಶೇಷಿತಂ ಕಿಂಚಿದ್ವಾಚ್ಯಂ ಲಕ್ಷ್ಯಂ ತಥಾಽಮಿತಂ ॥ (೩) ವಿಶಿಷ್ಟಸ್ಯ ಸ್ವತೋಽನ್ಯತ್ವೇ ಸ್ವಸ್ಯಾಮೇಯತ್ವಹೇತುತಃ । ನೈವ ಜ್ಞೇಯಂ ವಿಶಿಷ್ಟಂ ಚ ॥ (೪) ಮಾನಾಭಾವಾತ್ತಥೋ ಭವೇತ್ ॥ (೫) ಸ್ವಯಮಿತ್ಯಪಿ ಹಿ ಸ್ವತ್ವವಿಶೇಷೇಣ ವಿವರ್ಜಿತಂ । ನ ಜ್ಞೇಯಂ ತದ್ವಿಶೇಷ್ಯಂ ಚ ತಥೈವೇತ್ಯನವಸ್ಥಿತಿಃ ॥ ೪ ॥**

ಪೀ ॥ (೧) ಸಮಸ್ತವಸ್ತುಗಳಲ್ಲಿಯೂ ವಿಶೇಷವಿದೆ, ಎಂಬುವುದು ಸಾಕ್ಷ್ಯನುಭವದಿಂದಲೇ ತಿಳಿಯುತ್ತದೆ. (ಬೇರೆ ಪ್ರಮಾಣವನ್ನು ಹುಡುಕಬೇಕಾಗಿಲ್ಲ.) (೨) (ಸರ್ವ ವಸ್ತುಗಳಲ್ಲಿಯೂ ವಿಶೇಷವೆಂಬುವ ಪದಾರ್ಥವು ಅನುಭವಸಿದ್ಧವಾಗಿದೆ, ಎಂಬುವುದನ್ನೇ ಸ್ಪಷ್ಟೀಕರಿಸುತ್ತಾರೆ–) ವಾಚ್ಯಂ=ಶಕ್ತಿವೃತ್ತಿಯಿಂದ ತಿಳಿಯಲ್ಪಡತಕ್ಕದು, ಲಕ್ಷ್ಯಂ=ಲಕ್ಷಣಾವೃತ್ತಿಯಿಂದ ತಿಳಿಯಲ್ಪಡತಕ್ಕದು. ಹೀಗೆ ಶಾಬ್ದಜ್ಞಾನಕ್ಕೆ ವಿಷಯವಾದುದು, ಹಾಗೆಯೇ ಮಿತಂ=ಸಾಕ್ಷಾತ್ಕಾರ ಮತ್ತು ಅನುಮಿತಿಗೆ ವಿಷಯವಾದುದು. ಯಾವದೊಂದು ವಸ್ತುವೂ ಕೂಡ ವಿಶೇಷರಹಿತವಾಗಿ ಅನುಭವಕ್ಕೆ ವಿಷಯವು ಸರ್ವಥಾ ಆಗುವುದೇ ಇಲ್ಲ. (ಮತ್ತೆ ವಿಶೇಷಸಹಿತವಾಗಿಯೇ (ಅಂದರೆ ಧರ್ಮವಿಶಿಷ್ಟವಾಗಿಯೇ) ಶಾಬ್ದಬೋಧಗಾ[illegible] ಅನುಭವವು ಬರುವುದು. ನಿರ್ವಿಶೇಷವಾದ ವಸ್ತುವಿನ ಜ್ಞಾನವು ಸಾಕ್ಷಿಗೆ ಬರುವುದಿಲ್ಲ. (೩) [illegible] ವಲ್ಲಿದ್ದ ಅಸ್ತಿತ್ವ ಚೂತತ್ವ ಮೊದಲಾದ ವಿಶೇಷಗಳಿಂದ ಕೂಡಿದ ವಿಶಿಷ್ಟಾಕಾರವೆಲ್ಲವೂ ವಿಶೇಷ್ಯಸ್ವರೂಪ ದಿಂದ ಬೇರೆಯಾದ ಪ್ರಯುಕ್ತ ಆ ವಿಶೇಷ್ಯಸ್ವರೂಪದಲ್ಲಿ ವಿಶೇಷವಿಲ್ಲದಿರುವುದರಿಂದ ಸಮಸ್ತವಸ್ತುಗಳಲ್ಲಿಯೂ ವಿಶೇಷವುಂಟೆಂದು ಹೇಳುವುದು ಹೇಗೆ ಕೂಡುತ್ತದೆ? ಎಂದರೆ—) (ವಿಶಿಷ್ಟವು ವಿಶೇಷ್ಯಸ್ವರೂಪ

ಕ್ಷ್ಯಕ ಬೇರೆ ಎಂದಾದರೆ – ಇದು ಕೂಡಬಹುದು. (ವಿಶಿಷ್ಟವು ವಿಶೇಷ್ಯಸ್ವರೂಪದಿಂದ ಬೇರೆಯಲ್ಲ.) ವಿಶಿಷ್ಟವು ವಿಶೇಷ್ಯಸ್ವರೂಪದಿಂದ ಬೇರೆಯೆಂದಾದರೆ ವಿಶಿಷ್ಟಸ್ವರೂಪವು ತಿಳಿಯಲ್ಪಡದೆ ಹೋಗುವುದು. (ವಿಶೇಷವಿದ್ದುದರಲ್ಲಿಯೇ ಪ್ರಮಾಣವು ಪ್ರವೃತ್ತವಾಗುವುದು) ವಿಶೇಷ್ಯಜ್ಞಾನವಿಲ್ಲವಾದರೆ ವಿಶಿಷ್ಟವೂ ತಿಳಿಯಲ್ಪಡದೆ ಹೋಗುವುದು. (೪) (ವಿಶೇಷ್ಯಸ್ವರೂಪವು ಪ್ರಮಾಣಕ್ಕೆ ವಿಷಯವಲ್ಲವೆಂದಾದರೆ ಇನ್ನೊಂದು ಬಾಧಕವನ್ನು ಹೇಳುತ್ತಾರೆ–) ಪ್ರಮಾಣಗಳಿಂದಲೇ ವಸ್ತುವು ಸಿದ್ಧಿಸಬೇಕಾದುದರಿಂದ ವಿಶೇಷ್ಯಸ್ವರೂಪವು ಪ್ರಮಾಣದಿಂದ ತಿಳಿಯಲ್ಪಡದೆ ಹೋದರೆ ಅಪ್ರಾಮಾಣಿಕವಾದ ಶಶವಿಷಾಣಾದಿಗಳಂತೆ ಆ ವಸ್ತುವೇ ಇಲ್ಲವೆಂದೇ ಆಗಬೇಕಾಗುವುದು. (೫) (ಹೇತ್ವಂತರದಿಂದಲೂ ವಿಶೇಷ್ಯಸ್ವರೂಪವು ನಿರ್ವಿಶೇಷವಲ್ಲವೆನ್ನುತ್ತಾರೆ–) ವಿಶೇಷ್ಯಸ್ವರೂಪದಲ್ಲಿ ವಿಶೇಷ್ಯಸ್ವರೂಪತ್ವರೂಪ ವಿಶೇಷವನ್ನಾದರೂ ಅಂಗೀಕರಿಸಬೇಕು. ವಿಶೇಷ್ಯದಲ್ಲಿ ವಿಶೇಷ್ಯಸ್ವರೂಪತ್ವರೂಪ ವಿಶೇಷವಿಲ್ಲವಾದರೆ ಆ ವಿಶೇಷ್ಯವನ್ನು ವಿಶೇಷ್ಯಸ್ವರೂಪವೆಂದು ತಿಳಿಯಲಿಕ್ಕೂ ವ್ಯವಹರಿಸಲಿಕ್ಕೂ ಅಶಕ್ಯವೇ ಆಗುವುದು. ಆದಕಾರಣ ವಿಶೇಷ್ಯಸ್ವರೂಪವೂ ನಿರ್ವಿಶೇಷವಲ್ಲ. (ಹಾಗಾದರೆ ಯಾವುದು ವಿಶೇಷ್ಯಸ್ವರೂಪತ್ವರೂಪ ವಿಶೇಷದಿಂದ ಕೂಡಿಯದೋ, ಅಂತಹ ವಿಶಿಷ್ಟದಲ್ಲಿ ಯಾವುದು ವಿಶೇಷ್ಯಸ್ವರೂಪವಿದೆಯೋ ಅದು ವಿಶಿಷ್ಟದಿಂದ ಭಿನ್ನವೇ. ಆದಕಾರಣ ಅದು ನಿರ್ವಿಶೇಷವೇ, ಎಂದರೆ –) ಆ ವಿಶಿಷ್ಟದಲ್ಲಿ ಯಾವುದು ವಿಶೇಷ್ಯಸ್ವರೂಪವೋ ಅದು ವಿಶಿಷ್ಟದಿಂದ ಬೇರೆಯಾದಾಗ್ಯೂ ವಿಶೇಷ್ಯಸ್ವರೂಪತ್ವರೂಪ ವಿಶೇಷದಿಂದ ಯುಕ್ತವೇ ಆಗಿದೆ. ಆದಕಾರಣ ನಿರ್ವಿಶೇಷವಲ್ಲ. ಆ ವಿಶಿಷ್ಟದಲ್ಲಿಯೂ ಯಾವುದು ವಿಶೇಷ್ಯಸ್ವರೂಪವೋ ಅದೂ ವಿಶಿಷ್ಟದಿಂದ ಭಿನ್ನವೇ. ಆದಕಾರಣ ಅದು ನಿರ್ವಿಶೇಷವು ಎಂದಂಗೀಕರಿಸಿದರೆ ಅನವಸ್ಥಾದೋಷವು ಬರುತ್ತದೆ. || ೪ ||

ಟೀ—ವಿಶಿಷ್ಟಕ್ಕೂ ವಿಶೇಷ್ಯಸ್ವರೂಪಕ್ಕೂ ಭೇದವನ್ನು ಅಂಗೀಕರಿಸಿದರೆ ಹೇಗೆ ಅನವಸ್ಥಾದೋಷವು ಹೇಳಲ್ಪಡುತ್ತದೋ, ಹಾಗೆಯೇ ಅವುಗಳಿಗೆ ಅಭೇದವನ್ನು ಅಂಗೀಕರಿಸಿದರೂ ಅನವಸ್ಥಾದೋಷವು ಬರುವುದು. ಆ ಪಕ್ಷವನ್ನು ಬಿಡಬೇಕಾಗುವುದು. ವಿಶಿಷ್ಟಕ್ಕೂ ವಿಶೇಷ್ಯಸ್ವರೂಪಕ್ಕೂ ಅಭೇದವಿದ್ದರೆ (ಅವು ಒಂದೇ ಆದರೆ) ವಿಶೇಷ್ಯಸ್ವರೂಪವನ್ನು ತಿಳಿದರೆ ವಿಶಿಷ್ಟಾಕಾರವೂ ತಿಳಿಯಲ್ಪಡುವುದರಿಂದ ವಿಶೇಷ್ಯಸ್ವರೂಪವನ್ನು ಅನುವಾದಮಾಡಿಕೊಂಡು ವಿಶಿಷ್ಟಾಕಾರ ಪ್ರತೀತಿಯೇ ಕೂಡದೆ ಹೋಗುವುದು, ಎಂದರೆ—

**ಮೂ || (೧) ಅಭೇದೇ ನ ವಿರೋಧೋಽಸ್ತಿ ಜ್ಞಾತಾಜ್ಞಾತಂ ಯತೋಽಖಿಲಮ್ | ತದೇವ ಜ್ಞಾತರೂಪೇಣ ಜ್ಞಾತಮಜ್ಞಾತಮನ್ಯಥಾ || (೨) ಅಭಿನ್ನಸ್ಯ ವಿಶಿಷ್ಟತ್ವಾನ್ನ ದೋಷದ್ವಯಮಪ್ಯತಃ || (೩) ವಿಶಿಷ್ಟಾನುಭವಾಚ್ಚೈವ ವಿಶೇಷಾನುಭವಾದಪಿ | ತಜ್ಜ್ಞಾನಾನುಭವಾಚ್ಚೈವ ನ ದೋಷದ್ವಯಸಂಭವಃ || (೪) ಭೇದಾಭೇದೌ ಚ ತೌ (ತೇ) ನೈವ (೫) ಕರ್ತೃಭೋಕ್ತೃವಿಶೇಷಣೇ | ಮದನ್ಯ ಇತ್ಯನುಭವೋ ಯತೋ ನೈವಾಸ್ತಿ ಕಸ್ಯಚಿತ್ || || ೫ ||**

ಅ || (೧) ವಿಶಿಷ್ಟಾಕಾರಕ್ಕೆ ವಿಶೇಷ್ಯಸ್ವರೂಪದಿಂದ ಅಭೇದವನ್ನು ಹೇಳಿದರೆ ವಿಶೇಷಜ್ಞಾನವು ಒಡನೆ ವಿಶಿಷ್ಟಾಕಾರಜ್ಞಾನವೂ ಬರುವುದರಿಂದ ವಿಶೇಷ್ಯಸ್ವರೂಪವನ್ನು ಅನುವಾದಮಾಡಿಕೊಂಡು ವಿಶಿಷ್ಟಾಕಾರ ಪ್ರತೀತಿಯು ಕೂಡಲಾರದೆಂಬುವ ಬಾಧಕವೂ ಇಲ್ಲ. ಏಕೆಂದರೆ ಒಂದೇ ವಸ್ತುವು ಒಂದು ರೂಪದಿಂದ ಜ್ಞಾತವಾದರೂ ರೂಪಾಂತರದಿಂದ ಅಜ್ಞಾತವಾಗಿಯೂ ಇರಬಹುದು. ಆದಕಾರಣ ಎಲ್ಲಾ ವಸ್ತುಗಳಿಗೆ ಪ್ರತ್ಯೇಕವಾಗಿ ಜ್ಞಾತತ್ವ ಅಜ್ಞಾತತ್ವಗಳು ಕೂಡುವುದರಿಂದ ಹಿಂದೆ ಹೇಳಿದ ಗ್ರಾಹ್ಯಾನುಪಪತ್ತಿಯು ಇಲ್ಲ. (೨) ವಿಶಿಷ್ಟವು ವಿಶೇಷ್ಯದಿಂದ ಅಭಿನ್ನವಾಗಿರುವುದರಿಂದ ಭೇದಪಕ್ಷದಲ್ಲಿಯ ಅನವಸ್ಥಾದೋಷವೂ

ಮತ್ತು ಒಂದೇ ವಸ್ತುವಿಗೆ ಸ್ವರೂಪಭೇದದಿಂದ ಜ್ಞಾತತ್ವ ಅಜ್ಞಾತತ್ವವೂ ಕೂಡುವುದರಿಂದ ಅನವಸ್ಥಾ, ಪ್ರತೀತ್ಯನುಪಪತ್ತಿ ಎಂಬುವ ಎರಡು ದೋಷಗಳೂ ಬರುವುದಿಲ್ಲ (೩) (ವಿಶಿಷ್ಟಕ್ಕೂ ವಿಶೇಷ್ಯಕ್ಕೂ ಅತ್ಯಂತ ಭೇದವಿದ್ದರೆ ಧರ್ಮಭೇದದಿಂದಲೂ ಜ್ಞಾತತ್ವ ಅಜ್ಞಾತತ್ವಗಳು ಹೇಗೆ ಕೂಡುತ್ತವೆ? ಎಂಬುವ ಆಕ್ಷೇಪವನ್ನು ಪರಿಹರಿಸಿಕೊಂಡು ಹಿಂದೆ ಹೇಳಿದುದನ್ನು ವಿವರಿಸುತ್ತಾರೆ-) ವಿಶಿಷ್ಟಕ್ಕೆ ವಿಶೇಷ್ಯದಿಂದ ಅಭೇದಾನುಭವವಿದ್ದುದರಿಂದ ಭೇದಪರಂಪರಾರೂಪವಾದ ಅನವಸ್ಥಾದೋಷವು ಇಲ್ಲ. ವಿಶಿಷ್ಟ ವಿಶೇಷ್ಯಗಳಿಗೆ ಅಭೇದವಿದ್ದರೂ ಅನುಭವಸಿದ್ಧವಾದ ವಿಶೇಷಬಲದಿಂದ ಜ್ಞಾತತ್ವ ಅಜ್ಞಾತತ್ವಗಳೂ ಅನುಭವಸಿದ್ಧವಾಗಿರುವುದರಿಂದ ಪ್ರತೀತಿಯು ಕೂಡುವುದಿಲ್ಲವೆಂಬುವ ದೋಷವೂ ಕೂಡ ಇಲ್ಲ. (೪) (ಹಾಗಾದರೆ ವಿಶಿಷ್ಟ ವಿಶೇಷ್ಯಗಳಿಗೆ ಭೇದಾಭೇದಗಳೆಂದು ಹೇಳಿದರೆ-ಭೇದದಿಂದ ಪ್ರತೀತಿಯು ಕೂಡುವುದಿಲ್ಲವೆಂಬುವ ದೋಷವು ಇಲ್ಲವೆಂದಾಗುತ್ತದೆ. ಅಭೇದದಿಂದ ಅನವಸ್ಥಾದೋಷವನ್ನು ಪರಿಹಾರಮಾಡಲಿಕ್ಕೆ ಬರುತ್ತದೆ. ಆದ್ದರಿಂದ ವಿಶಿಷ್ಟ ವಿಶೇಷ್ಯಗಳಿಗೆ ಭೇದಾಭೇದವೇ ಎಂದರೆ ಅವುಗಳಿಗೆ ಕ್ವಚಿತ್ ಭೇದಾಭೇದಗಳನ್ನು ಹೇಳುವುದೋ ಎಲ್ಲಾ ಕಡೆಗಳಲ್ಲಿಯೂ ಭೇದಾಭೇದಗಳನ್ನು ಹೇಳುವುದೋ, ವಿಶಿಷ್ಟಾಕಾರವು ಅಯಾವದ್ದ್ರವ್ಯಭಾವಿಯಾದ ಸ್ಥಳದಲ್ಲಿ ಭೇದಾಭೇದಗಳನ್ನು ನಾವೂ ಒಪ್ಪುತ್ತೇವೆ. ಯಾವದ್ದ್ರವ್ಯಭಾವಿಯಾದ ವಿಶಿಷ್ಟಾಕಾರಕ್ಕೆ ವಿಶೇಷ್ಯದಿಂದ ಭೇದಾಭೇದಗಳನ್ನು ಅಂಗೀಕರಿಸಲಿಕ್ಕೆ ಬರುವುದಿಲ್ಲವೆನ್ನುತ್ತಾರೆ-) ಪರರು ಅಂಗೀಕರಿಸಿರುವ ಭೇದಾಭೇದಗಳನ್ನು ವಿಶಿಷ್ಟವಿಶೇಷ್ಯಗಳಿಗೆ ಸರ್ವತ್ರ ಅಂಗೀಕರಿಸಲಿಕ್ಕೆ ಬರುವುದಿಲ್ಲ. (೫) (ಏಕೆಂದರೆ) ಕರ್ತೃತ್ವ ಭೋಕ್ತೃತ್ವ ಮೊದಲಾದ, ದ್ರವ್ಯವಿರುವಪರ್ಯಂತವಿರುವ ವಿಶೇಷಣಗಳಿಂದ ವಿಶಿಷ್ಟವಿಷಯದಲ್ಲಿ ಕರ್ತೃತ್ವವಿಶಿಷ್ಟನೂ ಭೋಕ್ತೃತ್ವವಿಶಿಷ್ಟನೂ, ವಿಶೇಷ್ಯಭೂತನಾದವನಗಿಂತ ಭಿನ್ನನು, ಅಭಿನ್ನನು, ಎಂದು ಭೇದಾಭೇದಾನುಭವವು ಯಾರಿಗೂ ಇಲ್ಲವೇ ಇಲ್ಲ. (ಆದುದರಿಂದ ಅಂತಹ ಯಾವದ್ದ್ರವ್ಯಭಾವಿಯಾದ ವಿಶಿಷ್ಟಸ್ಥಳದಲ್ಲಿ ಹಿಂದೆ ಹೇಳಿದ ಪ್ರಕಾರ ಭೇದಾಭೇದಾನುಭವವು ಇಲ್ಲದಿರುವ ಪ್ರಯುಕ್ತ ಭೇದಾಭೇದಗಳನ್ನು ಅಂಗೀಕರಿಸಲಿಕ್ಕೆ ಬರುವುದಿಲ್ಲ.) ॥ ೫ ॥

ಟೀ—ಚೇತನದಲ್ಲಿ ನಿತ್ಯದಲ್ಲಿಯೂ ಅಭಿವ್ಯಕ್ತಗಳಾದ ಸ್ವರೂಪತ್ವ ಮೊದಲಾದ ಧರ್ಮಗಳಿಗೆ ಅಭೇದವನ್ನು ಸಾಧಿಸುತ್ತಾರೆ—

**ಟಾ ॥ (೧) ಭೇದೋ ವಿಶೇಷಣಸ್ಯಾಪಿ ನ ॥ (೨) ಅಂತರಸ್ಯ ಕ್ವಚಿದ್ಭವೇತ್ ॥ (೩) ಶುದ್ಧಸ್ವರೂಪ ಇತ್ಯಾದಾವಭೇದಸ್ಯೈವ ದರ್ಶನಾತ್ ॥ (೪) ಅಪೃಥಗ್ದ್ರವ್ಯಸಿದ್ಧಿನಿಯಮಾದ್ವಿಲಕ್ಷಣಾದಿಕಸ್ಯ ಚ । ಐಕ್ಯಂ ॥ ೬ ॥**

ಅ ॥ (೧) ಚೇತನದಲ್ಲಿ ವಿಶೇಷಣವಾದ, ನಿತ್ಯದಲ್ಲಿಯೂ ಅಭಿವ್ಯಕ್ತವಾಗಿರುವ ಸ್ವರೂಪತ್ವಾದಿರೂಪವಾದ ಧರ್ಮಕ್ಕೆ ವಿಶೇಷ್ಯಭೂತನಾದ ಚೇತನದಿಂದ ಭೇದವಿಲ್ಲ (೨) (ಚೇತನವಿಶೇಷಣಕ್ಕೆ ವಿಶೇಷ್ಯದಿಂದ ಭೇದವಿಲ್ಲ, ಎಂದೇ ಸಾಕಾಗುವುದರಿಂದ ಅಂತರಸ್ಯ ಎಂಬುವುದು ವ್ಯರ್ಥವು. ಮತ್ತು ಶುದ್ಧಸ್ವರೂಪತ್ವಾದಿಗಳು ಒಳಗೂ ಹೊರಗೂ ವ್ಯಾಪಿಸಿಕೊಂಡು ಚೇತನದಲ್ಲಿದ್ದ ಪ್ರಯುಕ್ತ ಚೇತನದಲ್ಲಿ ಅಂತರಗಳಾದವು ಹೇಗೆ ಆಗುವುದು ಎಂದರೆ—) (ವಸ್ತ್ರದಲ್ಲಿ ಮಣ್ಣು ಹಿಡಿದರೆ ಕೃಷ್ಣಂ ವಸ್ತ್ರಂ=ವಸ್ತ್ರವು ಕಪ್ಪಾಗಿದೆ. ಎಂದು ಪರಂಪರಾ ಸಂಬಂಧದಿಂದ ಹೇಗೆ ಬಟ್ಟೆಯಲ್ಲಿ ಕಾರ್ಷ್ಣ್ಯವಿದೆ, ಎಂದು ಹೇಳಲ್ಪಡುತ್ತದೋ, ಕಾರ್ಷ್ಣ್ಯವು ಬಟ್ಟೆಯಲ್ಲಿರುವುದಿಲ್ಲ. ಹೀಗೆಯೇ ಕೃಶೋಽಹಂ ಎಂಬುವಲ್ಲಿ ದೇಹಸಂಬಂಧಿಯಾದ ಕಾರ್ಶ್ಯವು ಆತ್ಮನಲ್ಲಿ ಹೇಳಲ್ಪಡುತ್ತದೆ. ಆ ಕಾರ್ಶ್ಯವು ಚೇತನದಲ್ಲಿರುವುದಿಲ್ಲ. ತಥಾ ಚ ಪರಂಪರಾಸಂಬಂಧದಿಂದ ಚೇತನದಲ್ಲಿ ಆರೋಪಿಸಲ್ಪಡುವ ಕಾರ್ಶ್ಯಾದಿಗಳನ್ನು ಬಿಟ್ಟು) ಚೇತನದಲ್ಲಿರತಕ್ಕ ಮನಃಪರಿಣಾಮರೂಪಗಳಾ

ಜ್ಞಾನಾದಿಗಳಿಗೆ ಚೇತನದಿಂದ ಭೇದವಿದೆ (ಚೇತನನಿಗೆ ಆ ಜ್ಞಾನಾದಿಗಳಿಂದ ಅಭೇದವಿಲ್ಲ.) (೩) (ಯಾವ ವಸ್ತುಗಳಿಗೆ ಯಾವುದರಿಂದ ಅಭೇದದರ್ಶನವೆಂದರೆ—) ಚೇತನಃ ಶುದ್ಧಸ್ವರೂಪಃ ಮುಕ್ತಃ ಇತ್ಯಾದಿ ಪ್ರಯೋಗಗಳಿಂದ ಸಿದ್ಧವಾದ ಶುದ್ಧಸ್ವರೂಪತ್ವ ಚೇತನತ್ವ ಮೊದಲಾದ ಧರ್ಮಗಳಿಗೆ ವಿಶೇಷ್ಯಭೂತನಾದ ಚೇತನದಿಂದ ಅಭೇದವೇ ಅನುಭವಸಿದ್ಧವಾಗಿರುವುದರಿಂದ ಆ ನಿತ್ಯಾಭಿವ್ಯಕ್ತಗಳಾದ ಶುದ್ಧತ್ವ, ಸ್ವರೂಪತ್ವ, ಚೇತನತ್ವ ಮೊದಲಾದ ಧರ್ಮಗಳಿಗೆ ವಿಶೇಷ್ಯಭೂತ ಚೇತನದಿಂದ ಅತ್ಯಂತಾಭೇದವನ್ನೇ ಅಂಗೀಕರಿಸಬೇಕು. (೪) (ಆವಿರ್ಭಾವತಿರೋಭಾವವುಳ್ಳ ಕರ್ತೃತ್ವ ಮೊದಲಾದ ವಿಶೇಷಗಳಿಗೆ ವಿಶೇಷಿಸ್ವೈತನ್ಯದಿಂದ ಐಕ್ಯವೆಂದು ಪೂರ್ವದಲ್ಲಿ ಅರ್ಥಾತ್ ಸಿದ್ಧವಾಗಿದೆ. ಈಗ ಅಂತಹ ಜ್ಞಾನಾದಿಗುಣಗಳನ್ನೇ ವಾರು ಗುಣಗಳೆಂದು ಅಂಗೀಕರಿಸಿರುವುದರಿಂದ ಅವುಗಳಿಗೂ ವಿಶೇಷ್ಯದಿಂದ ಐಕ್ಯವನ್ನು ಸಾಧಿಸುತ್ತಾರೆ—) ಆವಿರ್ಭಾವ ತಿರೋಭಾವವುಳ್ಳ ಕರ್ತೃತ್ವ ಬಲ ಜ್ಞಾನ ಮೊದಲಾದ ಸ್ವರೂಪಭೂತ ಧರ್ಮಗಳಿಗೆ ನಿಯಮದಿಂದ ಅಭೇದಾನುಭವವೇ ಇರುವುದರಿಂದ ಆ ಧರ್ಮಗಳಿಗೆ ಚೇತನದಿಂದ ಅತ್ಯಂತಾಭೇದವನ್ನೇ ಒಪ್ಪಬೇಕು. ॥ ೬ ॥

ಟೀ—ಚೇತನೋಽಹಂ ಶುದ್ಧಸ್ವರೂಪಃ, ಕರ್ತಾ, ಭೋಕ್ತಾ, ಇತ್ಯಾದಿ ಸಾಮಾನಾಧಿಕರಣ್ಯಾನುಭವವಿದ್ದುದರಿಂದ ಚೇತನತ್ವ, ಶುದ್ಧತ್ವ, ಮೊದಲಾದ ಧರ್ಮಗಳಿಗೆ ಚೇತನದಿಂದ ಅತ್ಯಂತಾಭೇದವನ್ನು ಅಂಗೀಕಾರಮಾಡಿದರೆ ಕೃಶೋಽಹಂ ಸ್ಥೂಲೋಽಹಂ ಇತ್ಯಾದಿ ಸಾಮಾನಾಧಿಕರಣ್ಯಾನುಭವವಿದ್ದುದರಿಂದ ದೇಹೋಪಾಧಿಕಗಳಾದ ಕಾರ್ಶ್ಯಾದಿ ಧರ್ಮಗಳಿಗೂ ಚೇತನದಿಂದ ಐಕ್ಯವು ಬರಬೇಕಾಗುವುದು ಎಂದರೆ—

ಶ್ಲೋ ॥ (೧) ಬಾಹ್ಯವಿಶೇಷಾಣಾಂ ಪೃಥಗ್ದೃಷ್ಟ್ಯೈವ ತನ್ನ ತು ॥ (೨) ವಿಶೇಷಹೇತ್ವಭಾವೇಽಪಿ ದ್ವೈವಿಧ್ಯಂ ಕಲ್ಪ್ಯತೇ ಯದಿ । ಕಲ್ಪನಾಗೌರವಾದ್ಯಾಸ್ತು ದೋಷಾಸ್ತತ್ರಾತಿಸಂಗದಾಃ ॥ (೩) ನೈಕತ್ವಂ ನಾ(ನಾಽ)ಪಿ ನಾನಾತ್ವಂ ನಿಯಮಾದಸ್ಯ ಚೇತನೇ । ಭೇದಾಭೇದಾವನುಭವಾದತಸ್ತತ್ರಾನ್ಯಥಾ ಗತೇಃ ॥ (೪) ಏಕೋಽಹಮ(ಮದ)ನ್ಯತೋಽನ್ಯಶ್ಚೇತ್ಯೇವಮೇವ ವ್ಯವಸ್ಥಿತೌ । ಭೇದಾಭೇದೌ ಚೇತನೇಷು ತಸ್ಮಾನ್ನೈಕಪ್ರಕಾರತಾ ॥ ೭ ॥

ಅ ॥ (೧) ಬಾಹ್ಯವಿಶೇಷಗಳು ಪ್ರತ್ಯೇಕವಾಗಿ ಕಾಣುವುದರಿಂದಲೇ ಅವುಗಳಿಗೆ ಐಕ್ಯವಿಲ್ಲ (ಅಂದರೆ ನಾವು ಕೇವಲ ಸಾಮಾನಾಧಿಕರಣ್ಯಾನುಭವವೇ ಅಭೇದಸಾಧಕವೆಂದು ಹೇಳುವುದಿಲ್ಲ ಮತ್ತೆ ಭೇದಪ್ರತೀತಿಯಿಲ್ಲದಿದ್ದು ಸಾಮಾನಾಧಿಕರಣ್ಯಾನುಭವವೇ ಅಭೇದಸಾಧಕವೆಂದು ಹೇಳಿದ್ದು. ದೇಹೋಪಾಧಿಕಗಳಾದ ಸ್ಥೌಲ್ಯ ಕಾರ್ಶ್ಯಾದಿಧರ್ಮಗಳಿಗೆ ಚೇತನದಿಂದ ಭೇದಾನುಭವವಿದ್ದುದರಿಂದ ಕೇವಲ ಸಾಮಾನಾಧಿಕರಣ್ಯ ವ್ಯವಹಾರಮಾತ್ರದಿಂದ ಆ ಧರ್ಮಗಳಿಗೆ ಅಭೇದವನ್ನು ಹೇಳಲಿಕ್ಕೆ ಬರುವುದಿಲ್ಲ.) (೨) (ಶುದ್ಧಸ್ವರೂಪತ್ವ ಮೊದಲಾದ ನಿತ್ಯಾಭಿವ್ಯಕ್ತಗಳಾದ ವಿಶೇಷಗಳಿಗೆ ಮಾತ್ರ ಚೇತನದಿಂದ ಐಕ್ಯವು ಹೊರಲ್ಲಿರುವ ಕರ್ತೃತ್ವ ಮೊದಲಾದ ಧರ್ಮಗಳಿಗೆ ಚೈತನ್ಯದಿಂದ ಐಕ್ಯವಿಲ್ಲ ಎಂದು ಕೆಲವರು ಹೇಳುವ ಪಕ್ಷ ನಿರಾಕರಿಸುತ್ತಾರೆ.) ಶುದ್ಧಸ್ವರೂಪತ್ವ ಮೊದಲಾದ ವಿಶೇಷಗಳಿಗೂ ಕರ್ತೃತ್ವಾದಿವಿಶೇಷಗಳಿಗೂ ವಿಶೇಷನಿಮಿತ್ತವಿಲ್ಲದಿದ್ದರೂ ಶುದ್ಧಸ್ವರೂಪತ್ವಾದಿಗಳಿಗೇನೇ ಚೈತನ್ಯದಿಂದ ಅಭೇದವು, ಕರ್ತೃತ್ವಾದಿಗಳಿಗೆ ಚೈತನ್ಯದಿಂದ ಐಕ್ಯವಿಲ್ಲ. ಮತ್ತೆ ಭೇದವು, ಎಂದು ಎರಡು ರೀತಿಯಾಗಿ ಕಲ್ಪಿಸಿದರೆ ಅಪ್ರಮಾಣಿಕ ಬಹುಪ್ರಕಾರಕ ಕಲ್ಪನಾಗೌರವ ಮೊದಲಾದವು ಅಲ್ಲಿ ಸ್ಪಷ್ಟವಾಗಿ ಬರುವವು. (೩) (ಈಗ ಆಯಾವದ್ರವ್ಯ

ಭಾವಿಯಾದ ವಿಶೇಷಕ್ಕೆ ವಿಶೇಷ್ಯದಿಂದ ಹಿಂದೆ ಹೇಳಿದ ಭೇದಾಭೇದಗಳನ್ನು ಸಮರ್ಥಿಸುತ್ತಾರೆ—) ಅಚೇತನದಲ್ಲಿ ನಿಯಮವಾಗಿ ಐಕ್ಯವೂ ಇಲ್ಲ ಭೇದವೂ ಇಲ್ಲ. ಹೀಗೆ ಒಂದೊಂದು ಇಲ್ಲದಿರುವುದರಿಂದಲೂ (ಅಂದರೆ ಕೇವಲ ಭೇದವಾಗಲೀ ಕೇವಲ ಅಭೇದವಾಗಲೀ ಇಲ್ಲದಿರುವುದರಿಂದಲೂ) ಭೇದಾಭೇದಗಳ ಅನುಭವವಿದ್ದುದರಿಂದಲೂ, ಭೇದಾಭೇದಗಳನ್ನು ಒಡಂಬಡದೆ ಬೇರೆ ಗತಿಯು ಇಲ್ಲದಿರುವುದರಿಂದಲೂ ಅಭೇದವಿಲ್ಲ ಭೇದವೂ ಇಲ್ಲ. ಅಂದರೆ ಚೂತಫಲದಲ್ಲಿರುವ ಶ್ಯಾಮತ್ವ ಪೀತತ್ವಾದಿಧರ್ಮಗಳಿಂದ ನಿಯಮದಿಂದ ಅಭೇದವಾಗಲೀ ಭೇದವಾಗಲೀ ಇಲ್ಲ. (ಮತ್ತೆ ಶ್ಯಾಮರೂಪ ಹೋಗಿ ರೂಪಾಂತರ ಬರುವುದರಿಂದ ಭೇದಾಭೇದಗಳ ಅನುಭವವೇ ಇರುವುದರಿಂದ ಭೇದಾಭೇದಗಳನ್ನೇ ಹೇಳಬೇಕು.) (೪) (ಭೇದಾಭೇದಾನುಭವವಿದ್ದುದರಿಂದ ಅಚೇತನದಲ್ಲಿರುವ ಶ್ಯಾಮತ್ವಾದಿ ಕೆಲವು ಧರ್ಮಗಳಿಂದ ಭೇದಾಭೇದಗಳನ್ನು ಹೇಳುವುದಾದರೆ ಚೇತನದಲ್ಲಿಯೂ ಕೂಡ ನಾನು ನನ್ನಿಂದ ಅಭಿನ್ನನು, ಘಟಾದಿಗಳಿಂದ ಭಿನ್ನನು. ಎಂದು ಭೇದಾಭೇದಾನುಭವವು ಇದೆ. ಆದುದರಿಂದ ಅಚೇತನದಲ್ಲಿ ಮಾತ್ರ ಕೆಲವು ಧರ್ಮಗಳಿಂದ ಭೇದಾಭೇದಗಳು ಇವೆ, ಎಂದು ಹೇಳಿದ್ದು ಹೇಗೆಂದರೆ—) (ಅಚೇತನದಲ್ಲಿ ಶ್ಯಾಮತ್ವಾದಿರೂಪವಾದ ಧರ್ಮದಿಂದಲೇ ಭೇದಾಭೇದಾನುಭವವು ಇದೆ. ಹೀಗೆ ಚೇತನದಲ್ಲಿ ಯಾವುದಾದರೂ ಒಂದೇ ಧರ್ಮದಿಂದ ಭೇದಾಭೇದಾನುಭವವು ಇಲ್ಲ. ಮತ್ತೆ) ಚೇತನಕ್ಕೆ ತನ್ನಿಂದ ಅಭೇದಾನುಭವವೂ, ಘಟಾದಿಗಳಿಂದ ಭೇದಾನುಭವವೂ, ಹೀಗೆ ಭಿನ್ನ ಭಿನ್ನ ವಸ್ತುಗಳಿಂದಲೇ ಭೇದಾಭೇದಾನುಭವವು ಇರುವುದು. ಹೀಗೆ ಭೇದಾಭೇದಗಳು ವ್ಯವಸ್ಥಿತಗಳಾಗಿವೆ. ಆದುದರಿಂದ (ಅಂದರೆ ಅಚೇತನಗಳಲ್ಲಿದ್ದ ಅಯಾವದ್ದ್ರವ್ಯಭಾವಿ ಧರ್ಮಗಳಿಂದ ಭೇದಾಭೇದಗಳನ್ನು ಹೇಳಿದಂತೆ ಚೇತನದಲ್ಲಿ ಹೇಳಲಿಕ್ಕೆ ಬಾರದಿರುವುದರಿಂದ) ಚೇತನಕ್ಕೂ ಅಚೇತನಕ್ಕೂ ಏಕತ್ರ ಕಾರಕತ್ವವಿಲ್ಲ. ॥ ೭ ॥

ಟೀ—ಅಚೇತನದಲ್ಲಿ ಭೇದಾಭೇದಗಳು ಅನುಭವಸಿದ್ಧಗಳಾಗಿವೆ, ಎಂಬುವ ವಿಷಯವನ್ನು ಉದಾಹರಣೆಕೊಟ್ಟು ಹೇಳುತ್ತಾರೆ—

ತಾ ॥ (೧) ಪಟಮೀಕ್ಷ್ಯೈವ ಯಜ್ಜ್ಞಾತಂ ಬಹುತ್ವೇಽಪ್ಯೈವ ತತ್ಪುನಃ । ಪಟಾದ್ಯಂ ಜ್ಞಾಯತೇ ಯಸ್ಮಾದ್ಭೇದಾಭೇದೌ ಕುತೋ ನ ತತ್ ॥ (೨) ತಂತುಭ್ಯೋಽನ್ಯಃ ಪಟಃ ಸಾಕ್ಷಾತ್ತಸ್ಯ ದೃಷ್ಟಿಪಥಂ ಗತಃ । ಅನನ್ಯಶ್ಚೇತ್ತಂತುಭಾವೇ ಪಟಾಭಾವಃ ಕುತೋ ಭವೇತ್ ॥ (೩) ನ ಚಾತ್ಮನಿ ವಿಶೇಷೋಽತ್ರ ದೃಷ್ಟಾಂತತ್ವಂ ಗಮಿಷ್ಯತಿ । ಶುದ್ಧೋಽಹಂಪ್ರತ್ಯಯೋ ಯಸ್ಮಾತ್ತತ್ರಾಭೇದಪ್ರದರ್ಶಕಃ ॥ (೪) ಅತ್ರಾವಯವಭೇದೇನ ಸ್ಯಾದೇವ ವ್ಯವಸ್ಥಿತಿಃ ॥ ೮ ॥

ಅ ॥ (೧) ಪಟ ಮೊದಲಾದುದು ಯಾವುದು ಇದೆಯೋ ಆ ಪಟರೂಪದಿಂದ ತಂತುಗಳಿಗೆ ಅಭೇದವೆಂದು ತಿಳಿಯಲ್ಪಡುತ್ತದೆ. ಅಂದರೆ ತಂತುಗಳು ಪಟದಿಂದ ಅಭಿನ್ನಗಳೆಂದು ತಿಳಿಯಲ್ಪಡುತ್ತವೆ. ಅವುಗಳೇ ಪುನಃ ಪರಸ್ಪರವಾಗಿ ಭೇದದಿಂದ ಅನುಭೂತಗಳಾಗುತ್ತವೆ. ಆದಕಾರಣ ಒಂದೊಂದು ತಂತುವಿಗೆ ಪಟದಿಂದ ಭೇದಾಭೇದಗಳು ಏಕೆ ಇಲ್ಲ (ಅಂದರೆ ಆ ಕಡೆ ಈ ಕಡೆ ಹರಡಿಸಿದ ನೂಲುಗಳೇ ಬಟ್ಟೆಯಲ್ಲದೆ ನೂಲುಗಳಿಲ್ಲದೆ ಬರಿ ಬಟ್ಟೆಯೆಂಬ ವಸ್ತು ಇಲ್ಲವಷ್ಟೆ. ಆ ನೂಲುಗಳ ಸಮುದಾಯರೂಪವಾದ ಬಟ್ಟೆಯಿಂದ ನೂಲುಗಳಿಗೆ ಅಭೇದವೂ, ಪರಸ್ಪರವಾಗಿ ನೂಲುಗಳಿಗೆ ಭೇದವೂ ಅನುಭವಸಿದ್ಧವಾದುದರಿಂದ ಒಂದೊಂದು ನೂಲುಗಳಿಂದ ಬಟ್ಟೆಗೆ ಭೇದಾಭೇದಗಳು ಅನುಭವಸಿದ್ಧವಾಗಿವೆ. (ಒಂದೊಂದು ನೂಲಿನಿಗೆ ಬಟ್ಟೆಯಿಂದ ಅತ್ಯಂತಾಭೇದವೇನು ಇಟ್ಟುಕೊಂಡರೆ- ಪರಸ್ಪರ ತಂತುಗಳಿಗೆ ಭೇದವಿದೆ ಎಂಬು-

ಅನುಭವವು ಕೊಡಲಾರದು ) (೨) ನೆಯಿದ ನೂಲುಗಳೇ ಬಟ್ಟೆಯು. ಅಂತಹ ನೂಲುಗಳಿಂದ ಬೇರೆಯಾಗಿ ಬರಿ ಬಟ್ಟೆಯು ಯಾರಿಗೆ ದೃಗ್ಗೋಚರವಾಗುವುದು, (ಯಾರಿಗೂ ಕಾಣಲಾರದು.) ನೂಲುಗಳಿಂದ ಬಟ್ಟೆಯು ಅಭಿನ್ನವೆಂದಾದರೆ (ನೂಲೇ ಬಟ್ಟೆಯು ಎಂದಾದರೆ) ಒಂದೊಂದು ತಂತುವಿನಲ್ಲಿ ಪಟಾಭಾವವು ಹೇಗೆ ಆಗುವುದು? (ಅಂದರೆ ಪರಸ್ಪರ ಸಂಯೋಗರೂಪವಾದ ಅವಸ್ಥಾವಿಶೇಷವನ್ನು ಹೊಂದಿದ ನೂಲುಗಳ ಸಮುದಾಯದಿಂದ ವ್ಯತಿರಿಕ್ತವಾಗಿ ಬರಿಬಟ್ಟೆಯು ಯಾರಿಗೂ ಅನುಭವಸಿದ್ಧವಾಗಲಿಲ್ಲ. ಸಂಯೋಗರೂಪ ಅವಸ್ಥಾವಿಶೇಷವನ್ನು ಹೊಂದದಿದ್ದ ಬರಿನೂಲಿನಿಂದ ಬಟ್ಟೆಗೆ ಅಭೇದವಿಲ್ಲ. ಅದರಿಂದ ಅಭೇದವನ್ನು ಹೇಳಿದರೆ ಕೇವಲ ತಂತುರೂಪದಿಂದಲೇ ನೂಲು ಇರುವ ಕಾಲದಲ್ಲಿ ಬಟ್ಟೆಯಿಲ್ಲವೆಂದು ಹೇಗೆ ಹೇಳುವೆವು. ಅಂದರೆ ಆವಾಗಲೂ ಬರಿ ನೂಲನ್ನು ಬಟ್ಟೆಯೆಂದೇ ಹೇಳಬೇಕಾದೀತು. ಆದಕಾರಣ ನೇಯ್ದ ನೂಲುಗಳ ಸಮುದಾಯವೇ ಬಟ್ಟೆಯು. ಒಂದೊಂದು ನೂಲನ್ನು ಬಟ್ಟೆಯೆಂದು ಹೇಳಿಕೆ ಆಗುವುದಿಲ್ಲ ಆದುದರಿಂದ ಇಂತಹ ಸ್ಥಳದಲ್ಲಿ ಭೇದಾಭೇದಗಳು ಸರ್ವರಿಗೂ ಅನುಭವಸಿದ್ಧವಾಗಿವೆ) (೩) (ಆತ್ಮನಲ್ಲಿರುವ ಕರ್ತೃತ್ವಾದಿ ವಿಶೇಷಗಳಿಗೆ ಬಹುತ್ವವಿದ್ದರೂ ಒಬ್ಬ ಆತ್ಮನಿಂದ ಹೇಗೆ ಅಭೇದವಿದೆಯೋ, ಹಾಗೆಯೇ ಬಹು ನೂಲುಗಳಿಗೆ ಬಟ್ಟೆಯಿಂದ ಅತ್ಯಂತಾಭೇದವು ಏಕೆ ಇರಲಾರದೆಂದರೆ—) ಆತ್ಮನಲ್ಲಿರುವ ಕರ್ತೃತ್ವಾದಿ ಧರ್ಮವಿಶೇಷಗಳು ನೂಲುಗಳಿಗೆ ಬಟ್ಟೆಯಿಂದ ಅತ್ಯಂತಾಭೇದವನ್ನು ಹೇಳಬೇಕೆಂಬುವಲ್ಲಿ ದೃಷ್ಟಾಂತವಾಗಲಾರದು. ಆತ್ಮನಲ್ಲಿರುವ ಕರ್ತೃತ್ವಾದಿ ವಿಶೇಷದಲ್ಲಿ ಅಬಾಧಿತವಾದ ಅಹಂ ಕರ್ತಾ ಇತ್ಯಾದಿ ಪ್ರತ್ಯಯವು ಅವುಗಳಿಗೆ ಅಭೇದವನ್ನು ತೋರಿಸುವಂಥಾದ್ದು ಇದೆ. ಇಲ್ಲಿ ಅಂತಹುದು ಇಲ್ಲ (ಅಂದರೆ ಅಲ್ಲಿ ಕರ್ತಾಽಹಂ ಭೋಕ್ತಾಽಹಂ ಎಂದು ಕರ್ತೃತ್ವಭೋಕ್ತೃತ್ವಾದಿಗಳಿಗೆ ಅತ್ಯಂತಾಭೇದವು ಅನುಭವಸಿದ್ಧವಾದ ಹಾಗೆ ಇಲ್ಲಿ ಕೇವಲ ನೂಲುಗಳಿಂದ ಬಟ್ಟೆಗೆ ಅತ್ಯಂತಾಭೇದವು ಅನುಭವಸಿದ್ಧವಾಗಲಿಲ್ಲ ಆದಕಾರಣ ನೂಲು ಬಟ್ಟೆಗಳಿಗೆ ಭೇದಾಭೇದಗಳನ್ನು ಹೇಳಬೇಕು (೪) (ಹಾಗಾದರೆ ಇಲ್ಲಿ ಅಚೇತನವಾದ ಬಟ್ಟೆ ಮೊದಲಾದ ಅಂತ್ಯಾವಯವಿಯಲ್ಲಿಯೇ ಅವಯವಾವಯವಿಗಳಿಗೆ ಭೇದಾಭೇದಗಳೋ ಎಂದರೆ ಅಲ್ಲವೆನ್ನುತ್ತಾರೆ —) ಅಚೇತನವಾದ ಬಟ್ಟೆಗೂ ಬಟ್ಟೆಯ ಅವಯವಗಳಿಗೂ ಭೇದಾಭೇದಗಳು. ಆ ಬಟ್ಟೆಯ ಅವಯವಕ್ಕೂ, ಆ ಅವಯವದ ಅವಯವಕ್ಕೂ ಭೇದಾಭೇದಗಳು ಹೀಗೆ ಸರ್ವತ್ರ ಭೇದಾಭೇದಗಳೇ. ಹೀಗೆ ಅವಯವ ಪರಂಪರೆಗೂ ಭೇದಾಭೇದಪರಂಪರೆಗೂ ಪರ್ಯವಸಾನವೇ ಇಲ್ಲ || ೮ ||

ಟೀ ಹಾಗಾದರೆ ಪರಮಾಣುವಿಗೆ ಅವಯವಗಳು ಇಲ್ಲದಿರುವುದರಿಂದ ಪರಮಾಣುವಿನಲ್ಲಿ ಪರ್ಯವಸಾನವು ಕೊಡುವ ಪ್ರಯುಕ್ತ ಅವಯವಪರಂಪರೆಗೆ ಪರ್ಯವಸಾನವು ಇಲ್ಲವೆಂದದ್ದು ಹೇಗೆಂದರೆ—

ಶ್ಲೋ || (೧) ನ ಚಾನವಯವಂ ವಸ್ತು ಕ್ವಚಿತ್ಪ್ರ್ಯಮಾನಗೋಚರಂ || (೨) ಪೂರ್ವಾಪರಾದಿಭೇದೇನ ಯತೋಂಶೋಽಸ್ಯಾವಗಮ್ಯತೇ || (೩) ಉಪಾಧಿರಪ್ಯೇಕದೇಶಸಂಬದ್ಧಃ ಸಂಶಮೇವ ಹಿ | ಜ್ಞಾಪಯೇದ್ಭೇದಂ || (೪) ಅಖಿಲಂ ಗ್ರಸನ್ನ ವಿಭಜೇತ್ಕಥಂ || (೫) ತಸ್ಮಾದ್ದ್ವ್ಯಣುಕಾದಿಕಮಪಿ ನಾಸ್ತ್ಯನಂತತಯಾ ಕ್ವಚಿತ್ || ೯ ||

ಅ || (೧) ಅವಯವವಿಲ್ಲದಾಗಿ ಇರುವ ಯಾವುದೊಂದು ವಸ್ತುವೂ ಕೂಡ (ಪರಮಾಣುಗಳೂ ಕೂಡ) ಪ್ರಮಾಣವಿಷಯವಾದುದು ಇಲ್ಲವೇ ಇಲ್ಲ. (ಅಂದರೆ ನಿರಂಶವಾದ ವಸ್ತುವೇ ಇಲ್ಲ) (೨) (ಪರಮಾಣುವಿಗೆ ಅವಯವವು ಇಲ್ಲವೆಂಬುವಲ್ಲಿ ಪ್ರಮಾಣವು ಇಲ್ಲ. ಪರಮಾಣುವಿಗೆ ಅವಯವಗಳಿವೆ ಎಂಬುವುದು ಪ್ರಮಾಣಸಿದ್ಧವಾಗಿದೆ ಎನ್ನುತ್ತಾರೆ —) ಪೂರ್ವಭಾಗ ಅಪರಭಾಗ ಇತ್ಯಾದಿ ಭೇದದಿಂದ ಪರಮಾಣುವಿಗೆ ಅಂಶ

ಇದೆ ಎಂದು ತಿಳಿಯುತ್ತದೆ. (೩) (ಪರಮಾಣುವಿಗೆ ಸ್ವಾಭಾವಿಕ ಅಂಶಗಳಿಲ್ಲದಿದ್ದರೂ ಪೂರ್ವಾದಿ ದಿಗ್ಭಾಗರೂಪವಾದ ಉಪಾಧಿಸಂಬಂಧದಿಂದ ಮಾಡಲ್ಪಟ್ಟ ಅವಯವಗಳು ಇದ್ದ ಪ್ರಯುಕ್ತ ಆ ಔಪಾಧಿಕ ಅಂಶವೇ ಇರುವುದು ಎಂದರೆ—(1) ಅಂಶವನ್ನು ತಿಳಿಸುವ ಉಪಾಧಿಯು ಪರಮಾಣುವಿನ ಏಕದೇಶವನ್ನು ಸಂಬಧಿಸುತ್ತದೋ, (2) ಅಥವಾ ಸಂಪೂರ್ಣ ಪರಮಾಣುವನ್ನು ಸಂಬಂಧಿಸುತ್ತದೋ, ಅದರಲ್ಲಿ (1) ನೇದು ಕೂಡುವುದಿಲ್ಲವೆನ್ನುತ್ತಾರೆ—). ಉಪಾಧಿಯು ಪರಮಾಣುವಿನ ಏಕದೇಶವನ್ನು ಸಂಬಂಧಿಸುತ್ತದೆ ಎಂದಾದರೆ—ಆ ಏಕದೇಶವು ಉಪಾಧಿಸಂಬಂಧದಿಂದ ಮೊದಲೇ ಇದ್ದ ಪ್ರಯುಕ್ತ, ಮೊದಲೇ ಇದ್ದ ಅವಯವ ಭೇದವನ್ನು ತಿಳಿಸುತ್ತದೆ, ಎಂದೇ ಆಗುವುದು (ಅಂತೂ ಅಂಶವು ಸ್ವಾಭಾವಿಕವೆಂದೇ ಆಗುವುದು) (೪) (2)ನೇದ್ದು ಕೂಡುವುದಿಲ್ಲವೆನ್ನುತ್ತಾರೆ. ಸಂಪೂರ್ಣವನ್ನು ಉಪಾಧಿಯು ಸಂಬಂಧಿಸಿದರೆ ಆ ಉಪಾಧಿಯು ಪೂರ್ವ ಅಪರ ಎಂದು ವಿಭಾಗವನ್ನು ಹೇಗೆ ತಿಳಿಸುತ್ತದೆ. (ಅಂದರೆ ಅಂಶಭೇದಕ್ಕೆ ಜ್ಞಾಪಕವೇ ಆಗಲಾರದು.) (೫) (ಗುಣಾದಿಗಳಿಗೆ ಅವಯವಗಳು ಇಲ್ಲದಿರುವುದರಿಂದ ನ ಚಾನವಯವಂ ವಸ್ತು ಎಂದದ್ದು ಹೇಗೆ? ಎಂದರೆ—)ಪೂರ್ವ ಅಪರಾದಿಭಾಗಭೇದದಿಂದ ಅಂಶವಿದೆ, ಎಂದು ತಿಳಿದು ಬರುವುದರಿಂದಲೂ ಔಪಾಧಿಕ ಅಂಶವಿದೆ, ಎಂದು ಹೇಳುವುದು ಕೂಡದಿರುವುದರಿಂದಲೂ ಗುಣ ಮೊದಲಾದುದು ಯಾವುದೊಂದೂ ಕೂಡ ಅಂಶವಿಲ್ಲದಿದ್ದುದು ಇಲ್ಲವೇ ಇಲ್ಲ. (ಎಲ್ಲವೂ ಸಾಂಶವೇ) ॥ ೯ ॥

ಪೀ—ಹೀಗೆ ಅವಯವ ಅವಯವಿಗಳಿಗೆ ಭೇದಾಭೇದವನ್ನು ಸಮರ್ಥಿಸಿದುದರಿಂದ ಫಲವು ಹುಟ್ಟುವುದಕ್ಕಿಂತ ಮೊದಲು ಮೂಲುಗಳಲ್ಲಿ ಪಟತ್ವವಿಲ್ಲದಿರುವುದರಿಂದ ಪಟತ್ವ ಮೊದಲಾದ ಯಾವದ್ದ್ರವ್ಯಭಾವಿಗಳಾದ ವಿಶೇಷಗಳಿಗೆ ತಂತು ಮೊದಲಾದ ವಿಶೇಷಿಗಳಿಂದ ಭೇದಾಭೇದಗಳನ್ನು ಸಮರ್ಥಿಸಿರುವರು. ಈಗ ಗುಣಾದಿಗಳೆಂದು ಪರರು ಅಂಗೀಕರಿಸಿರುವ ಯಾವದ್ದ್ರವ್ಯಭಾವಿಗಳಾಗದೆ ಇದ್ದ ರೂಪ ಮೊದಲಾದ ವಿಶೇಷಗಳಿಗೆ ತಂತು ಮೊದಲಾದ ವಿಶೇಷಿಗಳಿಂದ ಭೇದಾಭೇದಗಳನ್ನು ಸಾಧಿಸುತ್ತಾರೆ—

ತಾ ॥ (೧) ಭಾವಾಭಾವವ್ಯವಹೃತೇರ್ವಿರುದ್ಧಮಾನೇಽಪಿ ವಸ್ತುನಿ । ಭೇದಾಭೇದೌ ಗುಣಾದೇಶ್ಚ ಜಡೇ ವಸ್ತುನಿ ಸಂಸ್ಥಿತೌ ॥ (೨) ಚೇತನೇ ಶಕ್ತಿರೂಪೇಣ ಗುಣಾದೇರ್ಭಾವ ಇಷ್ಯತೇ । ಸುಪ್ತೋಽಯಂ ಬಲವಾನ್ವಿದ್ವಾನಿತ್ಯಾದಿವ್ಯವಹಾರತಃ ॥ (೩) ನ ಚೈವಂ ಶಕ್ತಿರೂಪೇಣ ಜಡೇ ವ್ಯವಹೃತಿಃ ಕ್ವಚಿತ್ ॥ ೧೦ ॥

ಅ ॥ (೧) ಜಡವಾದ ವಸ್ತುವಿನಲ್ಲಿ ಗುಣ ಕ್ರಿಯಾ ಶಕ್ತಿ ಸಾದೃಶ್ಯ ವಿಶಿಷ್ಟ ಮೊದಲಾದ ಯಾವದ್ದ್ರವ್ಯಭಾವಿಗಳಾಗದೆ ಇದ್ದ ವಿಶೇಷಗಳಿಗೆ ವಸ್ತುವು (ತಾನು) ಇರುವಾಗ ಭೇದಾಭೇದಗಳೇ ಯುಕ್ತಗಳು. ನೀಲಾ ಫಲಂ ಚಲತಿ ಇತ್ಯಾದಿಗಳಲ್ಲಿ ನೀಲತ್ವ ಫಲತ್ವ ಚಲನಾದಿಗಳಿಗೆ ಸಾಮಾನಾಧಿಕರಣ್ಯದಿಂದ ಫಲದಲ್ಲಿ ನೀಲತ್ವ ಚಲನಾದಿಗಳು ಇವೆ. ಎಂದು ಹೇಳುವುದರಿಂದ ಅಭೇದವನ್ನು ಅಂಗೀಕರಿಸಬೇಕು. ಹೀಗೆ ಯವಾದ ಫಲವು ಇದ್ದರೂ ಕೆಲವು ವೇಳೆ ಫಲವು ನೀಲವಲ್ಲ, ಎಂದು ನೈಲ್ಯಾಭಾವವ್ಯವಹಾರವಿದ್ದ ಪ್ರಯುಕ್ತ ನೈಲ್ಯದಿಂದ ಭೇದವನ್ನು ಅಂಗೀಕರಿಸಬೇಕು (ನೈಲ್ಯಾದಿರೂಪವಾದ ಅಯಾವದ್ದ್ರವ್ಯಭಾವಿ ಧರ್ಮದಿಂದ ಅತ್ಯಂತಾಭೇದವೆಂದು ಹೇಳುವುದಾದರೆ ಫಲರೂಪವಾದ ವಸ್ತುವು ಇರುವಾಗ ನೈಲ್ಯಾದಿಗಳ ವಿನಾಶವು ಕೂಡಲಾರದು. ವಿನಾಶಾನಂತರದಲ್ಲಿ ಭೇದವೇ ಎಂದು ತಿಳಿಯಬೇಕು. ತಾನೇ ಇಲ್ಲದಿರುವಾಗ ಅಭೇದವು ಕೂಡಲಾರದು) (೨) (ಹಾಗಾದರೆ ಸುಷುಪ್ತಿಮೂರ್ಛಾಕಾಲಗಳಲ್ಲಿ ಬಲ, ಸ್ವರೂಪಜ್ಞಾನಾದಿಗಳು ಇಲ್ಲವಾದರೂ ಅವುಗಳಿಗೆ ಜೀವನಿಂದ ಅತ್ಯಂತಾಭೇದವು ಹೇಗೆ ಇದೆಯೋ, ಹಾಗೆಯೇ ಜಡದಲ್ಲೂ ಕೂಡ ಅತ್ಯಂತಾಭೇದವೇ ಏಕೆ ಆಗಲಾರದು ಎಂದರೆ —) ಸುಪ್ತನಾದವನು, ಬಲಿಷ್ಠನು, ವಿದ್ವಾಂಸನು,

ಇದು ಮೊದಲಾದ ವ್ಯವಹಾರಬಲದಿಂದ ಸುಪ್ತಿ ಮೂರ್ಛೆಗಳಲ್ಲಿಯೂ ಬಲಜ್ಞಾನಾದಿಗಳು ಶಕ್ತಿರೂಪದಿಂದ ಇವೆ, ಎಂದು ಸಿದ್ಧಿಸುವುದರಿಂದ ಚೇತನದಿಂದ ಆ ಬಲ ಜ್ಞಾನಾದಿಗಳಿಗೆ ಅತ್ಯಂತಾಭೇದವು ಯುಕ್ತವು. (ಶ್ಯಾಮತ್ವಾದಿಗಳು ನಾಶಹೊಂದುವುದರಿಂದ ಅವುಗಳಿಗೆ ಅತ್ಯಂತಾಭೇದವಿಲ್ಲ.) (೩) (ಶ್ಯಾಮತ್ವಾದಿಗಳೂ ಕೂಡ ಶಕ್ತಿರೂಪದಿಂದ ಇವೆ, ಎಂದು ಏಕೆ ಆಗಲಾರದೆಂದರೆ—) ಶ್ಯಾಮತ್ವಾದಿಗಳು ಶಕ್ತಿರೂಪದಿಂದ ಜಡದಲ್ಲಿ ಇವೆ, ಎಂದು ಎಲ್ಲಿಯೂ ವ್ಯವಹಾರವು ಇಲ್ಲ. (ಅಂದರೆ ಬಲಾದಿಗಳು ಶಕ್ತಿರೂಪದಿಂದ ಇವೆ ಎಂದು ವ್ಯವಹಾರವು ಇದ್ದಂತೆ ನೀಲತ್ವಾದಿಗಳು ಶಕ್ತಿರೂಪದಿಂದ ಇವೆ ಎಂದು ವ್ಯವಹಾರವು ಇಲ್ಲ) ॥ ೧೦ ॥

ಟೀ—ಶ್ರೀಪರಮಾತ್ಮನ ಒಂದು ರೂಪವು ವಿಶೇಷಬಲದಿಂದ ಬಹಳರೂಪಗಳು, ಎಂಬುದ ವ್ಯವಹಾರ ವಿಷಯಗಳಾಗುತ್ತವೆ. ಆ ರೂಪಗಳಿಗೆ ಶ್ರೀಹರಿಯಿಂದ ಅಭೇದವೇ, ಎಂಬುವಲ್ಲಿ ಪ್ರಮಾಣಗಳನ್ನು ಹೇಳುತ್ತಾರೆ—

**ಶ್ಲೋ ॥ (೧) ಏಕಮೇವಾದ್ವಿತೀಯಂ ತನ್ನೇಹ ನಾನಾಽಸ್ತಿ ಕಿಂಚನ । ಮೃತ್ಯೋಃ ಸ**
**ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥ (೨) ಯಥೋದಕಂ ದುರ್ಗೇ**
**ವೃಷ್ಟಂ ಪರ್ವತೇಷು ವಿಧಾವತಿ । ಏವಂ ಧರ್ಮಾನ್ಪೃಥಕ್ಪಶ್ಯಂಸ್ತಾನೇವಾನುವಿ-**
**ಧಾವತಿ ॥ (೩) ಇತ್ಯಾದಿಶ್ರುತಿಮಾನಾಚ್ಚ ಪರಮೈಶ್ವರ್ಯತಸ್ತಥಾ । ಸರ್ವಂ ತು**
**ಘಟತೇ ವಿಷ್ಣೌ ಯತ್ಕಲ್ಯಾಣಗುಣಾತ್ಮಕಮಿತ್ಯಾದಿ ಬ್ರಹ್ಮತರ್ಕೇ ॥ (೪) ಕಮಲಾ-**
**ಸನೇ ಬ್ರಹ್ಮಣಿ ಸ್ಥಿತಂ ರುದ್ರಂ ॥ (೫) ವಿಷ್ಣುಂ ಸಮಾಶ್ರಿತೋ ಬ್ರಹ್ಮಾ ಬ್ರಹ್ಮಣೋಽಂ-**
**ಕಗತೋ ಹರಃ । ಹರಸ್ಯಾಂಗವಿಶೇಷೇಷು ದೇವಾಃ ಸರ್ವೇಽಪಿ ಸಂಸ್ಥಿತಾ ಇತಿ**
**ಪಾದ್ಮೇ ॥ ೧೧ ॥** ॥ ೧೧—೧೫ ॥

ಅ॥ (೧) ಸರ್ವೋತ್ತಮನಾದವನು ಒಬ್ಬನೇ. ಆತನಲ್ಲಿ ರೂಪಭೇದಾದಿಗಳು ಇಲ್ಲ. ಆತನಿಗೆ ಸಮನೂ ಉತ್ತಮನೂ ಆದವನು ಎರಡನೆಯವನು ಇಲ್ಲ. ಭಗವದ್ರೂಪಾದಿಗಳಲ್ಲಿ ಭೇದವೂ ಭೇದಾಭೇದವೂ ಇಲ್ಲ. ಯಾವನು ಈ ಭಗವದ್ರೂಪಗಳಲ್ಲಿ ಭೇದವನ್ನು ಸ್ವಲ್ಪವಾಗಿಯಾದರೂ ತಿಳಿಯುತ್ತಾನೋ, ಆತನು ನರಕಾದ್ಯನರ್ಥವನ್ನು ಹೊಂದುತ್ತಾನೆ. (೨) ಹೇಗೆ ಎತ್ತರಪ್ರದೇಶದಲ್ಲಿ ಸುರಿದ ನೀರು ತಗ್ಗು ಪ್ರದೇಶಕ್ಕೆ ಹೋಗುತ್ತದೋ, ಹೀಗೆಯೇ ಭಗವದ್ಧರ್ಮಗಳನ್ನು ಶ್ರೀಪರಮಾತ್ಮನಿಂದ ಭಿನ್ನಗಳನ್ನಾಗಿ ತಿಳಿದವನು ನೀಚನೀಚ ಸ್ಥಾನಗಳನ್ನೇ ಹೊಂದುತ್ತಾನೆ. (೩) ಇದು ಮೊದಲಾದ ವೇದವಾಕ್ಯ ಪ್ರಮಾಣದಿಂದಲೂ ಮಂಗಲಗುಣಸ್ವರೂಪವಾದುದೆಲ್ಲವೂ, ಸಾಮಾನ್ಯತಃ ದುರ್ಘಟವಾಗಿ ತೋರಿದರೂ ಶ್ರೀವಿಷ್ಣುವಿನಲ್ಲಿ ಅಘಟಿತಘಟನವಾದ ಪರಮೈಶ್ವರ್ಯವಿದ್ದುದರಿಂದಲೂ, ಕೂಡಿಯೇ ಕೂಡುತ್ತದೆ. (ಹೀಗೆಯೇ ಒಡಂಬಡಬೇಕು. ಜೀವಬ್ರಹ್ಮೈಕ್ಯಾದಿಗಳನ್ನು ಸರ್ವಥಾ ಒಡಂಬಡಕೂಡದು.) ಐಕ್ಯವನ್ನು ಹೇಳಿದರೆ ಶ್ರೀಹರಿಗೆ ಪರಮೈಶ್ವರ್ಯವೇ ಕೂಡಲಾರದು. ಇತ್ಯಾದಿ ಪ್ರಮೇಯವು ಬ್ರಹ್ಮತರ್ಕದಲ್ಲಿ ಹೇಳಿದೆ. (೪) (**ಪಶ್ಯಾಮಿ ದೇವಾನ್** ಎಂಬುವ (ಶ್ಲೋ. ೧೫.) ಲ್ಲಿದ್ದ **ಕಮಲಾಸನಸ್ಥಂ** ಎಂಬುದಕ್ಕೆ ಕಮಲರೂಪವಾದ ಆಸನದಲ್ಲಿರತಕ್ಕ ಚತುರ್ಮುಖನನ್ನು ಎಂದು ಪರರು ಅರ್ಥ ಹೇಳಿರುವರು. ಆಗ ರುದ್ರನು ಚತುರ್ಮುಖನನ್ನು ಆಶ್ರಯಿಸಿಕೊಂಡಿದ್ದಾನೆಂಬ ಅರ್ಥವಿಶೇಷವು ತೋರದಿರುವುದರಿಂದ ವಿಶೇಷ ಅರ್ಥವು ಸಿಗುವದಕ್ಕಾಗಿ **ಕಮಲಾಸನಸ್ಥ** ಪದಕ್ಕೆ ಸರಿಯಾದ ಅರ್ಥವನ್ನು ಹೇಳುತ್ತಾರೆ—) ಚತುರ್ಮುಖಬ್ರಹ್ಮನ ತೊಡೆಯಲ್ಲಿ ಆಶ್ರಯಿಸಿಕೊಂಡಿರುವ ರುದ್ರನನ್ನು. (೫) (ರುದ್ರನು ಬ್ರಹ್ಮನ ತೊಡೆಯ [illegible]

ಪ್ರಮಾಣವನ್ನು ಹೇಳುತ್ತಾರೆ—) ಚತುರ್ಮುಖಬ್ರಹ್ಮನು ಶ್ರೀವಿಷ್ಣುವನ್ನು ಆಶ್ರಯಿಸಿಕೊಂಡಿದ್ದಾನೆ. ೦ ಬ್ರಹ್ಮನ ತೊಡೆಯಲ್ಲಿ ರುದ್ರನು ಆಶ್ರಯಿಸಿಕೊಂಡಿದ್ದಾನೆ. ರುದ್ರನ ಅಂಗವಿಶೇಷಗಳಲ್ಲಿ ಎಲ್ಲಾ ದೇವತೆಗಳು ಆಶ್ರಯಿಸಿಕೊಂಡಿರುತ್ತಾರೆ, ಎಂದು ಪಾದ್ಮಪುರಾಣದಲ್ಲಿ ಹೇಳಿದೆ. ॥ ೧೧ ॥ ॥ ೧೫ ॥

ಗೀ ॥ ಅನೇಕಬಾಹೂದರವಕ್ತ್ರನೇತ್ರಂ
ಪಶ್ಯಾಮಿ ತ್ವಾಂ ಸರ್ವತೋಽನಂತರೂಪಂ ।
ನಾಂತಂ ನ ಮಧ್ಯಂ ನ ಪುನಸ್ತವಾದಿಂ
ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥ ೧೬ ॥

ಅ ॥ ವಿಶ್ವೇಶ್ವರ—ಸಮಸ್ತ ಜಗತ್ತಿಗೆ ಸ್ವಾಮಿಯಾದ ಶ್ರೀಕೃಷ್ಣನೇ. ಅನೇಕಬಾಹೂದರವಕ್ತ್ರನೇತ್ರಂ—ಅನಂತಗಳಾದ ತೋಳುಗಳೂ ಹೊಟ್ಟೆಗಳೂ ಮುಖಗಳೂ ಕಣ್ಣುಗಳೂ ಉಳ್ಳ, ಸರ್ವತಃ ಎಲ್ಲಾದೇಶಗಳಲ್ಲಿಯೂ, ಅನಂತರೂಪಂ—ಅಪರಿಮಿತಗಳಾದ ರೂಪಗಳುಳ್ಳ, ತ್ವಾಂ—ನಿನ್ನನ್ನು ಪಶ್ಯಾಮಿ—ನೋಡುತ್ತೇನೆ. ವಿಶ್ವರೂಪ—ಸರ್ವತ್ರ ವ್ಯಾಪ್ತವಾದ ರೂಪವುಳ್ಳ ಶ್ರೀಕೃಷ್ಣನೇ, ತವ—ನಿನಗೆ, ಆದಿಂ—ದೇಶದಿಂದ ಆದಿ (ಉತ್ಪತ್ತಿ)ಯನ್ನು (ಅಪರಿಚ್ಛಿನ್ನನನ್ನಾಗಿ) ನ ಪಶ್ಯಾಮಿ—ನೋಡುವುದಿಲ್ಲ. ಮಧ್ಯಂ—ಮಧ್ಯವನ್ನು, ನ—ನೋಡುವುದಿಲ್ಲ ಪುನಃ—ತಿರುಗಿ, ಅಂತಂ—ಅವಸಾನವನ್ನು, ನ—ನೋಡುವುದಿಲ್ಲ. ॥ ೧೬ ॥

ಟೀ—ಅನೇಕಬಾಹೂದರವಕ್ತ್ರ ನೇತ್ರಂ ಇತ್ಯಾದಿಗಳಲ್ಲಿದ್ದ ಅನೇಕ ಶಬ್ದದ ಅರ್ಥವನ್ನು ಹೇಳುತ್ತಾರೆ—

ಭಾ ॥ (೧) ಅನೇಕಶಬ್ದೋಽನಂತವಾಚೀ । ಅನಂತಬಾಹುಮಿತಿ ಚ ವಕ್ಷ್ಯತಿ ॥ (೨) ಸರ್ವತಃ ಪಾಣಿಪಾದಂ ತದಿತ್ಯಾದಿ ಚ ॥ (೩) ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋಬಾಹುರುತ ವಿಶ್ವತಸ್ಪಾತ್ । ಸಂಬಾಹುಭ್ಯಾಂ ಧಮತಿ ಸಂಪತತ್ರೈರ್ಧ್ಯಾವಾಭೂಮೀ ಜನಯನ್ದೇವ ಏಕ ಇತ್ಯೃಗ್ವೇದೇ ॥ ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ವಿಶ್ವತೋ ಹಸ್ತ ಉತ ವಿಶ್ವತಸ್ಪಾತ್ ॥ ಸಂಬಾಹುಭ್ಯಾಂ ನಮತಿ ಸಂಪತತ್ರೈರ್ದ್ಯಾವಾಪೃಥಿವೀ ಜನಯನ್ದೇವ ಏಕ ಇತಿ ಯಜುರ್ವೇದೇ । ವಿಶ್ವಶಬ್ದಶ್ಚಾನಂತವಾಚೀ । ಸರ್ವಂ ಸಮಸ್ತಂ ವಿಶ್ವಂ ಚ ಅನಂತಂ ಪೂರ್ಣಮೇವ ಚೇತ್ಯಭಿಧಾನಾತ್ ॥ ೧ ॥

ಅ ॥ (೧) ಅನೇಕಶಬ್ದಕ್ಕೆ ಅನಂತವೆಂದರ್ಥವು (ಏಕೆಂದರೆ—) ೧೯ನೇ ಶ್ಲೋಕದಲ್ಲಿ ಅನಂತಬಾಹುಂ—ಅನಂತಬಾಹುಗಳುಳ್ಳವನು(ಎಂದು ಹೇಳಿದ್ದಾರೆ—) (ಸರ್ವತಃ ಪಾಣಿಪಾದಾದಿಯುಕ್ತಃ ಪಾತ್ಯಾದಿಶಕ್ತಿರೂಪ್ । ಕೇಶಾದಿಷ್ವಪಿ ಸರ್ವತ್ರ ಕೃಷ್ಣಕೇಶೋ ಹಿ ಯಾದವಃ । ಅತೋಽಯಂ ರೂಪೈಃ ಪಾಣಿಪಾದಾದಿಸಂಯುಕ್ತೈಃ । ಸರ್ವತ್ರ ಸಂಸ್ಥಿತತ್ವಾದ್ವಾ ಸರ್ವತಃ ಪಾಣಿಪಾದವಾನ್ ಇತ್ಯಾದಿ ಪ್ರಮಾಣಪ್ರಕಾರ ಕೇಶ ಮೊದಲಾದ ಎಲ್ಲಾ ಅವಯವಗಳಲ್ಲಿಯೂ ಹಸ್ತ ಪಾದಾದಿಗಳ ಶಕ್ತಿಯುಳ್ಳವನಾದುದರಿಂದ) ಎಲ್ಲಾ ಅವಯವಗಳಲ್ಲಿಯೂ ಪಾಣಿ ಪಾದ ಮೊದಲಾದ ಅವಯವಗಳುಳ್ಳವನು ಇತ್ಯಾದಿ ಪ್ರಮೇಯವನ್ನು ಮುಂದಕ್ಕೆ ಹೇಳುವರು. (ಇದರಿಂದ ಶ್ರೀಹರಿಗೆ ಅನಂತ ಪಾಣಿ ಪಾದಾದಿಗಳಿವೆ ಎಂದು ತಿಳಿಸುತ್ತಾರೆ) (೨) ಅನಂತ ಕಣ್ಣುಗಳುಳ್ಳವನು ಮತ್ತು ಅನಂತ ಮುಖಗಳ

ವನು, ಅನಂತ ತೋಳುಗಳುಳ್ಳವನು, ಮತ್ತು ಅನಂತ ಪಾದಗಳುಳ್ಳವನು, ಸರ್ವೋತ್ತಮನಾದ ಶ್ರೀ ಮನ್ನಾರಾಯಣನು. ಪ್ರಧಾನಗಳಾದ ಎರಡು ತೋಳುಗಳಿಂದ ಗಣಗಳಿಗೆ ಸದೃಶಗಳಾದ ಬೇರೆ ತೋಳು ಗಳಿಂದ ಸ್ವರ್ಗಭೂಮ್ಯಾದಿಗಳನು ಸೃಷ್ಟಿಮಾಡಿದವನಾಗಿ ಆ ಸೃಷ್ಟಿಗಾಗಿ ಅಗ್ನಿ ಮೊದಲಾದ ಪಂಚಭೂತ ಗಳನ್ನು ಕೂಡಿಸುತ್ತಾನೆ (ತ್ರಿವೃತ್ಕರಣಮಾಡುತ್ತಾನೆ) (ಪೃಥಿವ್ಯಪ್ತೇಜಸ್ಸುಗಳನ್ನು ಒಟ್ಟು ಸೇರಿಸು ತ್ತಾನೆ.) ಹೀಗೆ ಋಗ್ವೇದಖಿಲಗಳಲ್ಲಿ ಹೇಳಿದೆ (ಇದೇ ಅರ್ಥವನ್ನು ಯಜುರ್ವೇದದಲ್ಲಿಯೂ ಹೇಳಿ ದ್ದಾರೆ) (೪) ಅನಂತಕಣ್ಣುಗಳುಳ್ಳವನು,........ಅನಂತ ಕೈಗಳುಳ್ಳವನೂ........ಸಂನಮತಿ=ತ್ರಿವೃತ್ಕರಣ ಮಾಡುತ್ತಾನೆ, ಎಂದು ಯಜುರ್ವೇದದಲ್ಲಿಯೂ ಇದೆ. (೫) (ಅನೇಕ ಶಬ್ದಕ್ಕೆ ಅನಂತವೆಂಬುವ ಅರ್ಥವಿದೆ, ಎಂಬುವ ವಿಷಯದಲ್ಲಿ ಈ ಮಂತ್ರಗಳ ಉದಾಹರಣೆಯು ಹೇಗೆ ಕೂಡುತ್ತದೆಂದರೆ—) ಈ ಶ್ರುತಿಯಲ್ಲಿದ್ದ ವಿಶ್ವಶಬ್ದವೂ ಅನಂತವೆಂಬುವ ಅರ್ಥವನ್ನೇ ಹೇಳುತ್ತದೆ. ಸರ್ವ, ಸಮಸ್ತ, ವಿಶ್ವ, ಅನಂತ, ಪೂರ್ಣ, ಇವು ಪರ್ಯಾಯಪದಗಳೆಂದು ಅಭಿಧಾನವಿದೆ. ॥ ೧ ॥

ಟೀ—ಶ್ರೀಪರಮಾತ್ಮನಿಗೆ ಅನಂತ ತೋಳು ಮೊದಲಾದುವುಗಳು ಇವೆ, ಎಂಬುವಲ್ಲಿ ಸ್ಪಷ್ಟ ಶ್ರುತಿ ಯನ್ನು ಹೇಳುತ್ತಾರೆ—

**ಭಾ ॥ (೧) ಅನಂತಪಾದಂ ತಮನಂತಬಾಹುಮನಂತವಕ್ತ್ರಂ ಪುರುಷಂ ರೂಪಮೇಕಮಿತಿ ಬಾಭ್ರವ್ಯಶಾಖಾಯಾಂ ॥ (೨) ಮಹತ್ವಾದ್ಯುಕ್ತಿಸ್ತು ತದಾತ್ಮಕತ್ವೇನಾಪಿ ಭವತಿ ॥ (೩) ಅನ್ಯಥಾಽನಾದಿ ಮತ್ಪರಂ ಬ್ರಹ್ಮೇತ್ಯಾದ್ಯಯುಕ್ತಂ ಸ್ಯಾತ್ ॥ (೪) ಏಕತ್ರಾನಂತಾನ್ಯಸ್ಯ ರೂಪಾಣೀತ್ಯನಂತರೂಪಃ । ಅನ್ಯತ್ರ ತ್ವಪರಿಮಾಣ ಇತಿ ॥ (೫) ಉಕ್ತಂ ಹ್ಯುಭಯಮಪಿ । ಪರಾತ್ಪರಂ ಯನ್ಮಹತೋ ಮಹಾಂತಂ ಯದೇಕಮವ್ಯಕ್ತಮನಂತರೂಪಮಿತಿ ಯಜುರ್ವೇದೇ ॥ ೨ ॥**

ಅ ॥ (೧) ಅನಂತ ತೋಳುಗಳುಳ್ಳವನು, ಅನಂತ ಪಾದಗಳುಳ್ಳವನು, ಅನಂತ ರೂಪಗಳುಳ್ಳವನು, ಅನಂತ ಮುಖಗಳುಳ್ಳವನು ಸರ್ವೋತ್ತಮನು. ಎಂದು ಬಾಭ್ರವ್ಯಶಾಖೆಯಲ್ಲಿ ಹೇಳಿದೆ. (೨) (ಶ್ರೀಪರ ಮಾತ್ಮನಿಗೆ ಅನಂತ ಬಾಹ್ವಾದಿಗಳು ಇದ್ದರೆ ಆಗ ಪರಮ ಮಹತ್ಪರಿಮಾಣವು ಇರಬೇಕಾಗುವುದು. ಅದು ಯುಕ್ತವಲ್ಲ. ಏಕೆಂದರೆ ರೂಪಂ ಮಹತ್ತೇ ಎಂದು ಮಹತ್ತ್ವಮಾತ್ರವನ್ನು ಹೇಳಿದ್ದಾರೆ. ಹಾಗೆಯೇ ಬಹುವಕ್ತ್ರನೇತ್ರಂ ಎಂದು ಬಹುತ್ವಮಾತ್ರ ಹೇಳಿದ್ದಾರೆ. ಆದಕಾರಣ ಅನಂತ ಬಾಹ್ವಾದಿ ಗಳು ಇವೆ, ಎಂದು ಹೇಳಿದ್ದು ಕೂಡಲಾರದು. ಎಂದರೆ—) ಭಗವದ್ರೂಪಗಳಿಗೆ ಮಹತ್ತ್ವಮಾತ್ರ ಹೇಳಿದ್ದು ಅವನ ಅವಯವಗಳಿಗೆ ಬಹುತ್ವ ಮಾತ್ರ ಹೇಳಿದ್ದು ಎಂದಾಗಿದ್ದರೆ ವಿರೋಧವು ಬರುತ್ತಿತ್ತು. ಹಾಗೆ ಹೇಳುವುದಿಲ್ಲ ಮತ್ತೆ ಮಹತ್ವಾದಿಗಳನ್ನು ಹೇಳಿದ್ದು ಪರಮ ಮಹತ್ವವಿದ್ದುದರಿಂದಲೂ, ಬಹುತ್ವ ಹೇಳಿದ್ದು ಅನಂತಾನಂತ ಅವಯವಗಳಿದ್ದುದರಿಂದಲೂ, ಕೂಡುತ್ತದೆ. (ಪರಮ ಮಹತ್ತಿನಲ್ಲಿ ಮಹತ್ತ್ವವೂ ಅನಂತದಲ್ಲಿ ಬಹುತ್ವವೂ ಸೇರುತ್ತದೆ.) (೩) (ಪರಮ ಮಹತ್ವಾದಿಗಳನ್ನು ಇಟ್ಟುಕೊಳ್ಳದೆ ಅವಾಂತರ ಮಹತ್ವಾದಿಗಳನ್ನು ಇಟ್ಟುಕೊಂಡರೆ ದೋಷವೇನೆಂದರೆ—) ಶ್ರೀಪರಮಾತ್ಮನಿಗೆ ಪರಮ ಮಹತ್ವಾದಿ ಗಳನ್ನು ಹೇಳದಿದ್ದರೆ ಅನಾದಿಮತ್ಪರಂ ಬ್ರಹ್ಮ ಎಂಬುವಲ್ಲಿ ಪರಮ ಮಹತ್ತ್ವವನ್ನು ಹೇಳಿದ್ದು, ಅನಂತ ವಿಷಯಗಳಿವೆ, ಎಂದು ಹೇಳಿದ್ದು ಅಯುಕ್ತವಾಗುವುದು (೪) (೧) (ಪಶ್ಯಾಮಿ ತ್ವಾಂ ಸರ್ವತೋಽನಂತ ರೂಪಂ (ಶ್ಲೋ. ೧೬) ತ್ವಯಾ ತತಂ ವಿಶ್ವಮನಂತರೂಪ (೩೮) ಈ ಎರಡು ಶ್ಲೋಕಗಳಲ್ಲಿಯ ಎರಡು ಅನಂತ ಶಬ್ದಗಳಿಗೆ, ಶ್ರೀಪರಮಾತ್ಮನಿಗೆ ಮಹಾಮಹಿಮೆಯನ್ನು ಸಿದ್ಧಪಡಿಸುವುದಕ್ಕಾಗಿ ಬೇರೆ ಬೇರೆ

ಅರ್ಥಗಳನ್ನು ಹೇಳುತ್ತಾರೆ—) ಒಂದು ಕಡೆ ಇದ್ದ ಅನಂತ ಶಬ್ದಕ್ಕೆ ಶ್ರೀಹರಿಗೆ ಅನಂತ ರೂಪಗಳು ಇದ್ದುದರಿಂದ ಆತನು ಅನಂತರೂಪನು ಎಂದರ್ಥವು. ಮತ್ತೊಂದುಗಡೆ ಇದ್ದ ಅನಂತ ಶಬ್ದಕ್ಕೆ ಅಪರಿಚ್ಛಿನ್ನನೆಂದರ್ಥವು. (ಅಂದರೆ ಸರ್ವ ದೇಶಗಳಲ್ಲಿ ವ್ಯಾಪಿಸಿಕೊಂಡಿರುವವನು, ಸರ್ವಕಾಲಗಳಲ್ಲಿರುವವನು, ಸರ್ವಗುಣಪರಿಪೂರ್ಣನು ಎಂದರ್ಥವು.) (೫) ಅನಂತಶಬ್ದಕ್ಕೆ ಈ ಎರಡು ಅರ್ಥವೂ ಪ್ರಾಮಾಣಿಕವೆಂದು ತಿಳಿಸುವುದಕ್ಕಾಗಿ ಪ್ರಮಾಣವನ್ನು ಹೇಳುತ್ತಾರೆ. ಬ್ರಹ್ಮನು ರುದ್ರಾದಿಗಳಿಂದುತ್ತಮನಾದ ಬ್ರಹ್ಮಾದಿಗಳಿಂದಲೂ ಉತ್ತಮನು. ಮಹತಃ ಮಹಾಂತಂ=ಅಪರಿಚ್ಛಿನ್ನ ಪರಿಮಾಣವುಳ್ಳ ರೂಪವುಳ್ಳವನು ಏಕಂ=ಸರ್ವ ವಸ್ತುಗಳಿಂದ ಭಿನ್ನನಾದಾಗ್ಯೂ, ಅನಂತರೂಪಂ=ಅನಂತ ಸಂಖ್ಯೆಗಳುಳ್ಳ ರೂಪಗಳುಳ್ಳವನು. ಎಂದು ಯಜುರ್ವೇದದಲ್ಲಿದೆ (ಇದು ಶ್ರೀಪರಮಾತ್ಮನಿಗೆ ಅಪರಿಚ್ಛಿನ್ನ ಪರಿಮಾಣವಿದೆ, ಎಂಬುವಲ್ಲಿಯೂ, ಅನಂತರೂಪಗಳಿವೆ ಎಂಬುವಲ್ಲಿಯೂ ಪ್ರಮಾಣವು.) ॥ ೨ ॥

ಟೀ—ಹಾಗಾದರೆ ಮಹತೋ ಮಹಾಂತಂ ಎಂದು ಮಹತ್ತತ್ತ್ವದಿಂದ ಮಹತ್ತ್ವವೇ ಹೇಳಲ್ಪಡುತ್ತದೆ. ಅನಂತತ್ವವು ಹೇಳಲ್ಪಡುವುದಿಲ್ಲ. ಅಂತೂ ಯದೇತದವ್ಯಕ್ತಂ ಎಂದು ಅವ್ಯಕ್ತವನ್ನು ವ್ಯಾಪಿಸಿಕೊಂಡಿದ್ದಾನೆಂದು ಹೇಳಿದ್ದರಿಂದ ಅವ್ಯಕ್ತಸಾಮ್ಯವೇ ಸಿದ್ಧವಾಗುತ್ತದೆ, ಎಂದರೆ—

**ಭಾ ॥ (೧) ಅವ್ಯಕ್ತಸ್ಯಾನಂತತ್ವಾದೇವ ಮಹತೋ ಮಹತ್ತ್ವೇಽಪರಿಮೇಯತ್ವಂ ಸಿದ್ಧ್ಯತಿ ।**
**(೨) ಮಹಾಂತಂ ಚ ಸಮಾವೃತ್ಯ ಪ್ರಧಾನಂ ಸಮವಸ್ಥಿತಂ । ಅನಂತಸ್ಯ ನ ತಸ್ಯಾಂತಃ**
**ಸಂಖ್ಯಾನಂ ಚಾಪಿ ವಿದ್ಯತ ಇತ್ಯಾದಿತ್ಯಪುರಾಣೇ ॥ (೩) ತಾನಿ ಚೈಕೈಕಾನಿ ರೂಪಾ-**
**ಣ್ಯನಂತಾನಿ ಚೈಕತ್ರ ಭವಂತಿ ॥ (೪) ಅಸಂಖ್ಯಾತಾ ಜ್ಞಾನಕಾಸ್ತಸ್ಯ ದೇಹಾಃ ಸರ್ವೇ**
**ಪರಿಮಾಣವಿವರ್ಜಿತಾಶ್ಚೇತ್ಯೃಗ್ವೇದಖಿಲೇಷು ॥ ೩ ॥**

ಅ ॥ (೧) ಅವ್ಯಕ್ತತತ್ತ್ವಕ್ಕೆ ಅಪರಿಚ್ಛಿನ್ನ ಪರಿಮಾಣವಿದ್ದುದರಿಂದಲೇ ಮಹತ್ತತ್ತ್ವದಿಂದ ಮಹತ್ತ್ವ ಹೇಳಿದರೂ ಅವ್ಯಕ್ತತತ್ತ್ವವನ್ನು ವ್ಯಾಪಿಸಿಕೊಂಡಿದ್ದಾನೆಂದು ಹೇಳಿದರೂ, ಶ್ರೀಹರಿಗೆ ಅಪರಿಮಿತ ಪರಿಮಾಣವು ಸಿದ್ಧವಾಗುತ್ತದೆ. (೨) (ಅವ್ಯಕ್ತತತ್ತ್ವಕ್ಕೆ ಅಪರಿಚ್ಛಿನ್ನ ಪರಿಮಾಣವಿದೆ, ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಮಹತ್ತತ್ತ್ವವನ್ನು ವ್ಯಾಪಿಸಿಕೊಂಡು ಪ್ರಧಾನವು ಇರುತ್ತದೆ. ಅಪರಿಚ್ಛಿನ್ನನಾದ ವಿಷ್ಣುವಿಗೆ ಪ್ರತಿಮಾಸ್ಥಾನೀಯಳಾದ ಜಡಪ್ರಕೃತಿಗೆ ಪರಿಮಿತಿಯೂ ಅದರ ಕಾರ್ಯದ ಸಂಖ್ಯಾಪರಿಮಿತಿಯೂ ಇಲ್ಲ. (ಅವ್ಯಾಕೃತಾಕಾಶದಂತೆಯೇ ಮೂಲ ಪ್ರಕೃತಿಗೂ ಪರಮ ಮಹತ್ತ್ವವು ಇದೆ ಎಂದು ಸೂಚಿತವಾಯಿತು.) ಎಂದು ಆದಿತ್ಯಪುರಾಣದಲ್ಲಿದೆ. (೩) (ರೀತ್ಯಂತರದಿಂದ ಅನಂತರೂಪ ಎಂಬುವ ಎರಡು ಕಡೆ ಇರುವ ಶಬ್ದಗಳಿಗೆ ಬೇರೆ ಬೇರೆ ಅರ್ಥಗಳನ್ನು ಹೇಳುತ್ತಾರೆ.) (ಅನಂತರೂಪ ಎಂದು ಒಂದು ಕಡೆ ಇದ್ದ ಅನಂತ ಶಬ್ದಕ್ಕೆ ಅನಂತಸಂಖ್ಯಾರೂಪವಾದ ಅರ್ಥವು ಸಿದ್ಧವಾಗುತ್ತಿರಲು) ಇನ್ನೊಂದು ಕಡೆ ಇರುವ ಅನಂತರೂಪಶಬ್ದದಲ್ಲಿ ಆ ಅನಂತ ಶಬ್ದಕ್ಕೆ ಅಪರಿಚ್ಛಿನ್ನ ಪರಿಮಾಣವುಳ್ಳವನು. ಎಂಬುವ ಅರ್ಥವು ಸಿದ್ಧವಾಗುತ್ತದೆ. (೪) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಶ್ರೀಹರಿಯ ದೇಹಗಳು ಜ್ಞಾನಾನಂದಾತ್ಮಕಗಳು, ಸಂಖ್ಯೆಯಿಲ್ಲದವುಗಳು, ಪರಿಮಾಣವಿಲ್ಲದವುಗಳು, ಎಂದು ಋಗ್ವೇದಖಿಲಗಳಲ್ಲಿ ಹೇಳಿದೆ ॥ ೩ ॥

**ಭಾ ॥ (೧) ಯಾವಾನ್ವಾ ಅಯಮಾಕಾಶಸ್ತಾವಾನೇಷೋಽಂತರ್ಹೃದಯ ಆಕಾಶ ಉಭೇ**
**ಅಸ್ಮಿನ್ ದ್ಯಾವಾಪೃಥಿವೀ ಅಂತರೇವ ಸಮಾಹಿತೇ । ಉಭಾವಗ್ನಿಶ್ಚ ವಾಯುಶ್ಚ**

**ಸೂರ್ಯಾಚಂದ್ರಮಸಾವುಭಾವಿತಿ ॥ (೨) ಕೃಷ್ಣಸ್ಯ ಗರ್ಭಜಗತೋಽತಿಭರಾವಸನ್ನ ಪಾರ್ಷ್ಣಿಪ್ರಹಾರಪರಿರುಗ್ಣಫಣಾತಪತ್ರಮಿತಿ ಚ ಭಾಗವತೇ ॥ (೩) ನ ಚೈತದಯುಕ್ತಂ । ಅಚಿಂತ್ಯಶಕ್ತಿತ್ವಾದೀಶ್ವರಸ್ಯ ॥ (೪) ಅಚಿಂತ್ಯಾಃ ಖಲು ಯೇ ಭಾವಾ ನ ತಾಂಸ್ತರ್ಕೇಣ ಯೋಜಯೇದಿತಿ ಶ್ರೀವಿಷ್ಣುಪುರಾಣೇ ॥ ೪ ॥**

**ಅ ॥** (೧) ಹೊರಗೆ ವ್ಯಾಪಿಸಿಕೊಂಡಿರುವ ಶ್ರೀಪರಮಾತ್ಮನು ಎಷ್ಟು ಪರಿಮಾಣವುಳ್ಳವನೋ, ಹೃದಯದೊಳಗೆ ಇರುವ ಶ್ರೀಪರಮಾತ್ಮನೂ ಅಷ್ಟು ಪರಿಮಾಣವುಳ್ಳವನು. ಈ ಶ್ರೀಹರಿಯ ಒಳಗೆ ಸ್ವರ್ಗಭೂಮಿಗಳು ಆಶ್ರಿತಗಳಾಗಿವೆ. ಅಗ್ನಿವಾಯುಗಳಿಬ್ಬರೂ ಸೂರ್ಯಚಂದ್ರರಿಬ್ಬರೂ ಶ್ರೀಹರಿಯನ್ನು ಆಶ್ರಯಿಸಿರುತ್ತಾರೆ. (೨) ೧೪ ಲೋಕಗಳನ್ನು ಹೊಟ್ಟೆಯೊಳಗೆ ಧರಿಸಿಕೊಂಡಿರುವ ಶ್ರೀಕೃಷ್ಣನ ಅತಿ ಭಾರದಿಂದ ಬಗ್ಗಿಹೋದ ಕಾಲು ಹರಡಿನ ಕೆಳಭಾಗದ ಹೊಡೆತದಿಂದ ಛಿನ್ನಗಳಾದ ಛತ್ರಗಳಂತಿರುವ ಫಣಗಳುಳ್ಳ (ಅಹಿರಾಜನನ್ನು ನೋಡಿ ಅವನ ಹೆಂಡಂದಿಯರು ಪರಿತಾಪಿಸಿದರು,) ಎಂದು ಭಾಗವತದಲ್ಲಿದೆ. (೧೪ ಲೋಕಗಳನ್ನು ಗರ್ಭದಲ್ಲಿಟ್ಟುಕೊಂಡದ್ದರಿಂದ ಶ್ರೀಕೃಷ್ಣನಿಗೆ ಅಪರಿಚ್ಛಿನ್ನ ಪರಿಮಾಣವಿದೆ, ಎಂದು ತಿಳಿಯುತ್ತದೆ.) (೩) ಶ್ರೀಹರಿಗೆ ಅಚಿಂತ್ಯವಾದ ಅಘಟಿತಘಟನಾರೂಪ ಶಕ್ತಿಯಿದ್ದುದರಿಂದ ಹಿಂದೆ ಹೇಳಿದ್ದು ಯಾವುದೂ ಅಸಂಭಾವಿತವು ಸರ್ವಥಾ ಆಗಲಾರದು. (೪) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ-) ಸರ್ವಥಾ ಮನಸ್ಸಿನಿಂದ ಆಲೋಚಿಸಲಿಕ್ಕೂ ಅತರ್ಕ್ಯಗಳಾದ ಯಾವ ಭಗವದ್ಧರ್ಮವಿಶೇಷಗಳು ಇದ್ದಾವೋ, ಅವುಗಳ ವಿಷಯದಲ್ಲಿ ಯುಕ್ತಿಯನ್ನು ಸಾಧಕವೆಂದಾಗಲೀ ಬಾಧಕವೆಂದಾಗಲೀ ಉಪಯೋಗಿಸಬಾರದು, ಎಂದು ಶ್ರೀವಿಷ್ಣುಪುರಾಣದಲ್ಲಿದೆ. ॥ ೪ ॥

**ಟೀ—ಇದೇ ವಿಷಯದಲ್ಲಿ ಪ್ರಮಾಣಾಂತರವನ್ನು ಹೇಳುತ್ತಾರೆ—**

**ಭಾ ॥ (೧) ನೈಷಾ ತರ್ಕೇಣ ಮತಿರಾಪನೇಯೇತಿ ಚ ಶ್ರುತಿಃ ॥ (೨) ಅತಿಪ್ರಸಂಗಸ್ತು ಮಹಾತಾತ್ಪರ್ಯವಶಾದ್ವಾಕ್ಯಬಲಾಚ್ಚಾಪನೇಯಃ ॥ (೩) ನ ಹಿ ಘಟವತ್ಕಶ್ಚಿದಪಿ ಪದಾರ್ಥೋ ನ ದೃಷ್ಟ ಇತ್ಯೇತಾವತಾ ಪ್ರಮಾಣದೃಷ್ಟಃ ಸ ನಿರಾಕ್ರಿಯತೇ ॥ ೫ ॥**

**ಅ ॥** (೧) ಈ ಪರಬ್ರಹ್ಮವಿಷಯಕವಾದ ಬುದ್ಧಿಯನ್ನು ಯುಕ್ತಿಯಿಂದ ಹೊಂದಲಿಕ್ಕೂ ನಿರಾಕರಿಸಲಿಕ್ಕೂ ಸಾಧ್ಯವಿಲ್ಲ, ಎಂದು ಶ್ರುತಿಯು. (೨) (ಶ್ರೀಹರಿಯು ವಿರುದ್ಧಗಳಾದ ಅಣುತ್ವ ಮಹತ್ತ್ವ ಪರಿಮಾಣಗಳಿಂದ ಕೂಡಿದವನೆಂದಾದರೆ ಆಗ ಶ್ರೀಹರಿಯು ನಿರ್ದುಃಖನು, ಮತ್ತು ದುಃಖವುಳ್ಳವನು ಆಗಲಿ, ಎಂದು ಅತಿಪ್ರಸಂಗವು ಬರುವುದೆಂದರೆ ಲೋಕಪ್ರಸಿದ್ಧಪದಾರ್ಥಗಳಿಗೂ ಶ್ರೀಪರಮಾತ್ಮನಿಗೂ ವಿಶೇಷವಿಲ್ಲವೆಂದು ಇಟ್ಟುಕೊಂಡು ಹೇಳಿದ ಈ ಅತಿಪ್ರಸಂಗವನ್ನು, ಮಹಾತಾತ್ಪರ್ಯದಿಂದಲೂ (ಅಂದರೆ ಶ್ರೀಪರಮಾತ್ಮನು ನಿರ್ದೋಷ ಅನಂತಗುಣ ಪರಿಪೂರ್ಣನು ಎಂಬುವಲ್ಲಿಯೇ ಶ್ರುತಿಗಳಿಗೆ ಮುಖ್ಯ ತಾತ್ಪರ್ಯವಿರುವುದರಿಂದಲೂ, ಶ್ರೀಹರಿಗೆ ದುಃಖಾದಿಗಳಿವೆ, ಎಂಬುವುದಕ್ಕೆ ತಾತ್ಪರ್ಯವೇ ಇಲ್ಲದಿರುವುದರಿಂದಲೂ, ಅಣುತ್ವ ಮಹತ್ತ್ವಗಳೆಂಬ ಪರಿಮಾಣಗಳು ಎರಡು ಇವೆ ಎಂಬುವುದಕ್ಕೆ ಮುಖ್ಯ ತಾತ್ಪರ್ಯ ವಿರೋಧವಿಲ್ಲದಿರುವುದರಿಂದಲೂ ಶ್ರೀಹರಿಗೆ ದುಃಖಾದಿಗಳಿವೆ, ಎಂಬುವಲ್ಲಿ ಪ್ರಮಾಣವಿಲ್ಲದಿರುವುದರಿಂದಲೂ) ಅಣುತ್ವ ಮಹತ್ತ್ವಗಳಿವೆ ಎಂಬುವುದು, ಹಿಂದೆ ಹೇಳಿರುವ ಪ್ರಮಾಣ ಮುಂದೆ ಹೇಳುವ ಪ್ರಮಾಣಗಳ ಬಲದಿಂದ ಸಿದ್ಧವಾಗುವ ಪ್ರಯುಕ್ತವು ನಿರಾಕರಿಸಬೇಕು. (ಅಂದರೆ ಪ್ರಮಾಣ[illegible] ಅರ್ಥದಲ್ಲಿ ಹಿಂದೆ ಹೇಳಿದ ಪ್ರಕಾರ ಕ್ಷುದ್ರವಾದ ಅತಿಪ್ರಸಂಗವನ್ನು ಹೇಳುವರೆ ಇದು [illegible]

ಡೇಯವೇ ಆಗುತ್ತದೆ, ಹೊರತು ಪ್ರಾಮಾಣಿಕಾರ್ಥ ಸಾಧನೆಗೆ ಅದು ಬಾಧಕವಾಗಲಾರದು. (೩) (ಮತ್ತು ಲೋಕದಲ್ಲಿ ಒಂದೇ ವಸ್ತುವಿನಲ್ಲಿ ಅಣುತ್ವ ಮಹತ್ತ್ವ ಮೊದಲಾದ ವಿರುದ್ಧ ಧರ್ಮಗಳು ಕಾಣ ದಿರುವುದರಿಂದ ಪರಮಾತ್ಮನಲ್ಲಿಯೂ ಅಣುತ್ವ ಮಹತ್ತ್ವಾದಿಗಳು ಕೂಡಲಾರವೆಂದರೆ—) ಲೋಕದ ಮಡಿಕೆಯಂತೆ ಬಟ್ಟೆಯು ಮಡಿಕೆಯ ಆಕಾರವುಳ್ಳದ್ದಾಗಿ ತೋರದಿದ್ದ ಮಾತ್ರದಿಂದ ಮಡಿಕೆಯಲ್ಲಿ ಪ್ರತ್ಯಕ್ಷ ಪ್ರಮಾಣಸಿದ್ಧವಾದ ಮಡಿಕೆಯ ಆಕಾರವನ್ನು ಹೇಗೆ ನಿರಾಕರಿಸಲಿಕ್ಕೆ ಬರುವುದಿಲ್ಲವೋ, ಹಾಗೆಯೇ ಬೇ ರೆಡೆ ಪ್ರಮಾಣಸಿದ್ಧವಾಗದಿರುವ ಅಣುತ್ವ ಮಹತ್ತ್ವಾದಿ ಧರ್ಮಗಳು ಶ್ರೀಪರಮಾತ್ಮನಲ್ಲಿ ಅಣೋರಣೀ ಯಾನ್ ಮಹತೋ ಮಹೀಯಾನ್ ಇತ್ಯಾದಿ ಶ್ರುತಿಗಳಿಂದ ಪ್ರಮಿತಗಳಾಗಿರುವುದರಿಂದ ಅವುಗಳನ್ನು ಸರ್ವಥಾ ನಿರಾಕರಿಸಲಿಕ್ಕೆ ಬರುವುದಿಲ್ಲ. ೬೯

ಟೀ—ಹೀಗಾದರೆ ಪ್ರಾಣಾದಿಗಳ ವಿಷಯದಲ್ಲಿ (1) ಪ್ರಾಣ ಏವಾಧಸ್ತಾತ್ ಪ್ರಾಣ ಉಪ ಷ್ಟಾತ್, (2) ಅಣುರ್ನೈತಸ್ಮಾಜ್ಜಾಯತೇ ಪ್ರಾಣೋ ವಾ ಅಣುಃ, ಎಂದು ಅಣುತ್ವ ಮಹತ್ತ್ವಾದಿಗಳನ್ನು ಹೇಳುವ ವಾಕ್ಯಗಳಿಗೆ ವಿರೋಧ ಪರಿಹಾರಕ್ಕಾಗಿ ಸವಾ ಏಷ ಪ್ರಾಣ ಅಣುರ್ಮಹಾನ್ ಎಂಬ ವಾಕ್ಯದಿಂದ ಪ್ರಾಮಾಣ್ಯವ್ಯವಸ್ಥೆಯನ್ನು ಮಾಡಿದ್ದು ಏಕೆಂದರೆ—

ಭಾ ॥ (೧) ಕೇಷುಚಿತ್ಪದಾರ್ಥೇಷು ವಾಕ್ಯವ್ಯವಸ್ಥಾ ಅಚಿಂತ್ಯಶಕ್ತಿತ್ವಾಭಾವಾದಂಗೀಕ್ರಿಯತೇ ॥ (೨) ಗುಣಾಃ ಶ್ರುತಾಃ ಸುವಿರುದ್ಧಾಶ್ಚ ದೇವೇ ಸಂತ್ಯಶ್ರುತಾ ಅಪಿ ನೈವಾತ್ರ ಶಂಕಾ । ಚಿಂತ್ಯಾ ಅಚಿಂತ್ಯಾಶ್ಚ ತಥೈವ ದೋಷಾಃ ಶ್ರುತಾಶ್ಚ ನಾಜ್ಞೈರ್ವಿತಥಾ ಪ್ರತೀತಾಃ ॥ (೩) ಏವಂ ಪರೇಽನ್ಯತ್ರ ಶ್ರುತಾಶ್ರುತಾನಾಂ ಗುಣಾಗುಣಾನಾಂ ಪ್ರಮಾದ್ಯವಸ್ಥೇತಿ ಜಾಬಾಲಖಿಲಶ್ರುತೇಶ್ಚ ॥ (೪) ಉಪಚಾರತ್ವಪರಿಹಾರಾಯ ನ ಮಧ್ಯಮಿತಿ ।, ಅನ್ಯಥಾಽದ್ಯಂತಾಭಾವೇನೈವ ತತ್ಸಿದ್ಧೇಃ । ವಿಶ್ವರೂಪಃ ಪೂರ್ಣರೂಪಃ । ಸ ವಿಶ್ವರೂಪೋಽನೂನರೂಪೋ ಯತೋಽಯಂ ಸೋಽನಂತರೂಪೋ ನಹಿ ಪಾರೋಽಸ್ತಿ ತಸ್ಯೇತಿ ಶಾಂಡಿಲ್ಯಶಾಖಾಯಾಂ ॥ ೬ ॥ ॥ ೧೬ ।

ಅ ॥ (೧) ಪ್ರಾಣ ಮೊದಲಾದ ಕೆಲವು ಪದಾರ್ಥಗಳಲ್ಲಿ ಸ ವಾ ಏಷಃ ಪ್ರಾಣಃ ಅಣುರ್ಮಹಾನ್ ಎಂಬುವ ವಾಕ್ಯದಿಂದ ವ್ಯವಸ್ಥೆಯು (ಪ್ರಾಣಾದಿಗಳಿಗೆ ಶ್ರೀಪರಮಾತ್ಮನಂತೆ ಅಚಿಂತ್ಯ ಶಕ್ತಿಯಿಲ್ಲದಿರುವುದ ರಿಂದ ಅಂಗೀಕೃತವಾಗುತ್ತದೆ) (೨) (ಶ್ರೀಪರಮಾತ್ಮನಿಗೆ ಒಂದೇ ಕಾಲದಲ್ಲಿ ಅಣುತ್ವ ಮಹತ್ತ್ವಾದಿ ವಿರು ದ್ಧಧರ್ಮಗಳಿವೆ. ಎಂಬುವ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಶ್ರೀಪರಮಾತ್ಮನಲ್ಲಿ ವೇದಗಳಲ್ಲಿ ಹೇಳಲ್ಪಟ್ಟವುಗಳೂ, ಹೇಳಲ್ಪಡದಿದ್ದವುಗಳೂ ಶ್ರೀಹರಿಗೆ ಮಾತ್ರ ಪ್ರತ್ಯಕ್ಷಸಿದ್ಧಗಳಾದವುಗಳೂ ಬೇರೆ ಕಾಣದಿರುವುದರಿಂದ ಲೋಕದೃಷ್ಟಿಯಿಂದ ವಿರುದ್ಧಗಳಾದವುಗಳೂ ವಸ್ತುತಃ ಅವಿರುದ್ಧಗಳಾದವು ಗಳಿಂದ ಧ್ಯಾನಿಸಲಿಕ್ಕೆ ಶಕ್ಯಗಳೂ ಸಂಪೂರ್ಣ ಧ್ಯಾನಿಸಲಿಕ್ಕೆ ಅಶಕ್ಯಗಳೂ ಆದ ಗುಣಗಳು ಇರುತ್ತವೆ ಈ ವಿಷಯದಲ್ಲಿ ಶಂಕಾವಕಾಶವೇ ಇಲ್ಲ. ಹಾಗೆಯೇ ಶ್ರೀಹರಿಗೆ ಗುಣಗಳಂತೆ ದೋಷಗಳು ವೇದಗಳಲ್ಲಿ ಹೇಳಿದವುಗಳಾಗಲೀ ಬೇರೆ ಪ್ರಮಾಣಗಳಿಂದ ಸಿದ್ಧಗಳಾದವುಗಳೂ ಯಾವುದೂ ಇಲ್ಲವೇ ಇಲ್ಲ (ಅಂದರೆ ಶ್ರೀಹರಿಗೆ ದೋಷಗಳನ್ನು ಯಾವ ಪ್ರಮಾಣಗಳಲ್ಲಿಯೂ ಹೇಳಲೇ ಇಲ್ಲ. ಆದರೆ ಮಿಥ್ಯಾಜ್ಞಾನಿಗಳಿಂದ ದೋಷಗಳು ಇವೆ, ಎಂದು ತಿಳಿಯಲ್ಪಟ್ಟಿವೆ (ಅಂದರೆ ವೇದಗಳ ಸರಿಯಾದ ತಾತ್ಪರ್ಯವನ್ನು ತಿಳಿಯ ದಿರುವ ಮಿಥ್ಯಾಜ್ಞಾನಿಗಳು. ಕೆಲವು ವಾಕ್ಯಗಳು ಶ್ರೀಹರಿಗೆ ದೋಷಗಳನ್ನು ಹೇಳುತ್ತವೆ, ಎಂದು ತಿಳಿ ಯುತ್ತಾರೆ) (೩) ಹೀಗೆ ಸರ್ವೋತ್ತಮನಾದ ಶ್ರೀಪರಮಾತ್ಮನಲ್ಲಿ ಸ್ಥಿತಿಯು (ಅಂದರೆ ಶ್ರೀಪರಮಾತ್ಮ

ಅನಂತಾನಂತ ಗುಣಗಳು ಇವೆ. ಯಾವ ದೋಷವೂ ಇಲ್ಲ, ಎಂದು ವ್ಯವಸ್ಥೆಯು.) ಶ್ರೀಹರಿಯಿಂದ ಕ್ಷೀರಿಯವರಲ್ಲಿ ವೇದಸಿದ್ಧಗಳಾದ ಹಾಗೆಯೇ ಪ್ರಮಾಣಾಂತರಸಿದ್ಧಗಳಾದ ಗುಣ ದೋಷಗಳ ವ್ಯವಸ್ಥೆಯು. (ಅವು ಕ್ರಮವಾಗಿ ಉತ್ತಮರಲ್ಲಿ ಗುಣಗಳು ಹೆಚ್ಚು, ದೋಷಗಳು ಕಡಿಮೆ, ಮಧ್ಯಮರಲ್ಲಿ ಗುಣ ದೋಷಗಳೆರಡು ಸಮವು ಅಧಮರಲ್ಲಿ ದೋಷಗಳು ಹೆಚ್ಚು ಗುಣಗಳು ಕಡಿಮೆ.) ಹೀಗೆ ಶ್ರೀಪರ ಮಾತ್ಮನಿಗೆ ಸರ್ವದಾ ದೋಷವಿಲ್ಲವೆಂದು ಜಾಬಾಲಖಿಲ ಶ್ರುತಿಯಿಂದ ಸಿದ್ಧವಾಗುತ್ತದೆ. (೪) (ಹಿಂದೆ ಹೇಳಿದ ಪ್ರಕಾರ ಶ್ರೀಪರಮಾತ್ಮನಲ್ಲಿ ಅಪರಿಚ್ಛಿನ್ನ ಪರಿಮಾಣಾದಿಗಳನ್ನು ಹೇಳಿದರೆ ಯಾವ ದೋಷವೂ ಇಲ್ಲದಿರುವುದರಿಂದ ಅಪರಿಚ್ಛಿನ್ನ ಪರಿಮಾಣವುಳ್ಳವನೆಂದು ಹೇಳಿದ್ದು ಔಪಚಾರಿಕವೆಂದು ಕಲ್ಪಿಸಕೂಡದು, ಎನ್ನುತ್ತಾರೆ—) ನಾಂತಂ ನ ಪುನಸ್ತವಾದಿಂ ಪಶ್ಯಾಮಿ ಎಂದು ಆದ್ಯಂತಗಳು ಇಲ್ಲವೆಂದು ಹೇಳಿದ್ದು ಔಪಚಾರಿಕವಲ್ಲವೆಂದು ತಿಳಿಸುವುದಕ್ಕಾಗಿ ನ ಮಧ್ಯಂ ಎಂದು ಹೇಳುತ್ತಾರೆ.) (ಮಧ್ಯಾವಸ್ಥೆಯನ್ನು ನಿರಾಕರಿಸುವುದಕ್ಕಾಗಿಯೇ ಹೇಳಿದ್ದೆಂದು ಏಕೆ ಆಗಲಾರದೆಂದರೆ—) ಔಪಚಾರಿಕತ್ವವನ್ನು ಪರಿಹರಿಸುವುದಕ್ಕಾಗಿ ಹೇಳಿದ್ದೆಂದು ಆಗದೆ ಹೋದರೆ ಆದ್ಯಂತಗಳು ಇಲ್ಲ ಎಂದು ಹೇಳಿದ್ದರಿಂದಲೇ (ಅಂದರೆ ಪರಿಚ್ಛಿನ್ನ ಪರಿಮಾಣವಿಲ್ಲವೆಂದು ಹೇಳಿದ್ದರಿಂದಲೇ) ಮಧ್ಯಾವಸ್ಥೆಯೂ ಇಲ್ಲವೆಂದು ಸಿದ್ಧವಾಗುವುದರಿಂದ (ನ ಮಧ್ಯಂ ಎಂದು ಹೇಳಿದ್ದು ವ್ಯರ್ಥವಾಗುವುದು) (೫) (ವಿಶ್ವರೂಪಃ ಎಂಬುವುದಕ್ಕೆ ಮಹದಾದಿಗಳೇ ಸ್ವರೂಪ ವಾಗಿವುಳ್ಳವನು, ಎಂಬುವ ಪ್ರತೀತಿಯನ್ನು ಪ್ರಮಾಣಕೊಟ್ಟು ನಿರಾಕರಿಸುತ್ತಾರೆ—) ವಿಶ್ವರೂಪಃ = ಸರ್ವ ಗುಣಪರಿಪೂರ್ಣವಾದ ಸ್ವರೂಪವುಳ್ಳವನು, ಆ ಶ್ರೀಹರಿಯು ವಿಶ್ವರೂಪನು. ಅಂದರೆ ಅಪರಿಪೂರ್ಣ ಗುಣಸ್ವರೂಪನಲ್ಲ ಆದಕಾರಣ ಆ ಈ ಶ್ರೀಹರಿಯು ಅನಂತರೂಪನು. ಅಂದರೆ ಆ ಶ್ರೀಹರಿಗೆ ಅನಿತ್ಯತ್ವಾದಿರೂಪವಾದ ನಾಲ್ಕು ವಿಧ ನಾಶವೂ ಇಲ್ಲ ಎಂದು ಶಾಂಡಿಲ್ಯಶಾಖೆಯಲ್ಲಿ ಹೇಳಿದ್ದಾರೆ ॥ ೬ ॥ ॥ ೧೬ ॥

ಗೀ ॥ ಕಿರೀಟಿನಂ ಗದಿನಂ ಚಕ್ರಿಣಂ ಚ
ತೇಜೋರಾಶಿಂ ಸರ್ವತೋ ದೀಪ್ತಿಮಂತಂ ।
ಪಶ್ಯಾಮಿ ತ್ವಾಂ ದುರ್ನಿರೀಕ್ಷ್ಯಂ ಸಮಂತಾತ್
ದೀಪ್ತಾನಲಾರ್ಕದ್ಯುತಿಮಪ್ರಮೇಯಂ ॥ ೧೭ ॥

ಅ ॥ ಕಿರೀಟಿನಂ = ಕಿರೀಟಧಾರಿಯೂ, ಗದಿನಂ = ಗದಾಧಾರಿಯೂ, ಚಕ್ರಿಣಂ ಚ = ಚಕ್ರಧಾರಿಯೂ, ತೇಜೋರಾಶಿಂ = ತೇಜಸ್ಸಿನ ಸಮುದಾಯರೂಪನೂ, ಸರ್ವತಃ = ಎಲ್ಲೆಡೆಯಲ್ಲಿಯೂ ದೀಪ್ತಿಮಂತಂ = ಪ್ರಕಾಶವುಳ್ಳವನೂ, ಸಮಂತಾತ್ = ಸುತ್ತುಮುತ್ತಲೂ, ದುರ್ನಿರೀಕ್ಷ್ಯಂ = ಸಾಮಾನ್ಯ ಜನರಿಗೆ ನೋಡಲಶಕ್ಯನೂ, ದೀಪ್ತಾನಲಾರ್ಕದ್ಯುತಿಂ = ಪ್ರಕಾಶಿಸಿಕೊಂಡಿರುವ ಅಗ್ನಿಸೂರ್ಯರ ಪ್ರಕಾಶದಂತೆ ಪ್ರಕಾಶವುಳ್ಳವನೂ, ಅಪ್ರಮೇಯಂ = ಅಪರಿಮಿತ ಪ್ರಕಾಶವುಳ್ಳವನೂ ಆದ, ತ್ವಾಂ = ನಿನ್ನನ್ನು ಪಶ್ಯಾಮಿ = ನೋಡುತ್ತೇನೆ. ॥ ೧೭ ॥

ಗೀ ॥ ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ ।
ತ್ವಮವ್ಯಯಃ ಶಾಶ್ವತಧರ್ಮಗೋಪ್ತಾ
ಸನಾತನಸ್ತ್ವಂ ಪುರುಷೋ ಮತೋ ಮೇ ॥ ೧೮ ॥

ಅ ॥ (ಶ್ರೀಕೃಷ್ಣನೇ) ತ್ವಂ=ನೀನು, ಅಕ್ಷರಂ=ನಾಲ್ಕು ವಿಧ ನಾಶರಹಿತನೂ, ಪರಮಂ=ಸರ್ವೋತ್ತಮನೂ, ತ್ವಂ=ನೀನು, ಅಸ್ಯ ವಿಶ್ವಸ್ಯ=ಈ ಎಲ್ಲಾ ಜಗತ್ತಿಗೆ, ಪರಂ ನಿಧಾನಂ=ಮುಖ್ಯಾಶ್ರಯನೂ, ತ್ವಂ=ನೀನು, ಅವ್ಯಯಃ=ಹ್ರಾಸವಿಲ್ಲದವನು, ಶಾಶ್ವತಧರ್ಮಗೋಪ್ತಾ=ಅನಾದಿಪರಂಪರೆಯಿಂದ ಬಂದಿರುವ ಧರ್ಮಗಳನ್ನು ಕಾಪಾಡುವವನು, ಸನಾತನಃ=ಅನಾದಿ ನಿತ್ಯನು, ಪುರುಷಃ=ಸರ್ವಗುಣ ಪರಿಪೂರ್ಣನು, ಮತ್ತು ಸರ್ವರ ಹೃದಯದೊಳಗೆ ಇರುವವನು, ವೇದಿತವ್ಯಂ=ಮುಮುಕ್ಷುಗಳಿಂದ ತಿಳಿದುಕೊಳ್ಳಲಿಕ್ಕೆ ಅರ್ಹನು, ಅಥವಾ ಸರ್ವ ವೇದಗಳಿಂದ ತಿಳಿಯಲು ಯೋಗ್ಯನು, ಇತಿ=ಹೀಗೆ, ಮೇ=ನನ್ನ, ಮತಃ=ಸಮ್ಮತನು. ॥ ೧೮ ॥

ಭಾ ॥ ಅನಲಾರ್ಕದ್ಯುತಿಮಿತ್ಯುಕ್ತೇ ಮಿತತ್ವಶಂಕಾಮಪಾಕರೋತಿ । ಅಪ್ರಮೇಯಮಿತಿ । ॥ ೧೭,೧೮ ॥

ಅ ॥ ಅಗ್ನಿ ಸೂರ್ಯರ ಪ್ರಕಾಶದಂತೆ ಪ್ರಕಾಶವುಳ್ಳವನು, ಎಂದು ಹೇಳಿದಾಗ ಅದರಿಂದ ಶ್ರೀಹರಿಗೆ ಪರಿಮಿತ ಕಾಂತಿಯೇ ಇರುವುದೆಂದು ಶಂಕೆಯು ಹುಟ್ಟುತ್ತದೆ ಅಂತಹ ಶಂಕೆಯನ್ನು ಅಪ್ರಮೇಯಂ ಎಂಬುವುದರಿಂದ ಪರಿಹರಿಸುತ್ತಾರೆ. (ವಸ್ತುತಃ ಶ್ರೀಹರಿಗೆ ಅಪರಿಮಿತವಾದ ಕಾಂತಿಯೇ ಇರುವುದು.) ॥ ೧೭, ೧೮ ॥

ಗೀ ॥ ಅನಾದಿಮಧ್ಯಾಂತಮನಂತವೀರ್ಯ-
ಮನಂತಬಾಹುಂ ಶಶಿಸೂರ್ಯನೇತ್ರಂ ।
ಪಶ್ಯಾಮಿ ತ್ವಾಂ ದೀಪ್ತಹುತಾಶವಕ್ತ್ರಂ
ಸ್ವತೇಜಸಾ ವಿಶ್ವಮಿದಂ ತಪಂತಂ ॥ ೧೯ ॥

ಅ ॥ ಅನಾದಿಮಧ್ಯಾಂತಂ=ಗುಣಗಳಿಂದ ಆದಿ ಮಧ್ಯ ಅಂತವಿಲ್ಲದವನು, (ಅಂದರೆ ಅಪರಿಮಿತ ಗುಣಗಳುಳ್ಳವನು) ಅನಂತವೀರ್ಯಂ=ಅಪರಿಮಿತ ಪರಾಕ್ರಮವುಳ್ಳವನು, ಅನಂತಬಾಹುಂ=ಅಪರಿಮಿತ ತೋಳುಗಳುಳ್ಳವನು, ಶಶಿಸೂರ್ಯನೇತ್ರಂ=ಚಂದ್ರ ಸೂರ್ಯರನ್ನು ಹುಟ್ಟಿಸುವ ಕಣ್ಣುಗಳುಳ್ಳವನು, ದೀಪ್ತಹುತಾಶ ವಕ್ತ್ರಂ=ಪ್ರಕಾಶಿಸಿಕೊಂಡಿರುವ ಅಗ್ನಿಯನ್ನು ಸೃಷ್ಟಿಸಿರುವ ಮುಖವುಳ್ಳವನು ಸ್ವತೇಜಸಾ=ತನ್ನ ಪ್ರಕಾಶದಿಂದ, ಇದಂ ವಿಶ್ವಂ=ಈ ಸಂಪೂರ್ಣ ಜಗತ್ತನ್ನು, ತಪಂತಂ=ತಪಿಸುವವನೂ ಅಂತಹ, ತ್ವಾಂ=ನಿನ್ನನ್ನು, ಪಶ್ಯಾಮಿ=ನೋಡುತ್ತೇನೆ. ॥ ೧೯ ॥

ಭಾ ॥ (೧) ಶಶಿಸೂರ್ಯನೇತ್ರಮಿತ್ಯಸ್ಯಹಂ ಕ್ರತುರಿತ್ಯಾದಿವತ್ ॥ (೨) ತದಂಗಜಾಸ್ಸರ್ವ-
ಸುರಾದಯೋಽಪಿ ತಸ್ಮಾತ್ತದಂಗೇಷ್ವೃಷಿಭಿಃ ಸ್ತುತಾಸ್ತ ಇತ್ಯೃಗ್ವೇದಖಿಲೇಷು ॥ (೩)
ಚಂದ್ರಮಾ ಮನಸೋ ಜಾತಶ್ಚಕ್ಷೋಃ ಸೂರ್ಯೋ ಅಜಾಯತೇತ್ಯಾದಿ ಚ ॥ (೪)
ಬಹುರೂಪತ್ವಾದ್ವ್ಯಾಪ್ತ್ಯಾಶ್ರಯತ್ವಂ ಚ ತೇಷಾಂ ಯುಕ್ತಂ ॥ ೧೯ ॥

ಅ ॥ (೧) ಶಶಿಸೂರ್ಯನೇತ್ರಂ ಎಂಬುವುದನ್ನು ಕೂಡ ಅಹಂ ಕ್ರತುಃ ಇತ್ಯಾದಿಗಳ ವ್ಯಾಖ್ಯಾನದಂತೆ ಮಾಡಬೇಕು (ಅಂದರೆ ಚಂದ್ರಸೂರ್ಯರನ್ನು ಹುಟ್ಟಿಸಿದ ಕಣ್ಣುಗಳುಳ್ಳವನು. ಅಥವಾ ಚಂದ್ರ ಸೂರ್ಯರಿಗೆ ಆಶ್ರಯಗಳಾದ ಕಣ್ಣುಗಳುಳ್ಳವನು, ಎಂದರ್ಥವು. (ಚಂದ್ರಸೂರ್ಯರೇ ಶ್ರೀ

ನ್ತು ಅರ್ಥವಲ್ಲ.) (೨) (ಏಕೆ ಹೀಗೆ ಅರ್ಥಮಾಡಬೇಕೆಂದರೆ—) ದೇವತೆಗಳೇ ಮೊದಲಾದವರೆಲ್ಲರೂ ಶ್ರೀ ಪರಮಾತ್ಮನ ಅಂಗದಿಂದಲೇ ಹುಟ್ಟಿದವರು ಆದಕಾರಣ ಆ ದೇವಾದಿಗಳನ್ನು ಅವಾವ ಅಂಶಗಳೆಂದು ಸ್ತುತಿಗಳು ಸ್ತುತಿಸಿರುತ್ತಾರೆ, ಎಂದು ಋಗ್ವೇದಖಿಲಗಳಲ್ಲಿ ಹೇಳಿದೆ. (೩) (ಚಂದ್ರ ಸೂರ್ಯರೇ ಕಣ್ಣುಗಳೆಂದು ಅಭೇದ ಹೇಳಿದರೆ ಬಾಧಕಪ್ರಮಾಣವನ್ನು ಹೇಳುತ್ತಾರೆ—) ಚಂದ್ರನು ಮನಸ್ಸಿನಿಂದ ಹುಟ್ಟಿದನು. ಸೂರ್ಯನು ಕಣ್ಣಿನಿಂದ ಹುಟ್ಟಿದನು, ಎಂದು ದೇವತೆಗಳಿಗೆ ಶ್ರೀಹರಿಯ ಆವಾವ ಅಂಗ ಮೊದಲಾದವುಗಳಿಂದ ಉತ್ಪತ್ತಿಯನ್ನು ಹೇಳುವ ಶ್ರುತಿಯಿದೆ. (೪) (ಹಾಗಾದರೆ ಈ ಶ್ರುತಿಯಲ್ಲಿ ಚಂದ್ರನು ಮನಸ್ಸಿನಿಂದ ಹುಟ್ಟಿದನೆಂದೂ ಮನಸ್ಸನ್ನು ಆಶ್ರಯಿಸಿದ್ದಾನೆಂದೂ ಹೇಳುತ್ತದೆ. ಭಗವದ್ಗೀತೆಯಲ್ಲಿ ಕಣ್ಣಿನಿಂದ ಹುಟ್ಟಿದನೆಂದೂ ಕಣ್ಣನ್ನು ಆಶ್ರಯಿಸಿಕೊಂಡಿದ್ದಾನೆಂದೂ ಹೇಳುತ್ತದೆ. ಹಾಗೆಯೇ ಬೇರೆ ಬೇರೆ ಶರೀರಗಳಲ್ಲಿನಿಂದ ಹುಟ್ಟಿದವನೆಂದೂ ಹೇಳುತ್ತದೆ. ಇವೆಲ್ಲವೂ ಹೇಗೆ ಕೂಡುತ್ತವೆ? ಎಂದರೆ—) ದೇವತೆಗಳಿಗೆ ಬಹುರೂಪಗಳು ಇರುವುದರಿಂದ ಬಹು ಅಂಗಗಳನ್ನು ಆಶ್ರಯಿಸಿಕೊಂಡಿದ್ದರೆಂದು ಹೇಳಿದ್ದು ಕೂಡುತ್ತದೆ. ॥ ೧೯ ॥

ಗೀ ॥ ದ್ಯಾವಾಪೃಥಿವ್ಯೋರಿದಮಂತರಂ ಹಿ
ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।
ದೃಷ್ಟ್ವಾಽದ್ಭುತಂ ರೂಪಮುಗ್ರಂ ತವೇದಂ
ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥ ೨೦ ॥

ಅ ॥ ಮಹಾತ್ಮನ್ = ಮಹಾನುಭಾವನಾದ ಶ್ರೀಕೃಷ್ಣನೇ, ದ್ಯಾವಾಪೃಥಿವ್ಯೋಃ = ಸ್ವರ್ಗಭೂಮಿಗಳ, ಇದಂ ಅಂತರಂ = ಈ ಮಧ್ಯಪ್ರದೇಶವು, ಏಕೇನ = ಒಂದು ರೂಪದಿಂದ, ತ್ವಯಾ = ನಿನ್ನಿಂದ, ವ್ಯಾಪ್ತಂ = ವ್ಯಾಪಿಸಲ್ಪಟ್ಟಿದೆ. ಸರ್ವಾ ದಿಶಃ = ಎಲ್ಲಾ ದಿಕ್ಕುಗಳು, (ರೂಪಾಂತರಗಳಿಂದ ವ್ಯಾಪಿಸಲ್ಪಟ್ಟವೆ) ತವ = ನಿನ್ನ, ಇದಂ = ಈ, ಉಗ್ರಂ = ಭಯಂಕರವಾದ, ಅದ್ಭುತಂ = ಆಶ್ಚರ್ಯವನ್ನುಂಟುಮಾಡುವ, ರೂಪಂ = ರೂಪವನ್ನು, ದೃಷ್ಟ್ವಾ = ನೋಡಿ, ಲೋಕತ್ರಯಂ = ಮೂರು ಲೋಕಗಳಲ್ಲಿವ್ವ ಭಕ್ತವರ್ಗವನ್ನು, ಪ್ರವ್ಯಥಿತಂ = ಬಹಳ ಹೆದರಿದ್ದನ್ನಾಗಿ, ಪಶ್ಯಾಮಿ = ನೋಡುತ್ತೇನೆ. ಹಿ = ನಿಶ್ಚಯವು. ॥ ೨೦ ॥

ಗೀ ॥ ಅಮೀ ಹಿ ತ್ವಾಂ ಸುರಸಂಘಾ ವಿಶಂತಿ
ಕೇಚಿದ್ಭೀತಾಃ ಪ್ರಾಂಜಲಯೋ ಗೃಣಂತಿ ।
ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ
ಸ್ತುವಂತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥ ೨೧ ॥

ಅ ॥ ಅಮೀ = ಈದಾವ, ಸುರಸಂಘಾಃ = ಮುಕ್ತರಾದ ದೇವತೆಗಳ ಸಮೂಹಗಳು ತ್ವಾಂ = ನಿನ್ನನ್ನು, ವಿಶಂತಿ = ಪ್ರವೇಶಮಾಡುತ್ತಾರೆ. ಹಿ = ನಿಶ್ಚಯವು. ಕೇಚಿತ್ = ಕೆಲವರು, ಭೀತಾಃ = ಹೆದರಿದವರಾಗಿ, ಪ್ರಾಂಜಲಯಃ = ಕೈಜೋಡಿಸಿಕೊಂಡು ನಮಸ್ಕರಿಸಿದವರಾಗಿ, ಗೃಣಂತಿ = ಸ್ತುತಿಮಾಡುತ್ತಾರೆ. ಮಹರ್ಷಿಸಿದ್ಧಸಂಘಾಃ = ಮಹರ್ಷಿಗಳೂ ಸಿದ್ಧರೂ ಇವರ ಸಮೂಹಗಳು, ಸ್ವಸ್ತೀತ್ಯುಕ್ತ್ವಾ = ಜಗತ್ತಿಗೆ ಕಲ್ಯಾಣವಾಗಲಿ, ಎಂದು ಹೇಳಿ, ಪುಷ್ಕಲಾಭಿಃ = ಶ್ರೀಹರಿಗೆ ಗುಣಪರಿಪೂರ್ಣತ್ವವನ್ನು ಹೇಳುವ ಸ್ತುತಿಭಿಃ = ಸ್ತೋತ್ರಗಳಿಂದ, ಸ್ತುವಂತಿ = ಸ್ತೋತ್ರಮಾಡುತ್ತಾರೆ. ॥ ೨೧ ॥

ಗೀ || ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ
ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ |
ಗಂಧರ್ವಯಕ್ಷಾಸುರಸಿದ್ಧಸಂಘಾ
ವೀಕ್ಷಂತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ || ೨೨ ||

ಅ || ಯೇ ಚ = ಯಾವ, ರುದ್ರಾದಿತ್ಯಾಃ = ರುದ್ರರು ಆದಿತ್ಯರೂ, ಚ = ಮತ್ತು, ವಸವಃ = ಅಷ್ಟ ವಸುಗಳು, ಸಾಧ್ಯಾಃ = ಸಾಧ್ಯರೂ, ವಿಶ್ವೇ = ವಿಶ್ವೇದೇವತೆಗಳು, ಅಶ್ವಿನೌ = ಅಶ್ವಿನೀ ದೇವತೆಗಳೂ, ಮರುತಶ್ಚ = ಮರುದ್ಗಣಗಳೂ, ಊಷ್ಮಪಾಶ್ಚ = ಪಿತೃಗಳೂ, ಗಂಧರ್ವಯಕ್ಷಾಸುರಸಿದ್ಧಸಂಘಾಃ = ಗಂಧರ್ವರೂ, ಯಕ್ಷರೂ, ಅಸುರರೂ ಸಿದ್ಧರೂ ಇವರ ಸಮೂಹಗಳೂ, ಸರ್ವೇ = ಇವರೆಲ್ಲರೂ, ತ್ವಾಮೇವ = ನಿನ್ನನ್ನೇ, ವಿಸ್ಮಿತಾಶ್ಚೈವ = ಆಶ್ಚರ್ಯ ಹೊಂದಿದವರಾಗಿಯೇ, ವೀಕ್ಷಂತೇ = ನೋಡುತ್ತಿದ್ದಾರೆ. || ೨೨ ||

ಗೀ || ರೂಪಂ ಮಹತ್ತೇ ಬಹುವಕ್ತ್ರನೇತ್ರಂ
ಮಹಾಬಾಹೋ ಬಹುಬಾಹೂರುಪಾದ |
ಬಹೂದರಂ ಬಹುದಂಷ್ಟ್ರಾಕರಾಲಂ
ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಽಹಂ || ೨೩ ||

ಅ || ಮಹಾಬಾಹೋ = ಶ್ರೀಕೃಷ್ಣನೇ, ತೇ = ನಿನ್ನ, ಬಹುವಕ್ತ್ರನೇತ್ರಂ = ಅನಂತ ಮುಖಗಳೂ ಕಣ್ಣುಗಳೂ ಇವುಗಳುಳ್ಳ, ಬಹೂದರಂ = ಅನಂತ ಹೊಟ್ಟೆಗಳುಳ್ಳ, ಬಹುಬಾಹೂರುಪಾದಂ = ಅನಂತ ತೋಳುಗಳೂ, ತೊಡೆಗಳೂ ಪಾದಗಳೂ ಇವುಗಳುಳ್ಳ, ಬಹುದಂಷ್ಟ್ರಾಕರಾಲಂ = ಅನಂತ ಕೋರೆ ಹಲ್ಲುಗಳಿಂದ ವಿರೂಪವಾಗಿ ಭಯಪಡಿಸುವ, ಮಹದ್ರೂಪಂ = (ನಿನ್ನ) ಅತಿ ದೊಡ್ಡ ರೂಪವನ್ನು, ಲೋಕಾಃ = ಭಕ್ತವರ್ಗದವರು, ದೃಷ್ಟ್ವಾ = ನೋಡಿ, ಪ್ರವ್ಯಥಿತಾಃ = ಹೆದರಿ ವ್ಯಾಕುಲಚಿತ್ತರಾಗಿ ನಡುಗುತ್ತಾ ಇದ್ದಾರೆ. ತಥಾ ಅಹಂ = ಹಾಗೆಯೇ ನಾನೂ ಹೆದರಿ ನಡುಗುತ್ತಾ ಇದ್ದೇನೆ. || ೨೩ ||

ಗೀ || ನಭಃಸ್ಪೃಶಂ ದೀಪ್ತಮನೇಕವರ್ಣಂ
ವ್ಯಾತ್ತಾನನಂ ದೀಪ್ತವಿಶಾಲನೇತ್ರಂ |
ದೃಷ್ಟ್ವಾ ಹಿ ತ್ವಾಂ ಪ್ರವ್ಯಥಿತಾಂತರಾತ್ಮಾ
ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ || ೨೪ ||

ಅ || ವಿಷ್ಣೋ = ಸರ್ವತ್ರ ವ್ಯಾಪ್ತನಾದ ಶ್ರೀಪರಮಾತ್ಮನೇ, ನಭಃಸ್ಪೃಶಂ = ಆಕಾಶವನ್ನು ಮುಟ್ಟಿಕೊಂಡಿರುವ, ದೀಪ್ತಂ = ಪ್ರಕಾಶಿಸುತ್ತಿರುವ, ಅನೇಕವರ್ಣಂ = ಬಹು ವಿಧವರ್ಣಗಳುಳ್ಳ, ವ್ಯಾತ್ತಾನನಂ = ಚೆನ್ನಾಗಿ ತೆರೆಯಲ್ಪಟ್ಟ ಮುಖಗಳುಳ್ಳ, ದೀಪ್ತವಿಶಾಲನೇತ್ರಂ = ಪ್ರಕಾಶಿಸಿಕೊಂಡಿರುವ ವಿಶಾಲವಾದ ಕಣ್ಣುಗಳುಳ್ಳ, ತ್ವಾಂ = ನಿನ್ನನ್ನು, (ನಾನು) ದೃಷ್ಟ್ವಾ = ನೋಡಿ, ಪ್ರವ್ಯಥಿತಾಂತರಾತ್ಮಾ = ಚೆನ್ನಾಗಿ ನಡುಗುತ್ತಿರುವ ಮನಸ್ಸುಳ್ಳವನಾಗಿ, ಧೃತಿಂ = ಧೈರ್ಯವನ್ನು, ಶಮಂ ಚ = ಮನಶ್ಶಾಂತಿಯನ್ನು ಸಹ ಕೂಡ ನ ವಿಂದಾಮಿ = ಹೊಂದುವುದಿಲ್ಲ. ಹಿ = ನಿಶ್ಚಯವು. || ೨೪ ||

ಗೀ॥ ದಂಷ್ಟ್ರಾಕರಾಲಾನಿ ಚ ತೇ ಮುಖಾನಿ
ದೃಷ್ಟ್ವೈವ ಕಾಲಾನಲಸನ್ನಿಭಾನಿ ।
ದಿಶೋ ನ ಜಾನೇ ನ ಲಭೇ ಚ ಶರ್ಮ
ಪ್ರಸೀದ ದೇವೇಶ ಜಗನ್ನಿವಾಸ ॥ ೨೫ ॥

ಅ॥ ಜಗನ್ನಿವಾಸ=ಸರ್ವ ಜಗತ್ತಿಗೆ ಆಶ್ರಯನಾದ, ದೇವೇಶ=ಬ್ರಹ್ಮಾದಿ ನಿಖಿಲ ದೇವತೆಗಳಿಗೆ ಸ್ವಾಮಿಯಾದ ಶ್ರೀಕೃಷ್ಣನೇ, ತೇ=ನಿನ್ನ, ದಂಷ್ಟ್ರಾಕರಾಳಾನಿ=ಕೋರೆ ಹಲ್ಲುಗಳಿಂದ ಹೆದರಿಸುತ್ತಿರುವ, ಕಾಲಾನಲಸನ್ನಿಭಾನಿ ಚ=ಪ್ರಲಯಕಾಲದ ಅಗ್ನಿಗೆ ಸದೃಶ ಪ್ರಭೆಯುಳ್ಳ, ಮುಖಾನಿ=ಮೋರೆಗಳನ್ನು, ದೃಷ್ಟ್ವೈವ=ನೋಡಿದೊಡನೆಯೇ, ದಿಶಃ=ದಿಕ್ಕುಗಳನ್ನು, ನ ಜಾನೇ=ಕಾಣಲಾರೆನು. ಶರ್ಮಂ ಚ=ಸುಖವನ್ನು ಕೂಡ, ನ ಲಭೇ=ಹೊಂದುವುದಿಲ್ಲ ಪ್ರಸೀದ=ನನ್ನ ಮೇಲೆ ದಯೆಯಿಟ್ಟು ಸಂತುಷ್ಟನಾಗು. ॥ ೨೫ ॥

ಗೀ॥ ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ
ಸರ್ವೇ ಸಹೈವಾವನಿಪಾಲಸಂಘೈಃ ।
ಭೀಷ್ಮೋ ದ್ರೋಣಃ ಸೂತಪುತ್ರಸ್ತಥಾಽಸೌ
ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥ ೨೬ ॥

ಅ॥ ಅಮೀ=ಈ ದಾವ, ಸರ್ವೇ=ಎಲ್ಲಾ, ಧೃತರಾಷ್ಟ್ರಸ್ಯ ಪುತ್ರಾಃ=ಧೃತರಾಷ್ಟ್ರನ ಪುತ್ರರಾದ ದುರ್ಯೋಧನಾದಿಗಳು, ಅವನಿಪಾಲಸಂಘೈಃ=ಭೂಪಾಲಕರಾದ ರಾಜರ ಸಮುದಾಯಗಳಿಂದ, ಸಹೈವ=ಕೂಡಿಕೊಂಡೇ, ತ್ವಾಂ=ನಿನ್ನನ್ನು, (ಪ್ರವೇಶಿಸುತ್ತಾರೆ.) ತಥಾ=ಹಾಗೆಯೇ, ಭೀಷ್ಮಃ=ಭೀಷ್ಮಾಚಾರ್ಯರು, ದ್ರೋಣಃ=ದ್ರೋಣಾಚಾರ್ಯರೂ, ಅಸೌ ಸೂತಪುತ್ರಃ=ಸೂತಪುತ್ರನಾದ ಈ ಕರ್ಣನೂ, (ಇವರೆಲ್ಲರೂ) ಯೋಧಮುಖ್ಯೈಃ=ಯುದ್ಧಮಾಡುವ ಭಟರಲ್ಲಿ ಪ್ರಮುಖರಾದ, ಅಸ್ಮದೀಯೈರಪಿ=ನಮ್ಮವರಿಂದಲೂ, ಸಹ=ಕೂಡಿಕೊಂಡು, (ನಿನ್ನಲ್ಲಿ ಪ್ರವೇಶಿಸುತ್ತಿದ್ದಾರೆ.) ॥ ೨೬ ॥

ಗೀ॥ ವಕ್ತ್ರಾಣಿ ತೇ ತ್ವರಮಾಣಾ ವಿಶಂತಿ
ದಂಷ್ಟ್ರಾಕರಾಲಾನಿ ಭಯಾನಕಾನಿ ।
ಕೇಚಿದ್ವಿಲಗ್ನಾ ದಶನಾಂತರೇಷು
ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥ ೨೭ ॥

ಅ॥ ತೇ=ಆ ದುರ್ಯೋಧನಾದಿಗಳೂ, ದಂಷ್ಟ್ರಾಕರಾಲಾನಿ=ಕೋರೆಹಲ್ಲುಗಳಿಂದ ವಿಕಾರಗಳಾದ, ಭಯಾನಕಾನಿ=ಭಯವನ್ನು ಹುಟ್ಟಿಸುವ, ವಕ್ತ್ರಾಣಿ=ನಿನ್ನ ಮುಖಗಳನ್ನು, ತ್ವರಮಾಣಾಃ=ಅತಿವೇಗಯುಕ್ತರಾಗಿ ವಿಶಂತಿ=ಪ್ರವೇಶಮಾಡುತ್ತಾರೆ (ವಸ್ತುತಸ್ತು ಶ್ರೀಪರಮಾತ್ಮನೇ ಅನಂತ ಮುಖಗಳಿಂದ ಸೇನೆಗಳಲ್ಲಿರತಕ್ಕ ಭಟರನ್ನು ಸಂಹರಿಸಿಕೊಂಡಿರುತ್ತಾನೆ.) ಕೇಚಿತ್=ಕೆಲವರು, (ಆ ಮುಖಗಳ ಒಳಗೆ ಹೋಯುವವರೂ) ಕೇಚಿತ್=ಕೆಲವರು ದಶನಾಂತರೇಷು=ಹಲ್ಲುಗಳ ಮಧ್ಯದಲ್ಲಿ, ವಿಲಗ್ನಾಃ=ಸಿಕ್ಕಿದವರಾಗಿ, ಚೂರ್ಣಿತೈಃ ಉತ್ತಮಾಂಗೈಃ=ಚೂರ್ಣೀಕೃತಗಳಾದ ಶಿರಸ್ಸುಗಳೊಡನೆ ಕಾಣುತ್ತಾರೆ

ರುವವರಾಗಿ, ಸಂದೃಶ್ಯಂತೇ=ನನ್ನಿಂದ ಕಾಣಲ್ಪಡುತ್ತಿದ್ದಾರೆ. (ಅಲ್ಪ ಜ್ಞಾನಿಗಳಿಗೆ ಹಾಗೆ ಕಾಣದಿದ್ದರೂ ಅರ್ಜುನನಿಗೆ ದಿವ್ಯದೃಷ್ಟಿಯುಳ್ಳವನಾದುದರಿಂದ ಅವನಿಗೆ ಹಾಗೆ ಕಾಣುತ್ತದೆಂಬುವುದು ತಿಳಿಯತಕ್ಕದ್ದು.) ॥ ೨೭ ॥

ಗೀ ॥ ಯಥಾ ನದೀನಾಂ ಬಹವೋಽಂಬುವೇಗಾಃ
ಸಮುದ್ರಮೇವಾಭಿಮುಖಾ ದ್ರವಂತಿ ।
ತಥಾ ತವಾಮೀ ನರಲೋಕವೀರಾ
ವಿಶಂತಿ ವಕ್ತ್ರಾಣ್ಯಭಿವಿಜ್ವಲಂತಿ ॥ ೨೮ ॥

ಅ ॥ ನದೀನಾಂ=ಗಂಗಾದಿ ನದಿಗಳ, ಬಹವಃ ಅಂಬುವೇಗಾಃ=ನಾನಾ ಪ್ರಕಾರಗಳಾದ ನೀರಿನ ಪ್ರವಾಹಗಳು, ಸಮುದ್ರಮೇವಾಭಿಮುಖಾಃ=ಸಮುದ್ರಕ್ಕೆ ಅಭಿಮುಖಗಳಾಗಿಯೇ, ಯಥಾ=ಹೇಗೆ, ಸಮುದ್ರಮೇವ=ಸಮುದ್ರವನ್ನೇ, ದ್ರವಂತಿ=ಶೀಘ್ರವಾಗಿ ಹೋಗಿ ಪ್ರವೇಶಿಸುತ್ತವೋ, ತಥಾ=ಹಾಗೆಯೇ, ಅಮೀ ನರಲೋಕವೀರಾಃ=ಭೂಲೋಕದಲ್ಲಿ ಮಹಾ ಪರಾಕ್ರಮಶಾಲಿಗಳಾದ, ಈ ರಾಜರು, ಅಭಿವಿಜ್ವಲಂತಿ=ಚೆನ್ನಾಗಿ ಸುತ್ತಲೂ ಪ್ರಜ್ವಲಿಸಿಕೊಂಡಿರುವ, ತವ=ನಿನ್ನ, ವಕ್ತ್ರಾಣಿ=ಬಾಯಿಗಳನ್ನು, ವಿಶಂತಿ=ಹೊಕ್ಕುತ್ತಿದ್ದಾರೆ. ॥ ೨೮ ॥

ಗೀ ॥ ಯಥಾ ಪ್ರದೀಪ್ತಂ ಜ್ವಲನಂ ಪತಂಗಾ
ವಿಶಂತಿ ನಾಶಾಯ ಸಮೃದ್ಧವೇಗಾಃ ।
ತಥೈವ ನಾಶಾಯ ವಿಶಂತಿ ಲೋಕಾ-
ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥ ೨೯ ॥

ಅ ॥ ಪತಂಗಾಃ=ಚಿಟ್ಟೆಹುಳಗಳು, ಸಮೃದ್ಧವೇಗಾಃ=ಹೆಚ್ಚು ವೇಗದಿಂದ ಕೂಡಿದವುಗಳಾಗಿ, ನಾಶಾಯ=ಮರಣಕ್ಕೋಸ್ಕರ, ಪ್ರದೀಪ್ತಂ ಜ್ವಲನಂ=ಜ್ವಲಿಸುತ್ತಿರುವ ಬೆಂಕಿಯನ್ನು, ಯಥಾ=ಹೇಗೆ ವಿಶಂತಿ=ಪ್ರವೇಶಿಸುತ್ತವೋ, ತಥೈವ=ಹಾಗೆಯೇ, ಸಮೃದ್ಧವೇಗಾಃ=ಹೆಚ್ಚು ವೇಗಗಳುಳ್ಳ, ಲೋಕಾಃ=ದುರ್ಯೋಧನಾದಿಗಳೆಲ್ಲರೂ, ನಾಶಾಯ=ಮರಣಕ್ಕೋಸ್ಕರ, ತವ=ನಿನ್ನ, ವಕ್ತ್ರಾಣಿ=ಮುಖಗಳನ್ನು, ವಿಶಂತಿ=ಪ್ರವೇಶಿಸುತ್ತಾರೆ. ॥ ೨೯ ॥

ಗೀ ॥ ಲೇಲಿಹ್ಯಸೇ ಗ್ರಸಮಾನಃ ಸಮಂತಾತ್
ಲೋಕಾನ್ಸಮಗ್ರಾನ್ವದನೈರ್ಜ್ವಲದ್ಭಿಃ ।
ತೇಜೋಭಿರಾಪೂರ್ಯ ಜಗತ್ಸಮಗ್ರಂ
ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ ॥ ೩೦ ॥

ಅ ॥ (ನೀನು) ಜ್ವಲದ್ಭಿಃ=ಪ್ರಜ್ವಲಿಸುತ್ತಿರುವ, ವದನೈಃ=ಬಾಯಿಗಳಿಂದ, ಸಮಂತಾತ್=ಸುತ್ತುಮುತ್ತಲೂ, ನಾಲ್ಕುದಿಕ್ಕುಗಳಿಂದಲೂ, ಸಮಗ್ರಾನ್=ಎಲ್ಲಾ, ಲೋಕಾನ್=ದುರ್ಯೋಧನಾದಿಗಳನ್ನು, ಗ್ರಸಮಾನಃ=ಮುಖದಲ್ಲಿ ಹಾಕಿಕೊಂಡವನಾಗಿ, ಲೇಲಿಹ್ಯಸೇ=ನಾಲಿಗೆಯಿಂದ ಆಸ್ವಾದನ ಮಾಡುತ್ತೀಯೆ. (ಅಂದರೆ ದುರ್ಯೋಧನಾದಿಗಳ ಸಂಹಾರದಿಂದ ಸಂತೋಷಗೊಳ್ಳುತ್ತೀಯೆ.) ವಿಷ್ಣೋ=

ತ್ರೀಕೃಷ್ಣನೇ, ತವ=ನಿನ್ನ, ಉಗ್ರಾಃ=ತೀಕ್ಷ್ಣಗಳಾದ, ಭಾಸಃ=ಕಾಂತಿಗಳೂ, ತೇಜೋಭಿಃ=ತೇಜಸ್ಸುಗಳಿಂದ, ಸಮಗ್ರಂ ಜಗತ್=ಎಲ್ಲಾ ಜಗತ್ತನ್ನು, ಆಪೂರ್ಯ=ವ್ಯಾಪಿಸಿ, ಪ್ರತಪಂತಿ=ಸುಡುತ್ತಿದ್ದಾವೆ. ॥ ೨೦ ॥

ಟೀ—ದ್ಯಾವಾಪೃಥಿವ್ಯೋರಿದಮಂತರಂ ಹಿ (ಶ್ಲೋ. ೨೦.) ಎಂಬುವಲ್ಲಿ ತ್ವಯಾ ಎಂಬುವ ಏಕವಚನದಿಂದಲೇ ಏಕತ್ವವು ಸಿದ್ಧವಾಗುವುದರಿಂದ ಮರಳಿ ಏಕೇನ ಎಂದದ್ದು ಏತಕ್ಕೆಂದರೆ—ಏಕೇನ=ಏಕರೂಪದಿಂದ ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ—

ಭಾ ॥ (೧) ಮಾತಾಪಿತ್ರೋರಂತರಂಗಃ ಸ ಏಕರೂಪೇಣ ಚಾನ್ಯೈಃ ಸರ್ವಗತಃ ಸ ಏಕ ಇತಿ ವಾರುಣಶ್ರುತೇಃ ಏಕೇನೈವ ರೂಪೇಣ ದ್ಯಾವಾಪೃಥಿವ್ಯೋರಂತರಂ ವ್ಯಾಪ್ತೋ ಭವತಿ ॥ (೨) ಪಶ್ಯ ಮೇ ಪಾರ್ಥ ರೂಪಾಣೀತಿ ಬಹೂನಿ ಹಿ ರೂಪಾಣಿ ಪ್ರತಿಜ್ಞಾತಾನಿ ॥ (೩) ಮಾತಾಪಿತರೌ ಚ ಪೃಥಿವೀದ್ಯಾವೌ । ಮಾ ನೋ ಮಾತಾ ಪೃಥಿವೀ ದುರ್ಮತೌ ಧಾತ್ । ಮಧು ದ್ಯೌರಸ್ತು ನಃ ಪಿತೇತ್ಯಾದಿಪ್ರಯೋಗಾತ್ ॥ (೪) ನ ತು ನಿಯಮತೋ ಭಯಪ್ರದಂ ತತ್ಸ್ವರೂಪಂ । ನಾರದಸ್ಯ ತದಭಾವಾತ್ । ಕೇಷಾಂಚಿತ್ತಥಾ ದರ್ಶಯತಿ ಭಗವಾನ್ ॥ (೫) ಪ್ರೀಯಂತಿ ಕೇಚಿತ್ತಸ್ಯ ರೂಪಸ್ಯ ದೃಷ್ಟ್ವಾ ಬಿಭೇತಿ ಕಶ್ಚಿದಭ್ಯಸೇ ಸರ್ವತಶ್ಚಿತ್ತಿರಿತಿ ವಾರುಣಶಾಖಾಯಾಂ ॥ (೬) ನ ತು ತಂ ಸರ್ವೇ ಪಶ್ಯಂತಿ ॥ (೭) ಅದೃಷ್ಟ್ವಾಽಪಿ ತನ್ನಿರೂಪ್ಯ ಭಯೋ ದ್ರಷ್ಟುಸ್ತಥಾ ಪ್ರತಿಭಾತಿ ॥ (೮) ತಥಾ ಚ ಗೌತಮಖಿಲೇಷು । ದೃಷ್ಟ್ವಾ ದೇವಂ ಮೋದಮಾನಾ ಅದೃಷ್ಟ್ವಾಽಪ್ಯೇತದ್ಭಯಾದ್ವಿಭ್ಯತೋ ದೃಷ್ಟವತ್ತ್ವೇ । ಪಶ್ಯಂತಿ ತನ್ಯಸ್ತಚಕ್ಷುರ್ಮುಖಾಂಸ್ತು ತಸ್ಮಿನ್ನೇವೈತೇ ಮನಸೋ ಗತತ್ವಾದಿತಿ ॥ ೨೦—೩೦ ॥

ಅ ॥ (೧) ಆ ಶ್ರೀಹರಿಯು ಒಂದೇ ರೂಪದಿಂದ ಸ್ವರ್ಗಭೂಮಿಗಳ ಮಧ್ಯವನ್ನು ವ್ಯಾಪಿಸಿಕೊಂಡಿರುವನು ಆ ಶ್ರೀಹರಿಗೆ ಅನಂತರೂಪಗಳಿದ್ದರೂ ಆ ರೂಪಗಳಿಂದ ಭೇದವಿಲ್ಲದವನು ಅನಂತರೂಪಗಳಿಂದ (ಎಲ್ಲಾ ದಿಕ್ಕುಗಳೂ ವ್ಯಾಪ್ತಗಳಾಗಿವೆ. ಆದುದರಿಂದ) ಶ್ರೀಹರಿಯು ಸರ್ವತ್ರವ್ಯಾಪ್ತನು ಎಂಬುವ ವಾರುಣಶ್ರುತಿಯಿಂದ ಒಂದೇ ರೂಪದಿಂದ ಸ್ವರ್ಗಭೂಮಿಗಳ ಮಧ್ಯವನ್ನು ವ್ಯಾಪಿಸಿಕೊಂಡಿವಾನೆ (೨) (ದ್ರಷ್ಟುಮಿಚ್ಛಾಮಿ ತೇ ರೂಪಂ ಇತ್ಯಾದಿಗಳಿಂದ ವಿಶ್ವರೂಪವು ಒಂದೇ ರೂಪವೆಂದು ತಿಳಿಯಬರುವುದರಿಂದ, ರೂಪಾಂತರಗಳಿಂದ ಎಂದು ಹೇಳಿದ್ದು ಹೇಗೆ ಕೂಡುತ್ತದೆ? ಎಂದರೆ —) ಪಶ್ಯ ಮೇ ಪಾರ್ಥ ರೂಪಾಣಿ(ಶ್ಲೋ. ೫) ಎಂಬುವಲ್ಲಿ ಅನಂತರೂಪಗಳನ್ನು ನೋಡೆಂದು ಶ್ರೀಕೃಷ್ಣನು ಹೇಳಿರುವನು (ಶ್ರೀಹರಿಗೆ ಅನಂತರೂಪಗಳಿದ್ದರೂ ಆ ರೂಪಗಳಿಗೆ ಭೇದವಿಲ್ಲವೆಂದು ತಿಳಿಸುವುದಕ್ಕಾಗಿ ದ್ರಷ್ಟುಮಿಚ್ಛಾಮಿ ತೇ ರೂಪಂ (ಶ್ಲೋ. ೩) ಎಂಬುವಲ್ಲಿ ರೂಪಂ ಎಂದು ಏಕವಚನ ಪ್ರಯೋಗವು (೩) (ಹಿಂದೆ ಹೇಳಿದ ಪ್ರಮಾಣದಲ್ಲಿರುವ ಮಾತಾಪಿತ್ರೋಃ ಎಂಬುವುದಕ್ಕೆ ಅರ್ಥವನ್ನು ಹೇಳುತ್ತಾರೆ) ಮಾತಾಪಿತರೌ—ಪೃಥಿವೀ ಸ್ವರ್ಗಗಳು. (ಅಂದರೆ ಪೃಥಿವಿಯು ಮಾತಾ ಎಂದೂ, ಸ್ವರ್ಗವು ಪಿತಾ ಎಂದೂ ಕರೆಸಿಕೊಳ್ಳುತ್ತವೆ) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ) [illegible] (ಪೃಥಿವ್ಯಭಿಮಾನಿದೇವತೆಯು) ನಮ್ಮನ್ನು ದುರ್ಬುದ್ಧಿಯಲ್ಲಿ ಪ್ರೇರಿಸದಿರಲಿ [illegible] (ಸ್ವರ್ಗಾಭಿಮಾನಿದೇವತೆಯು) ನಮಗೆ ಸುಖಕ್ಕೆ ಕಾರಣವಾಗಲಿ. (ಎಂದು [illegible]

ಮಾತಾ ಎಂದೂ, ಸ್ವರ್ಗವನ್ನು ಪಿತಾ ಎಂದೂ) ಪ್ರಯೋಗಿಸಿದೆ. (೪) (ದೃಷ್ಟ್ವಾದ್ಭುತಂ ಇತ್ಯಾದಿಗಳಿಂದ ಸರ್ವರಿಗೂ ವಿಶ್ವರೂಪದರ್ಶನದಿಂದ ಭಯವು ಹುಟ್ಟುವುದಿಲ್ಲ. ಮತ್ತೆ ಕೆಲವು ಭಕ್ತರಿಗೆ ಕೆಲವು ವೇಳೆಯೇ ಕಾರಣವಿಶೇಷದಿಂದಲೇ ಭಯವುಂಟಾಗುತ್ತದೆನ್ನುತ್ತಾರೆ—) ವಿಶ್ವರೂಪದರ್ಶನವು ಸರ್ವರಿಗೂ ನಿಯಮವಾಗಿ ಭಯವನ್ನು ಹುಟ್ಟಿಸತಕ್ಕುದಲ್ಲ. (ಏಕೆಂದರೆ—) ನಾರದರಿಗೆ ವಿಶ್ವರೂಪದರ್ಶನದಿಂದ ಭಯವು ಹುಟ್ಟಲೇ ಇಲ್ಲ. ಕೆಲವರಿಗೆ ಮಾತ್ರ ಶ್ರೀಕೃಷ್ಣನು ಉಗ್ರರೂಪವನ್ನು ತೋರಿಸಿ ಭಯವು ಹುಟ್ಟುವಂತೆ ಮಾಡಿರುತ್ತಾನೆ. (೫) ಕೆಲವರು ಆ ವಿಶ್ವರೂಪವನ್ನು ನೋಡಿದಾಗ ಸಂತೋಷಪಡುತ್ತಾರೆ. ಕೆಲವರು ಹೆದರುತ್ತಾರೆ. ಆ ವಿಶ್ವರೂಪವನ್ನು ಮತ್ತೂ ಮತ್ತೂ ನೋಡುತ್ತಿರಲು ಸರ್ವರಿಗೂ ಆನಂದೋದ್ರೇಕವಾಗುತ್ತದೆ, ಎಂದು ವಾರುಣಶಾಖೆಯಲ್ಲಿ ಹೇಳಿದೆ. (೬) (ಹೀಗೆ ವಿಶ್ವರೂಪದರ್ಶನದಿಂದ ಸರ್ವರಿಗೆ ಭಯವುಂಟಾಗುವುದಿಲ್ಲವೆಂದು ಹೇಳಿ ಮೂರು ಲೋಕಗಳಲ್ಲಿ ಎಲ್ಲರಿಗೂ ವಿಶ್ವರೂಪದರ್ಶನವಾಗುವುದಿಲ್ಲವೆನ್ನುತ್ತಾರೆ—)ಮೂರು ಲೋಕಗಳಲ್ಲಿದ್ದವರೆಲ್ಲರೂ ಆ ಶ್ರೀಹರಿಯನ್ನು ನೋಡುವುದಿಲ್ಲ. (ಮತ್ತೆ ತ್ರಿಲೋಕೇಷು ಸ್ಥಿತೈರ್ಭಕ್ತೈಃ ಎಂದು ಹೇಳಿದ ಪ್ರಕಾರ ಯೋಗ್ಯತೆಯುಳ್ಳ ಕೆಲವು ಭಕ್ತರು ಮಾತ್ರ ಅರ್ಜುನನಿಗೆ ತೋರಿಸಿದ ರೂಪವನ್ನು ನೋಡಿರುತ್ತಾರೆ.) (೭) (ಲೋಕತ್ರಯಂ ಎಂಬುವುದರ ಅಭಿಪ್ರಾಯವನ್ನು ಹೇಳುತ್ತಾರೆ—) ವಿಶ್ವರೂಪವನ್ನು ನೋಡುವುದಕ್ಕಾಗಿ ಪ್ರಯತ್ನಪಡುತ್ತಿದ್ದ ಮೂರು ಲೋಕಗಳಲ್ಲಿರುವ ಪುರುಷರ ಮಧ್ಯದಲ್ಲಿ ಯೋಗ್ಯತೆಯುಳ್ಳವರು ಆ ವಿಶ್ವರೂಪವನ್ನು ನೋಡದಿದ್ದರೂ ಅದನ್ನೇ ಮನಸ್ಸಿನಲ್ಲಿ ಧ್ಯಾನಮಾಡಿಕೊಂಡು ಇದ್ದವರಿಗೆ ಭಯವುಂಟಾದಾಗ ಭಯಗ್ರಸ್ತನಾದ ಅರ್ಜುನನಿಗೆ ಇವರೆಲ್ಲರೂ ಈ ವಿಶ್ವರೂಪವನ್ನು ನೋಡಿ ನನ್ನಂತೆ ಹೆದರಿದ್ದಾರೆ, ಎಂದು ಅರ್ಜುನನಿಗೆ ತೋರುವುದರಿಂದ, ಲೋಕತ್ರಯಂ ದೃಷ್ಟ್ವಾ ಪ್ರವ್ಯಥಿತಂ ಎಂದು ಅರ್ಜುನನು ಹೇಳಿರುತ್ತಾನೆ (೮) (ಈ ವಿಷಯದಲ್ಲಿ ವೇದಪ್ರಮಾಣವನ್ನು ಹೇಳುತ್ತಾರೆ—) ವಿಶ್ವರೂಪವನ್ನು ನೋಡದಿದ್ದರೂ ಅದನ್ನೇ ಮನಸ್ಸಿನಲ್ಲಿಟ್ಟುಕೊಂಡು ಧ್ಯಾನದಿಂದುಂಟಾದ ಭಯದಿಂದ ಭಯಚಿಹ್ನೆಯನ್ನು ಹೊಂದಿದ, ಮತ್ತು ಆ ವಿಶ್ವರೂಪದಲ್ಲಿಯೇ ವಿಶ್ವರೂಪವನ್ನು ನೋಡತಕ್ಕ ಕೆಲವು ಜನರು ಹೆದರಿದಂತೆ ಧ್ಯಾನಿಸತಕ್ಕ ಭಕ್ತರೂ ಭಯಪಡುತ್ತಾರೆಂದು, ಮನಸ್ಸು ಹೋಗುವುದರಿಂದ ಆ ವಿಶ್ವರೂಪದಲ್ಲಿಯೇ ಕಣ್ಣುಗಳನ್ನು ಮುಖವನ್ನು ಇಟ್ಟಿರುವ ವಿಶ್ವರೂಪವನ್ನು ಧ್ಯಾನಿಸುತ್ತಿರುವ ಭಕ್ತಜನರನ್ನು, ವಿಶ್ವರೂಪವನ್ನು ನೋಡಿ ಸಂತೋಷಪಡುತ್ತಿರುವ ಅರ್ಜುನಾದಿಗಳು ನೋಡುತ್ತಾರೆ, ಎಂದು ಗೌತಮಖಿಲಗಳಲ್ಲಿ ಹೇಳಿದೆ ॥ ೨೦–೨[illegible]

ಟೀ—ದ್ಯಾವಾಪೃಥಿವ್ಯೋಃ (ಶ್ಲೋ. ೨೦) ಎಂಬುವಲ್ಲಿ ತ್ವಯಾ ಎಂಬುವುದರಿಂದಲೇ ಒಬ್ಬನೆಂದು ಸಿದ್ಧವಾಗುವ ಪ್ರಯುಕ್ತ ಪುನಃ ಏಕೇನ ಎಂದು ಹೇಳಿದ್ದಕ್ಕೆ ಪ್ರಯೋಜನವನ್ನು ಹೇಳುತ್ತಾರೆ—

**ತಾ ॥ (೧) ದ್ಯಾವಾಪೃಥಿವ್ಯೋರಂತರಮೇಕೇನೈವ ರೂಪೇಣ ವ್ಯಾಪ್ತಂ ॥ (೨) ನಾಂತಃ ನ ಮಧ್ಯಮಿತ್ಯುಕ್ತತ್ವಾತ್ ॥ (೩) ಪುನರನಾದಿಮಧ್ಯಾಂತಮಿತಿ ಗುಣಾನಂತ್ಯಾಪೇಕ್ಷಯಾ। ತ್ವಯಾ ತತಂ ವಿಶ್ವಮನಂತರೂಪೇತಿ ಕಾಲಾಪೇಕ್ಷಯಾ॥ (೪) ಸ್ವಯಮಂತಃ ವಿದ್ಯಮಾನಮಪಿ ನ ಪಶ್ಯತೀತ್ಯಾಶಂಕ್ಯ ತ್ವಯಾ ತತಂ ವಿಶ್ವಮನಂತ ಮಿತ್ಯಾಹ । (೫) ಅನ್ಯತ್ರಾತ್ಪರ್ಯಜ್ಞಾಪನಾಯಾಭ್ಯಾಸರೂಪಂ । ಸರ್ವಂ ಸಮಾಪ್ನೋಷಿ ತತೋಽಸಿ ಸರ್ವ ಇತಿ ಸರ್ವಂ ಖಲ್ವಿದಂ ಬ್ರಹ್ಮೇತ್ಯಾದಿಷು ಸರ್ವಶಬ್ದವ್ಯಾಖ್ಯಾನರೂಪಂ ॥ ೧ ॥**

ಅ॥ (೧) ಸ್ವರ್ಗ ಭೂಮಿಗಳ ಮಧ್ಯಪ್ರದೇಶವು ಒಂದೇ ರೂಪದಿಂದ ವ್ಯಾಪ್ತವಾಗಿದೆ (೨) (ಅನಾದಿಮಧ್ಯಾಂತಂ (ಶ್ಲೋ. ೧೯) ಎಂಬುವುದರಿಂದ [illegible] ಹೇಳಲ್ಪಡುತ್ತದೆ [illegible]

ಅನ್ಯಥಾತ್ವಶಂಕೆಯನ್ನು ಹೋಗಲಾಡಿಸುತ್ತಾರೆ—) ಪರಿಮಾಣಾನಂತ್ಯವು ನಾಂತಂ ನ ಮಧ್ಯಂ (ಶ್ಲೋ. ೧೬.) ಎನ್ನುವುದರಿಂದ ಹೇಳಲ್ಪಟ್ಟ ಪ್ರಯುಕ್ತ (ಅನಾದಿಮಧ್ಯಾಂತಂ ಎಂಬುವಲ್ಲಿ ಪರಿಮಾಣದಿಂದ ಇತರಗಳಾದ ಗುಣಗಳ ಅನಂತ್ಯವೇ ಹೇಳಲ್ಪಡುತ್ತದೆ. ಪರಿಮಾಣಾನಂತ್ಯವು ಹೇಳಲ್ಪಡುವುದಿಲ್ಲ.) (೩) ಶ್ರೀಪರಮಾತ್ಮನಿಗೆ ಅನಂತಗುಣಗಳೆಂದು ಇಟ್ಟುಕೊಂಡು ತಿರುಗಿ ಅನಾದಿಮಧ್ಯಾಂತಂ ಎಂದು ಹೇಳಿದ್ದು. (೪) (ನಾಂತಂ ನ ಮಧ್ಯಂ ಎಂದು ಪರಿಮಾಣಾನಂತ್ಯವನ್ನು ಅನಾದಿಮಧ್ಯಾಂತಂ ಎಂಬುವುದರಿಂದ ಗುಣಾನಂತ್ಯವನ್ನು ಹೇಳಿದ್ದರಿಂದ ತ್ವಯಾ ತತಂ ವಿಶ್ವಮನಂತರೂಪ (ಶ್ಲೋ. ೩೮.) ಎಂಬುವಲ್ಲಿ ಅನಂತರೂಪ ಎಂದು ಪುನಃ ಹೇಳಿದ್ದು ಏಕೆ ಎಂದರೆ—) ತ್ವಯಾ ತತಂ ವಿಶ್ವಮನಂತರೂಪ ಎಂಬುವುದು ಕಾಲವನ್ನು ಇಟ್ಟುಕೊಂಡು ಹೇಳಿದ್ದು (ಅಂದರೆ ದೇಶಾನಂತ್ಯವನ್ನು ಗುಣಾನಂತ್ಯವನ್ನು ಹಿಂದೆ ಹೇಳಿದ್ದಾರೆ. ಕಾಲಾನಂತ್ಯವನ್ನೇ ಸರ್ವಕಾಲದಲ್ಲಿರುವವನು ಎಂದು ಹೇಳುವುದಕ್ಕಾಗಿ ಅನಂತರೂಪ ಎಂದು ಹೇಳಿದ್ದು.) (ಏವಂಚ ನಾಂತಂ ನ ಮಧ್ಯಂ ಎಂಬುವಲ್ಲಿ ಪರಿಮಾಣಾನಂತ್ಯವು. ಅನಾದಿಮಧ್ಯಾಂತಂ ಎಂಬುವಲ್ಲಿ ವೀರ್ಯಾದಿಗುಣಗಳ ಅನಂತ್ಯವು ಅನಂತರೂಪ ಎಂಬುವಲ್ಲಿ ಕಾಲಾನಂತ್ಯವು ಹೇಳಲ್ಪಡುತ್ತದೆ.) (೫) (ನಾಂತಂ ನ ಮಧ್ಯಂ ನ ಪುನಸ್ತವಾದಿಂ (ಶ್ಲೋ. ೧೬.) ಎಂಬುವಲ್ಲಿ ಪರಿಮಾಣಾನಂತ್ಯವನ್ನು ಹೇಳಿದ್ದರಿಂದ ತ್ವಯಾ ತತಂ ವಿಶ್ವಂ ಎಂದು ತಿರುಗಿ ಏಕೆ ಹೇಳಿದ್ದು ಎಂದರೆ—) ನಾನು ಇದ್ದಾಗ್ಯೂ ತಾನು (ಅರ್ಜುನನು) ಅಂತವನ್ನು ನೋಡುವುದಿಲ್ಲ, ಎಂದು ತೋರುವುದರಿಂದ ಅಂತಂ ನ ಪಶ್ಯಾಮಿ ಎಂದು ಹೇಳಿದರೆ ಶ್ರೀಹರಿಗೆ ಪರಿಮಾಣಾನಂತ್ಯವು ಸಿದ್ಧಿಸುವುದಿಲ್ಲ, ಎಂದಾಶಂಕಿಸಿಕೊಂಡು ತ್ವಯಾ ತತಂ ವಿಶ್ವಂ ಎಂದು ಹೇಳುತ್ತಾರೆ. (ಅಂದರೆ ಆ ಆಶಂಕೆಯನ್ನು ನಿವೃತ್ತಿಗೊಳಿಸುವುದಕ್ಕಾಗಿ ನಾನು ಮಾತ್ರ ನೋಡುವುದಿಲ್ಲವೆಂದಲ್ಲ. ಮತ್ತೆ ತ್ವಯಾ ತತಂ ವಿಶ್ವಂ ಎಂದು ಹೇಳಿದ್ದರಿಂದ ಶ್ರೀಪರಮಾತ್ಮನಿಗೆ ಸರ್ವತ್ರ ವ್ಯಾಪ್ತತ್ವವು ವಾಸ್ತವವಾಗಿ ಇದೆ, ಎಂದು ಹೇಳಿದ್ದರಿಂದ ಪುನರುಕ್ತಿ ದೋಷವಿಲ್ಲ.) (೬) (ಅದಾಗ್ಯೂ ಪಶ್ಯಾಮಿ ತ್ವಾಂ ಸರ್ವತೋಽನಂತರೂಪಂ (ಶ್ಲೋ. ೧೬) ಎಂಬುವುದು, ದ್ಯಾವಾಪೃಥಿವ್ಯೋರಿದಮಂತರಂ (ಶ್ಲೋ. ೨೦.) ಇತ್ಯಾದಿಗಳನ್ನು ಹೇಳಿದ್ದರಿಂದ ಪುನರುಕ್ತವಾಯಿತೆಂದರೆ—) ಶ್ರೀಪರಮಾತ್ಮನು ಸರ್ವದೇಶಗಳಲ್ಲಿಯೂ ವ್ಯಾಪ್ತನು, ಸರ್ವಕಾಲಗಳಲ್ಲಿಯೂ ಇರುವವನು, ಸರ್ವಗುಣಪರಿಪೂರ್ಣನು, ಎಂಬುವಲ್ಲಿಯೇ ಗೀತೆಗೆ ಮಹಾತಾತ್ಪರ್ಯವು, ಎಂದು ತಿಳಿಸುವುದಕ್ಕಾಗಿ ಒಂದೇ ಅರ್ಥವುಳ್ಳ ವಾಕ್ಯಗಳನ್ನು ಅನೇಕ ಸಲ ಹೇಳಿದ್ದು (೭) (ಅನಂತವೀರ್ಯಾಮಿತವಿಕ್ರಮಸ್ತ್ವಂ ಸರ್ವಂ ಸಮಾಪ್ನೋಷಿ (ಶ್ಲೋ. ೪೦.) ಎಂದು ಆದರಾತಿಶಯದಿಂದ ಹೇಳಿದ ಪ್ರಯುಕ್ತ ಪುನರುಕ್ತಿದೋಷವಿಲ್ಲವಾದರೂ ಅದಕ್ಕೆ ಪ್ರಯೋಜನಾಂತರವನ್ನು ಹೇಳುತ್ತಾರೆ—) ಸಮಸ್ತ ಜಗತ್ತನ್ನು ವ್ಯಾಪಿಸಿಕೊಂಡಿದ್ದು ಆದಕಾರಣ ಸರ್ವ ಎನಿಸಿಕೊಂಡಿದ್ದು, ಎಂಬುವುದು. ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ಶ್ರುತಿಗಳಲ್ಲಿದ್ದ ಸರ್ವಶಬ್ದಕ್ಕೆ (ಪರಬ್ರಹ್ಮನು ಸಮಸ್ತ ಜಗತ್ತನ್ನು ವ್ಯಾಪಿಸಿಕೊಂಡಿದ್ದಾನೆ, ಇತ್ಯಾದ್ಯರ್ಥವೆಂದು) ವ್ಯಾಖ್ಯಾನರೂಪವು. (ಅಂದರೆ ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ಶ್ರುತಿಗಳಿಗೆ ಸರ್ವಜಗತ್ತೂ ಪರಬ್ರಹ್ಮಸ್ವರೂಪವೆಂದರ್ಥವಲ್ಲ. ಮತ್ತೆ ಆ ಶ್ರುತಿಯಲ್ಲಿರತಕ್ಕ ಸರ್ವಶಬ್ದಕ್ಕೆ ಪರಬ್ರಹ್ಮನು ಸರ್ವತ್ರವ್ಯಾಪ್ತನಾದ ಪ್ರಯುಕ್ತ ಸರ್ವ ಎನಿಸಿಕೊಂಡಿದ್ದಾನೆ. ಎಂದೇ ಅರ್ಥವು) ॥ ೧ ॥

ಟೀ — ಸುಖಮಾತ್ಯಂತಿಕಂ ಯತ್ತತ್ (ಅಧ್ಯಾ. ೬. ಶ್ಲೋ. ೨೧) ಇತ್ಯಾದಿಗಳಲ್ಲಿ ಭಗವದ್ದರ್ಶನವು ಪರಮಾನಂದಕ್ಕೆ ಕಾರಣವೆಂದು ಹೇಳಿದ್ದರಿಂದ ವಿಶ್ವರೂಪದರ್ಶನವು ವ್ಯಥೆಗೆ ಕಾರಣವೆಂದು ಹೇಳಿದ್ದು ಹೇಗೆ ಎಂದರೆ—

ತಾ ॥ (೧) ತ್ರಿಲೋಕೇಷು ಸ್ಥಿತೈರ್ಭಕ್ತೈರರ್ಜುನಾಯ ಪ್ರದರ್ಶಿತಂ । ದೃಷ್ಟಂ ವಿಷ್ಣೋಃ
ವಿಶ್ವರೂಪಂ ಸ್ವಯೋಗ್ಯತ್ವಾನುಸಾರತಃ । ಸ್ವಾಯುಸ್ಸ್ಪಷ್ಟ್ಯೈವ ಪಾರ್ಥೇನ ಸ್ಪಷ್ಟತಃ

ಭೀತಾಶ್ಚ ಕೇಚಿಲಾಃ ॥ (೨) ದರ್ಶನಾಭ್ಯಾಸತೋ ದೃಷ್ಟಿರಾನಂದೋದ್ರೇಕದಾ ಭವೇತ್ ॥ (೩) ತಸ್ಮಿನ್ಕಾಲೇ ತು ಭೂಮೇಶ್ಚ ಭಾರಹಾರಾರ್ಥಮುದ್ಯಮಾತ್ । ಉಗ್ರತ್ವಮಿವ ಸರ್ವತ್ರ ನ ಭೀತಿರ್ಬ್ರಹ್ಮದರ್ಶಿನಾಂ ॥ (೪) ಅರ್ಜುನಾದಧಿಕಾ ಯೇ ತು ತೇಷಾಂ ಭೀತಿರ್ನ ಚಾಭವತ್ । ಶ್ರೀಬ್ರಹ್ಮರುದ್ರಪೂರ್ವಾಣಾಂ ಕೃಷ್ಣಾಯುಧೀಮರಾಮಯೋರಿತ್ಯಾಗ್ನೇಯವಚನಾದ್ದೃಷ್ಟ್ವಾಽದ್ಭುತಂ ರೂಪಮಿತ್ಯಾದಿ ಯುಜ್ಯತೇ ॥ (೫) ಮುಕ್ತಾಃ ಸುರಸಂಘಾ ವಿಶಂತಿ । ಪ್ರವೇಶೋ ನಿರ್ಗಮಶ್ಚೈವ ಮುಕ್ತಾನಾಂ ಸ್ವೇಚ್ಛಯಾ ಭವೇದಿತಿ(೬) ಬ್ರಹ್ಮಾಂಡೇ ॥ ೨ ॥

ಅ ॥ (೧) ಆ ಲೋಕಗಳಲ್ಲಿರತಕ್ಕ ಭಕ್ತರು ಅರ್ಜುನನಿಗೆ ತೋರಿಸಿದ ಶ್ರೀವಿಷ್ಣುವಿನ ವಿಶ್ವರೂಪವನ್ನು ತಂತಮ್ಮ ಯೋಗ್ಯತಾನುಸಾರವಾಗಿ ಪ್ರಾಯಶಃ ನೋಡಿರುವರು. ಆಗ ಅವರೆಲ್ಲರೂ ಅರ್ಜುನನಿಂದ ಕೂಡಿಯೇ ಆ ರೂಪವನ್ನು ನೋಡಿ ಪ್ರಾಯಶಃ ಹೆದರಿರುವರು. (೨) (ವಿಶ್ವರೂಪ ದರ್ಶನವು ಸದಾ ಭಯಂಕರವಲ್ಲ. ಏಕೆಂದರೆ—) ಅದೇ ವಿಶ್ವರೂಪದರ್ಶನವು ಬಹಳಾವರ್ತಿ ಆದರೆ ಆನಂದಾತಿಶಯವೇ ಆಗುತ್ತದೆ. (೩) ಆದರೂ ಆ ಕಾಲದಲ್ಲಿ ಭೂಮಿಗೆ ಭಾರಭೂತರಾದ ದುಷ್ಟಜನರನ್ನು ನಾಶಗೊಳಿಸುವುದಕ್ಕಾಗಿ ಶ್ರೀಕೃಷ್ಣನ ಉದ್ಯೋಗವಿರುವುದರಿಂದಲೇ ಶ್ರೀಹರಿಯ ವಿಶ್ವರೂಪದರ್ಶನವು ಭಯಕ್ಕೆ ಕಾರಣವಾಯಿತು. ಆದರೂ ಸರ್ವಕಾಲದಲ್ಲಿಯೂ ಸರ್ವದೇಶದಲ್ಲಿಯೂ ವಿಶ್ವರೂಪ ಸ್ವರೂಪಾತ್ಮಕ ಭಗವದ್ರೂಪಗಳನ್ನು ನೋಡುತ್ತಿರುವವರಿಗೆ ಭಯವುಂಟಾಗುವುದಿಲ್ಲ. (೪) (ಸರ್ವರಿಗೂ ಭಯವುಂಟಾಗುವುದರಿಂದ ಪ್ರಾಯೋ ಭೀತಾಃ ಎಂದದ್ದು ಹೇಗೆ? ಎಂದರೆ—) ಅರ್ಜುನನಿಗಿಂತ ಉತ್ತಮರು ಯಾರು ಇದ್ದಾರೋ ಅವರಿಗೆ ವಿಶ್ವರೂಪದರ್ಶನದಿಂದ ಭಯವೇ ಉಂಟಾಗುವುದಿಲ್ಲ. (ಅಧಮರಲ್ಲಿ ನಾರದರಿಗೆ ಮಾತ್ರ ಭಯವುಂಟಾಗಲಿಲ್ಲ ಉತ್ತಮರಿಗೆಲ್ಲರಿಗೂ ಭಯವುಂಟಾಗಲಿಲ್ಲ.) ಲಕ್ಷ್ಮೀ ಬ್ರಹ್ಮ, ರುದ್ರ, ಮೊದಲಾದವರಿಗೂ ದ್ರೌಪದೀದೇವಿಗೂ, ಭೀಮ, ಬಲರಾಮ, ಇವರಿಗೂ ಭಯವುಂಟಾಗಲಿಲ್ಲ,' ಎಂಬುವ ಆಗ್ನೇಯವಚನದಿಂದ (ಅರ್ಜುನನಿಗಿಂತ ಉತ್ತಮರಾದ ಲಕ್ಷ್ಮ್ಯಾದಿಗಳನ್ನು ಅಧಮರಾದ ನಾರದಋಷಿಗಳನ್ನು, ಬಿಟ್ಟು ಬೇರೆ ಎಲ್ಲಾ ಜನರಿಗೆ ಭಯವುಂಟಾಗಿರುವುದರಿಂದ ದೃಷ್ಟ್ವಾಽದ್ಭುತಂ ರೂಪಂ ಇತ್ಯಾದಿ (ಶ್ಲೋ. ೨೦) ಹೇಳಿದ್ದು ಕೂಡುತ್ತದೆ.) (೫)(ಪಶ್ಯಾಮಿ ದೇವಾಂಸ್ತವ ದೇವ ದೇಹೇ (ಶ್ಲೋ. ೧೫) ಎಂದು ಹೇಳಿದ್ದರಿಂದ ಅಮೀ ಹಿ ತ್ವಾ ಸುರಸಂಘಾ ವಿಶಂತಿ (ಶ್ಲೋ. ೨೧) ಎಂದು ದೇವತೆಗಳಿಗೆ ಪ್ರವೇಶವು ಹೇಳಿದ್ದು ಏಕೆ ಎಂದರೆ—) ಮುಕ್ತರಾದ ದೇವತೆಗಳ ಸಮೂಹಗಳು, ಪ್ರವೇಶವಾಗುತ್ತಾರೆ. (ಅಂದರೆ ಅಮೀ ಹಿ ತ್ವಾ ಸುರ ಸಂಘಾಃ(ಶ್ಲೋ. ೨೧.)ಎಂಬುವಲ್ಲಿ ಪರೋಕ್ಷವಾಗಿ ನಿರ್ದಿಷ್ಟರಾದವರು ಮುಕ್ತರು. ಪಶ್ಯಾಮಿ ದೇವಾನ್ (ಶ್ಲೋ. ೧೫.) ಎಂಬುವಲ್ಲಿ ಅಮುಕ್ತರು. ಆದಕಾರಣ ವಿರೋಧವಿಲ್ಲ) (ಮುಕ್ತರಿಗೇನೇ ಸ್ವೇಚ್ಛೆಯಿಂದ ಪರಮಾತ್ಮನಲ್ಲಿ ಪ್ರವೇಶವಿದೆ. ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಮುಕ್ತರಿಗೆ ಪರಮಾತ್ಮನಲ್ಲಿ ಪ್ರವೇಶವೂ ನಿರ್ಗಮವೂ ಕೂಡ ತಮ್ಮ ತಮ್ಮ ಇಚ್ಛೆಯಿಂದಲೇ ಆಗುವುದು, ಎಂದು ಬ್ರಹ್ಮಾಂಡದಲ್ಲಿ ಹೇಳಿದೆ ೨

ಪೀ — ಧೃತರಾಷ್ಟ್ರಪುತ್ರಾದಿಗಳಿಗೆ ಶ್ರೀಪರಮಾತ್ಮನ ಮುಖಪ್ರವೇಶದಲ್ಲಿ ಉತ್ಕೃಷ್ಟವಾದ ಯೋಗ್ಯತೆಯಿಲ್ಲದಿರುವುದರಿಂದ ಅಮೀ ಚ ತ್ವಾಂ ಧೃತರಾಷ್ಟ್ರಸ್ಯ ಪುತ್ರಾಃ (ಶ್ಲೋ. ೨೬) ಇತ್ಯಾದಿಗಳನ್ನು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ—

ತಾ ॥ (೧) ತತ್ಪುತ್ರಾಣಾಂ ಕುರ್ವತಾಮಪಿ ಭಗವಚ್ಚೇಷ್ಟಯೈವ ಪ್ರಲಯೋದಕೇ (ಪ್ರಲಯೇ) ಪ್ರಜಾನಾಂ ಪ್ರವೇಶವತ್ತತೋ ಯುಜ್ಯತೇ ॥(೨) ತೇನಾಮಪತೋ ಭ

ವನ್ಮುಖಾನಾಮುಭಯಾಭಿಮುಖತ್ವಾಚ್ಚೋಭೇ ಸೇನೇ ತತ್ರ ಪ್ರವಿಶತಃ ॥ ಯೇ ತು ತಸ್ಮಿನ್ನ(ನ್ನೇವ ಮು)ಹೂರ್ತೇ ಮರಿಷ್ಯಂತಿ ತೇಷಾಂ ದಶನಾಂತರೇಷುಚೂರ್ಣಿತಮಪಿ ಶಿರಃ ಸೂಕ್ಷ್ಮದೃಷ್ಟಿಗೋಚರತ್ವಾನ್ನಾನುಪದೃಷ್ಟ್ವಾ ತಥಾ ನ ದೃಶ್ಯತೇ ॥ (೪) ಯಥಾ ಭಿನ್ನಮಪಿ ಘಟಾದಿಕಂ ಯಾವತ್ಪೃಥಙ್ನ ಪತತಿ ತಾವನ್ಮಂದದೃಷ್ಟೀನಾಂ ನ ಜ್ಞಾಯತೇ ॥ (೫) ಯಥಾ ಪುರೂರವಸೋ ಜರಾಃ ಕ್ಷಿಭ್ಯಾಮೇವ ದೃಷ್ಟಾ ॥ ೩ ॥
॥ ೧೬—೨೦ ॥

● ಟಿ(೧) ಪ್ರಲಯೋದಕಪ್ರವೇಶಕ್ಕೆ ಅನುಕೂಲವಾಗದ ವ್ಯಾಪಾರವುಳ್ಳ ಪ್ರಜೆಗಳಿಗೆ ಶ್ರೀಹರಿಯ ಚೇಷ್ಟೆಯಿಂದಲೇ ಪ್ರಲಯೋದಕದಲ್ಲಿ ಹೇಗೆ ಪ್ರವೇಶವಾಗುವುದೋ. ಅದರಂತೆ ಭಗವನ್ಮುಖಪ್ರವೇಶಕ್ಕೆ ಅನುಕೂಲವಾದ ವ್ಯಾಪಾರವಿಲ್ಲದಿರುವ ದುರ್ಯೋಧನಾದಿಗಳಿಗೆ ಶ್ರೀಭಗವಂತನ ಮುಖಚೇಷ್ಟೆಯಿಂದಲೇ ಶ್ರೀಕೃಷ್ಣನ ಮುಖದಲ್ಲಿ ಪ್ರವೇಶತ ಕೂಡುತ್ತದೆ (೨) (ಶ್ರೀಪರಮಾತ್ಮನ ಮುಖಚೇಷ್ಟೆಯಿಂದಲೇ ಭಗವನ್ಮುಖದಲ್ಲಿ ಪ್ರವೇಶವೆಂದಾದರೆ ದುರ್ಯೋಧನಾದಿಗಳೇ ಶ್ರೀಪರಮಾತ್ಮನಿಗೆ ಅಭಿಮುಖರಾಗಿರುವುದರಿಂದ ಅವರಿಗೇನೇ ಶ್ರೀಕೃಷ್ಣನ ಮುಖದಲ್ಲಿ ಪ್ರವೇಶವಾಗುವುದು. ಅದಕಾರಣ ಸಹಾಸ್ಮದೀಯೈರಪಿ (ಶ್ಲೋ ೨೬) ಎಂದು— ಎರಡು ಸೇನೆಯವರಿಗೂ ಪ್ರವೇಶ ಹೇಳಿದ್ದು ಹೇಗೆ ಎಂದರೆ—) ೨ ಸೇನೆಗಳ ಮಧ್ಯದಲ್ಲಿ ಶ್ರೀಕೃಷ್ಣನ ಮುಖಗಳು ಕುರುಸೈನ್ಯ, ಪಾಂಡವಸೈನ್ಯ, ಹೀಗೆ ಎರಡು ಸೈನ್ಯಗಳಿಗೂ ಅಭಿಮುಖಗಳಾಗಿರುವುದರಿಂದ ಆ ಎರಡು ಸೈನ್ಯಗಳೂ ಶ್ರೀಕೃಷ್ಣನ ಮುಖದಲ್ಲಿ ಪ್ರವೇಶಿಸುತ್ತವೆ (೩) (ಹಾಗಾದರೆ ಬೇರೆ ಯಾರಿಗೂ ಕಾಣದಿದ್ದುದು ಯುದ್ಧದ ಉಪಕ್ರಮದಲ್ಲಿಯೇ ಶತ್ರುಗಳ ಶಿರಸ್ಸುಗಳೆಲ್ಲವೂ ಚೂರ್ಣಗಳಾಗಿವೆ. ಎಂಬುದು ನಾನು ಕಾಣುತ್ತೇನೆಂದು ಕೇಚಿದ್ವಿಲಗ್ನಾ ದಶನಾಂತರೇಷು(ಶ್ಲೋ. ೨೭.) ಇತ್ಯಾದಿಗಳಿಂದ ಅರ್ಜುನನು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ —) ಯಾರು ಅದೇ ಮುಹೂರ್ತದಲ್ಲಿ ಸಾಯುತ್ತಾರೋ, ಅವರ ಶಿರಸ್ಸು ಶ್ರೀಕೃಷ್ಣನ ಹಲ್ಲುಗಳ ಮಧ್ಯದಲ್ಲಿ ನುಚ್ಚು ನೂರಾದ(ಗೂ) ಸೂಕ್ಷ್ಮದೃಷ್ಟಿ ಇದ್ದವರಿಗೆ ಮಾತ್ರ ಗೋಚರವಾಗಿರುವುದರಿಂದ ಮನುಷ್ಯರ ದೃಷ್ಟಿಗೆ ಹಾಗೆ ಕಾಣುವದಿಲ್ಲ. (ಹಾಗಾದರೆ ಯುದ್ಧೋಪಕ್ರಮದಲ್ಲಿಯೇ ಸಾಯುವವರನ್ನೇ ಇಲ್ಲಿ ಇಟ್ಟುಕೊಂಡದ್ದರಿಂದ ಯುದ್ಧೋಪಕ್ರಮದಲ್ಲಿಯೇ ಹೀಗೆ ಹೇಳಿದ್ದು ಕೂಡುತ್ತದೆ ನುಚ್ಚುನೂರಾಗಿ ಬಿದ್ದುದು ಸೂಕ್ಷ್ಮಜ್ಞಾನಿಗಳಿಗೆ ಮಾತ್ರ ಗೋಚರವಾಗಿರುವುದರಿಂದ ಬೇರೆಯವರಿಗೆ ಹಾಗೆ ಕಾಣದಿರುವುದು ಕೂಡುತ್ತದೆ ದಿವ್ಯಂ ದದಾಮಿ ತೇ ಚಕ್ಷುಃ (ಶ್ಲೋ ೮) ಎಂದು ಹೇಳಿದ್ದರಿಂದ ಅರ್ಜುನನಿಗೆ ದಿವ್ಯ ದೃಷ್ಟಿಯಿದ್ದುದರಿಂದ ಬೇರೆಯವರಿಗೆ ಕಾಣಬದ್ದುದು ಅರ್ಜುನನು ನೋಡಿದನೆಂದು ಹೇಳಿದ್ದು ಕೂಡುತ್ತದೆ (೪) (ಬೇರೆಯವರಿಗೆ ಹಾಗೆ ಕಾಣದಿರುವಲ್ಲಿ ದೃಷ್ಟಾಂತ ಹೇಳುತ್ತಾರೆ—) ಘಟಪಟಾದಿಗಳು ಭಿನ್ನಗಳಾದಾಗ್ಯೂ ಪ್ರತ್ಯೇಕವಾಗಿ ಬೀಳುವ ವರೆಗೂ ಮಂದದೃಷ್ಟಿಗೆ ಭಿನ್ನವಾಗಿವೆ. ಎಂದು ತಿಳಿಯುವದಿಲ್ಲ. (೫) (ಬೇರೆಯವರು ಕಾಣದಿದ್ದರೂ ದಿವ್ಯದೃಷ್ಟಿಯುಳ್ಳ ಅರ್ಜುನನು ಕಾಣುತ್ತಾನೆಂಬುವ ವಿಷಯದಲ್ಲಿ ದೃಷ್ಟಾಂತ ಹೇಳುತ್ತಾರೆ—) ಹೇಗೆಂದರೆ ಪುರೂರವರಾಜನ ಮುದಿತನವು ಬೇರೆಯವರಿಗೆ ತಿಳಿಯದಿದ್ದರೂ ಅಶ್ವಿನೀದೇವತೆಗಳಿಂದಲೇ ಕಾಣಲ್ಪಟ್ಟಿದೆ.

ವಿ ॥ (೧) ಪುರೂರವರಾಜನ ಮುದಿತನವನ್ನು ಕೇಳಿ ಅದನ್ನು ನೋಡುವುದಕ್ಕಾಗಿ ಬಂದಿದ್ದ ಅಶ್ವಿನೀದೇವತೆಗಳನ್ನು ಆ ರಾಜನು ಮನೆಯೊಳಗೆ ಇರುತ್ತಿದ್ದ ರಾಜನು ಈಗ ಸ್ನಾನಕ್ಕೆ ಹೋಗಿದ್ದಾನೆ. ಸ್ನಾನವಾದ ನಂತರ ಆಭರಣಗಳನ್ನು ಧರಿಸಿಕೊಂಡು ಬರುತ್ತೇನೆ ... ಹೇಳಿ ... ನ ... ದಲ್ಲಿ ಮೊದಲೂ ಮೇಲೆಯೂ ನಿನ್ನ ರೂಪವನ್ನು ನೋಡಬೇಕು ... ದಲ್ಲಿ ಬರಬೇಕೆಂದು ... ಉತ್ತರವನ್ನು ಕೊಡುತ್ತಲು ಹೊರಗೆ ಬಂದ ರಾಜನನ್ನು ಅಶ್ವಿನೀದೇವತೆಗಳು ನೋಡಿ ...

ಮೇಲೆ ಸ್ನಾನಮಾಡಿ ಅಲಂಕರಿಸಿಕೊಂಡು ತಿರುಗಿ ಬಂದನು. ಅವನನ್ನು ನೋಡಿ ಅಶ್ವಿನೀದೇವತೆಗಳು ನಕ್ಕರು. ನಗಾಡಲಿಕ್ಕೆ ಕಾರಣವೇನೆಂದು ರಾಜನು ಅಶ್ವಿನೀದೇವತೆಗಳ ಹತ್ತಿರ ಕೇಳಿದಾಗ ಕೃಷ್ಣ ಭೂಪಾಲ ಸಕಲವಾವಯೋರ್ಹಾಸಕಾರಣಂ । ಯುಷ್ಮದ್ದರ್ಶನಸಂಭೂತಂ ಶೃಣಾಪನಯ ಹೇತುಕಂ । ಅಸ್ನಾತಸ್ಯಾಭವತ್ಪೂರ್ವಂ ಯಾದೃಶೀ ತೇ ಸುರೂಪತಾ । ಸಾಂಪ್ರತಂ ತಾದೃಶೀ ನೇಯಂ ಭೂಷಿತಸ್ಯಾಪಿ ಭೂಷಣೈಃ ॥ ಇತ್ಯಾದಿಗಳಿಂದ ವಿಷ್ಣುಧರ್ಮವಿಸ್ತರದಲ್ಲಿ ಸವಿಸ್ತಾರವಾಗಿ ಹೇಳಲ್ಪಟ್ಟಿದೆ. ॥೨೬–೩೦॥

ಟೀ—ಭಗವತ್ಸ್ವರೂಪವನ್ನೂ ಶ್ರೀಹರಿಯ ಸಾಮಾನ್ಯ ಗುಣ ಕರ್ಮಗಳನ್ನೂ ತಿಳಿದವನಾದಾಗ್ಯೂ ಅರ್ಜುನನು ತಿಳಿಯದಿರುವ ಗುಣಕರ್ಮಗಳ ವಿಶೇಷ ಜ್ಞಾನಕ್ಕಾಗಿ ಪ್ರಶ್ನಿಸುತ್ತಾನೆ—

ಗೀ ॥ ಆಖ್ಯಾಹಿ ಮೇ ಕೋ ಭವಾನುಗ್ರರೂಪೋ
ನಮೋಽಸ್ತು ತೇ ದೇವವರ ಪ್ರಸೀದ ।
ವಿಜ್ಞಾತುಮಿಚ್ಛಾಮಿ ಭವಂತಮಾದ್ಯಂ
ನ ಹಿ ಪ್ರಜಾನಾಮಿ ತವ ಪ್ರವೃತ್ತಿಂ ॥ ೩೧ ॥

ಅ ॥ ಉಗ್ರರೂಪಃ—ಭಯಂಕರ ಸ್ವರೂಪವುಳ್ಳ, ಭವಾನ್—ನೀನು, ಕಃ—ಎಂತಹ ಧರ್ಮಗಳುಳ್ಳವನು? ಭಯಂಕರ ರೂಪವನ್ನು ಏತಕ್ಕೆ ತಾಳಿಕೊಂಡದ್ದು? ಮೇ—ನನಗೆ, ಆಖ್ಯಾಹಿ—ಹೇಳು, ದೇವವರ—ದೇವಶ್ರೇಷ್ಠನೇ, ತೇ—ನಿನಗೆ, ನಮಃ—ನಮಸ್ಕಾರವು, ಅಸ್ತು—ಆಗಲಿ. ಪ್ರಸೀದ—ಸಂತುಷ್ಟನಾಗು. ಆದ್ಯಂ—ಆದಿಪುರುಷನಾದ, ಭವಂತಂ—ನಿನ್ನನ್ನು, ವಿಜ್ಞಾತುಂ—ವಿಶೇಷವಾಗಿ ಸರಿಯಾಗಿ ತಿಳಿದುಕೊಳ್ಳುವುದಕ್ಕೋಸ್ಕರ, ಇಚ್ಛಾಮಿ—ಇಚ್ಛಿಸುತ್ತೇನೆ. ಹಿ—ನಿಶ್ಚಯವು. ತವ—ನಿನ್ನ, ಪ್ರವೃತ್ತಿಂ—ವ್ಯಾಪಾರವನ್ನು, ನ ಪ್ರಜಾನಾಮಿ—ಚೆನ್ನಾಗಿ ತಿಳಿಯುವುದಿಲ್ಲ. ॥೩೧॥

ಟೀ—ಭಗವತ್ಸ್ವರೂಪವನ್ನೇ ತಿಳಿಯದೆ ಸ್ವರೂಪವನ್ನೇ ಪ್ರಶ್ನೆಮಾಡುತ್ತಾನೆ. ಅಥವಾ ಸ್ವರೂಪಜ್ಞಾನವಿದ್ದರೂ ಭಗವದ್ಧರ್ಮಗಳನ್ನು ತಿಳಿಯದಿರುವುದರಿಂದ ಭಗವದ್ಧರ್ಮಗಳನ್ನು ಪ್ರಶ್ನೆಮಾಡುತ್ತಾನೆ. ಎಂಬೀ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ಭಾ ॥ (೧) ಧರ್ಮಾಂತರಜ್ಞಾನಾರ್ಥಮೇವ ಕೋ ಭವಾನಿತಿ ಪೃಚ್ಛತಿ । ಯಥಾ ಕಶ್ಚಿತ್ ಕಿಂಚಿತ್ಸ್ವಾಮಾದಿಕಂ ಜಾನನ್ನಪಿ ಜಾತಿಜ್ಞಾನಾರ್ಥಂ ಪೃಚ್ಛತಿ ಕಸ್ತ್ವಮಿತಿ ॥ (೨) ಯದಿ ತಮೇವ ನ ಜಾನಾತಿ ತರ್ಹಿ ವಿಷ್ಣುವಿಶ್ವೇವಂ ಸಂಬೋಧನಂ ನ ಸ್ಯಾತ್ । ಕ್ವಮಕ್ಷರಮಿತ್ಯಾದಿ ಚ ॥ ೩೧ ॥

ಅ ॥ (೧) ವಿಶ್ವರೂಪದಲ್ಲಿದ್ದ ಕೆಲವು ಧರ್ಮಗಳನ್ನು ತಿಳಿದಿದ್ದರೂ ವಿಶೇಷ ಧರ್ಮಗಳನ್ನು ತಿಳಿದುಕೊಳ್ಳುವುದಕ್ಕಾಗಿಯೇ ಕೋ ಭವಾನ್ ಎಂದು ಪ್ರಶ್ನೆ ಮಾಡಿರುತ್ತಾನೆ. ಹೇಗೆ ಬೇರೆಯವರ ನಾಮಾದಿಗಳಿಂದ ಬಲ್ಲ ವ್ಯಕ್ತಿಯ ಹೆಸರನ್ನು ಪ್ರತ್ಯಕ್ಷದಿಂದ ರೂಪ (ಶರೀರ) ಮೊದಲಾದವುಗಳನ್ನು ತಿಳಿದವನಾದಾಗ್ಯೂ ಜಾತಿಯನ್ನು ತಿಳಿದುಕೊಳ್ಳುವುದಕ್ಕಾಗಿ ಬಲ್ಲನು ನೀನ್ಯಾರೆಂಬುದಾಗಿ ಹೇಗೆ ಪ್ರಶ್ನೆ ಮಾಡುತ್ತಾನೆಯೋ. (೨) ನಿಜವಾಗಿ ಅರ್ಜುನನು ಶ್ರೀಪರಮಾತ್ಮನನ್ನು ಪರಮಾತ್ಮನೆಂದು

ಸ್ವರೂಪಗಳನ್ನು ತಿಳಿದವನಾದರೂ ಧರ್ಮಾಂತರಗಳನ್ನು ತಿಳಿದುಕೊಳ್ಳುವುದಕ್ಕಾಗಿ ನೀನು ಯಾರು ಎಂದೇ ಪ್ರಶ್ನಿಸುತ್ತಾನೆ. (೨) (ಭಯಂಕರ ರೂಪವನ್ನು ನೋಡಿ, ಇವನು ರುದ್ರನೋ, ಯಮನೋ, ಎಂದು ಸ್ವರೂಪದಲ್ಲಿಯೇ ಸಂಶಯಪಟ್ಟವನಾಗಿ ಪ್ರಶ್ನೆ ಮಾಡಿದ್ದೆಂದು ಏಕೆ ಆಗಲಾರದೆಂದರೆ—) ಶ್ರೀಪರಮಾತ್ಮನ ಸ್ವರೂಪವನ್ನೇ ತಿಳಿಯಲಿಲ್ಲವೆಂದಾದರೆ ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ (ಶ್ಲೋ. ೩೦.) ವಿಷ್ಣೋ ಎಂದು ಸಂಬೋಧನೆ ಮಾಡಿದ್ದೇ ಕೂಡದೆ ಹೋಗುವುದು. (ಭಗವದ್ಧರ್ಮಗಳನ್ನು ಸಾಮಾನ್ಯತಃ ತಿಳಿಯಲಿಲ್ಲವೆಂದಾದರೆ—) ತ್ವಮಕ್ಷರಂ ಪರಮಂ (ಶ್ಲೋ. ೧೮.) ಇತ್ಯಾದಿಗಳನ್ನು ಹೇಳಿದ್ದು ಕೂಡದೆ ಹೋಗುವುದು. (ಆದಕಾರಣ ಶ್ರೀಪರಮಾತ್ಮನನ್ನೂ ಶ್ರೀಪರಮಾತ್ಮನ ಧರ್ಮಗಳಾದ ಅಕ್ಷರತ್ವಾದಿಗಳನ್ನೂ ತಿಳಿದು ಅಕ್ಷರತ್ವಾದಿಗಳಿಂದ ಇತರಗಳಾದ ಧರ್ಮಗಳನ್ನು ತಿಳಿದುಕೊಳ್ಳುವುದಕ್ಕಾಗಿಯೇ ಪ್ರಶ್ನೆಮಾಡಿದ್ದು, ಎಂದೇ ಯುಕ್ತವು) || ೩೧ ||

ಟೀ—ಆಖ್ಯಾಹಿ ಮೇ ಕೋ ಭವಾನ್ (ಶ್ಲೋ ೩೧) ಎಂಬುವಲ್ಲಿ ನೀನು ಯಾವ ದೇವತೆಯು, ಎಂದು ಪ್ರಶ್ನೆ ಮಾಡುತ್ತಾನೆಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ತಾ || ವಿಶೇಷಗುಣಕರ್ಮವಿಷಯ ಏವ ಪ್ರಶ್ನಃ | ವಿಷ್ಣವಿತಿ ಸಂಬೋಧನಾತ್ || ೩೧ ||

ಅ || (ಗುಣಾದಿಗಳನ್ನು ತಾನೇ ಹೇಳಿದ್ದರಿಂದ ಪುನಃ ಪ್ರಶ್ನೆಯು ಏಕೆಂದರೆ—) ತಾನು ತಿಳಿಯದಿರುವ ವಿಶೇಷ ಗುಣಕರ್ಮ ವಿಷಯದಲ್ಲಿಯೇ ಪ್ರಶ್ನೆಯು. (ಸ್ವರೂಪವಿಷಯದಲ್ಲಿಯೇ ಪ್ರಶ್ನೆಯೆಂದು ಏಕೆ ಆಗಲಾರದೆಂದರೆ—) ಭಾಸಸ್ತವೋಗ್ರಾಃ ಪ್ರತಪಂತಿ ವಿಷ್ಣೋ (ಶ್ಲೋ. ೩೦.) ಎಂದು ಅರ್ಜುನನು ಶ್ರೀಕೃಷ್ಣನನ್ನು ವಿಷ್ಣೋ ಸಂಬೋಧಿಸಿದ್ದರಿಂದ ವಿಷ್ಣುವೆಂದು ಮೊದಲೇ ತಿಳಿದಿರುವುದರಿಂದ ವಿಶೇಷ ಗುಣಕರ್ಮಾದಿಗಳ ವಿಷಯದಲ್ಲಿಯೇ ಈ ಪ್ರಶ್ನೆಯು. ಈ ಪ್ರಶ್ನೆಯು ಸ್ವರೂಪ ಮಾತ್ರ ವಿಷಯಕವಲ್ಲ. || ೩೧ ||

ಟೀ—ಹೀಗೆ ಅರ್ಜುನನಿಂದ ಪ್ರಾರ್ಥಿಸಲ್ಪಟ್ಟ ಶ್ರೀಕೃಷ್ಣನು ತನ್ನ ಗುಣಾದಿಗಳನ್ನು ಹೇಳುತ್ತಾನೆ—

ಗೀ || || ಶ್ರೀಭಗವಾನುವಾಚ ||

ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ
ಲೋಕಾನ್ಸಮಾಹರ್ತುಮಿಹ ಪ್ರವೃತ್ತಃ |
ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ
ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ || ೩೨ ||

ಅ || ಶ್ರೀಭಗವಾನ್ = ಶ್ರೀಕೃಷ್ಣನು, ಉವಾಚ = ಉಪದೇಶಿಸುತ್ತಾನೆ.. (ನಾನು) ಕಾಲಃ ಷಡ್ಗುಣಪೂರ್ಣನು. ಅಥವಾ ಜಗತ್ತಿಗೆ ಬಂಧನ ಸಂಹಾರ ಜ್ಞಾನ ಮೊದಲಾದವುಗಳನ್ನು ಮಾಡುತ್ತಾ ಇರುವದರಿಂದ ಕಾಲನೇಮ ಹೆಸರುಳ್ಳವನು, ಅಸ್ಮಿ = ಆಗಿರುತ್ತೇನೆ. ಲೋಕಕ್ಷಯಕೃತ್ = ಸರ್ವ ಜಗತ್ತನ್ನು ನಾಶಪಡಿಸುವವನು, ಪ್ರವೃದ್ಧಃ = ಸರ್ವದೇಶಗಳಲ್ಲಿ ವ್ಯಾಪಿಸಿಕೊಂಡಿರುವವನು, ಸರ್ವ ಕಾಲಗಳಲ್ಲಿಯೂ ಇರುವವನು, ಅಥವಾ ಅನಾದಿಸಿದ್ಧನು ಅಸ್ಮಿ = ಆಗಿರುತ್ತೇನೆ ಜಗತ್ತನ್ನು ನಾಶಗೊಳಿಸುವ ನಾನು ಇಹ = ರಣಾಂಗಣದಲ್ಲಿ ಯುದ್ಧಕ್ಕಾಗಿ ಸನ್ನದ್ಧರಾಗಿ ನಿಂತಿರುವ ಲೋಕಾನ್ = ಜನರನ್ನು, ಸಮಾಹರ್ತುಂ = ಸಂಪೂರ್ಣವಾಗಿಯೇ ಸಂಹರಿಸುವುದಕ್ಕಾಗಿ ಪ್ರವೃತ್ತಃ = ಪ್ರವೃತ್ತನಾದರುತ್ತೇನೆ. (ಹಾಗಾದರೆ ಶ್ರೀಕೃಷ್ಣನ

ಪಾಂಡವರನ್ನು ಸಂಹರಿಸುವುದಕ್ಕಾಗಿ ಪ್ರವೃತ್ತಿ ಮಾಡಿದ್ದಾನೋ, ಏನು? ಎಂದರೆ-) ಋತೇಽಪಿ=(ಎಲೋ ಅರ್ಜುನನೇ) ನಿನ್ನನ್ನೂ, ಧರ್ಮರಾಜ ಮೊದಲಾದವರನ್ನೂ ಕೃಪಾಚಾರ್ಯ, ಅಶ್ವತ್ಥಾಮ, ಕೃತವರ್ಮರನ್ನೂ ಬಿಟ್ಟು ಪ್ರತ್ಯನೀಕೇಷು=ಪರಸ್ಪರ ಪ್ರತಿಸ್ಪರ್ಧೆಯಿಂದ ಯುದ್ಧಕ್ಕಾಗಿ ನಿಂತಿರುವ ಎರಡು ಸೈನ್ಯಗಳ ಮಧ್ಯದಲ್ಲಿ, ಯೇ=ಯಾವ, ಯೋಧಾಃ=ಯುದ್ಧಮಾಡುವವರು, ಅವಸ್ಥಿತಾಃ=ನಿಂತಿರುವರೋ, ತೇ ಸರ್ವೇ= ಅವರೆಲ್ಲರೂ, ನ ಭವಿಷ್ಯಂತಿ=ಇರುವುದೇ ಇಲ್ಲ. (ಅಂದರೆ—ಪಂಚ ಪಾಂಡವರೂ ಅಶ್ವತ್ಥಾಮ ಕೃತವರ್ಮ, ಕೃಪಾಚಾರ್ಯರು ಇವರು ಹೊರತು ಎಲ್ಲರೂ ಮರಣಹೊಂದುವರು ॥೩೨॥

ಟೀ—ಕಾಲ ಶಬ್ದವು ಸಂಪೂರ್ಣ ಸದ್ಗುಣಾದಿಗಳನ್ನು ಹೇಳುತ್ತದೆ, ಎಂಬುವ ಅಭಿಪ್ರಾಯದಿಂದ ಸ್ಮೃತಿಯನ್ನು ಹೇಳುತ್ತಾರೆ—

ತಾ॥ (೧) ಕಾಲಃ ಕಲಿತಸಂಪೂರ್ಣಸದ್ಗುಣತ್ವಾಜ್ಜನಾರ್ದನಃ । ಸಂಹಾರಾತ್ಸರ್ವವಿ-ತ್ತ್ವಾದ್ವಾ ಸರ್ವವಿದ್ರಾವಣೇನ ವೇತಿ ಮಹಾವಾ(ವ)ರಾಹೇ ॥ (೨) ಅಪಿಶಬ್ದೇನ ಭ್ರಾತ್ರಾದೀನಷ್ಟೃತೇ ॥೩೨॥

ಅ॥ (೧) ಶ್ರೀಜನಾರ್ದನನು ತನ್ನಿಂದ ಸಂಬದ್ಧಗಳಾದ ಸಂಪೂರ್ಣ ಸದ್ಗುಣಗಳುಳ್ಳವನಾದುದರಿಂದಲೂ ಸರ್ವ ಜಗತ್ತನ್ನು ಸಂಹರಿಸುವುದರಿಂದಲೂ, ಸಮಸ್ತವನ್ನು ತಿಳಿದವನಾದುದರಿಂದಲೂ, ಸರ್ವವನ್ನು ಓಡಿಸುವುದರಿಂದಲೂ ಕಾಲಃ ಎನಿಸುತ್ತಾನೆ, ಎಂದು ಮಹಾವಾರಾಹದಲ್ಲಿದೆ. (೨) ಇಲ್ಲಿ ಅರ್ಜುನನು ಒಬ್ಬನು ಹೊರತು ಎಲ್ಲರೂ ಸಾಯುತ್ತಾರೆಂದು ಅರ್ಥವಲ್ಲ, ಮತ್ತೆ ಅರ್ಜುನನು, ಅರ್ಜುನನ ಸಹೋದರರೂ ಅಶ್ವತ್ಥಾಮಾದಿಗಳೂ ಹೊರತು ಬೇರೆಯವರೆಲ್ಲರೂ ಸಾಯುತ್ತಾರೆಂದರ್ಥವು. ಅಪಿಪದದಿಂದ ಅವರಷ್ಟು ಮಂದಿಯನ್ನು ಇಟ್ಟುಕೊಳ್ಳಬೇಕು. ॥೩೨॥

ಟೀ—ತಿನೇ ಅಧ್ಯಾಯದಲ್ಲಿ ಅರ್ಜುನನು ತನಗೆ ಜಯವು ಲಭಿಸುವುದೋ, ಸೋಲು ಬರುವುದೋ, ಎಂದು ಸಂಶಯಪಟ್ಟಿದ್ದಕ್ಕೆ ಶ್ರೀಕೃಷ್ಣನು ಸಂದೇಹವಿದ್ದರೂ ಯುದ್ಧ ಮಾಡುವುದೇ ಪ್ರಶಸ್ತವು. ಯುದ್ಧದಲ್ಲಿ ಜಯಿಸಿದರೆ ರಾಜ್ಯಲಾಭವಾಗುವುದು ಮರಣ ಹೊಂದಿದರೆ ಸ್ವರ್ಗವು ಲಭಿಸುವುದು, ಎಂದು ತತ್ವವನ್ನು ಹೇಳಿರುವನು. ಈಗ ನಿನಗೆ ಪರಾಜಯ ಶಂಕೆಯೂ ಇಲ್ಲ. ನಿಶ್ಚಯವಾಗಿಯೂ ಜಯವೇ ಲಭಿಸುವುದು, ಆದುದರಿಂದ ಯುದ್ಧ ಮಾಡು ಎಂದು ಶ್ರೀಕೃಷ್ಣನು ಹೇಳುತ್ತಾನೆ—

ಗೀ॥ ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ
ಜಿತ್ವಾ ಶತ್ರೂನ್ಭುಂಕ್ಷ್ವ ರಾಜ್ಯಂ ಸಮೃದ್ಧಂ ।
ಮಯೈವೈತೇ ನಿಹತಾಃ ಪೂರ್ವಮೇವ
ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩ ॥

ಅ॥ ತಸ್ಮಾತ್=ನಾನೇ ಸಮಸ್ತ ಲೋಕಗಳನ್ನು ವಿನಾಶ ಪಡಿಸಲಿಕ್ಕೆ ಪ್ರವೃತ್ತಿಮಾಡಿರುವುದರಿಂದ ವಿಜಯವು ಬರಲಿಕ್ಕೆ ಸಂಶಯವೇ ಇಲ್ಲದಿರುವ ಪ್ರಯುಕ್ತ, ಉತ್ತಿಷ್ಠ=ಯುದ್ಧಕ್ಕೆ ಸನ್ನದ್ಧನಾಗಿ ನಿಲ್ಲು. ಶತ್ರೂನ್=ಶತ್ರುಗಳನ್ನು ಜಿತ್ವಾ=ಗೆದ್ದು. ಯಶಃ=ಕೀರ್ತಿಯನ್ನು, ಲಭಸ್ವ=ಹೊಂದು ಸಮೃದ್ಧಂ=ಶೋಕಾದಿ (ಸಂಪದಾದಿ)ಗಳಿಂದ ತುಂಬಿರುವ ರಾಜ್ಯಂ=ಸಾಮ್ರಾಜ್ಯವನ್ನು, ಭುಂಕ್ಷ್ವ=ಅನ

ಪ್ರತಿಷು. ಏತೇ = ಯುದ್ಧಕ್ಕೆ ಸನ್ನದ್ಧರಾಗಿ ನಿಂತವರೆಲ್ಲರೂ. ಮಯ್ಯೈವ = ನನ್ನಿಂದಲೇ, ಪೂರ್ವಮೇವ = ಮೊದಲೇ, ನಿಹತಾಃ = ಸಂಹೃತಪ್ರಾಯರು. (ಅಂದರೆ ಅವರ ಆಯುಷ್ಯವನ್ನು ನಾನೇ ಕಳೆದಿರುವುದರಿಂದ ಅವರು ಮರಣಹೊಂದಲಿಕ್ಕೆ ಸನ್ನದ್ಧರಾಗಿ ನಿಂತಿದ್ದಾರೆ.) ಸವ್ಯಸಾಚಿನ್ = ಅರ್ಜುನನೇ, ನಿಮಿತ್ತಮಾತ್ರಂ ಭವ = ಆ ಶತ್ರುಗಳನ್ನು ಪ್ರತ್ಯಕ್ಷವಾಗಿ ಕೊಲ್ಲಲಿಕ್ಕೆ ನಿಮಿತ್ತಮಾತ್ರನಾಗು. (ಅಂದರೆ ಅರ್ಜುನನು ಸಂಹರಿಸಿದನು, ಎಂದು ಹೆಸರು ಪಡೆಯಲಿಕ್ಕೆ ಮಾತ್ರ ಕಾರಣನಾಗು. ಮುಂದೆಯೂ ನಾನೇ ನಿನ್ನಲ್ಲಿದ್ದು ಶತ್ರುಗಳನ್ನು ಸಂಹರಿಸುವೆನು.) ॥ ೩೩ ॥

**ಭಾ ॥ (೧) ಕಾಲಶಬ್ದೋ ಜಗದ್ಬಂಧನಚ್ಛೇದನಜ್ಞಾನಾದಿಸರ್ವಭಗವದ್ಧರ್ಮವಾಚೀ । ಕಲ ಬಂಧನೇ ಕಲ ಛೇದನೇ ಕಲ ಜ್ಞಾನೇ ಕಲ ಕಾಮಧೇನುರಿತಿ ಚ ಪಠಂತಿ ॥ (೨) ಪ್ರಸಿದ್ಧಶ್ಚ ಸ ಶಬ್ದೋ ಭಗವತಿ । ನಿಯತಂ ಕಾಲಪಾಶೇನ ಬದ್ಧಂ ಶಕ್ರ ವಿಕತ್ಥಸೇ । ಅಯಂ ಸ ಪುರುಷಃ ಶ್ಯಾಮೋ ಲೋಕಸ್ಯ ಹರತಿ ಪ್ರಜಾಃ । ಬಧ್ವಾ ತಿಷ್ಠತಿ ಮಾಂ ರೌದ್ರಃ ಪಶೂನ್ರಶನಯಾ ಯಥೇತಿ ಮೋಕ್ಷಧರ್ಮೇ ವಿಷ್ಣುನಾ ಬದ್ಧೋ ಬಲಿರ್ವಕ್ತಿ ॥ ವಿಷ್ಣೌ ಚಾಧೀಶ್ವರೇ ಚಿತ್ತಂ ಧಾರಯನ್ಕಾಲವಿಗ್ರಹ ಇತಿ ಭಾಗವತೇ॥ ಪ್ರವೃದ್ಧಃ ಪರಿಪೂರ್ಣೋಽನಾದಿರ್ವಾ । ಋತಂ ಚ ಸತ್ಯಂ ಚಾಭೀದ್ಧಾದಿತಿ ಚ ಶ್ರುತಿಃ । ಏತನ್ಮಹದ್ಭೂತಮನಂತಮಿತಿ ಚ ॥ ೧ ॥**

ಅ ॥ (೧) ಕಾಲಶಬ್ದವು ಜಗತ್ತನ್ನು ಬಂಧಿಸುವುದು. ಜಗತ್ತನ್ನು ನಾಶಗೊಳಿಸುವುದು, ಜಗತ್ತಿಗೆ ಜ್ಞಾನವನ್ನು ಹುಟ್ಟಿಸುವುದು, ಮೊದಲಾದ ಎಲ್ಲಾ ಭಗವದ್ಧರ್ಮ ವಿಶೇಷಗಳನ್ನು ಹೇಳುತ್ತದೆ. (ಇದು ಹೇಗೆ ಎಂದರೆ) ಕಲಧಾತುವು ಜಗತ್ತನ್ನು ಬಂಧಿಸುವುದೆಂಬುವ ಅರ್ಥದಲ್ಲಿಯೂ, ಜಗತ್ತನ್ನು ನಾಶಗೊಳಿಸುವುದೆಂಬುವ ಅರ್ಥದಲ್ಲಿಯೂ, ಜ್ಞಾನವೆಂಬುವ ಅರ್ಥದಲ್ಲಿಯೂ ಇದೆ. ಕಾಮಧೇನುವು ಹೇಗೆ ಸರ್ವಾರ್ಥಗಳನ್ನು ಕೊಡುತ್ತದೋ, ಹಾಗೆಯೇ ಈ ಕಲಧಾತುವು ಸರ್ವಾರ್ಥಗಳನ್ನು ಹೇಳುತ್ತದೆ, ಎಂದು ಹೇಳುತ್ತಾರೆ (೨) (ಈ ಕಲಧಾತುವು ಬಂಧನ ಮೊದಲಾದ ಧರ್ಮ ವಿಶೇಷವುಳ್ಳ ವಸ್ತುವನ್ನು ಹೇಳುತ್ತದೆಂದಾಗಲೀ ಬೇರೆ ಕಡೆಯೇ ರೂಢವಾಗಿರುವುದರಿಂದ ಶ್ರೀಪರಮಾತ್ಮನನ್ನು ಹೇಳುತ್ತದೆಂಬುವುದು ಹೇಗೆ ಎಂದರೆ-) ಕಾಲಶಬ್ದವು ಶ್ರೀಪರಮಾತ್ಮನಲ್ಲಿ ಪ್ರಸಿದ್ಧವೇ ಆಗಿದೆ. (ಹೇಗೆಂದರೆ) ದೇವೇಂದ್ರನೇ ನಿಯತವಾಗಿ ಕಾಲ ಎನಿಸಿದ ಶ್ರೀಹರಿಯ ಪಾಶದಿಂದ ಬದ್ಧನಾದ ನನ್ನನ್ನು ಕುರಿತು ತನ್ನ ಸ್ತುತಿಯನ್ನೇ ಮಾಡಿಕೊಳ್ಳುತ್ತಿ ನೀಲಮೇಘಶ್ಯಾಮವರ್ಣನಾದ ಶ್ರೀಗುಣಪೂರ್ಣನಾದ ಪರಮಾತ್ಮನು ಲೋಕದ ಜೀವಿಗಳನ್ನು ನಾಶಗೊಳಿಸುತ್ತಾನೆ. ಜಗತ್ತಿಗೆ ಭಯವನ್ನುಂಟುಮಾಡುವ ಶ್ರೀಪರಮಾತ್ಮನು ಹಗ್ಗದಿಂದ ಪಶುವನ್ನು ಕಟ್ಟಿದಂತೆ ನನ್ನನ್ನು ಬಂಧಿಸಿಕೊಂಡು ಇರುತ್ತಾನೆ, ಎಂದು ಮೋಕ್ಷಧರ್ಮದಲ್ಲಿ ಶ್ರೀವಿಷ್ಣುವಿನಿಂದ ಬದ್ಧನಾದ ಬಲಿಚಕ್ರವರ್ತಿಯು (ಲೋಕಬಂಧಕತ್ವ, ಲೋಕಸಂಹಾರಕತ್ವ, ಜ್ಞಾನಾತ್ಮ ಮೊದಲಾದ ವಿಶೇಷಗುಣಗಳಿಂದ ಕಾಲ ಶಬ್ದದಿಂದ ಹೇಳಲ್ಪಡತಕ್ಕವನು ಶ್ರೀಪರಮಾತ್ಮನು ಎಂದು) ಹೇಳುತ್ತಾನೆ (೩) ಕಾಲನಾಮಕ ಶರೀರವುಳ್ಳ, ಸರ್ವೇಶ್ವರನಾದ ಶ್ರೀವಿಷ್ಣುವಿನಲ್ಲಿ ಮನಸ್ಸನ್ನು ಇಡುವವನಾಗಿ ಇರುತ್ತಾನೆಂದು ಭಾಗವತದಲ್ಲಿಯೂ (ಕಾಲಶಬ್ದ ಪ್ರಯೋಗವು ಶ್ರೀವಿಷ್ಣುವಿನಲ್ಲಿದೆ) ಪ್ರವೃದ್ಧಃ ಸರ್ವಗುಣಪರಿಪೂರ್ಣನು, ಅಥವಾ ಅನಾದಿನಿತ್ಯನು. (ಪ್ರವೃದ್ಧ ಶಬ್ದಕ್ಕೆ ಒಂದೇ ಹೇಳಿದ ಅರ್ಥವು ಇದೆ ಎಂಬುವದಕ್ಕೆ ಪ್ರಮಾಣವನ್ನು ಹೇಳುತ್ತಾರೆ-) ಋತಂ ಚ ಸತ್ಯಂ ಚಾಭೀದ್ಧಾತ್ತಪಸೋಽಧ್ಯಜಾಯತ ಸರ್ವಕಾಲದಲ್ಲಿರುವ, ವಿಶೇಷ ಪ್ರಕಾಶವುಳ್ಳ ಶ್ರೀಪರಮಾತ್ಮನಿಂದ ಯಥಾರ್ಥಜ್ಞಾನವೂ, ಯಥಾರ್ಥವಾದ

ಪೂರ್ವಕವಾದ ಜಗತ್ಸೃಷ್ಟಿಯೂ ಆಯಿತು ಸರ್ವೋತ್ತಮನಾದ ಶ್ರೀಪರಮಾತ್ಮನು ಸರ್ವ ಕಾಲದಲ್ಲಿಯೂ ಇರತಕ್ಕವನು (ಇದರಂತೆಯೇ ಪ್ರವೃದ್ಧ ಶಬ್ದಕ್ಕೂ ಪರಿಪೂರ್ಣ, ಅನಾದಿನಿತ್ಯಗಳೆಂಬುವ ಅರ್ಥಗಳು ಸಿದ್ಧಿಸುತ್ತವೆ) ॥೧೩

ಟೀ—(ಇದ್ಧಾಕ್ ಭೂತಂ ಎಂಬುವಲ್ಲಿಯೂ, ಅತೀತಾರ್ಥಕ ತ ಪ್ರತ್ಯಯವಿದ್ದರೂ ಸಾರ್ವಕಾಲೀ ದೀಪ್ತಿಯೂ ಸಾರ್ವಕಾಲಿಕಸ್ಥಿತಿಯೂ ಶ್ರೀಪರಮಾತ್ಮನಿಗೆ ನಿಶ್ಚಯವಾಗುವುದಿಲ್ಲ, ಎಂದರೆ—) ಶ್ರೀಪರಮಾತ್ಮನ ದೀಪ್ತಿಯೂ ಸಾರ್ವಕಾಲಿಕಸ್ಥಿತಿಯೂ ಶ್ರೀಪರಮಾತ್ಮನಿಗೆ ಸರ್ವ ಕಾಲದಲ್ಲಿಯೂ ಇರತಕ್ಕದು ಎಂಬುವ ವಿಷಯದಲ್ಲಿ ವೇದಪ್ರಮಾಣವನ್ನು ಹೇಳುತ್ತಾರೆ—

ಭಾ॥ (೧) ಪ್ರವಿಷ್ಣುರಸ್ತು ತವಸಸ್ತವೀಯಾನ್ತ್ವೇಷಂ ಹ್ಯಸ್ಯ ಸ್ಥವಿರಸ್ಯ ನಾಮೇತಿ ಚ।
ನ ತು ವರ್ಧನಂ॥ (೨) ನಾಸೌ ಜಜಾನ ನ ಮರಿಷ್ಯತಿ ನೈಧತೇಽಸಾವಿತಿ ಭಾಗವತೇ॥
(೩) ಯಸ್ಯ ದಿವ್ಯಂ ಹಿ ತದ್ರೂಪಂ ಕ್ಷೀಯತೇ ವರ್ಧತೇ ನ ಚೇತಿ ಮೋಕ್ಷಧರ್ಮೇ॥
(೪) ನ ಕರ್ಮಣೇತಿ ತು ಕರ್ಮಣಾಽಪಿ ನ ಕಿಮು ಸ್ವಯಮಿತಿ॥ (೫) ಲೋಕಾನ್
ಸಮಾಹರ್ತುಮಿಹ ವಿಶೇಷೇಣ ಪ್ರವೃತ್ತಃ॥ (೬) ಭ್ರಾತ್ರಾದೀಂಶ್ಚಾರ್ಥ ಇತ್ಯಪಿಶಬ್ದಃ।
ಪ್ರತ್ಯನೀಕತ್ವಂ ತು ಪರಸ್ಪರತಯಾ। ಸರ್ವೇಽಪಿ ನ ಭವಿಷ್ಯಂತಿ। ಅಕ್ಷೌಹಿಣ್ಯಾದಿ-
ಭೇದೇನ ಬಹುವಚನಂ ಚ ಯುಕ್ತಂ॥ ೨॥ ॥೩೨,೩೩॥

ಅ॥ (೧) ಸರ್ವೋತ್ತಮನಾದ ಶ್ರೀವಿಷ್ಣುವು ಕೆಲವು ದೇಶ ಕೆಲವು ಕಾಲಗಳಲ್ಲಿರತಕ್ಕ ಸೂರ್ಯಾದಿಗಳ ತೇಜಸ್ಸಿಗಿಂತ ಹೆಚ್ಚು ತೇಜೋರೂಪನಾಗಿರುತ್ತಾನೆ. ಎಲ್ಲರಿಗಿಂತಲೂ ಅತಿಶಯಿತ ತೇಜೋರೂಪತ್ವವಿದ್ದುದರಿಂದಲೇ ಅನಾದಿಕಾಲೀನನಾದ ಸರ್ವ ಕಾಲದಲ್ಲಿಯೂ ಇರತಕ್ಕ ಶ್ರೀಪರಮಾತ್ಮನಿಗೆ ತ್ವೇಷಂ ಎಂದು ಹೆಸರು. (ಅಂದರೆ ಪರಮಾತ್ಮನ ಪ್ರಕಾಶವು ಸೂರ್ಯಾದಿಗಳ ತೇಜಸ್ಸಿಗಿಂತ ಅತಿಶಯಿತವಾಗಿರುವುದರಿಂದ ಶ್ರೀಪರಮಾತ್ಮನಿಗೇನೇ ಅಸಾಧಾರಣವಾಗಿ ತ್ವೇಷಂ ಎಂದು ಹೆಸರು.) ಶ್ರೀಹರಿಗೆ ತಾತ್ಕಾಲಿಕ ಅಭಿವೃದ್ಧಿರೂಪವಿಕಾರವು ಇಲ್ಲ. (೨) ಶ್ರೀಪರಮಾತ್ಮನು ಹುಟ್ಟುವುದಿಲ್ಲ, ಸಾಯುವುದಿಲ್ಲ. ಮೊದಲು ಅಲ್ಪನಾಗಿದ್ದು ಮತ್ತೆ ಅಭಿವೃದ್ಧಿರೂಪವಾದ ವಿಕಾರವನ್ನು ಹೊಂದುವುದಿಲ್ಲ. ಯಾವಾಗಲೂ ಸರ್ವಗುಣಪರಿಪೂರ್ಣನೇ ಆಗಿರುತ್ತಾನೆ. ಎಂದು ಭಾಗವತದಲ್ಲಿದೆ. (೩) (ಶ್ರೀಪರಮಾತ್ಮನಿಗೆ ಉತ್ಪತ್ತಿ, ಅಭಿವೃದ್ಧಿ ಮೊದಲಾದ ವಿಕಾರಗಳು ಇಲ್ಲದಿರುವುದರಿಂದ ಮೂಲರೂಪಿಪರಮಾತ್ಮನಿಗೆ ವಿಕಾರರೂಪ ವೃದ್ಧಿಯಿಲ್ಲದಿದ್ದರೂ ಕೃಷ್ಣರಾಮಾದಿ ಅವತಾರರೂಪಗಳಿಗೆ ವೃದ್ಧಿ ಮೊದಲಾದ ವಿಕಾರಗಳು ಇರಬಹುದಷ್ಟೆ ಎಂದರೆ) ಯಾವ ಶ್ರೀಪರಮಾತ್ಮನ ಅವತಾರರೂಪವು ಅಪ್ರಾಕೃತವೆಂದು ಪ್ರಸಿದ್ಧವಾಗಿದೆಯೋ, ಆ ಅವತಾರರೂಪಕ್ಕೂ ಕೂಡ ಹ್ರಾಸವು ವೃದ್ಧಿ ಮೊದಲಾದ ಯಾವ ವಿಕಾರವೂ ಇಲ್ಲ. (ಹೀಗೆ ಅವತಾರರೂಪಗಳಿಗೂ ಸಹ ವೃದ್ಧ್ಯಾದಿರೂಪ ವಿಕಾರವಿಲ್ಲವೆಂದು) ಮೋಕ್ಷಧರ್ಮದಲ್ಲಿದೆ (೪) (ನ ಕರ್ಮಣಾ ವರ್ಧತೇ ನೋ ಕನೀಯಾನ್ ಎಂಬುವ ಶ್ರುತಿಯಲ್ಲಿ ಕರ್ಮನಿಮಿತ್ತಕವಾದ ವೃದ್ಧಿವಿಶೇಷವನ್ನು ನಿಷೇಧಿಸಿದ್ದರಿಂದ ವೃದ್ಧಿಸಾಮಾನ್ಯವಿಲ್ಲವೆಂದು ಆಗುವುದಿಲ್ಲವೆಂದರೆ—) ನ ಕರ್ಮಣಾ ಎಂಬುವ ಶ್ರುತಿಯಲ್ಲಿ ವಿಶೇಷನಿಷೇಧ ಮಾಡಿದ್ದು ವೃದ್ಧಿರೂಪವಿಕಾರಕ್ಕೆ ಕಾರಣವಾಗಿ ಪ್ರಸಿದ್ಧವಾದ ಯಾವ ಕರ್ಮದಿಂದಲೂ ಯಾವಾಗ ವೃದ್ಧಿಯಿಲ್ಲವೋ, ಆಗ ತಾನಾಗಿ ಕರ್ಮ ಹೊರತು ಅಭಿವೃದ್ಧನಾಗುವುದಿಲ್ಲವೆಂಬುವುದು ಸುತರಾಂ ಸಿದ್ಧವೆಂದು ವೃದ್ಧಿರೂಪವಿಕಾರ ಕಾರಣವಿಶೇಷವನ್ನು ಮಾತ್ರ ನಿಷೇಧಿಸುವುದಕ್ಕಾಗಿ ಕೈಮುತ್ಯ [illegible] (ಸಾಮಾನ್ಯತಃ ಅಭಿವೃದ್ಧಿ ಇರಬಹುದೆಂಬುವ ಅಭಿಪ್ರಾಯದಿಂದ ಅಲ್ಲ) (೫) (ಸರ್ವತ್ರ ಶ್ರೀಪರಮಾತ್ಮ[illegible]

ಸರ್ವಲೋಕಗಳನ್ನು ಸಂಹರಿಸುವವನು. ಆದಕಾರಣ ಇಹ ಎಂದು ವಿಶೇಷತಃ ಹೇಳಿದ್ದು ಏಕೆ? ಎಂದರೆ–) ಇಹ=ರಣಾಂಗಣದಲ್ಲಿ ಯುದ್ಧಕ್ಕಾಗಿ ಸನ್ನದ್ಧರಾದ ಬಹು ಮಂದಿ ಜನರನ್ನು ಏಕಕಾಲದಲ್ಲಿಯೇ ಪ್ರತ್ಯಕ್ಷ ರೂಪದಿಂದಲೇ ಸಂಹರಿಸುವುದಕ್ಕಾಗಿಯೇ ಪ್ರವೃತ್ತಿ ಮಾಡಿರುವನೆಂಬ ವಿಶೇಷವನ್ನು ತಿಳಿಸುವುದಕ್ಕಾಗಿ ಇಹ ಎಂದು ಹೇಳಿದ್ದು. (೬) (ಧರ್ಮರಾಜಾದಿಗಳೂ ಯುದ್ಧದಲ್ಲಿ ಉಳಿದಿರುವುದರಿಂದ ತ್ವಾಮೃತೇ ನಿನ್ನನ್ನು (ಅರ್ಜುನನನ್ನು) ಹೊರತು ಎಂದೇ ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ–) ಸಹೋದರರಾದ ಧರ್ಮರಾಜಾದಿಗಳನ್ನು ಹೊರತು. ಎಂದು ಅಪಿ ಶಬ್ದವು ತೋರಿಸುತ್ತದೆ ಪ್ರತಿಕೂಲ (ವಿರೋಧಿ) ವಾದ ಸೈನ್ಯದಲ್ಲಿರುವ ಯೋಧರು ಮೃತರಾಗುತ್ತಾರೆಂದು ಹೇಳಿದರೆ ಪಾಂಡವರಿಗೆ ಮರಣಶಂಕೆಯೇ ಬಾರದಿರುವುದರಿಂದ ಪಾಂಡವರನ್ನು ಬಿಟ್ಟು ಎಂದು ಹೇಳಿದ್ದು ಏಕೆ? ಎಂದರೆ) ವಿರೋಧಿ ಸೈನ್ಯವೆಂದು ಹೇಳಿದ್ದರಿಂದ ಪಾಂಡವರ ಸೈನ್ಯವು ಕೌರವರಿಗೆ ವಿರೋಧಿಯು. ಕೌರವರ ಸೈನ್ಯವು ಪಾಂಡವರಿಗೆ ವಿರೋಧಿಯಾದುದರಿಂದ ಪ್ರತ್ಯನೀಕ ಶಬ್ದದಿಂದ ಕುರು ಪಾಂಡವ ಎರಡು ಸೇನೆಗಳಿಗೂ ಗ್ರಹಣವು ಬರುವುದರಿಂದ ಪಾಂಡವರೂ ಸಂಹೃತರಾಗುವರು ಎಂಬುವ ಶಂಕೆಯು ಬರಬಹುದು (ಏಕೆ ಹೀಗೆ ಅರ್ಥ ಹೇಳಬೇಕೆಂದರೆ–) ಎರಡು ಸೈನ್ಯಗಳಲ್ಲಿ ಯಾವರೂ ಕೂಡ ಉಳಿಯುವುದಿಲ್ಲ. (ಅಂದರೆ ಪಾಂಡವರ ಸೈನ್ಯಗಳಲ್ಲಿ ಪಂಚಪಾಂಡವರು ಹೊರತು ಯಾರೂ ಉಳಿಯುವುದಿಲ್ಲ. ಕೌರವರ ಸೈನ್ಯಗಳಲ್ಲಿ ಕೃಪ ಅಶ್ವತ್ಥಾಮ ಕೃತವರ್ಮ ಈ ಮೂವರು ಹೊರತು ಯಾರೂ ಉಳಿಯುವುದಿಲ್ಲ.) (ಪರಸ್ಪರ ವಿರೋಧಿಗಳಾಗಿ ಇರುವವುಗಳು ಎರಡು ಸೈನ್ಯಗಳಾದ ಪ್ರಯುಕ್ತ ಪ್ರತ್ಯನೀಕಯೋಃ ಎಂದು ದ್ವಿವಚನವನ್ನು ಹೇಳಬೇಕಿತ್ತು. ಪ್ರತ್ಯನೀಕೇಷು ಎಂದು ಬಹುವಚನವು ಹೇಗೆ ಕೂಡುತ್ತದೆ ಎಂದರೆ-) ಕೌರವರದ್ದು ೧೧ ಅಕ್ಷೌಹಿಣೀ ಸೈನ್ಯವು. ಪಾಂಡವರದ್ದು ೭ ಅಕ್ಷೌಹಿಣೀ ಸೈನ್ಯವು. ಒಂದು ಅಕ್ಷೌಹಿಣಿಗೆ ೨೧೮೭೦ ಆನೆಗಳೂ ರಥಗಳೂ, ೬೫೬೧೦ ಕುದುರೆಗಳೂ, ೧೦೯೩೫೦ ಕಾಲಾಳುಗಳೂ ಅವಶ್ಯಕವೆಂದು ಪ್ರಮಾಣಿಸಿದ್ದವು. ಹೀಗೆ ಅಕ್ಷೌಹಿಣಿಗಳು ಹೆಚ್ಚು ಇದ್ದ ಪ್ರಯುಕ್ತ ಪ್ರತ್ಯನೀಕೇಷು ಎಂಬ ಬಹುವಚನ ಹೇಳಿದ್ದು ಕೂಡುತ್ತದೆ. || ೨ || || ೩೨.೩೩ ||

ಟೀ–ಪರಶುರಾಮ ದೇವರಿಂದ ದಿವ್ಯಾಸ್ತ್ರಗಳನ್ನು ಪಡೆದಿರುವ ದ್ರೋಣಾಚಾರ್ಯರು, ಧನುರ್ವಿದ್ಯೆಗೆ ಗುರುಗಳು. ಪಿತಾಮಹರಾದ ಭೀಷ್ಮಾಚಾರ್ಯರೂ ತಮ್ಮ ಇಚ್ಛೆಯಿಂದಲೇ ಮರಣಹೊಂದತಕ್ಕ ಶಕ್ತಿಯುಳ್ಳವರು. ಸೈಂಧವನ ಶಿರಸ್ಸನ್ನು ಭೂಮಿಯಲ್ಲಿ ಕೆಡಹಾಕಿದವನ ಶಿರಸ್ಸು ಸಹಸ್ರ ತುಂಡಾಗಲಿ, ಎಂಬ ತಂದೆಯ ವರದಿಂದ ಸೈಂಧವನು ಮಹಾಬಲಿಷ್ಠನು. ಕರ್ಣನು ಇಂದ್ರನಿಂದ ಶಕ್ತ್ಯಾಖ್ಯ ಆಯುಧವನ್ನು ಪಡೆದಿರುವುದರಿಂದ ಮಹಾಬಲಿಷ್ಠನು. ಹೀಗೆಯೇ ಬೇರೆ ರಾಜಾದಿಗಳೂ ವರಾದಿಗಳಿಂದ ಮಹಾಬಲಿಷ್ಠರಾಗಿರುತ್ತಾರೆ. ಇಂತಹವರನ್ನೆಲ್ಲಾ ನಾನು ಹೇಗೆ ಗೆಲ್ಲುವುದೆಂದರೆ—

ಗೀ || ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ
ಕರ್ಣಂ ತಥಾಽನ್ಯಾನಪಿ ಯೋಧವೀರಾನ್ |
ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾ
ಯುಧ್ಯಸ್ವ ಜೇತಾಽಸಿ ರಣೇ ಸಪತ್ನಾನ್ || ೩೪ ||

ಅ|| ದ್ರೋಣಂ=ದ್ರೋಣಾಚಾರ್ಯರನ್ನು, ಭೀಷ್ಮಂ ಚ=ಭೀಷ್ಮಾಚಾರ್ಯರನ್ನು, ಜಯದ್ರಥಂ ಚ=ಜಯದ್ರಥನನ್ನು ಕರ್ಣಂ ಚ=ಕರ್ಣನನ್ನು, ತಥಾ=ಹಾಗೆಯೇ, ಅನ್ಯಾನಪಿ=ಇವರಿಗಿಂತ ಬೇರೆಯಾದ ಯೋಧವೀರಾನ್=ಯುದ್ಧವಾಡಲಿಕ್ಕೆ ಸನ್ನದ್ಧರಾದ ಶ್ರೇಷ್ಠ ಭಟರನ್ನೂ ಮಯಾ=ನನ್ನಿಂದ. ಹತಾನ್=ಸಂಹೃತಪ್ರಾಯರಾದವರನ್ನೇ, ತ್ವಂ=ನೀನು, ಜಹಿ=ಸಂಹರಿಸು. ಮಾ ವ್ಯಥಿಷ್ಠಾಃ=ವ್ಯಥೆ

ಮಾಡಬೇಡ. ಯುಧ್ಯಸ್ವ = ಯುದ್ಧಮಾಡು, ರಣೇ = ರಣಾಂಗಣದಲ್ಲಿ ಸಪತ್ನಾನ್ = ಶತ್ರುಗಳನ್ನು, ಜೇತಾಸಿ = ಗೆಲ್ಲುತ್ತಿ. ॥ ೩೪ ॥

ಪ್ರ — ದ್ರೋಣಂ ಚ ಭೀಷ್ಮಂ ಚ ಎಂಬುವ ಶ್ಲೋಕದಲ್ಲಿ ಜಯದ್ರಥನಿಗೆ ದ್ರೋಣಾದಿಗಳಷ್ಟು ಸಾಮರ್ಥ್ಯವಿಲ್ಲದಿರುವುದರಿಂದ ಜಯದ್ರಥನನ್ನು ದ್ರೋಣಾದಿಗಳಂತೆ ವಿಶೇಷತಃ ಹೇಳಿದ್ದು ಏತಕ್ಕೆ...

ತಾ ॥ (೧) ಜಯದ್ರಥಸ್ಯ ಪಿತುರ್ವರಾದೇವ ವಿಶೇಷಃ ॥ (೨) ನಿಹತಾ ನಿಹತಪ್ರಾಯಾಃ । ಪಶ್ಚಾದರ್ಜುನೇಽಪಿ ಸ್ಥಿತ್ವಾ ಸ ಏವ ಹನಿಷ್ಯತಿ ॥ ೩೩,೩೪ ॥

ಅ ॥ (೧) ಜಯದ್ರಥನಿಗೆ ತಂದೆಯು ಕೊಟ್ಟಿರತಕ್ಕ ಅತಿ ಬಲಿಷ್ಠವಾದ ವರವಿದ್ದುದರಿಂದಲೇ ವಿಶೇಷವು. (ಅಂದರೆ ಯಾವನು ಈ ಜಯದ್ರಥನ ಶಿರಸ್ಸನ್ನು ಛೇದಿಸಿ ಭೂಮಿಯಲ್ಲಿ ಕೆಡಹಾಕುವನೋ, ಅತನ ಶಿರಸ್ಸೂ ಮಣ್ಣುಪಾಲಾಗಲಿ. ಎಂದು ತಂದೆಯು ಕೊಟ್ಟಿರುವ ಅತಿ ಬಲಿಷ್ಠವಾದ ವರವಿದ್ದುದರಿಂದಲೇ ಈ ಜಯದ್ರಥನನ್ನು ವಿಶಿಷ್ಟವಾಗಿ ಹೇಳಿದ್ದು. ಅಲ್ಲದೆ ದ್ರೋಣಾದಿಗಳಂತೆ ಸಾಮರ್ಥ್ಯವಿದ್ದ ಪ್ರಯುಕ್ತವಲ್ಲ. ಜಯದ್ರಥನಿಗೆ ರುದ್ರದೇವರು ತಪಸಾ ಶಿವಮಾರಾಧ್ಯ ವವ್ರೇ ಪಾಂಡವ ರೋಧನಂ ಎಂದು ಪಾಂಡವರನ್ನು ತಡೆಯುವ ವರವನ್ನು ಮಾತ್ರ ಕೊಟ್ಟಿದ್ದು. ಆದಕಾರಣ ತಂದೆಯು ಕೊಟ್ಟ ವರವೇ ಪ್ರಬಲವಾಗಿರುವುದರಿಂದ ಪಿತುರ್ವರಾದೇವ ಎಂದು ಹೇಳಿದ್ದು.) (೨) ದುರ್ಯೋಧನಾದಿಗಳು ಜೀವಿಸಿಕೊಂಡು ಇರುವ ಕಾಲಕ್ಕನೇ ಮಯ್ಯೈವೈತೇ ನಿಹತಾಃ (ಶ್ಲೋ. ೩೩) ಎಂದು ಹೇಳಿದ್ದು ಹೇಗೆ ಕೂಡುತ್ತದೆ? ಅಲ್ಲದೆ ಸಂಹೃತರಾಗಿದ್ದರೆ ಜೇತಾಸಿ (ಶ್ಲೋ. ೩೪.) ಎಂದದ್ದು ಹೇಗೆ ಎಂದರೆ—) ನಿಹತಾಃ = ಸಂಹೃತಪ್ರಾಯರು. (ಅಂದರೆ ಅವರ ಆಯುಷ್ಯವನ್ನು ಕಳೆದಿರುವುದರಿಂದ ಮರಣ ಹೊಂದಲಿಕ್ಕೆ ಸನ್ನದ್ಧರಾಗಿರುತ್ತಾರೆ, ಎಂದರ್ಥವು.) (ಶ್ರೀಕೃಷ್ಣನು ದುರ್ಯೋಧನಾದಿಗಳ ಪ್ರಾಣವನ್ನು ವಿಯೋಜಿಸದಿದ್ದರೆ ಹಂತಾ ಭವ = ಕೊಲ್ಲುವವನಾಗು, ಎಂದೇ ಹೇಳಬೇಕಿತ್ತು ನಿಮಿತ್ತಮಾತ್ರಂ ಭವ ಎಂದು ಹೇಳಿದ್ದು ಹೇಗೆ? ಎಂದರೆ—) ಆ ಮೇಲೆಯೂ ಅರ್ಜುನನಲ್ಲಿಯೂ ಶ್ರೀಕೃಷ್ಣನೇ ಇದ್ದು ಕರ್ಣಾದಿಗಳನ್ನು ಸಂಹರಿಸುವನು. ॥ ೩೩—೩೪ ॥

ಗೀ ॥ ॥ ಸಂಜಯ ಉವಾಚ ॥

ಏತಚ್ಛ್ರುತ್ವಾ ವಚನಂ ಕೇಶವಸ್ಯ
ಕೃತಾಂಜಲಿರ್ವೇಪಮಾನಃ ಕಿರೀಟೀ ।
ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ
ಸಗದ್ಗದಂ ಭೀತಭೀತಃ ಪ್ರಣಮ್ಯ ॥ ೩೫ ॥

ಅ ॥ ಸಂಜಯಃ = ಸಂಜಯನು ಉವಾಚ = (ರಣಾಂಗಣದಲ್ಲಿ ನಡೆದ ವೃತ್ತಾಂತವನ್ನು ಧೃತರಾಷ್ಟ್ರನಿಗೆ) ಹೇಳಿದನು. ಕಿರೀಟೀ = ಕಿರೀಟಧಾರಿಯಾದ ಅರ್ಜುನನು, ಕೇಶವಸ್ಯ = ಶ್ರೀಕೃಷ್ಣನ ಏತದ್ವಚನಂ = ಇಷ್ಟರ ವರೆಗೆ ಹೇಳಿದ ಮಾತನ್ನು, ಶ್ರುತ್ವಾ = ಕೇಳಿ, ವೇಪಮಾನಃ = ಹೆದರಿಕೆಯಿಂದ ನಡುಗುವ ಶರೀರಾವಯವಗಳುಳ್ಳವನಾಗಿ, ಕೃತಾಂಜಲಿಃ = ಕೈಗಳನ್ನು ಜೋಡಿಸಿಕೊಂಡವನಾಗಿ, ನಮಸ್ಕೃತ್ವಾ = ಭಕ್ತಿಪೂರ್ವಕ ನಮಸ್ಕಾರ ಮಾಡಿ, ಭೂಯ ಏವ = ಮತ್ತು, ಕೃಷ್ಣಂ = ಶ್ರೀಕೃಷ್ಣನನ್ನು, ಭೀತಭೀತಃ = ಅತ್ಯಂತ ಭಯಗ್ರಸ್ತನಾಗಿ, ಪ್ರಣಮ್ಯ = ಭಕ್ತಿಪೂರ್ವಕವಾಗಿ ಬಗ್ಗಿಕೊಂಡು, ಸಗದ್ಗದಂ = ಮಾತಿನ ತೊದಲಿನಿಂದ ಕೂಡಿದ್ದಾಗಿ, ಆಹ = ಹೇಳುತ್ತಾನೆ.

ಟೀ—ದ್ರೋಣಾಚಾರ್ಯರು ಧನುರ್ವಿದ್ಯೆಗೆ ಗುರುಗಳಾಗಿರುವುದರಿಂದಲೂ, ಭೀಷ್ಮಾಚಾರ್ಯರು ತನ್ನ ಇಚ್ಛೆಯಿಂದಲೇ ಮರಣ ಹೊಂದುವವರಾದುದರಿಂದಲೂ ಅಂತಹವರನ್ನು ಜಯಿಸುವುದು ಹೇಗೆ ಎಂಬ ಸಂಶಯವು ಬರಬಹುದಾದುದರಿಂದ ಯೋಧವೀರರಿಂದ ಅವರನ್ನು ದ್ರೋಣಂ ಚ ಭೀಷ್ಮಂ ಚ ಎಂಬ ಶ್ಲೋಕದಲ್ಲಿ, ಪ್ರತ್ಯೇಕಿಸಿ ಹೆಸರೆತ್ತಿ ಹೇಳಿದ್ದು ಕೂಡಬಹುದು. ಆದರೆ ಜಯದ್ರಥನನ್ನು ಕರ್ಣನನ್ನು ಭೀಷ್ಮದ್ರೋಣರಂತೆ ಹೆಸರೆತ್ತಿ ಹೇಳಲು ಕಾರಣವೇನು? ಎಂದರೆ—

ಭಾ ॥ (೧) ಯೋಽಸ್ಯ ಶಿರಶ್ಛಿನ್ನಂ ಭೂಮೌ ಪಾತಯತಿ ತಚ್ಛಿರೋ ಭೇತ್ಸ್ಯತೀತಿ ತತ್ಪಿತು-ರ್ವರಾಜ್ಜಯದ್ರಥೋಽಪಿ ವಿಶೇಷೇಣೋಕ್ತಃ ॥ (೨) ಸವರಾ ವಾಸವೀ ಶಕ್ತಿರಿತಿ ಕರ್ಣಃ ॥ ॥ ೩೪,೩೫ ॥

•

ಅ ॥ (೧) ಈ ಜಯದ್ರಥನ ಶಿರಸ್ಸನ್ನು ಭೇದಿಸಿ ಯಾವನು ಭೂಮಿಗೆ ಕೆಡಹಾಕುತ್ತಾನೋ, ಭೇದಿಸಿದವನ ಶಿರಸ್ಸು ಕೂಡ ನುಚ್ಚುನೂರಾಗಿ ಬೀಳುವದು, ಎಂದು ಜಯದ್ರಥನ ತಂದೆಯು ವರಬಲವೆಂಬ ವಿಶೇಷವಿದ್ದುದರಿಂದ ಬಲಿಷ್ಠನಾಗಿರುವುದರಿಂದ ಆತನನ್ನು ವಿಶಿಷ್ಯ ಹೇಳಿದ್ದು. (೨) ಕರ್ಣನಿಗೆ ವರ ಸಹಿತವಾದ, ದೇವೇಂದ್ರನು ಕೊಟ್ಟ ಶಕ್ತ್ಯಾಖ್ಯ ಆಯುಧವಿದ್ದುದರಿಂದ ಕರ್ಣನನ್ನು ವಿಶಿಷ್ಯ ಹೇಳಿದೆ. ॥ ೩೪ ॥ ೩೫ ॥

೧೪ ॥ ॥ ಅರ್ಜುನ ಉವಾಚ ॥

ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ
ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।
ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ
ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ॥ ೩೬ ॥

ಅ ॥ ಅರ್ಜುನಃ = ಅರ್ಜುನನು, ಉವಾಚ = ಶ್ರೀಕೃಷ್ಣನೊಡನೆ ಪ್ರಾರ್ಥಿಸಿಕೊಳ್ಳುತ್ತಾನೆ. ಹೃಷೀಕೇಶ = ಸರ್ವೇಂದ್ರಿಯಗಳಿಗೆ ಪ್ರೇರಕನಾದ ಶ್ರೀಕೃಷ್ಣನೇ, ತವ = ನಿನ್ನ, ಪ್ರಕೀರ್ತ್ಯಾ = ಮಹಿಮೆಯನ್ನು ಕೊಂಡಾಡುವುದರಿಂದ, ಅಥವಾ ನಿನ್ನ ಕೀರ್ತಿಯನ್ನು ಕೇಳಿದ್ದರಿಂದ, ಜಗತ್ = ಪ್ರಪಂಚವು ಪ್ರಹೃಷ್ಯತಿ = ಸಂತೋಷಗೊಳ್ಳುತ್ತದೆ. ಅನುರಜ್ಯತೇ ಚ = ಪ್ರೀತಿಯನ್ನು ಮಾಡುತ್ತದೆ. ರಕ್ಷಾಂಸಿ = ರಾಕ್ಷಸರು, ಭೀತಾನಿ = ಭಯಪಟ್ಟವರಾಗಿ, ದಿಶಃ = ದಿಕ್ಕುಗಳನ್ನು ಕುರಿತು, ದ್ರವಂತಿ = ಓಡಿಹೋಗುತ್ತಾರೆ. ಸರ್ವೇ = ಎಲ್ಲಾ, ಸಿದ್ಧಸಂಘಾಃ = ಸಿದ್ಧರ ಸಮುದಾಯಗಳು, ನಮಸ್ಯಂತಿ ಚ = ನಮಸ್ಕರಿಸುತ್ತವೆ. (ಇವೆಲ್ಲವೂ) ಸ್ಥಾನೇ = ಯುಕ್ತವು. ॥ ೩೬ ॥

ಭಾ ॥ (೧) ಯದೇತದ್ವಕ್ಷ್ಯಮಾಣಂ ತತ್ಸ್ಥಾನೇ ಯುಕ್ತಮೇವೇತ್ಯರ್ಥಃ ॥ (೨) ಅಗ್ನೀ-ಷೋಮಾದ್ಯಂತರ್ಯಾಮಿತಯಾ ಜಗದ್ವರ್ಷಣಾದೇರ್ಹೃಷೀಕೇಶಃ ॥ ಕೇವಲತ್ವಂ ತ್ವಂ-ಶೂನಾಂ ತನ್ನಿಯತತ್ವಾದೇಃ । ಪ್ರಮಾಣಂ ತು ॥ (೩) ರವಿಸೂರ್ಯನೇತ್ರಪಿತ್ಯ-ಶ್ರೋತ್ರಂ । ಹೃಷೀಕಾಣಾಮಿಂದ್ರಿಯಾಣಾಮೀಶತ್ವಾಚ್ಚ ಹೃಷೀಕೇಶಃ ॥ (೪) ತೇ-ಷಾಂ ವಿಶೇಷತ ಈಶತ್ವಂ ಚ ಯಃ ಪ್ರಾಣೇ ತಿಷ್ಠನ್ನಿತ್ಯಾದ್ ಸಿದ್ಧಂ ॥ (೫) ನ ಮೇ ಹೃಷೀಕಾಣಿ ಪತಂತ್ಯಸತ್ಪಥ ಇತ್ಯಾದಿಪ್ರಯೋಗಾಚ್ಚ ॥ (೬) ಇತರೋಽಘೋರೇ

ಮೋಕ್ಷಧರ್ಮೇಷು ಸಿದ್ಧಃ । ಸೂರ್ಯಾಚಂದ್ರಮಸೌ ಶಶ್ವತ್ಕೇಶೈರ್ಮೇ ಅಂಶುಸಂ-
ಜ್ಞಿತೈಃ । ಬೋಧಯನ್ತಾಪಯಂಶ್ಚೈವ ಜಗದುತ್ಪದ್ಯತೇ ಪೃಥಕ್ । ಬೋಧನಾತ್
ಸ್ಥಾಪನಾಚ್ಚೈವ ಜಗತೋ ಹರ್ಷಸಂಭವಾತ್ । ಅಗ್ನೀಷೋಮಕೃತೈರೇಭಿಃ ಕರ್ಮ-
ಭಿಃ ಪಾಂಡುನಂದನ । ಹೃಷೀಕೇಶೋಽಹಮೀಶಾನೋ ವರದೋ ಲೋಕಭಾವನ
ಇತಿ ॥ ೩೬ ॥

ಅ ॥ (೧) ಮುಂದೆ ಹೇಳುವುದು ಯಾವುದಿದೆಯೋ, ಅದು ಯುಕ್ತವೇ. (೨) (ಹೃಷೀಕೇಶ ಶಬ್ದಕ್ಕೆ ಪ್ರಕೃತೋಪಯುಕ್ತವಾದ ಅಪೂರ್ವವಾದ ಅರ್ಥವನ್ನು ಹೇಳುತ್ತಾರೆ—) ಶ್ರೀಪರಮಾತ್ಮನು ಅಗ್ನಿ, ಚಂದ್ರ, ಸೂರ್ಯಾದಿಗಳಲ್ಲಿ ಅಂತರ್ಯಾಮಿಯಾಗಿದ್ದು, ತನ್ನ ಕೇಶಗಳ ಅಧೀನಗಳೂ ಕೇಶಗಳಿಂದ ಹುಟ್ಟಿದವುಗಳೂ, ಕೇಶಗಳನ್ನಾಶ್ರಯಿಸಿದವುಗಳೂ ಆಗಿರುವುದರಿಂದ ಶ್ರೀಪರಮಾತ್ಮನ ಕೇಶಗಳೆನಿಸಿಕೊಳ್ಳುವ ಅಗ್ನ್ಯಾದಿಗಳ ಕಿರಣಗಳಿಂದ (ಜಗತ್ತಿಗೆ ಜ್ಞಾನವನ್ನು ಹುಟ್ಟಿಸುವುದು ರಕ್ಷಿಸುವುದು ಇವುಗಳಿಂದ) ಜಗತ್ತಿಗೆ ಸಂತೋಷವನ್ನು ಹುಟ್ಟಿಸುವುದರಿಂದ ಹೃಷ್ಯಃ ಕೇಶಾಃ ಯಸ್ಯ ಎಂಬುವ ವ್ಯುತ್ಪತ್ತಿಯಿಂದ ಜಗತ್ತಿಗೆ ಸಂತೋಷವನ್ನು ಹುಟ್ಟಿಸುವ ಕೇಶಗಳುಳ್ಳವನಾದುದರಿಂದ ಹೃಷೀಕೇಶಃ ಎನಿಸುತ್ತಾನೆ (ಸೂರ್ಯಾದಿಗಳ ಕಿರಣಗಳು ಶ್ರೀಪರಮಾತ್ಮನ ಕೇಶಗಳು ಆಗುವುದು ಹೇಗೆ? ಎಂದರೆ—) ಸೂರ್ಯಾದಿಗಳ ಕಿರಣಗಳು ಹಿಂದೆ ಹೇಳಿದ ಪ್ರಕಾರ ಪರಮಾತ್ಮನ ಕೇಶಗಳಿಂದ ಹುಟ್ಟಿದವುಗಳೂ, ಕೇಶಗಳ ಅಧೀನಗಳೂ, ಕೇಶಗಳನ್ನಾಶ್ರಯಿಸಿದವುಗಳೂ ಆಗಿರುವುದರಿಂದ ಕೇಶಗಳೆನಿಸಿಕೊಳ್ಳುತ್ತವೆ ಎವಂಚ ಜಗತ್ತಿಗೆ ಸಂತೋಷವನ್ನು ಹುಟ್ಟಿಸುವ ಸೂರ್ಯಾದಿಗಳ ಕಿರಣಗಳನ್ನು ಹುಟ್ಟಿಸುವ ಕೇಶಗಳುಳ್ಳವನಾದುದರಿಂದ ಹೃಷೀಕೇಶನೆನಿಸುತ್ತಾನೆ. (೩) ಶಶಿಸೂರ್ಯನೇತ್ರಂ (ಶ್ಲೋ ೧೯.) ಎಂಬುವುದನ್ನು ವ್ಯಾಖ್ಯಾನಮಾಡುವ ಕಾಲದಲ್ಲಿ ಚಂದ್ರಸೂರ್ಯಾಗ್ನಿಗಳು ಪರಮಾತ್ಮನ ಅಂಗಗಳಿಂದ ಹುಟ್ಟಿದವರು ಎಂಬುವ ವಿಷಯದಲ್ಲಿ ತದಂಗಜಾ ಸ್ಸುರಾದಯೋಽಪಿ ಎಂದು ಪ್ರಮಾಣವನ್ನು ಹೇಳಿದ್ದಾರೆ. (ಇದಲ್ಲದೆ ಸರ್ವತ್ರ ಪ್ರಸಿದ್ಧವಾದ ಅರ್ಥವನ್ನು ಹೇಳುತ್ತಾರೆ—) ಮತ್ತು ಎಲ್ಲಾ ಇಂದ್ರಿಯಗಳಿಗೆ ಅಧಿಪತಿಯಾಗಿರುವುದರಿಂದಲೂ ಶ್ರೀಪರಮಾತ್ಮನು ಹೃಷೀಕೇಶನೆನಿಸುತ್ತಾನೆ (೪) (ಸರ್ವ ಜಗತ್ತಿಗೆ ನಿಯಾಮಕನಾಗಿದ್ದವನು ಇಂದ್ರಿಯಗಳಿಗೆ ನಿಯಾಮಕನೆಂದು ವಿಶಿಷ್ಯ ಹೇಳಿದ್ದು ಹೇಗೆ? ಎಂದರೆ—) ಚಕ್ಷುರಾದಿ ಜ್ಞಾನೇಂದ್ರಿಯಗಳಿಗೆ ಪುರುಷಾರ್ಥೋಪಯುಕ್ತ ಜ್ಞಾನಶಕ್ತಿಗೆ ಪ್ರೇರಕನಾಗಿಯೂ ವಾಗಾದಿ ಕರ್ಮೇಂದ್ರಿಯಗಳಿಗೆ ಪುರುಷಾರ್ಥೋಪಯುಕ್ತ ಕರ್ಮಶಕ್ತಿಗೆ ಪ್ರೇರಕನಾಗಿಯೂ ಹೀಗೆ ವಿಶಿಷ್ಟನಿಯಾಮಕತ್ವವಿದ್ದುದರಿಂದ ಯಃ ಪ್ರಾಣೇ ತಿಷ್ಠನ್ ಯಾವನು ಪ್ರಾಣೇಂದ್ರಿಯಾಭಿಮಾನಿಯಲ್ಲಿ ನಿಯಾಮಕನಾಗಿ ಇರುತ್ತಾನೆ, ಇತ್ಯಾದಿ ಶ್ರುತಿಗಳಲ್ಲಿ ಪ್ರಸಿದ್ಧವೇ ಆಗಿದೆ (೫) ನ ಇಂದ್ರಿಯಗಳು ದುರ್ಮಾರ್ಗದಲ್ಲಿ ಬೀಳುವದಿಲ್ಲ. ಇತ್ಯಾದಿ ಪ್ರಮಾಣಗಳಿಂದ ಹೃಷೀಕೇಶ ಶಬ್ದವು ಇಂದ್ರಿಯವಾಚಕವೆಂದು ಪ್ರಸಿದ್ಧವೇ ಆಗಿದೆ. (೬) ಶ್ರೀಪರಮಾತ್ಮನು ಸೂರ್ಯಾದಿಗಳಲ್ಲಿ ಅಂತರ್ಯಾಮಿಯಾಗಿದ್ದು ಜಗತ್ತನ್ನು ಸಂತೋಷಗೊಳಿಸುವ ಸೂರ್ಯಚಂದ್ರಾದಿ ಕಿರಣಗಳಿಗೆ ನಿಯಾಮಕಗಳಾದ ಕೇಶಗಳುಳ್ಳವನೆಂಬುವ ಅರ್ಥವು ಮೋಕ್ಷಧರ್ಮದಲ್ಲಿ ಸಿದ್ಧವಾಗಿದೆ, ಎಲೋ ಪಾಂಡುಪುತ್ರನಾದ ಧರ್ಮರಾಜನೇ ಜಗತ್ತಿಗೆ ಜ್ಞಾನವನ್ನು ಹುಟ್ಟಿಸುವದರಿಂದಲೂ ಜಗತ್ತನ್ನು ರಕ್ಷಿಸುವುದರಿಂದಲೂ ಜಗತ್ತಿಗೆ ಸಂತೋಷ ಕೊಡುವದರಿಂದಲೂ ಅಂಶು ಎಂದು ಹೆಸರುಳ್ಳ ತನ್ನ ಕೇಶಗಳಿಂದ ಸೂರ್ಯ ಚಂದ್ರ ಅಗ್ನಿಗಳು ಯಾವಾಗಲೂ ಜಗತ್ತನ್ನು ಬೋಧಿಸುವವರಾಗಿ ರಕ್ಷಿಸುವವರಾಗಿ ಹುಟ್ಟುವ ಕಾಲವು ಬರುವಾಗ ನನ್ನ ಕೇಶಗಳಿಂದ ಉತ್ಪತ್ತಿಯನ್ನು ಹೊಂದುತ್ತಾರೆ. ಹಾಗೆಯೇ ಅಗ್ನಿ ಸೂರ್ಯ ಚಂದ್ರ ಇವರಿಂದ ಮಾಡಲ್ಪಟ್ಟ ಜಗತ್ತಿಗೆ ಸಂತೋಷಗಳಾದ ಕರ್ಮಗಳಿಂದ ನಿಯಾಮಕರಾದ ಬ್ರಹ್ಮಾದಿಗಳಿಗೂ ನಿಯಾಮಕನೂ ಭಕ್ತರಿಗೆ ಅಭೀಷ್ಟ ವರ

ರ್ವಜಗತ್ತನ್ನು ಸೃಷ್ಟಿಸುವವನೂ ಆದ ನಾನು ಹರ್ಷಜನಕಗಳಾದ ಅಗ್ನಿ ಸೂರ್ಯ ಚಂದ್ರ ಇವರ ಕಿರಣಗಳನ್ನು ಹುಟ್ಟಿಸುವ ಕೇಶಗಳುಳ್ಳವನಾದುದರಿಂದ ಹೃಷೀಕೇಶಃ ಎನಿಸಿಕೊಳ್ಳುತ್ತಾನೆಂದು ಮೋಕ್ಷಧರ್ಮದಲ್ಲಿದೆ. ॥ ೩೬ ॥

ಗೀ॥ ಕಸ್ಮಾಚ್ಚ ತೇ ನ ನಮೇರನ್ಮಹಾತ್ಮನ್
ಗರೀಯಸೇ ಬ್ರಹ್ಮಣೋಽಪ್ಯಾದಿಕರ್ತ್ರೇ ।
ಅನಂತ ದೇವೇಶ ಜಗನ್ನಿವಾಸ
ತ್ವಮಕ್ಷರಂ ಸದಸತ್ತತ್ಪರಂ ಯತ್ ॥ ೩೭ ॥

ಅ॥ ಹೇ ಮಹಾತ್ಮನ್=ಪರಿಪೂರ್ಣವಾದ ಆಪ್ತಿ ಮೊದಲಾದುವುಗಳುಳ್ಳವನೇ, ಅಂದರೆ-ಹೊಂದುವಿಕೆ ಆದಾನ (ತೆಗೆದುಕೊಳ್ಳುವುದು) ವಿಷಯಗಳ ಸಾರವನ್ನನುಭವಿಸುವುದು, ನಿತ್ಯಸ್ಥಿತಿಗಳುಳ್ಳವನೇ, ಗರೀಯಸೇ=ಅತ್ಯಂತ ಶ್ರೇಷ್ಠನಾದ ಬ್ರಹ್ಮಣೋಽಪಿ=ಚತುರ್ಮುಖ ಬ್ರಹ್ಮನನ್ನು ಕೂಡ ಆದಿಕರ್ತ್ರೇ=ಸೃಷ್ಟಿಸಿರುವ. ತೇ=ನಿನಗೋಸ್ಕರ, ಕಸ್ಮಾಚ್ಚ=ಯಾವ ಕಾರಣದಿಂದ, ನ ನಮೇರನ್=ನಮಸ್ಕರಿಸದೆ ಇದ್ದಾರು. (ಅಂದರೆ ಇಂತಹ ಮಹಾಮಹಿಮೆಯುಳ್ಳ ನಿನಗೆ ಸಮಸ್ತ ದೇವತೆಗಳೂ ಸರ್ವದಾ ನಮಸ್ಕರಿಸಿಕೊಂಡೇ ಇರುತ್ತಾರೆ) ಅನಂತ=ನಾಶವಿಲ್ಲದಿರುವ, ದೇವೇಶ=ಸಮಸ್ತ ದೇವತೆಗಳಿಗೆ ಸ್ವಾಮಿಯಾದ, ಜಗನ್ನಿವಾಸ=ಸರ್ವ ಜಗತ್ತಿಗೆ ಆಶ್ರಯನಾದ, ಶ್ರೀಕೃಷ್ಣನೇ, ಯತ್ ಸದಸತ್=ಭಾವಾಭಾವ ಅಥವಾ ಕಾರ್ಯಕಾರಣರೂಪವಾದ ಯಾವ ಜಗತ್ತು ಇದೆಯೋ, ತತ್ಪರಂ=ಅಂತಹ ಚೇತನಾಚೇತನಾತ್ಮಕ ನಿಖಿಲ ಜಗತ್ತಿಗಿಂತ ಉತ್ತಮನಾದವನು, ಅಕ್ಷರಂ=ನಾಶರಹಿತನಾದವನು, ತ್ವಮೇವ=ನೀನೇ. ॥ ೩೭ ॥

ಗೀ॥ ತ್ವಮಾದಿದೇವಃ ಪುರುಷಃ ಪುರಾಣಃ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ ।
ವೇತ್ತಾಽಸಿ ವೇದ್ಯಂ ಚ ಪರಂ ಚ ಧಾಮ
ತ್ವಯಾ ತತಂ ವಿಶ್ವಮನಂತರೂಪ ॥ ೩೮ ॥

ಅ॥ ಅನಂತರೂಪ=ಸರ್ವಕಾಲದಲ್ಲಿಯೂ ಒಂದೇ ವಿಧವಾದ ರೂಪವುಳ್ಳ ಶ್ರೀಕೃಷ್ಣನೇ, ತ್ವಂ=ನೀನು, ಆದಿದೇವಃ=ಬ್ರಹ್ಮಾದಿ ಸಮಸ್ತದೇವತೆಗಳಿಗೂ ಆದಿಭೂತನು. ಪುರುಷಃ=ಷಡ್ಗುಣ ಪರಿಪೂರ್ಣನು. ಪುರಾಣಃ=ಅನಾದಿಯಾದವನು, ಅಸ್ಯ ವಿಶ್ವಸ್ಯ=ಈ ಜಗತ್ತಿಗೆಲ್ಲಾ, ಪರಂ ನಿಧಾನಂ=ಮುಖ್ಯಾಶ್ರಯನು. ವೇತ್ತಾ=ಸಮಸ್ತ ಪ್ರಪಂಚವನ್ನು ತಿಳಿದವನು ಅಸಿ=ಆಗಿರುತ್ತಿ. ವೇದ್ಯಂ ಚ=ಸಮಸ್ತ ವೇದಾದಿಗಳಿಂದ ತಿಳಿದುಕೊಳ್ಳಲಿಕ್ಕೆ ಯೋಗ್ಯನೂ ನೀನೇ ಪರಂ ಚ ಧಾಮ=ಸರ್ವೋತ್ಕೃಷ್ಟವಾದ ತೇಜಸ್ಸ್ವರೂಪನೂ ನೀನೇ. ತ್ವಯಾ=ನಿನ್ನಿಂದ, ವಿಶ್ವಂ=ಸಮಸ್ತ ಜಗತ್ತು, ತತಂ=ವ್ಯಾಪ್ತವಾಗಿದೆ. (ಅಂದರೆ ಸಮಸ್ತ ಜಗತ್ತನ್ನು ನೀನೇ ವ್ಯಾಪಿಸಿಕೊಂಡಿದ್ದಿ.) ॥ ೩೮ ॥

ಟೀ—ಇನ್ನು ಅನೇಕ ಗುಣಗಳುಳ್ಳವನೆಂದು ಪುನಃ ಸ್ತೋತ್ರ ಮಾಡುತ್ತಾರೆ—

ಗೀ॥ ವಾಯುರ್ಯಮೋಽಗ್ನಿರ್ವರುಣಃ ಶಶಾಂಕಃ
ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।

ನಮೋನಮಸ್ತೇಽಸ್ತು ಸಹಸ್ರಕೃತ್ವಃ
ಪುನಶ್ಚ ಭೂಯೋಽಪಿ ನಮೋನಮಸ್ತೇ ॥ ೩೯ ॥

ಅ ॥ (ಶ್ರೀಕೃಷ್ಣನು) ತ್ವಂ = ನೀನು, ವಾಯುಃ = ಬಲಜ್ಞಾನ ಸ್ವರೂಪನು, ಯಮಃ = ದೋಷ ಲೇಶ ಇಲ್ಲದವನು, ಅಥವಾ ನಿಯಾಮಿಸುವವನು, ಅಗ್ನಿಃ = ಸ್ವತಃ ಗಮನಶಕ್ತಿಯಿಲ್ಲದಿರುವ ಜಗತ್ತಿಗೆ ಪ್ರೇರಕನು, ವರುಣಃ = ಭಕ್ತರನ್ನಾಗಿ ಅಂಗೀಕರಿಸಿ ಅನುಗ್ರಹಿಸುವವನು, ಶಶಾಂಕಃ = ಅತಿಶಯಿತ ಸುಖ ಸ್ವರೂಪನು, ಪ್ರಜಾಪತಿಃ = ಪ್ರಜೆಗಳನ್ನು ರಕ್ಷಿಸುವವನು, ಪ್ರಪಿತಾಮಹಶ್ಚ = ಸಮಸ್ತ ಪ್ರಜೆಗಳನ್ನು ಸೃಷ್ಟಿಸುವ ಚತುರ್ಮುಖನಿಗೂ ಸೃಷ್ಟಿಕರ್ತನು, ತೇ = ಇಂತಹ ನಿನಗೆ, ಸಹಸ್ರಕೃತ್ವಃ = ಸಾವಿರಾರು ಆವರ್ತಿ, ನಮೋನಮಃ ಅಸ್ತು = ನಮಸ್ಕಾರ ನಮಸ್ಕಾರವಾಗಲಿ. ತೇ = ನಿನಗೆ, ಪುನಶ್ಚ = ಮತ್ತೂ ಮತ್ತೂ, ಭೂಯೋಽಪಿ = ಬಹು ಸಲ, ನಮೋನಮಃ = ನಮಸ್ಕಾರ ನಮಸ್ಕಾರವು. ॥ ೩೯ ॥

ಟೀ — ವಾಯುರ್ಯಮೋಽಗ್ನಿಃ ಇತ್ಯಾದಿ ಅರ್ಜುನನು ಸ್ತುತಿಸುವ ವಾಕ್ಯದಲ್ಲಿ ಶ್ರೀಪರಮಾತ್ಮನಿಗೆ ವಾಯು ಮೊದಲಾದವರಿಂದ ಅಭೇದವು ಹೇಳಲ್ಪಡುತ್ತದೆ, ಎಂಬುವ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ವಾಯು ಮೊದಲಾದ ಶಬ್ದಗಳಿಗೆ ಅರ್ಥವನ್ನು ಸ್ಮೃತಿಪ್ರಮಾಣ ಹೇಳಿ ತೋರಿಸುತ್ತಾರೆ-

ತಾ ॥ ವಾಯುರ್ಬಲಜ್ಞಾನಯೋಗಾಚ್ಛಶಾಂಕೋಽತಿಸುಖಾಂಕಿತಃ । ಇಂದ್ರಃ ಸ ಪರಮೈ-
ಶ್ವರ್ಯಾದಿತಿ ನಾನಾಭಿಧೋ ಹರಿರಿತಿ ಚ ॥ ೩೮—೩೯ ॥

ಅ ॥ ಶ್ರೀಪರಮಾತ್ಮನು ಪೂರ್ಣಬಲಜ್ಞಾನಗಳು ಇರುವವನಾದುದರಿಂದ ವಾಯುಃ ಎನಿಸುತ್ತಾನೆ. ಪೂರ್ಣಸುಖವುಳ್ಳವನಾದುದರಿಂದ ಶಶಾಂಕಃ ಎನಿಸುತ್ತಾನೆ. ಪರಮೈಶ್ವರ್ಯ ಸಂಪನ್ನನಾಗಿರುವುದರಿಂದ ಇಂದ್ರಃ ಎನಿಸುತ್ತಾನೆ. ಹೀಗೆ ಶ್ರೀಪರಮಾತ್ಮನು ನಾನಾಶಬ್ದಗಳಿಂದ ವಾಚ್ಯನಾಗಿರುತ್ತಾನೆ. ॥ ೩೮-೩೯ ॥

ಗೀ ॥ ನಮಃ ಪುರಸ್ತಾದಥ ಪೃಷ್ಠತಸ್ತೇ
ನಮೋಽಸ್ತು ತೇ ಸರ್ವತ ಏವ ಸರ್ವ ।
ಅನಂತವೀರ್ಯಾಮಿತವಿಕ್ರಮಸ್ತ್ವಂ
ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ ॥ ೪೦ ॥

ಅ ॥ ಸರ್ವ = ಸರ್ವಗುಣಪರಿಪೂರ್ಣನಾದ ಶ್ರೀಕೃಷ್ಣನೇ, ತೇ = ನಿನಗೆ, ಪುರಸ್ತಾತ್ = ಮುಂಭಾಗದಲ್ಲಿಯೂ, ನಮಃ = ನಮಸ್ಕಾರವು. ಅಥ = ಹಾಗೆಯೇ ಪೃಷ್ಠತಃ = ಹಿಂದುಗಡೆಯಲ್ಲಿಯೂ, ನಮಃ = ನಮಸ್ಕಾರವು. ಅಸ್ತು = ಆಗಲಿ, ಸರ್ವತ ಏವ = ದಕ್ಷಿಣ ಉತ್ತರ ಮೊದಲಾದ ಎಲ್ಲಾ ದಿಕ್ಕುಗಳಲ್ಲಿಯೂ ತೇ = ನಿನಗೆ, ನಮಃ = ನಮಸ್ಕಾರವು. ಅಸ್ತು = ಆಗಲಿ ಅನಂತವೀರ್ಯಾಮಿತ ವಿಕ್ರಮಃ = ಅನಂತವಾದ ವೀರ್ಯವೂ ಅಪರಿಮಿತವಾದ ಪರಾಕ್ರಮವೂ ಇವುಗಳುಳ್ಳ, ತ್ವಂ = ನೀನು. ಅಥವಾ ಅನಂತ ವೀರ್ಯ = ಅಪರಿಮಿತ ಸಾಮರ್ಥ್ಯವುಳ್ಳ ಶ್ರೀಕೃಷ್ಣನೇ ಅಪರಿಮಿತ ಪರಾಕ್ರಮವುಳ್ಳ ನೀನು, ಸರ್ವಂ = ಸಮಸ್ತ ಜಗತ್ತನ್ನು, ಸಮಾಪ್ನೋಷಿ = ವ್ಯಾಪಿಸಿಕೊಂಡಿರುತ್ತಿ. ತತಃ = ಆದಕಾರಣ (ಸಮಸ್ತ ಜಗತ್ತನ್ನು ವ್ಯಾಪಿಸಿರುವುದರಿಂದ ಸರ್ವಂ ಖಲ್ವಿದಂ ಬ್ರಹ್ಮ ಪುರುಷ ಏವೇದಂ ಸರ್ವಂ ಇತ್ಯಾದಿಗಳಲ್ಲಿ) ಸರ್ವಃ = ಸರ್ವ ಎನಿಸಿಕೊಂಡವನು, ಅಸಿ = ಆಗಿರುತ್ತಿ. ॥ ೪೦ ॥

ಟೀ—ಇಂತಹ ಮಹಾಮಹಿಮೆಯುಳ್ಳ ಭಗವಂತನಲ್ಲಿ ಪ್ರಮಾದದಿಂದ ಮಾಡಿದ ನನ್ನ ಅಪರಾಧ ವನ್ನು ಕ್ಷಮಿಸಬೇಕೆಂದು ಪ್ರಾರ್ಥಿಸುತ್ತಾನೆ—

ಗಿ॥ ಸಖೇತಿ ಮತ್ವಾ ಪ್ರಸಭಂ ಯದುಕ್ತಂ
ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।
ಅಜಾನತಾ ಮಹಿಮಾನಂ ತವೇದಂ
ಮಯಾ ಪ್ರಮಾದಾತ್ಪ್ರಣಯೇನ ವಾಽಪಿ ॥ ೪೧ ॥

ಅ॥ ತವ=ನಿನ್ನ, ಇದಂ=ಹಿಂದೆ ಹೇಳಿದ ಪ್ರತ್ಯಕ್ಷಸಿದ್ಧವಾದ, ಮಹಿಮಾನಂ=ಜಗತ್ಸೃಷ್ಟ್ಯಾದಿ ಕರ್ತೃತ್ವ ಮೊದಲಾದ ಮಹಿಮೆಯನ್ನು, ಅಜಾನತಾ=ತಿಳಿಯದಿರುವ, ಮಯಾ=ನನ್ನಿಂದ, ಪ್ರಮಾದಾತ್=ಪರಾಧೀನತೆಯಿಂದಲಾಗಲೀ, ಅಥವಾ ಪರಮಾತ್ಮನ ಅವತಾರದ ಮರೆಯುವಿಕೆಯಿಂದಲಾಗಲೀ, ಪ್ರಣಯೇನ ವಾಪಿ=ಸ್ನೇಹದಿಂದಲಾಗಲೀ, ಸಖೇತಿ ಮತ್ವಾ=ಸಮಾನವಯಸ್ಕನಾದುದರಿಂದ ಗೆಳೆಯನೆಂದು ಭಾವಿಸಿಕೊಂಡು, ಹೇ ಕೃಷ್ಣ=ಕಪ್ಪುಬಣ್ಣವುಳ್ಳವನೇ, ಹೇ ಯಾದವ=ರಾಜ್ಯಕ್ಕೆ ಅನರ್ಹನಾದ ಎಲೋ ಯದುಕುಲೋತ್ಪನ್ನನೇ, ಹೇ ಸಖೇತಿ=ಎಲೋ ಮಿತ್ರನೇ ಎಂತ, ಪ್ರಸಭಂ=ಯಥೇಚ್ಛವಾಗಿ ಬಹುಮಾನವಮಾಡದೆ, ಅವಮಾನಿಸಿ, ಯತ್=ಯಾವುದು, ಉಕ್ತಂ=ಹೇಳಲ್ಪಟ್ಟಿದೋ, (ಅಂತಹುದೆಲ್ಲವನ್ನು ಕ್ಷಮಿಸಬೇಕೆಂದು ನಿನ್ನನ್ನು ಪ್ರಾರ್ಥಿಸುತ್ತೇನೆ.) ॥ ೪೧ ॥

ಭಾ॥ (೧) ಕಥಂ ಸ್ಥಾನ ಇತಿ ತದಾಹ । ಕಸ್ಮಾದಿತ್ಯಾದಿನಾ ॥ (೨) ಪೂರ್ಣತ್ವಾಸಾವಾತ್ಮಾ ಚೇತಿ ಮಹಾತ್ಮಾ ॥ (೩) ಆತ್ಮಶಬ್ದಶ್ಚೋಕ್ತೋ ಭಾರತೇ । ಯಚ್ಚಾಪ್ನೋತಿ ಯದಾದತ್ತೇ ಯಚ್ಚಾತ್ತಿ ವಿಷಯಾನಿಹ । ಯಚ್ಚಾಸ್ಯ ಸಂತತೋ ಭಾವಸ್ತಸ್ಮಾದಾತ್ಮೇತಿ ಭಣ್ಯತ ಇತಿ ॥ (೪) ತತ್ಪರಂ ಸದಸತೋಃ ಪರಂ । ಅಸಚ್ಚ ಸಚ್ಚೈವ ಚ ಯದ್ವಿಶ್ವಂ ಸದಸತಃ ಪರಮಿತಿ ಚ ಭಾರತೇ ॥ ೩೭–೪೧ ॥

ಅ॥ (೧) ಸ್ಥಾನೇ ಎಂದು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ ಕಸ್ಮಾಚ್ಚ ತೇ ಎಂಬುವುದರಿಂದ ಆ ಶಂಕೆಗೆ ಉತ್ತರವನ್ನು ಹೇಳುತ್ತಾರೆ (೨) (ಮಹಾತ್ಮನ್=ಎಂಬುವುದಕ್ಕೆ ಅಲ್ಪನಿದ್ರ ಚಿತ್ ಎಂಬುವ ಅರ್ಥವು ಅಯುಕ್ತವೆನ್ನುತ್ತಾರೆ—)ಸರ್ವಗುಣಪರಿಪೂರ್ಣನು ಆಪ್ತ್ಯಾದಿಗಳನ್ನು ಹೊಂದಿದವನು. ಮಹಾತ್ಮಾ ಎನಿಸುತ್ತಾನೆ.) (೩) (ಆತ್ಮನೆಂಬುವುದಕ್ಕೆ ಜೀವನೆಂಬುವ ಅರ್ಥವು ಯುಕ್ತವಲ್ಲವೆನ್ನುತ್ತಾರೆ-)ಸಮಸ್ತವನ್ನು ಹೊಂದಿದವನು ಅಂದರೆ ಆಪ್ತಕಾಮನು ದೇಹದಲ್ಲಿದ್ದು ವಿಷಯಗಳ ಸಾರಭೋಕ್ತನು. ನಿತ್ಯನಿತ್ಯಾಗಿರುವವನು. ಅಂದರೆ ಸರ್ವತ್ರ ವ್ಯಾಪಿಸಿಕೊಂಡಿರುವವನು ಆದುದರಿಂದ ಆತ್ಮಾ ಎನಿಸಿಕೊಳ್ಳುತ್ತಾನೆ, ಎಂದು ಭಾರತದಲ್ಲಿ ಆತ್ಮಶಬ್ದಾರ್ಥವು ಹೇಳಲ್ಪಟ್ಟಿದೆ. (೪) ತತ್ಪರಂ=ಸದಸದ್ರೂಪವಾದ ಅಂದರೆ ಭಾವಅಭಾವರೂಪವಾದ ಕಾರ್ಯಕಾರಣರೂಪವಾದ ಜಗತ್ತಿಗೆ ಸ್ಥಿತಿಪಾಲನಾದಿಗಳನ್ನು ಕೊಡತಕ್ಕವನಾದದ್ದರಿಂದ ಅಂತಹ ಭಾವ ಅಭಾವ ಜಗತ್ತಿಗಿಂತ ಶ್ರೇಷ್ಠನು (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ ) ಅಸತ್ ಕಾರಣ ಅಭಾವ ಸತ್ ಕಾರ್ಯ, ಭಾವ ರೂಪ ಜಗತ್ತು ಇವೆರಡು, ಇವಕ್ಕಿಂತ [illegible] ಎಂದು ಭಾಗವತದಲ್ಲಿದೆ.

ಗೀ || ಯಚ್ಚಾವಹಾಸಾರ್ಥಮಸತ್ಕೃತೋಽಸಿ
ವಿಹಾರಶಯ್ಯಾಸನಭೋಜನೇಷು |
ಏಕೋಽಥ ವಾಽಪ್ಯಚ್ಯುತ ತತ್ಸಮಕ್ಷಂ
ತತ್ಕ್ಷಾಮಯೇ ತ್ವಾಮಹಮಪ್ರಮೇಯಂ || ೪೨ ||

ಅ || ಅಥವಾ = ಮತ್ತು ಇಷ್ಟು ಮಾತ್ರವಲ್ಲದೆ, ಅಚ್ಯುತ = ಎಲ್ಲಾ ಗುಣಗಳಿಗೂ ಚ್ಯುತಿಯಿಲ್ಲದಿರುವ ಶ್ರೀಕೃಷ್ಣನೇ, ವಿಹಾರಶಯ್ಯಾಸನಭೋಜನೇಷು = ಜಲಕ್ರೀಡೆಯೂ ಒಂದೇ ಹಾಸಿಗೆ ಏಕತ್ರ ಕೂತು ಕೊಳ್ಳುವಿಕೆ, ಮೊದಲು ಉಣ್ಣುವುದು, ಇತ್ಯಾದಿಗಳ ವಿಷಯದಲ್ಲಿಯೂ, ತ್ವಂ = ನೀನು ಏಕೋಽಪಿ = ಸರ್ವೋತ್ತಮನಾದಾಗ್ಯೂ (ಅಂದರೆ ತಿರಸ್ಕಾರಕ್ಕೆ ಸರ್ವಥಾ ಅರ್ಹನಾಗದಿದ್ದರೂ) ಅವಹಾಸಾರ್ಥಂ = ಪರಿಹಾಸಕ್ಕಾಗಿ, ಅಸತ್ಕೃತೋಽಸೀತಿ ಯತ್ = ನನ್ನಿಂದ ಅವಮಾನಿಸಲ್ಪಟ್ಟಿರುತ್ತಿ ಎಂಬುದು ಯಾವುದಿದೆಯೋ, ತತ್ = ಆ ಅಪಮಾನಾದಿಗಳನ್ನು ಮಾಡಿದ್ದಕ್ಕಾಗಿ, ಅಪ್ರಮೇಯಂ = ಅಪರಿಮಿತ ಮಹಿಮೆಯು ಇದ್ದುದರಿಂದ ತಿಳಿಯಲಶಕ್ಯನಾದ, ತ್ವಾಂ = ನಿನ್ನನ್ನು, ಅಹಂ = ನಾನು, ತತ್ಸಮಕ್ಷಂ = ನಿನ್ನ ಎದುರಿನಲ್ಲಿಯೇ ಮತ್ತು ಸರ್ವ ಜನರ ಸಮಕ್ಷದಲ್ಲಿಯೇ, ಕ್ಷಾಮಯೇ = ಅಪರಾಧಗಳನ್ನು ಕ್ಷಮಿಸಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ. || ೪೨ ||

ಭಾ || ಏಕಸ್ತ್ವಮೇವ ಕಾರಯಿತಾ ನಾನ್ಯೋಽಸ್ತ್ಯಥಾಪಿ || ೪೨ ||

ಅ || ಏಕಃ = (ಏ =) ನೀನು ಒಬ್ಬನೇ, (ಕಃ =) ಸಮಸ್ತವನ್ನು ಮಾಡಿಸುವವನು, ಬೇರೆ ಯಾರೊಬ್ಬರೂ ಇಲ್ಲ ಅಂದರೆ ಅಸಹಾಯನಾಗಿ ಸರ್ವವನ್ನು ಮಾಡಿಸುವವನು ಇಲ್ಲ. ಅಥಾಪಿ = ಆದಕಾರಣ ಅವಮಾನಿಸಿಕೊಳ್ಳಲಿಕ್ಕೆ ಸರ್ವಥಾ ಯೋಗ್ಯನಲ್ಲದಿದ್ದರೂ ನನ್ನಿಂದ ಅವಮಾನಿಸಲ್ಪಟ್ಟಿರುತ್ತಿ || ೪೨ ||

ತಾ || ಏಕಃ ಸರ್ವೋತ್ತಮೋಽಸ್ಯಸತ್ಕೃತಃ | ಏಕಃ ಸರ್ವಾಧಿಕೋ ಜ್ಞೇಯ ಏಕ ಏವ(ಸ)
ಕರೋತಿ ಯದಿತಿ ಚ || ೪೨ ||

ಅ || ಏಕಃ = ಸರ್ವೋತ್ತಮನಾದಾಗ್ಯೂ ನನ್ನಿಂದ ಅವಮಾನಿಸಲ್ಪಟ್ಟಿರುತ್ತಿ. ಒಬ್ಬನೇ ಸರ್ವವನ್ನು ಮಾಡುವವನಾದುದರಿಂದ ಸರ್ವೋತ್ತಮನೆಂದು ತಿಳಿಯಬೇಕು. ಅಥವಾ ಏಕಶಬ್ದವು ಸರ್ವೋತ್ತಮನೆಂಬುವ ಅರ್ಥವನ್ನು ಹೇಳುತ್ತದೆ. ಮತ್ತು ಅಸಹಾಯನಾಗಿ ಸರ್ವಕರ್ತೃತ್ವವನ್ನು ಹೇಳುತ್ತದೆ || ೪೨ ||

ಟೀ — ಸರ್ವಥಾ ಅವಮಾನಿಸಿಕೊಳ್ಳಲಿಕ್ಕೆ ಅನರ್ಹನು ಎಂಬುವುದನ್ನೇ ಗುಣಾಂತರವನ್ನು ಹೇಳಿ ಪ್ರಕಟಿಸುತ್ತಾರೆ —

ಗೀ || ಪಿತಾಸಿ ಲೋಕಸ್ಯ ಚರಾಚರಸ್ಯ
ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ |
ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ
ಲೋಕತ್ರಯೇಽಪ್ಯಪ್ರತಿಮಪ್ರಭಾವಃ || ೪೩ ||

ಅ॥ ಅಪ್ರತಿಮಪ್ರಭಾವ=ಅಸದೃಶವಾದ ಐಶ್ವರ್ಯವುಳ್ಳ ಶ್ರೀಕೃಷ್ಣನೇ, ತ್ವಂ=ನೀನು. ಅಸ್ಯ=ಈವಾದ, ಚರಾಚರಸ್ಯ=ಚೇತನಾಚೇತನಾತ್ಮಕವಾದ, ಲೋಕಸ್ಯ=ಜಗತ್ತಿಗೆ, ಪಿತಾ=ಜನಕನೂ, ಪೂಜ್ಯಶ್ಚ=ಜಗತ್ತಿನಿಂದ ಪೂಜಿಸಿಕೊಳ್ಳಲ್ಪಟ್ಟವನೂ, ಗರೀಯಾನ್=ಅತ್ಯಂತ ಶ್ರೇಷ್ಠನಾದ, ಗುರುಃ=ಉಪದೇಶಕನೂ. ಅಸಿ=ಆಗಿರುತ್ತಿ. ಲೋಕತ್ರಯೇಽಪಿ=ಮೂರು ಲೋಕಗಳಲ್ಲಿಯೂ, ತ್ವತ್ಸಮಃ=ನಿನಗೆ ಸದೃಶನಾದವನು, ಅನ್ಯಃ=ಇನ್ನೊಬ್ಬನು. ನಾಸ್ತಿ=ಇಲ್ಲವೇ ಇಲ್ಲ. ಅಭ್ಯಧಿಕಃ=ನಿನಗಿಂತಲೂ ಶ್ರೇಷ್ಠನಾಗಿರತಕ್ಕವನು, ಕುತಃ=ಹೇಗೆ ಇರುವನು. (ಸರ್ವಥಾ ಶ್ರೇಷ್ಠನು ಇಲ್ಲವೇ ಇಲ್ಲ.) ॥ ೪೩ ॥

ಗೀ॥ ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ
ಪ್ರಸಾದಯೇ ತ್ವಾಮಹಮೀಶಮೀಡ್ಯಂ ।
ಪಿತೇವ ಪುತ್ರಸ್ಯ ಸಖೇವ ಸಖ್ಯುಃ
ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಂ ॥ ೪೪ ॥

ಅ॥ ತಸ್ಮಾತ್=ಹಿಂದೆ ಹೇಳಿದ ಪ್ರಕಾರ ಮಹಾಮಹಿಮೆಯುಳ್ಳವನಾದುದರಿಂದ, ಕಾಯಂ=ಶರೀರವನ್ನು, ಪ್ರಣಿಧಾಯ=ಚೆನ್ನಾಗಿ ಬಗ್ಗಿಸಿಕೊಂಡು, ಈಶಂ=ಸರ್ವರಿಗೂ ಸ್ವಾಮಿಯಾದ, ಈಡ್ಯಂ=ಬ್ರಹ್ಮರುದ್ರಾದಿಗಳಿಂದ ಸ್ತೋತ್ರಮಾಡಿಸಿಕೊಳ್ಳಲಿಕ್ಕೆ ಯೋಗ್ಯನಾದ, ತ್ವಾಂ=ನಿನ್ನನ್ನು, ಅಹಂ=ನಾನು, ಪ್ರಣಮ್ಯ=ಭಕ್ತಿಪೂರ್ವಕವಾಗಿ ಚೆನ್ನಾಗಿ ಸಾಷ್ಟಾಂಗನಮಸ್ಕಾರವನ್ನು ಮಾಡಿ, ಪ್ರಸಾದಯೇ=ಸಂತೋಷಗೊಳಿಸಿ ಅನುಗ್ರಹಿಸಬೇಕೆಂದು ಬೇಡಿಕೊಳ್ಳುವೆನು. ದೇವ=ಕ್ರೀಡಾದಿಗುಣಗಳುಳ್ಳ ಶ್ರೀಪರಮಾತ್ಮನೇ, ಪಿತಾ=ತಂದೆಯು, ಪುತ್ರಸ್ಯ=ಮಗನ, ಅಪರಾಧಮಿವ=ಅಪರಾಧವನ್ನು ಸಹಿಸುವಂತೆಯೇ, ಸಖಾ=ಗೆಳೆಯನು, ಸಖ್ಯುಃ=ಸ್ನೇಹಿತನ. ಅಪರಾಧಮಿವ=ಅಪರಾಧವನ್ನು ಸಹಿಸುವಂತೆಯೇ, ಪ್ರಿಯಃ=ಗಂಡನು, ಪ್ರಿಯಾಯಾಃ=ಪ್ರಿಯಳಾದ ಪತ್ನಿಯ. ಅಪರಾಧಮಿವ=ಅಪರಾಧವನ್ನು ಸಹಿಸುವಂತೆ, ಅಂದರೆ ಪ್ರಿಯನಾದ ಪತಿಯು ತನ್ನ ಪ್ರಾಣಕಾಂತೆಯ ಮೇಲಣ ಪ್ರೀತಿಗಾಗಿ ಆಕೆಯ ಅಪರಾಧವನ್ನು ಸಹಿಸುವಂತೆಯೇ ನನ್ನ ಸರ್ವಾಪರಾಧವನ್ನು) ಸೋಢುಂ=ಸಹಿಸುವುದಕ್ಕೆ. ಅರ್ಹಸಿ=ಯೋಗ್ಯನಾಗಿರುತ್ತಿ. ॥ ೪೪ ॥

ಟೀ—ಈ ಪ್ರಕಾರ ತನ್ನ ಅಪರಾಧವನ್ನು ಕ್ಷಮಿಸಬೇಕೆಂದು ಹೇಳುತ್ತಾ ಪ್ರಾರ್ಥಿಸುತ್ತಾನೆ—

ಗೀ॥ ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ
ಭಯೇನ ಚ ಪ್ರವ್ಯಥಿತಂ ಮನೋ ಮೇ ।
ತದೇವ ಮೇ ದರ್ಶಯ ದೇವ ರೂಪಂ
ಪ್ರಸೀದ ದೇವೇಶ ಜಗನ್ನಿವಾಸ ॥ ೪೫ ॥

ಅ॥ ದೇವ=ಶ್ರೀಕೃಷ್ಣನೇ, ಅದೃಷ್ಟಪೂರ್ವಂ=ಇಷ್ಟರ ವರೆಗೆ ಕಾಣದಿರುವ, ರೂಪಂ=ನಿನ್ನ ವಿಶ್ವರೂಪವನ್ನು, ದೃಷ್ಟ್ವಾ=ನೋಡಿ, ಹೃಷಿತಃ ಅಸ್ಮಿ=ಸಂತೋಷವನ್ನು ಹೊಂದಿದವನು ಆಗಿರುತ್ತೇನೆ. ಮೇ=ನನ್ನ, ಮನಃ=ಮನಸ್ಸು. ಭಯೇನ ಚ=ಭಯದಿಂದ, ಪ್ರವ್ಯಥಿತಂ=ವಿಶೇಷವಾಗಿ ವ್ಯಾಕುಲತನವನ್ನು ಹೊಂದಿರುತ್ತದೆ. (ಅದಕಾರಣ)ದೇವೇಶ=ಬ್ರಹ್ಮಾದಿ ದೇವತೆಗಳಿಗೆ ನಿಯಾಮಕನಾದ, ಜಗನ್ನಿವಾಸ=ಸರ್ವಜಗತ್ತಿಗೆ ಆಶ್ರಯನಾದ, ದೇವ=ಕ್ರೀಡಾದಿ ಗುಣವಿಶಿಷ್ಟನಾದ ಶ್ರೀಪರಮಾತ್ಮನೇ, ತದೇವ ರೂಪಂ=ಮೊದಲು ತೋರಿಸಿದ ರೂಪವನ್ನೇ. ಮೇ=ನನಗೆ, ದರ್ಶಯ=ತೋರಿಸು. ಪ್ರಸೀದ=ಸಂತುಷ್ಟನಾಗು.

ಗೀ || ಕಿರೀಟಿನಂ ಗದಿನಂ ಚಕ್ರಹಸ್ತ-
ಮಿಚ್ಛಾಮಿ ತ್ವಾಂ ದ್ರಷ್ಟುಮಹಂ ತಥೈವ |
ತೇನೈವ ರೂಪೇಣ ಚತುರ್ಭುಜೇನ
ಸಹಸ್ರಬಾಹೋ ಭವ ವಿಶ್ವಮೂರ್ತೇ || ೪೬ ||

ಟೀ || ಅಹಂ=ನಾನು. ತಥೈವ=ನಿನ್ನ ವಿಶ್ವರೂಪವನ್ನು ಮೊದಲು ಹೇಗೆ ನೋಡಿರುವೆನೋ ಹಾಗೆಯೇ. ತೇನೈವ=ಮೊದಲು ನೋಡಿರುವ, ಚತುರ್ಭುಜೇನ ರೂಪೇಣ=ನಾಲ್ಕು ಭುಜಗಳುಳ್ಳ ರೂಪದಿಂದ, ಕಿರೀಟಿನಂ=ಕಿರೀಟವನ್ನು ಧರಿಸಿಕೊಂಡಿರುವ, ಗದಿನಂ=ಗದಾಧಾರಿಯಾದ, ಚಕ್ರಹಸ್ತಂ=ಕೈಯಲ್ಲಿ ಚಕ್ರಾಯುಧವನ್ನು ಧರಿಸಿಕೊಂಡಿರುವ. ತ್ವಾಂ=ನಿನ್ನನ್ನು, ದ್ರಷ್ಟುಂ=ನೋಡಲಿಕ್ಕೆ, ಇಚ್ಛಾಮಿ=ಇಚ್ಛಿಸುತ್ತೇನೆ. ಸಹಸ್ರಬಾಹೋ=ಅನಂತ ಬಾಹುಗಳುಳ್ಳ, ವಿಶ್ವಮೂರ್ತೇ=ಸಮಸ್ತ ಜಗತ್ತನ್ನೂ ವ್ಯಾಪಿಸಿಕೊಂಡಿರುವ, ಅಥವಾ ಸರ್ವಗುಣ ಪರಿಪೂರ್ಣ ಶರೀರವುಳ್ಳ ಶ್ರೀಕೃಷ್ಣನೇ, ಭವ=ನಾಲ್ಕು ಭುಜಗಳುಳ್ಳ ರೂಪದಿಂದ ಯುಕ್ತವಾಗಿರುವ ರೂಪವನ್ನು ತೋರಿಸು. || ೪೬ ||

ಟೀ—ತೇನೈವ ರೂಪೇಣ ಭವ ಎಂಬ ಅರ್ಜುನನು ಪ್ರಾರ್ಥಿಸುವ ವಾಕ್ಯದಲ್ಲಿ ವಿಶ್ವರೂಪವನ್ನು ಬಿಟ್ಟು ಮುಂಚಿನ ನಿಜ ರೂಪವನ್ನೇ ತೆಗೆದುಕೊಳ್ಳು ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ತಾ || ತೇನೈವ ರೂಪೇಣ ಭವೇತ್ಯನಂತರೂಪಗೋಪನೇನ ತದೇವ ಪ್ರಕಾಶಯೇತ್ಯರ್ಥಃ |
ಪಂಚಾನನಂ ಚಿಂತ್ಯಮಚಿಂತ್ಯರೂಪಂ ಪದ್ಮಾಸನಂ ಗೋಪಿತವಿಶ್ವರೂಪಮಿತಿ (ಚ)
ವೈಹಾಯಸಸಂಹಿತಾಯಾಂ || ೪೬ |

ಟೀ || ಆ ನಾಲ್ಕು ಭುಜಗಳುಳ್ಳ ರೂಪದಿಂದಲೇ ಆಗು ಎಂದು ಹೇಳಿದ್ದರಿಂದ ನಿನ್ನ ನಿಜವಾದ ಅನಂತ ರೂಪಗಳನ್ನು ಮರೆ ಮಾಡಿ ಅದನ್ನೇ ನಾಲ್ಕು ಭುಜಗಳುಳ್ಳ ರೂಪವನ್ನಾಗಿ ಪ್ರಕಾಶಗೊಳಿಸು ಎಂದರ್ಥವು (ರೂಪಾಂತರವು ತೋರಿದಾಗ ವಿಶ್ವರೂಪವನ್ನು ಬಿಟ್ಟಿದ್ದಂದೇ ಏಕೆ ಆಗಲಾರದು. ಅದನ್ನು ಮರೆ ಮಾಡಿದೆಂದು ಏಕೆ ಹೇಳಬೇಕು ಎಂದರೆ—) ಮನಸ್ಸಿನಿಂದ ಆಲೋಚಿಸಲಿಕ್ಕೂ ಅಶಕ್ಯವಾದ ಸ್ವರೂಪವುಳ್ಳ ಕಮಲವೇ ಆಸನವಾಗಿವುಳ್ಳ, ವಿಶ್ವರೂಪವನ್ನು ಮರೆಮಾಡಿಕೊಂಡಿರುವ ನರಸಿಂಹರೂಪವನ್ನು ವಿಶೇಷವಾಗಿ ಧ್ಯಾನಿಸಬೇಕು. ಎಂದು ವೈಹಾಯಸ ಸಂಹಿತೆಯಲ್ಲಿದೆ. (ಇದರಿಂದ ವಿಶ್ವರೂಪಕ್ಕೆ ಅಂತರ್ಧಾನವನ್ನೇ ಹೇಳಿದ್ದಾರೆ. ಹೊರತು ತ್ಯಾಗವನ್ನು ಹೇಳಲಿಲ್ಲ) || ೪೬

ಗೀ || || ಶ್ರೀಭಗವಾನುವಾಚ ||

ಮಯಾ ಪ್ರಸನ್ನೇನ ತವಾರ್ಜುನೇದಂ
ರೂಪಂ ಪರಂ ದರ್ಶಿತಮಾತ್ಮಯೋಗಾತ್ |
ತೇಜೋಮಯಂ ವಿಶ್ವಮನಂತಮಾದ್ಯಂ
ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಂ || ೪೭ ||

ಅ ॥ ಶ್ರೀಭಗವಾನ್=ಶ್ರೀಕೃಷ್ಣನು, ಉವಾಚ=(ಅರ್ಜುನನಿಗೆ ಹೆಚ್ಚು ಭಕ್ತಿಯು ಹುಟ್ಟುವುದಕ್ಕಾಗಿ ವಿಶ್ವರೂಪ ದರ್ಶನವು ಅತಿ ದುರ್ಲಭವೆಂದು) ಹೇಳುತ್ತಾನೆ. ಅರ್ಜುನ=ಅರ್ಜುನನೇ, ಪ್ರಸನ್ನೇನ=ಸಂತುಷ್ಟನಾದ, ಮಯಾ=ನನ್ನಿಂದ, ಆತ್ಮಯೋಗಾತ್=ಸ್ವರೂಪಭೂತವಾದ ಸಾಮರ್ಥ್ಯವಿಶೇಷದಿಂದ, ತೇಜೋಮಯಂ=ಪ್ರಚುರತೇಜಸ್ಸ್ವರೂಪವಾದ, ವಿಶ್ವಂ=ಪೂರ್ಣವಾದ, ಅನಂತಂ=ಸರ್ವ ದೇಶಗಳಲ್ಲಿಯೂ ಸಮಸ್ತ ಕಾಲಗಳಲ್ಲಿಯೂ ಇರುವ ಸರ್ವಗುಣಪರಿಪೂರ್ಣವಾದ, ಆದ್ಯಂ=ಎಲ್ಲಾ ವಸ್ತುಗಳಿಗೂ ಮೂಲಭೂತವಾದ, ಮೇ=ನನ್ನ, ಯತ್=ಯಾವುದು. ಪರಂ=ಸರ್ವೋತ್ಕೃಷ್ಟವಾದ, ರೂಪಂ=ವಿಶ್ವರೂಪವು, ತವ=ನಿನಗಾಗಿ, ದರ್ಶಿತಂ=ತೋರಿಸಲ್ಪಟ್ಟಿದೆಯೋ, ಇದಂ=ಇಂತಹ ರೂಪವು, ತ್ವದನ್ಯೇನ=ನೀನು ಹೊರತು ಬೇರೆ ಯಾವ ನಿಕೃಷ್ಟಪುರುಷನಿಂದಲೂ, ನ ದೃಷ್ಟಪೂರ್ವಂ=ನಿನ್ನ ಹಾಗೆ ಮೊದಲು ಕಾಣಲ್ಪಟ್ಟಿಲ್ಲ ॥ ೪೭ ॥

ಟೀ—ಮಯಾ ಪ್ರಸನ್ನೇನ ಎಂಬುವ ಶ್ಲೋಕದಲ್ಲಿ ತೇಜೋಮಯಂ ವಿಶ್ವಂ ಎಂದು ಭಗವಂತನಿಗೆ ಜಗದಾತ್ಮಕತ್ವವನ್ನು ಹೇಳಿದ್ದಾರೆ, ಎಂಬುವ ಅನ್ಯಥಾಪ್ರತೀತಿಯನ್ನು ಸ್ಮೃತಿಪ್ರಮಾಣವನ್ನು ಹೇಳಿ ಹೋಗಲಾಡಿಸುತ್ತಾರೆ—

ಪ್ರಾ ॥ (೧) ವಿಶ್ವನಾಮಾ ಸ ಭಗವಾನ್ಯತಃ ಪೂರ್ಣಗುಣಃ ಪ್ರಭುರಿತಿ ಪಾದ್ಮೇ ॥ (೨) ತ್ವದನ್ಯೇನ ನ ದೃಷ್ಟಪೂರ್ವಮಿತ್ಯನೇನ ತೇನೈವೇಂದ್ರಶರೀರೇಣ ದೃಷ್ಟಮಿತಿ ಜ್ಞಾಯತೇ। ತ್ವದನ್ಯೇನೇತಿ ತ್ವದವರಾಪೇಕ್ಷಯಾ । ತೈರಪಿ ತದ್ವನ್ನ ದೃಷ್ಟಮಿತ್ಯೇವ ॥ (೩) ವಿಶ್ವರೂಪಂ ಪ್ರಥಮತೋ ಬ್ರಹ್ಮಾಪಶ್ಯಚ್ಚತುರ್ಮುಖಃ । ತಚ್ಛತಾಂಶೇನ ರುದ್ರಸ್ತು ತಚ್ಛತಾಂಶೇನ ವಾಸವಃ । ಯಥೇಂದ್ರೇಣ ಪುರಾ ದೃಷ್ಟಮಪಶ್ಯತ್ಸೋಽರ್ಜುನೋಽಪಿ ಸನ್ । ತದನ್ಯೇ ಕ್ರಮಯೋಗೇನ ತಚ್ಛತಾಂಶಾದಿದರ್ಶಿನ ಇತಿ ಬ್ರಹ್ಮಾಂಡೇ ॥೪೭॥

ಅ ॥ (೧) ಶ್ರೀಪರಮಾತ್ಮನು ಪೂರ್ಣಗುಣಗಳುಳ್ಳವನಾದುದರಿಂದ ವಿಶ್ವ ಎಂದು ಹೆಸರುಳ್ಳವನು, ಎಂದು ಪಾದ್ಮದಲ್ಲಿದೆ. ಆದಕಾರಣ ಇಲ್ಲಿದ್ದ ವಿಶ್ವಶಬ್ದಕ್ಕೆ ಪೂರ್ಣಗುಣಗಳುಳ್ಳವನೆಂದೇ ಅರ್ಥವು. ಜಗದಾತ್ಮಕನೆಂದರ್ಥವಲ್ಲ. (೨) (ತ್ವದನ್ಯೇನ ನ ದೃಷ್ಟಪೂರ್ವಂ ಎಂದು ಅರ್ಜುನನು ಹೊರತು ಬೇರೆ ಯಾವನು ವಿಶ್ವರೂಪವನ್ನು ಕಾಣಲಿಲ್ಲವೆಂದು ತೋರುತ್ತದೆ, ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ-) ತ್ವದನ್ಯೇನ ನ ದೃಷ್ಟಪೂರ್ವಂ ಎಂಬುವುದರಿಂದ ಅರ್ಜುನನಿಂದಲೇ ತನ್ನ ಅಂಶಿಯಾದ ಇಂದ್ರ ಶರೀರದಿಂದ ಕಾಣಲ್ಪಟ್ಟಿದೆ, ಎಂದು ತಿಳಿಯುತ್ತದೆ. (ಅಂದರೆ ವಿಶ್ವರೂಪವನ್ನು ಅರ್ಜುನನು ಹೊರತು ಬೇರೆಯವರು ಕಾಣುವುದಲ್ಲವೆಂದು ಹೇಳುವುದಿಲ್ಲ. ಮತ್ತೆ ಅರ್ಜುನನೇ ತನ್ನ ಮೂಲರೂಪವಾದ ಇಂದ್ರನ ಶರೀರದಿಂದ ನೋಡಿದ್ದಾನೆಂದು ತಿಳಿಯುತ್ತದೆ. ಅರ್ಜುನನಿಂದ ಭಿನ್ನರಾದ (ಬ್ರಹ್ಮಾದಿಗಳು ನೋಡಲಿಲ್ಲವೆಂದು ಶಂಕಿಸಕೂಡದು. ಮತ್ತೆ) ತ್ವದನ್ಯೇನ ಎಂಬುವುದು ನಿನಗಿಂತ ಅವರರನ್ನು ಇಟ್ಟುಕೊಂಡು ಹೇಳಿದ್ದು. ಆದರೆ ಅಧಮರಿಂದಲೂ ಅರ್ಜುನನಂತೆ ಕಾಣಲ್ಪಡಲಿಲ್ಲ, ಎಂದೇ ಅರ್ಥ ತಿಳಿಯಬೇಕು. (ಅಧಮರು ನೋಡಲೇ ಇಲ್ಲವೆಂದರ್ಥವಲ್ಲ.) (೩) (ಈ ವಿಶ್ವರೂಪವನ್ನು ಬ್ರಹ್ಮಾದಿಗಳೂ ನೋಡಿದ್ದಾರೆ. ಅರ್ಜುನನಂತೆ ಇಂದ್ರನೂ ನೋಡಿದ್ದಾನೆ. ಅರ್ಜುನನಿಗಿಂತ ಕೆಳಗಿನವರೂ ನೋಡಿದ್ದರೂ ಅರ್ಜುನನಂತೆ ನೋಡಲಿಲ್ಲವೆಂಬುವ ಈ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ ) ಚತುರ್ಮುಖಬ್ರಹ್ಮನು ಪ್ರಥಮತಃ ವಿಶ್ವರೂಪವನ್ನು ನೋಡಿದನು ಬ್ರಹ್ಮನು ನೋಡಿದ್ದಕ್ಕಿಂತ ೧೦೦ ಪಾಲು ಕಡಿಮೆ ರುದ್ರನು ರುದ್ರನಿಗಿಂತ ೧೦೦ ಪಾಲು ಕಡಿಮೆ ಇಂದ್ರನೂ ನೋಡಿದನು. ಮೊದಲು ಇಂದ್ರನು ಹೇಗೆ

ನೋಡಿದ್ದಾನೋ, ಆ ಇಂದ್ರನು ಅರ್ಜುನನಾಗಿಯೇ ಹಾಗೆಯೇ ನೋಡಿದ್ದಾನೆ. ಇಂದ್ರನಿಗಿಂತ ಕೆಳಗಿನವರು ಕ್ರಮವಾಗಿ ೧೦೦, ೧೦೦ ಪಾಲು ಕಡಿಮೆ ಪ್ರಕಾಶಾದಿಗಳುಳ್ಳದ್ದನ್ನಾಗಿ ನೋಡಿರುತ್ತಾರೆ, ಎಂದು ಬ್ರಹ್ಮಾಂಡಪುರಾಣದಲ್ಲಿ ಹೇಳಿದೆ. || ೪೭ ||

ಟೀ—ಅರ್ಜುನನಿಗಿಂತ ಕೆಳಗಿನವರು ಸ್ವತಃ ಅರ್ಜುನನಂತೆ ವಿಶ್ವರೂಪವನ್ನು ನೋಡದಿದ್ದರೂ ಅವ (ಅಧಮ)ರಾದವರೇ ವೇದ ಮೊದಲಾದ ಸಾಧನಗಳಿಂದ ಅರ್ಜುನನಂತೆ ಕಾಣಬಹುದಷ್ಟೆ ಎಂದರೆ—

ಗೀ || ನ ವೇದಯಜ್ಞಾಧ್ಯಯನೈರ್ನ ದಾನೈ-
ರ್ನ ಚ ಕ್ರಿಯಾಭಿರ್ನ ತಪೋಭಿರುಗ್ರೈಃ |
ಏವಂರೂಪಃ ಶಕ್ಯ ಅಹಂ ನೃಲೋಕೇ
ದ್ರಷ್ಟುಂ ತ್ವದನ್ಯೇನ ಕುರುಪ್ರವೀರ || ೪೮ ||

ಅ || ಕುರುಪ್ರವೀರ—ಕುರುವಂಶದಲ್ಲಿ ಬಹು ಪರಾಕ್ರಮಶಾಲಿಯಾದ ಅರ್ಜುನನೇ, ಏವಂರೂಪಃ—ಮೊದಲು ನಿನಗೆ ತೋರಿಸಿದ ವಿಶ್ವರೂಪವುಳ್ಳ, ಅಹಂ=ನಾನು, ನೃಲೋಕೇ=ಮನುಷ್ಯಲೋಕದಲ್ಲಿ, ತ್ವದನ್ಯೇನ=ನೀನು ಹೊರತು ಬೇರೆಯವರಿಂದ, ವೇದಯಜ್ಞಾಧ್ಯಯನೈಃ=ವೇದಾದಿ ಶಾಸ್ತ್ರಗಳ ಅಧ್ಯಯನ, ಜ್ಯೋತಿಷ್ಟೋಮಾದಿ ಯಜ್ಞಾನುಷ್ಠಾನ, ಇವುಗಳಿಂದ, ದ್ರಷ್ಟುಂ=ನೋಡಲಿಕ್ಕೆ, ನ ಶಕ್ಯಃ ಶಕ್ಯನಲ್ಲ, ದಾನೈಃ—ಮಹಾ ದಾನಗಳಿಂದಲೂ, ನ—ನೋಡಲು ಶಕ್ಯನಲ್ಲ. ಕ್ರಿಯಾಭಿಃ=ಅಗ್ನಿಹೋತ್ರಾದಿ ಕ್ರಿಯೆಗಳಿಂದ, ನ ಚ=ಶಕ್ಯನಲ್ಲ. ಉಗ್ರೈಃ=ಕ್ರೂರಗಳಾದ, ತಪೋಭಿಃ=ಕೃಚ್ಛ್ರಚಾಂದ್ರಾಯಣ ಮೊದಲಾದ ತಪಸ್ಸುಗಳಿಂದಲೂ, ನ ಚ ಶಕ್ಯಃ—ಶಕ್ಯನಲ್ಲ. || ೪೮ ||

ಟೀ—ಬೇರೆಯವರಿಗೂ ವಿಶ್ವರೂಪದರ್ಶನವು ಆಗುವುದಾದರೆ ನ ವೇದಯಜ್ಞಾಧ್ಯಯನೈಃ ಎಂದು ಹೇಳಿದ್ದು ವಿರುದ್ಧವಾಗುವುದೆಂದರೆ—

ತಾ || (೧) ವೇದಾದಿಭಿರಪಿ ತ್ವದವರೇಣೈವಂ ದ್ರಷ್ಟುಮಶಕ್ಯಃ || (೨) ಅನ್ಯಥಾ ದೃಷ್ಟಪೂರ್ವಂ ದೃಷ್ಟಪೂರ್ವಂ
ದ್ಯುಕಂ ರೂಪಮಿತ್ಯಾದಿವಿರೋಧಃ || ೪೮ ||

ಅ || (೧) ವೇದಾದಿಗಳಿಂದಲೂ ನಿನಗಿಂತ ಕೆಳಗಿನವರಿಗೆ ಇಂತಹ ರೂಪವನ್ನು ನೋಡಲು ಶಕ್ಯವಲ್ಲ. (ಅಂದರೆ ಅರ್ಜುನನಿಗಿಂತ ಬೇರೆಯವರಿಗೆ ವಿಶ್ವರೂಪದರ್ಶನವೇ ಇಲ್ಲವೆಂದು ಹೇಳುವುದಿಲ್ಲ. ನಿನಗಿಂತ ಕೆಳಗಿನವರು ನಿನ್ನಂತೆ ನೋಡಲಿಲ್ಲವೆಂದೇ ಅರ್ಥವು. ಅವರು ಸ್ವತಃ ಹಾಗೆ ನೋಡದಿದ್ದರೂ ವೇದಾದಿ ಸಾಧನಗಳಿಂದ ಹಾಗೆ ಕಾಣಬಹುದಷ್ಟೆ ಎಂದರೆ) ವೇದಾದಿ ಸಾಧನಗಳಿಂದಲೂ ನಿನಗಿಂತ ಕೆಳಗಿನವರು ನಿನ್ನಂತೆ ನೋಡಲು ಶಕ್ಯರಾಗುವುದೇ ಇಲ್ಲ ಎಂದೇ ಅಭಿಪ್ರಾಯವು.) (೨) ವಿಶ್ವರೂಪವನ್ನು ಅರ್ಜುನನಿಗಿಂತ ಬೇರೆಯವರು ನೋಡಲೇ ಇಲ್ಲವೆಂದು ಹೇಳಿದರೆ ಹಿಂದೆ ಹೇಳಿದ ಬ್ರಹ್ಮಾಂಡಪುರಾಣವಿರೋಧಮಾತ್ರವಲ್ಲದೆ ದೃಷ್ಟ್ವಾದ್ಭುತಂ ರೂಪಂ(ಶ್ಲೋ. ೨೦) ಇತ್ಯಾದಿ ಹಿಂದೆ ಹೇಳಿದ ಗೀತಾವಾಕ್ಯ ವಿರೋಧವೂ ಬರುವುದು.

ಟೀ—ಅದೃಷ್ಟಪೂರ್ವಂ ಇತ್ಯಾದಿಗಳಿಂದ ಅರ್ಜುನನು ಪ್ರಾರ್ಥಿಸಿದ್ದಕ್ಕೆ ಉತ್ತರವನ್ನು ಹೇಳುತ್ತಾನೆ—

೫೪ ॥ ಮಾ ತೇ ವ್ಯಥಾ ಮಾ ಚ ವಿಮೂಢಭಾವೋ
ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಂ ।
ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ
ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯ ॥

ಅ ॥ ಮಮ = ನನ್ನ, ಘೋರಂ = ಸಂಹಾರಕ ಸ್ವರೂಪವಾದ, ಈದೃಕ್ ರೂಪಂ = ಹಿಂದೆ ಹೇಳಿದ ಪ್ರಕಾರ ಅನಂತಬಾಹು ಅನಂತಶಿರಸ್ಸು ಮೊದಲಾದುವುಗಳುಳ್ಳ ರೂಪವನ್ನು, ದೃಷ್ಟ್ವಾ = ನೋಡಿ, ತೇ = ನಿನಗೆ, ವ್ಯಥಾ = ಮನಸ್ಸಿನಲ್ಲಿ ಚಿಂತೆಯು, ಮಾಸ್ತು = ಬೇಡ. ವಿಮೂಢಭಾವಶ್ಚ = ವಿಶೇಷವಾಗಿ ಮೂಢಭಾವವೂ, ಮಾಸ್ತು = ಬೇಡ. ತ್ವಂ = ನೀನು, ವ್ಯಪೇತಭೀಃ = ಭಯವನ್ನು ಕಳೆದುಕೊಂಡವನಾಗಿ, ಪ್ರೀತಮನಾಃ = ಸಂತುಷ್ಟವಾದ ಮನಸ್ಸುಳ್ಳವನಾಗಿ, ಪುನಃ = ತಿರುಗಿ, ಮೇ = ನನ್ನ, ತದೇವ ಇದಂ ರೂಪಂ = ಮೊದಲು ನೋಡಿದ್ದೇ ಆದ ಆ ಕೃಷ್ಣರೂಪವನ್ನು, ಪ್ರಪಶ್ಯ = ಭಕ್ತಿಪೂರ್ವಕವಾಗಿ ಚೆನ್ನಾಗಿ ನೋಡು. ॥ ೪೯ ॥

ಗೀ ॥ ॥ ಸಂಜಯ ಉವಾಚ ॥

ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ
ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।
ಆಶ್ವಾಸಯಾಮಾಸ ಚ ಭೀತಮೇನಂ
ಭೂತ್ವಾ ಪುನಃ ಸೌಮ್ಯವಪುರ್ಮಹಾತ್ಮಾ ॥ ೫೦ ॥

ಅ ॥ ಹೀಗೆ ಶ್ರೀಕೃಷ್ಣನು ಹೇಳಿ ತನ್ನ ರೂಪವನ್ನೇ ಅರ್ಜುನನಿಗೆ ತೋರಿಸಿದನೆಂದು, ಸಂಜಯಃ = ಸಂಜಯನು, ಉವಾಚ = (ಆ ಮೇಲೆ ನಡೆದ ವೃತ್ತಾಂತವನ್ನು ತಿಳಿಯಲಿಚ್ಛಿಸಿದ ಧೃತರಾಷ್ಟ್ರನ ಮನಸ್ಸಿನ ಅಭಿಪ್ರಾಯವನ್ನು ತಿಳಿದುಕೊಂಡು ಧೃತರಾಷ್ಟ್ರನಿಗೆ) ಹೇಳಿದನು. ವಾಸುದೇವಃ = ಶ್ರೀಕೃಷ್ಣನು, ಇತಿ = ಹಿಂದೆ ಹೇಳಿದ ಪ್ರಕಾರ, ಅರ್ಜುನಂ = ಅರ್ಜುನನನ್ನು ಕುರಿತು, ಉಕ್ತ್ವಾ = ಹೇಳಿ, ಭೂಯಃ = ತಿರುಗಿ, ಸ್ವಕಂ ರೂಪಂ = ತನ್ನದಾಗಿ ತೋರಿಸಲಿಕ್ಕೆ ಯೋಗ್ಯವಾದ ಶ್ರೀಕೃಷ್ಣರೂಪವನ್ನು, ತಥಾ = ಹಾಗೆ, ದರ್ಶಯಾಮಾಸ = ತೋರಿಸಿದನು. ಮಹಾತ್ಮಾ = ಸರ್ವೋತ್ತಮನಾದ ಶ್ರೀಕೃಷ್ಣನು ಪುನಃ = ತಿರುಗಿ, ಸೌಮ್ಯವಪುಃ = ಅತಿ ಶಾಂತ ಶರೀರವುಳ್ಳವನು, ಭೂತ್ವಾ = ಆಗಿ, ಭೀತಂ = ವಿಶೇಷವಾಗಿ ಭಯಪಟ್ಟಿರುವ, ಏನಂ = ಈ ಅರ್ಜುನನನ್ನು, ಭೂಯಃ = ತಿರುಗಿ, ಆಶ್ವಾಸಯಾಮಾಸ ಚ = ಸಮಾಧಾನ ಪಡಿಸಿದನು. ॥ ೫೦ ॥

ಟೀ - ಸ್ವಕಂ ರೂಪಂ ದರ್ಶಯಾಮಾಸ (ಶ್ಲೋ. ೫೦) ಎಂದು ಶ್ರೀಕೃಷ್ಣನ ರೂಪವನ್ನು ವಿಶಿಷ್ಟ ಪ್ರಕಾರವೆಂದು (ತನ್ನದ್ದೇ ಎಂದು) ಹೇಳಿದ್ದರಿಂದ ವಿಶ್ವರೂಪವು ಸಾಕ್ಷಾತ್ ಈಶ್ವರಸ್ವರೂಪವಲ್ಲವೆಂದರೆ—

ತಾ ॥ (೧) ಸ್ವವತ್ ಕ್ರಿಯತ ಇತಿ ಸ್ವಕಂ ರೂಪಂ ॥ (೨) ವಿಶ್ವರೂಪಮಜ್ಞಾನಾಂ ಸ್ವರೂಪವನ್ನ ದರ್ಶಯತಿ । ಏತದಜ್ಞಾನಾಮಪಿ ತಥೈವ ದರ್ಶಯತೀತಿ ವಿಶೇಷಃ ॥ (೩) ಅನ್ಯಥಾ ದ್ರಷ್ಟುಮಿಚ್ಛಾಮಿ ತೇ ರೂಪಮಿತಿ ವಿರುದ್ಧಂ ಸ್ಯಾತ್ ॥ (೪) ಪರಾವರಪಿಭೇದಸ್ತು ಮುಗ್ಧದೃಷ್ಟಿಮಪೇಕ್ಷ್ಯ ತು । ಪ್ರಾದುರ್ಭಾವಸ್ವರೂಪಾಣಾಂ ವಿಶ್ವರೂ-

ಪಶ್ಯ ಚ ಪ್ರಭೋಃ ॥ (ಐ) ಅನ್ಯಥಾ ನ ವಿಶೇಷೋಽಸ್ತಿ ವ್ಯಕ್ತಿರ್ಹ್ಯರ್ಜುನಪೇಕ್ಷ-
ಯೇತಿ ಚ ॥ ೫೦ ॥

ಅ ॥ (೧) ಇಲ್ಲಿ ಶ್ರೀಕೃಷ್ಣನ ರೂಪಕ್ಕೆ ಸ್ವಕಶಬ್ದದಿಂದ ಸ್ವಕೀಯತ್ವವು ಹೇಳಲ್ಪಡುವುದಿಲ್ಲ. ಮತ್ತೆ ತನ್ನ ರೂಪದಂತೆ ತೋರಿಸಲ್ಪಡುತ್ತದೆ, ಅಂದರೆ ತನ್ನದ್ದಾಗಿ ತೋರಿಸುವುದು ಮಾತ್ರವೇ. (೨) (ಎಷ್ಟು ರೂಪಗಳೂ ಶ್ರೀಕೃಷ್ಣನ ರೂಪಗಳೇ ಆದರೆ ಶ್ರೀಕೃಷ್ಣ ರೂಪಕ್ಕೇನೇ ಸ್ವಕಂ ಎಂದು ವಿಶಿಷ್ಯ ಹೇಳ... ಏಕೆ? ಎಂದರೆ—) ವಿಶ್ವರೂಪವನ್ನು ಅಜ್ಞಾನಿಗಳಿಗೆ ತನ್ನ ರೂಪದಂತೆ ತೋರಿಸುವುದಿಲ್ಲ. ಶ್ರೀಕೃಷ್ಣರೂಪವನ್ನು ಅಜ್ಞಾನಿಗಳಿಗೂ ತನ್ನದ್ದೆಂದೇ ತೋರಿಸುತ್ತಾನೆ (ಹೀಗೆ ಅಜ್ಞರ ವಿವಕ್ಷೆಯಿಂದ ಸ್ವಕಂ ಎಂದು ವಿಶೇಷವಾಗಿ ಹೇಳಿದ್ದು.) ಎಂದು ವಿಶೇಷವು. (೩) ವಿಶ್ವರೂಪವು ಶ್ರೀಕೃಷ್ಣನ ರೂಪದಂತೆ ಶ್ರೀಕೃಷ್ಣ ಸ್ವರೂಪಭೂತವಾಗದಿದ್ದರೆ ದ್ರಷ್ಟುಮಿಚ್ಛಾಮಿ ತೇ ರೂಪಂ ಎಂದು ಅರ್ಜುನನು ಹೇಳಿದ್ದು ವಿರುದ್ಧವಾಗುವುದು. (೪) (ಪರಮಂ ರೂಪಂ ದರ್ಶಯಾಮಾಸ ಎಂದು ವಿಶ್ವರೂಪಕ್ಕೆ ಸರ್ವೋತ್ತಮತ್ವವನ್ನು ಹೇಳಿದ್ದರಿಂದ ಕೃಷ್ಣರೂಪಕ್ಕೆ ಉತ್ತಮತ್ವವಿಲ್ಲವೆಂಬುವ ಶಂಕೆಯನ್ನು ಸ್ವಾತಿತ್ರಮಾಣವನ್ನು ಹೇಳಿ ನಿವಾರಿಸುತ್ತಾರೆ—) ಶ್ರೀಪರಮಾತ್ಮನ ಅವತಾರ ರೂಪಗಳಿಗೂ ವಿಶ್ವರೂಪಕ್ಕೂ ಉತ್ತಮಾತ್ಮ ಅವರ... ವೆಂಬುವ ವಿಭೇದವು ಅಜ್ಞದೃಷ್ಟಿಯನ್ನು ಇಟ್ಟುಕೊಂಡೇ ಹೇಳಿದ್ದು. (೫) ಸ್ವಭಾವತಃ ಆ ರೂಪಗಳಿಗೆ ಸ್ವಲ್ಪವೂ ವಿಶೇಷವಿಲ್ಲ. ಅಜ್ಞರು ವಿಶ್ವರೂಪವನ್ನು ಉತ್ತಮವೆಂದು ತಿಳಿದಂತೆ ಅವತಾರ ರೂಪಗಳ ಪರತ್ವವನ್ನು ತಿಳಿಯದಿರುವುದರಿಂದ ಪರವೆಂದು ಹೇಳಿದ್ದು. (ಅಂದರೆ ವಿಶ್ವರೂಪದಲ್ಲಿ ಉತ್ತಮತ್ವವಿದೆ. ಅವತಾರರೂಪಗಳಲ್ಲಿಯೂ ಪರತ್ವವಿಲ್ಲವೆಂದಲ್ಲ.) (ಬ್ರಹ್ಮಾದಿ ದೇವತೆಗಳಿಗೆ ವಿಶ್ವರೂಪದಂತೆ ಕೃಷ್ಣಾವತಾರ ರೂಪಗಳಲ್ಲಿಯೂ ಉತ್ತಮತ್ವಜ್ಞಾನವೇ ಇದೆ.) ॥ ೫೦ ॥

ಗೀ ॥ ॥ ಅರ್ಜುನ ಉವಾಚ ॥

ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।
ಇದಾನೀಮಸ್ಮಿ ಸಂವೃತ್ತಃ ಸಚೇತಾಃ ಪ್ರಕೃತಿಂ ಗತಃ ॥ ೫೧ ॥

ಅ ॥ ಅರ್ಜುನಃ=ಅರ್ಜುನನು, ಉವಾಚ=(ವಿಶ್ವರೂಪವನ್ನು ಮರೆಮಾಡಿ, ಕೃಷ್ಣರೂಪವನ್ನು ತೋರಿಸಿದುದರಿಂದ ಸಂತುಷ್ಟನಾಗಿದ್ದೇನೆಂದು ಶ್ರೀಕೃಷ್ಣನೊಡನೆ) ಹೇಳಿದನು. ಜನಾರ್ದನ=ದುಷ್ಟಸಂಹಾರಕನಾದ ಶ್ರೀಕೃಷ್ಣನೇ, ತವ=ನಿನ್ನ, ಇದಂ=ಈ, ಸೌಮ್ಯಂ=ಕ್ರೂರವಲ್ಲದ, ಶಾಂತವಾದ, ಮಾನುಷಂ ರೂಪಂ=ಮನುಷ್ಯನ ರೂಪದಂತೆ ಕಾಣತಕ್ಕ ರೂಪವನ್ನು, ದೃಷ್ಟ್ವಾ=ನೋಡಿ, ಇದಾನೀಂ=ಈಗ, ಸಚೇತಾಃ=ಅತಿಪ್ರಸನ್ನವಾದ ಮನಸ್ಸುಳ್ಳವನಾಗಿ, ಸಂವೃತ್ತಃ ಅಸ್ಮಿ=ಆಗಿರುತ್ತೇನೆ. ಪ್ರಕೃತಿಂ ಗತಃ=ಪೂರ್ವದ ಸ್ವಭಾವವನ್ನು (ಸ್ವಸ್ಥತೆಯನ್ನು) ಹೊಂದಿರುತ್ತೇನೆಂದು ಹೇಳಿದನು.

ಟೀ—ದೃಷ್ಟ್ವೇದಂ ಮಾನುಷಂ ರೂಪಂ (ಶ್ಲೋ. ೫೧) ಎಂಬುವುದರಿಂದ ಶ್ರೀಕೃಷ್ಣರೂಪವು ಮಾನುಷವೆಂದು ಹೇಳಿದುದರಿಂದ ಜ್ಞಾನಾನಂದಾದ್ಯಾತ್ಮಕ ಅಪ್ರಾಕೃತ ದಿವ್ಯ ದೇಹವುಳ್ಳವನೆಂದು ಹೇಳುವುದು ಹೇಗೆ ಎಂದರೆ –

ತಾ ॥ ತಂಚಿನ್ಮನುಷ್ಯವದ್ದೃಶ್ಯಮಾನತ್ವಾನ್ಮಾನುಷಂ ॥ ೫೧ ॥

ಅ ॥ ಮನುಷ್ಯನ ಶರೀರದಂತೆ ಸ್ವಲ್ಪ ಕಾಣಲ್ಪಡುವುದರಿಂದ ಮಾನುಷವೆಂದು ಹೇಳಿದ್ದು. ವಸ್ತುತಃ ಮನುಷ್ಯನ ಶರೀರದಂತೆ ಪಾಂಚಭೌತಿಕವಾದುದಲ್ಲ.

೫॥ ॥ ಶ್ರೀಭಗವಾನುವಾಚ ॥

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥ ೫೨ ॥**

ಅ॥ ಶ್ರೀಭಗವಾನ್=ಶ್ರೀಕೃಷ್ಣನು, (ಭಯಂಕರವಾದ ರೂಪವನ್ನು ಏಕೆತೋರಿಸಿದ್ದೆಂದರೆ ಆ ವಿಶ್ವರೂಪದರ್ಶನದ ಮಹಿಮೆಯನ್ನು) ಉವಾಚ=ಹೇಳಿದನು. ಮಮ=ನನ್ನ, ಯತ್ ರೂಪಂ ದೃಷ್ಟವಾನಸಿ=ಯಾವ ರೂಪವನ್ನು ನೋಡಿರುವಿಯೋ, ಅಸ್ಯ ರೂಪಸ್ಯ=ಈ ರೂಪವನ್ನು, ನಿತ್ಯಂ=ಯಾವಾಗಲೂ, ದರ್ಶನಕಾಂಕ್ಷಿಣಃ=ನೋಡಲಿಚ್ಛಿಸುವ, ದೇವಾ ಅಪಿ=ದೇವತೆಗಳೂ ಕೂಡ (ಯಾವುದನ್ನು ನೋಡಿರುವರೋ.) ಇದಂ ರೂಪಂ=ಈ ರೂಪವು, ಸುದುರ್ದರ್ಶಂ=ಸರ್ವಸಾಧಾರಣವಾಗಿ ಎಲ್ಲರಿಗೆ ನೋಡಲಿಕ್ಕೆ ಶಕ್ಯವಲ್ಲ. (ಅಂದರೆ ವಿಶ್ವರೂಪದರ್ಶನ ಯೋಗ್ಯತೆಯುಳ್ಳವರಿಗೆ ಮಾತ್ರ ನೋಡಲು ಶಕ್ಯವಾದುದು.) (ಈ ರೂಪವನ್ನು ನೋಡಲಿಕ್ಕೆ ದೇವತೆಗಳೂ ಅಪೇಕ್ಷಿಸಿಕೊಂಡಿರುವುದರಿಂದ ಶತ್ರುಗಳನ್ನು ಕೊಲ್ಲಲಿಕ್ಕೆ ಅರ್ಜುನನು ನಿಮಿತ್ತಮಾತ್ರನೆಂದು ತಿಳಿಸುವುದಕ್ಕಾಗಿ ಈ ಭಯಂಕರ ರೂಪವನ್ನು ಅರ್ಜುನನಿಗೆ ತೋರಿಸಿದ್ದು.) ॥ ೫೨ ॥

ಟೀ—ಅತಿ ದುರ್ಲಭವಾದ ಈ ವಿಶ್ವರೂಪದರ್ಶನವು ನಿನಗೆ ನನ್ನ ಅನುಗ್ರಹದಿಂದಲೇ ಆಯಿತೆನ್ನುವನು—

**ಗೀ॥ ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥ ೫೩ ॥**

ಅ॥ ಮಾಂ=ನನ್ನನ್ನು, ಯಥಾ=ಯಾವ ಪ್ರಕಾರವಾಗಿ ದೃಷ್ಟವಾನಸಿ=ನೋಡಿರುತ್ತೀಯೋ, ಏವಂವಿಧಃ=ಇಂಥಹ ವಿಶ್ವರೂಪವುಳ್ಳ, ಅಹಂ=ನಾನು, ವೇದೈಃ=ಋಗಾದಿ ವೇದಾಧ್ಯಯನಾದಿಗಳಿಂದಲೂ, ದ್ರಷ್ಟುಂ=ನೋಡುವುದಕ್ಕೆ, ನ ಶಕ್ಯಃ=ಶಕ್ಯನಲ್ಲ. ತಪಸಾ=ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸು ಮಾಡೋಣದರಿಂದಲೂ. ನ=ಶಕ್ಯನಲ್ಲ, ದಾನೇನ=ಭೂದಾನಾದಿಗಳಿಂದಲೂ, ನ=ಶಕ್ಯನಲ್ಲ, ಇಜ್ಯಯಾ=ಜ್ಯೋತಿಷ್ಟೋಮಾದಿಯಾಗಗಳನ್ನು ಮಾಡೋಣದರಿಂದಲೂ, ದ್ರಷ್ಟುಂ=ನೋಡುವುದಕ್ಕೆ, ನ ಶಕ್ಯಃ=ಶಕ್ಯನಲ್ಲ ॥ ೫೩ ॥

ಟೀ—ಹಾಗಾದರೆ ಯಾವ ಉಪಾಯದಿಂದ ನೋಡಲು ಶಕ್ಯನೆಂದರೆ —

**ಗೀ॥ ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರಂತಪ ॥ ೫೪ ॥**

ಅ॥ ಪರಂತಪ=ಶತ್ರುಗಳಿಗೆ ಸಂತಾಪಕಾರಿಯಾದ, ಅರ್ಜುನ ಅರ್ಜುನನೇ, ಏವಂವಿಧಃ=ಹಿಂದೆ ಹೇಳಿದ ವಿಶ್ವರೂಪವುಳ್ಳ, ಅಹಂ=ನಾನು, ಅನನ್ಯಯಾ [illegible] ಇತರಾಸಾಧಾರಣವಾದ, (ಸರ್ವಸಾಧಾರಣವಾಗಿ ಬೇರೆಯವರಿಗೆ ಸರ್ವಥಾ ನೋಡಲಿಕ್ಕೆದೊರಕದಿರುವ) ಭಕ್ತ್ಯಾ [illegible] ನಿರವಧಿಕವಾದ [illegible] ಭಕ್ತಿಯಿಂದಲೇ, ತತ್ತ್ವೇನ=ಯಥಾರ್ಥವಾಗಿ, [illegible] ವುದಕ್ಕೂ, ದ್ರಷ್ಟುಂ=ನೋಡುವುದಕ್ಕೂ, ಪ್ರವೇಷ್ಟುಂ ಚ=ಸಾಯುಜ್ಯರೂಪವಾದ ಮೋಕ್ಷವನ್ನು ಹೊಂದುವುದಕ್ಕೂ, [illegible] ಶಕ್ಯನಾಗಿರುತ್ತೇನೆ. ॥ ೫೪ ॥

ಗೀ || ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಃ ಸಂಗವರ್ಜಿತಃ |
ನಿರ್ವೈರಃ ಸರ್ವಭೂತೇಷು ಯಃ ಸ ಮಾಮೇತಿ ಪಾಂಡವ || ೫೫ ||

ಅ || ಪಾಂಡವ = ಅರ್ಜುನನೇ, ಯಃ = ಯಾವನು, ಮತ್ಕರ್ಮಕೃತ್ = ನನ್ನ ಪ್ರೀತಿಗಾಗಿಯೂ ಶಾಸ್ತ್ರಗಳಲ್ಲಿ ವಿಹಿತಗಳಾದ ಸತ್ಕರ್ಮಗಳನ್ನು ಮಾಡುವವನೋ, ಮತ್ಪರಮಃ = ನಾನೇ ಸರ್ವೋತ್ತಮ ನೆಂದು ತಿಳಿದುಕೊಂಡಿರುವವನೋ, ಮದ್ಭಕ್ತಃ = ನನ್ನಲ್ಲಿ ವಿಶೇಷವಾಗಿ ಭಕ್ತಿಯನ್ನು ಮಾಡಿಕೊಂಡಿದ್ದ ವವನೋ, ಸಂಗವರ್ಜಿತಃ = ಪುತ್ರಮಿತ್ರ ಕಳತ್ರಾದಿ ಸಕಲ ವಿಷಯಗಳಲ್ಲಿ ಆಸಕ್ತಿಯನ್ನು ಬಿಟ್ಟವನೋ ಅಥವಾ ಕರ್ಮಗಳ ಫಲೇಚ್ಛೆಯನ್ನು ತೊರೆದುಬಿಟ್ಟವನೋ, ಸರ್ವಭೂತೇಷು = ಸಮಸ್ತ ಪ್ರಾಣಿಗಳಲ್ಲಿ ನಿರ್ವೈರಃ = ವೈರವಿಲ್ಲದವನೋ, ಸಃ = ಅಂತಹವನು. ಮಾಂ = ನನ್ನನ್ನು, ಏತಿ = ಹೊಂದುತ್ತಾನೆ. ||೫೫||

ಗೀ || ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗ
ಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ವಿಶ್ವರೂಪದರ್ಶನಯೋಗೋ
ನಾಮ ಏಕಾದಶೋಽಧ್ಯಾಯಃ || ೧೧ ||

ಅ || ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನ ಸಂವಾದದಲ್ಲಿ ವಿಶ್ವರೂಪದರ್ಶನಯೋಗವೆಂಬ ಹನ್ನೊಂದನೇ ಅಧ್ಯಾಯವು ಮುಗಿಯಿತು. || ೧೧ ||

ಭಾ || ಸ್ವಕಂ ರೂಪಂ ತು ಭ್ರಾಂತಪ್ರತೀತ್ಯಾ | ಅನ್ಯಥಾ ತದಪಿ ಸ್ವಕಮೇವ | ಪ್ರಮಾ-
ಣಾನಿ ತೂಕ್ತಾನಿ ಪುರಸ್ತಾತ್ || ೫೦—೫೫ ||

ಅ || ಶ್ರೀಕೃಷ್ಣನ ರೂಪವೇ ಸ್ವಾಭಾವಿಕವಾದುದು. ವಿಶ್ವರೂಪವು ಸ್ವಾಭಾವಿಕವಾದುದಲ್ಲವೆಂದು ಲೋಕದ ಜನರು ಭ್ರಮೆಗೊಂಡಿರುವುದರಿಂದ ಸ್ವಕಂ ಎಂದು ಹೇಳಿದ್ದು. ವಸ್ತುತಸ್ತು ೨ನೇ ಅಧ್ಯಾಯ ಅಂತ್ಯದಲ್ಲಿ ಪರಿಪೂರ್ಣಾನಿ ಸರ್ವಾಣಿ ಇದ. ಮೊದಲಾದ ಪ್ರಮಾಣಗಳನ್ನು ಹೇಳಿದ್ದರಿಂದ ಆ ವಿಶ್ವರೂಪವೂ ಸ್ವಾಭಾವಿಕವೆಂದೇ ಸಿದ್ಧಿಸುತ್ತದೆ. || ೫೦—೫೫

ಭಾ || ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾ
ಭಾಷ್ಯೇ ಏಕಾದಶೋಽಧ್ಯಾಯಃ || ೧೧ ||

ಅ || ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಶ್ರೀಭಗವದ್ಗೀತಾ ಭಾಷ್ಯದಲ್ಲಿ ಹನ್ನೊಂದನೇ ಅಧ್ಯಾಯವು ಮುಗಿಯಿತು. || ೧೧ ||

ಹಿ—ಸುದುರ್ದರ್ಶಮಿದಂ ರೂಪಂ ಎಂಬುವಲ್ಲಿ ದೇವತೆಗಳೂ ಕೂಡ ಸರ್ವದಾ ನೋಡಬೇಕೆಂದು ಕೊಂಡೇ ಇದ್ದಾರೆ. ನೋಡುವುದಿಲ್ಲವೆಂದು ಹೇಳಿದ್ದರಿಂದ ಅರ್ಜುನನಿಗಿಂತ ಉತ್ತಮರೂ ಕೂಡಾ ವಿಶ್ವರೂಪವನ್ನು ನೋಡಿರುತ್ತಾರೆಂದು ಹಿಂದೆ ಹೇಳಿದ್ದು ಹೇಗೆ? ಎಂದರೆ—

ತಾ || ಯೇ ದರ್ಶನಕಾಂಕ್ಷಿಣಸ್ತೈರಪೀದಾನೀಂ ದೃಷ್ಟಂ ತ್ವಾಯಃ || ೫೨—೫೩ ||

॥ ನನ್ನ ರೂಪವನ್ನು ನೋಡಬೇಕೆಂದು ಯಾರು ಇಚ್ಛಿಸಿಕೊಂಡಿರುತ್ತಾರೋ ಅಂತಹ ದೇವತೆಗಳಲೂ ಈಗ ಪ್ರಾಯಶಃ ಆ ವಿಶ್ವರೂಪವು ಕಾಣಲ್ಪಟ್ಟಿದೆ. ॥ ೫೨ – ೫೫ ॥

**ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾತಾತ್ಪರ್ಯನಿರ್ಣಯೇ ಏಕಾದಶೋಽಧ್ಯಾಯಃ ॥ ೧೧ ॥**

॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾತಾತ್ಪರ್ಯನಿರ್ಣಯದಲ್ಲಿ ಹನ್ನೊಂದನೇ ಅಧ್ಯಾಯವು ಮುಗಿಯಿತು. ॥ ೧೧ ॥

॥ ಶ್ರೀಕೃಷ್ಣಾರ್ಪಣಮಸ್ತು ॥

|| ಶ್ರೀಃ ||

# ಹದಿನೆರಡನೇ ಅಧ್ಯಾಯವು.

ಟೀ—ಶ್ರೀಪರಮಾತ್ಮನ ಉಪಾಸನ, ಲಕ್ಷ್ಮಿಯ ಉಪಾಸನ ಇವುಗಳ ಮಧ್ಯದಲ್ಲಿ ಶ್ರೀಹರಿಯ ಉಪಾಸನೆಯು ಶ್ರೇಷ್ಠವಾಗಿರುವುದರಿಂದ ಅದಕ್ಕಾಗಿ ಶ್ರೀಹರಿಯ ಉಪಾಸನೆಯನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ—

ಗೀ || || ಅರ್ಜುನ ಉವಾಚ ||

ಓಂ || ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ |
ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ || ೧ ||

ಅ || ಅರ್ಜುನಃ—ಅರ್ಜುನನು, ತಮೇವಂ ವಿದ್ವಾನ್ ಇತ್ಯಾದಿಗಳಲ್ಲಿ ಶ್ರೀಪರಮಾತ್ಮನ ಉಪಾಸನೆಯು ಮೋಕ್ಷಕ್ಕೆ ಕಾರಣವೆಂದು ಹೇಳಿದಂತೆಯೇ ಶ್ರಿಯಂ ವಸಾನಾಃ ಇತ್ಯಾದಿ ವೇದಗಳಲ್ಲಿ ಲಕ್ಷ್ಮಿಯ ಉಪಾಸನೆಯೂ ಮೋಕ್ಷಕ್ಕೆ ಕಾರಣವೆಂದು ತಿಳಿಯುವುದರಿಂದ ಸಂಶಯಗ್ರಸ್ತನಾಗಿ ಭಗವದುಪಾಸನೆಯೇ ಶ್ರೇಷ್ಠವೆಂಬುವಲ್ಲಿ ವಿಶೇಷ ಯುಕ್ತಿಯನ್ನು ತಿಳಿಯಲಿಚ್ಛೆಯಿಂದ ಉವಾಚ=ಪ್ರಶ್ನಿಸುತ್ತಾನೆ. ಯೇ ಭಕ್ತಾಃ= ಯಾವ ಭಕ್ತರು. ಸತತಯುಕ್ತಾಃ—ಸರ್ವಕಾಲದಲ್ಲಿಯೂ ಧ್ಯಾನಯೋಗ ಕರ್ಮಯೋಗಗಳಿಂದ ಕೂಡಿದವರಾಗಿ, ಏವಂ ತ್ವಾಂ=ಪೂರ್ವದಲ್ಲಿ ಪ್ರತ್ಯಕ್ಷವಾಗಿ ಕೇಳಿಯೂ ನೋಡಿಯೂ ಇರುವ, ನಿನ್ನನ್ನು (ಕೃಷ್ಣನನ್ನು) ಏವಂ=ಹಿಂದೆ ಹೇಳಿದ ಪ್ರಕಾರ, ಪರ್ಯುಪಾಸತೇ—ಚೆನ್ನಾಗಿ ಉಪಾಸನೆ ಮಾಡುತ್ತಾರೋ, ಯೇಽಪಿ ಚ= ಯಾರು, ಅಕ್ಷರಂ—ದೇಹನಾಶವಿಲ್ಲದಿರುವುದರಿಂದ ಅಕ್ಷರಂ ಎಂದು ಹೆಸರುಳ್ಳ, ಅವ್ಯಕ್ತಂ=ಚಿತ್ಪ್ರಕೃತಿಯನ್ನು (ಲಕ್ಷ್ಮೀದೇವಿಯನ್ನು) ಪರ್ಯುಪಾಸತೇ—ಶ್ರದ್ಧೆಯಿಂದ ಭಕ್ತ್ಯಾದಿಪೂರ್ವಕವಾಗಿ ಉಪಾಸನೆ ಮಾಡುತ್ತಾರೋ. ತೇಷಾಂ—ಆ ಇಬ್ಬರನ್ನುಪಾಸನೆ ಮಾಡುವವರ ಮಧ್ಯದಲ್ಲಿ, ಕೇ—ಯಾರು, ಯೋಗವಿತ್ತಮಾಃ=ಮೋಕ್ಷೋಪಾಯವನ್ನು ತಿಳಿದವರಲ್ಲಿ ಶ್ರೇಷ್ಠರು, ಎಂದು ಅರ್ಜುನನು ಪ್ರಶ್ನೆ ಮಾಡಿದನು ||೧||

ಟೀ—ಲಕ್ಷ್ಮೀದೇವಿಯನ್ನುಪಾಸನೆ ಮಾಡುವವರಿಗಿಂತ ನನ್ನನ್ನು (ಶ್ರೀಕೃಷ್ಣನನ್ನು) ಉಪಾಸನೆ ಮಾಡುವವರೇ ಶ್ರೇಷ್ಠರೆನ್ನುತ್ತಾನೆ—

ಗೀ || || ಶ್ರೀಭಗವಾನುವಾಚ ||

ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ |
ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ || ೨ ||

ಅ || ಶ್ರೀಭಗವಾನ್—ಶ್ರೀಕೃಷ್ಣನು ಉವಾಚ—ಉಪದೇಶವನ್ನು ಮಾಡಿದನು. ಯೇ—ಯಾರು ಮಯಿ—ನನ್ನಲ್ಲಿ, ಮನಃ—ಮನಸ್ಸನ್ನು, ಆವೇಶ್ಯ=ಚೆನ್ನಾಗಿ ಇಟ್ಟು, ನಿತ್ಯಯುಕ್ತಾಃ=ನಿರಂತರ ಕರ್ಮಯೋಗ ಧ್ಯಾನಯೋಗಗಳಿಂದ ಕೂಡಿದವರಾಗಿ ಪರಯಾ ಶ್ರದ್ಧಯಾ—ಅತ್ಯುತ್ಕೃಷ್ಟವಾದ ಬುದ್ಧಿಯಿಂದ ಕೂಡಿದವರಾಗಿ ಮಾಂ—ನನ್ನನ್ನು, ಉಪಾಸತೇ—ಉಪಾಸನೆ ಮಾಡುತ್ತಾರೋ,

ಇವರು, ಯುಕ್ತತಮಾ ಇತಿ = ಮೋಕ್ಷೋಪಾಯವನ್ನು ತಿಳಿದವರಲ್ಲಿ ಶ್ರೇಷ್ಠರೆಂದು, ಮೇ = ನನಗೆ, ಮತಾಃ = ಸಮ್ಮತರು. ॥ ೨ ॥

ಟೀ — ಈ ಅಧ್ಯಾಯದಲ್ಲಿ ಹೇಳತಕ್ಕ ಅರ್ಥವನ್ನು ಹೇಳುತ್ತಾರೆ—

**ಭಾ॥ ಓಂ ॥ (೧) ಅವ್ಯಕ್ತೋಪಾಸನಾದ್ಭಗವದುಪಾಸನಸ್ಯೋತ್ತಮತ್ವಂ ಪ್ರದರ್ಶ್ಯ ತದುಪಾಯಂ ಪ್ರದರ್ಶಯತ್ಯಸ್ಮಿನ್ನಧ್ಯಾಯೇ ॥ (೨) ತದುಪಾಸನಮಪಿ ಮೋಕ್ಷಸಾಧನಂ ಪ್ರತೀಯತೇ ॥ (೩) ಶ್ರಿಯಂ ವಸಾನಾ ಅಮೃತತ್ವಮಾಯನ್ನವಂತಿ ಸತ್ಯಾ ಸಮಿಧಾ ಮಿತದ್ರಾವಿತಿ ॥ (೪) ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯ ತಂ ಮೃತ್ಯುಮುಖಾತ್ಪ್ರಮುಚ್ಯತ ಇತಿ ಚ ॥ (೫) ಅವ್ಯಕ್ತಂ ಚ ಮಹತಃ ಪರಂ । ಮಹತಃ ಪರಮವ್ಯಕ್ತಮಿತ್ಯುಕ್ತಪರಾಮರ್ಶೋಪಪತ್ತೇಃ ॥ ೧ ॥**

ಅ ॥ (೧) ಕೇವಲ ಲಕ್ಷ್ಮೀದೇವಿಯನ್ನುಪಾಸನೆ ಮಾಡುವುದಕ್ಕಿಂತ ಶ್ರೀಪರಮಾತ್ಮನನ್ನುಪಾಸನೆ ಮಾಡುವುದು ಉತ್ತಮವೆಂದು ತೋರಿಸಿ ಆ ಶ್ರೀಪರಮಾತ್ಮನನ್ನುಪಾಸನೆ ಮಾಡತಕ್ಕ ಉಪಾಯವನ್ನು ಈ ಅಧ್ಯಾಯದಲ್ಲಿ ತೋರಿಸುತ್ತಾರೆ. (೨) ಶ್ರೀಪರಮಾತ್ಮನ ಉಪಾಸನದಂತೆ ಲಕ್ಷ್ಮೀದೇವಿಯ ಉಪಾಸನೆಯೂ ಮೋಕ್ಷಸಾಧನವೆಂದು ಪ್ರಮಾಣಪ್ರಮಿತವಾಗಿದ್ದರೆ ಭಗವದುಪಾಸನೆಗೆ ಆಧಿಕ್ಯ ಸಿದ್ಧಾರ್ಥಗಾಧವಾದ ಅರ್ಜುನನ ಪ್ರಶ್ನೆಯು ಕೂಡಬಹುದಿತ್ತು. ಹಾಗಲ್ಲ, ಮತ್ತೆ ಲಕ್ಷ್ಮಿಯ ಉಪಾಸನಾ, ಭಗವದುಪಾಸನಾ ಇವುಗಳಿಂದ ಸಾಧ್ಯ ಫಲಗಳ ಮಧ್ಯದಲ್ಲಿ ಯಾವ ಫಲವು ಶ್ರೇಷ್ಠವೆಂದು ಸಾಧ್ಯಕ್ಕೆ ಉತ್ತಮತ್ವವನ್ನು ನಿರ್ಣಯಿಸುವುದಕ್ಕಾಗಿಯೇ ಪ್ರಶ್ನೆಯು ಬಂದರೆ (ಪರಮಾತ್ಮನ ಉಪಾಸನೆಯು ಮೋಕ್ಷ ಸಾಧನವೆಂದು ತೋರಿದಂತೆ) ಆ ಲಕ್ಷ್ಮೀದೇವಿಯ ಉಪಾಸನೆಯೂ ಕೂಡ ಮೋಕ್ಷಸಾಧನವೆಂದು ಪ್ರಮಾಣಗಳಿಂದ ತೋರುತ್ತದೆ. (೩) (ಲಕ್ಷ್ಮೀದೇವಿಯ ಉಪಾಸನೆಯಿಂದ ಮೋಕ್ಷವಾಗುತ್ತದೆಂದು ಹೇಳುವ ಶ್ರುತಿಗಳನ್ನು ಹೇಳುತ್ತಾರೆ—) ಲಕ್ಷ್ಮೀದೇವಿಯನ್ನುಪಾಸನೆ ಮಾಡುವವರು ಮೋಕ್ಷವನ್ನು ಹೊಂದುವರು. ಕ್ಷೀರಸಮುದ್ರದಲ್ಲಿರುವ ಲಕ್ಷ್ಮಿಯು, ಉಪಾಸಕರಾದ ಆ ಮುಕ್ತರ ಇಷ್ಟಗಳಾದವುಗಳು ಸತ್ಯಗಳೇ ಆಗುತ್ತವೆ. (೪) (ಶ್ರೀ ಶಬ್ದವು ಭಾರತೀ, ರತೀ, ಶ್ಯಾಮಲಾ, ಉಷಾದೇವಿಯರಲ್ಲಿಯೂ ಇದ್ದ ಪ್ರಯುಕ್ತ ಕೇವಲ ಲಕ್ಷ್ಮೀವಿಷಯಕವೇ ಆದ ಶ್ರುತ್ಯಂತರವನ್ನು ಹೇಳುತ್ತಾರೆ—) ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖನಿಂದ ಉತ್ತಮಳಾದ, ಆದ್ಯಂತವಿಲ್ಲದಿರುವ ಲಕ್ಷ್ಮೀದೇವಿಯನ್ನು ಚೆನ್ನಾಗಿ ಪೂಜಿಸಿ ಮೃತ್ಯುಭಯದಿಂದ ಮುಕ್ತನಾಗುತ್ತಾನೆ, (ಅಂದರೆ ಮೋಕ್ಷವನ್ನು ಹೊಂದುತ್ತಾನೆ) ಎಂದೂ ಇದೆ. (೫) ಅವ್ಯಕ್ತತತ್ತ್ವಾಭಿಮಾನಿನಿಯಾದ ಲಕ್ಷ್ಮೀದೇವಿಯೇ ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖನಿಗಿಂತ ಶ್ರೇಷ್ಠಳು. ಅವ್ಯಕ್ತಶಬ್ದದಿಂದ ಲಕ್ಷ್ಮೀದೇವಿಯನ್ನು ಇಟ್ಟುಕೊಂಡರೇನೇ ಮಹತಃ ಪರಮವ್ಯಕ್ತಂ ಎಂಬ ಪರಾಮರ್ಶವು ಕೂಡುತ್ತದೆ. ಅಂದರೆ ಮಹತಃ ಪರಮವ್ಯಕ್ತಂ ಎಂಬುವಲ್ಲಿ ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖ ಬ್ರಹ್ಮನಿಂದ ಸಾಕ್ಷಾತ್ ಉತ್ತಮಳಾದ ಲಕ್ಷ್ಮೀದೇವಿಗೇನೇ ಪರಾಮರ್ಶವು ಯುಕ್ತವು. (ಅವ್ಯಕ್ತದಿಂದಲೂ ಉತ್ತಮನಾದ ಪರಮಾತ್ಮನಿಗೆ ಪರಾಮರ್ಶವೆಂದು ಹೇಳಕೂಡದು.) (ಪರಮಾತ್ಮನಾದರೂ ಮಹತ್ತತ್ತ್ವದಿಂದಮಾತ್ರ ಪರನೆಂದು ಹೇಳಿಕೊಳ್ಳುವುದಲ್ಲ. ಮತ್ತೆ ಅವ್ಯಕ್ತಾತ್ಪುರುಷಃ ಪರಃ ಎಂದು ಹೇಳಿದ ಪ್ರಕಾರ ಅವ್ಯಕ್ತ ಎನಿಸಿದ ಲಕ್ಷ್ಮೀದೇವಿಯಿಂದಲೂ ಉತ್ತಮನು.) ॥ ೧ ॥

ಟೀ — ಇದೇ ವಿಷಯದಲ್ಲಿಯೇ ಶ್ರಿಯಂ ವಸಾನಾಃ ಅನಾದ್ಯನಂತಂ ಎಂಬುವ ಎರಡು ಶ್ರುತಿಗಳ ಅರ್ಥವನ್ನು ಸಂಗ್ರಹಿಸತಕ್ಕದೂ, ಸ್ಪಷ್ಟವೂ ಆದ ಶ್ರುತಿಯನ್ನು ಹೇಳುತ್ತಾರೆ

ಭಾ || (೧) ಉಪಾಸ್ಯ ತಾಂ ಶ್ರಿಯಮವ್ಯಕ್ತಸಂಜ್ಞಾಂ ಭಕ್ತ್ಯಾ ಮರ್ತ್ಯೋ ಮುಚ್ಯತೇ ಸರ್ವಬಂಧೈರಿತಿ ಸಾಮವೇದೇ ಆಗ್ನಿವೇಶ್ಯಶಾಖಾಯಾಂ || (೨) ಮಹಚ್ಚ ಮಾಹಾತ್ಮ್ಯಂ ತಸ್ಯಾ ವೇದೇಷೂಚ್ಯತೇ |(1)ಚತುಷ್ಕಪರ್ದಾ ಯುವತಿಃ ಸುಪೇಶಾ ಘೃತಪ್ರತೀಕಾ ವಯುನಾನಿ ವಸ್ತೇ | ತಸ್ಯಾಂ ಸುಪರ್ಣಾ ವೃಷಣಾ ನಿಷೇದತುರ್ಯತ್ರ ದೇವಾ ದಧಿರೇ ಭಾಗಧೇಯಮಿತಿ | (2) ಚತುಶ್ಶಿಖಂಡಾ ಯುವತಿಃ ಸುಪೇಶಾ ಘೃತಪ್ರತೀಕಾ ವಯುನಾನಿ ವಸ್ತ ಇತಿ ಚ || (೩)ಅಹಂ ರುದ್ರೇಭಿರ್ವಸುಭಿಶ್ಚರಾಮ್ಯಹಮಾದಿತ್ಯೈರುತ ವಿಶ್ವದೇವೈರಿತ್ಯಾದ್ಯಾರಭ್ಯ ಅಹಂ ರಾಷ್ಟ್ರೀ ಸಂಗಮನೀ ವಸೂನಾಂ ಚಿಕಿತುಷೀ ಪ್ರಥಮಾ ಯಜ್ಞಿಯಾನಾಂ | ತಾಂ ಮಾ ದೇವಾ ವ್ಯದಧುಃ ಪುರುತ್ರಾ ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಂ | ಮಯಾ ಸೋ ಅನ್ನಮತ್ತಿ ಯೋ ವಿಪಶ್ಯತಿ ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಂ || ೨ |

ಅ || (೧) ಯೋಗ್ಯ ಮನುಷ್ಯನು ಅವ್ಯಕ್ತ ಎಂದು ಹೆಸರುಳ್ಳ ಆ ಲಕ್ಷ್ಮೀದೇವಿಯನ್ನು ಭಕ್ತಿಯಿಂದ ಉಪಾಸನಾಮಾಡಿ ಸಮಸ್ತ ಸಂಸಾರಬಂಧಗಳಿಂದ ಬಿಡುಗಡೆ ಹೊಂದುತ್ತಾನೆ, ಎಂದು ಸಾಮವೇದದಲ್ಲಿ ಅಗ್ನಿವೇಶ್ಯಶಾಖೆಯಲ್ಲಿ ಹೇಳಿದೆ. (೨) ಬ್ರಹ್ಮಾದಿಗಳಿಗಿಂತಲೂ ಆ ಲಕ್ಷ್ಮೀದೇವಿಗೆ ಮಹಾಮಾಹಾತ್ಮ್ಯವು ವೇದಗಳಲ್ಲಿ ಹೇಳಲ್ಪಟ್ಟಿದೆ. (1) ಯಾವ ಲಕ್ಷ್ಮೀದೇವಿಯು ನಾಲ್ಕು ವೇಣಿಗಳುಳ್ಳವಳೋ, (ನಾಲ್ಕು ಜಟಾಬಂಧಗಳುಳ್ಳವಳೋ) ನಿತ್ಯಯೌವನಳೋ, ಸೌಂದರ್ಯವುಳ್ಳವಳೋ, ಸುರೂಪವುಳ್ಳವಳೋ, ಪ್ರಕಾಶಮಾನವಾದ ಅಂಗವುಳ್ಳವಳೋ, ಜ್ಞಾನ ಆನಂದಗಳಿಂದ ಅಲಂಕೃತಗಳಾಗಿರುತ್ತಾಳೋ, ಯಾವ ಲಕ್ಷ್ಮೀದೇವಿಯಿಂದ ದೇವತೆಗಳು ಸ್ವಸ್ವಪದಪ್ರಾಪ್ತಿರೂಪ ಭಾಗ್ಯವನ್ನು ಹೊಂದಿರುವರೋ, ಅಂತಹ ಲಕ್ಷ್ಮೀದೇವಿಯಲ್ಲಿ ಚೆನ್ನಾಗಿ ಪರಮಾನಂದಗಳನ್ನೇ ಅನುಭವಿಸುತ್ತಿರುವ, ಭಕ್ತರಿಗೆ ಅಭೀಷ್ಟವನ್ನು ಕೊಡುವ ಅಜ್ಞಾ ಅಂತರಾತ್ಮಾ ಎಂಬುವ ಎರಡು ಭಗವದ್ರೂಪವಿಶೇಷಗಳು ಅಭೀಷ್ಟವನ್ನು ಕೊಡುತ್ತಿರುತ್ತವೆ. (೩) ಲಕ್ಷ್ಮೀದೇವಿಯು ನಾಲ್ಕು ಜಟಾಬಂಧಗಳುಳ್ಳವಳೂ, ನಿತ್ಯಯೌವನಳೂ, ಚಲೋರೂಪವುಳ್ಳವಳೂ, ವಿಶೇಷವಾಗಿ ಪ್ರಕಾಶಿಸಿಕೊಂಡಿರುವ ಅಂಗಗಳುಳ್ಳವಳೂ, ಜ್ಞಾನಾನಂದಗಳಿಂದ ಅಲಂಕೃತಳೂ ಆಗಿರುತ್ತಾಳೆ (ಅಂತಹ ಲಕ್ಷ್ಮೀದೇವಿಗೆ ಅಜ್ಞಾ ಅಂತರಾತ್ಮಾ ಎಂಬುವ ಎರಡು ಭಗವದ್ರೂಪ ವಿಶೇಷಗಳು ಸ್ವಾಮಿಯಾಗಿಯೂ ನಿಯಾಮಕವಾಗಿಯೂ ಇದ್ದು ಅಭೀಷ್ಟವನ್ನು ಹೊಂದಿಸಿಕೊಡುತ್ತವೆ.) (ಅಂತಹ ಲಕ್ಷ್ಮೀದೇವಿಗೆ ಈ ಎರಡು ಶ್ರುತಿಗಳಲ್ಲಿ ನಿತ್ಯ ಯೌವನವೂ ಜ್ಞಾನವಯಸ್ಕತ್ವವೂ, ಬ್ರಹ್ಮಾದಿ ಸಮಸ್ತ ದೇವತಾಪೂಜ್ಯತ್ವವೂ ತೋರುತ್ತದೆ ) (೩) (ಇದು ಲಕ್ಷ್ಮೀದೇವಿಯ ಮಾತು.) ನಾನು ೧೧ ರುದ್ರರಿಂದಲೂ, ೮ ವಸುಗಳಿಂದಲೂ, ಶ್ರೀವಿಷ್ಣು ಹೊರತಾದ ೧೧ ಆದಿತ್ಯರಿಂದಲೂ, ವಿಶ್ವದೇವತೆಗಳಿಂದಲೂ ಕೂಡಿಕೊಂಡು ಸಂಚರಿಸುತ್ತಿರುತ್ತೇನೆ, ಎಂದಾರಂಭಿಸಿ, ನಾನು ವಿಶೇಷವಾಗಿ ಪ್ರಕಾಶಿಸಿಕೊಂಡಿರುವವಳು, ಯಜ್ಞಕ್ಕೆ ಯೋಗ್ಯಗಳಾದ ಪದಾರ್ಥಗಳನ್ನು ಅಥವಾ ಯಜ್ಞಾಭಿಮಾನಿ ದೇವತೆಗಳನ್ನು ಯಜಮಾನನಿಗೆ ತೋರಿಸಿಕೊಡುವವಳು. ಅನಾದಿ ಕಾಲವನ್ನಾರಂಭಿಸಿ ಸರ್ವತ್ರ ವ್ಯಾಪಿಸಿಕೊಂಡಿರುವವಳು. ಅಂತಹ ಸ್ಥಾನಗಳಲ್ಲಿ ನಿಯಾಮಕಳಾಗಿ ಇರುವ ಮತ್ತು ಬಹುಸ್ಥಾನಗಳಲ್ಲಿ ದೇವತೆಗಳನ್ನು ಇರಿಸುವ ನನ್ನನ್ನು ದೇವತೆಗಳು ಬಹುಸ್ಥಾನಗಳಲ್ಲಿ ಪೂಜೆಗೋಸ್ಕರ ಪ್ರತಿಷ್ಠಾಪಿಸಿದರು (೪) ಯಾವನು ಭೋಗ್ಯವಾದ ಅನ್ನವನ್ನು ಭೋಗಿಸುತ್ತಾನೋ ಯಾವನು ಉತ್ತಮ ವಸ್ತುವನ್ನು ನೋಡುತ್ತಾನೋ, ಯಾವನು ಉತ್ತಮವಾದ ವ್ಯಾಪಾರವನ್ನು ಮಾಡುತ್ತಾನೋ. ಯಾವನು ಭಗವತ್ಕಥಾದಿಗಳನ್ನು ಕೇಳುತ್ತಾನೋ, ಅವನೆಲ್ಲ ನನ್ನ ಪ್ರೇರಣೆಯಿಂದಲೇ ಈ ಮಹಾ ಕಾರ್ಯಗಳನ್ನು ಮಾಡುತ್ತಾನೆ. ೨

ಭಾ ॥ (೧) ಅಮಂತವೋ ಮಾಂ ತ ಉಪಕ್ಷಿಯಂತಿ ಶ್ರುಧಿ ಶ್ರುತ ಶ್ರದ್ಧಿವಂ ತೇ ವದಾಮಿ॥ (೨) ಯಂ ಕಾಮಯೇ ತಂ ತಮುಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ ॥ (೩) ಅಹಂ ರುದ್ರಾಯ ಧನುರಾತನೋಮಿ ಬ್ರಹ್ಮದ್ವಿಷೇ ಶರವೇ ಹಂತವಾ ಉ ॥ (೪) ಅಹಂ ಸುವೇ ಪಿತರಮಸ್ಯ ಮೂರ್ಧನ್ಮಮ ಯೋನಿರಪ್ಸ್ವಂತಃ ಸಮುದ್ರೇ ॥ (೫) ಪರೋ ದಿವಾ ಪರ ಏನಾ ಪೃಥಿವ್ಯೈತಾವತೀ ಮಹಿನಾ ಸಂಬಭೂವೇತ್ಯಾದಿ ಚ ॥ ೩ ॥

ಅ ॥ (೧) ಜೀವಬ್ರಹ್ಮೈಕ್ಯಾದಿಗಳನ್ನು ತಿಳಿಯೋಣ ಮೊದಲಾದ ಅಪರಾಧ ಮಾಡದಿದ್ದವರೆಲ್ಲರೂ ನನ್ನ ಸಮೀಪದಲ್ಲಿ ಆವಾಸ ಮಾಡುತ್ತಾರೆ. ಪ್ರಸಿದ್ಧನಾದವನೇ ವಿಶ್ವಾಸದಿಂದಲು ಯೋಗ್ಯವಾದ ವಸ್ತುವನ್ನು ನಾನು ನಿನಗಾಗಿ ಹೇಳುತ್ತೇನೆ. ಅದನ್ನು ಕೇಳು. (೨) ಯಾರನ್ನು ರುದ್ರನನ್ನಾಗಿ ಮಾಡಬೇಕೆಂದು ಇಚ್ಛಿಸುತ್ತೇನೋ, ಅವರವರನ್ನು ರುದ್ರಪದಯೋಗ್ಯನನ್ನಾಗಿ ಮಾಡುತ್ತೇನೆ. ಯಾರು ಯಾರನ್ನು ಚತುರ್ಮುಖಬ್ರಹ್ಮನನ್ನಾಗಿ ಮಾಡಬೇಕೆಂದು ಇಚ್ಛಿಸುತ್ತೇನೋ, ಅವರವರನ್ನು ಚತುರ್ಮುಖಬ್ರಹ್ಮನನ್ನಾಗಿ ಮಾಡುತ್ತೇನೆ. ಹೀಗೆಯೇ ಋಷಿಪದಯೋಗ್ಯರನ್ನು ಋಷಿಗಳನ್ನಾಗಿಯೂ, ಜ್ಞಾನಯೋಗ್ಯರನ್ನು ಮಹಾಜ್ಞಾನಿಗಳನ್ನಾಗಿಯೂ, ಮಾಡುವೆನು. (೩) ನಾನು ಸಂಹಾರ ಕಾಲದಲ್ಲಿ ಬ್ರಾಹ್ಮಣ ಮೊದಲಾದ ಸಮಸ್ತ ಪ್ರಾಣಿಗಳನ್ನು ಸಂಹರಿಸುವ, ದುಷ್ಟ ಸಂಹಾರಕನಾದ, ಅಥವಾ ಬ್ರಹ್ಮದ್ವೇಷಿಗಳಿಗೆ ಘಾತುಕನಾದ, ರುದ್ರನನ್ನು ಕೊಲ್ಲುವುದಕ್ಕಾಗಿಯೇ ಧನುಸ್ಸನ್ನು ವಿಸ್ತರಿಸುತ್ತೇನೆ. (೪) ನಾನು ಸಮಸ್ತ ಪ್ರಪಂಚಕ್ಕೆ ತಂದೆಯಾದ ಚತುರ್ಮುಖಬ್ರಹ್ಮನನ್ನು ಸರ್ವರಿಗಿಂತ ಶ್ರೇಷ್ಠನನ್ನಾಗಿ ಸೃಷ್ಟಿಸಿರುವೆನು. ನನಗೆ ಕಾರಣನಾದವನು ಶ್ರೀಹರಿಯು ಕ್ಷೀರಸಾಗರದ ಮಧ್ಯದಲ್ಲಿದ್ದಾನೆ. (೫) ನಾನು ಸ್ವರ್ಗಾಭಿಮಾನಿದೇವತೆಗಿಂತ ಮಿಗಿಲಾದವಳು ಪೃಥಿವ್ಯಭಿಮಾನಿ ದೇವತೆಗಿಂತಲೂ ಮಿಗಿಲಾದವಳು. ಮಹಾ ಮಹಿಮೆಯಿಂದ ಲಕ್ಷ್ಮೀ ಎನಿಸಿಕೊಂಡ ನಾನು ಬ್ರಹ್ಮರುದ್ರಾದಿ ನಿಖಿಲ ಜಗತ್ತನ್ನು ಸೃಷ್ಟಿಸುವ ಶಕ್ತಿ ಉಳ್ಳವಳಾಗಿರುವೆನು, ಇದುಮೊದಲಾದ ಪ್ರಮೇಯವು ವೇದಾದಿಗಳಲ್ಲಿ ಹೇಳಲ್ಪಟ್ಟಿದೆ. ॥ ೩ ॥

ಭಾ ॥ (೧) ತ್ವಯಾ ಜುಷ್ಟಃ ಸ ಋಷಿರ್ಭವತಿ ದೇವಿ ತ್ವಯಾ ಬ್ರಹ್ಮಾ ಗತಶ್ರೀರುತ ಶ್ವೋಽಯಾ ಇತಿ ಚ । ಇತಿ ಶಂಕಾ ಕಸ್ಯಚಿದ್ಭವತಿ । ಅತೋ ಜಾನನ್ನಪಿ ಸೂಕ್ಷ್ಮಯುಕ್ತಿಜ್ಞಾನಾರ್ಥಂ ಪೃಚ್ಛತಿ । ಏವಮಿತಿ ॥ (೨) ಏವಂಶಬ್ದೇನ ದೃಷ್ಟಶ್ರುತರೂಪಂ ಮತ್ಸ್ಯಕೂರ್ಮಾದಿಕ್ಯಾದಿಪ್ರಕಾರಶ್ಚ ಪರಾಮೃಶ್ಯತೇ । ಅವ್ಯಕ್ತಂ ಪ್ರಕೃತಿಃ । ಮಹತಃ ಪರಮವ್ಯಕ್ತಮಿತಿ ಪ್ರಯೋಗಾತ್ ॥ (೩) ಯತ್ತತ್ತ್ರಿಗುಣಮವ್ಯಕ್ತಂ ನಿತ್ಯಂ ಸದಸದಾತ್ಮಕಂ । ಪ್ರಧಾನಂ ಪ್ರಕೃತಿಂ ಪ್ರಾಹುರವಿಶೇಷಂ ವಿಶೇಷವದಿತಿ ಭಾಗವತೇ ॥ (೪) ಅಕ್ಷರಂ ಚ ತತ್ । ಅಕ್ಷರಾತ್ಪರತಃ ಪರ ಇತಿ ಶ್ರುತೇಃ ॥ (೫) ಪರಂ ತು ಬ್ರಹ್ಮ ನ ಹಿ ಭಗವತೋಽನ್ಯತ್ ॥ (೬) ಆನಂದಮಾನಂದಮಯೋಽವಸಾನೇ ಸರ್ವಾತ್ಮಕೇ ಬ್ರಹ್ಮಣಿ ವಾಸುದೇವ ಇತಿ ಭಾಗವತೇ ॥ ೪ ॥

ಅ ॥ (೧) (ವೇದಪುರುಷನ ಮಾತು) ಎಲೆ ಲಕ್ಷ್ಮೀದೇವಿಯೇ ನಿನ್ನಿಂದ ಅನುಗ್ರಹಿಸಲ್ಪಟ್ಟ [illegible] ಶ್ರೇಷ್ಠನಾದವನು ಋಷಿಯಾಗಿರುತ್ತಾನೆ. ನಿನ್ನಿಂದ ಅನುಗ್ರಹಿಸಲ್ಪಟ್ಟ [illegible]

ಪಾತ್ರನಾದವನೇ ಚತುರ್ಮುಖ ಬ್ರಹ್ಮನಾಗುತ್ತಾನೆ. ನಿನ್ನಿಂದಲೇ ನಿನ್ನ ಪ್ರೀತಿಪಾತ್ರನಾದವನು ಸ್ವ[illegible] ತ್ವವನ್ನು ಹೊಂದುತ್ತಾನೆ. (ಹೀಗೆಯೇ ಬ್ರಾಹ್ಮಣಾದಿವರ್ಣಗಳು ನಿನ್ನಿಂದಲೇ ಆಗುತ್ತವೆ) ಹೀಗೆ ಲಕ್ಷ್ಮೀ ದೇವಿಗೆ ಮಹಾ ಮಹಿಮೆಯು ಶ್ರುತಿಗಳಲ್ಲಿ ಹೇಳಿರುವುದರಿಂದ ಪರಮಾತ್ಮನ ಉಪಾಸನೆಯಂತೆ ಲಕ್ಷ್ಮ್ಯು ಉಪಾಸನೆಯು ಕೂಡ ಮೋಕ್ಷಸಾಧನವೆಂದು ತೋರುವ ಕಾರಣ ಈ ಎರಡು ಮಾರ್ಗಗಳಿಂದ ಮೋಕ್ಷ ರೂಪವಾದ ಒಂದೇ ಫಲವನ್ನು ಅಪೇಕ್ಷಿಸುವ ಉಪಾಸಕರ ಮಧ್ಯದಲ್ಲಿ ಶ್ರೇಷ್ಠರು ಯಾರೆಂದು ತತ್ವ ತಿಳಿ ದಿರುವವರಿಗೆ ಸಂದೇಹವು ಹುಟ್ಟುತ್ತದೆ ಆದುದರಿಂದ ಅಂತಹವರಿಗೆ ಅನುಗ್ರಹಿಸಬೇಕೆಂಬುವ ಇಚ್ಛೆ ಯಿಂದ ಅವರಿಬ್ಬರಲ್ಲಿ ಭಗವದುಪಾಸಕರೇ ಶ್ರೇಷ್ಠರು ಎಂದು ಅರ್ಜುನನು ತಿಳಿದಾಗ್ಯೂ ಪ್ರಶ್ನೆ ಮಾಡು ತ್ತಾನೆ. ಅಥವಾ ಅರ್ಜುನನು ತಿಳಿದಾಗ್ಯೂ ತಾನು ತಿಳಿಯದಿರುವ ಅತಿ ಸೂಕ್ಷ್ಮಗಳಾದ ಯುಕ್ತಿ ವಿಶೇ ಷಗಳನ್ನು ತಿಳಿದುಕೊಳ್ಳುವುದಕ್ಕಾಗಿ ಪರರಿಗೆ ಬರಬಹುದಾದ ಸಂಶಯವನ್ನು ತಾನು ಮನದಲ್ಲಿ ಆರೋ ಪಿಸಿ ಏವಂ ಸತತಯುಕ್ತಾಃ ಇತ್ಯಾದಿಗಳಿಂದ ಪ್ರಶ್ನೆ ಮಾಡುತ್ತಾನೆ. (೨) ಏವಂ ಎಂಬ ಶಬ್ದದಿಂ ಮೊದಲು ಎಂತಹ ಮಾಹಾತ್ಮ್ಯಯುಳ್ಳ ಪರಬ್ರಹ್ಮನ ರೂಪವನ್ನು ನೋಡಿದ್ದೇವೋ, ಕೇಳಿದ್ದೇವೋ, ಅಂತ ಹುದನ್ನು ಇಟ್ಟುಕೊಳ್ಳಬೇಕು ಮತ್ತು ಮತ್ಕರ್ಮಕೃತ್ ಇತ್ಯಾದಿಗಳಲ್ಲಿ ಹೇಳಿದ ಪ್ರಕಾರವೂ ಇಟ್ಟು ಕೊಳ್ಳಬೇಕು. ಮಹತ್ತತ್ವದಿಂದ ಅವ್ಯಕ್ತ ತತ್ವಾಭಿಮಾನಿಯಾದ ಲಕ್ಷ್ಮೀದೇವಿಯು ಶ್ರೇಷ್ಠಳು. ಎಂತ ಲಕ್ಷ್ಮೀದೇವಿಯಲ್ಲಿ ಅವ್ಯಕ್ತ ಶಬ್ದಪ್ರಯೋಗವು ವೇದದಲ್ಲಿ ಇದ್ದುದರಿಂದ ಹಿಂದೆ ಹೇಳಿದ ಶ್ರುತಿಯಲ್ಲಿರುವ ಅವ್ಯಕ್ತ ಶಬ್ದದಿಂದ ಪ್ರಕೃತಿ ತತ್ವಕ್ಕೆ ಅಭಿಮಾನಿನಿಯಾದ ಲಕ್ಷ್ಮೀದೇವಿಯನ್ನು ಇಟ್ಟುಕೊಳ್ಳಬೇಕು. (೩) ಯಾವುದು ಸತ್ವರಜಸ್ತಮೋಗುಣಗಳಿಗೆ ಅಭಿಮಾನಿಯಾಗಿರುವುದರಿಂದ ತ್ರಿಗುಣ ಎಂದೂ ಕಾರ್ಯಕಾರಣ ಗಳಿಗೆ ಅಭಿಮಾನಿಯಾಗಿರುವುದರಿಂದ ಸದಸದಾತ್ಮಕವೆಂದೂ ನಿತ್ಯವಾದ ಅವ್ಯಕ್ತ ಎನಿಸಿಕೊಂಡ ಶ್ರೀತತ್ವ ಇದೆಯೋ, ಅದನ್ನು ಪ್ರಧಾನವೆಂದೂ, ಪ್ರಕೃತಿಯೆಂದೂ ಅಕಾರ್ಯವನ್ನಾಗಿಯೂ, ಕಾರ್ಯವನ್ನು ಹುಟ್ಟಿ ಸತ್ಯದನ್ನಾಗಿಯೂ ಹೇಳುತ್ತಾರೆ. ಎಂದು ಭಾಗವತದಲ್ಲಿ ಅವ್ಯಕ್ತ ಶಬ್ದವು ಲಕ್ಷ್ಮೀದೇವಿಯಲ್ಲಿ ಪ್ರಯೋ ವಾಗಿದೆ. (೪) ಬ್ರಹ್ಮಾದಿಗಳಿಂದ ಉತ್ತಮಳಾದ ಅಕ್ಷರಶಬ್ದ ವಾಚ್ಯಳಾದ ಲಕ್ಷ್ಮೀದೇವಿಯಿಂದ ಶ್ರೀಪರ ಮಾತ್ಮನು ಅತ್ಯುತ್ತಮನು, ಎಂಬುವ ಶ್ರುತಿಯಿಂದ ಆ ಲಕ್ಷ್ಮೀದೇವಿಯು ಅಕ್ಷರಳು ಎನಿಸುತ್ತಾಳೆ (೫) (ಯಾರು ನಿನ್ನನ್ನು ಭಗವಂತನೆನಿಸಿದ ವಾಸುದೇವನನ್ನು ಸಗುಣ ಬ್ರಹ್ಮನನ್ನಾಗಿ ಉಪಾಸನೆಮಾಡು ತ್ತಾರೋ, ಯಾರು ಅಕ್ಷರನೆನಿಸಿದ ಅವ್ಯಕ್ತನೆಂಬುವ ಪರಬ್ರಹ್ಮನನ್ನು ಅಂದರೆ ನಿರ್ಗುಣ ಬ್ರಹ್ಮನನ್ನಾ ಉಪಾಸನೆಮಾಡುತ್ತಾರೋ, ಅವರಲ್ಲಿ ಶ್ರೇಷ್ಠರು ಯಾರು. ಹೀಗೆ ಪ್ರಶ್ನವಾಕ್ಯದ ಅರ್ಥವೆಂದು ಇತರ ಹೇಳುತ್ತಾರೆ. ಅದು ಅಯುಕ್ತವೆನ್ನುತ್ತಾರೆ ) ಪರಬ್ರಹ್ಮನು ಪರಮಾತ್ಮನಾದ ನಿನ್ನಿಂದ ಬೇರೆಯಲ್ಲ

(೬) ವಿಜ್ಞಾನತತ್ವಂ ಗುಣಸನ್ನಿರೋಧಂ ತೇನಾಽತ್ಮನಾಽತ್ಮಾನಮುಪೈತಿ ಶಾಂತಿಂ । ಆನಂದ ಏತಾಂ ಗತಿಂ ಭಾಗವತೋ ಗತೋ ಯಃ ವಿಜ್ಞಾನತತ್ವದಲ್ಲಿರುವ ಶ್ರೀಪರಮಾತ್ಮನಿಂದ ಸತ್ವಾದಿಗುಣ ಗಳಿಲ್ಲದಿರುವ ಸಮಸ್ತಕ್ಕೂ ಮೂಲಕಾರಣನಾದ ಮಹತ್ತತ್ವಾಭಿಮಾನಿಯಾದ ವಿರಿಂಚನಲ್ಲಿರುವ ವಿಜ್ಞಾನ ನಾಮಕನಾದ ಶ್ರೀಹರಿಯನ್ನು ಹೊಂದುತ್ತಾನೆ. ಹೀಗೆ ಸರ್ವಾಂತರ್ಯಾಮಿ ರೂಪಗಳಿಂದ ವಿಶೇಷ ವಾದ ಮಹತ್ತತ್ವಾಂತರ್ಯಾಮಿಯಾದ ವಿಜ್ಞಾನನಾಮಕ ಹರಿಯು ವಿರಿಂಚನಿಂದ ಕೂಡಿಕೊಂಡು [illegible] ಯಲ್ಲಿರುವ ಆನಂದನಾಮಕ ಹರಿಯನ್ನು ಹೊಂದುತ್ತಾನೆ. ಆ ಪೂರ್ಣಾನಂದನಾದ ಆನಂದನಾಮಕ ಮಹತ್ತತ್ವದಲ್ಲಿದ್ದ ಶ್ರೀವಿಷ್ಣುವು ದ್ವಿಪರಾರ್ಧಾವಸಾನಕಾಲದಲ್ಲಿ ಸರ್ವಾತ್ಮಕನಾದ ಸರ್ವಾಂತರ್ಯಾಮಿ ಯಾದ ಗುಣಪರಿಪೂರ್ಣನಾದ ವಾಸುದೇವನಲ್ಲಿ (ಜೀವರ ಸಮುದಾಯವು ತಮ್ಮತಮ್ಮ ಯೋಗ್ಯತಾನು ಸಾರ ಗುಣಪೂರ್ಣ[illegible] ಸುತ್ತಿರುತ್ತದೆ) (ಇಲ್ಲಿ ಪರಬ್ರಹ್ಮನೇ ಸಗುಣಬ್ರಹ್ಮನೆಂದು ಹೇ ದ್ದಾರೆ ಅದಕಾರಣ ಸಗುಣಬ್ರಹ್ಮ ನಿರ್ಗುಣಬ್ರಹ್ಮ ಎಂದು ಬ್ರಹ್ಮಭೇದವಿರುವುದಿಲ್ಲ. ಎಂದು ಭಾಗವತ ದಲ್ಲಿದೆ

ಹೀ—ಸಗುಣಬ್ರಹ್ಮನು ಕರಚರಣಾದಿಗಳುಳ್ಳ ಶರೀರವುಳ್ಳವನು. ಅಶಬ್ದಮಸ್ಪರ್ಶಮರೂಪಮ ವ್ಯಯಂ ಇತ್ಯಾದಿ ಪ್ರಮಾಣಗಳಿಂದ ನಿರ್ಗುಣ ಬ್ರಹ್ಮನಿಗೆ ಇಂತಹ ರೂಪವಿಲ್ಲ. ಆದಕಾರಣ ಕರಚರಣಾದಿಗಳುಳ್ಳ ಸಗುಣ ಬ್ರಹ್ಮನೇ ಪರಬ್ರಹ್ಮನು. ನಿರ್ಗುಣ ಬ್ರಹ್ಮನೆಂದು ಹೇಳುವುದು ಹೇಗೆ ಎಂದರೆ—

ಭಾ ॥ (೧) ರೂಪಂ ಚೇದೃಶಂ ಸಾಧಿತಂ ಪುರಸ್ತಾತ್ । ಉಪಾಸನಂ ಚ ತಥೈವ ಕಾರ್ಯಂ॥ (೨) ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾದಿತ್ಯಾರಭ್ಯ ತಮೇವಂ ವಿದ್ವಾನಮೃತ ಇಹ ಭವತಿ ನಾನ್ಯಃ ಪಂಥಾ ಅಯನಾಯ ವಿದ್ಯತ ಇತಿ ಹಿ ಸಾಭ್ಯಾಸಾ ॥ (೩) ಆದಿತ್ಯವರ್ಣತ್ವಾದಿಶ್ಚ ನ ವ್ಯಥೋಪಚಾರತ್ವೇನಾಂಗೀಕಾರ್ಯಃ ॥ (೪) ತಥಾಚ ಸಾಮವೇದೇ ಸೌಕರಾಯಣಶ್ರುತಿಃ । ಸ್ವಾಣುರ್ಹವೈ ಪ್ರಾಜಾಪತ್ಯಃ ಸ ಪ್ರಜಾಪತಿಂ ಪಿತರಮೇತ್ಯೋವಾಚ। ಮುಮುಕ್ಷುಭೀರಾಧುಭಿ(ಭಿಸ್ಸಾಧುಭಿಃ)ಪೂತಪಾಪ್ಮೈಃ ಕಿಮು ಹವೈ ಕಾರಕಂ ಕಾರವಾಚ್ಯಂ । ಧ್ಯಾನಂ ಚ ತಸ್ಯಾಽಽಪ್ತರುಚೇಃ ಕಥಂ ಸ್ಯಾದ್ಧ್ಯೇಯಶ್ಚ ಕಃ ಪುರುಷೋಽಲೋಮಪಾದ ಇತಿ । ತಂ ಹೋವಾಚ । ಏಷ ವಿಷ್ಣುಸ್ತಾರಕೋಽಲೋಮಪಾದೋ ಧ್ಯಾನಂ ಚ ತಸ್ಯಾಽಽಪ್ತರುಚೇರ್ವದಾಮಿ ॥ (೫) ಸೋಽನಂತಶೀರ್ಷೋ ಬಹುವರ್ಣಃ ಸುವರ್ಣೋ ಧ್ಯೇಯಃ ಸ ವೈ ಲೋಹಿತಾದಿತ್ಯವರ್ಣಃ । ಶ್ಯಾಮೋಽಥವಾ ಹೃದಯೇ ಸೋಽಷ್ಟಬಾಹೂರನಂತವೀರ್ಯೋಽನಂತಬಲಃ ಪುರಾಣ ಇತಿ ॥ (೬) ಅರೂಪತ್ವಾದೇಸ್ತು ಗತಿರುಕ್ತಾ ಪುರಸ್ತಾತ್ । ಪುರುಷಭೇದಶ್ಚ ಪ್ರಶ್ನಾದೌ ಪ್ರತೀಯತೇ । ತ್ವಾಂ ಪರ್ಯುಪಾಸತೇ ಯೇ ಚಾಪ್ಯಕ್ಷರಮಿತ್ಯಾದೌ ॥ ೫ ॥ ॥ ೧,೨ ॥

ಅ ॥ (೧) ಪರಬ್ರಹ್ಮನಿಗೂ ಇಂತಹ ಅಪ್ರಾಕೃತರೂಪವಿದೆ. ಎಂದು ಹಿಂದೆಯೇ ಸಾಧಿಸಲ್ಪಟ್ಟಿದೆ. ಹಾಗೆಯೇ **ಅನೇಕಬಾಹೂದರವಕ್ತ್ರನೇತ್ರಂ** ಇತ್ಯಾದಿ ಪ್ರಕಾರ ಸಾಕಾರನೆಂದೇ ಪರಬ್ರಹ್ಮನ ಉಪಾಸನೆಯನ್ನು ಮಾಡಬೇಕು. (ನಿರಾಕಾರನೆಂದು ಉಪಾಸನೆ ಮಾಡಕೂಡದು) (ಅಂದರೆ ಪರಬ್ರಹ್ಮನು ನಿರ್ಗುಣನು ನಿರಾಕಾರನು, ಎಂಬುವ ಉಪಾಸನೆಯು ಮಿಥ್ಯೋಪಾಸನೆಯಾಗಿರುವುದರಿಂದ ಅದರಿಂದ ಅನರ್ಥವುಂಟಾಗುವದರಿಂದ ಯುಕ್ತ ಕರಚರಣಾದ್ಯವಯವಗಳಿಲ್ಲದವನೆಂದು ಉಪಾಸನಾಮಾಡಕೂಡದು.) (೨) (ಆ ಪರಬ್ರಹ್ಮನು ಅವಯವಗಳುಳ್ಳವನೆಂದು ಏಕೆ ಒಡಂಬಡಬೇಕೆಂದರೆ—) ಶ್ರೀಪರಮಾತ್ಮನು ಅಪ್ರಾಕೃತ ಅನಂತಶಿರಸ್ಸಗಳುಳ್ಳವನು, ಗುಣಪರಿಪೂರ್ಣನು, ಅನಂತಕಣ್ಣುಗಳುಳ್ಳವನು, ಅನಂತಪಾದಗಳುಳ್ಳವನು ಎಂದಾರಂಭಿಸಿ ಆ ಪರಮಾತ್ಮನನ್ನು ಹಿಂದೆ ಹೇಳಿದ ಪ್ರಕಾರ ಅಪ್ರಾಕೃತ ದಿವ್ಯಕರಚರಣಾದ್ಯಾಕಾರಗಳುಳ್ಳವನೆಂದು ತಿಳಿದವನು ಮುಕ್ತನಾಗುತ್ತಾನೆ. ಮುಕ್ತಿಗೆ ಇಂತಹ ಜ್ಞಾನದಿಂದ ಬೇರೆ ಯಾವ ಮಾರ್ಗವೂ ಇಲ್ಲವೇ ಇಲ್ಲ. ಹೀಗೆ ಶ್ರೀಪರಮಾತ್ಮನಿಗೆ ಆಕಾರವಿದೆ, ಎಂಬುವ ಉಪಾಸನೆಯಿಂದ ನಿಶ್ಚಯವಾಗಿ **ಮೋಕ್ಷಾಖ್ಯ** ಫಲವು ಆಗುತ್ತದೆಂದು ಶ್ರುತಿಯು ಹೇಳುತ್ತದೆ. (೩) **ಆದಿತ್ಯವರ್ಣಂ ತಮಸಸ್ತು ಪಾರೇ** ಇತ್ಯಾದಿಗಳಲ್ಲಿ ಶ್ರೀಪರಮಾತ್ಮನಿಗೆ ಆದಿತ್ಯನಂತೆ ವರ್ಣಾದಿಗಳು ಇವೆ ಎಂದು ಹೇಳಿದ್ದು **ಅಂಧಕಾರಾದಿ ದೋಷಗಳು** ಇಲ್ಲದಿರುವುದರಿಂದಲೇ ಹೇಳಿದ್ದು. ವಸ್ತುತಃ ಪರಮಾತ್ಮನಿಗೆ ಕಿತ್ತಿಳಿ ಲಾದಿ ವರ್ಣಗಳು ಇಲ್ಲವೆಂದು ಬಾಧಕವಿಲ್ಲದೆ ಅಪಾರ್ಥವನ್ನು ಅಂಗೀಕರಿಸಕೂಡದು. (೪) (ಪರಮಾತ್ಮನಿಗೆ ಆದಿತ್ಯನಂತೆ ವರ್ಣಾದಿಗಳು ಇವೆ, ಎಂಬುವಲ್ಲಿ ಸ್ಪಷ್ಟವಾದ ಶ್ರುತಿಯನ್ನ ಹೇಳುತ್ತಾರೆ—) **ಚತುರ್ಮುಖಬ್ರಹ್ಮನ** ಮಗನಾದ ರುದ್ರನು ಪ್ರಜೆಗಳಿಗೆ ತಂದೆಯಾದ ಚತುರ್ಮುಖಬ್ರಹ್ಮನ ಬಳಿಗೆ **ಹೋಗಿ** ಪ್ರಶ್ನೆಮಾಡಿದನು. ಮೋಕ್ಷವನ್ನು ಬಯಸುತ್ತಿರುವ, ಪಾಪಗಳನ್ನು ಕಳೆ

ಕೊಂಡಿರುವ ಮೋಕ್ಷಸಾಧಕರಾದ ಉಪಾಸಕರಿಂದ ಉಪಾಸ್ಯವಾದುದು ಧ್ಯೇಯವಾದುದು ಯಾವುದು! ಓಂಕಾರವಾಚ್ಯವಾದುದು ಸಂಸಾರವನ್ನು ದಾಟಿಸಿ ಮೋಕ್ಷವನ್ನು ಹೊಂದಿಸಿಕೊಡುವುದು ಯಾವುದು! ವ್ಯಾಪ್ತ ತೇಜಸ್ಸುಳ್ಳ ಆ ಶ್ರೀಹರಿಯ ಧ್ಯಾನವನ್ನು ಯಾವ ಪ್ರಕಾರದಿಂದ ಮಾಡಬೇಕು. ಕೇಶಾಂತ ಪಾದ ಮೊದಲಾದ ಪ್ರಾಕೃತ ಅವಯವಗಳಿಲ್ಲದಿರುವ ಗುಣಪರಿಪೂರ್ಣನಾದವನು ಯಾವನು? ಎಂಬುವುದನ್ನು ಹೇಳು. ಹೀಗೆ ಪ್ರಶ್ನೆ ಮಾಡಿದ ರುದ್ರನಿಗೆ ಚತುರ್ಮುಖಬ್ರಹ್ಮನು ಉಪದೇಶಿಸಿದನು. ಪ್ರಾಕೃತ ಕೇಶಾಂತ ಪಾದಾದ್ಯವಯವಗಳಿಲ್ಲದಿರುವ ಶ್ರೀಪರಮಾತ್ಮನು ಸಂಸಾರವನ್ನು ದಾಟಿಸುವವನು, ವ್ಯಾಪ್ತವಾದ ತೇಜಸ್ಸುಳ್ಳ ಶ್ರೀಪರಮಾತ್ಮನ ಧ್ಯಾನಮಾಡುವ ಪ್ರಕಾರವನ್ನು ಹೇಳುತ್ತೇನೆ. (೫) ಆ ಶ್ರೀಪರಮಾತ್ಮನು ಅನಂತ ಅಪ್ರಾಕೃತ ದಿವ್ಯ ಶಿರಸ್ಸುಗಳುಳ್ಳವನು, ಶುಕ್ಲರೂಪಮೊದಲಾದ ಅನೇಕ ವರ್ಣಗಳುಳ್ಳವನು, ಸುವರ್ಣದಂತೆ ವರ್ಣಗಳುಳ್ಳವನು, ಆ ಶ್ರೀಪರಮಾತ್ಮನೇ ಲೋಹಿತನಾದ ಆದಿತ್ಯನಂತೆ ವರ್ಣವುಳ್ಳವನು. ಅಥವಾ ಹೃದಯದಲ್ಲಿ ಇರುವ ಶ್ರೀಪರಮಾತ್ಮನು ಶ್ಯಾಮವರ್ಣನು, ಎಂಟು ಬಾಹುಗಳುಳ್ಳವನು, ಅನಂತ ವೀರ್ಯಗಳುಳ್ಳವನು ಅಪರಿಮಿತ ಬಲವುಳ್ಳವನು. ಪುರಾತನನು (ಶಬ್ದದೇಶಪ್ರಕಾರನು.) ಹೀಗೆ ಇರುವವನೆಂದು ಧ್ಯಾನಿಸಬೇಕು. (ಅಂದರೆ ಮುಮುಕ್ಷುಗಳು ಯಾರನ್ನು ಧ್ಯಾನಿಸಬೇಕು ಎಂಬುವ ಪ್ರಶ್ನೆಗೂ ಓಂಕಾರವಾಚ್ಯವಾದ ತಾರಕ ವಸ್ತುವು ಯಾವುದು ಎಂಬುವ ಪ್ರಶ್ನೆಗೂ ವಿಷ್ಣುಃ ಎಂದೇ ಉತ್ತರವು. ಪರಮಾತ್ಮನನ್ನು ಹೇಗೆ ಧ್ಯಾನಿಸಬೇಕೆಂಬುವ 3ನೇ ಪ್ರಶ್ನೆಗೂ ಅಪ್ರಾಕೃತ ದಿವ್ಯ ಕರಚರಣಾದ್ಯಾಕಾರವುಳ್ಳವನೆಂದೇ ಧ್ಯಾನಿಸಬೇಕೆಂದೇ ಉತ್ತರವು) (೬) (ಪರಮಾತ್ಮನಿಗೆ ರೂಪಾದಿಗಳು ಇವೆ ಎಂದು ಒಪ್ಪಿದರೆ ಅಶಬ್ದಮಸ್ಪರ್ಶಮರೂಪಮವ್ಯಯಂ ಇತ್ಯಾದಿ ಪ್ರಮಾಣ ವಿರೋಧವು ಬರುವುದಂದರೆ—) ಅರೂಪ ಇತ್ಯಾದಿಗಳಿಗೆ ಪ್ರಾಕೃತರೂಪಾದಿಗಳಿಲ್ಲ, ಅಪ್ರಾಕೃತ ದಿವ್ಯರೂಪವಿದೆ ಇತ್ಯಾದಿ ರೂಪವಾದ ಅರ್ಥವನ್ನು ಹೇಳಬೇಕೆಂದು ಹಿಂದೆ ಹೇಳಿದೆ (ಈ ಶ್ಲೋಕದಿಂದಲೂ ಸಗುಣ ನಿರ್ಗುಣೋಪಾಸನೆಯು ಯುಕ್ತವೆಂದು ಹೇಳುತ್ತಾರೆ—) ಪರರು ಪ್ರಥಮತಃ ಸಗುಣ ಬ್ರಹ್ಮನನ್ನು ಪಾಸನಾಮಾಡಿ ಶುದ್ಧಾಂತಃಕರಣರಾಗಿ ಆ ಶ್ರೀಹರಿಯನ್ನೇ ನಿರಾಕಾರನನ್ನಾಗಿಯೂ ನಿರ್ಗುಣನನ್ನಾಗಿಯೂ ಉಪಾಸನೆ ಮಾಡುತ್ತಾರೆ ... ಬ್ರಹ್ಮನಿಗೇನೇ ಕ್ರಮದಿಂದ ಧ್ಯಾನದಲ್ಲಿ ಎರಡು ಪ್ರಕಾರಗಳನ್ನು ಹೇಳುತ್ತಾರೆ ಗೀತಾದಲ್ಲಿ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ಯೇ ಚಾಪ್ಯಕ್ಷರಮವ್ಯಕ್ತಂ ಇತ್ಯಾದಿಗಳಲ್ಲಿ ಪ್ರಶ್ನಾದಿಗಳಲ್ಲಿ ಉಪಾಸನಾ ಮಾತ್ರ ಪುರುಷರ ಭೇದವೂ, ಪರಮಾತ್ಮ ಲಕ್ಷ್ಮೀ ಎಂದು ಧ್ಯೇಯ ವಸ್ತುಗಳೆರಡೂ ತೋರುತ್ತವೆ ಈ ಶ್ಲೋಕಗಳಿಂದ ಪರರು ಹೇಳಿದ ಅರ್ಥವು ಯುಕ್ತವಲ್ಲ ॥೫॥

ಪೀ—ಲಕ್ಷ್ಮೀದೇವಿಯನ್ನುಪಾಸನೆ ಮಾಡುವವರಿಗೆ ಮೋಕ್ಷವಿಲ್ಲವೆಂದು ಹೇಳಿದರೆ ಶ್ರಿಯಃ ಪತಾಪಾಃ ಇತ್ಯಾದಿ ಶ್ರುತಿವಿರೋಧವು ಬರುವುದು. ಲಕ್ಷ್ಮೀದೇವಿಯ ಉಪಾಸನೆಯಿಂದಲೂ ಮೋಕ್ಷವು ಸಿಗುವುದಾದರೆ ಶ್ರೀಕೃಷ್ಣನ ಉಪಾಸಕರಿಗೇನೇ ಉತ್ತಮತ್ವವು ಹೇಗೆ? ಎಂದರೆ—

ಗೀ॥ ಯೇ ತ್ವಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೇ ।
ಸರ್ವತ್ರಗಮಚಿಂತ್ಯಂ ಚ ಕೂಟಸ್ಥಮಚಲಂ ಧ್ರುವಂ ॥ ೩ ॥
ಸನ್ನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ ।
ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ ॥ ೪ ॥

ಅ ॥ (೧) ಯೇ ತು=ಯಾರು ಅಕ್ಷರಂ=ಶರೀರ ನಾಶವಿಲ್ಲದಿರುವುದರಿಂದ ಅಕ್ಷರ ಶಬ್ದವಾಚ್ಯನಾದ, ಅನಿರ್ದೇಶ್ಯಂ—ಸಾಕಲ್ಯೇನ ವೇದಾದಿಗಳಿಂದ ತಿಳಿಯಲಿಕ್ಕೆ ಅಶಕ್ಯನಾದ, ಸರ್ವತ್ರಗಂ—ಸರ್ವತ್ರ

ನ್ಯಾಕ್ಷನಾಗಿರುವ, ಅಚಿಂತ್ಯಂ= ಹೆಚ್ಚು ಗುಣಗಳಿರುವುದರಿಂದ ತಿಳಿದುಕೊಳ್ಳಲಶಕ್ಯಳಾದ, ಕೂಟಸ್ಥಂ= ಅವ್ಯಾಕೃತಾಕಾಶದಲ್ಲಿ ಅಭಿಮಾನಿನಿಯಾಗಿರುವ, ಅಚಲಂ= ಯಾವಾಗಲೂ ತನ್ನ ಪದವಿಯಿಂದ ಕದಲ ದಿರುವ. ಧ್ರುವಂ= ವಿಕಾರವಿಲ್ಲದಿರುವ, ಅವ್ಯಕ್ತಂ= ಜಗತ್ತಿಗೆ ಉಪಾದಾನ ಕಾರಣವಾದ ಪ್ರಕೃತಿಗೆ ಅಭಿಮಾನಿಯಾಗಿರುವುದರಿಂದ ಅವ್ಯಕ್ತ ಎಂದು ಹೆಸರುಳ್ಳ ಲಕ್ಷ್ಮೀದೇವಿಯನ್ನು, ಇಂದ್ರಿಯಗ್ರಾಮಂ= ಚಕ್ಷುರಾದಿ ಇಂದ್ರಿಯಗಳ ಸಮೂಹವನ್ನು, ಸನ್ನಿಯಮ್ಯ= ವಿಷಯಗಳಲ್ಲಿ ಹೋಗದಿದ್ದಂತೆ ಮಾಡಿ ತನ್ನಾಗಿ ತನ್ನ ವಶದಲ್ಲಿಯೇ ಇಟ್ಟುಕೊಂಡು, ಸರ್ವತ್ರ= ಎಲ್ಲಾ ಪ್ರಾಣಿಗಳಲ್ಲಿಯೂ, ಸಮಬುದ್ಧಯಃ= ಸರ್ವೋತ್ತಮನಾದ ಪರಬ್ರಹ್ಮನು ಲಕ್ಷ್ಮೀ ಸಮೇತನಾಗಿಯೇ ಇರುತ್ತಾನೆಂದು ಬುದ್ಧಿಯುಳ್ಳವರಾಗಿ, ಸರ್ವಭೂತಹಿತೇ= ಸಮಸ್ತ ಪ್ರಾಣಿಗಳಿಗೂ ಹಿತವಾಗಬೇಕೆಂಬುವಲ್ಲಿಯೇ, ರತಾಃ= ಆಸಕ್ತರಾದವರಾಗಿ, ಪರ್ಯುಪಾಸತೇ= ವಿಷ್ಣು ಭಕ್ತಿ ವಿಷ್ಣೂತ್ತಮತ್ವ ಜ್ಞಾನಾದಿ ಪೂರ್ವಕವಾಗಿಯೇ, ಉಪಾಸನಾ ಮಾಡು ತ್ತಾರೆ, ತೇ= ಅಂತಹವರು, ಮಾಮೇವ= ನನ್ನನ್ನೇ, ಪ್ರಾಪ್ನುವಂತಿ= ಹೊಂದುತ್ತಾರೆ ॥ ೩, ೪ ॥

ಭಾ ॥ (೧) ಭವಂತು ತ್ವದುಪಾಸಕಾ ಏವೋತ್ತಮಾಃ । ಇತರೇಷಾಂ ತು ಕಿಂ ಫಲಮಿತ್ಯತ ಆಹ । ಯೇ ತ್ವಿತ್ಯಾದಿನಾ ॥ (೨) ಅನಿರ್ದೇಶ್ಯತ್ವಂ ಚೋಕ್ತಂ ಭಾಗವತೇ ಮಾಯಾಯಾಃ । ಅಪ್ರತರ್ಕ್ಯಾದನಿರ್ದೇಶ್ಯಾದಿತಿ ಕೇಷ್ವಪಿ ನಿಶ್ಚಯ ಇತಿ । ಈಶ್ವರಸ್ತು ದೈವಶಬ್ದೇನೋಕ್ತೋ ದೈವಮನ್ಯೇ ಪರ ಇತ್ಯತ್ರ ॥ (೩) ಉಕ್ತಂ ಚ ಸಾಮವೇದೇ ಕಾಷಾಯಣಶ್ರುತೌ । ನಾಸದಾಸೀನ್ನೋ ಸದಾಸೀತ್ತದಾನೀಮಿತಿ ನ ಮಹಾಭೂತಂ ನೋಪಭೂತಂ ತದಾಽಸೀದಿತ್ಯಾದ್ಯಾರಭ್ಯ ತಮ ಆಸೀತ್ತಮಸಾ ಗೂಳ್ಹಮಗ್ರ ಇತಿ । ತಮೋ ಹ್ಯವ್ಯಕ್ತಮಜರಮನಿರ್ದೇಶ್ಯಮೇಷಾ ಹ್ಯೇವ ಪ್ರಕೃತಿರಿತಿ ॥ (೪) ಸರ್ವಗಾಚಿಂತ್ಯಾದಿಲಕ್ಷಣಾ ಚ ಸಾ ॥ ೧ ॥

ಭಾ ॥ (೧) ನಿನ್ನನ್ನುಪಾಸನೆ ಮಾಡುವವರೇ ಉತ್ತಮರಾಗಲಿ, ಬೇರೆಯವರನ್ನು ಉಪಾಸನಾ ಮಾಡು ವವರಿಗೆ ಯಾವುದು ಫಲವು? ಎಂದರೆ— ಯೇ ತ್ವಕ್ಷರಂ ಇತ್ಯಾದಿಗಳಿಂದ ಸಮಾಧಾನವನ್ನು ಹೇಳುತ್ತಾರೆ. (ಅಂದರೆ ಲಕ್ಷ್ಮೀದೇವಿಯನ್ನುಪಾಸನೆ ಮಾಡುವವರಿಗೆ ಮೋಕ್ಷರೂಪ ಫಲವಿಲ್ಲವಾದರೆ ಶ್ರಿಯಂ ವಸಾನಾ ಇತ್ಯಾದಿ ಶ್ರುತಿವಿರೋಧವು. ಮೋಕ್ಷರೂಪ ಫಲವಿದ್ದರೆ ಭಗವದುಪಾಸಕರಿಗೇನೇ ಉತ್ತಮತ್ವವು ಹೇಗೆ ಎಂದು ಆಕ್ಷೇಪವು) (೨) (ಅನಿರ್ದೇಶ್ಯತ್ವಾದಿ ವಿಶೇಷಣಗಳು ಪರಬ್ರಹ್ಮನಿಗೆ ಕೂಡುವಂತೆಯೇ ಲಕ್ಷ್ಮೀದೇ ವಿಗೂ ಕೂಡುತ್ತವೆನ್ನುತ್ತಾರೆ—) ಭಾಗವತದಲ್ಲಿ ಲಕ್ಷ್ಮೀದೇವಿಗೆ ಅನಿರ್ದೇಶ್ಯತ್ವವು (ಸಂಪೂರ್ಣವಾಗಿ ಶಬ್ದ ಗಳಿಂದ ಹೇಳಲ್ಪಡದಿರುವಿಕೆಯು) ಹೇಳಲ್ಪಟ್ಟಿದೆ. ಸರ್ವಾತ್ಮನಾ ಅನುಮಾನಕ್ಕೆ ವಿಷಯವಾಗದಿರುವುದ ರಿಂದ ಪ್ರಧಾನವೃತ್ತಿಯಿಂದ ಶಬ್ದ ಪರಂಪರೆಯಿಂದ ಸಮಸ್ತ ಜೀವರೂ ಪ್ರಕೃತಿಯಿಂದ ಆಚ್ಛಾದಿತರಾಗಿರು ವದರಿಂದ ಎಂದು ಕೆಲವು ಜನರ ನಿಶ್ಚಯವು. ಭಾವರೂಪ ಅಜ್ಞಾನದೃಷ್ಟಿಯಿಂದ ಎಂತ ಮಾಯಾವಾದಿಗಳ ನಿಶ್ಚಯವು. ಎಲೋ ರಾಜಶ್ರೇಷ್ಠನೇ ಈ ಪಕ್ಷಗಳಲ್ಲಿ ಶ್ರುತಿಸ್ಮೃತ್ಯನುಕೂಲವಾದುದನ್ನು ವಿಚಾರ ಮಾಡು. ಇತ್ಯಾದಿ ವೃಷಭರೂಪನಾದ ಧರ್ಮನಾದ ನನಗೆ ಪಾದಭಂಗವಾಯಿತು. ಇತ್ಯಾದಿಗಳಿಂದ ಭಾಗವತದಲ್ಲಿ ಲಕ್ಷ್ಮೀದೇವಿಗೆ ಅನಿರ್ದೇಶ್ಯತ್ವವನ್ನು ಹೇಳಿದೆ (೩) ಇಲ್ಲಿದ್ದ ಅನಿರ್ದೇಶ್ಯಪದದಿಂದ ಶ್ರೀಹರಿಯನ್ನು ವಿಶೆ ತಿಳಿದುಕೊಳ್ಳಬಾರದೆಂದರೆ-) ಕೇಚಿದ್ವ್ಯಕಲ್ಪ್ಯವಚಸಾ ಆಹುರಾತ್ಮಾನಮಾತ್ಮನಃ । ದೈವಮನ್ಯೇಪರೇ ಕರ್ಮಸ್ವಭಾವಮಪರೇ ಪ್ರಭುಂ ಎಂಬುವ ವಾಕ್ಯದಲ್ಲಿ ದೈವಶಬ್ದದಿಂದ ಶ್ರೀಹರಿಯು ಪೂರ್ವದಲ್ಲಿ ಹೇಳ ಲ್ಪಟ್ಟಿದ್ದಾನೆ (೩) ಮಹಾಲಕ್ಷ್ಮಿಗೆ ಅನಿರ್ದೇಶ್ಯತ್ವವಿದೆ ಎಂಬುವಲ್ಲಿ ಸ್ಪಷ್ಟಪ್ರಮಾಣವನ್ನು ಹೇಳುತ್ತಾರೆ—]

ಸಾಮವೇದದಲ್ಲಿ ಕಾಷಾಯಣ ಶ್ರುತಿಯಲ್ಲಿ ಸ್ಪಷ್ಟವಾಗಿ ಈ ಪ್ರಮೇಯವು ಹೇಳಲ್ಪಟ್ಟಿದೆ. ಪ್ರಲಯಕಾಲ ದಲ್ಲಿ ಅಸತ್ತು (ಕಾರಣವೂ) ಇರಲಿಲ್ಲ. ಸತ್ತೂ (ಕಾರ್ಯವೂ) ಇರಲಿಲ್ಲ. ಪ್ರಲಯಕಾಲದಲ್ಲಿ ಆಕಾಶ ವಾಯು ರೂಪವಾದ ಮಹಾಭೂತವೂ ಇರಲಿಲ್ಲ. ತೇಜಸ್ಸು ಜಲ ಭೂರೂಪವಾದ ಉಪಭೂತವೂ ಇರ ಲಿಲ್ಲ. ಇತ್ಯಾದಿಗಳನ್ನಾರಂಭಿಸಿ ಪ್ರಳಯಕಾಲದಲ್ಲಿ ತಮಸ್ಸು ಇತ್ತು. (ತಮೋಭಿಮಾನಿಯಾದ ದುರ್ಗಾ ದೇವಿಯು) ಇರುತ್ತಿದ್ದಳು. ಪ್ರಳಯಕಾಲದಲ್ಲಿ ಅಂತಹ ತಮಸ್ಸಿನಿಂದ ಎಲ್ಲವೂ ಆಚ್ಛಾದಿತವಾಗಿತ್ತು. ಲಕ್ಷ್ಮೀದೇವಿಯು ಅವ್ಯಕ್ತವೆನಿಸುತ್ತಾಳೆ. ಮುದಿತನವಿಲ್ಲದಿರುವವಳು. ಶಬ್ದಕ್ಕೆ ಅಗೋಚರವು. ಅವ್ಯಕ್ತಾ ಭಿಮಾನಿಯೇ ಚಿತ್ಪ್ರಕೃತಿಯಾದ ಮಹಾಲಕ್ಷ್ಮೀದೇವಿಯು. (೪) ಆ ಲಕ್ಷ್ಮೀದೇವಿಯು ಸರ್ವತ್ರ ವ್ಯಾಪ್ತಳು. ಹೀಗೆಯೇ ಇರುವವಳೆಂದು ಆಲೋಚಿಸಲಿಕ್ಕೂ ಅಶಕ್ಯಳು, ಇತ್ಯಾದಿ ಲಕ್ಷಣಗಳುಳ್ಳವಳು ...

ಭಾ ॥ (೧) ತಥಾ ಹಿ ಮೋಕ್ಷಧರ್ಮೇ । ನಾರಾಯಣಗುಣಾಶ್ರಯಾದಜರಾದತೀಂದ್ರಿಯಾ ದಗ್ರಾಹ್ಯಾದಸಂಭವತಃ ಅಸತ್ಯಾದಹಿಂಸ್ರಾಲ್ಲಲಾಮಾ ದ್ವಿತೀಯಪ್ರವೃತ್ತಿವಿಶೇಷಾದ ವೈರಾದಕ್ಷಯಾದಮರಾದಮೂರ್ತಿತಃ ಸರ್ವಸ್ಯಾಃ ಸರ್ವಕರ್ತುಃ ಶಾಶ್ವತತಮಃ ಇತಿ ॥ (೨) ಆಸೀದಿದಂ ತಮೋಭೂತಮಪ್ರಜ್ಞಾತಮಲಕ್ಷಣಂ । ಅಪ್ರತರ್ಕ್ಯಮವಿ ಜ್ಞೇಯಂ ಪ್ರಸುಪ್ತಮಿವ ಸರ್ವತ ಇತಿ ಮಾನವೇ ॥ (೩) ಕೂಟಸ್ಥೋಽಕ್ಷರ ಉಚ್ಯತ ಇತಿ ವಕ್ಷ್ಯತಿ । ಕೂಟ ಆಕಾಶೇ ಸ್ಥಿತಾ ಕೂಟಸ್ಥಾ । ಆಕಾಶೇ ಸಂಸ್ಥಿತಾ ಹ್ಯೇಷಾ ತತಃ ಕೂಟಸ್ಥಿತಾ ಮತೇತ್ಯೃಗ್ವೇದಖಿಲೇಷು ॥ (೪) ಸಾ ಸರ್ವಗಾ ನಿಶ್ಚಲಾ ಲೋಕ ಯೋನಿಃ ಸಾ ಚಾಕ್ಷರಾ ವಿಶ್ವಗಾ ವಿರಜಸ್ಕೇತಿ ಸಾಮವೇದೇ ಗೌಪವನಶಾಖಾಯಾಃ ॥ ೨ ॥ ॥ ೩,೪ ॥

ಅ ॥ (೧) ಇದೇ ಅಭಿಪ್ರಾಯವನ್ನು ಮೋಕ್ಷಧರ್ಮದಲ್ಲಿ ಹೇಳಿದೆ. ಶ್ರೀನಾರಾಯಣನ ಗುಣ ಗಳಾದ ಇಚ್ಛಾದಿ ಗುಣಗಳೇ ಆಶ್ರಯಗಳಾಗಿ ಉಳ್ಳವಳು, ಮುದಿತನ ಇಲ್ಲದಿರುವವಳು, ಇಂದ್ರಿಯಗಳಿಗೆ ಅಗೋಚರಳು, ಮನಸ್ಸಿನಿಂದಲೂ ಸ್ವೀಕರಿಸಲಿಕ್ಕೆ ಅಶಕ್ಯಳು, ಉತ್ಪತ್ತಿಯಿಲ್ಲದಿರುವವಳು, ಪ್ರಳಯ ಕಾಲ ದಲ್ಲಿರತಕ್ಕವಳು, ಘಾತುಕಳಾಗದಿರುವವಳು, ಬ್ರಹ್ಮಾದಿಗಳಿಗಿಂತ ಶ್ರೇಷ್ಠಳು, ಕೇವಲ ಪರಮಾತ್ಮಾಧೀನ ವಾದ ಪ್ರವೃತ್ತಿ ವಿಶೇಷವುಳ್ಳವಳು, ವೈರವಿಲ್ಲದವಳು, ಕ್ಷೀಣಳಾಗದಿರುವವಳು, ಮರಣವಿಲ್ಲದಿರುವವಳು. ದೇಹನಾಶವಿಲ್ಲದಿರುವವಳು. ಪ್ರಾಕೃತ ದೇಹವಿಲ್ಲದಿರುವವಳು. ಸರ್ವತ್ರ ವ್ಯಾಪ್ತಳು, ಸರ್ವ ಜಗತ್ತನ್ನು ಸೃಷ್ಟಿಸಿದವಳು, ಇಂತಹ ಸತ್ವರಜಸ್ತಮೋಗುಣಾತ್ಮಕ ಪ್ರಕೃತಿಗೆ ಅಭಿಮಾನಿಯಾಗಿರುವುದರಿಂದ ಶಾಶ್ವತ ತಮಃ ಎನಿಸಿಕೊಂಡ ಲಕ್ಷ್ಮೀದೇವಿಯಿಂದ (ಚತುರ್ಮುಖ ಬ್ರಹ್ಮನು ಹುಟ್ಟಿದನು) (ಈ ಶ್ರುತಿ ಯಿಂದ ಲಕ್ಷ್ಮೀದೇವಿಗೆ ಸರ್ವಗತತ್ವ ಅಚಿಂತ್ಯತ್ವಾದಿ ಲಕ್ಷಣಗಳಿವೆ ಎಂದು ತಿಳಿದು ಬರುತ್ತದೆ.) (೨) ಈ ಪ್ರಸಿದ್ಧಳಾದ ಮಾಯಾರೂಪಳಾದ ಲಕ್ಷ್ಮೀದೇವಿಯು ಯಾವಾಗಲೂ ಹುಟ್ಟದಿರುವವಳು, ಪ್ರತ್ಯಕ್ಷ ಅನುಮಾನ, ಆಗಮಗಳಿಂದ ತಿಳಿಯಲ್ಪಡದಿರುವವಳು. ಇನ್ನೊಬ್ಬರಿಂದ ತಿಳಿಯಲಶಕ್ಯ ಲಕ್ಷಣಗಳುಳ್ಳ ವಳು. ಇತರರಿಂದ ತಿಳಿಯಲಶಕ್ಯ ಲಕ್ಷಣಗಳುಳ್ಳವಳಾದುದರಿಂದ ಹೀಗೆಯೇ ಇರುತ್ತಾಳೆಂದು ಊಹಿಸ ಲಿಕ್ಕೆ ಅಶಕ್ಯಳು, ಸಾಕಲ್ಯೇನ ತಿಳಿಯಲಶಕ್ಯಳು, ಇಂತಹಳು ಪ್ರಲಯಕಾಲದಲ್ಲಿ ಸರ್ವತ್ರ ನಿದ್ರಿತಳಂತೆ ಳಾಗಿ ಇರುತ್ತಿದ್ದಳು, ಎಂದು ಮಾನವ ಧರ್ಮಶಾಸ್ತ್ರದಲ್ಲಿದೆ. (೩) ಕೂಟಸ್ಥಳು ಅಕ್ಷರಳೆನಿಸುತ್ತಾಳೆ ಎಂದು ಗೀತೆಯಲ್ಲಿ ಹೇಳುವರು. ಆಕಾಶದಲ್ಲಿ ನಿಯಾಮಕಳಾಗಿರುವವಳು ಕೂಟಸ್ಥಳು. ಆಕಾಶದಲ್ಲಿ ನಿಯಾಮಕಳಾಗಿರುವ ಲಕ್ಷ್ಮೀದೇವಿಯು ಕೂಟಸ್ಥಿತಾ ಎನಿಸುತ್ತಾಳೆ ಎಂದು ಋಗ್ವೇದಖಿಲ

ಪ್ರೀತಿ. (೪) ಆ ಲಕ್ಷ್ಮೀದೇವಿಯು ಸರ್ವತ್ರ ವ್ಯಾಪ್ತಳು. ತನ್ನ ಪದವಿಯಿಂದ ಕದಲದವಳು. ಸರ್ವ ಜಗತ್ತಿಗೂ ಕಾರಣೀಭೂತಳು, ನಾಶವಿಲ್ಲದವಳು. ಸರ್ವಜಗತ್ತಿಗೆ ಆಶ್ರಯಭೂತಳು, ರಜೋಗುಣವಿಲ್ಲ ದವಳು, ಎಂದು ಸಾಮವೇದದಲ್ಲಿ ಗೌಪವನಶಾಖೆಯಲ್ಲಿ ಹೇಳಿದೆ. ॥ ೨ ॥ ॥ ೩, ೪ ॥

ಹೀ—ಲಕ್ಷ್ಮೀದೇವಿಯನ್ನುಪಾಸನೆ ಮಾಡುವವರಿಗೂ ನಿನ್ನ ಪ್ರಾಪ್ತಿರೂಪವಾದ ಮೋಕ್ಷವು ಸಿಗು ವುದಾದರೆ ನಿನ್ನನ್ನುಪಾಸನೆ ಮಾಡುವವರಿಗೇನೇ ಉತ್ತಮತ್ವವು ಹೇಗೆಂದರೆ—

ಗೀ ॥ ಕ್ಲೇಶೋऽಧಿಕತರಸ್ತೇಷಾಮವ್ಯಕ್ತಾಸಕ್ತಚೇತಸಾಂ ।
ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ ॥ ೫ ॥

ಅ ॥ ಅವ್ಯಕ್ತಾಸಕ್ತಚೇತಸಾಂ = ಪರಮಾತ್ಮನಲ್ಲಿ ಮನಸ್ಸನ್ನು ಇಡದೆ (ಅಂದರೆ ಪರಮಾತ್ಮನನ್ನು ಸರ್ವೋತ್ತಮನೆಂದು ತಿಳಿದುಕೊಳ್ಳದೆ) ಕೇವಲ ಲಕ್ಷ್ಮೀದೇವಿಯಲ್ಲಿಯೇ ಮನಸ್ಸನ್ನು ಇಟ್ಟಿರುವ, ತೇಷಾಂ = ಲಕ್ಷ್ಮಿಯ ಉಪಾಸಕರಿಗೆ, ಕ್ಲೇಶಃ = ಕಷ್ಟವು, ಅಧಿಕತರಃ = ಅತ್ಯಂತಾಧಿಕವು. ಅವ್ಯಕ್ತಾ ಹಿ ಗತಿಃ = ಲಕ್ಷ್ಮೀದೇವಿಯ ಉಪಾಸನೆಯಿಂದುಂಟಾಗುವ ಭಗವತ್ಪ್ರಾಪ್ತಿಮಾರ್ಗವು. ದುಃಖಂ = ದುಃಖವು ಹೇಗೆ ಉಂಟಾಗುವುದೋ, ಹಾಗೆಯೇ, ದೇಹವದ್ಭಿಃ = ಜನರಿಂದ, ಅವಾಪ್ಯತೇ = ಹೊಂದಲ್ಪಡುತ್ತದೆ. ಹಿ = ಪ್ರಮಾಣಪ್ರಸಿದ್ಧವು.

ವಿ ॥ ಸರ್ವತ್ರ ಸಮಬುದ್ಧಿಯಿರಬೇಕು, ಸಮಸ್ತ ಪ್ರಾಣಿಗಳಿಗೆ ಹಿತವನ್ನುಂಟುಮಾಡಬೇಕು, ಸದಾ ಚಾರವಿರಬೇಕು. ಇವುಗಳಿಲ್ಲದೆ ಲಕ್ಷ್ಮೀದೇವಿಯು ಪ್ರಸಾದವಾಗಲಾರಳು. ಅದಿಲ್ಲದೆ ಶ್ರೀಹರಿಯ ಪ್ರಸಾದವಾಗಲಾರದು. ಶ್ರೀಹರಿಯ ಪ್ರಸಾದವಾಗದೆ ಭಗವತ್ಪ್ರಾಪ್ತಿಯಾಗಲಾರದು, ಹೀಗೆ ಲಕ್ಷ್ಮಿಯ ಉಪಾಸನಾಪೂರ್ವಕವಾದ ಭಗವತ್ಪ್ರಾಪ್ತಿಮಾರ್ಗವು ಅತಿ ಕಷ್ಟಸಾಧ್ಯವು. ॥ ೫ ॥

ಭಾ ॥ (೧) ಕಥಂ ತರ್ಹಿ ತ್ವದುಪಾಸಕಾನಾಮುತ್ತಮತ್ವಮಿತ್ಯತ ಆಹ । ಕ್ಲೇಶ ಇತಿ ॥ (೨) ಅವ್ಯಕ್ತಾ ಗತಿರ್ದುಃಖಂ ಹ್ಯವಾಪ್ಯತೇ । ಗತಿರ್ಮಾರ್ಗಃ । ಅವ್ಯಕ್ತೋಪಾಸನದ್ವಾರಕೋ ಮುಕ್ತ್ಯಾಪ್ತಿಮಾರ್ಗೋ ದುಃಖಮಾಪ್ಯತ ಇತ್ಯರ್ಥಃ ॥ (೩) ಅತಿಶಯೋಪಾಸನಸರ್ವೇಂದ್ರಿಯಾತಿನಿಯಮನಸರ್ವತ್ರಸಮಬುದ್ಧಿತ್ವಸರ್ವಭೂತಹಿತೇರತತ್ವಾತಿ-ಸುಪ್ರಾಚಾರಸಮ್ಯಗ್ಜ್ಞಾನಭಕ್ತ್ಯಾದಿಸಾಧನಸಂದರ್ಭಮೃತೇ ನಾವ್ಯಕ್ತಾಪರೋಕ್ಷ್ಯಂ। ತದೃತೇ ಚ ನ ವಿಷ್ಣುಪ್ರಸಾದಃ । ಸತ್ಯಪಿ ತಸ್ಮಿನ್ನ ಸಮ್ಯಗ್ಭಗವದುಪಾಸನಮೃತೇ । ನರ್ತೇ ಚ ತಂ ಮೋಕ್ಷಃ । ವಿನಾಽವ್ಯಕ್ತೋಪಾಸನಂ ಭವತ್ಯೇವ ಭಗವದುಪಾಸಕಾನಾಂ ಮೋಕ್ಷ ಇತಿ ಕ್ಲೇಶಿಷ್ಠೋಽಯಂ ಮಾರ್ಗ ಇತಿ ಭಾವಃ ॥ (೪) ತಥಾಽಸ್ಯಾಪರೋಕ್ಷೀಕೃತಾವ್ಯಕ್ತಾನಾಂ ಸುಕರಂ ಭಗವದುಪಾಸನಮಿತ್ಯೇತಾವತ್ತ್ವಯೋಜನಂ॥ ॥ ೧ ॥

ಅ ॥ (೧) ಲಕ್ಷ್ಮೀದೇವಿಯನ್ನುಪಾಸನೆಮಾಡುವವರಿಗೂ ಮೋಕ್ಷವು ಸಿಗುವುದಾದರೆ ಭಗವಂತ ನನ್ನುಪಾಸನಾಮಾಡುವವರಿಗೇನೇ ಉತ್ತಮತ್ವವು ಹೇಗೆ ಎಂದರೆ ಕ್ಲೇಶೋಽಧಿಕತರಃ ಎಂದು ಹೇಳಿ ದ್ದಾರೆ. (೨) (ಉತ್ತರಾರ್ಧದಲ್ಲಿರತಕ್ಕ ಪದಗಳಿಗೆ ಯೋಜನವಾಗಿ ಅನ್ವಯವನ್ನು ತಿಳಿಸುತ್ತಾರೆ )

ಅವ್ಯಕ್ತಾ ಗತಿಃ ದುಃಖಮವಾಪ್ಯತೇ ಇಲ್ಲಿದ್ದ ಗತಿಶಬ್ದಕ್ಕೆ ಮಾರ್ಗವು ಎಂದರ್ಥವು. ಲಕ್ಷ್ಮೀದೇವಿಯ ಉಪಾಸನವಮಾಡಿ ಭಗವತ್ಪ್ರಾಪ್ತ್ಯುಪಾಯವು ಅಂದರೆ ಭಗವಂತನನ್ನು ಹೊಂದತಕ್ಕ ಮೋಕ್ಷಮಾರ್ಗ ಅಂದರೆ ಲಕ್ಷ್ಮೀದೇವಿಯ ಉಪಾಸನವೇ ಉಪಾಯವಾಗಿವುಳ್ಳ ಭಗವತ್ಪ್ರಾಪ್ತಿ ಮಾರ್ಗವು ದುಃಖವಾಗು ವಂತೆ ಹೊಂದಲ್ಪಡುತ್ತದೆ. ಅಂತೂ ಇಂದ್ರಿಯನಿಯಮನಾದಿ ಬಹು ಪ್ರಯತ್ನದಿಂದ ಲಕ್ಷ್ಮೀದೇವಿ ಯನ್ನುಪಾಸನಾ ಮಾಡಿದರೂ ಪುನಃ ಪರಮಾತ್ಮನನ್ನುಪಾಸನಾ ಮಾಡಿಯೇ ಮೋಕ್ಷವನ್ನು ಹೊಂದ ತಕ್ಕದ್ದು. ಭಗವಂತನನ್ನುಪಾಸನೆ ಮಾಡದೆ ಕೇವಲ ಲಕ್ಷ್ಮೀದೇವಿಯ ಉಪಾಸನದಿಂದ ಮೋಕ್ಷವಾಗ ಲಾರದು. (ಲಕ್ಷ್ಮೀದೇವಿಯ ಉಪಾಸನಾ ಮಾರ್ಗವು ಅತಿ ಕ್ಲೇಶಸಾಧ್ಯವೆಂಬುವುದನ್ನು ವಿವರಿಸು ತ್ತಾರೆ—) ಅತ್ಯಧಿಕವಾಗಿ ಲಕ್ಷ್ಮೀದೇವಿಯ ಉಪಾಸನೆಯೂ ಸಮಸ್ತ ಇಂದ್ರಿಯಗಳನ್ನು ಅತ್ಯಂತವಾಗಿ ತನ್ನ ವಶಪಡಿಸಿಕೊಳ್ಳುವುದು ೬ನೇ ಅಧ್ಯಾಯದಲ್ಲಿ ಹೇಳಿದ ಪ್ರಕಾರ ಸರ್ವತ್ರ ಸಮಬುದ್ಧಿಯೂ, ಸಮಸ್ತ ಪ್ರಾಣಿಗಳಿಗೆ ಹಿತವಾಗಬೇಕೆಂಬುವಲ್ಲಿಯೇ ಆಸಕ್ತಿಯೂ ಅತ್ಯಂತವಾಗಿ ಸದಾಚಾರವೂ, ಚೆನ್ನಾಗಿ ವಿಷ್ಣು ಭಕ್ತಿಯೂ, ಇದು ಮೊದಲಾದ ಸಾಧನ ಸಂದರ್ಭಗಳು ಹೊರತು ಲಕ್ಷ್ಮೀದೇವಿಯು ಪ್ರತ್ಯಕ್ಷಳಾಗುವುದಿಲ್ಲ. ಲಕ್ಷ್ಮೀದೇವಿಯ ಪ್ರಸಾದವೂ ಆಗುವುದಿಲ್ಲ. ಆ ಲಕ್ಷ್ಮೀದೇವಿಯ ಪ್ರಸಾದವಾಗದೆ ವಿಷ್ಣುವಿನ ಪ್ರಸಾದವು ಉಂಟಾಗಲಾರದು. ಲಕ್ಷ್ಮೀದೇವಿಯ ಪ್ರಸಾದ, ಪ್ರತ್ಯಕ್ಷಗಳು ಇದ್ದರೂ ಪರಮಾತ್ಮನನ್ನು ಉಪಾಸನಾ ಮಾಡದಿದ್ದರೆ ವಿಷ್ಣುಪ್ರಸಾದವು ಚೆನ್ನಾಗಿ ಆಗಲಾರದು. ಆ ವಿಷ್ಣುವಿನ ಪ್ರಸಾದವಾಗದೆ ಮೋಕ್ಷವಾಗ ಲಾರದು. ಲಕ್ಷ್ಮೀದೇವಿಯನ್ನುಪಾಸನಾಮಾಡತಕ್ಕ ಮಾರ್ಗವನ್ನು ಬಿಟ್ಟೇ ಭಗವಂತನನ್ನುಪಾಸನಾ ಮಾಡತಕ್ಕವರಿಗೆ ಮೋಕ್ಷವು ಆಗಿಯೇ ಆಗುತ್ತದೆ. ಹೀಗೆ ಈ ಲಕ್ಷ್ಮೀ ಉಪಾಸನೆ ಮಾಡಿ ಪರಮಾತ್ಮ ನನ್ನುಪಾಸನಮಾಡಿ ಹೊಂದತಕ್ಕ ಮೋಕ್ಷಮಾರ್ಗವು ಬಹುಕ್ಲೇಶಸಾಧ್ಯವು ಎಂದು ಭಾವವು. (೪) (ಹೀಗಾದರೆ ಲಕ್ಷ್ಮೀದೇವಿಯ ಉಪಾಸನದಿಂದ ಪ್ರಯೋಜನವಿಲ್ಲವೋ ಎಂದರೆ—) ಕ್ಲೇಶದಿಂದ ಲಕ್ಷ್ಮೀ ದೇವಿಯನ್ನುಪಾಸನವಮಾಡಿ ಅವಳನ್ನು ಪ್ರತ್ಯಕ್ಷೀಕರಿಸಿಕೊಂಡವರಿಗೆ ಭಗವಂತನ ಉಪಾಸನವು ಸುಲಭ ಸಾಧ್ಯವಾಗುತ್ತದೆ, ಎಂದಿಷ್ಟೇ ಪ್ರಯೋಜನವಿದೆ. ॥೫॥

ಹೀ—ಹೀಗಾದರೆ ಲಕ್ಷ್ಮಿಯ ಉಪಾಸನಮಾರ್ಗ, ಭಗವದುಪಾಸನಮಾರ್ಗಗಳಿಗೆ ಸಾಮ್ಯವೇ ಪ್ರಾಪ್ತವಾಯಿತು ಅವ್ಯಕ್ತೋಪಾಸನದ್ವಾರಕ ಮಾರ್ಗದಲ್ಲಿಯೂ ಕ್ಲೇಶವಿಲ್ಲವೆಂದಾಯಿತು ಇಲ್ಲ ಭಗವದುಪಾಸನೆಗೆ ಸಮಸ್ತ ವಿಘ್ನಗಳೂ ಲಕ್ಷ್ಮಿಯ ಉಪಾಸನೆಯಿಂದ ಪರಿಹಾರವಾಗುವುದರಿಂ ಸೌಕರ್ಯವುಂಟಾಗುವುದರಿಂದ ಕ್ಲೇಶಪರಿಹಾರವಾಗುವುದು ಎಂದರೆ—

ಭಾ ॥ (೧) ತತ್ರಾಪಿ ಯೋಽವ್ಯಕ್ತಾಪರೋಕ್ಷ್ಯೇ ಪ್ರಯಾಸಃ ತಾವತಾ ಪ್ರಯತ್ನೇನ ಯದಿ ಭಗವಂತಮುಪಾಸ್ತೇ ಊನೇನ ವಾ ತದಾ ಭಗವದಾಪರೋಕ್ಷ್ಯಮೇವ ಭವತಿ ದ್ವಿತೀಯಮಧಿಕಂ ॥ (೨) ಇಂದ್ರಿಯಸಂಯಮಾದ್ಯೂನಭಾವೇ ತತ್ಪ್ರಾಪಸಕಸ್ಯಾಪಿ ದೇವೀ ನಾತಿಪ್ರಸಾದಮೇತೀತಿ । ದೇವಸ್ತು ತಾನಿ ಸಾಧನಾನಿ ಭಕ್ತಿಮತಃ ಸ್ವಯ- ಮೇವಾಪ್ರಯತ್ನೇನ ದದಾತೀತಿ ಚಾತಿಸೌಕರ್ಯಮಿತಿ ಭಕ್ತಾನಾಂ ಭಗವದುಪಾ- ಸನೇ ಇತರತ್ರ ಕ್ಲೇಶೋಽಧಿಕತರಃ । ತದೇತತ್ಸರ್ವಂ ಪರ್ಯುಪಾಸತೇ ॥ (೩) ಸನ್ನಿ- ಯಮ್ಯಾಧಿಕತರ ಇತಿ ಪರಿಸಂತರಪ್‌ರಬ್ಬ್ಯಃ ಪ್ರತೀಯತೇ ॥ (೪) ಸಾಮವೇದ- ಮಾಧುಚ್ಛಂದಸಶಾಖಾಯಾಂ ಚೋಕ್ತಂ । ಭಕ್ತ್ಯಾತ್ವ ಯೋಽತೀವ ವಿಷ್ಣ್ವಾ... ಜಿತೇಂದ್ರಿಯಾಃ ಸಮಾಗಾಚಾರಯುಕ್ತಾಃ । ಉಪಾಸತೇ ತಾಂ ಸಮಬುದ್ಧ...

**ಕೇಷಾಂ ದೇವೀ ದೃಶ್ಯತೇ ನೇತರೇಷಾಂ ॥ (೫) ದೃಷ್ಟ್ವಾ ಚ ಸಾ ಭಕ್ತಿಮತೀವ ವಿಷ್ಣೌ ದತ್ವೋಪಾಸ್ತೌ ಸರ್ವವಿಘ್ನಾಂಶ್ಛಿನತ್ತಿ । ಉಪಾಸ್ಯ ತಂ ವಾಸುದೇವಂ ವಿದಿತ್ವಾ ತತಸ್ತತಃ ಶಾಂತಿಮತ್ಯಂತಮೇತೀತಿ ॥ ೨ ॥**

**ಅ ॥** (೧) ಲಕ್ಷ್ಮೀದೇವಿಯನ್ನುಪಾಸನೆ ಮಾಡಿ ಲಕ್ಷ್ಮಿಯನ್ನು ಪ್ರತ್ಯಕ್ಷೀಕರಿಸಿಕೊಂಡರೆ ಪರಮಾತ್ಮನನ್ನುಪಾಸನಾಮಾಡಿ ಪ್ರತ್ಯಕ್ಷೀಕರಿಸಿಕೊಳ್ಳಲಿಕ್ಕೆ ಸೌಕರ್ಯವಿದ್ದರೂ ಲಕ್ಷ್ಮೀದೇವಿಯನ್ನುಪಾಸನಾ ಮಾಡಿ ಪ್ರತ್ಯಕ್ಷೀಕರಿಸಲಿಕ್ಕೆ ಎಷ್ಟು ಪ್ರಯಾಸವಿದೆಯೋ, ಅಷ್ಟು ಪ್ರಯಾಸದಿಂದ ಯಾವನು ಶ್ರೀಪರಮಾತ್ಮನನ್ನುಪಾಸನೆ ಮಾಡುತ್ತಾನೋ. ಅಥವಾ ಲಕ್ಷ್ಮೀದೇವಿಯನ್ನು ಪ್ರತ್ಯಕ್ಷೀಕರಿಸಲಿಕ್ಕೆ ಎಷ್ಟು ಪ್ರಯಾಸವಿದೆಯೋ, ಅದಕ್ಕಿಂತ ಸ್ವಲ್ಪ ಕಡಿಮೆಯಾದ ಪ್ರಯಾಸದಿಂದ ಉಪಾಸನಾ ಮಾಡುತ್ತಾನೋ, ಆಗ ಶ್ರೀಪರಮಾತ್ಮನ ಪ್ರತ್ಯಕ್ಷವೇ ಆಗುತ್ತದೆ. (I) ಆದುದರಿಂದ ಲಕ್ಷ್ಮಿಯ ಉಪಾಸನಾ ದ್ವಾರಕ ಮಾರ್ಗಕ್ಕಿಂತ ಸಾಕ್ಷಾತ್ಪರಮಾತ್ಮನನ್ನು ಉಪಾಸನಾ ಮಾಡತಕ್ಕ ಮಾರ್ಗದಲ್ಲಿ ಆಯಾಸವು ಕಡಿಮೆಯಾಗಿರುವುದರಿಂದ ಭಗವದುಪಾಸನಾ ಮಾರ್ಗವೇ ಶ್ರೇಷ್ಠವು.) (೨) (ಅವ್ಯಕ್ತೋಪಾಸನದ್ವಾರಕವಾದ ಮಾರ್ಗದಲ್ಲಿ ಭಗವದುಪಾಸನಕ್ಕಿಂತ ಹೆಚ್ಚು ಕ್ಲೇಶವಿದೆ ಎನ್ನುತ್ತಾರೆ—) (ಭಗವದುಪಾಸನೆಗೆ ಅದಕ್ಕೆ ಅನುಕೂಲವಾದುದೇ ಒಂದು ಪ್ರಯತ್ನವು. (ಅವ್ಯಕ್ತೋಪಾಸನದಲ್ಲಿ ಮೊದಲು ಅದಕ್ಕೆ ಅನುಕೂಲವಾದ ಪ್ರಯತ್ನವು. ಆ ಮೇಲೆ ಭಗವಂತನನ್ನುಪಾಸನಾ ಮಾಡಲಿಕ್ಕೆ ಯತ್ನವು. ಹೀಗೆ ಎರಡು ಯತ್ನಗಳು. ಆದಕಾರಣ ಕ್ಲೇಶಾಧಿಕ್ಯವು ಎನ್ನುತ್ತಾರೆ-) ಇಂದ್ರಿಯ ನಿಯಮನಾದಿ ಸಾಧನಗಳು ಕಡಿಮೆ ಆದರೆ ಹೆಚ್ಚು ಲಕ್ಷ್ಮಿಯನ್ನು ಉಪಾಸನ ಮಾಡಿದವನಿಗೂ ಲಕ್ಷ್ಮೀದೇವಿಯು ಅತ್ಯಂತ ಅನುಗ್ರಹವನ್ನು ಮಾಡುವುದಿಲ್ಲ. ಶ್ರೀಪರಮಾತ್ಮನಾದರೂ ಅಂತಹ ಸಾಧನಗಳನ್ನು ಭಕ್ತಿಯಿದ್ದವನಿಗೆ ತಾನೇ ಪ್ರಯತ್ನವಿಲ್ಲದೆ ಕೊಡುತ್ತಾನೆ. ಈ ಪ್ರಕಾರ ಭಕ್ತರಿಗೆ ಪರಮಾತ್ಮನನ್ನುಪಾಸನಾ ಮಾಡಲಿಕ್ಕೆ ಸೌಕರ್ಯವಿದೆ. ಲಕ್ಷ್ಮಿಯ ಉಪಾಸನದಲ್ಲಿ ಆದರೂ ಅತ್ಯಧಿಕವಾದ ಕ್ಲೇಶವೇ ಇದೆ. ಅತಿಶಯವಾಗಿ ಉಪಾಸನವು ಇದು ಮೊದಲಾದುದೆಲ್ಲವೂ ಪರ್ಯುಪಾಸತೇ ಸನ್ನಿಯಮ್ಯ, ಅಧಿಕತರಃ ಎಂಬುದರಿಂದ ಸಿದ್ಧವಾಗುತ್ತದೆ. ಅಂದರೆ ಪರಿ ಎಂಬುದರಿಂದ ಉಪಾಸಕನಿಗೆ ಅತಿಶಯವು, ಸಮ್ ಎಂಬುದರಿಂದ ಅತಿಶಯವಾಗಿ ಇಂದ್ರಿಯ ನಿಗ್ರಹವು, ತರಪ್ ಪ್ರತ್ಯಯದಿಂದ ಅತ್ಯಂತ ಸದಾಚಾರಾದಿಗಳೂ ಬೇಕೆಂದು ತೋರುತ್ತವೆ. (೪) ಸಾಮವೇದದಲ್ಲಿ ಮಾಧುಚ್ಛಂದಸಶಾಖೆಯಲ್ಲಿಯೂ ಈ ವಿಷಯವು ಹೇಳಲ್ಪಟ್ಟಿದೆ. ಯಾರು ವಿಷ್ಣುವಿನಲ್ಲಿ ಅತ್ಯಂತ ಭಕ್ತರಾಗಿರುತ್ತಾರೋ, ಅತ್ಯಂತವಾಗಿ ಇಂದ್ರಿಯಗಳನ್ನು ನಿಗ್ರಹಿಸಿಕೊಂಡಿರುತ್ತಾರೋ ಚೆನ್ನಾಗಿ ಸದಾಚಾರಗಳಿಂದ ಯುಕ್ತರಾದವರೋ ಮತ್ತು ಸರ್ವತ್ರ ಸಮಬುದ್ಧಿಗಳಾಗಿರುತ್ತಾರೋ. ಅಂತಹವರು ಆ ಲಕ್ಷ್ಮೀದೇವಿಯನ್ನುಪಾಸನಾ ಮಾಡುತ್ತಾರೆ. ಅಂತಹ ಸದಾಚಾರ ಸಂಪನ್ನರಿಗೇನೇ ಲಕ್ಷ್ಮೀದೇವಿಯು ಪ್ರತ್ಯಕ್ಷಳಾಗುತ್ತಾಳೆ. ಸದಾಚಾರಾದಿಗಳಿಲ್ಲದಿರುವವರಿಗೆ ಲಕ್ಷ್ಮೀದೇವಿಯು ಪ್ರತ್ಯಕ್ಷಳಾಗುವುದಿಲ್ಲ. (೫) ಪ್ರತ್ಯಕ್ಷಳಾದ ಲಕ್ಷ್ಮೀದೇವಿಯು ತನ್ನನ್ನುಪಾಸನಮಾಡಿದವನಿಗೆ ವಿಷ್ಣುವಿನಲ್ಲಿ ಹೆಚ್ಚು ಭಕ್ತಿಯನ್ನು ಕೊಟ್ಟು ವಿಷ್ಣುವನ್ನುಪಾಸನೆ ಮಾಡುವುದರಲ್ಲಿ ಬರುವ ಸಮಸ್ತ ವಿಘ್ನಗಳನ್ನು ಪರಿಹರಿಸುತ್ತಾಳೆ. ಆ ಪರಮಾತ್ಮನನ್ನುಪಾಸನೆ ಮಾಡಿ ಅಪರೋಕ್ಷೀಕರಿಸಿಕೊಂಡ ಮೇಲೆ ಪ್ರಸನ್ನನಾದ ಶ್ರೀಪರಮಾತ್ಮನಿಂದ ಅತ್ಯಂತ ಶಾಂತಿಯನ್ನು (ಮೋಕ್ಷವನ್ನು) ಹೊಂದುತ್ತಾನೆ, ಎಂದುಕ್ತವಾಗಿದೆ ॥ ೨ ॥

**ಭಾ ॥ (೧) ಉಕ್ತಂ ಚ ಸಾಮವೇದೇ ಮಾಧುಚ್ಛಂದಸಶಾಖಾಯಾಂ । ಪ್ರಸನ್ನೋ ಭವಿತಾ ದೇವಃ ಸೋಽವ್ಯಕ್ತೇನ ಸತ್ಯೈವ ತು । ಯಾವತಾ ಶಕ್ತ್ಯಾ ಸಾದೇವೀ ತಾವತ್ಯೈವ ನ ಸಂಶಯಃ ।**

ನ ತತ್ಪ್ರಸಾದಮಾತ್ರೇಣ ಪ್ರೀಯತೇ ಸ ಮಹೇಶ್ವರಃ । ತಸ್ಮಿನ್ಪ್ರೀತೇ ತು ಸರ್ವಸ್ಯ ಪ್ರೀತಿಸ್ತು ಭವತಿ ಧ್ರುವಂ ॥ (೨) ಯದ್ಯಪ್ಯುಪಾಸನಾಧಿಕ್ಯಂ ತಥಾಽಪಿ ಗುಣದೋಽಸೌ । ಮುಕ್ತಿದಶ್ಚ ಸ ಏವೈಕೋ ನಾವ್ಯಕ್ತಾದಿಸ್ತು ಕಶ್ಚನೇತಿ । ಮಮಾತ್ಮಭಾವಮಿಚ್ಛಂತೋ ಯತಂತೇ ಪರಮಾತ್ಮನ ಇತಿ ಚ ॥ (೩) ಮೋಕ್ಷಧರ್ಮೇ ಶ್ರೀವಚನಂ । ಧರ್ಮನಿತ್ಯೇ ಮಹಾಬುದ್ಧೌ ಬ್ರಹ್ಮಣ್ಯೇ ಸತ್ಯವಾದಿನಿ । ಪ್ರಶ್ರಿತೇ ದಾನಶೀಲೇ ಚ ಸದೈವ ನಿವಸಾಮ್ಯಹಮಿತಿ ಚ ॥ (೪) ಮಹತಃ ಪರಂ ತು ಬ್ರಹ್ಮೈವ । ತಥಾ ಹಿ ಭಗವತಾ ಸಯುಕ್ತಿಕಮಭಿಹಿತಂ । ವದತೀತಿ ಚೇನ್ನ ಪ್ರಾಜ್ಞೋ ಹಿ । ತ್ರಯಾಣಾಮೇವ ಚೈವಮುಪನ್ಯಾಸಃ ಪ್ರಶ್ನಶ್ಚೇತ್ಯಾದಿ ॥ (೫) ತಮಿತಿ ಪುಲ್ಲಿಂಗಾಚ್ಚೈತತ್ಸಿದ್ಧಿಃ । ಮಹತಃ ಪರತ್ವಂ ತ್ವವ್ಯಕ್ತಪರಸ್ಯ ಭವತ್ಯೇವ ॥ ೩ ॥

● ॥ (೧) ಸಾಮವೇದದಲ್ಲಿ ಅಯಾಸ್ಯಶಾಖೆಯಲ್ಲಿ ಹೇಳಿದೆ. ಆ ಶ್ರೀಪರಮಾತ್ಮನು ಲಕ್ಷ್ಮೀದೇವಿಯಿಂದ ಕೂಡಿಕೊಂಡೇ ಸಂತುಷ್ಟನಾಗುವನು. ಎಷ್ಟು ಸಾಧನಗಳನ್ನು ಮಾಡಿದರೆ ಲಕ್ಷ್ಮೀದೇವಿಯು ಪ್ರತ್ಯಕ್ಷಳಾಗಿ ಅವಳ ಅನುಗ್ರಹವಾಗುತ್ತದೋ, ಅಷ್ಟೇ ಸಾಧನಗಳಿಂದ ಪರಮಾತ್ಮನನ್ನು ಪಾಸನ ಮಾಡಿದರೆ ಪರಮಾತ್ಮನು ಪ್ರತ್ಯಕ್ಷನಾಗಿ ಲಕ್ಷ್ಮೀದೇವಿಯಿಂದ ಕೂಡಿಕೊಂಡು ಪ್ರಸನ್ನನಾಗುತ್ತಾನೆ. ಸಂದೇಹವಿಲ್ಲ. ಪರಮಾತ್ಮನನ್ನು ಪಾಸನಾಮಾಡಿ ಆತನನ್ನು ಪ್ರತ್ಯಕ್ಷೀಕರಿಸದೆ ಲಕ್ಷ್ಮೀದೇವಿಯ ಅನುಗ್ರಹಮಾತ್ರದಿಂದ ಶ್ರೀಪರಮಾತ್ಮನು ಪ್ರೀತನಾಗುವುದಿಲ್ಲ. ಆ ಪರಮಾತ್ಮನು ಪ್ರೀತನಾಗಿ ಪ್ರಸನ್ನನಾದರೆ ರಮಾಬ್ರಹ್ಮಾದಿಗಳೆಲ್ಲಾ ದೇವತೆಗಳ ಅನುಗ್ರಹವೂ ಈ ಅಧಿಕಾರಿಗೆ ನಿಶ್ಚಯವೂ ಆಗುವುದು. (೨) ಯದ್ಯಪಿ ಲಕ್ಷ್ಮೀದೇವಿಯನ್ನು ಪಾಸನಾಮಾಡುವುದರಲ್ಲಿ ಇಂದ್ರಿಯನಿಯಮನಾದಿಗಳನ್ನು ಬಹಳವಾಗಿ ಮಾಡಬೇಕಾಗಿರುವುದರಿಂದ ಪ್ರಯತ್ನಾಧಿಕ್ಯವಿದೆ. ಆದರೂ ಈ ಕ್ಲೇಶಸಾಧ್ಯವಾದ ಲಕ್ಷ್ಮೀದೇವಿಯ ಉಪಾಸನೆಯು ಪರಮಾತ್ಮನ ಉಪಾಸನೆಗೆ ಬರತಕ್ಕ ವಿಘ್ನಗಳನ್ನು ನಿವೃತ್ತಿಗೊಳಿಸಿ ಪರಮಾತ್ಮನ ಉಪಾಸನೆಗೆ ಸಹಾಯವನ್ನುಂಟುಮಾಡುತ್ತದೆ. ಲಕ್ಷ್ಮೀದೇವಿಯ ಉಪಾಸನೆಗೆ ಬೇಕಾದ ಇಂದ್ರಿಯನಿಯಮನಾದಿಗಳಿಂದ ಸ್ವಲ್ಪ ಕಡಿಮೆಯಾದ ಇಂದ್ರಿಯನಿಯಮನಾದಿಗಳಿಂದಲೂ ಪರಮಾತ್ಮನನ್ನು ಪಾಸನಾಮಾಡಿದರೆ ಪರಮಾತ್ಮನ ಪ್ರತ್ಯಕ್ಷವಾಗುತ್ತದೆ. ಮತ್ತು ಉಪಾಸನಾಧಿಕ್ಯವುಂಟಾಗುತ್ತದೆ. ಆದರೂ ಶ್ರೀಹರಿಯು ಜ್ಞಾನಾದಿಗುಣಾಧಿಕ್ಯವನ್ನು ಕೊಡುವವನು. ಆ ಶ್ರೀಹರಿಯೇ ಮೋಕ್ಷವನ್ನು ಕೊಡುವವನು. ಲಕ್ಷ್ಮ್ಯಾದಿಗಳು ಸ್ವತಂತ್ರವಾಗಿ ಮೋಕ್ಷವನ್ನು ಕೊಡುವವರಲ್ಲ. ಪರಮಾತ್ಮನೇ ಸ್ವತಂತ್ರವಾಗಿ ಮೋಕ್ಷ ಕೊಡುವವನು. (೩) ನನ್ನ ಉಪಾಸನದಿಂದ ಮೋಕ್ಷವನ್ನು ಇಚ್ಛಿಸುವವರೂ ಕೂಡ ಪರಮಾತ್ಮನ ಪ್ರೀತಿಯನ್ನು ಹೊಂದುವುದಕ್ಕೆ ಪ್ರಯತ್ನಮಾಡುತ್ತಾರೆ. ನನ್ನ ಉಪಾಸನಮಾತ್ರದಿಂದ ಮೋಕ್ಷವಾಗುವುದಿಲ್ಲವೆಂದು ಲಕ್ಷ್ಮೀದೇವಿಯ ವಚನವೇ ಮೋಕ್ಷಧರ್ಮದಲ್ಲಿ ಇದೆ. (ಲಕ್ಷ್ಮೀದೇವಿಯ ಪ್ರಸಾದವು ಮಹಾ ಪ್ರಯತ್ನಸಾಧ್ಯವೆಂಬುವಲ್ಲಿ ಪ್ರಮಾಣಾಂತರವನ್ನು ಹೇಳುತ್ತಾರೆ–) (೪) ನಿಯತಧರ್ಮವುಳ್ಳ ಮಹಾ ಬುದ್ಧಿಯುಳ್ಳ ಬ್ರಾಹ್ಮಣಪ್ರಿಯನಾದ, ಸತ್ಯವನ್ನು ನುಡಿಯುವ, ವಿನಯವುಳ್ಳ, ದಾನಶೀಲನಾದ ಭಕ್ತನಲ್ಲಿ ಸದಾ ನಾನು ಆವಾಸ ಮಾಡುತ್ತೇನೆ (ಪ್ರಸನ್ನಳಾಗುತ್ತೇನೆ) ಎಂದೂ ಲಕ್ಷ್ಮೀದೇವಿಯ ಮಾತು. (೫) (ಹಿಂದೆ ಲಕ್ಷ್ಮೀದೇವಿಯು ಪರವಾಗಿ ಉದಾಹರಿಸಿರುವ ವಾಕ್ಯಗಳಲ್ಲಿ ಮಹತಃ ಪರಂ ಎಂಬುವ ವಾಕ್ಯ [illegible] ಪರಬ್ರಹ್ಮಪರವೆ ಲಕ್ಷ್ಮೀದೇವಿಯು ಪರವಲ್ಲ, ಎಂದು ಹೇಳುತ್ತಾರೆ–) ಅಸಾದ್ಯನಂತಂ ಮಹತಃ ಪರಂ ಎಂಬುವ ವಾಕ್ಯ [illegible] ಪರಬ್ರಹ್ಮನೇ ಅದನ್ನು ಶ್ರೀವೇದವ್ಯಾಸರು [illegible] ಹೇಳಿದಾರೆಂದು ಹೇಳುತ್ತಾರೆ (೬) ಮಹತಃ ಪರಂ ಎಂಬುವ ಶ್ರುತಿಯು ಮೋಕ್ಷ [illegible]

ಪ್ರಧಾನಕ್ಕೆ ಜ್ಞೇಯತ್ವವನ್ನು ಹೇಳುತ್ತದೆ, ಎಂದರೆ— ಈ ವಾಕ್ಯ ಸಾಮರ್ಥ್ಯದಿಂದ ಮೋಕ್ಷವಾಗುವುದ ಕ್ಕಾಗಿ ಪ್ರಧಾನಕ್ಕೆ ಜ್ಞೇಯತ್ವವನ್ನು ಹೇಳುತ್ತದೆಂದು ತಿಳಿಯಕೂಡದು. ಆ ವಾಕ್ಯದಲ್ಲಿಯೂ ಪ್ರಾಜ್ಞ ನಾಮಕ ಶ್ರೀಪರಮಾತ್ಮನೇ ಹೇಳಲ್ಪಡುತ್ತಾನೆ. ಪ್ರಧಾನವಲ್ಲ. (1) ಪಿತೃಸೌಮನಸ್ಯವನ್ನು ಪ್ರಥಮ ವರವನ್ನಾಗಿಯೂ, (2) ಸ್ವರ್ಗಸಾಧನೀಭೂತವಾದ ಅಗ್ನಿಯನ್ನು ತಿಳಿಸು ಎಂದು ಸ್ವರ್ಗಾಗ್ನಿವಿಷಯಕ ಎರಡನೇ ವರವನ್ನೂ (3) ಮೋಕ್ಷಸಾಧನ ಜ್ಞಾನ ವಿಷಯೀಭೂತನಾದ ಪ್ರೇತ ಮುಕ್ತ ಜೀವನಿಯಾಮಕ ಪರಮಾತ್ಮಸ್ವರೂಪವನ್ನು ಮೂರನೇ ವರವನ್ನಾಗಿಯೂ ನಚಿಕೇತಸರು ಬೇಡಿಕೊಂಡರು. ಆಗ ಯಮನು ಮೂರೇ ವರಗಳನ್ನು ಕೊಟ್ಟನು. ಪ್ರಧಾನ ವಿಷಯದಲ್ಲಿ ಪ್ರಶ್ನೆಯನ್ನು ಮಾಡಲಿಲ್ಲ. **ಮಹತಃ ಪರಂ** ಎಂಬುವ ವಾಕ್ಯದಲ್ಲಿ ಪ್ರಧಾನವನ್ನು ಹೇಳಲೂ ಇಲ್ಲ. (೪) (ಈ ವಿಷಯದಲ್ಲಿ ಯುಕ್ತಿಯನ್ನು ಹೇಳುತ್ತಾರೆ--) **ಮಹತಃ ಪರಂ ಧ್ರುವಂ ನಿಚಾಯ್ಯ ತಂ** ಎಂದು ತಂ ಎಂದು ಪುಲ್ಲಿಂಗವಿದ್ದ ಪ್ರಯುಕ್ತವೂ ಈ ವಾಕ್ಯಪ್ರತಿಪಾದ್ಯನು ಪರಮಾತ್ಮನೇ ಎಂದು ಸಿದ್ಧವಾಗುತ್ತದೆ ಮಹತ್ತತ್ತ್ವಾಭಿಮಾನಿ ಚತುರ್ಮುಖನಿಂದುತ್ತಮಳಾದ ಅವ್ಯಕ್ತ ತತ್ತ್ವಾಭಿಮಾನಿ ಲಕ್ಷ್ಮೀದೇವಿಯಿಂದಲೂ ಉತ್ತಮನಾದ ಶ್ರೀಪರಮಾತ್ಮನಿಗೆ ಮಹತಃ ಪರತ್ವವೂ ಕೂಡುತ್ತದೆ. ॥ ೩ ॥

ಹೀ ಬೇರೆ ಶ್ರುತಿಗಳಲ್ಲಿ ಹೀಗೆ ವ್ಯಾಖ್ಯಾನಮಾಡಿದುದರಿಂದಲೂ ಈ ವಾಕ್ಯಕ್ಕೆ ಹೀಗೆಯೇ ಅರ್ಥವಾಗಬೇಕೆನ್ನುತ್ತಾರೆ—

**ಭಾ ॥ (೧) ತಥಾ ಚಾಗ್ನಿವೇಶ್ಯಶಾಖಾಯಾಂ । ಅನಾದ್ಯನಂತಂ ಮಹತಃ ಪರಂ ಧ್ರುವಮಿತಿ । ಪರೋ ಹಿ ದೇವಃ ಪುರುಹೂತೋ ಮಹತ್ತ ಇತಿ ॥ (೨) ನ ಚಾವ್ಯಕ್ತಸ್ವರೂಪಂ ಭಗವತಾ ನಿಷಿದ್ಧಂ । ಭಾರತಾದೌ ಸಾಧಿತತ್ವಾತ್ ॥ (೩) ಶರೀರರೂಪಕವಿನ್ಯಸ್ತಗೃಹೀತೇರಿತ್ಯಾದೌ ಸಾಂಖ್ಯಪ್ರಸಿದ್ಧಂ ಪ್ರಧಾನಂ ನಿಷಿಧ್ಯ ವೈದಿಕಮವ್ಯಕ್ತಮೇವೋಕ್ತಂ ॥ (೪) ತಥಾ ಚ ಸೌಕರಾಯಣಶ್ರುತಿಃ । ಶರೀರರೂಪಿಕಾ ಸಾಽಶರೀರಸ್ಯ ವಿಷ್ಣೋರ್ಯತಃ ಪ್ರಿಯಾ ಸಾ ಜಗತಃ ಪ್ರಸೂತಿರಿತಿ । (೫) ಸುವ್ರತಾನಾಂ ಕ್ಷಿಪ್ರಂ ಮಹದೈಶ್ವರ್ಯಂ ದೇವೀ ದದಾತಿ ನ ದೇವ ಇತಿ ವಿಶೇಷಃ ॥ (೬) ಸುವರ್ಣವರ್ಣಾಂ ಪದ್ಮಕರಾಂ ಚ ದೇವೀಂ ಸರ್ವೇಶ್ವರೀಂ ವ್ಯಾಪ್ತಜಟಾಂ ಚ ಬುಧ್ವಾ । ಸೈವೇತಿ ವೈ ಸುವ್ರತಾನಾಂ ತು ಮಾಸಾನ್ಮಹಾವಿಭೂತಿಂ ಶ್ರೀಸ್ತು ದದ್ಯಾನ್ನ ದೇವ ಇತ್ಯೃಗ್ವೇದಖಿಲೇಷು ॥ ೭ ॥ ॥ ೫ ॥**

ಅ ॥ (೧) ಹಾಗೆಯೇ ಅಗ್ನಿವೇಶ್ಯಶಾಖೆಯಲ್ಲಿ ಹೇಳಿದೆ. ಉತ್ಪತ್ತಿ ನಾಶಗಳಿಲ್ಲದಿರುವ, ಶಾಶ್ವತನಾದ ಮಹತ್ತತ್ತ್ವಾಭಿಮಾನಿ ಚತುರ್ಮುಖನಿಂದುತ್ತಮನಾದ ಶ್ರೀಪರಮಾತ್ಮನನ್ನು ತಿಳಿದು, (ಮುಕ್ತನಾಗುತ್ತಾನೆ) (ಈ ವಾಕ್ಯವನ್ನು ಶ್ರುತಿಯೇ ವ್ಯಾಖ್ಯಾನ ಮಾಡುತ್ತದೆ) ಬ್ರಹ್ಮರುದ್ರಾದಿ ದೇವತೆಗಳಿಂದ ಯಜ್ಞಾದಿಗಳಲ್ಲಿ ಕರೆಯಲ್ಪಟ್ಟವನು. ಶ್ರೀಯಾದಿಗುಣವಿಶಿಷ್ಟನಾದ ಶ್ರೀಪರಮಾತ್ಮನು ಮಹತ್ತತ್ತ್ವಾಭಿಮಾನಿಯಾದ ಚತುರ್ಮುಖನಿಂದುತ್ತಮನು (೨) (ಅವ್ಯಕ್ತತತ್ತ್ವವನ್ನೇ ಆನುಮಾನಿಕಂ ಎಂಬುವ ಸೂತ್ರದಲ್ಲಿ ಸೂತ್ರಕಾರರು ನಿಷೇಧಮಾಡಿದ್ದರಿಂದ ಅವ್ಯಕ್ತತತ್ತ್ವರೂಪ ಪರ ಎಂಬುವದಲ್ಲಿ ಅವ್ಯಕ್ತ ತತ್ತ್ವಾಭಿಮಾನಿನಿಯಾದ ಲಕ್ಷ್ಮೀದೇವಿಯಿಂದ ಪರಮಾತ್ಮನು ಶ್ರೇಷ್ಠನೆಂದು ವ್ಯಾಖ್ಯಾನಮಾಡಿದ್ದು ಹೇಗೆಂದರೆ) ಅವ್ಯಕ್ತತತ್ತ್ವವನ್ನಾಗಲೀ ಅವ್ಯಕ್ತತತ್ತ್ವಾಭಿಮಾನಿ ದೇವತೆಯನ್ನಾಗಲೀ ಸೂತ್ರಕಾರರು ನಿಷೇಧಮಾಡಲಿಲ್ಲ.

ಭಾರತ ಭಾಗವತಾದಿಗಳಲ್ಲಿ ಅವ್ಯಕ್ತತತ್ತ್ವವನ್ನು, ತದಭಿಮಾನಿ ದೇವತೆಯನ್ನು ಹೇಳಿದ್ದಾರೆ) (೩) ಪ್ರಸಿದ್ಧ ಶರೀರವು ಹೇಗೆ ಪುರುಷನ ಅಧೀನವೋ, ಹಾಗೆಯೇ ಅವ್ಯಕ್ತವೂ ಪರಮಾತ್ಮನ ಅಧೀನವಾಗಿದ್ದುದರಿಂದ ಶರೀರಕ್ಕೆ ಸದೃಶವಾದ ಪ್ರಧಾನಾದಿಗಳಲ್ಲಿ ಇರತಕ್ಕ ಶ್ರೀಪರಮಾತ್ಮನು ಅವ್ಯಕ್ತ ಮೊದಲಾದ ಶಬ್ದಗಳಿಂದ ವಾಚ್ಯನೆಂದು ಅಂಗೀಕರಿಸಿದೆ. ಹಾಗೆಯೇ ಶ್ರೀಪರಮಾತ್ಮನೂ ಪ್ರಧಾನಾದಿಗಳಲ್ಲಿ ನಿಯಾಮಕನಾಗಿದ್ದುದರಿಂದ ಅವ್ಯಕ್ತಾದಿ ಶಬ್ದಗಳಿಂದ ವಾಚ್ಯನೆನ್ನುವ ವಿಷಯವನ್ನು ಅವ್ಯಕ್ತಮಚಲಂ ಎಂಬ ಶ್ರುತಿಯೂ, ಅವ್ಯಕ್ತೋಽಕ್ಷರಃ ಎನ್ನುವ ಸ್ಮೃತಿಯೂ ತಿಳಿಸುತ್ತದೆ, ಇತ್ಯಾದಿಗಳಲ್ಲಿ ಸಾಂಖ್ಯಮತದಲ್ಲಿ ಪ್ರಸಿದ್ಧವಾದ ಪ್ರಧಾನವನ್ನು ನಿಷೇಧಿಸಿ, ಭಗವದಧೀನವೇ ಆದ ಅವ್ಯಕ್ತ ತತ್ತ್ವವೇ ಹೇಳಲ್ಪಟ್ಟಿದೆ. (ಅಂದರೆ ಆನುಮಾನಿಕಂ ಎಂಬುವ ಸೂತ್ರದಲ್ಲಿ ಸಾಂಖ್ಯಮತ ಪ್ರಸಿದ್ಧವಾದ ಸ್ವತಂತ್ರವಾದ ಜಡ ಪ್ರಕೃತಿಯು ಅವ್ಯಕ್ತಾತ್ಪುರುಷಃ ಪರಃ ಎಂಬುವ ವಾಕ್ಯದಲ್ಲಿ ಪ್ರತಿಪಾದಿಸಲ್ಪಡುವುದಿಲ್ಲವೆಂದು ಹೇಳಿ ಪರಮ ಮುಖ್ಯವೃತ್ತಿಯಿಂದ ಶ್ರೀಪರಮಾತ್ಮನೇ ಇಲ್ಲಿದ್ದ ಅವ್ಯಕ್ತ ಶಬ್ದದಿಂದ ಹೇಳಲ್ಪಡುತ್ತಾನೆ. ಆತನ ಅಧೀನವಾದ ಅವ್ಯಕ್ತ ತತ್ತ್ವವೂ ಅಮುಖ್ಯವೃತ್ತಿಯಿಂದ ಹೇಳಲ್ಪಡುತ್ತದೆಂದು ಹೇಳಿದ್ದಾರೆ. ಹೊರತು ಅವ್ಯಕ್ತ ತತ್ತ್ವವನ್ನು ನಿಷೇಧಮಾಡಲಿಲ್ಲ. (೪) ಹಾಗೆಯೇ ಸೌಕರಾಯಣ ಶ್ರುತಿಯಿದೆ. ವ್ಯಾಕೃತ ಶರೀರವಿದ್ದರೂ ವಿಷ್ಣುವಿಗೆ, ಪ್ರಸಿದ್ಧ ಶರೀರವು ಪುರುಷನ ಅಧೀನವಾದಂತೆ ಪರಮಾತ್ಮನ ಅಧೀನವೇ ಆದ ಪ್ರಕೃತ್ಯಭಿಮಾನಿನಿಯಾದ ವಿಷ್ಣುವಿನ ಪ್ರಿಯಳಾದ ಲಕ್ಷ್ಮೀದೇವಿಯು ಜಗದುತ್ಪಾದಕಳು ಅವಳಿಂದ ನಿಯಮ್ಯವಾದ ಜಡಪ್ರಕೃತಿಯು ಜಗತ್ತಿಗೆ ಉಪಾದಾನ ಕಾರಣವು. (೫) (ಹಿಂದೆ ಲಕ್ಷ್ಮೀದೇವಿಯನ್ನು ಪ್ರತ್ಯಕ್ಷೀಕರಿಸಿಕೊಂಡವರಿಗೆ ಶ್ರೀಪರಮಾತ್ಮನನ್ನು ಪ್ರತ್ಯಕ್ಷೀಕರಿಸಿಕೊಳ್ಳಲಿಕ್ಕೆ ಸೌಕರ್ಯವಿದೆ ಎಂಬುವ ಪ್ರಯೋಜನವನ್ನು ಹೇಳಿದ್ದಾರೆ. ಈಗ ಪ್ರಸಂಗವಾಗಿ ಇನ್ನೊಂದು ಪ್ರಯೋಜನವನ್ನು ಹೇಳುತ್ತಾರೆ.) ಚೆನ್ನಾಗಿ ವ್ರತಗಳನ್ನು ಮಾಡಿಕೊಂಡು ಇಂದ್ರಿಯನಿಗ್ರಹಾದಿಗಳನ್ನು ಮಾಡಿಕೊಂಡು ಲಕ್ಷ್ಮೀದೇವಿಯನ್ನು ಉಪಾಸನ ಮಾಡಿದವರಿಗೆ ಅಂತಹ ಲಕ್ಷ್ಮೀದೇವಿಯು ಶೀಘ್ರವಾಗಿ ಮಹಾ ಐಶ್ವರ್ಯವನ್ನು ಕೊಡುತ್ತಾಳೆ. ಪರಮಾತ್ಮನು ಹಾಗೆ ಶೀಘ್ರವಾಗಿ ಕೊಡುವುದಿಲ್ಲ, ಎಂದು ವಿಶೇಷವು. (೬) (ಈ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ—) ಬಂಗಾರದಂತೆ ಬಣ್ಣವುಳ್ಳ, ಕೈಯಲ್ಲಿ ಕಮಲವನ್ನು ಧರಿಸಿರುವ, ಸರ್ವರಿಗೂ ಪ್ರಿಯಳಾದ, ವ್ಯಾಪ್ತವಾದ ಜಟೆಯುಳ್ಳ ಲಕ್ಷ್ಮೀದೇವಿಯನ್ನು ತಿಳಿದು ಯಾರು ಉಪಾಸನ ಮಾಡುವವರೋ ಅಂತಹ ಚೆನ್ನಾಗಿ ಉಪಾಸನೆ ಮಾಡುವವರಿಗೆ ಲಕ್ಷ್ಮೀದೇವಿಯು ಒಂದು ಮಾಸದೊಳಗೆ ಮಹದೈಶ್ವರ್ಯವನ್ನು ಕೊಡುವಳು. ಪರಮಾತ್ಮನು ಶೀಘ್ರದಲ್ಲಿ ಮಹದೈಶ್ವರ್ಯವನ್ನು ಕೊಡಲಾರನು, ಎಂದು ಪದ್ಮ ದಹಿಲಗಳಲ್ಲಿ ಹೇಳಿದೆ ॥ ೫ ॥

ಟೀ – ನನ್ನ ಉಪಾಸನ ಮಾಡಿದವರಿಗೆ ಅಂತಹ ಕ್ಲೇಶವಿಲ್ಲವೆನ್ನುತ್ತಾರೆ—

ಗೀ ॥ ಯೇ ತು ಸರ್ವಾಣಿ ಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಾಃ ।
ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥ ೬ ॥
ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।
ಭವಾಮಿ ನಚಿರಾತ್ಪಾರ್ಥ ಮಯ್ಯಾವೇಶಿತಚೇತಸಾಂ ॥ ೭ ॥

ಅ ॥ ಪಾರ್ಥ – ಅರ್ಜುನನೇ, ಯೇ ತು – ಯಾರು, ಸರ್ವಾಣಿ ಕರ್ಮಾಣಿ – ಎಲ್ಲಾ ಕರ್ಮಗಳನ್ನು, ಮಯಿ – ನನ್ನಲ್ಲಿ, ಸನ್ನ್ಯಸ್ಯ – ಸಮರ್ಪಿಸಿ, (ಅಂದರೆ ಸರ್ವ ಸ್ವತಂತ್ರನಾದ ಶ್ರೀಹರಿಯೇ ನನ್ನಲ್ಲಿ ನಿಂತು ತನ್ನ ಪೂಜಾರೂಪವಾಗಿ ಸಮಸ್ತಕರ್ಮಗಳನ್ನು ಮಾಡಿಸುತ್ತಾನೆಂದು ಅನುಸಂಧಾನ ಮಾಡಿ

ಕ್ಷೆಂಶು,) ಮತ್ಪರಾಃ=ನಾನೇ ಸರ್ವೋತ್ತಮನೆಂದು ತಿಳಿದವರಾಗಿ, ಅನನ್ಯೇನೈವ ಯೋಗೇನ=ಲಕ್ಷ್ಮೀ ದೇವಿಯುನ್ನುಪಾಸನ ಮಾಡದೆ, ಕೇವಲ ಭಗವದ್ವಿಷಯಕವೇ ಆದ ಧ್ಯಾನದಿಂದಲೇ (ಪರಮಾತ್ಮನನ್ನು ಧ್ಯಾನಿಸುವುದರಿಂದಲೇ) ಮಾಂ=ನನ್ನನ್ನು, ಧ್ಯಾಯಂತಃ=ಧ್ಯಾನಮಾಡುವವರಾಗಿ, ಉಪಾಸತೇ= ಉಪಾಸನೆ ಮಾಡುತ್ತಾರೋ, ಅಥವಾ ಲಕ್ಷ್ಮೀ ಬ್ರಹ್ಮಾದಿಗಳು ಭಗವಂತನ ಅಧೀನರು, ಶ್ರೀಪರಮಾತ್ಮನ ಪರಿವಾರರು, ಎಂದು ತಿಳಿದುಕೊಂಡು ಪರಮಾತ್ಮನು ಸರ್ವೋತ್ತಮನೆಂದು ತಿಳಿದು ಧ್ಯಾನಿಸುವುದರಿಂದ ನನ್ನನ್ನು ಧ್ಯಾನಿಸುತ್ತಾ ಉಪಾಸನೆ ಮಾಡುತ್ತಾರೋ, ಮಯಿ=ನನ್ನಲ್ಲಿ, ಆವೇಶಿತಚೇತಸಾಂ=ಸಂಪೂರ್ಣ ಮನಸ್ಸನ್ನು ಇಟ್ಟಿರುವ, ತೇಷಾಂ=ಅಂತಹವರನ್ನು, ಮೃತ್ಯುಸಂಸಾರಸಾಗರಾತ್=ಮೃತ್ಯುರೂಪ ವಾದ ಸಂಸಾರವೆಂಬುವ ಸಮುದ್ರದಿಂದ, ನ ಚಿರಾತ್=ಶೀಘ್ರವಾಗಿ, ಸಮುದ್ಧರ್ತಾ=ದಾಟಿಸುವವನು, ಭವಾಮಿ=ಆಗುತ್ತೇನೆ (ಮೋಕ್ಷವನ್ನು ಹೊಂದಿಸಿಕೊಡುತ್ತೇನೆ) ॥ ೬, ೭ ॥

ಟೀ—ಈ ಅಧ್ಯಾಯದಲ್ಲಿ ಹೇಳತಕ್ಕ ಅರ್ಥವನ್ನು ಹೇಳುತ್ತಾರೆ—

**ಟಾ ॥ ಓಂ ॥ (೧) ಸಾಧನನಿರ್ಣಯೋಽತ್ರ ॥ (೨) ಶ್ರಿಯೋ ಜಾತಃ ಶ್ರಿಯ ಆನಿರಿಯಾಯ ಶ್ರಿಯಂ ವಯೋ ಜರಿತೃಭ್ಯೋ ದಧಾತಿ । ಶ್ರಿಯಂ ವಸಾನಾ ಅಮೃತತ್ವಮಾಯನ್ ಭವಂತಿ ಸತ್ಯಾ ಸಮಿಥಾ ಮಿತದ್ರೌ । (೩) ಉಪಾಸಿತಾ ಮುಕ್ತಿದಾ ಸದ್ಯ ಏವ ಹ್ಯಸ್ಯೇ-ಶಾನಾ ಜಗತೋ ವಿಷ್ಣುಪತ್ನೀ । ಯಾ ಶ್ರೀರ್ಲಕ್ಷ್ಮೀರೌಪಲಾ ಚಾಂಬಿಕೇತಿ ಹ್ರೀಶ್ಚೇ-ತ್ಯುಕ್ತಾ ಸಂವಿದಗ್ರ್ಯಾ ಸುವಿದ್ಯೇತ್ಯಾದಿಶ್ರುತಿಭ್ಯಃ ॥ (೪) ಶ್ರೀಸ್ಸುತುಷ್ಟಾ ಹರೇಸ್ತೋ-ಷಂ ಜನ(ಗಮ)ಯೇತ್ ಕ್ಷಿಪ್ರಮೇವ ತು । ಅತುಷ್ಟಾ ತದತುಷ್ಟಿಂ ಚ ತಸ್ಮಾದ್ಧ್ಯೇ-ಯೈವ ಸಾ ಸದಾ ॥ (೫) ಅವ್ಯಕ್ತಂ ಪ್ರಕೃತಿಂ ಪ್ರಾಹುಃ ಕೂಟಸ್ಥಂ ಚಾಕ್ಷರಂ ಚ ತಾಂ । ಪ್ರಧಾನಮಿತಿ ಚ ಪ್ರಾಹುರ್ಮಹಾಪುರುಷ ಇತ್ಯಪಿ । ತಾಂ ಬ್ರಹ್ಮಮಹದಿ-ತ್ಯಾಹುಃ ಪರಂ ಜೀವಂ ಪರಾಂ ಚಿತಿಂ ॥ ೧ ॥**

ಅ ॥ (೧) ಮೋಕ್ಷಕ್ಕೆ ಸಾಧನಗಳಾದ ಅವ್ಯಕ್ತೋಪಾಸನ. ಭಗವದುಪಾಸನಗಳ ಮಧ್ಯದಲ್ಲಿ ಭಗವಂತನ ಉಪಾಸನವೇ ಶ್ರೇಷ್ಠವೆಂದು ಈ ಅಧ್ಯಾಯದಲ್ಲಿ ನಿರ್ಣಯಿಸಲ್ಪಡುತ್ತದೆ. (೨) (ಭಗವಂತನ ಉಪಾಸನದಂತೆಯೇ ಲಕ್ಷ್ಮೀದೇವಿಯ ಉಪಾಸನೆಯೂ ಕೂಡ ಮೋಕ್ಷಸಾಧನನೆಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಯಾವ ಪುರುಷನು ಲಕ್ಷ್ಮೀದೇವಿಯನ್ನು ಚೆನ್ನಾಗಿ ಪೂಜಿಸುವುದಕ್ಕಾಗಿಯೇ ಹುಟ್ಟಿರುವನೋ, ಅದಕ್ಕಾಗಿಯೇ ಮನೆಯಿಂದ ಹೊರಟಿರುವನೋ, ಉಪದೇಶಿಸತಕ್ಕ ಗುರುಗಳಿಂದಲೇ ತನಗೆ ಸಂಪತ್ತನ್ನೂ ಆಯುಷ್ಯವನ್ನೂ ಅಧಿಕ ಸಂಪಾದಿಸಿಕೊಳ್ಳುತ್ತಾನೋ, ಲಕ್ಷ್ಮೀದೇವಿಯನ್ನು ಉಪಾಸನೆ ಮಾಡಿದ ಪುರುಷರು ಮೋಕ್ಷವನ್ನು ಹೊಂದುತ್ತಾರೆ. ಅಂತಹ ಗುರು ಶಿಷ್ಯರಿಬ್ಬರ ಅಭೀಷ್ಟಗಳು ಸತ್ಯಗಳಾಗುತ್ತವೆ. (೩) ಯಾರು ಶ್ರೀಃ, ಲಕ್ಷ್ಮೀಃ, ಔಪಲಾ, ಅಂಬಿಕಾ, ಹ್ರೀಃ, ಸಂವಿತ್, ಅಗ್ರ್ಯಾ, ಸುವಿದ್ಯಾ, ಇತ್ಯಾದಿ ಪ್ರಕಾರ ಹೇಳಿಸಿಕೊಳ್ಳಲ್ಪಟ್ಟಿದ್ದಾಳೋ, ಅಂತಹ ಲಕ್ಷ್ಮೀದೇವಿಯ ಉಪಾಸನೆಗೂ ಮೋಕ್ಷಸಾಧನತ್ವವು ಉಕ್ತವಾಗಿದೆ. ಈ ಜಗತ್ತಿಗೆ ನಿಯಾಮಕಳಾದ ವಿಷ್ಣುವಿನ ಪ್ರಿಯಪತ್ನಿಯಾದ ಅಂತಹ ಲಕ್ಷ್ಮೀದೇವಿಯು ಉಪಾಸನೆಮಾಡಲ್ಪಟ್ಟರೆ ಉಪಾಸಕನಿಗೆ ತತ್ಕ್ಷಣದಲ್ಲಿ ಮೋಕ್ಷವನ್ನು ಕೊಡುತ್ತಾಳೆ. ಇತ್ಯಾದಿ ಶ್ರುತಿಗಳಿಂದ (೪) (ಲಕ್ಷ್ಮಿಯ ಉಪಾಸನೆಯು ಸ್ವತಂತ್ರವಾಗಿ ಮೋಕ್ಷಸಾಧನವಲ್ಲ, ಮತ್ತೆ ಲಕ್ಷ್ಮೀದೇವಿಯ ಪ್ರಸಾದವಾಗಿ ಆ ಮೇಲೆ ಭಗವಂತನ ಪ್ರಸಾದವಾಗಿಯೇ ಮೋಕ್ಷವೆನ್ನುತ್ತಾರೆ ।

ಲಕ್ಷ್ಮೀದೇವಿಯು ಚೆನ್ನಾಗಿ ಸಂತುಷ್ಟಳಾಗಿ ಶೀಘ್ರವಾಗಿಯೇ ಶ್ರೀಪರಮಾತ್ಮನಿಗೆ ಸಂತೋಷವನ್ನು ಹುಟ್ಟಿಸುತ್ತಾಳೆ (ಪರಮಾತ್ಮನ ಅನುಗ್ರಹವು ಉಪಾಸಕರಿಗೆ ಆಗುವಂತೆ ಮಾಡುತ್ತಾಳೆ.) ಲಕ್ಷ್ಮೀದೇವಿಯು ಸಂತುಷ್ಟಳಾಗದಿದ್ದರೆ ಪರಮಾತ್ಮನಿಗೂ ಸಂತೋಷವನ್ನು ಹೊಂದಿಸುವುದಿಲ್ಲ. (ಶ್ರೀ ಪರಮಾತ್ಮನ ಅನುಗ್ರಹವಾಗುವಂತೆ ಮಾಡುವುದಿಲ್ಲ) ಆದಕಾರಣ ಸದಾ ಆ ಲಕ್ಷ್ಮೀದೇವಿಯನ್ನು ಧ್ಯಾನಿಸಲೇ ಬೇಕು. (೫) (ಲಕ್ಷ್ಮೀ ಪ್ರಸಾದವು ಭಗವತ್ಪ್ರಸಾದವನ್ನು ಹುಟ್ಟಿಸುತ್ತದೆಂಬುವುದು ಹೇಗೆ? ಎಂದರೆ–) ಲಕ್ಷ್ಮೀದೇವಿಗೆ ಅತಿ ಮಹಿಮೆಯನ್ನು ಹೇಳುತ್ತಾರೆ. ಆ ಲಕ್ಷ್ಮೀದೇವಿಯನ್ನು ಅವ್ಯಕ್ತಳೆಂದೂ ಪ್ರಕೃತಿಯೆಂದೂ ಕೂಟಸ್ಥಳೆಂದೂ, ಅಕ್ಷರಳೆಂದೂ, ಪ್ರಧಾನಳೆಂದೂ, ಮಹಾಪುರುಷಳೆಂದೂ, ಮಹದ್ಬ್ರಹ್ಮಳೆಂದೂ ಪರಜೀವಳೆಂದೂ ಪರಚಿತಿ ಎಂದೂ ಹೇಳುತ್ತಾರೆ. ॥೧॥

ಹೀ—ಲಕ್ಷ್ಮೀದೇವಿಗೆ ಇಂತಹ ಮಹಾಮಹಿಮೆಯು ಇದ್ದರೆ ಲಕ್ಷ್ಮೀದೇವಿಯ ಪ್ರಸಾದವೇ ತನ್ನಕ್ಕೈನೇ ಮೋಕ್ಷಾದಿ ಪುರುಷಾರ್ಥಕ್ಕೆ ಕಾರಣವು ಏಕೆ ಆಗಲಾರದು. ಅದು ಶ್ರೀಪರಮಾತ್ಮನ ಪ್ರಸಾದಕ್ಕೆ ಸಾಧನವೆಂದು ಏಕೆ ಹೇಳುವುದೆಂದರೆ—

ಟಾ ॥ (೧) ತಸ್ಮಾತ್ತು ಪರಮೋ ವಿಷ್ಣುರ್ಯೋ ಬ್ರಹ್ಮ ಪರಮಂ ಮಹದಿತಿ ಬ್ರಹ್ಮಾಂಡವಚನಾಚ್ಛ್ರೀವ್ಯಕ್ತ್ಯೋಪಾಸನಾನ್ಮೋಕ್ಷಾಶಂಕಯಾ ಪೃಚ್ಛತಿ ॥ (೨) ಕೂಟಸ್ಥೋಽಕ್ಷರ ಉಚ್ಯತ ಇತ್ಯುತ್ತರವಚನಾತ್ಕೂಟಸ್ಥಮಚಲಮಿತ್ಯತ್ರಾಪ್ಯುಕ್ತೇರವ್ಯಕ್ತಶಬ್ದಶ್ರಿತ್ವಶ್ರೀವಾಚೀ ॥ (೩) ಅನ್ಯಥಾ ಯೇ ತ್ವಾಂ ಪರ್ಯುಪಾಸತೇ ಯೇ ಚಾಪ್ಯಕ್ಷರಂ ತೇಷಾಂ ಕೇ ಯೋಗವಿತ್ತಮಾ ಇತಿ ಭೇದೇನ ಪ್ರಶ್ನಾನುಪಪತ್ತಿಃ ॥ (೪) ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನಿತಿ ತೇನೈವೋಕ್ತತ್ವಾತ್ ॥೨॥

ಅ ॥ (೧) ಆ ಲಕ್ಷ್ಮೀದೇವಿಯಿಂದಲೂ ಶ್ರೀವಿಷ್ಣುವು ಸರ್ವೋತ್ತಮನು ಪರಮಮಹದ್ಬ್ರಹ್ಮನು ಎಂದು ಬ್ರಹ್ಮಾಂಡಪುರಾಣವಚನದ್ದೆಶೆಯಿಂದ ಲಕ್ಷ್ಮೀದೇವಿಯನ್ನು ಪಾಸನೆ ಮಾಡಿದುದರಿಂದ ಮೋಕ್ಷವಾಗಬಹುದೆಂಬುವ ಶಂಕೆಯಿಂದ ಪ್ರಶ್ನೆಮಾಡುತ್ತಾನೆ. (ಅಂದರೆ (1) ಲಕ್ಷ್ಮೀದೇವಿಗಿಂತಲೂ ಶ್ರೀವಿಷ್ಣುವು ಉತ್ತಮನಾದುದರಿಂದ ಲಕ್ಷ್ಮೀದೇವಿಯ ಪ್ರಸಾದವು ಸ್ವತಂತ್ರವಾಗಿ ಮೋಕ್ಷಕ್ಕೆ ಸಾಧನವಲ್ಲ. ಮತ್ತೆ ವಿಷ್ಣುವಿನ ಪ್ರಸಾದವನ್ನು ಹುಟ್ಟಿಸಿಯೇ ಮೋಕ್ಷಸಾಧನವಾಗುವುದು. (2) ಹೀಗೆ ಸ್ಮೃತಿಪುರಾಣವಾಕ್ಯಗಳಿಂದ ವಿಷ್ಣುವಿನ ಉಪಾಸನದಂತೆ ಲಕ್ಷ್ಮೀದೇವಿಯ ಉಪಾಸನೆಯೂ ಮೋಕ್ಷಸಾಧನವೆಂಬುವ ಪ್ರತೀತಿಯಿಂದ, ಭಗವದುಪಾಸನವು ಮೋಕ್ಷಸಾಧನವೋ ಲಕ್ಷ್ಮೀದೇವಿಯ ಉಪಾಸನವು ಮೋಕ್ಷಸಾಧನವೋ ಎಂಬುವ ಶಂಕೆಯಿಂದ ಇವುಗಳಲ್ಲಿ ಯಾವುದು ಶ್ರೇಷ್ಠವೆಂದು ಪ್ರಶ್ನಿಸುತ್ತಾನೆ) (೨) (ಭಗವದುಪಾಸನದಂತೆ ಲಕ್ಷ್ಮೀದೇವಿಯ ಉಪಾಸನೆಯೂ ಮೋಕ್ಷಸಾಧನವಾಗುವುದಾದರೆ ಲಕ್ಷ್ಮೀದೇವಿಯ ವಿಷಯದಲ್ಲಿಯೇ ಪ್ರಶ್ನೆ ಮಾಡಬೇಕಿತ್ತು. ಅವ್ಯಕ್ತೋಪಾಸನ ವಿಷಯದಲ್ಲಿ ಪ್ರಶ್ನೆ ಮಾಡಿದ್ದು ಏಕೆ ಎಂದರೆ) ಕೂಟಸ್ಥೋಽಕ್ಷರ ಉಚ್ಯತೇ ಎಂಬುವ ಉತ್ತರವಾಕ್ಯದಿಂದ ಕೂಟಸ್ಥಮಚಲಂ ಎಂಬುವ ಉಕ್ತಿಯಿಂದ ಅವ್ಯಕ್ತಶಬ್ದವು ಅಚೇತನ ಪ್ರಕೃತ್ಯಭಿಮಾನಿನಿಯಾದ ಲಕ್ಷ್ಮೀದೇವಿಯನ್ನು ಹೇಳುತ್ತದೆ (ಅಂದರೆ ಕೂಟಸ್ಥೋಽಕ್ಷರ ಉಚ್ಯತೇ ಎಂಬೀ ಮೇಲಿನ ವಾಕ್ಯದಲ್ಲಿ ಲಕ್ಷ್ಮೀದೇವಿಯಲ್ಲಿಯೇ ಪ್ರಯುಕ್ತವಾದ ಕೂಟಸ್ಥ ಅಕ್ಷರ ಶಬ್ದಗಳು ಇಲ್ಲಿಯೂ ಅವ್ಯಕ್ತದಲ್ಲಿ ಪ್ರಯೋಗಿಸಿರುವುದರಿಂದ ಅವ್ಯಕ್ತ ಶಬ್ದದಿಂದ ಲಕ್ಷ್ಮಿಯನ್ನೇ ತಿಳಿದುಕೊಳ್ಳಬೇಕು ಆದಕಾರಣ ಲಕ್ಷ್ಮ್ಯುಪಾಸನವು ಮೋಕ್ಷಸಾಧನವೆಂದು ತೋರುವುದರಿಂದ ಅವ್ಯಕ್ತೋಪಾಸನ ವಿಷಯದಲ್ಲಿ ಪ್ರಶ್ನೆ ಮಾಡಿದ್ದು ಯುಕ್ತವು.) (೩) (ಅನ್ಯಥಾದಿ...

...ಕ್ಷನಲ್ಲಿ ಮುಖ್ಯಗಳಾಗಿರುವುದರಿಂದ ಪರಬ್ರಹ್ಮನನ್ನು ಏಕೆ ಇಟ್ಟುಕೊಳ್ಳಬಾರದೆಂದರೆ—) ಹೀಗೆ ಹೇಳದೆ **ಯೇ ತ್ವಾಂ ಪರ್ಯುಪಾಸತೇ, ಯೇ ಚಾಪ್ಯಕ್ಷರಂ, ತೇಷಾಂ ಕೇ ಯೋಗವಿತ್ತಮಾಃ** ಎಂಬ ಭೇದದಿಂದ ಪ್ರಶ್ನೆ ಮಾಡಿದ್ದು ಕೂಡದೆ ಹೋಗುವುದು. (ಅಂದರೆ—ಅವ್ಯಕ್ತ ಶಬ್ದದಿಂದ ಪರಬ್ರಹ್ಮನನ್ನು ಇಟ್ಟುಕೊಂಡರೆ ಭಗವದುಪಾಸಕ, ಲಕ್ಷ್ಮೀದೇವಿಯ ಉಪಾಸಕ, ಇವರ ಮಧ್ಯದಲ್ಲಿ ಉತ್ತಮನು ಯಾರು, ಎಂದು ಪರಮಾತ್ಮನಿಗೂ ಅವ್ಯಕ್ತಕ್ಕೂ ಭೇದದಿಂದ ಅರ್ಜುನನು ಪ್ರಶ್ನೆಮಾಡಿದ್ದು ಕೂಡದೆ ಹೋಗುವುದು.) (೪) (ಏಕೆ ಕೂಡಲಾರದೆಂದರೆ ಶ್ರೀಕೃಷ್ಣನು ಪರಬ್ರಹ್ಮನೆಂದು ಅರ್ಜುನನೇ ಹೇಳಿರುತ್ತಾನೆನ್ನುತ್ತಾರೆ—) ಶ್ರೀಕೃಷ್ಣನೇ ನೀನು ಸರ್ವೋತ್ತಮನು, ಸರ್ವಗುಣಪರಿಪೂರ್ಣನು, ಉತ್ತಮಾಶ್ರಯನು, ಸರ್ವರನ್ನು ಪವಿತ್ರೀಕರಿಸುವವನು, ಎಂದು ಅರ್ಜುನನೇ ಶ್ರೀಕೃಷ್ಣನನ್ನು ಸ್ತುತಿಸಿರುತ್ತಾನೆ. ॥ ೨ ॥

ಟೀ—ಕೆಲವರು ಅವ್ಯಕ್ತಪದದಿಂದ ಶೂನ್ಯ ಎಂಬುವ ನಿರ್ಗುಣಬ್ರಹ್ಮನು ಹೇಳಲ್ಪಡುತ್ತಾನೆಂದು ತಿಳಿದುಕೊಂಡು ನಿರ್ಗುಣಬ್ರಹ್ಮ ಸಗುಣಬ್ರಹ್ಮ ಉಪಾಸಕರಲ್ಲಿ ಯಾರು ಶ್ರೇಷ್ಠರೆಂದು ಪ್ರಶ್ನೆಯ ಅರ್ಥವನ್ನು ಕಲ್ಪಿಸಿಕೊಂಡು ಅಂತಹ ನಿರ್ಗುಣಬ್ರಹ್ಮೋಪಾಸಕರಿಗೇನೇ ಆಧಿಕ್ಯವೆಂದು ಗೀತಾಭಿಪ್ರಾಯವೆಂದು ಹೇಳುವವರನ್ನು ನಿರಾಕರಿಸುತ್ತಾರೆ—

ತಾ ॥ (೧) **ಯೇ ತು ತೇ ಮೇ ಯುಕ್ತತಮಾ ಮತಾಃ ಮಯ್ಯೇವ ಮನ ಆಧತ್ಸ್ವೇತ್ಯಾದೌ ಭಗವತೋಕ್ತೇಃ ಅವ್ಯಕ್ತೋಪಾಸಕಾನಾಮಾಧಿಕ್ಯಂ ವದಂತಿ ತೇ ತ್ವಪಲಾಪಕತ್ವಾ-ದತೀವ(ದೇವಾತಿ)ಸಾಹಸಿಕಾ ಇತಿ ಸುಶೋಚ್ಯಾ ಏವ ॥ (೨) ನ ಚಲೇತ್ಸ್ವಪದಾ-ದ್ಯಸ್ಮಾದಚಲಾ ಶ್ರೀಃ ಸ್ಮೃತೋ ಮತೇತ್ಯಾಗ್ನೇಯೇ । (೩) ಸೂಕ್ಷ್ಮತ್ವಾದಪ್ರಸಿದ್ಧತ್ವಾ-ದ್ಗುಣಬಾಹುಲ್ಯತಸ್ತಥಾ ॥ ಅನಿರ್ದೇಶ್ಯಾ ತಥಾಽವ್ಯಕ್ತಾವಚಿಂತ್ಯಾ ಶ್ರೀಶ್ಚ ಮಾಧವ ಇತಿ ನಾರದೀಯೇ ॥ ೩ ॥** ॥ ೧—೭ ॥

ಅ ॥ (೧) **ತೇ ಮೇ ಯುಕ್ತತಮಾ ಮತಾಃ** ಎಂದು ಶ್ರೀಕೃಷ್ಣನು ತನ್ನನ್ನುಪಾಸನೆಮಾಡುವವರಿಗೆ ಉತ್ತಮತ್ವವನ್ನು ಹೇಳಿ **ಮಯ್ಯೇವ ಮನ ಆಧತ್ಸ್ವ** ಎಂದು ನನ್ನನ್ನುಪಾಸನೆಮಾಡುವವರೇ ಉತ್ತಮರಾಗಿರುವುದರಿಂದ ನನ್ನನ್ನೇ ಉಪಾಸನೆ ಮಾಡು ಎಂದು ಸ್ಪಷ್ಟವಾಗಿ ಶ್ರೀಕೃಷ್ಣನು ಹೇಳಿದರೂ ಯಾರು ನಿರ್ಗುಣೋಪಾಸಕರಿಗೆ ಆಧಿಕ್ಯವನ್ನು ಹೇಳುತ್ತಾರೋ, ಅವರು ಅಪಲಾಪಮಾಡತಕ್ಕವರಾದುದರಿಂದ ಅತ್ಯಂತ ಸಾಹಸಕರ್ಮಮಾಡುವವರು. ಆದಕಾರಣ ನಾಶಹೊಂದುವರೆಂದು ಶೋಚನಾರ್ಹರೇ. (ಸಮಾಧಾನವನ್ನು ಹೇಳಲಿಕ್ಕೆ ಪ್ರತಿವಾದಿತನವನ್ನು ಹೊಂದಲಿಕ್ಕೂ ಯೋಗ್ಯರಲ್ಲ.) (೨) (ವ್ಯಾಪಾರವನ್ನು ಮಾಡುತ್ತಿರುವ ಲಕ್ಷ್ಮೀದೇವಿಗೆ **ಅಚಲಂ ಧ್ರುವಂ** ಎಂದು ಅಚಲತ್ವ ಹೇಳಿದ್ದು ಹೇಗೆ? ಎಂದರೆ-) ಲಕ್ಷ್ಮೀದೇವಿಯು ತನ್ನ ಪದವಿಯಿಂದ ಯಾವಾಗಲೂ ಕದಲದಿರುವುದರಿಂದ ಅಚಲಾ ಎನಿಸುತ್ತಾಳೆ, ಎಂದು ಅಗ್ನೇಯಪುರಾಣದಲ್ಲಿದೆ (೩) ಲಕ್ಷ್ಮೀದೇವಿಯೂ ಶ್ರೀಪರಮಾತ್ಮನೂ ಇಬ್ಬರೂ ಸೂಕ್ಷ್ಮರಾಗಿರುವುದರಿಂದ ಅವ್ಯಕ್ತರೆಂದೂ, ಅಪ್ರಸಿದ್ಧರಾಗಿರುವುದರಿಂದ ಅಂದರೆ ಸಾಕಲ್ಯೇನ ತಿಳಿಯಲಿಕ್ಕೆ ಅಶಕ್ಯರಾದುದರಿಂದ ಅನಿರ್ದೇಶ್ಯರೆಂದೂ ಗುಣಗಳು ಅನಂತಗಳಾಗಿರುವುದರಿಂದ ಅಚಿಂತ್ಯರೆಂದೂ ಹೇಳಲ್ಪಡುತ್ತಾರೆ, ಎಂದು ನಾರದೀಯ ಪುರಾಣದಲ್ಲಿದೆ. ॥ ೩ ॥ ॥ ೧—೭ ॥

ಟೀ—ಹಿಂದೆ ಹೇಳಿದ ಪ್ರಕಾರ ಭಗವದುಪಾಸನೆಯೇ ಶ್ರೇಷ್ಠವಾಗಿರುವುದರಿಂದ ಅದನ್ನೇ ಮಾಡು. ಅದನ್ನು ಮಾಡಲಿಕ್ಕೆ ಶಕ್ತಿಯಿಲ್ಲವಾದರೆ ಅದರ ಸಿದ್ಧಿಗಾಗಿ ಬೇರೆ ಉಪಾಯಗಳನ್ನು ಸಂಪಾದಿಸು ಎನ್ನುತ್ತಾರೆ—

**ಗೀ || ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ |**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ || ೮ ||**

ಅ || ಮಯ್ಯೇವ = ನನ್ನಲ್ಲಿಯೇ, ಮನಃ = ಮನಸ್ಸನ್ನು, ಆಧತ್ಸ್ವ = ಇಡು. (ನನ್ನನ್ನೇ ಉಪಾಸನೆಮಾಡು.) (ಉಪಾಸನೆ ಮಾಡಲಿಕ್ಕೆ ಸಾಧ್ಯವಾಗದಿದ್ದರೆ) ಮಯಿ = ನನ್ನಲ್ಲಿ, ಬುದ್ಧಿಂ = ಜ್ಞಾನವನ್ನು, ನಿವೇಶಯ = ಇಡು. (ನನ್ನ ವಿಷಯಕ ಜ್ಞಾನವನ್ನು ಸಂಪಾದಿಸು.) ಅತ ಊರ್ಧ್ವಂ = ನನ್ನ ಜ್ಞಾನವನ್ನು ಸಂಪಾದಿಸಿದ ಮೇಲೆ, ಮಯ್ಯೇವ = ನನ್ನಲ್ಲಿಯೇ, ನಿವಸಿಷ್ಯಸಿ = ನಿರ್ದುಃಖಾನಂದಾನುಭವರೂಪವಾದ ಸ್ಥಿತಿಯನ್ನು ಹೊಂದುವಿ. (ಮೋಕ್ಷವನ್ನು ಹೊಂದುವಿ.) ಸಂದೇಹವಿಲ್ಲ. || ೮ ||

**ಗೀ || ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಂ |**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ || ೯ ||**

ಅ || ಧನಂಜಯ = ಅರ್ಜುನನೇ, ಮಯಿ = ನನ್ನಲ್ಲಿ, ಸ್ಥಿರಂ = ಸ್ಥಿರವಾಗುವ ಹಾಗೆ, ಚಿತ್ತಂ = ಮನಸ್ಸನ್ನು, ಸಮಾಧಾತುಂ = ಇರಿಸುವುದಕ್ಕೆ, ನ ಶಕ್ನೋಷಿ = ಸಮರ್ಥನಾಗದಿದ್ದರೆ, ತತಃ = ನನ್ನಲ್ಲಿ ಮನಸ್ಸನ್ನು ಇಡಲಿಕ್ಕೆ ಸಮರ್ಥನಾಗದಿರುವುದರಿಂದ, ಅಭ್ಯಾಸಯೋಗೇನ = ಬೇರೆ ಕಡೆ ಮನಸ್ಸನ್ನು ಹೋಗದಿದ್ದಂತೆ ಮಾಡಿ ಮತ್ತು ಮತ್ತು ಪರಮಾತ್ಮನಲ್ಲಿಯೇ ಮನಸ್ಸನ್ನು ಸ್ಥಿರವಾಗಿ ಇಡುವಿಕೆ, ಎಂಬುವ ಅಭ್ಯಾಸರೂಪವಾದ ಉಪಾಯದಿಂದ, ಮಾಂ = ನನ್ನನ್ನು, ಆಪ್ತುಂ = ತಿಳಿದು ಹೊಂದಲಿಕ್ಕೆ ಇಚ್ಛ = ಇಚ್ಛಿಸು || ೯ ||

**ಗೀ || ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ |**
**ಮದರ್ಥಮಪಿ ಕರ್ಮಾಣಿ ಕುರ್ವನ್ಸಿದ್ಧಿಮವಾಪ್ಸ್ಯಸಿ || ೧೦ ||**

ಅ || ಅಭ್ಯಾಸೇಽಪಿ = ಹಾಗೆ ಅಭ್ಯಾಸ ಮಾಡಲಿಕ್ಕೂ, ಅಸಮರ್ಥಃ ಅಸಿ = ಸಾಮರ್ಥ್ಯವಿಲ್ಲದವನಾಗಿದ್ದರೆ, ಮತ್ಕರ್ಮಪರಮಃ = ನನ್ನ ಪ್ರೀತಿಗಾಗಿ ನನ್ನ ವಿಷಯಕ ಕರ್ಮಗಳನ್ನು ಮಾಡುವುದೇ ಉತ್ತಮವೆಂದು ತಿಳಿದವನು, ಭವ = ಆಗು, ಮದರ್ಥಮಪಿ = ನನ್ನ ಉದ್ದೇಶದಿಂದ ನನ್ನ ಪ್ರೀತಿಗಾಗಿ, ಕರ್ಮಾಣಿ = ಕರ್ಮಗಳನ್ನು, ಕುರ್ವನ್ನಪಿ = ಮಾಡುವವನಾಗಿಯೂ, ಸಿದ್ಧಿಂ = ಜ್ಞಾನಸಿದ್ಧಿಯನ್ನು, ಅವಾಪ್ಸ್ಯಸಿ = ಹೊಂದುವಿ. || ೧೦ ||

**ಗೀ || ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ |**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ || ೧೧ ||**

ಅ || ಅಥ = ಅಥವಾ, ಏತದಪಿ = ನನ್ನ ಪ್ರೀತಿಗಾಗಿ ಎಲ್ಲಾ ಜಪ ಪೂಜಾ ಯಜ್ಞ ಮೊದಲಾದ ಕರ್ಮಗಳ ಅನುಷ್ಠಾನವನ್ನು ಕೂಡ, ಕರ್ತುಂ = ಮಾಡುವುದಕ್ಕೆ, ಅಶಕ್ತಃ ಅಸಿ ಅಥ = ಅಸಮರ್ಥನಾಗಿದ್ದರೆ, ಮದ್ಯೋಗಮಾಶ್ರಿತಃ = ಬೇರೆ ದೇವತೆಗಳನ್ನು ದ್ವೇಷಿಸಿ ಕರ್ಮಗಳನ್ನು ಮಾಡಿ ಅಂತ್ಯದಲ್ಲಿ ನನ್ನಲ್ಲಿ ಸಮರ್ಪಣರೂಪವಾದ ಉಪಾಯವನ್ನು ಸಮಸ್ತಕರ್ಮಗಳನ್ನು ವಿಷ್ಣುವಿಷಯಕವಾಗಿ ಮಾಡುವ ಯಾವುದು ಉಪಾಯವೋ ಅಂತಹ ಉಪಾಯವನ್ನು ಆಶ್ರಯಿಸಿದವನಾಗು. ತತಃ = ಅದರಿಂದ ಯತಾ

ಯತಾತ್ಮವಾನ್ = ಮನಸ್ಸನ್ನು ಸ್ವಾಧೀನೀಕರಿಸಿಕೊಂಡವನಾಗಿ, ಸರ್ವಕರ್ಮಫಲತ್ಯಾಗಂ = ಎಲ್ಲಾ ಕರ್ಮ ಗಳಿಂದುಂಟಾಗುವ ಕ್ಷುದ್ರಫಲಗಳ ಅಪೇಕ್ಷೆಯ ಪರಿತ್ಯಾಗವನ್ನು, ಕುರು = ಮಾಡು. (ಸಮಸ್ತ ಪ್ರಕಾರ ಗಳಿಂದ ನನ್ನ ಉಪಾಸನವನ್ನೇ ಮಾಡಬೇಕು.) ॥ ೧೧ ॥

ಪೀ—ಅವ್ಯಕ್ತೋಪಾಸಕರಿಗೆ ಗೀತೆಯಲ್ಲಿ ಕ್ಲೇಶಾತಿಶಯವು ತೋರುತ್ತದೆ. ಭಗವದುಪಾಸಕರಿಗಾ ದರೂ ದುಃಖಾಭಾವವು ತೋರುವುದಿಲ್ಲ. ಆದಕಾರಣ ತದೇತತ್ಸರ್ವಂ ಎಂದು ಹೇಳಿದ್ದು ಹೇಗೆ ಕೂಡು ತ್ತದೆ ಎಂದರೆ—

ಭಾ॥ (೧) ಮದುಪಾಸಕಾನಾಂ ಭಕ್ತಾನಾಂ ನ ಕಶ್ಚಿತ್ಕ್ಲೇಶ ಇತಿ ದರ್ಶಯತಿ । ಯೇ ತ್ವಿತ್ಯಾದಿನಾ ॥ (೨) ಉಕ್ತಂ ಚ ಸೌಕರಾಯಣಶ್ರುತೌ । ಉಪಾಸತೇ ಯೇ ಪುರುಷಂ ವಾಸುದೇವಮವ್ಯಕ್ತಾದೇರೀಪ್ಸಿತಂ ಕಿಂ ನು ತೇಷಾಮಿತಿ ॥ (೩) ತೇಷಾಮೇಕಾಂತಿನಃ ಶ್ರೇಷ್ಠಾಸ್ತೇ ಚೈವಾನನ್ಯದೈವತಾಃ । ಅಹಮೇವ ಗತಿಸ್ತೇಷಾಂ ನಿರಾಶೀಃ ಕರ್ಮಕಾರಿಣಾಮಿತಿ ಮೋಕ್ಷಧರ್ಮೇ ॥ ೬—೧೧ ॥

ಅ॥ (೧) ನನ್ನನ್ನುಪಾಸನ ಮಾಡತಕ್ಕ ಭಕ್ತರಿಗೆ ಯಾವುದೊಂದು ಕ್ಲೇಶವೂ ಇಲ್ಲವೆಂದು ಯೇ ತು ಇತ್ಯಾದಿಗಳಿಂದ ತೋರಿಸುತ್ತಾರೆ. (೨) ಸೌಕರಾಯಣ ಶ್ರುತಿಯಲ್ಲಿ ಈ ಪ್ರಮೇಯವು ಹೇಳಲ್ಪಟ್ಟಿದೆ. ಯಾರು ಗುಣಪರಿಪೂರ್ಣನಾದ ವಾಸುದೇವನನ್ನು ಉಪಾಸನೆಮಾಡುತ್ತಾರೋ, ಅಂತಹವರಿಗೆ ಅವ್ಯಕ್ತಾದಿ ಗಳಿಂದ ಅಪೇಕ್ಷಿಸತಕ್ಕದು ಯಾವ ಫಲವೂ ಇರುವುದಿಲ್ಲ ಮತ್ತೆ ಎಲ್ಲಾ ಇಷ್ಟ ಫಲವೂ ಶ್ರೀಪರಮಾತ್ಮ ನಿಂದಲೇ ಲಭಿಸುತ್ತದೆ. (೩) ಆರ್ತಾ(ದುಃಖಿತಾ)ದಿಗಳ ಮಧ್ಯದಲ್ಲಿ ಏಕಾಂತಭಕ್ತರು ಶ್ರೇಷ್ಠರು. ಅಂತಹವರು ಶ್ರೀವಿಷ್ಣುವು ಹೊರತು ಬೇರೆಯವರು ಸರ್ವೋತ್ತಮರೆಂದು ತಿಳಿಯುವುದಿಲ್ಲ. ಫಲೇಚ್ಛೆಯನ್ನು ತೊರೆದು ಕರ್ಮಕಾರಿಗಳಾದ ಅಂತಹವರಿಗೆ ನಾನೇ ಸಾಧನಾದಿಗಳನ್ನು ಸಂಪಾದಿಸಿಕೊಡುವವನು. ॥ ೬-೧೧ ॥

ಪೀ—ಮಯಿ ಸರ್ವಾಣಿ ಇತ್ಯಾದಿಗಳಿಂದ ಹೇಳಲ್ಪಟ್ಟ ಧ್ಯಾನವು ಲಭಿಸದಿದ್ದರೆ ಜ್ಞಾನವು, ಜ್ಞಾನ ವುಂಟಾಗದಿದ್ದರೆ ಅಭ್ಯಾಸಯೋಗವು, ಎಂಬುವುದನ್ನು ಸಮರ್ಥಿಸುತ್ತಾರೆ—

ಗೀ॥ ಶ್ರೇಯೋಹಿ ಜ್ಞಾನಮಭ್ಯಾಸಾಜ್ಞ್ಞಾನಾದ್ಧ್ಯಾನಂ ವಿಶಿಷ್ಯತೇ ।
ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂತಿರನಂತರಂ ॥ ೧೨ ॥

ಅ॥ ಅಭ್ಯಾಸಾತ್ = ಅಜ್ಞಾನಪೂರ್ವಕವಾದ ಧ್ಯಾನವನ್ನು ಸಂಪಾದಿಸಲಿಕ್ಕೆ ಉಪಯುಕ್ತವಾದ ಅಭ್ಯಾಸಕ್ಕಿಂತಲೂ. ಜ್ಞಾನಂ = ಜ್ಞಾನವು. ಶ್ರೇಯಃ = ಶ್ರೇಯಸ್ಕರವು ಹಿ = ಪ್ರಸಿದ್ಧವು ಜ್ಞಾನಾತ್ ಧ್ಯಾನವಿಲ್ಲದ ಕೇವಲ ಜ್ಞಾನಕ್ಕಿಂತಲೂ, ಧ್ಯಾನಂ = ಜ್ಞಾನಪೂರ್ವಕವಾದ ಧ್ಯಾನವು. ವಿಶಿಷ್ಯತೇ = ಶ್ರೇಯ ಸ್ಕರವಾದುದು. ಧ್ಯಾನಾತ್ = ಜ್ಞಾನಪೂರ್ವಕವಾದ ಸಕಾಮ ಧ್ಯಾನಕ್ಕಿಂತಲೂ, ಕರ್ಮಫಲತ್ಯಾಗಃ = ಕರ್ಮಫಲತ್ಯಾಗಪೂರ್ವಕ ಧ್ಯಾನವು. (ಶ್ರೇಯಸ್ಕರವು) (ಇಂತಹ ಸಕಾಮ ಧ್ಯಾನಕ್ಕಿಂತಲೂ ಕರ್ಮಫಲ ತ್ಯಾಗದಿಂದ ಕೂಡಿದ ನಿಷ್ಕಾಮಧ್ಯಾನವು ಶ್ರೇಯಸ್ಕರವು ) ತ್ಯಾಗಾತ್ = ಕರ್ಮಫಲವನ್ನು ತ್ಯಾಗಮಾಡಿ ಜ್ಞಾನಪೂರ್ವಕವಾದ ನಿಷ್ಕಾಮಧ್ಯಾನಕ್ಕಿಂತಲೂ (ಅಪರೋಕ್ಷಜ್ಞಾನವು ಶ್ರೇಯಸ್ಕರವು.) ಅನಂತರಂ— ಆ ಮೇಲೆ. ಶಾಂತಿಃ = ಮೋಕ್ಷವು. ॥ ೧೨ ॥

ಟೀ—ಮಯ್ಯೇವ ಇತ್ಯಾದಿಗಳಿಂದ ನನ್ನನ್ನುಪಾಸನೆಮಾಡುವವರೇ ಉತ್ತಮರೆಂದು ಹೇಳಲ್ಪಡುತ್ತದೆ. ಭಗವಂತನನ್ನುಪಾಸನೆಮಾಡುವವರಂತೆ ಅವ್ಯಕ್ತೋಪಾಸಕರಿಗೂ ಮೋಕ್ಷವಿದ್ದ ಪ್ರಯುಕ್ತ ಭಗವದುಪಾಸಕರಿಗೇನೇ ಉತ್ತಮತ್ವವು ಹೇಗೆ ಎಂದರೆ ಅವ್ಯಕ್ತೋಪಾಸಕರಿಗೆ ಮೋಕ್ಷವಾಗುತ್ತದೆಂಬು ಒಡಂಬಟ್ಟು ಭಗವದುಪಾಸಕರಿಗೇನೇ ಉತ್ತಮತ್ವವು ಯೇ ತ್ವಕ್ಷರಂ ಎನ್ನುವುದರಿಂದ ಹೇಳಲ್ಪಡುತ್ತದೆ. ಮಯ್ಯೇವ ಇತ್ಯಾದಿಗಳ ಅರ್ಥವನ್ನು ಶ್ರುತಿಯಿಂದಲೇ ಹೇಳುತ್ತಾರೆ—

ತಾ ॥ (೧) ಅವಿಷ್ಣುಜ್ಞೈರತದ್ಭಕ್ತೈಸ್ತದುಪಾಸಾವಿವರ್ಜಿತೈಃ । ತಪೇದುಪಾಸಿತಾಽಪ್ಯೇಷಾ ಶ್ರೀಸ್ತಾಂ ತದ್ಧರಿತತ್ತ್ವವಿತ್ । ತದ್ಭಕ್ತಸ್ತಮುಪಾಸ್ಯೈವ ಶ್ರಿಯಂ ಧ್ಯಾಯೀತ ನಿತ್ಯದಾ । ತೇನ ತುಷ್ಟಾ ತು ಸಾಽಚ್ಛಿದ್ರಂ ದದ್ಯಾದ್ವಿಷ್ಣೋರುಪಾಸನಂ । ತತಸ್ತದ್ದರ್ಶನಾನ್ಮುಕ್ತಿಂ ಯಾತ್ಯಸೌ ನಾತ್ರ ಸಂಶಯಃ ॥ (೨) ತಥಾಽಪಿ ಸರ್ವಪರಮಾಂ ಸರ್ವದೋಷವಿವರ್ಜಿತಾಂ । ಜ್ಞಾತ್ವಾ ಶ್ರಿಯಂ ತತ್ಪರಮಂ ತತ್ಪತಿಂ ಪುರುಷೋತ್ತಮಂ । ವಿಜ್ಞಾಯೋಪಾಸತೇ ನಿತ್ಯಂ ತೇ ಹಿ ಯುಕ್ತತಮಾ ಮತಾಃ ॥ (೩) ಯತಃ ಕ್ಲೇಶೋಽಧಿಕಸ್ತೇಷಾಂ ಪೃಥಕ್ ಶ್ರಿಯಮುಪಾಸತಾಂ ॥ ೧ ॥

ಅ ॥ (೧) ಭಗವಂತನನ್ನು ಸರ್ವೋತ್ತಮನೆಂದು ತಿಳಿಯದಿರುವವರು, ಭಗವದ್ಭಕ್ತರಾಗದಿರುವವರು, ಪರಮಾತ್ಮನನ್ನುಪಾಸನಾಮಾಡದಿದ್ದವರು, ಯಾರೋ ಇಂತಹವರು ಲಕ್ಷ್ಮೀದೇವಿಯನ್ನುಪಾಸನೆ ಮಾಡಿದರೂ ಅಂತಹವರಿಗೆ ಅವಳು ತಪಿಸುವಳು. ಆದಕಾರಣ ಭಗವತ್ತತ್ತ್ವವನ್ನು ತಿಳಿದ ಭಗವದ್ಭಕ್ತನು ಆ ಶ್ರೀಹರಿಯನ್ನುಪಾಸನೆಮಾಡಿಯೇ ನಿರಂತರದಲ್ಲಿಯೂ ಲಕ್ಷ್ಮೀದೇವಿಯನ್ನು ಧ್ಯಾನಿಸುತ್ತಿರಬೇಕು. ಆ ಧ್ಯಾನದಿಂದ ಸಂತುಷ್ಟಳಾದ ಆ ಲಕ್ಷ್ಮೀದೇವಿಯು ಸಂಪೂರ್ಣವಾಗಿ ವಿಷ್ಣುವಿನ ಉಪಾಸನೆಯನ್ನು ಧ್ಯಾನಿಸುವವರಿಗೆ ಕೊಡುವಳು. ಆ ಮೇಲೆ ಅಧಿಕಾರಿಯು ಭಗವದ್ದರ್ಶನದಿಂದ ಮೋಕ್ಷವನ್ನು ಹೊಂದುತ್ತಾನೆ. ಈ ವಿಷಯದಲ್ಲಿ ಸಂದೇಹವಿಲ್ಲ. (೨) (ಅವ್ಯಕ್ತೋಪಾಸನವು ಮೋಕ್ಷಸಾಧನವಾದುದಾಗ್ಯೂ ಇದನ್ನೇ ಉತ್ತಮವೆಂದು ತಿಳಿಯಕೂಡದೆನ್ನುತ್ತಾರೆ—) ಆದರೂ ಬ್ರಹ್ಮರುದ್ರಾದಿಗಳೆಲ್ಲರಿಂದಲೂ ಉತ್ತಮಳೂ, ಸಮಸ್ತದೋಷವಿರಹಿತಳೂ, ಆದ ಲಕ್ಷ್ಮೀದೇವಿಯನ್ನು ತಿಳಿದುಕೊಂಡು, ಆ ಲಕ್ಷ್ಮೀದೇವಿಗಿಂತಲೂ ಉತ್ತಮನೂ, ಲಕ್ಷ್ಮೀಪತಿಯೂ, ಕ್ಷರಾಕ್ಷರಪುರುಷರಿಂದುತ್ತಮನೂ, ಆದ ಲಕ್ಷ್ಮೀದೇವಿಯಿಂದ ಕೂಡಿದ ಶ್ರೀಪರಮಾತ್ಮನನ್ನು ತಿಳಿದುಕೊಂಡು ಉಪಾಸನಮಾಡುತ್ತಾರೆ. ಅಂತಹವರು ಕೇವಲ ಲಕ್ಷ್ಮೀದೇವಿಯನ್ನುಪಾಸನಾಮಾಡುವವರಿಗಿಂತ ಶ್ರೇಷ್ಠರು. (೩) (ಏಕೆ ಹೀಗೆ ಹೇಳಬೇಕೆಂದರೆ—) ಪರಮಾತ್ಮನನ್ನು ಬಿಟ್ಟು ಲಕ್ಷ್ಮೀದೇವಿಯನ್ನು ಮಾತ್ರ ಪ್ರತ್ಯೇಕವಾಗಿ ಉಪಾಸನಾಮಾಡುವವರಿಗೆ ಹಿಂದೆ ಹೇಳಿದ ಪ್ರಕಾರ ಹೆಚ್ಚು ಕ್ಲೇಶವೇ ಉಂಟಾಗುತ್ತದೆ

ವಿ ॥ ಸಮಸ್ತ ಇಂದ್ರಿಯಗಳನ್ನು ತನ್ನ ವಶಪಡಿಸಿಕೊಳ್ಳುವುದು, ಸರ್ವತ್ರ ಸಮಬುದ್ಧಿತ್ವವು, ಸರ್ವಪ್ರಾಣಿಗಳಿಗೆ ಹಿತವಾಗುವುದರಲ್ಲಿಯೇ ಆಸಕ್ತಿಯು, ಸದಾಚಾರ, ಇವುಗಳು ಇಲ್ಲದೆ, ಲಕ್ಷ್ಮೀದೇ[illegible]ಟಕ್ಕಾಗಿ ಉಪಾಸನೆಯಿಂದ ಲಕ್ಷ್ಮೀದೇವಿಯ ಪ್ರಸಾದವಾಗಲಾರದು, ಪರಮಶ್ರದ್ಧೆ ಮಾತ್ರ ಇದ್ದವರಿಗೆ ಸದಾಚಾರಾದಿಗಳು ಸ್ವಲ್ಪ ಕಡಿಮೆಯಾದರೂ ಭಗವಂತನ ಪ್ರಸಾದವುಂಟಾಗುವುದರಿಂದ ಲಕ್ಷ್ಮೀ[illegible] ಮಾರ್ಗದಲ್ಲಿ ಹೆಚ್ಚು ಕ್ಲೇಶವುಂಟಾಗುತ್ತದೆ.

ಟೀ—ಭಗವಂತನನ್ನು ಉಪಾಸನ ಮಾಡಿದರೆ ಶೀಘ್ರದಲ್ಲಿ ಮೋಕ್ಷವಾಗುವ ಪ್ರಯುಕ್ತವು ಭಗವದುಪಾಸನವೇ ಶ್ರೇಷ್ಠವೆನ್ನುತ್ತಾರೆ—

ಟ॥ (೧) ವಿಷ್ಣುನಾ ಸಹಿತಾ ಧ್ಯಾತಾ ಸಾ ಹಿ(ಽಪಿ) ತುಷ್ಟಿಂ ಪರಾಂ ವ್ರಜೇತ್ । ಅನ್ಯಥಾ ತು ಪುನರ್ವಿಷ್ಣೋಃ ಶ್ರೀಪತಿತ್ವೇನ ಚಿಂತನಂ । ಅಚ್ಛಿದ್ರಮೇವ ಕರ್ತವ್ಯಮಿತಿ ಮು. ಕ್ತಿಸ್ತಿರಾದ್ಭವೇತ್ । ತಸ್ಮಾದಕ್ಲೇಶತೋ ಮುಕ್ತಿಃ ಕ್ಷಿಪ್ರಂ ವಿಷ್ಣುಮುಪಾಸತಾಮಿತಿ ಪರಮಶ್ರುತಿಃ ॥ (೨) ಯುಕ್ತತಮಾಃ ಸಾಧಕತಮಾಃ । ವಿಷ್ಣೋರನ್ಯಂ ನ ಸ್ಮರೇದ್ಯೋ ವಿನಾ ತತ್ಪರಿವಾರಕಾಂ । ತದಧೀನತಾಂ ವಾಽನನ್ಯಯೋಗೀ ಸ ಪರಿಕೀರ್ತಿತ ಇತಿ ಚ ॥ (೩) ಅಂತವತ್ತು ಫಲಂ ತೇಷಾಮಿತ್ಯಾದಿನಾಽನ್ಯದೇವತೋ(ವೋ)ಪಾಸನಾಯಾಃ ಪೂರ್ವಂ(ರ್ವಮೇವ) ನಿಂದಿತತ್ವಾತ್ ॥ ೨ ॥

ಅ॥ (೧) ಶ್ರೀವಿಷ್ಣುವಿನಿಂದ ಸಹಿತಳಾಗಿ ಲಕ್ಷ್ಮೀದೇವಿಯು ಧ್ಯಾನಿಸಲ್ಪಟ್ಟರೆ ಉತ್ಕೃಷ್ಟವಾದ ತೋಷವನ್ನು ಹೊಂದುವಳು. ಶ್ರೀಪರಮಾತ್ಮನನ್ನು ಪಾಸನಮಾಡದೆ ಲಕ್ಷ್ಮೀದೇವಿಯನ್ನು ಮಾತ್ರ ಉಪಾಸನ ಮಾಡಿದರೆ ಪುನಃ ಲಕ್ಷ್ಮೀಪತಿಯೆಂದು ಶ್ರೀವಿಷ್ಣುವನ್ನು ನಿರಂತರದಲ್ಲಿಯೂ ಎಡೆಬಿಡದೆ ಉಪಾಸನ ಮಾಡಬೇಕು. ಆ ಮೇಲೆ ಮುಕ್ತಿಯು ಹೀಗೆ ಸಾವಕಾಶವಾಗಿ ಮುಕ್ತಿಯಾಗುವುದು, ಆದಕಾರಣ ಶ್ರೀವಿಷ್ಣುವನ್ನುಪಾಸನಾಮಾಡುವವರಿಗೆ ಕ್ಲೇಶವಿಲ್ಲದೆ ಶೀಘ್ರದಲ್ಲಿ ಮೋಕ್ಷವಾಗುವುದು. ಎಂದು ಪರಮಶ್ರುತಿಯು. ಅಂದರೆ ಲಕ್ಷ್ಮೀದೇವಿಯಿಂದ ಸಹಿತನಾದ ಭಗವಂತನನ್ನು ಪಾಸನಾಮಾಡಿದರೆ ಇಬ್ಬರದ್ದು ಪರಮಪ್ರಸಾದವು ಆಗುವುದರಿಂದ ಶೀಘ್ರದಲ್ಲಿ ಮೋಕ್ಷವಾಗುವುದು. ಪರಮಾತ್ಮನನ್ನು ಬಿಟ್ಟು ಪ್ರತ್ಯೇಕವಾಗಿ ಲಕ್ಷ್ಮೀದೇವಿಯನ್ನು ಮಾತ್ರ ಉಪಾಸನಮಾಡಿದರೆ ಭಗವದುಪಾಸನವನ್ನು ಸ್ವಲ್ಪ ಮಾಡಿ ಬಹುಕಾಲದಲ್ಲಿ ಪ್ರತ್ಯೇಕವಾಗಿ ಲಕ್ಷ್ಮೀದೇವಿಯನ್ನು ಪಾಸನಾಮಾಡಿ ಮರಳಿ ನಿರಂತರದಲ್ಲಿ ಲಕ್ಷ್ಮೀಸಮೇತನಾದ ಭಗವಂತನನ್ನುಪಾಸನೆ ಮಾಡಬೇಕು. ಆ ಮೇಲೆ ಮೋಕ್ಷವು. ಹೀಗೆ ಸಾವಕಾಶವಾಗಿ ಮೋಕ್ಷವಾಗುವುದು. ಆದಕಾರಣ ಭಗವದುಪಾಸನವೇ ಶ್ರೇಷ್ಠವು) (೨) ಯುಕ್ತತಮಾಃ = ಅತಿಶಯವಾಗಿ ಯೋಗಯುಕ್ತರು. ಅಂದರೆ ಮೋಕ್ಷಸಾಧನಗಳನ್ನು ಮಾಡುವವರ ಮಧ್ಯದಲ್ಲಿ ಶ್ರೇಷ್ಠರು. (ಯೇ ತು ಸರ್ವಾಣಿ ಎಂಬುವಲ್ಲಿ ಅನನ್ಯಯೋಗದಿಂದ (ಅಂದರೆ ಭಗವದಧೀನವಾಗಿಯೂ ಕೇವಲ ಲಕ್ಷ್ಮಿಯ ಉಪಾಸನ ಮಾಡದೆ ಪಕ್ಷದಲ್ಲಿಯೇ ಭಗವಂತನಲ್ಲಿ ಮಾಡತಕ್ಕ ಧ್ಯಾನಮಾರ್ಗದಿಂದ) ಭಗವದುಪಾಸನಕ್ಕೆ ಉತ್ಕೃಷ್ಟತ್ವ ಹೇಳಲ್ಪಡುತ್ತದೆ. ಆದಕಾರಣ ಲಕ್ಷ್ಮೀದೇವಿಸಮೇತನಾಗಿ ಭಗವಂತನನ್ನುಪಾಸನೆ ಮಾಡುವುದು ಶ್ರೇಷ್ಠವೆಂದು ಹೇಳುವುದು ಹೇಗೆ ಎಂದರೆ—) ಯಾವನು ವಿಷ್ಣುವಿನಿಂದ ಇತರರಾದ ಬ್ರಹ್ಮಾದಿಗಳನ್ನು ವಿಷ್ಣುವಿನ ಪರಿವಾರರೆಂದೂ ವಿಷ್ಣುವಿನ ಅಧೀನರೆಂದೂ ತಿಳಿದು ಅವರನ್ನು ಸರ್ವೋತ್ತಮರೆಂದು ಸ್ಮರಣೆಮಾಡುವದಿಲ್ಲವೋ, ಅವನು ಅನನ್ಯಯೋಗೀ ಎನಿಸಿಕೊಳ್ಳುತ್ತಾನೆ. (೩) (ಇತರ ದೇವತೆಗಳನ್ನುಪಾಸನಾ ಮಾಡಬಾರದೆಂದರೆ ಲಕ್ಷ್ಮಿಯ ಉಪಾಸನದಂತೆ ಜ್ಞಾತ್ವಾ ಶಿವಂ ಶಾಂತಿಮುತಂತಮೇತಿ, ಹರಿಂ ಹರಂ ವಿರಿಂಚಿಂ ಚ ಜ್ಞಾತ್ವಾ ಮುಚ್ಯೇತ ಸಂಸೃತೇಃ ಇತ್ಯಾದಿಗಳಲ್ಲಿ ಅನ್ಯ ದೇವತೋಪಾಸನೆ ಮುಂದಲೂ ಮೋಕ್ಷವಾಗುತ್ತದೆಂದು ಹೇಳಿದ್ದರಿಂದ ಆ ವಿಷಯದಲ್ಲಿ ಏಕೆ ಪ್ರಶ್ನೆ ಮಾಡಲಿಲ್ಲ ಎಂದರೆ—) ಅಂತವತ್ತು ಫಲಂ ತೇಷಾಂ ಇತ್ಯಾದಿಗಳಿಂದ ಅನ್ಯದೇವತೋಪಾಸನೆಯು ಪೂರ್ವದಲ್ಲಿಯೇ ನಿಂದಿತವಾಗಿದೆ. (ಅಂದರೆ ಅನ್ಯ ದೇವತೋಪಾಸನೆಯಿಂದ ಮೋಕ್ಷವಾಗುವುದಿಲ್ಲವೆಂದು ಮೊದಲೇ ಹೇಳಿದ ಕಾರಣ ವೇದಾದಿಗಳಲ್ಲಿ ಅವಾಂತರ ಹೇಳಿದ್ದಕ್ಕೆ ಅರ್ಥಾಂತರವಿರುವದರಿಂದ ಲಕ್ಷ್ಮಿಯ ಉಪಾಸನವಿಷಯದಲ್ಲಿಯೇ ಪ್ರಶ್ನೆಮಾಡಿದ್ದು. ಬೇರೆ ದೇವತೆಗಳ ಉಪಾಸನಾ ವಿಷಯದಲ್ಲಿ ಪ್ರಶ್ನೆಮಾಡಲಿಲ್ಲ.) ॥ ೨ ॥

ಶಂ—ಹಾಗಾದರೆ—ಸಾಮಾನ್ಯವಾಗಿ ಭಗವಂತನಿಂದ ಇತರರಾದವರ ಉಪಾಸನವು ಮೋಕ್ಷಸಾಧನವಲ್ಲವೆಂದು ಹೇಳಿದುದರಿಂದ ಅನ್ಯದೇವತೋಪಾಸನವು ಮೋಕ್ಷಸಾಧನವಲ್ಲವೆಂದು ಸಿದ್ಧವಾಗುವುದರಿಂದ ಲಕ್ಷ್ಮ್ಯುಪಾಸನವಿಷಯದಲ್ಲಿ ಪ್ರಶ್ನೆ ಮಾಡಿದ್ದು ಏಕೆ? ಎಂದರೆ—

ತಾ ॥ (೧) ಲಕ್ಷ್ಮ್ಯಾಸ್ತ್ವತಿಸಾಮೀಪ್ಯಾದ್ವಿಶೇಷಮಾಶಂಕ್ಯ ತದುಪಾಸನಾವಿಷಯ ಏವ ಪ್ರಶ್ನಃ ಕೃತಃ ॥ (೨) ವೈಷ್ಣವಾನ್ಯೇವ ಕರ್ಮಾಣಿ ಯಃ ಕರೋತಿ ಸದಾ ನೃ... ಜಪಾರ್ಚಾಮಾರ್ಜನಾದೀನಿ ಸ್ವಾಶ್ರಮೋಕ್ತಾನಿ ಯಾನಿ ಚ । ಸ ತತ್ಕರ್ಮಾ... ಜ್ಞೇಯೋ ಯೋಽನ್ಯದೇವಾದಿಪೂಜನಂ । ಕೃತ್ವಾ ಹರಾವರ್ಪಯತಿ ಸ ತು ತದ್ಯೋ... ಗಮಾತ್ರವಾನ್ ॥ (೩) ತತ್ರ ಪೂರ್ವೋ ವಿಶಿಷ್ಟಃ ಸ್ಯಾದಾದಿಮಧ್ಯಾಂತತಃ ಸ್ಮೃತಿ... ಅವಾಂತರೇ ಚ ನಿಯಮಾದ್ವಿಷ್ಣೋಸ್ತದ್ಭಾಸತಾಽಸ್ಯ ಯತ್ । ಮನಸಾ ವರ್ತ... ನ್ಯೋಽಪಿ ಯಥಾಶಕ್ತಿ ಹರಿಸ್ಮೃತೇಃ । ಪೂರ್ವೋಕ್ತಯೋಗ್ಯೋ ಭವತಿ ... ನಿತ್ಯಂ ತದಿಚ್ಛತಿ ॥ (೪) ಅಸಮ್ಯಗ್ಜ್ಞಾನಿನೋ ಧ್ಯಾನಾಜ್ಜ್ಞಾನಮೇವ ವಿಶಿಷ್ಯತೇ... ಜ್ಞಾತ್ವಾ ಧ್ಯಾನಂ ತತಸ್ತಸ್ಮಾತ್ ತ್ಫಲೇಚ್ಛಾವಿವರ್ಜಿತಂ । ತಸ್ಮಾಜ್ಜ್ಞಾನಾದ್ಧ್ಯಾನಸ... ಕ್ತಿಸ್ತ್ಯಾಗಾದ್ಧ್ಯಾನಯುತಾ ಸ್ಫುಟಮಿತಿ ಚ । ಶಾಂತಿರ್ಮುಕ್ತಿಃ ॥ ೩ ॥ ॥ ೩—೧೨ ।

ಅ ॥ ೧) ಸಾಮಾನ್ಯವಾಗಿ ಪರಮಾತ್ಮನು ಹೊರತು ಬೇರೆಯವರ ಉಪಾಸನವು ಮೋಕ್ಷಸಾ... ವಾಗುವುದಿಲ್ಲವೆಂದು ಹೇಳಿದಾಗ್ಯೂ ಲಕ್ಷ್ಮೀದೇವಿಯು ಪರಮಾತ್ಮನಿಗೆ ಅತ್ಯಂತ ಪ್ರಿಯಳಾದ... ಅವಳಿಗೆ ಇತರರಿಗಿಂತ ವಿಶೇಷವಿದ್ದ ಪ್ರಯುಕ್ತ ಲಕ್ಷ್ಮೀದೇವಿಯ ಉಪಾಸನೆಗೆ ಮೋಕ್ಷಸಾಧನ... ಕೂಡಬಹುದಾದುದರಿಂದಲೂ ವಿಶೇಷ ಪ್ರಮಾಣಗಳು ಇದ್ದ ಪ್ರಯುಕ್ತವೂ ಅರ್ಜುನನು ಲಕ್ಷ್ಮೀದೇವಿ... ಹೊರತು ಬೇರೆಯವರ ಉಪಾಸನಾ ವಿಷಯದಲ್ಲಿ ಪ್ರಶ್ನೆ ಮಾಡದೆ ಇದ್ದರೂ ಲಕ್ಷ್ಮೀದೇವಿಯ ಉಪಾಸ... ವಿಷಯದಲ್ಲಿಯೇ ಪ್ರಶ್ನೆ ಮಾಡಿರುವನು. (೨) (ಭಗವದುಪಾಸನವೇ ಶ್ರೇಷ್ಠವಾಗಿರುವುದರಿಂದ ಅದನ್ನೇ ಮಾಡಬೇಕು. ಅದು ಆಗದಿದ್ದರೆ ಭಗವಂತನನ್ನು ತಿಳಿಯಬೇಕು. ಅದೂ ಸಾಧ್ಯವಾಗದಿದ್ದ... ಅಭ್ಯಾಸಯೋಗದಿಂದ ತಿಳಿಯಬೇಕು. ಅದೂ ಆಗದಿದ್ದರೆ ಭಗವದ್ವಿಷಯಕ ಕರ್ಮ ಮಾಡಬೇಕು. ಅದನ್ನು ಮಾಡಲಿಕ್ಕೂ ಶಕ್ತಿಯಿಲ್ಲವಾದರೆ ಭಗವದ್ಯೋಗವನ್ನಾಶ್ರಯಿಸಿ ಕರ್ಮಫಲ ತ್ಯಾಗವನ್ನು ಮಾಡಬೇಕೆಂದು ಮಯ್ಯೇವ ಇತ್ಯಾದಿ ಶ್ಲೋಕಗಳಿಂದ ಹೇಳುತ್ತಾರೆ. ಅದರಲ್ಲಿ ಭಗವದ್ವಿಷಯಕ ಕರ್ಮಮಾಡುವ... ಭಗವದ್ಯೋಗವು, ಅದಕಾರಣ ಇದೆಲ್ಲಾ ಹೇಳಿದ್ದು ಹೇಗೆ ಕೂಡುತ್ತದೆ? ಎಂದರೆ ಸ್ಮೃತಿಪ್ರಮಾಣದಿಂದ... ಅದರ ಅರ್ಥವನ್ನು ಹೇಳುತ್ತಾರೆ.) ಯಾವ ಮನುಷ್ಯನು ಸದಾ ಜಪ ಪೂಜಾ ಪ್ರತಿಮೆಗಳಿಗೆ ... ಮಾಡುವುದು, ಧ್ಯಾನ ಮೊದಲಾದ ಆಯಾಯ ಆಶ್ರಮಗಳಿಗೆ ಉಚಿತಗಳಾದವುಗಳು ಯಾವವು ವಿಷ್ಣು... ಪ್ರೀತಿಕರಗಳಾದ ಕರ್ಮಗಳು ಇರುತ್ತವೋ, ಅಂತಹ ಸಮಸ್ತ ಕರ್ಮಗಳನ್ನು ವಿಷ್ಣುವಿಷಯಕಗಳನ್ನು ಶ್ರೀವಿಷ್ಣುವಿಗೆ ಪ್ರೀತಿಯಾಗುವಂತೆಯೇ ಶ್ರೀವಿಷ್ಣುವಿಗೇನೇ ಅರ್ಪಣೆಯನ್ನು ಮಾಡುತ್ತಾನೋ, ಅದೇ ಭಗವತ್ಕರ್ಮವೆಂದು ತಿಳಿಯಬೇಕು. ಯಾರು ಬೇರೆ ದೇವಾದಿಗಳಿಗೆ ಪೂಜಾದಿಗಳನ್ನು ಮಾಡಿ ಪರ... ಮಾತ್ಮನಲ್ಲಿ ಅರ್ಪಿಸುತ್ತಾನೋ, ಅತನು ವಿಷ್ಣುವಿಷಯಕ ಕರ್ಮಗಳನ್ನು ಮಾಡಲಿಕ್ಕೆ ಬೇಕಾದ ಉಪಾ... ಮಾತ್ರವುಳ್ಳವನು. (೩) ಭಗವದ್ವಿಷಯಕ ಕರ್ಮಮಾಡುವವರು, ಅದಕ್ಕೆ ಬೇಕಾದ ಉಪಾಯವುಳ್ಳ... ಇವರಿಬ್ಬರ ಮಧ್ಯದಲ್ಲಿ, ಭಗವದ್ವಿಷಯಕ ಕರ್ಮಮಾಡುವವನೇ ಶ್ರೇಷ್ಠನು. ಏಕೆಂದರೆ ಕರ್ಮಾರಂಭ... ಸಂಕಲ್ಪಮಾಡುವ ಕಾಲದಲ್ಲಿಯೂ, ಕರ್ಮವನ್ನು ಮಾಡುವ ಮಧ್ಯ ಕಾಲದಲ್ಲಿಯೂ, ಕರ್ಮಸಮಾಪ್ತಿ... ಗುವಾಗ ಭಗವಂತನಿಗೆ ಅರ್ಪಿಸುವ ಕಾಲದಲ್ಲಿಯೂ, ಅವಾಂತರಕಾಲದಲ್ಲಿಯೂ ಪ್ರತಿಕ್ರಿಯೆ ಮಾತ... ಕರ್ಮವನ್ನು ಮಾಡುವ ಕಾಲದಲ್ಲಿ ವಿಹಿತವಾದ ನಿಯಮವನ್ನನುಸರಿಸಿ ನಿಯಮದಿಂದ ವಿಷ... ಯದ ಪ್ರಯುಕ್ತವೂ, ಭಗವದ್ವಿಷಯಕ ಕರ್ಮಮಾಡುವವನು ತಾನು ಪರಮಾತ್ಮನ ದಾಸನೆ... ಸರ್ವದಾ ಮನಸ್ಸಿನಲ್ಲಿ ಅನುಸಂಧಾನ ಮಾಡಿಕೊಂಡಿರುವುದರಿಂದ ಶ್ರೇಷ್ಠನು. ಇವನಿಗಿಂತ ...

ಭಗವದ್ವಿಷಯಕ ಕರ್ಮಮಾಡಲಿಕ್ಕೆ ಬೇಕಾದ ಉಪಾಯವುಳ್ಳವನೂ ಕೂಡ ಅನ್ಯದೇವತೆಯ ಪೂಜೆಯನ್ನು ಮಾಡಿ ಅಂತ್ಯದಲ್ಲಿ ಸಮರ್ಪಿಸುವಾಗ ಶಕ್ತ್ಯನುಸಾರ ಹರಿಸ್ಮರಣ ಮಾಡುವುದರಿಂದ ಯೋಗಫಲವಾಗಿ ಪರಮಾತ್ಮನಿಗೆ ಪ್ರೀತಿಯಾಗಬೇಕೆಂದು ಇಚ್ಛಿಸುತ್ತಾನೆ. ಹಾಗೆ ಇದ್ದರೇನೇ ಹಿಂದೆ ಹೇಳಿದ ಭಗವದ್ವಿಷಯಕ ಕರ್ಮಕ್ಕೆ ಯೋಗ್ಯನಾಗುತ್ತಾನೆ. (೪) ಚೆನ್ನಾಗಿ ಜ್ಞಾನವಿಲ್ಲದವನ ಧ್ಯಾನಕ್ಕಿಂತ ಜ್ಞಾನವೇ ಶ್ರೇಷ್ಠವು ಜ್ಞಾನಕ್ಕಿಂತ ಧ್ಯಾನವು ಶ್ರೇಷ್ಠವು. ಆದಕಾರಣ ಫಲೇಚ್ಛೆಯನ್ನು ಬಿಡಬೇಕೆಂದು ಹೇಳಿದ್ದರಿಂದ ಸಕಾಮಧ್ಯಾನಕ್ಕಿಂತ ಫಲೇಚ್ಛೆಯನ್ನು ಬಿಟ್ಟು ತಿಳಿದು ಮಾಡುವ ಧ್ಯಾನವು ಶ್ರೇಷ್ಠವು. ಫಲತ್ಯಾಗಮಾಡಿ ಧ್ಯಾನದಿಂದ ಕೂಡಿದ ಜ್ಞಾನದಿಂದ ಹುಟ್ಟಿದ ಅಪರೋಕ್ಷಜ್ಞಾನದಿಂದ ಮೋಕ್ಷವು ಆಗುವುದು. (ತ್ಯಾಗದ್ದೆ ತೆಯಿಂದ ಶಾಂತಿಯು ಫಲವೆಂದು ಹೇಳಿದ್ದರಿಂದ ಮೋಕ್ಷವು ಫಲವೆಂದು ಹೇಳಿದ್ದು ಹೇಗೆ? ಎಂದರೆ—) ಶಾಂತಿಃ= ಮೋಕ್ಷವು. ॥೧೨॥

ಟೀ—ಯೇ ತು ಸರ್ವಾಣಿ ಕರ್ಮಾಣಿ ಎಂದು ಹೇಳಿದುದನ್ನು ವಿವರಿಸುತ್ತಾರೆ—

ಗೀ ॥ ಅದ್ವೇಷ್ಟಾ ಸರ್ವದುಃಖಾನಾಂ ಮೈತ್ರಃ ಕರುಣ ಏವ ಚ ।
ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥ ೧೩ ॥
ಸಂತುಷ್ಟಃ ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।
ಮಯ್ಯರ್ಪಿತಮನೋಬುದ್ಧಿರ್ಯೋ ಮೇ ಭಕ್ತಃ ಸ ಮೇ ಪ್ರಿಯಃ॥೧೪॥

ಅ ॥ ಯಃ=ಯಾವನು. ಸರ್ವಭೂತಾನಾಂ=ಸಮಸ್ತ ಪ್ರಾಣಿಗಳಿಗೂ ಅದ್ವೇಷ್ಟಾ=ಅನಿಷ್ಟವನ್ನು ಮಾಡದಿರುವವನೋ, ಮೈತ್ರಃ=ದುಃಖವುಂಟಾಗುವ ಕಾಲದಲ್ಲಿ ಅದರ ಕಾರಣವನ್ನು ತಿಳಿಸಿ ದುಃಖದಿಂದ ರಕ್ಷಿಸುವವನೋ, ಕರುಣಃ=ಕೃಪೆಯುಳ್ಳವನೋ, ನಿರ್ಮಮಃ=ಈ ವಸ್ತುವು ನನ್ನದೆಂದು ವಸ್ತುಗಳಲ್ಲಿ ಸ್ವಾತಂತ್ರ್ಯಾಭಿಮಾನವನ್ನು ತೊರೆದವನೋ, ನಿರಹಂಕಾರಃ=ತನ್ನಲ್ಲಿಲ್ಲದಿರುವ ಗುಣಗಳು ತನ್ನಲ್ಲಿ ಇವೆ ಎಂಬುವ ಅಭಿಮಾನ ಇಲ್ಲದವನೋ, ಸಮದುಃಖಸುಖಃ=ದುಃಖವು ಹೇಗೆ ಬಿಡಲರ್ಹವೋ ಹಾಗೆಯೇ ಸ್ರಕ್ಚಂದನ ವನಿತಾದಿ ವಿಷಯಗಳಿಂದುಂಟಾಗುವ ಸುಖವೂ ಅತ್ಯಲ್ಪವಾಗಿರುವುದರಿಂದ ಹೇಯವೇ ಎಂದು ತಿಳಿದುಕೊಂಡವನೋ, ಕ್ಷಮೀ=ಎಲ್ಲವನ್ನೂ ಸಹಿಸಿಕೊಳ್ಳುವವನೋ, ಸತತಂ=ನಿರಂತರದಲ್ಲಿಯೂ, ಸಂತುಷ್ಟಃ=ಅಲಂಬುದ್ಧಿಯುಳ್ಳವನೋ, ಯೋಗೀ=ಕರ್ಮ ಧ್ಯಾನರೂಪಗಳಾದ ಜ್ಞಾನೋಪಾಯಗಳುಳ್ಳವನೋ, ಯತಾತ್ಮಾ=ಮನಸ್ಸನ್ನು ವಿಷಯಗಳಲ್ಲಿ ಹೋಗಬಿಡದಂತೆ ಮಾಡಿಕೊಂಡವನೋ, ದೃಢನಿಶ್ಚಯಃ=ಶ್ರೀವಿಷ್ಣುವು ಸರ್ವೋತ್ತಮನೆಂಬುವ ಜ್ಞಾನದಲ್ಲಿ ಅಪ್ರಾಮಾಣ್ಯ ಸಂದೇಹವಿಲ್ಲದೆ ಶ್ರೀವಿಷ್ಣುವೇ ಸರ್ವೋತ್ತಮನೆಂಬುವ ತತ್ವನಿಷ್ಠೆಯುಳ್ಳವನೋ, ಮಯಿ=ನನ್ನಲ್ಲಿಯೇ, ಅರ್ಪಿತಮನೋಬುದ್ಧಿಃ=ಮನಸ್ಸನ್ನು ಬುದ್ಧಿಯನ್ನು ಸಂಪೂರ್ಣ ಇಟ್ಟವನೋ, ಮದ್ಭಕ್ತಃ=ನನ್ನಲ್ಲಿಯೇ ಭಕ್ತಿಯನ್ನು ಮಾಡಿಕೊಂಡಿರುವವನೋ, ಸಃ=ಆತನು, ಮೇ=ನನಗೆ, ಪ್ರಿಯಃ=ಪ್ರೀತಿಪಾತ್ರನು. ॥೧೩, ೧೪॥

ಗೀ ॥ ಯಸ್ಮಾನ್ನೋದ್ವಿಜತೇ ಲೋಕೋ ಲೋಕಾನ್ನೋದ್ವಿಜತೇ ಚ ಯಃ ।
ಹರ್ಷಾಮರ್ಷಭಯೋದ್ವೇಗೈರ್ಮುಕ್ತೋ ಯಃ ಸ ಚ ಮೇ ಪ್ರಿಯಃ॥
॥ ೧೫ ॥

ಅ ॥ ಲೋಕಃ=ಜನರು, ಯಸ್ಮಾತ್ ಯಾರಿಂದ, ನೋದ್ವಿಜತೇ=ಭಯಪಡುವುದಿಲ್ಲವೋ (ಯಾರು ಜನರಿಗೆ ಭಯಕಾರಣನಾಗುವುದಿಲ್ಲವೋ) ಯಃ=ಯಾವನು (ಸರ್ವ ... ದರ ...

ನನೆಂದು ತಿಳಿದುಕೊಂಡು) ಲೋಕಾತ್ = ಜನರಿಂದ ನೋದ್ವಿಜತೇ = ಭಯಪಡುವುದಿಲ್ಲವೋ, ಯಃ = ಯಾವಾತನು, ಹರ್ಷಾಮರ್ಷಭಯೋದ್ವೇಗೈಃ ಹರ್ಷ = ಮದದೆಶೆಯಿಂದ ಅಧರ್ಮದಲ್ಲಿ ಮನಸ್ಸಿನ ಪ್ರವೃತ್ತಿಯು, ಅಮರ್ಷ = ಕೋಪವು, ಭಯ = ಹೆದರುವಿಕೆ, ಉದ್ವೇಗ = ಮನಸ್ಸಿನಲ್ಲಿರತಕ್ಕ ಕಂಪವಿಶೇಷ ಇವುಗಳಿಂದ, ಮುಕ್ತಃ = ಬಿಡಲ್ಪಟ್ಟಿರುವವನೋ, ಸಃ = ಅಂತಹ ಭಕ್ತನು, ಮೇ = ನನಗೆ, ಪ್ರಿಯಃ = ಪ್ರೀತಿಪಾತ್ರನು. ॥ ೧೫ ॥

ಟೀ – ಜ್ಞಾನವು (ಶ್ರವಣ ಮನನಗಳಿಂದುಂಟಾಗತಕ್ಕ ತತ್ತ್ವನಿರ್ಣಯವು) ಶಾಸ್ತ್ರಾಭ್ಯಾಸಕ್ಕೆ ಕಾರಣವು. ಅದಕಾರಣ ಜ್ಞಾನವು ಅಭ್ಯಾಸಕ್ಕಿಂತ ಶ್ರೇಷ್ಠವು ಹೇಗೆ ಎಂದರೆ—

ಭಾ ॥ (೧) ಅಜ್ಞಾನಪೂರ್ವಾದಭ್ಯಾಸಾಜ್ಜ್ಞಾನಮೇವ ವಿಶಿಷ್ಯತೇ । ಜ್ಞಾನಮಾತ್ರಾತ್ ಸಜ್ಞಾನಂ ಧ್ಯಾನಂ ॥ (೨) ತಥಾ ಚ ಸಾಮವೇದೇ ಅನಭಿಮ್ಲಾನಶಾಖಾಯಾಂ । ಅಧಿಕಂ ಕೇವಲಾಭ್ಯಾಸಾಜ್ಜ್ಞಾನಂ ತತ್ಸಹಿತಂ ತತಃ । ಧ್ಯಾನಂ ತತಶ್ಚಾಪರೋಕ್ಷ್ಯಂ ತತಃ ಶಾಂತಿರ್ಭವಿಷ್ಯತಿ ॥ (೩) ಧ್ಯಾನಾತ್ಕರ್ಮಫಲತ್ಯಾಗ ಇತಿ ಸ್ತುತಿಃ । ಅನ್ಯಥಾ ಕಥಮಸಮರ್ಥೋಽಸೀತ್ಯುಚ್ಯೇತ ॥ (೪) ತಯೋಸ್ತು ಕರ್ಮಸನ್ಯಾಸಾತ್ಕರ್ಮಯೋಗೋ ವಿಶಿಷ್ಯತ ಇತಿ ಚೋಕ್ತಂ ॥ ೧ ॥

ಅ ॥ (೧) ಧ್ಯಾನಪ್ರಕಾರವನ್ನು ತಿಳಿಯದೆ ಮಾಡಿದ ಧ್ಯಾನಕ್ಕಿಂತ ಕೇವಲ ಧ್ಯಾನಪ್ರಕಾರ ಜ್ಞಾನವೇ ಶ್ರೇಷ್ಠವು. ಕೇವಲ ಜ್ಞಾನಮಾತ್ರಕ್ಕಿಂತ ಜ್ಞಾನಸಹಿತವಾದ ಧ್ಯಾನವು ಶ್ರೇಷ್ಠವು. (೨) (ಈ ಅರ್ಥವನ್ನು ಶ್ರುತಿಯಿಂದಲೂ ದೃಢೀಕರಿಸುತ್ತಾರೆ—) ಇದೇ ಅಭಿಪ್ರಾಯವನ್ನು ಸಾಮವೇದದಲ್ಲಿ ಅನಭಿಮ್ಲಾನ ಶಾಖೆಯಲ್ಲಿ ಹೇಳಿದೆ. ಅಜ್ಞಾನಪೂರ್ವಕವಾದ ಧ್ಯಾನವನ್ನು ಸಂಪಾದಿಸಲಿಕ್ಕೆ ಉಪಯುಕ್ತವಾದ ಅಭ್ಯಾಸಕ್ಕಿಂತಲೂ ಧ್ಯಾನಪ್ರಕಾರ ಜ್ಞಾನವು ಶ್ರೇಷ್ಠವು. ಇಂತಹ ಕೇವಲ ಜ್ಞಾನದಿಂದ ಜ್ಞಾನಸಹಿತವಾದ ಧ್ಯಾನವು ಶ್ರೇಷ್ಠವು. ಧ್ಯಾನವಿಲ್ಲದ ಕೇವಲ ಜ್ಞಾನಕ್ಕಿಂತ, ಜ್ಞಾನಪೂರ್ವಕ ಧ್ಯಾನವು ಶ್ರೇಷ್ಠವು. ನಿಷ್ಕಾಮಧ್ಯಾನಮಾತ್ರಕ್ಕಿಂತಲೂ ಅಪರೋಕ್ಷ ಜ್ಞಾನವು ಶ್ರೇಷ್ಠವು. ಆ ಮೇಲೆ ಅದರಿಂದ ಮೋಕ್ಷವು ಲಭಿಸುವುದು, ಎಂದು ಹೇಳಿದೆ. (೩) (ಧ್ಯಾನದ್ದೆಶೆಯಿಂದ ಕರ್ಮಫಲತ್ಯಾಗವು ಶ್ರೇಷ್ಠವೆಂಬುವ ಅಸ್ವಾರಸ್ಯ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ವ್ಯಾಖ್ಯಾನಮಾಡುತ್ತಾರೆ—) ಧ್ಯಾನದೆಶೆಯಿಂದ ಕರ್ಮಫಲತ್ಯಾಗವು ಶ್ರೇಷ್ಠವೆಂಬುದು ಸ್ತುತಿಯು. (ಅಂದರೆ ತ್ಯಾಗವು ಪ್ರಶಸ್ತವೆಂಬುವಲ್ಲಿಯೇ ತಾತ್ಪರ್ಯವು; ಯಥಾಶ್ರುತಾರ್ಥದಲ್ಲಿ ತಾತ್ಪರ್ಯವಿಲ್ಲ ಏಕೆಂದರೆ—) ಹೀಗೆ ಅಲ್ಲವಾದರೆ ಅಥೈತದಪ್ಯಶಕ್ತೋಽಸಿ ಕರ್ತುಂ ಎಂದು ಧ್ಯಾನಕ್ಕಿಂತಲೂ ಅತ್ಯಂತ ನೀಚವಾದ ಕರ್ಮಯೋಗದಲ್ಲಿಯೂ ಅಶಕ್ತನಾದವನಿಗೆ ಕರ್ಮಫಲತ್ಯಾಗಕ್ಕೆ ಧ್ಯಾನದೆಶೆಯಿಂದ ಅಧಿಕ್ಯವಿದ್ದರೆ ಕರ್ಮಫಲತ್ಯಾಗವನ್ನು ಉಪದೇಶಿಸಿದ್ದು [illegible]ವಾಗುವುದು. (ಅಂತೂ ಧ್ಯಾನದಿಂದಲೂ ನೀಚವಾದ ಕರ್ಮಯೋಗದಿಂದಲೂ ಕಡಿಮೆಯಾದ ಕರ್ಮ ಫಲತ್ಯಾಗವು ಧ್ಯಾನಕ್ಕಿಂತ ಶ್ರೇಷ್ಠವಾಗಲಾರದು.) (೪) ಕಾಮ್ಯಾದಿ ವರ್ಜನರೂಪವಾದ ಸನ್ಯಾಸ [illegible] ವಂತನಿಗೆ ಅರ್ಪಿತವಾಗಲಿ, ಎಂಬುವ ಬುದ್ಧಿಯಿಂದ ಕರ್ಮಾನುಷ್ಠಾನರೂಪವಾದ ಕರ್ಮಯೋಗ ಇವುಗಳ ಮಧ್ಯದಲ್ಲಿ ಆದರೂ ಕರ್ಮಫಲದಲ್ಲಿ ಅನುರಾಗಪರಿತ್ಯಾಗ ದೆಶೆಯಿಂದ ಧ್ಯಾನದಿಂದ [illegible] ಕರ್ಮಯೋಗವೂ ಕೂಡ ಶ್ರೇಷ್ಠವೆಂದು ಹೇಳಿದ್ದಾರೆ (ಹೀಗಿರಲು ಧ್ಯಾನಯೋಗವು ಕರ್ಮ[illegible]ದಿಂದ ಶ್ರೇಷ್ಠ [illegible] ಎಂದೂ ಹೇಳಿದೆ.)

।

ಛಾ|| (೧) ಸರ್ವಾಧಿಕಂ ಧ್ಯಾನಮುದಾಹರಂತಿ ಧ್ಯಾನಾಧಿಕೇ ಜ್ಞಾನಭಕ್ತೀ ಪರಾತ್ಮನ್ | ಕರ್ಮಫಲಾಕಾಂಕ್ಷಮಥೋ ವಿರಾಗಸ್ತ್ಯಾಗಶ್ಚ ನ ಧ್ಯಾನಕಲಾಫಲಾರ್ಹ ಇತಿ ಕಾಷಾಯಣಶಾಖಾಯಾಂ || (೨) ವಾಕ್ಯಸಾಮ್ಯೇಽಪ್ಯಸಮರ್ಥವಿಷಯತ್ವೋಕ್ತೇಸ್ತಾತ್ಪರ್ಯಾಭಾವ ಇತರತ್ರ ಪ್ರತೀಯತೇ || (೩) ಧ್ಯಾನಾದಿಪ್ರಾಪ್ತಿಕಾರಣತ್ವಾಚ್ಚ ತ್ಯಾಗಸ್ತುತಿರ್ಯುಕ್ತಾ || (೪) ಕೇವಲಧ್ಯಾನಾತ್ಫಲತ್ಯಾಗಯುಕ್ತಂ ಧ್ಯಾನಮಧಿಕಂ | ಧ್ಯಾನಯುಕ್ತಸ್ತ್ಯಾಗ ಏವಾತ್ರೋಕ್ತಃ | ಅನ್ಯಥಾ ಕಥಂ ತ್ಯಾಗಾಚ್ಛಾಂತಿರನಂತರಮಿತ್ಯುಚ್ಯತೇ | ಕಥಂ ಚ ಧ್ಯಾನಾದಾಧಿಕ್ಯಂ || (೫) ತಥಾ ಚ ಗೌಪವನಶಾಖಾಯಾಂ | ಧ್ಯಾನಾತ್ತು ಕೇವಲಾತ್ತ್ಯಾಗಯುಕ್ತಂ ತದಧಿಕಂ ಭವೇದಿತಿ | ನಹಿ ತ್ಯಾಗಮಾತ್ರಾನಂತರಮೇವ ಮುಕ್ತಿರ್ಭವತಿ | ಭವತಿ ಚ ಧ್ಯಾನಯುಕ್ತಾತ್ | ಕೇವಲತ್ಯಾಗಸ್ತುತಿರೇವಮಪಿ ಭವತಿ | ಯಥಾಽನೇನ ಯುಕ್ತೋ ಜೇತಾ ನಾನ್ಯಥೇತ್ಯುಕ್ತೇ||೧೨-೧೫||

ಅ|| (೧) ಧ್ಯಾನವನ್ನು ಕರ್ಮಾದಿ ಎಲ್ಲದಕ್ಕಿಂತಲೂ ಶ್ರೇಷ್ಠವನ್ನಾಗಿಯೇ ಹೇಳುತ್ತಾರೆ. ಪರಮಾತ್ಮನ ವಿಷಯದಲ್ಲಿ ಜ್ಞಾನಭಕ್ತಿಗಳು ಧ್ಯಾನಕ್ಕಿಂತಲೂ ಶ್ರೇಷ್ಠಗಳು. ಫಲವನ್ನಪೇಕ್ಷಿಸದೆ ಕರ್ಮಮಾಡುವುದು, ವಿರಾಗವು (ಅಂದರೆ ವಿಷಯಗಳಲ್ಲಿ ಶುಭಗಳೆಂದು ಆರೋಪವಿಲ್ಲದಿರುವುದು.) ಕರ್ಮಫಲತ್ಯಾಗವು ಇವುಗಳೆಲ್ಲವೂ ಧ್ಯಾನದ ಏಕ ದೇಶದ ಫಲವನ್ನು ಸಹ ಹೊಂದತಕ್ಕದ್ದಲ್ಲ, ಎಂದು ಕಾಷಾಯಣಶಾಖೆಯಲ್ಲಿ ಹೇಳಿದೆ (ಆದಕಾರಣ ಧ್ಯಾನಕ್ಕಿಂತ ಕರ್ಮಫಲತ್ಯಾಗವು ಶ್ರೇಷ್ಠವಾಗಲಾರದು.) (೨) (ತಯೋಸ್ತು ಸರ್ವಾಧಿಕಂ ಎಂಬುವ ವಾಕ್ಯದಂತೆ ಧ್ಯಾನಾತ್ ಎಂಬುವ ವಾಕ್ಯವೂ ಪ್ರಮಾಣವಾಕ್ಯವಾಗಿರುವುದರಿಂದ ಇವುಗಳ ವಿರೋಧದಿಂದ ಧ್ಯಾನಾತ್ ಎಂಬುವ ವಾಕ್ಯಕ್ಕೆ ಸ್ವಾರ್ಥದಲ್ಲಿ ತಾತ್ಪರ್ಯವಿಲ್ಲವೆಂಬುದು ಹೇಗೆಂದರೆ—) ಪ್ರಮಾಣವಾಕ್ಯವಾಗಿರುವುದರಿಂದ ಅವುಗಳಿಗೆ ಸಾಮ್ಯವಿದ್ದರೂ ತಯೋಸ್ತು ಇತ್ಯಾದಿ ವಾಕ್ಯಗಳಿಗೆ ಉಪಪತ್ತಿ ಸಾಹಿತ್ಯವಿದ್ದುದರಿಂದ ಪ್ರಾಬಲ್ಯವಿದ್ದ ಪ್ರಯುಕ್ತ ಧ್ಯಾನಾತ್ ಎಂಬುವ ವಾಕ್ಯಕ್ಕೆ ಅಸಮರ್ಥವಿಷಯತ್ವವು ಇರುವುದರಿಂದ ಧ್ಯಾನಾತ್ ಎಂಬುವ ವಾಕ್ಯಕ್ಕೆ [illegible] ತೋರುವ ಅರ್ಥದಲ್ಲಿ ತಾತ್ಪರ್ಯವಿಲ್ಲವೆಂದು ನಿಶ್ಚಯವಾಗುತ್ತದೆ. (೩) (ಇದೇ ವಿಷಯದಲ್ಲಿ ಬೇರೆ ಯುಕ್ತಿಯನ್ನು ಹೇಳುತ್ತಾರೆ—) ಧ್ಯಾನಾದಿಗಳ ಪ್ರಾಪ್ತಿಗೆ ಕಾರಣವಾಗಿರುವುದರಿಂದಲೂ ತ್ಯಾಗಸ್ತುತಿಯು ಕೂಡುತ್ತದೆ. (ಅಂದರೆ ಧ್ಯಾನ, ಜ್ಞಾನ, ನಿವೃತ್ತಕರ್ಮಾನುಷ್ಠಾನ ಇವುಗಳು ಪ್ರಾಪ್ತಿಯಲ್ಲಿ ಪರೀಕ್ಷ್ಯ ಲೋಕಾನ್ ಇತ್ಯಾದಿಗಳು ಫಲತ್ಯಾಗವು ಕಾರಣವೆಂದು ಹೇಳಿದ್ದರಿಂದ ತ್ಯಾಗಸ್ತುತಿಯು ಕೂಡುತ್ತದೆ. ತ್ಯಾಗಸಾಧ್ಯವಾದ ಧ್ಯಾನಾದಿ [illegible] ಫಲಕ್ಕಿಂತ ಅದಕ್ಕೆ ಸಾಧನವಾದ ಫಲತ್ಯಾಗವು, ಆದರಿಂದ ಶ್ರೇಷ್ಠವಾಗಲಿಕ್ಕಿಲ್ಲ. [illegible] ಸ್ತುತಿಯೆಂದೇ ಹೇಳಬೇಕು. (೪) (ಬೇರೆ ಪ್ರಕಾರದಿಂದಲೂ ಅರ್ಥ ಹೇಳುತ್ತಾರೆ—) ತ್ಯಾಗವಿ[illegible]ರುವ ಕೇವಲ ಧ್ಯಾನಕ್ಕಿಂತ ಫಲತ್ಯಾಗದಿಂದ ಕೂಡಿದ ಧ್ಯಾನವು ಶ್ರೇಷ್ಠವು. ಧ್ಯಾನಯ[illegible] ತ್ಯಾಗವೇ ಧ್ಯಾನಾತ್ ಎಂಬುವಲ್ಲಿ ಹೇಳಲ್ಪಟ್ಟದ್ದು. ಧ್ಯಾನಬಿಟ್ಟು ಕೇವಲ ತ್ಯಾಗವನ್ನು [illegible] ತ್ಯಾಗಾತ್ ಶಾಂತಿರನಂತರಂ ಎಂದು ಹೇಳಿದ್ದು ಹೇಗೆ ಕೂಡುತ್ತದೆ. [illegible] ಕೇವಲ ತ್ಯಾಗವನ್ನು [illegible] ಅದಕ್ಕೆ ಧ್ಯಾನಕ್ಕಿಂತ ಆಧಿಕ್ಯವೂ ಹೇಗೆ ಕೂಡುತ್ತದೆ. (೫) ಈ [illegible] ಶಾಖೆಯಲ್ಲಿಯೂ ಹೇಳಿದ್ದಾರೆ. ಕೇವಲ ಧ್ಯಾನದಿಂದ ತ್ಯಾಗಯುಕ್ತವಾದ ಧ್ಯಾನವು ಅಧಿಕವಾಗುವದು. ತ್ಯಾಗಮಾತ್ರಾನಂತರದಲ್ಲಿಯೇ ಮುಕ್ತಿಯಾಗುವದಿಲ್ಲ. ಧ್ಯಾನಯುಕ್ತವಾದ [illegible] ಮುಕ್ತಿಯಾಗುತ್ತದೆ. ಈ ಸಮರ್ಥನಾದ ಭೃತ್ಯನಿಂದ [illegible] ರಾಜನು [illegible] ಗೆಲ್ಲಲಾರನೆಂದು ಹೇಳುವರೆ [illegible]

ಸ್ಥಿತೋ, ಹೀಗೆಯೇ ಧ್ಯಾನಕ್ಕೆ ಧ್ಯಾನಾಂತರದಿಂದ ಆಧಿಕ್ಯ ಬರುವುದರಲ್ಲಿ ಕಾರಣವಾದ ಕರ್ಮಫಲ ತ್ಯಾಗಕ್ಕೆ ಸ್ತುತಿಯೂ ಲಭಿಸುವುದು. ॥೧॥ ॥೧೩—೧೫॥

ಗೀ॥ ಅನಪೇಕ್ಷಃ ಶುಚಿರ್ದಕ್ಷ ಉದಾಸೀನೋ ಗತವ್ಯಥಃ ।
ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಃ ಸ ಮೇ ಪ್ರಿಯಃ ॥೧೬॥

ಅ॥ ಯಃ=ಯಾವಾತನು, ಅನಪೇಕ್ಷಃ=ಭಗವಂತನ ಪ್ರೀತಿಹೊರತು ಬೇರೆ ಯಾವ ಫಲದಲ್ಲಿಯೂ ಅಪೇಕ್ಷೆಯಿಲ್ಲದವನೋ, ಶುಚಿಃ=ಬಾಹ್ಯಾಂತರ ಶುದ್ಧಿಯುಳ್ಳವನೋ, ದಕ್ಷಃ=ಪರಮಾತ್ಮನಿಗೆ ಪ್ರೀತಿ ಕರಗಳಾದ ಕರ್ಮಗಳನ್ನು ಮಾಡುವುದರಲ್ಲಿ ಸಮರ್ಥನೋ, ಉದಾಸೀನಃ=ಮಾಡಲರ್ಹಗಳಾದ ಉಪಕಾರ ಅಪಕಾರಗಳನ್ನ ಪೇಕ್ಷಿಸುತವನೋ, ಗತವ್ಯಥಃ=ಪರರು ಮಾಡಿದ ಅಪಕಾರಗಳಿಂದ ಮನಸ್ಸಿನಲ್ಲಿ ಕ್ಲೇಶ ವನ್ನು ಹೊಂದದಿರುವವನೋ, ಸರ್ವಾರಂಭಪರಿತ್ಯಾಗೀ=ವಿಷ್ಣುವಿಗೆ ಪ್ರೀತಿಕರಗಳಾಗದ ಸಮಸ್ತ ಕರ್ಮ ಗಳನ್ನು ತ್ಯಜಿಸಿರುವವನೋ ಸಮಸ್ತ ಕರ್ಮಗಳ ಆರಂಭದಲ್ಲಿ ಅಭಿಮಾನವನ್ನು ತೊರೆದವನೋ, ಸಮಸ್ತ ಕರ್ಮ ಫಲವನ್ನು ಬಿಟ್ಟಿರುವನೋ, ಪರಮಾತ್ಮನಲ್ಲಿ ಸಮಸ್ತ ಕರ್ಮಗಳನ್ನು ಸಮರ್ಪಿಸುವವನೋ, ಮದ್ಭಕ್ತಃ=ನನ್ನಲ್ಲಿ ಭಕ್ತಿಯುಳ್ಳವನೋ, ಸಃ=ಅತನು, ಮೇ=ನನಗೆ, ಪ್ರಿಯಃ=ಪ್ರೀತಿಪಾತ್ರನು. ॥೧೬॥

ಗೀ॥ ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।
ಶುಭಾಶುಭಪರಿತ್ಯಾಗೀ ಭಕ್ತಿಮಾನ್ಯಃ ಸ ಮೇ ಪ್ರಿಯಃ ॥೧೭॥

ಅ॥ ಯಃ=ಯಾವಾತನು, ನ ಹೃಷ್ಯತಿ=ಒಂದು ಪದಾರ್ಥವು ಸಿಕ್ಕಿದೊಡನೆ ಸಂತೋಷವನ್ನು ಯಾವಾಗಲೂ ಹೊಂದುವುದಿಲ್ಲವೋ, ನ ದ್ವೇಷ್ಟಿ=ಒಂದು ವಸ್ತುವು ಸಿಗದಿದ್ದರೆ ಯಾವಾಗಲೂ ದ್ವೇಷಿಸು ವುದಿಲ್ಲವೋ, ನ ಶೋಚತಿ=ಯಾವಾಗಲೂ ದುಃಖಿಸುವುದಿಲ್ಲವೋ, ನ ಕಾಂಕ್ಷತಿ=ಯಾವಾಗಲೂ ಫಲ ವನ್ನು ಬಯಸುವುದಿಲ್ಲವೋ, ಶುಭಾಶುಭಪರಿತ್ಯಾಗೀ=ಭಗವದ್ವಿಷಯಕ ಜ್ಞಾನ ಭಕ್ತಿ ವೈರಾಗ್ಯಾದಿಗಳಿಗೆ ಬಾಧಕಗಳಾದ ಶುಭಗಳನ್ನು, ಎಲ್ಲಾ ಅಶುಭಗಳನ್ನು, ಬಿಟ್ಟಿರುವನೋ, ಭಕ್ತಿಮಾನ್=ನನ್ನಲ್ಲಿ ವಿಶೇ ಷವಾಗಿ ಭಕ್ತಿಯುಳ್ಳವನೋ, ಸಃ=ಅತನು, ಮೇ=ನನಗೆ ಪ್ರಿಯಃ=ಪ್ರಿಯನು. ॥೧೭॥

ಗೀ॥ ಸಮಃ ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।
ಶೀತೋಷ್ಣಸುಖದುಃಖೇಷು ಸಮಃ ಸಂಗವಿವರ್ಜಿತಃ ॥೧೮॥
ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।
ಅನಿಕೇತಃ ಸ್ಥಿರಮತಿರ್ಭಕ್ತಿಮಾನ್ಮೇ ಪ್ರಿಯೋ ನರಃ ॥೧೯॥

ಅ॥ ಶತ್ರೌ, ಚ=ಶತ್ರುವಿನಲ್ಲಿಯೂ ಮಿತ್ರೇ ಚ=ಗೆಳೆಯನಲ್ಲಿಯೂ, [illegible] ಗಳ್ಳುವನು (ಪ್ರೀತಿಸುತ್ತಿರುವಾಗಲೀ ಪ್ರೀತ್ಯತಿಶಯವಾಗಲೀ ತಿಳಿದಿರುವವನು) [illegible]

ನಿಂದಾಸ್ತುತಿಃ=ಜನರು ತನ್ನನ್ನು ಸ್ತೋತ್ರಮಾಡಿದರೆ ಸಂತೋಷವನ್ನು, ನಿಂದಿಸಿದರೆ ದುಃಖವನ್ನು ಹೊಂದದೆ ಒಂದೇ ರೀತಿಯಾಗಿರುವವನು, ಮೌನೀ=ಪ್ರಯೋಜನವಿಲ್ಲದೆ ಮಾತನಾಡದಿರುವವನು, ಯೇನ ಕೇನಚಿತ್=ಭಗವಂತನ ಪ್ರೇರಣೆಯಿಂದ ಹೊಂದಿದ ಯಾವುದಾದರೊಂದು ವಸ್ತುವಿನಿಂದಲೂ, ಸಂತುಷ್ಟಃ=ಸಂತೋಷವನ್ನು ಹೊಂದಿದವನು, ಅನಿಕೇತಃ=ನಿಯತಸ್ಥಾನವಿಲ್ಲದವನು, ಅಥವಾ ಅ ಎನಿಸಿದ ಭಗವಂತನನ್ನು ಆಶ್ರಯಿಸಿದವನು, ಸ್ಥಿರಮತಿಃ=ಕುತರ್ಕಗಳಿಂದ ಕದಲದೆ ದೃಢವಾದ ಜ್ಞಾನವುಳ್ಳವನು, ಭಕ್ತಿಮಾನ್=ಭಕ್ತಿಯುಳ್ಳವನು. ನರಃ=ಮನುಷ್ಯನು, ಮೇ=ನನಗೆ, ಪ್ರಿಯಃ=ಪ್ರೀತಿಪಾತ್ರನು. ॥ ೧೮, ೧೯ ॥

ಟೀ—ಪುನರುಕ್ತಿದೋಷವನ್ನಾಶಂಕಿಸಿಕೊಂಡು ಪರಿಹರಿಸುತ್ತಾರೆ—

**ಭಾ ॥ (೧) ಸರ್ವಾರಂಭಪರಿತ್ಯಾಗೀ ಶುಭಾಶುಭಪರಿತ್ಯಾಗೀತ್ಯಾದೇಃ ಸಾಮಾನ್ಯವಿಶೇಷವ್ಯಾಖ್ಯಾನವ್ಯಾಖ್ಯೇಯಭಾವೇನಾಪುನರುಕ್ತಿಃ ॥ (೨) ಹರ್ಷಾದಿಭಿರ್ಯುಕ್ತತ್ವಂ ಯುಕ್ತೇ ಕಾದಾಚಿತ್ಕಮಪಿ ಭವತೀತಿ ಯೋ ನ ಹೃಷ್ಯತೀತ್ಯಾದಿ ॥ (೩) ಉಪಸಂಹಾರಾರ್ಥಂ ಪೂರ್ವಂ ॥ (೪) ಅಧಿಕಜ್ಞಾಪನಾರ್ಥಂ ಭಕ್ತ್ಯಭ್ಯಾಸಃ ॥ (೫) ಯೇ ತು ಸರ್ವಾಣಿ ಕರ್ಮಾಣೀತ್ಯಾದೇಃ ಪ್ರಪಂಚ ಏಷಃ ॥ ೧೬—೧೯ ॥**

ಅ ॥ (೧) (1) ಸರ್ವಾರಂಭಪರಿತ್ಯಾಗೀ, ಶುಭಾಶುಭಪರಿತ್ಯಾಗೀ ಇತ್ಯಾದಿಗಳಲ್ಲಿ ಮತ್ತು ಅದ್ವೇಷ್ಟಾ ಸರ್ವಭೂತಾನಾಂ ಸಮಃ ಶತ್ರೌ ಚ ಮಿತ್ರೇ ಚ ಇತ್ಯಾದಿಗಳಲ್ಲಿ ಸಾಮಾನ್ಯ ವಿಶೇಷಭಾವವು. (2) ಸಂತುಷ್ಟಃ ಸತತಂ ಸಂತುಷ್ಟೋ ಯೇನ ಕೇನಚಿತ್ ಮತ್ತು ಕ್ಷಮೀ, ಸಮದುಃಖಸುಖಃ ಇತ್ಯಾದಿಗಳಲ್ಲಿಯೂ ವ್ಯಾಖ್ಯಾನ ವ್ಯಾಖ್ಯೇಯಭಾವವು. ಆದಕಾರಣ ಆಯಾ ಸ್ಥಳಗಳಲ್ಲಿ ಪುನರುಕ್ತಿದೋಷವಿಲ್ಲ. (೨) (ಹರ್ಷಾಮರ್ಷಭಯೋದ್ವೇಗೈರ್ಮುಕ್ತಃ, ಯೋ ನ ಹೃಷ್ಯತಿ ಎಂಬುದರಲ್ಲಿ ಹಿಂದೆ ಹೇಳಿದ ಸಾಮಾನ್ಯ ವಿಶೇಷಭಾವವಾಗಲೀ ವ್ಯಾಖ್ಯಾನ ವ್ಯಾಖ್ಯೇಯಭಾವವಾಗಲೀ ಎರಡೂ [illegible] ಕೂಡುವುದಿಲ್ಲ. ಎಂದರೆ—) ಹರ್ಷಾದಿಗಳಿಂದ ಬಿಡಲ್ಪಟ್ಟಿದ್ದಾನೆ ಎಂದು ಹೇಳಿದರೆ (ಭಗವಂತನ ಪಾದಕ್ಕೆ ಪ್ರಸ್ಥಯಿಂದ) ಕಾಲಾಂತರದಲ್ಲಿ ಹರ್ಷಾದಿಗಳು [illegible] ಬರುವುದಿಲ್ಲ [illegible] ಸಂಶಯ ಬರಬಾರದೆಂಬುವುದಕ್ಕಾಗಿ ಯೋ ನ ಹೃಷ್ಯತಿ ಎಂದು ಹೇಳಿದೆ. [illegible]

[illegible] ಬರುವ ಅರ್ಥವು [illegible] ಮುಕ್ತಃ ಎಂಬುದಕ್ಕೆ [illegible] ಅರ್ಥವು [illegible] (೩) ([illegible] ಯೋ ನ ಹೃಷ್ಯತಿ [illegible] ಹರ್ಷಾಮರ್ಷಭಯೋದ್ವೇಗೈಃ ಮುಕ್ತಃ [illegible] ಹೃಷ್ಯತಿ ಎಂಬುದರಿಂದಲೇ [illegible] ಹರ್ಷಾದಿಭಿರ್ಮುಕ್ತಃ ಎಂದು ಹೇಳಿದ್ದು ಯೋ ನ ಹೃಷ್ಯತಿ [illegible] ಕಾಲದಲ್ಲಿಯೂ [illegible] [illegible] (೪) (ಅದ್ವೇಷ್ಟಾ [illegible] ಯೇ ತು ಸರ್ವಾಣಿ ಕರ್ಮಾಣಿ [illegible]

ಎಂಬುವ ವಾಕ್ಯದಲ್ಲಿ ಉಪಾಸಕರಿಗೆ ಹೇಳಿದ ಮೈತ್ರೀ ಮೊದಲಾದ ಎಲ್ಲಾ ಧರ್ಮಗಳನ್ನು ಸ್ಪಷ್ಟವಾಗಿ ಹೇಳಿದಂತೆ ಆಯಿತು) ॥ ೧೬—೧೯ ॥

ಪೀ—ಹಿಂದೆ ಹೇಳಿದ ಎಲ್ಲಾ ಧರ್ಮಗಳನ್ನು ಒಟ್ಟುಗೂಡಿಸಿ ಹೇಳುತ್ತಾರೆ—

ಗೀ ॥ ಯೇ ತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।
ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ ಮೇ ಪ್ರಿಯಾಃ ॥ ೨೦ ॥

ಅ ॥ ಯೇ ತು=ಯಾರಾದರೂ, ಧರ್ಮ್ಯಾಮೃತಂ=ಸರ್ವಧಾರಕನಾದ ಶ್ರೀವಿಷ್ಣುವಿನ ಉಪಾಸನಕ್ಕೆ ಅಂಗವಾಗಿರುವುದರಿಂದ ಧರ್ಮಸಾಧನವೂ, ಮೋಕ್ಷಸಾಧನವೂ ಆದ, ಯಥೋಕ್ತಂ=ಅದ್ವೇಷ್ಟಾ ಇತ್ಯಾದಿಗಳಿಂದ ಹೇಳಲ್ಪಟ್ಟ ದ್ವೇಷಪರಿತ್ಯಾಗ ಮೊದಲಾದ, ಇದಂ=ಪ್ರೀತಿಸಾಧನವಾದುದೆಲ್ಲವನ್ನು, ಶ್ರದ್ದಧಾನಾಃ=ಆಸ್ತಿಕ್ಯಬುದ್ಧಿಯುಳ್ಳವರಾಗಿ, ಮತ್ಪರಮಾಃ=ನಾನೇ (ಶ್ರೀಕೃಷ್ಣನೇ) ಸರ್ವೋತ್ತಮನೆಂದು ತಿಳಿದುಕೊಂಡವರಾಗಿ, ಪರ್ಯುಪಾಸತೇ=ಚೆನ್ನಾಗಿ ಉಪಾಸನೆ ಮಾಡುತ್ತಾರೋ, ತೇ ಭಕ್ತಾಃ=ಅಂತಹ ಭಕ್ತರಾದವರು, ಮೇ=ನನಗೆ, ಅತೀವ ಪ್ರಿಯಾಃ=ಅತ್ಯಂತವಾಗಿ ಪ್ರೀತಿಗೆ ಪಾತ್ರರಾದವರು ॥ ೨೦ ॥

ಗೀ ॥ ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಭಕ್ತಿಯೋಗೋ ನಾಮ ದ್ವಾದಶೋಽಧ್ಯಾಯಃ ॥ ೧೨ ॥

ಅ ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಭಕ್ತಿಯೋಗವೆಂಬ ಹದಿನೆರಡನೇ ಅಧ್ಯಾಯವು ಮುಗಿಯಿತು ॥ ೧೨ ॥

ಭಾ ॥ (೧) ಪಿಂಡೀಕೃತ್ಯೋಪಸಂಹರತಿ । ಯೇ ತು ಧರ್ಮ್ಯಾಮೃತಮಿತಿ ॥ (೨) ಧರ್ಮೋ ವಿಷ್ಣುಸ್ತದ್ವಿಷಯಂ ಧರ್ಮ್ಯಂ । ಧರ್ಮ್ಯಂ ಮೃತ್ಯಾದಿಸಂಸಾರನಾಶಕಂ ಚೇತಿ ಧರ್ಮ್ಯಾಮೃತಂ ॥ (೩) ಶ್ರದಾಸ್ತಿಕ್ಯಂ । ಶ್ರನ್ನಾಮಾಸ್ತಿಕ್ಯಮುಚ್ಯತ ಇತ್ಯಭಿಧಾನಾತ್ । ತದ್ದಧಾನಾಃ ಶ್ರದ್ದಧಾನಾಃ ॥ ೨೦ ॥

ಅ ॥ (೧) ಯೇ ತು ಧರ್ಮ್ಯಾಮೃತಂ ಎಂಬುವುದರಿಂದ ಕ್ರೋಡೀಕರಿಸಿಕೊಂಡು ಹೇಳುತ್ತಾರೆ (೨) (ಧರ್ಮ್ಯಾಮೃತಂ ಎಂಬುವಲ್ಲಿದ್ದ ಧರ್ಮ್ಯ ಶಬ್ದದ ಅರ್ಥವನ್ನು ಹೇಳುತ್ತಾರೆ.) ಸರ್ವಧಾರಕನಾದುದರಿಂದ ಧರ್ಮಃ=ಅಂದರೆ ವಿಷ್ಣುವು. ವಿಷ್ಣುವಿಷಯಕವಾದುದು ಅಂದರೆ ವಿಷ್ಣುವಿನ ಉಪಾಸನಕ್ಕೆ ಅಂಗವಾದುದು, ಧರ್ಮ್ಯವು. ಮರಣ ಮೊದಲಾದ ಸಂಸಾರವನ್ನು ನಾಶಗೊಳಿಸುವುದು ಅಮೃತವು ಹೀಗೆ ಧರ್ಮ್ಯಾಮೃತ ಶಬ್ದದ ಅರ್ಥವು. (೩) (ಶ್ರದ್ಧಧಾನಾಃ ಎಂಬುವ ಶಬ್ದದ ಅರ್ಥವನ್ನು ಹೇಳುತ್ತಾರೆ -) ಶ್ರತ್ ಅಂದರೆ ಆಸ್ತಿಕ್ಯಬುದ್ಧಿಯು. ಶ್ರತ್ ಎಂದರೆ ಆಸ್ತಿಕ್ಯವೆನಿಸುತ್ತದೆ, ಎಂದು ಅಭಿಧಾನವು ಅಂತಹ ಆಸ್ತಿಕ್ಯವನ್ನು ಧರಿಸಿದವರು ಶ್ರದ್ಧಧಾನಾಃ ಎನಿಸಿಕೊಳ್ಳುತ್ತಾರೆ. ॥ ೨೦ ॥

ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ದ್ವಾದಶೋಽಧ್ಯಾಯಃ ॥ ೧೨ ॥

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಶ್ರೀಭಗವದ್ಗೀತಾ ಶಾಸ್ತ್ರದಲ್ಲಿ ಹದಿನೆರಡನೇ ಅಧ್ಯಾಯವು ಮುಗಿಯಿತು. ॥ ೧೨ ॥

ಟೀ - ಯೇ ತು ಸರ್ವಾಣಿ ಕರ್ಮಾಣಿ ಇತ್ಯಾದಿಗಳನ್ನು ಅದ್ವೇಷ್ಟಾ ಇತ್ಯಾದಿಗಳಿಂದ ವಿವರಿಸುತ್ತಾರೆ ಅದರಲ್ಲಿರತಕ್ಕ ಸರ್ವಾರಂಭಪರಿತ್ಯಾಗೀ ಎಂಬುದಕ್ಕೆ ನಾಲ್ಕು ರೀತಿಯಾಗಿ ಅರ್ಥ ಹೇಳುತ್ತಾರೆ–

**ಟಾ ॥ (೧) ಅನ್ಯೈಷ್ಣವಸರ್ವಾರಂಭಪರಿತ್ಯಾಗೀ । ಸರ್ವಾರಂಭಾಭಿಮಾನತ್ಯಾಗೇನ ಫಲತ್ಯಾಗೇನ ಭಗವತ್ಸಮರ್ಪಣರೂಪೇಣ ಚ ತ್ಯಾಗೀ ॥ (೨) ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ । ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸೇತ್ಯಾದೇಃ ॥ (೩) ಭಕ್ತಿಂ ಜ್ಞಾನಂ ಚ ವೈರಾಗ್ಯಮ್ಯತೇ ಯೋ ನೇಚ್ಛತಿ ಕ್ವಚಿತ್। ಶುಭಾಶುಭಪರಿತ್ಯಾಗೀ ವಿದ್ವದ್ಭಿಃ ಕೀರ್ತಿತೋ ಹಿ ಸ ಇತಿ ಚ ॥ (೪) ಪ್ರಾಯಸ್ಸುಖಾದಿಷು ಸಮಃ ಪ್ರಾಯೋ ಹರ್ಷಾದಿವರ್ಜಿತಃ । ತಥೋಚ್ಯತೇ ಯಥಾಽಲ್ಪಸ್ತೋಽಸ್ತ್ಯ ಇತ್ಯುಚ್ಯತೇ ಜನೈಃ (ಬುಧೈಃ) ॥ (೫) ನ ಹಿ ಮುಖ್ಯತಯಾ ಸಾಮ್ಯಂ ಕಸ್ಯಚಿತ್ಸುಖದುಃಖಯೋಃ । ನ ಚ ಹರ್ಷಾದಿಸಂತ್ಯಾಗೋ ಯಾವನ್ಮುಕ್ತಿಃ ಕುತಶ್ಚನೇತಿ ಚ ॥ (೬) ಹೃತಿರ್ಮದಾದಧರ್ಮಾಯ ಹರ್ಷೋ ನಾಮ ಪ್ರಕೀರ್ತಿತ ಇತಿ ಶಬ್ದನಿರ್ಣಯೇ ॥ (೭) ವ್ಯಸ್ತೇನ ಪ್ರಿಯಾಃ ಸಮಸ್ತೇನಾತೀವ ಪ್ರಿಯಾಃ ॥ (೮) ಭಕ್ತಿಸ್ತು ವ್ಯಸ್ತೇಷ್ವಪ್ಯುಕ್ತೈವ । ಯಸ್ಮಾನ್ನೋದ್ವಿಜತ ಇತ್ಯತ್ರಾಪಿ ಸ ಚೇತ್ಯನೇನ ಭಕ್ತಿರನುಷಜ್ಯತೇ । ಧರ್ಮಸಾಧನಂ ಧರ್ಮ್ಯಂ ತದೇವಾಮೃತಸಾಧನಮಮೃತಂ ಧರ್ಮ್ಯಾಮೃತಂ ॥ ೧೩—೨೦ ॥**

ಅ ॥ (೧) (1) ವಿಷ್ಣುಪ್ರೀತಿಕರಗಳಾಗದ ಸಮಸ್ತ ಕರ್ಮಾರಂಭಗಳನ್ನು ಪರಿತ್ಯಾಗಮಾಡಿದವನು, (2) ಸಮಸ್ತಕರ್ಮಾರಂಭಗಳ ಅಭಿಮಾನವನ್ನು ಬಿಟ್ಟವನು. (3) ಸಮಸ್ತ ಕರ್ಮಗಳ ಫಲವನ್ನು ಬಿಟ್ಟವನು. (4) ಪರಮಾತ್ಮನಲ್ಲಿ ಸಮಸ್ತ ಕರ್ಮಗಳನ್ನು ಸಮರ್ಪಿಸುವಿಕೆ ಎಂಬ ತ್ಯಾಗವುಳ್ಳವನು. (ಹೀಗೆ ನಾಲ್ಕು ಅರ್ಥಗಳು.) (೨) ಜ್ಞಾನಿಗಳು ಸಮಸ್ತಕರ್ಮಗಳ ಫಲತ್ಯಾಗವನ್ನು ತ್ಯಾಗವೆನ್ನುತ್ತಾರೆ. ಸರ್ವೋತ್ತಮನಾದ ನನ್ನಲ್ಲಿಯೇ ಮನಸ್ಸನ್ನು ಇಟ್ಟು (ವಿಷ್ಣುಭಕ್ತ್ಯಾದಿಗಳಿಂದ ಇತರಗಳಾದ ಕಾಮನಾಗಳನ್ನು ತೊರೆದವನಾಗಿ) ಸಮಸ್ತ ಕರ್ಮಗಳನ್ನು ನನ್ನಲ್ಲಿಯೇ ಸಮರ್ಪಿಸಿ (ಯುದ್ಧಮಾಡು.) ಇದು ಮೊದಲಾದ ವಾಕ್ಯಗಳಿಂದ (ಸರ್ವ ಕರ್ಮಗಳನ್ನು ಶ್ರೀಪರಮಾತ್ಮನಲ್ಲಿ ಅರ್ಪಿಸಬೇಕೆಂಬುವುದು ಸಿದ್ಧವಾಗುತ್ತದೆ.) (೩) (ಸರ್ವಾರಂಭಪರಿತ್ಯಾಗೀ ಎಂಬುವುದಕ್ಕೆ ಶುಭಾಶುಭಪರಿತ್ಯಾಗೀ ಎಂಬುವುದು ವಿಸ್ತರವಾಗಿರುವದರಿಂದ **ಅನ್ಯೈಷ್ಣವಾರಂಭಪರಿತ್ಯಾಗೀ** ಇತ್ಯಾದಿ ಪ್ರಕಾರ ಅರ್ಥ ಹೇಳಿದ್ದು ಹೇಗೆ? ಎಂದರೆ ಆ ವಿಷಯದಲ್ಲಿ ಸ್ಮೃತಿ ಪ್ರಮಾಣವನ್ನು ಹೇಳುತ್ತಾರೆ—) ಯಾವಾತನು [illegible] ವೈರಾಗ್ಯಗಳನ್ನು ಬಿಟ್ಟು ಬೇರೆ ಯಾವುದನ್ನು ಎಲ್ಲಿಯೂ ಇಚ್ಛಿಸುವದಿಲ್ಲವೋ, (ಮೋಕ್ಷ [illegible] ಸಾಧನಗಳಾಗ ಅನ್ಯೈಷ್ಣವಾರಂಭಗಳನ್ನು ಇಚ್ಛಿಸುವದಿಲ್ಲವೋ, ಅಂತಹವನು [illegible] ಎಂದು [illegible]ಗಳಿಂದ ಹೇಳಲ್ಪಡುತ್ತಾನೆ. (೪) (ಸಮದುಃಖಸುಖಃ [illegible] ಎಂಬುದಕ್ಕೆ ಅರ್ಥವನ್ನು ಹೇಳುತ್ತಾರೆ—) ಪ್ರಾಯಶಃ ಸುಖಾದಿಗಳಲ್ಲಿ ಸಮನಾದವನು [illegible] ಹೇಳಲ್ಪಡುತ್ತಾನೆ. ಹೇಗೆಂದರೆ ಅಲ್ಪವಾದ ದ್ರವ್ಯವುಳ್ಳವನು [illegible] ಹೇಳಲ್ಪಡುತ್ತಾನೆ

(೫) (ಮುಖ್ಯಾರ್ಥವೇ ಏಕೆ ಆಗಲಾರದೆಂದರೆ—) ಯಾರಿಗೂ ಸುಖದುಃಖಗಳಲ್ಲಿ ಮುಖ್ಯವಾಗಿ ಸಾಮ್ಯ ಇರಲಾರದು ಮುಕ್ತಿಯಾಗುವ ಪರ್ಯಂತ ಯಾವ ರೀತಿಯಿಂದಲೂ ಹರ್ಷ ಮೊದಲಾದವುಗಳ ಸಂಪೂರ್ಣ ಪರಿತ್ಯಾಗವು ಬರಲಾರದು (೬) (ಹರ್ಷವು ಗುಣವಾಗಿರುವುದರಿಂದ ಅದನ್ನು ಬಿಡುವುದು ಹೇಗೆ ಎಂ ಹರ್ಷ ಶಬ್ದಕ್ಕೆ ಹೇಯಾರ್ಥವಿದೆ, ಎಂದು ಸ್ಮೃತಿಯಿಂದಲೇ ತೋರಿಸುತ್ತಾರೆ-) ಮದದೆಶೆಯಿಂದ ಅಪ ಕ್ಯಾಗಿ ಮನಸ್ಸಿನ ಪ್ರವೃತ್ತಿಯು ಹರ್ಷವೆನಿಸುತ್ತದೆ, ಎಂದು ಶಬ್ದನಿರ್ಣಯದಲ್ಲಿದೆ. (೭) (ಅದ್ವೇಷ್ಟಾ ಇತ್ಯಾದಿಗಳಲ್ಲಿ ದ್ವೇಷಾದಿಗಳಿಲ್ಲದವರು ಕೇವಲ ಪ್ರಿಯರೆಂದು ಹೇಳಿ ಯೇ ತು ಧರ್ಮ್ಯಾಮೃತಂ ಎಂಬುವಲ್ಲಿ ಶ್ರದ್ಧಾದಿಗಳುಳ್ಳವರು ಅತಿಪ್ರಿಯರೆಂದು ಹೇಳಲು ಕಾರಣವೇನು? ಎಂದರೆ—) ಅದ್ವೇಷ್ಟಾ ಇತ್ಯಾದಿಗಳಲ್ಲಿ ಹೇಳಿದ ಕೆಲವು ಕೆಲವು ಸಾಧನ ಮಾತ್ರ ಮಾಡಿದವರು ಪ್ರಿಯರು. ಯೇ ತು ಎಂ ವಲ್ಲಿ ಹೇಳಿದ ದ್ವೇಷಾದಿಗಳ ಪರಿತ್ಯಾಗಾದಿರೂಪಗಳಾದ ಸಮಸ್ತ ಸಾಧನಗಳನ್ನು ಮಾಡಿದವರು ಅತ್ಯ ಪ್ರಿಯರು. (ಒಂದೊಂದನ್ನು ಮಾಡುವವರಿಗಿಂತ ಸಮಸ್ತವನ್ನು ಮಾಡುವವರು ಅತ್ಯಂತಪ್ರಿಯರು) (೮) (ಹಾಗಾದರೆ ಅದ್ವೇಷ್ಟಾ ಇತ್ಯಾದಿಗಳಲ್ಲಿ ದ್ವೇಷಪರಿತ್ಯಾಗಮೊದಲಾದ ಸಾಧನಗಳಿಂದ ಪ್ರಿಯತ್ವವು ಹೇ ಲ್ಪಡುತ್ತದೆ. ಯೇ ತು ಎಂಬುವಲ್ಲಿ ಭಕ್ತಿಯು ಸಮಸ್ತ ಸಾಧನಗಳಲ್ಲಿ ಉತ್ತಮವಾಗಿರುವುದರಿಂದ ಭಕ್ತಿ ಯಿಂದ ಅತಿಪ್ರಿಯತ್ವವು ಹೇಳಲ್ಪಡುತ್ತದೆಂದು ಏಕೆ ಆಗಲಾರದೆಂದರೆ—) ವ್ಯಸ್ತ (ಕೆಲವು ಕೆಲವು) ಸಾಧನ ಮಾಡುವವರಲ್ಲಿಯೂ ಭಕ್ತಿಯು ಇದ್ದೇ ಇದೆ. (ಅಂದರೆ – ದ್ವೇಷಪರಿತ್ಯಾಗಾದಿಗಳನ್ನು ಹೇಳಿದರೂ ಭಕ್ತಿ ಯನ್ನು ಹೇಳಿದ್ದರಿಂದ ಈ ವಿಭಾಗವು ಯುಕ್ತವಲ್ಲ) (ಯಸ್ಮಾನ್ನೋದ್ವಿಜತೇ ಲೋಕಃ ಎಂದು ಸ್ವ ಸಾಧನಗಳನ್ನು ಹೇಳಿದರೆ ಭಕ್ತಿಯನ್ನು ಹೇಳದಿರುವುದರಿಂದ ಕೆಲವು ಕೆಲವು ಸಾಧನಮಾಡುವವರಲ್ಲಿಯೂ ಭಕ್ತಿಯು ಹೇಳಲ್ಪಟ್ಟಿದೆ ಎಂಬುದು ಹೇಗೆ? ಎಂದರೆ—) ಯಸ್ಮಾನ್ನೋದ್ವಿಜತೇ ಎಂಬುವಲ್ಲಿಯೂ ಸ ಚ ಎಂಬುವುದರಿಂದ ಭಕ್ತಿಯು ಹೇಳಲ್ಪಡುತ್ತದೆ. (ಧರ್ಮ್ಯಾಮೃತಶಬ್ದಾರ್ಥವನ್ನು ಹೇಳುತ್ತಾರೆ-) ಧರ್ಮಕ್ಕೆ ಸಾಧನವಾದುದು ಧರ್ಮ್ಯವು, ಅದೇವೇ ಮೋಕ್ಷಕ್ಕೆ ಸಾಧನವಾದುದು ಅಮೃತವು. ಹೀಗೆ ಧರ್ಮ್ಯಾಮೃತ ವೆನಿಸುತ್ತದೆ. ॥ ೧೩-೨೦ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾ ತಾತ್ಪರ್ಯನಿರ್ಣಯೇ ದ್ವಾದಶೋಽಧ್ಯಾಯಃ ॥ ೧೨ ॥

॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾ ತಾತ್ಪರ್ಯನಿರ್ಣಯದಲ್ಲಿ ಹದಿನೆರಡನೇ ಅಧ್ಯಾಯವು ಮುಗಿಯಿತು. ॥೧೨॥

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಃ ॥

# ಹದಿಮೂರನೇ ಅಧ್ಯಾಯವು.

---

ಟೀ—ಈ ಅಧ್ಯಾಯದಲ್ಲಿ ಹಿಂದಿನ ೧೨ ಅಧ್ಯಾಯಗಳ ಅರ್ಥವನ್ನು ಸಂಗ್ರಹಿಸಿ ಹೇಳುತ್ತಾರೆ. ಅಂದರೆ ತ್ರೈಗುಣ್ಯವಿಷಯಾ ಇತ್ಯಾದಿಗಳಿಂದ ೬ ಅಧ್ಯಾಯಗಳು ಮುಗಿಯುವ ಪರ್ಯಂತ ಹೆಚ್ಚಾಗಿ ಜ್ಞಾನ ಸಾಧನವನ್ನೂ ೨ನೇ ಅಧ್ಯಾಯದಲ್ಲಿ ನ ತ್ವೇವಾಹಂ ಇತ್ಯಾದಿಗಳಿಂದ ಜೀವರು ಅನಾದಿನಿತ್ಯರೆಂದೂ ೭ನೇ ಅಧ್ಯಾಯ ಮೊದಲುಗೊಂಡು ೧೨ ಅಧ್ಯಾಯ ಪರ್ಯಂತ ಭಗವತ್ಸ್ವರೂಪವನ್ನೂ ೭ನೇ ಅಧ್ಯಾಯದಲ್ಲಿ ಭೂಮಿರಾಪಃ ಇತ್ಯಾದಿಗಳಿಂದ ಭಗವದಾವಾಸಸ್ಥಾನವನ್ನೂ, ಹೇಳಿರುವರು. ಅಲ್ಲಲ್ಲಿ ಬಿಕ್ಕಿ ಹೇಳಿದ ಈ ವಿಷಯಗಳೆಲ್ಲಾ ಬುದ್ಧಿಯಲ್ಲಿ ದೃಢವಾಗಿ ನಿಲ್ಲುವುದಕ್ಕಾಗಿ ಸಂಕ್ಷೇಪದಿಂದ ಇವುಗಳನ್ನು ಈ ಅಧ್ಯಾಯದಲ್ಲಿ ಹೇಳುತ್ತಾರೆ—

ಗೀ ॥ ॥ ಅರ್ಜುನ ಉವಾಚ ॥

ಓಂ ॥ ಪ್ರಕೃತಿಂ ಪುರುಷಂ ಚೈವ ಕ್ಷೇತ್ರಂ ಕ್ಷೇತ್ರಜ್ಞಮೇವ ಚ ।
ಏತದ್ವೇದಿತುಮಿಚ್ಛಾಮಿ ಜ್ಞಾನಂ ಜ್ಞೇಯಂ ಚ ಕೇಶವ ॥ ೧ ॥

ಅ ॥ ಅರ್ಜುನಃ—ಅರ್ಜುನನು, ಉವಾಚ=ಪ್ರಶ್ನೆ ಮಾಡುತ್ತಾನೆ, ಕೇಶವ—ಬ್ರಹ್ಮರುದ್ರರಿಗೆ ಪ್ರೇರಕನಾದ ಶ್ರೀಕೃಷ್ಣನೇ, ಪ್ರಕೃತಿಂ—ಚೇತನ ಅಚೇತನ ಪ್ರಕೃತಿಗಳನ್ನು, ಪುರುಷಂ ಚೈವ—ಜೀವನನ್ನು, ಕ್ಷೇತ್ರಂ=ಪರಮಾತ್ಮನಿಗೆ ಆವಾಸಸ್ಥಾನವಾದ ಕ್ಷೇತ್ರವನ್ನು, ಕ್ಷೇತ್ರಜ್ಞಮೇವ ಚ=ಆ ಕ್ಷೇತ್ರವನ್ನು ಸಂಪೂರ್ಣವಾಗಿ ಪ್ರತ್ಯಕ್ಷೀಕರಿಸುತ್ತಿರುವ ಪರಮಾತ್ಮನನ್ನು, ಜ್ಞಾನಂ=ಪರಬ್ರಹ್ಮ ಜ್ಞಾನಸಾಧನವನ್ನು, ಜ್ಞೇಯಂ ಚ=ಮೋಕ್ಷಕ್ಕಾಗಿ ತಿಳಿಯಲರ್ಹವಾದ, ಪ್ರಮೇಯವನ್ನು, ಏತತ್=ಇವೆಲ್ಲವನ್ನು, ವೇದಿತುಂ—ತಿಳಿಯಲಿಕ್ಕೆ, ಇಚ್ಛಾಮಿ—ಇಚ್ಛಿಸುತ್ತೇನೆ. ॥ ೧ ॥

ಟೀ—ಪರಮಾತ್ಮನ ಸ್ವರೂಪಜ್ಞಾನವೇ ಮೋಕ್ಷಕ್ಕೆ ಕಾರಣವಾಗಿರುವುದರಿಂದ ಭಗವಂತನ ಸ್ವರೂಪವನ್ನು ಹೇಳುವುದು ಯುಕ್ತವು. ಮಹಾಭೂತಾನ್ಯಹಂಕಾರಃ ಇತ್ಯಾದಿಗಳಿಂದ ಕ್ಷೇತ್ರಸ್ವರೂಪವನ್ನು ಏಕೆ ಹೇಳುವುದು? ಎಂದರೆ— ಅದು ಭಗವದ್ಧ್ಯಾನಕ್ಕೆ ಉಪಯುಕ್ತವಾಗಿರುವುದರಿಂದ ಅದನ್ನೆಲ್ಲಾ ಹೇ ಪರಮಾತ್ಮನೇ ಕ್ಷೇತ್ರಜ್ಞನೆನ್ನುತ್ತಾರೆ—

ಗೀ ॥ ॥ ಶ್ರೀಭಗವಾನುವಾಚ ॥

ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।
ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ ೨ ॥

ಅ ॥ ಶ್ರೀಭಗವಾನ್—ಶ್ರೀಕೃಷ್ಣನು, ಉವಾಚ—ಉಪದೇಶಿಸಿದನು. ಕೌಂತೇಯ—ಅರ್ಜುನನೇ ಇದಂ ಶರೀರಂ—ಈ ಅವ್ಯಕ್ತ, ತತ್ತ್ವ ಮಹತ್ತತ್ತ್ವ, ಅಹಂಕಾರ ತತ್ತ್ವ ಮೊದಲಾದುದೆಲ್ಲವೂ. ಕ್ಷೇತ್ರಮಿತಿ— ಶ್ರೀಪರಮಾತ್ಮನಿಗೆ ಆವಾಸಸ್ಥಾನವಾಗಿರುವುದರಿಂದ, ಕ್ಷೀಯತೇ ಸ್ಥೀಯತೇ ಅತ್ರ ಭಗವತಾ [illegible]

ವ್ಯಕ್ತಿಯಿಂದ ಕ್ಷೇತ್ರವೆಂತೆಂದು, ಅಭಿಧೀಯತೇ=ಹೇಳಿಸಿಕೊಳ್ಳಲ್ಪಡುತ್ತದೆ. ಏತತ್=ಕ್ಷೇತ್ರವನ್ನು ಕೊಂಡ, ಈ ಅವ್ಯಕ್ತ ಮೊದಲಾದುದನ್ನು, ಯಃ=ಯಾವನು, ವೇತ್ತಿ=ಸಂಪೂರ್ಣ ತಿಳಿಯುತ್ತಾನೋ, ತಂ=ಸಮಸ್ತ ಪದಾರ್ಥಗಳನ್ನು ತಿಳಿದುಕೊಂಡಿರತಕ್ಕ ಅತನನ್ನು, ತದ್ವಿದಃ=ಅವ್ಯಕ್ತಾದಿಕ್ಷೇತ್ರಗಳ ಸ್ವರೂಪವನ್ನು ತಿಳಿದವರು, ಕ್ಷೇತ್ರಜ್ಞ ಇತಿ=ಕ್ಷೇತ್ರಜ್ಞನನ್ನಾಗಿ, ಪ್ರಾಹುಃ=ಹೇಳುತ್ತಾರೆ. ॥ ೨

ಟೀ—ಜೀವನಿಗೂ ಸ್ವಲ್ಪ ಕ್ಷೇತ್ರಜ್ಞಾನವಿದ್ದುದರಿಂದ ಜೀವನೂ ಕ್ಷೇತ್ರಜ್ಞನೆನಿಸುತ್ತಾನೋ, ಎಂದರೆ—

**ಗೀ ॥ ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ ॥ ೩ ॥**

ಅ ॥ ಭಾರತ=ಅರ್ಜುನನೇ. ಸರ್ವಕ್ಷೇತ್ರೇಷು ಅಪಿ=ಅವ್ಯಕ್ತ ಮೊದಲಾದ ಸರ್ವ ವಸ್ತುಗಳಲ್ಲಿಯೂ, ಮಾಮಪಿ=ನನ್ನನ್ನೇ. ಕ್ಷೇತ್ರಜ್ಞಂ ಚ=ಕ್ಷೇತ್ರಜ್ಞಾನವುಳ್ಳ ಪರಮಾತ್ಮನನ್ನಾಗಿ, ವಿದ್ಧಿ=ತಿಳಿದುಕೋ, (ಜೀವನನ್ನು ಕ್ಷೇತ್ರಜ್ಞನನ್ನಾಗಿ ತಿಳಿಯಬೇಡ) ಕ್ಷೇತ್ರಕ್ಷೇತ್ರಜ್ಞಯೋಃ=ಪಂಚ ಮಹಾಭೂತವೇ ಮೊದಲಾದುದೂ ಪರಮಾತ್ಮನೂ ಇವರ, ಯತ್ ಜ್ಞಾನಂ=ಯಾವ ಜ್ಞಾನವಿದೆಯೋ, ತತ್ ಜ್ಞಾನಂ=ಆ ಜ್ಞಾನವು, ಮಮ=ನನ್ನ ಸಮ್ಯಕ್ ಜ್ಞಾನವು, ಹೀಗೆ ಮತಂ=ಸಮ್ಮತವು. ॥ ೩

ಟೀ—ಪೂರ್ವಾಧ್ಯಾಯಕ್ಕೆ ಸಂಗತವಾಗಿ ಈ ಅಧ್ಯಾಯದಲ್ಲಿ ಹೇಳತಕ್ಕ ಅರ್ಥವನ್ನು ಹೇಳುತ್ತಾರೆ—

**ಭಾ ॥ ಓಂ ॥ ಪೂರ್ವೋಕ್ತಜ್ಞಾನಜ್ಞೇಯಕ್ಷೇತ್ರಪುರುಷಾನ್ಪಿಂಡೀಕೃತ್ಯ ವಿವಿಚ್ಯ ದರ್ಶಯತ್ಯನೇನಾಧ್ಯಾಯೇನ ॥ ೧,೨,೩ ॥**

ಅ ॥ ಪೂರ್ವದಲ್ಲಿ ೬ ಅಧ್ಯಾಯ ಪರ್ಯಂತ ಜ್ಞಾನಸಾಧನವನ್ನು ಹೇಳಿದ್ದಾರೆ. ನಂತರ ೬ ಅಧ್ಯಾಯಗಳಿಂದ ಜ್ಞೇಯವಾದ ಬ್ರಹ್ಮಸ್ವರೂಪವನ್ನು ಹೇಳಿದ್ದಾರೆ. ಭೂಮಿರಾಪಃ ಇತ್ಯಾದಿಗಳಿಂದ ಕ್ಷೇತ್ರಸ್ವರೂಪವನ್ನೇ ಹೇಳಿದ್ದಾರೆ. ನ ತ್ವೇವಾಹಂ ಇತ್ಯಾದಿಗಳಿಂದ ಪುರುಷಭೇದವೂ ಹೇಳಲ್ಪಟ್ಟಿದೆ. ಇವೆಲ್ಲವನ್ನು ಈ ಅಧ್ಯಾಯದಿಂದ ಶ್ರೀ ಕೃಷ್ಣನು ಅಲ್ಲಿ ಅಲ್ಲಿ ಬಿಕ್ಕಿ ಹೇಳಿದ್ದನ್ನು ಏಕೀಕರಿಸಿಕೊಂಡು ಬೇರೆ ಬೇರೆ ಪ್ರಕರಣವನ್ನಾಗಿ ಮಾಡಿ ತೋರಿಸುತ್ತಾನೆ. ॥ ೧—೩

ಟೀ—ಈ ಅಧ್ಯಾಯದಲ್ಲಿ ಹೇಳತಕ್ಕ ಅರ್ಥವನ್ನು ತೋರಿಸುತ್ತಾರೆ—

**ತಾ ॥ (೧) ಸರ್ವಾರ್ಥಸಂಕ್ಷೇಪೋಽಯಂ ॥ (೨) ಹಿಂಸಾಹೇತುರ್ಹಿ ಜೀವಸ್ಯ ಪರೇಣ ಶ್ರೇ-**
**ಯರ್ಕೇಽಚಯತ್ । ಅವ್ಯಕ್ತಾದಿಶರೀರಂ ತು ತ(ತ್ತ)ಕ್ಷೇತ್ರಂ ಕ್ಷೀಯತೇ ಯತ್ ॥ (೩)**
**ಇಚ್ಛಾ ದ್ವೇಷಃ ಸುಖಂ ದುಃಖಂ ದೇಹೋ ವ್ಯಾಪ್ತಿಶ್ಚ ಚೇತಸಃ । ತದ್ವಿಕಾರಾ ಇ-**
**ಜ್ಞೇಯಾಶ್ಚಿದ್ರೂಪೇಚ್ಛಾದಿಮಿಶ್ರಿತಾಃ ॥ (೪) ವಿಕಾರೇಚ್ಛಾದಿನಿರ್ಮುಕ್ತಸ್ತಿನ್ನಾತ್ಮೇ-**
**ಚ್ಛಾದಿಸಂಯುತಃ । ಮುಕ್ತ ಇತ್ಯುಚ್ಯತೇ ಜೀವೋ ಮುಕ್ತಿಸ್ತು ದ್ವಿವಿಧಾ ಮತಾ ।**
**(೫) ಚಿನ್ಮಾತ್ರದ್ವೇಷದುಃಖೋ ಚ ದೇಹೋ ಮಿಥ್ಯಾದೃಗಾತ್ಮಕಃ । ನಿಷಿದ್ಧೇಚ್ಛಾ ಚ**
**ಯತ್ರ ಸ್ಯುರ್ವಿಕಾರಾ ಸಾ ಮುಕ್ತಿರಾಸುರೀ ॥ (೬) ಚಿನ್ಮಾತ್ರಾ ವ್ಯಸ್ತವಿಃ ಭಕ್ತಿ ದರ್ಶ-**

**ಸಮ್ಯಗ್ದೃಗಾತ್ಮಕಃ । ಸುಖಮಿಚ್ಛಾನುಕೂಲಾ ಚ ಧೃತಿರ್ದೈವೀತಿ (ತು) ಸಾ ಮು-
ಕ್ತೌ ನಾರಾಯಣಶ್ರುತಿಃ ॥ ೧ ॥**

ಅ ॥ (೧) ೮ ಅಧ್ಯಾಯಗಳಲ್ಲಿ ಹೇಳಿದ ಅರ್ಥವನ್ನು ಸಂಕ್ಷೇಪದಿಂದ ಈ ಅಧ್ಯಾಯದಲ್ಲಿ ತೋರಿಸು ತ್ತಾರೆ. (೨) (ಭಗವಜ್ಜ್ಞಾನವೇ ಮೋಕ್ಷಕ್ಕೆ ಕಾರಣವಾಗಿರುವುದರಿಂದ ಭಗವತ್ಸ್ವರೂಪವನ್ನು ಮಾತ್ರ ಹೇಳಬೇಕಿತ್ತು. ಕ್ಷೇತ್ರವನ್ನೂ ಭಗವತ್ಸ್ವರೂಪವನ್ನೂ ಎರಡನ್ನೂ ಏಕೆ ಹೇಳುವುದೆಂಬುವ ಆಶಂಕೆಯನ್ನು ಇದಂ ಶರೀರಂ ಎಂಬುವುದರಿಂದ ಪರಿಹರಿಸಿದರು. ಅದರಲ್ಲಿ ಸಂಘಾತಶ್ಚೇತನಾ ಎಂದು ಕ್ಷೇತ್ರದ ವಿಕಾರವಾಗಿ ಹೇಳಿದ ಶರೀರಕ್ಕೆ ಸಮಸ್ತ ಕ್ಷೇತ್ರತ್ವವನ್ನು ಹೇಳಿದ್ದು ಹೇಗೆ ಎಂಬುವ ಆಶಂಕೆಯನ್ನು ಪರಿ ಹರಿಸುವುದಕ್ಕಾಗಿ ಶ್ರುತಿಯಿಂದ ಇದರ ಅರ್ಥವನ್ನು ಹೇಳುತ್ತಾರೆ—) (ಜೀವನು ಸ್ವತಃ ನಿತ್ಯನಾದ ದ್ದರಿಂದ ದೇಹಾದಿರೂಪವಾಗಿ ಪರಿಣತಗಳಾದ ಈ ಅವ್ಯಕ್ತಾದಿಗಳ ವಿನಾಶದಿಂದಲೇ ಜೀವನು ಕೊಲ್ಲ ಲ್ಪಟ್ಟನೆಂದು ಹೇಳಲ್ಪಡುತ್ತಾನೆ.) ಅವ್ಯಕ್ತ ಮೊದಲಾದುದು ಜೀವನಿಗೆ ಹಿಂಸಾಕ್ಕೆ ಕಾರಣವಾಗುತ್ತದೆ. ಶೄ ಹಿಂಸಾಯಾಂ ಎಂಬುವ ಧಾತುವ್ಯಾಖ್ಯಾನದಿಂದ (ಹಿಂಸಾಕ್ಕೆ ಕಾರಣವಾಗಿರುವುದರಿಂದ (ಶರ್) ಪರ ನಿಂದ (ಈರ) ಪ್ರೇರೇಪಿಸಲ್ಪಡುವುದರಿಂದ ಈ ಕ್ಷೇತ್ರವು ಶರೀರವೆನಿಸುತ್ತದೆ. ಕ್ಷೀಯತೇ ಅತ್ರ—ಅವ್ಯ ಕ್ತಾದಿ ಶರೀರದಲ್ಲಿ ಪರಮಾತ್ಮನು ನಿಯಾಮಕನಾಗಿರುವುದರಿಂದ ಪರಮಾತ್ಮನಿಗೆ ಶರೀರಸ್ಥಾನೀಯವಾದ ಅವ್ಯಕ್ತಾದಿಯು ಕ್ಷೇತ್ರವೆನಿಸುತ್ತದೆ. (೩) ಇಚ್ಛೆಯು, ದ್ವೇಷವು, ಸುಖವು, ದುಃಖವು, ದೇಹವು, ಮನಸ್ಸಿನ ವ್ಯಾಪ್ತಿಯು, ಇವುಗಳೆಲ್ಲವೂ ಕ್ಷೇತ್ರವಿಕಾರಗಳು. ಅಚಿದ್ರೂಪಗಳಾದ ಇಚ್ಛಾದಿಗಳು ಕ್ಷೇತ್ರ ವಿಕಾರಗಳೆಂದು ತಿಳಿಯಬೇಕು (ಇದರಿಂದ ಇಚ್ಛಾ ದ್ವೇಷ ಇತ್ಯಾದಿ ಏಳನೇ ಶ್ಲೋಕದ ಅರ್ಥವು ಉಕ್ತ ವಾಯಿತು.) ಅವುಗಳು ಚಿದ್ರೂಪಗಳಾದ ಇಚ್ಛಾದಿಗಳಿಂದ ಮಿಶ್ರಿತಗಳಾಗಿವೆ. (೪) (ಇವುಗಳೆಲ್ಲವೂ ಸದಾ ಮಿಶ್ರಗಳಾಗಿಯೇ ಇರುತ್ತವೋ ಎಂದರೆ ಸಂಸಾರದಲ್ಲಿರುವಾಗಲೇ, ಸರ್ವದಾ ಮಿಶ್ರಿತಗಳಲ್ಲ, ಎನ್ನು ತ್ತಾರೆ—) ಪ್ರಕೃತಿ ವಿಕಾರಭೂತ ಇಚ್ಛಾದಿಗಳಿಂದ ಬಿಡಲ್ಪಟ್ಟವನು, ಚಿನ್ಮಾತ್ರಗಳಾದ ಇಚ್ಛಾ ದ್ವೇಷಾದಿ ಗಳಿಂದ ಕೂಡಿದ ಜೀವನು ಮುಕ್ತನೆನಿಸುತ್ತಾನೆ (ಮುಕ್ತಿಯಲ್ಲಿ ದ್ವೇಷ ದುಃಖಾದಿಗಳು ಇಲ್ಲದಿರುವುದ ರಿಂದ ಚಿನ್ಮಾತ್ರ ಇಚ್ಛಾ ದ್ವೇಷಾದಿಗಳಿಂದ ಕೂಡಿದವನು ಮುಕ್ತನೆಂದು ಹೇಳುವುದು ಹೇಗೆ ಎಂದರೆ—) ಮುಕ್ತಿಯು ಆಸುರೀ ದೈವೀ ಎಂದು ಎರಡು ವಿಧವು (೫) ಚಿನ್ಮಾತ್ರಗಳಾದ ದ್ವೇಷ ದುಃಖಗಳೂ ಮಿಥ್ಯಾಜ್ಞಾನರೂಪವಾದ ದೇಹವೂ, ನಿಷಿದ್ಧ ಪದಾರ್ಥಗಳಲ್ಲಿ ಇಚ್ಛೆಯೂ ಯಾವ ಮುಕ್ತಿಯಲ್ಲಿ ಇರು ತ್ತವೋ, ಅಂತಹುದು ನಿತ್ಯವಾದ ಅಸುರಮುಕ್ತಿಯು ಎನಿಸುತ್ತದೆ. (೬) ಚಿನ್ಮಾತ್ರರೂಪವಾದ ವಿಷ್ಣುವಿಷ ಯಕವಾದ ಸರ್ವೋತ್ತಮತ್ವಜ್ಞಾನಪೂರ್ವಕ ಸ್ನೇಹವು ಕೇವಲ ಜ್ಞಾನಾನಂದಾತ್ಮಕದೇಹವೂ, ಸುಖವೂ, ಪರಮಾತ್ಮನ ಇಚ್ಛೆಗೆ ಅನುಕೂಲವಾದುದು ಇಚ್ಛೆಯು, ಧೈರ್ಯವು, ಇವುಗಳು ಯಾವ ಮುಕ್ತಿಯಲ್ಲಿವೆಯೋ ಅಂತಹುದು ದೈವೀಮುಕ್ತಿಯೆನಿಸುತ್ತದೆ, ಎಂದು ನಾರಾಯಣಶ್ರುತಿಯು. ॥ ೧ ॥

ಟೀ—ಏತದ್ಯೋ ವೇತ್ತಿ ಎಂಬುವ ಎರಡನೇ ಶ್ಲೋಕವು ಜೀವವಿಷಯಕವೆಂಬುವ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ವಚನಾಂತರದಿಂದ ವ್ಯಾಖ್ಯಾನಮಾಡುತ್ತಾರೆ—

**ತಾ ॥ (೧) ಕ್ಷೇತ್ರಜ್ಞೋ ಭಗವಾನ್ವಿಷ್ಣುರ್ನ ಹ್ಯನ್ಯಃ ಕ್ಷೇತ್ರಮಂಜಸಾ । ನೇತ್ಯಸೌ ಭಗ-
ವಾನ್ ಜ್ಞೇಯೋ ವ್ಯಕ್ತಾವ್ಯಕ್ತವಿಲಕ್ಷಣಃ ॥ (೨) ಸ ತು ಜೀವೇಷು ಸರ್ವೇಷು
ಬಹಿಶ್ಚೈವ ವ್ಯವಸ್ಥಿತಃ । ವಿಲಕ್ಷಣಶ್ಚ ಜೀವೇಭ್ಯಃ ಸರ್ವೇಭ್ಯೋಽಪಿ ಸದೈವ ಚ ॥
(೩) ಸರ್ವತಃ ಪಾಣಿಪಾದಾದಿರ್ಯತಃ ಪಾಣ್ಯಾದಿರಕ್ತಿಮಾನ್ । ಲೋಕಾದಿಷ್ವಪಿ**

ಸರ್ವತ್ರ ಕೃಷ್ಣಕೇಶೋಽಪಿ ಯಾದವಃ ॥ (೪) ಅಣೋರಣುತರೈ ರೂಪೈಃ ಪಾಣಿ-
ಪಾದಾದಿಸಂಯುತೈಃ । ಸರ್ವತ್ರ ಸಂಸ್ಥಿತತ್ವಾದ್ವಾ ಸರ್ವತಃ ಪಾಣಿಪಾದವಾನ್ ।
ಸರ್ವೇಂದ್ರಿಯಾಣಾಂ ವಿಷಯಾನ್ವೇತ್ತಿ ॥ (೫) ಸೋಽಪ್ರಾಕೃತೇಂದ್ರಿಯಃ । ಯತೋ-
ಽತೋಽನಿಂದ್ರಿಯಃ ಪ್ರೋಕ್ತೋ ಯನ್ನ ಭಿನ್ನೇಂದ್ರಿಯೋಽಥ ವಾ ॥ (೬) ಗುಣೈ-
ಸ್ಸತ್ತ್ವಾದಿಭಿರ್ಹೀನಃ ಸರ್ವಕಲ್ಯಾಣಮೂರ್ತಿಮಾನ್ । ಅನ್ಯಥಾ ಭಾವರಾಹಿತ್ಯಾ-
ದಚರಶ್ಚರ ಏವ ಚ । ಚರಣಾತ್ಸರ್ವದೇಶೇಷು ॥ (೭) ವ್ಯಾಪ್ತೋಽಣುರ್ಮಧ್ಯಮ-
ಸ್ತಥಾ । ಸರ್ವಗತ್ವಾತ್ಸಮೀಪೇ ಚ ದೂರೇ ಚೈವಾಂತರೇ ಚ ಸಃ ॥ (೮) ಅನಂತಾ-
ವ್ಯಯಶಕ್ತಿತ್ವಾತ್ತದನ್ಯತ್ರ ವಿರೋಧಿನಃ । ಸಂತಿ ಸರ್ವೇ ಗುಣಾಸ್ತತ್ರ ನ ಚ ತತ್ರ ವಿ-
ರೋಧಿನ ಇತಿ ಚ ॥ ೨ ।

ಅ ॥ (೧) ಸರ್ವೋತ್ತಮನಾದ ಶ್ರೀವಿಷ್ಣುವು ಕ್ಷೇತ್ರಜ್ಞನೆನಿಸುತ್ತಾನೆ. (ಕ್ಷೇತ್ರವನ್ನು ತಿಳಿದವರೆಲ್ಲರೂ ಕ್ಷೇತ್ರಜ್ಞರಾಗುವ ಕಾರಣ ವಿಷ್ಣು ಎಂದು ಏಕೆ ಹೇಳಿದ್ದು ಎಂದರೆ—) ಬೇರೆ ಯಾರೊಬ್ಬರೂ ಚೆನ್ನಾಗಿ ಅವ್ಯಕ್ತಾದಿಗಳನ್ನು ತಿಳಿದವರಿಲ್ಲ. ಪರಮಾತ್ಮನೇ ಚೆನ್ನಾಗಿ ತಿಳಿದವನು (ಇದರಿಂದ ಸರ್ವೇಂದ್ರಿಯಗುಣಾಭಾಸಂ ಎಂಬುವ ೧೫ನೇ ಶ್ಲೋಕವು ವ್ಯಾಖ್ಯಾತವಾಯಿತು.) ಆದಕಾರಣ ಶ್ರೀಪರಮಾತ್ಮನು ವ್ಯಕ್ತ ಅವ್ಯಕ್ತಗಳಿಂದ ವಿಲಕ್ಷಣನು. ಎಂದು ತಿಳಿಯತಕ್ಕದ್ದು. (೨) (ಶ್ರೀಪರಮಾತ್ಮನು ಸರ್ವರ ಸಮೀಪದಲ್ಲಿಲ್ಲದಿರುವುದರಿಂದ ಪರಮಾತ್ಮನಿಗೆ ಸರ್ವಜ್ಞಾನವು ಹೇಗೆ ಎಂದರೆ—) ಶ್ರೀಪರಮಾತ್ಮನು ಸರ್ವ ಜೀವರೊಳಗೂ ಹೊರಗೂ ಇರುತ್ತಾನೆ. ಶ್ರೀಪರಮಾತ್ಮನು ಸಮಸ್ತ ಜೀವರಿಂದಲೂ ಸರ್ವದಾ ವಿಲಕ್ಷಣನೇ ಆಗಿರುತ್ತಾನೆ (೩) ಪರಮಾತ್ಮನು ಕೇಶ ಮೊದಲಾದ ಎಲ್ಲಾ ಅವಯವಗಳಲ್ಲಿಯೂ ಪಾಣಿ ಪಾದ ಮೊದಲಾದ ಎಲ್ಲಾ ಅವಯವಗಳ ಶಕ್ತಿಯುಳ್ಳವನು, ಆದುದರಿಂದ ಎಲ್ಲಾ ಅವಯವಗಳಲ್ಲಿಯೂ ಪಾಣಿ ಪಾದ ಮೊದಲಾದ ಅವಯವಗಳುಳ್ಳವನು (ಕೇಶಾದಿಗಳಲ್ಲಿ ಪಾಣ್ಯಾದಿಗಳ ಶಕ್ತಿಯು ಇದೆ, ಎಂಬುದು ಯುಕ್ತಿಯುಕ್ತವೆಂದರೆ—) ಯದುಕುಲೋತ್ಪನ್ನನಾದ ಶ್ರೀಕೃಷ್ಣನು ಶ್ರೀಮನ್ನಾರಾಯಣನ ಕೃಷ್ಣಕೇಶರೂಪನು. ಅಂತಹ ಶ್ರೀಪರಮಾತ್ಮನ ಕೃಷ್ಣಕೇಶಾವತಾರನಾದ ಶ್ರೀಕೃಷ್ಣನು ಪಾಣಿಪಾದ ಮೊದಲಾದ ಎಲ್ಲಾ ಅವಯವಗಳ ಕಾರ್ಯವನ್ನು ಮಾಡಿರುವುದರಿಂದ ಸರ್ವತ್ರ ಪಾಣಿಪಾದಾದಿಗಳ ಶಕ್ತಿಯುಳ್ಳವನೆಂದು ಹೇಳಿದ್ದು ಯುಕ್ತವು. (ಇದರಿಂದ ಸರ್ವತಃ ಎಂಬುವ ೧೪ನೇ ಶ್ಲೋಕವು ವ್ಯಾಖ್ಯಾತವಾಯಿತು) ಅಥವಾ (೪) ಪಾಣಿ ಪಾದಾದಿಗಳಿಂದ ಕೂಡಿರುವ ಅಣುರೂಪಗಳಿಂದಲೂ ಅತ್ಯಣುರೂಪಗಳಿಂದ ಎಲ್ಲಾ ಕಡೆಗಳಲ್ಲಿಯೂ ಇದ್ದ ಪ್ರಯುಕ್ತವಾಗಲೀ ಎಲ್ಲಾ ಕಡೆಗಳಲ್ಲಿಯೂ ಹಸ್ತ ಪಾದ ಮೊದಲಾದ ಎಲ್ಲಾ ಅವಯವಗಳುಳ್ಳವನು ಒಂದೊಂದು ಇಂದ್ರಿಯಗಳಿಂದಲೂ ಸಮಸ್ತ ಇಂದ್ರಿಯಗಳ ವಿಷಯವನ್ನು ತಿಳಿಯುತ್ತಾನೆ. (೫) (ಶ್ರೀಪರಮಾತ್ಮನಿಗೆ ಹಸ್ತ ಪಾದಾದಿಗಳು ಇದ್ದರೆ ವೇದಾದಿಗಳಲ್ಲಿ ಇಂದ್ರಿಯಗಳಿಲ್ಲವೆಂದು ಹೇಳಿದ್ದು ಹೇಗೆ ಎಂದರೆ—) ಅಂತಹ ಶ್ರೀಪರಮಾತ್ಮನು ಅಪ್ರಾಕೃತ ದಿವ್ಯ ವಿಗ್ರಹವುಳ್ಳವನು. ಶ್ರೀಪರಮಾತ್ಮನ ಅಪ್ರಾಕೃತ ಇಂದ್ರಿಯಗಳುಳ್ಳವನಾದರೂ ಪ್ರಾಕೃತ ಇಂದ್ರಿಯಗಳಿಲ್ಲದಿರುವುದರಿಂದಲೂ ಅಥವಾ ಭಿನ್ನ ಪ್ರಾಕೃತ ಇಂದ್ರಿಯಗಳು ಇಲ್ಲದಿರುವುದರಿಂದಲೂ ವೇದಾದಿಗಳಲ್ಲಿ ಅನಿಂದ್ರಿಯನೆಂದು ಹೇಳಿಸಿಕೊಳ್ಳುತ್ತಾನೆ. (೬) ಸತ್ವ ಮೊದಲಾದ ಗುಣಗಳಿಲ್ಲದವನೂ ಸಮಸ್ತ ಕಲ್ಯಾಣ ಶರೀರವುಳ್ಳವನೂ, ವ್ಯತ್ಯಾಸವಿಲ್ಲದಿರುವುದರಿಂದ ಅಚರಃ ಎನಿಸುತ್ತಾನೆ ಸಮಸ್ತ ದೇಶಗಳಲ್ಲಿ ಸಂಚರಿಸುವುದರಿಂದ ಚರಃ ಎನಿಸುತ್ತಾನೆ (ಇದರಿಂದ ಅಚರಂ ಚರಮೇವ ಚ ಎಂಬ ೧೬ನೇ ಶ್ಲೋಕವು ವ್ಯಾಖ್ಯಾತವಾಯಿತು) ವ್ಯಾಪ್ತನು, ಅಣುವಾಗಿಯೂ ಮಧ್ಯಮನು ಸರ್ವತ್ರ ಇದ್ದ ಪ್ರಯುಕ್ತ ಸಮೀಪದಲ್ಲಿಯೂ ದೂರದಲ್ಲಿಯೂ ಮಧ್ಯ

ಸ್ಥಿತನಾಗಿದ್ದಾನೆ. (ಇದರಿಂದ ಸರ್ವತಃಪಾಣಿಪಾದಂ ತತ್ ಎಂಬ ೧೪ನೇ ಶ್ಲೋಕವು ವ್ಯಾಖ್ಯಾತವಾಯಿತು) (೮) (ವ್ಯಾಪ್ತತ್ವ ಅಣುತ್ವಾದಿಗಳು ವಸ್ತ್ವಂತರದಲ್ಲಿ ಕೂಡಿ ಇಲ್ಲದಿರುವುದರಿಂದ ಪರಮಾತ್ಮನಲ್ಲಿ ಕೂಡಿ ಇರುವುದು ಹೇಗೆ? ಎಂದರೆ—) ಪರಮಾತ್ಮನಿಗೆ ಅಪರಿಮಿತ ನಾನಾವಿಧದ ಅನಂತಶಕ್ತಿಗಳು ಇರುವುದರಿಂದ ಬೇರೆ ಕಡೆ ಒಟ್ಟಿಗೆ ಇಲ್ಲದಿದ್ದವುಗಳೂ ಎಲ್ಲಾ ಗುಣಗಳೂ ಪರಮಾತ್ಮನಲ್ಲಿವೆ. ಆ ಪರಮಾತ್ಮನಲ್ಲಿ ವಿರುದ್ಧಗಳಾಗುವುದಿಲ್ಲ ॥ ೨ ॥

ಟೀ— ಕ್ಷೇತ್ರಜ್ಞ ಎಂಬುವ ನಾಮಧೇಯಕ್ಕೆ ಜೀವನಲ್ಲಿ ಪ್ರಸಿದ್ಧಿಯಿಲ್ಲದಿರುವುದರಿಂದ ಇಲ್ಲಿ ಜೀವನು ಹೇಳಿಸಿಕೊಳ್ಳಲ್ಪಡುವುದಿಲ್ಲವೆನ್ನುತ್ತಾರೆ—

**ಟಾ ॥ (೧) ನ ಜೀವಸ್ಯ ಕ್ಷೇತ್ರಜ್ಞನಾಮ । ಕ್ಷೇತ್ರಜ್ಞ ಏತಾ ಮನಸೋ ವಿಭೂತೀರ್ಜೀವಸ್ಯ ಮಾಯಾರಚಿತಾ ಅನಿತ್ಯಾಃ । ಆವಿರ್ಹಿತಾಶ್ಚಾಪಿ ತಿರೋಹಿತಾಶ್ಚ ಶುದ್ಧೋ ವಿಚಷ್ಟೇ ಹ್ಯವಿಶುದ್ಧಕರ್ತುರಿತಿ (ಹಿ) ಭಾಗವತೇ ॥ (೨) ಅತ ಏತದ್ಯೋ ವೇತ್ತೀತ್ಯುಕ್ತೇ ಜೀವಸ್ಯಾಪಿ ಕಿಂಚಿಜ್ಜ್ಞಾನಾತ್ತತ್ಪ್ರಾಪ್ತೇಸ್ತನ್ನಿರಾಕರ(ವಾರ)ಣಾರ್ಥಂ ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧೀತ್ಯಾಹ ॥ (೩) ಅನ್ಯಥೈತದ್ಯೋ ವೇತ್ತೀತ್ಯುಕ್ತೇನೈವ ಸಿದ್ಧತ್ವಾತ್ಕ್ಷೇತ್ರಜ್ಞಂ ಚಾಪಿ ಮಾಮಿತಿ ವ್ಯರ್ಥಂ ॥ (೪) ಭೇದಪಕ್ಷೇ ತು ನಾಮನಿರುಕ್ತ್ಯರ್ಥಮೇತದ್ಯೋ ವೇತ್ತೀತಿ ॥ (೫) ಸರ್ವಾಭೇದಮಪಿ ಕೇಚಿದ್ವದಂತೀತಿ ಕ್ಷೇತ್ರಂ ಚ ಜ್ಞಶ್ಚೇತಿ ವ್ಯುತ್ಪತ್ತಿಂ ನಿವಾರಯತಿ ॥ (೬) ಕ್ಷೇತ್ರಜ್ಞಂ ಮಾಂ ಸರ್ವಕ್ಷೇತ್ರೇಷು ಸ್ಥಿತತ್ವೇನ ವಿದ್ಧೀತ್ಯರ್ಥಃ ॥ ೩ ॥**

ಅ ॥ (೧) ಜೀವನಿಗೆ ಕ್ಷೇತ್ರಜ್ಞ ಎಂಬುವ ನಾಮಧೇಯವೇ ಇಲ್ಲ. (ಕ್ವಚಿತ್ ಇದ್ದರೂ ಅದು ಅಮುಖ್ಯ.) (ಶ್ರೀವಿಷ್ಣುವಿನಲ್ಲಿ ಕ್ಷೇತ್ರಜ್ಞ ಎಂಬುವ ನಾಮಧೇಯದ ಪ್ರಸಿದ್ಧಿ ಎಂಬುವಲ್ಲಿ ಭಾಗವತ ಸಮ್ಮತಿಯನ್ನು ಹೇಳುತ್ತಾರೆ—) ಪಾರತಂತ್ರ್ಯ ಮೊದಲಾದ ದೋಷಗಳಿಲ್ಲದಿರುವ ಶ್ರೀವಿಷ್ಣುವು ಅಸ್ವತಂತ್ರಕರ್ತನಾದ ಅಥವಾ ಭ್ರಾಂತಿಯಿಂದ ಕರ್ತನೆಂದು ಅಭಿಮಾನವುಳ್ಳ, ಜೀವನ, ನಿಮಿತ್ತಭೂತ ಈಶ್ವರೇಚ್ಛೆಯಿಂದ ನಿರ್ಮಿಸಲ್ಪಟ್ಟ, ಮತ್ತು ಜಾಗ್ರದವಸ್ಥೆಯಲ್ಲಿ ಆವಿರ್ಭೂತಗಳೂ, ಸ್ವಪ್ನ ಸುಷುಪ್ತ್ಯವಸ್ಥೆಗಳಲ್ಲಿ ತಿರೋಹಿತಗಳೂ ಆದ ಜೀವನ ಮನೋವಿಕಾರಗಳಿಂದ ಬಾಹ್ಯವಿಷಯಾನುಭವ ಸುಖಾದಿಗಳನ್ನು ನೋಡುತ್ತಾನೆ, ಎಂದು ಭಾಗವತದಲ್ಲಿ ಹೇಳಿದೆ. (೨) (ಕಾರಣಾಂತರದಿಂದಲೂ **ಏತದ್ಯೋ ವೇತ್ತಿ** ಎಂಬುವುದು ಜೀವನನ್ನು ಹೇಳತಕ್ಕದ್ದಲ್ಲವೆನ್ನುತ್ತಾರೆ—) ಜೀವನು ಇಲ್ಲಿ ವಿವಕ್ಷಿತನಾಗದಿದ್ದ ಪಕ್ಷದಲ್ಲಿಯೂ **ಏತದ್ಯೋ ವೇತ್ತಿ** ಎಂಬುವಲ್ಲಿ ಶ್ರೀಪರಮಾತ್ಮನು ಹೇಳಿಸಿಕೊಳ್ಳಲ್ಪಡುತ್ತಾನೆ ಎಂಬುವ ಅಭಿಪ್ರಾಯದಿಂದ ಸಾಮಾನ್ಯವಾಗಿ ಕ್ಷೇತ್ರಜ್ಞಶಬ್ದವನ್ನು ಹೇಳಿದುದರಿಂದ ಜೀವನಿಗೂ ಸ್ವಲ್ಪ ಕ್ಷೇತ್ರಜ್ಞತ್ವವು ಇದೆ. ಆದುದರಿಂದ ಜೀವನೂ ಕ್ಷೇತ್ರಜ್ಞನೆಂದು ಆಗಬೇಕಾಗಿ ಪ್ರಸಕ್ತಿಯಿದ್ದುದರಿಂದ ಜೀವನಿಗೆ ಕ್ಷೇತ್ರಜ್ಞತ್ವವು ಬಾರದೆಂಬುವುದಕ್ಕಾಗಿ **ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ** ಎಂದು ಹೇಳಿರುತ್ತಾರೆ (೩) ಹೀಗೆ ಅಭಿಪ್ರಾಯವಿಲ್ಲದಿದ್ದರೆ ಈಶನಿಗೆ **ಏತದ್ಯೋ ವೇತ್ತಿ** ಎಂಬುವುದರಿಂದಲೇ ಕ್ಷೇತ್ರಜ್ಞತ್ವವು ಸಿದ್ಧವಾದದರಿಂದ **ಕ್ಷೇತ್ರಜ್ಞಂ ಮಾಂ** ಎಂದು ಮರಳಿ ಹೇಳಿದ್ದು ವ್ಯರ್ಥವಾಗುವುದು. (೪) (ಜೀವನೂ ಕ್ಷೇತ್ರಜ್ಞನೂ ಬೇರೆ ಬೇರೆ ಎಂದು ಒಪ್ಪಿದರೆ **ಕ್ಷೇತ್ರಜ್ಞಂ ಚಾಪಿ** ಎನ್ನುವುದರಿಂದಲೇ ಈಶನಿಗೂ ಕ್ಷೇತ್ರಜ್ಞನೆಂದೂ ಸಿದ್ಧವಾದುದರಿಂದ **ಏತದ್ಯೋ ವೇತ್ತಿ** ಎಂಬುವುದು ವ್ಯರ್ಥವಾಗುವುದು, ಎಂದರೆ) ಜೀವನು ಕ್ಷೇತ್ರಜ್ಞನೆಂದು ಹೇಳುವುದಕ್ಕೆ ಜೀವನಿಗೆ ಶ್ರೀಪರಮಾತ್ಮನಿಂದ ಐಕ್ಯವು ಹೇಳಲ್ಪಡುತ್ತದೆ, ಇತ್ಯಾದಿ ಪರಿಹಾರವು.

ಹೇಳುವ ಅರ್ಥವನ್ನು ಅಂಗೀಕರಿಸದೆ ಶ್ರೀಹರಿಯೇ ಕ್ಷೇತ್ರಜ್ಞನೆಂದು ಒಡಂಬಟ್ಟರೂ ಏತದ್ಯೋ ವೇತ್ತಿ ಎಂಬುವುದರಿಂದ ಕ್ಷೇತ್ರಜ್ಞ ಎಂಬುವ ನಾಮವನ್ನು ಶ್ರೀಪರಮಾತ್ಮನಲ್ಲಿ ನಿರ್ವಚನ ಮಾಡುವುದಕ್ಕಾಗಿ ಏತದ್ಯೋ ವೇತ್ತಿ ಎಂಬುವುದು ಸಾರ್ಥಕವೇ ಆಗುತ್ತದೆ. (೫) (ಕ್ಷೇತ್ರಂ ಜಾನಾತೀತಿ ಕ್ಷೇತ್ರಜ್ಞಃ ಎಂದು ಕ್ಷೇತ್ರಜ್ಞ ಎಂಬುವ ನಾಮನಿರ್ವಚನವು ಪ್ರಸಿದ್ಧವಾಗಿರುವುದರಿಂದ ಕ್ಷೇತ್ರಜ್ಞಂ ಚಾಪಿ ಮಾಂ ಎಂದಿಷ್ಟೇ ಸಾಕು. ನಿರ್ವಚನವು ಏತಕ್ಕೆಂದರೆ—) ಕ್ಷೇತ್ರಜ್ಞಂ ಚಾಪಿ ಮಾಂ ಎಂದಿಷ್ಟೇ ಹೇಳಿದರೆ–ಕೆಲವರು ಕ್ಷೇತ್ರಂ ಚ ಜ್ಞಾತೃ ಎಂದು ಬೇರೆ ವ್ಯುತ್ಪತ್ತಿಯನ್ನು ಇಟ್ಟುಕೊಂಡು ಜೀವ ಜಡಾತ್ಮಕ ಸಮಸ್ತ ಪ್ರಪಂಚದಿಂದಲೂ ಶ್ರೀಪರಮಾತ್ಮನಿಗೆ ಅಭೇದವನ್ನು ಹೇಳುವರು. ಅದನ್ನು ನಿರಾಕರಿಸುವುದಕ್ಕಾಗಿ ಕ್ಷೇತ್ರಂ ಜಾನಾತೀತಿ ಕ್ಷೇತ್ರಜ್ಞಃ ಎಂದು ಗೀತೆಯಲ್ಲಿ ಪ್ರಸಿದ್ಧವಾದ ವ್ಯುತ್ಪತ್ತಿಯನ್ನೇ ಹೇಳಿದೆ. (೬) (ಕ್ಷೇತ್ರಜ್ಞಂ ಚಾಪಿ ಎಂಬುವ ವಾಕ್ಯಕ್ಕೆ ಸರಿಯಾದ ಯೋಜನೆಯನ್ನು ತೋರಿಸುತ್ತಾರೆ—) ಕ್ಷೇತ್ರಜ್ಞನಾದ ನನ್ನನ್ನೇ ಪ್ರಕೃತಿ ಮೊದಲಾದ ಸಮಸ್ತ ಕ್ಷೇತ್ರಗಳಲ್ಲಿಯೂ ನಿಯಾಮಕನಾಗಿ ಇರುವವನಾಗಿ ತಿಳಿದುಕೊ. ಎಂದರ್ಥವು. (ಅಂದರೆ ಪ್ರಕೃತ್ಯಾದಿಗಳು ಪರಮಾತ್ಮನ ಆವಾಸಸ್ಥಾನಗಳಾಗಿರುವುದರಿಂದಲೂ ಶ್ರೀಪರಮಾತ್ಮನ ಅಧೀನಗಳಾಗಿರುವುದರಿಂದ ಶರೀರಸ್ಥಾನೀಯಗಳಾಗಿರುವುದರಿಂದಲೂ ಕ್ಷೇತ್ರವೆಂದು ಅನ್ನಿಸಿಕೊಳ್ಳುತ್ತವೆ.) ॥ ೨ ॥

ಟೀ—ಏತದ್ಯೋ ವೇತ್ತಿ ಎಂದು ಜೀವನಿಗೆ ಕ್ಷೇತ್ರಜ್ಞತ್ವವನ್ನು ಹೇಳಿ ಕ್ಷೇತ್ರಜ್ಞಂ ಚಾಪಿ ಮಾಂ ಎನ್ನುವುದರಿಂದ ಶ್ರೀಪರಮಾತ್ಮನಿಗೂ ಕ್ಷೇತ್ರಜ್ಞತ್ವವು ಹೇಳಲ್ಪಡುವ ಕಾರಣ ವೈಯರ್ಥ್ಯವಿಲ್ಲವೆಂದು ಪರರು ಹೇಳುವುದು ಅಯುಕ್ತವೆನ್ನುತ್ತಾರೆ—

**ತಾ ॥ (೧) ತತ್ಪಕ್ಷೇ ತು ಯೋ ವೇತ್ತೀತ್ಯುಕ್ತ ಈಶ್ವರಸ್ಯಾಪಿ ಕ್ಷೇತ್ರಜ್ಞತ್ವಂ ಸಿದ್ಧಮೇವ ॥(೨) ಸರ್ವಾಭೇದವಿವಕ್ಷಾಯಾಂ ಚ ಸರ್ವಂ ಕ್ಷೇತ್ರಮಿತಿ ವಕ್ತವ್ಯಂ ಕ್ಷೇತ್ರೇಷ್ವಿತಿ ವ್ಯರ್ಥಂ ॥ (೩) ನ ಚ ತತ್ಪಕ್ಷೇ ಮಾಮಿತ್ಯಸ್ಯ ಕಶ್ಚಿದ್ವಿಶೇಷಃ ॥ (೪) ಕಿಂ ತ್ವೇಕ ಏವ ಕ್ಷೇತ್ರ ಇತಿ ವಕ್ತವ್ಯಂ ॥ ೪ ॥** ॥ ೧,೨,೩ ॥

ಅ ॥ (೧) ಏತದ್ಯೋ ವೇತ್ತಿ ಎಂಬುದು ಜೀವವಿಷಯಕವೆಂದು ಹೇಳುವುದಾದರೆ ಕ್ಷೇತ್ರಂ ಜಾನಾತೀತಿ ಕ್ಷೇತ್ರಜ್ಞಃ. ಎಂಬುವ ವ್ಯುತ್ಪತ್ತಿಯು ಜೀವನಲ್ಲಿದ್ದಂತೆ ಶ್ರೀಹರಿಯಲ್ಲಿಯೂ ಇದ್ದ ಪ್ರಯುಕ್ತ ಏತದ್ಯೋ ವೇತ್ತಿ ಎಂಬುದರಿಂದಲೇ ಶ್ರೀಪರಮಾತ್ಮನಿಗೂ ಕ್ಷೇತ್ರಜ್ಞತ್ವವು ಸಿದ್ಧವೇ ಆಗುತ್ತದೆ. ಆದಕಾರಣ ಕ್ಷೇತ್ರಜ್ಞಂ ಚಾಪಿ ಮಾಂ ಎಂಬುವ ವಾಕ್ಯವು ವ್ಯರ್ಥವೇ ಆಗುವುದು. (೨) (ಕ್ಷೇತ್ರಜ್ಞನೆಂದು ಹೇಳಿದ ಜೀವನಿಗೂ ಪ್ರಕೃತಿ ಮೊದಲಾದ ಕ್ಷೇತ್ರಕ್ಕೂ ಶ್ರೀಪರಮಾತ್ಮನಿಂದ ಅಭೇದವನ್ನು ಹೇಳುವುದಕ್ಕಾಗಿ ಕ್ಷೇತ್ರಜ್ಞಂ ಚಾಪಿ ಮಾಂ ಎಂಬುದು ಸಾರ್ಥಕವು. ಎಂದು ಪರರು ಹೇಳಿದ್ದೂ ಅಯುಕ್ತವೆನ್ನುತ್ತಾರೆ—) ಕ್ಷೇತ್ರಜ್ಞಂ ಚಾಪಿ ಮಾಂ ಎಂಬುವಲ್ಲಿ ಕ್ಷೇತ್ರ ಕ್ಷೇತ್ರಜ್ಞ ಎಲ್ಲದಕ್ಕೂ ಅಭೇದವು ಎಂದು ಹೇಳುವುದಾದರೆ—ಸರ್ವಕ್ಷೇತ್ರಂ, ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ, ಎಂದು ಹೇಳಬೇಕಿತ್ತು. ಸರ್ವಕ್ಷೇತ್ರೇಷು ಎಂದು ಸಪ್ತಮೀ ಪ್ರಯೋಗವು ಕೂಡದೆಹೋಗುವುದು. (೩) (ಹಾಗಾದರೆ ಕ್ಷೇತ್ರಜ್ಞನಿಗೇನೇ ಶ್ರೀಪರಮಾತ್ಮನಿಂದ ಅಭೇದವು ಹೇಳಲ್ಪಡಲಿ ಹಾಗೆ ಹೇಳಿದರೆ ಬಾಧಕವಿಲ್ಲವೆಂದರೆ—) ಕ್ಷೇತ್ರಜ್ಞನೆಂದು ಹೇಳಿದ ಜೀವನಿಗೂ ಶ್ರೀಪರಮಾತ್ಮನಿಗೂ ಐಕ್ಯವು ವಿವಕ್ಷಿತವಾಗಿದ್ದರೆ ಕ್ಷೇತ್ರಜ್ಞಃ ಅಹಮೇಕ ಏವ ಎಂದು ಹೇಳಬೇಕಿತ್ತು ಕ್ಷೇತ್ರಜ್ಞನು ಶ್ರೀಪರಮಾತ್ಮನು ಎಂದು ಹೇಳುವುದು ಕೂಡದೆ ಹೋಗುವುದು ಜೀವನನ್ನು ಇಟ್ಟುಕೊಂಡು ಮಾಂ ವಿದ್ಧಿ ಎಂದು ವಿಧಾನಮಾಡಲಿಕ್ಕೆ ಅವರ ಮತದ ಜೀವನಂತೆ ಶ್ರೀಪರಮಾತ್ಮನೂ ಕಲ್ಪಿತನಾದ ಪ್ರಯುಕ್ತ ವಿಶೇಷವಿಲ್ಲ.

ಶೀ—ಕ್ಷೇತ್ರಾದಿಗಳ ಸ್ವರೂಪವನ್ನು ಹೇಳುತ್ತೇನೆನ್ನುತ್ತಾರೆ—

**ಗೀ॥ ತತ್ಕ್ಷೇತ್ರಂ ಯಚ್ಚ ಯಾದೃಕ್ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥ ೪ ॥**

ಅ॥ ತತ್ ಕ್ಷೇತ್ರಂ = ಪರಮಾತ್ಮನಿಗೆ ಆವಾಸಸ್ಥಾನವೆಂದು ಹೇಳಿದ ಕ್ಷೇತ್ರವು. (ಅಂದರೆ ಜೀವ ನ ದೇಹದ್ವಾರಾ ಹಿಂಸಾಕ್ಕೆ ಕಾರಣವಾಗಿರುವುದರಿಂದಲೂ (ಜೀವರ ದೇಹಕ್ಕೆ ನಾಶವಿರುವುದು. ಜೀವ ನ ನಾಶವಿಲ್ಲ.) ಪರಮಾತ್ಮನಿಂದ ಪ್ರೇರೇಪಿಸಲ್ಪಡುವುದರಿಂದಲೂ ಶರೀರ ಎನಿಸಿಕೊಂಡ ಅವ್ಯಕ್ತ ಮೊದಲಾದುದು.) (1) ಯಚ್ಚ = ಯಾವುದು? ಅದರ ಸ್ವರೂಪವು ಯಾವುದು? (2) ಯಾದೃಕ್ಚ = ಯಾವ ಧರ್ಮವುಳ್ಳದ್ದು? (3) ಯದ್ವಿಕಾರಿ = ಎಂತಹ ವಿಕಾರದಿಂದ ಕೂಡಿದ್ದು (ಯಾವುದಕ್ಕೆ ಉಪಾದಾನಕಾರಣ ವಾಗುವುದು?) (4) ಯತಃ = ಪ್ರವೃತ್ತಿಗೆ ಅನುಕೂಲವಾದ ಎಂತಹ ಧರ್ಮವಿರುವ ಪುರುಷನಿಂದ. ಯತ್ = ವರ್ತಿಸುತ್ತದೆ. (5) ಸ ಚ = ಪ್ರವರ್ತಕನಾದ ಪುರುಷನು. ಯಃ = ಎಂತಹ ಸ್ವರೂಪವುಳ್ಳವನು? (6) ಯತ್ಪ್ರಭಾವಶ್ಚ = ಎಂತಹ ವಿಶೇಷ ಸಾಮರ್ಥ್ಯವುಳ್ಳವನೋ. ತತ್ = ಅಂತಹುದೆಲ್ಲವನ್ನು. ಸಮಾಸೇನ = ಸಂಕ್ಷೇಪದಿಂದ. ಮೇ = ನನ್ನಿಂದ, ಶೃಣು = ಕೇಳು ಆಸಕ್ತಿಯನ್ನು ಮಾಡು. ॥ ೪ ॥

ಟೀ — ಯದ್ವಿಕಾರಿ ಎಂಬುವುದಕ್ಕೆ ಯಃ ವಿಕಾರಃ ಯಸ್ಯ ಎಂದು ಪರರು ವ್ಯಾಖ್ಯಾನ ಮಾಡಿದರೆ ಇನ್ ಪ್ರತ್ಯಯವು ವ್ಯರ್ಥವಾಗುವುದರಿಂದ ಇನ್ ಪ್ರತ್ಯಯಕ್ಕೆ ವೈಯರ್ಥ್ಯವು ಬಾರದಂತೆ ಅರ್ಥವನ್ನು ಹೇಳುತ್ತಾರೆ—

**ಭಾ॥ (೧) ಯದ್ವಿಕಾರಿ ಯೇನ ವಿಕಾರೇಣ ಯುಕ್ತಂ । ಯತಶ್ಚ ಯತ್ ಯತಃ ಯಾತಿ ಪ್ರವರ್ತತೇ । ಸ ಚ ಪ್ರವರ್ತಕಃ ॥ (೨) ಯತಶ್ಚ ಯದಿತ್ಯಸ್ಮಾತ್ಪ್ರವರ್ತತೇ । ಕ್ಷೇತ್ರಮಿತಿ ವಚನಂ ॥ (೩) ಸ ಚ ಯ ಇತಿ ಸ್ವರೂಪಮಾತ್ರಂ ॥ ೪ ॥**

ಅ॥ (೧) ಯದ್ವಿಕಾರಿ = ಯಾವ ವಿಕಾರದಿಂದ ಕೂಡಿಕೊಂಡಿದೆಯೋ. (ಇದರಿಂದ ಯಸ್ಯಾಸ್ತಿ ವಿಕಾರಶ್ಚ ಯದ್ವಿಕಾರಃ । ಯದ್ವಿಕಾರಃ ಅಸ್ಯಾಸ್ತೀತಿ ಯದ್ವಿಕಾರಿ, ಎಂದು ವಿಗ್ರಹವು ತೋರಿಸಲ್ಪಟ್ಟಿತು.) (೨) (ಯತಶ್ಚ ಯತ್ ಎಂಬುವುದಕ್ಕೆ ಯಾರಿಂದ ಯಾವ ಕಾರ್ಯವು ಹುಟ್ಟುತ್ತದೋ, ಎಂಬುವ ವ್ಯಾಖ್ಯಾನವು ಅಯುಕ್ತವೆಂಬೀ ಅರ್ಥವು ಯದ್ವಿಕಾರಿ ಎಂಬುವುದರಿಂದಲೇ ಸಿಗುತ್ತದೆ. ಆದ ಕಾರಣ ಬೇರೆ ರೀತಿಯಾಗಿ ಅರ್ಥವನ್ನು ಹೇಳುತ್ತಾರೆ—) ಯಾರ ಪ್ರೇರಣೆಯಿಂದ ಹೋಗುತ್ತದೋ, ಮತ್ತು ಕಾರ್ಯದಲ್ಲಿ ಪ್ರವರ್ತಿಸುತ್ತದೋ, ಅವನೇ ಪ್ರವರ್ತಕನು (ಜೀವನು ಪ್ರಸ್ತುತನಾಗದಿರುವುದ ರಿಂದ ಸ ಚ ಯಃ ಎಂಬುದು ಜೀವನನ್ನು ಹೇಳುತ್ತದೆಂದು ಪರರು ಹೇಳುವುದು ಅಯುಕ್ತವು) ಯತಶ್ಚ ಯತ್ ಎಂಬುವ ವಚನವು ಇಂತಹ ಧರ್ಮಗಳಿರುವ ಶ್ರೀಪರಮಾತ್ಮನಿಂದಲೇ ಅವ್ಯಕ್ತಾದಿಗಳು ಪ್ರವರ್ತಿಸುತ್ತವೆ. ಎಂದು ಹೇಳುವುದಕ್ಕೆ ಪ್ರತಿಜ್ಞಾರೂಪವು. ಸ ಚ ಯಃ ಎಂಬುವ ವಚನವು ಪ್ರವರ್ತಕನ ಸ್ವರೂಪಮಾತ್ರವನ್ನು ಹೇಳಲಿಕ್ಕೆ ಪ್ರತಿಜ್ಞಾರೂಪವು. ಹೀಗೆ ಭೇದವು. ॥ ೪ ॥

ಟೀ — ಕೇಳುವವರಿಗೆ ವಿಶ್ವಾಸವು ಹುಟ್ಟುವುದಕ್ಕಾಗಿ ಹೇಳುವುದೆಲ್ಲವು ಪ್ರಾಮಾಣಿಕವೆನ್ನುತ್ತಾರೆ

**ಗೀ॥ ಋಷಿಭಿರ್ಬಹುಧಾ ಗೀತಂ ಛಂದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೫ ॥**

ಅ॥ (ಕ್ಷೇತ್ರಾದಿಗಳ ಸ್ವರೂಪವು) ಋಷಿಭಿಃ=ಋಷಿಗಳಿಂದ, ಬಹುಧಾ=ಬಹುಪ್ರಕಾರ, ಗೀತಂ= (ಮನು ಯಾಜ್ಞವಲ್ಕ್ಯ ಮೊದಲಾದ ಸ್ಮೃತಿಗಳಲ್ಲಿ) ಹೇಳಲ್ಪಟ್ಟಿದೆ. ವಿವಿಧೈಃ=ಬಹುವಿಧಗಳಾದ ಛಂದೋಭಿಃ=ವೇದಗಳಿಂದ, ಪೃಥಕ್=ಪ್ರತ್ಯೇಕವಾಗಿ, ಗೀತಂ=ಹೇಳಲ್ಪಟ್ಟಿದೆ. ಹೇತುಮದ್ಭಿಃ=ಯುಕ್ತಿಗಳಿಂದ ಕೂಡಿರುವ, ಬ್ರಹ್ಮಸೂತ್ರಪದೈಶ್ಚ=ಬ್ರಹ್ಮಸೂತ್ರಪದಗಳಿಂದಲೂ, ವಿನಿಶ್ಚಿತಮೇವ=ನಿಶ್ಚಯಿಸಲ್ಪಟ್ಟದ್ದನ್ನೇ, ಶೃಣು=ಕೇಳಿ ಆಸಕ್ತಿಯನ್ನು ಮಾಡು. ೫

ಟೀ—ಕ್ಷೇತ್ರಂ ಯಚ್ಚ, ಯಾದೃಕ್ಚ ತತ್ ಶೃಣು ಎಂದು ಪ್ರತಿಜ್ಞಾಮಾಡಿದ್ದನ್ನು ಹೇಳುತ್ತಾರೆ—

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂ ಚ ಪಂಚ ಚೇಂದ್ರಿಯಗೋಚರಾಃ ॥ ೬ ॥**

ಅ॥ ಮಹಾಭೂತಾನಿ=ಪೃಥಿವೀ, ಜಲ, ತೇಜಸ್ಸು, ವಾಯು, ಆಕಾಶ, ಎಂಬುವ ಪಂಚ ಮಹಾಭೂತಗಳೂ, ಅಹಂಕಾರಃ=(ಮಹತ್ತತ್ವವೂ) ಅಹಂಕಾರತತ್ತ್ವವೂ, ಬುದ್ಧಿಃ=ಅಂತಃಕರಣದ ವ್ಯಾಪಾರವಿಶೇಷವೂ ಅವ್ಯಕ್ತಮೇವ=ಸತ್ವರಜಸ್ತಮೋಗುಣಾತ್ಮಕವಾದ ಪ್ರಧಾನವೂ, ಇಂದ್ರಿಯಾಣಿ ದಶೈಕಂ ಚ=ಚಕ್ಷುಃ ಶ್ರೋತ್ರ, ಘ್ರಾಣ, ರಸನ, ತ್ವಕ್, ಎಂಬೀ ಜ್ಞಾನೇಂದ್ರಿಯಗಳು, ವಾಕ್, ಪಾಣಿ ಪಾದ, ಪಾಯು, ಉಪಸ್ಥ ಎಂಬುವ ಕರ್ಮೇಂದ್ರಿಯಗಳು. ಮನಸ್ಸು, ಹೀಗೆ ೧೧ ಇಂದ್ರಿಯಗಳು, ಇಂದ್ರಿಯಗೋಚರಾಃ=ಶ್ರೋತ್ರ ಮೊದಲಾದ ಇಂದ್ರಿಯಗಳಿಗೆ ಗೋಚರಗಳಾದ, ಪಂಚ ಚ=ಶಬ್ದ, ಸ್ಪರ್ಶ, ರೂಪ ರಸ, ಗಂಧ, ಎಂಬೀ ಐದು ವಿಷಯಗಳೂ, (ಹೀಗೆ ಕ್ಷೇತ್ರವು. ಸಂಕ್ಷೇಪವಾಗಿ ಮಹಾಭೂತಾದಿ ಪ್ರಕಾರಗಳಿಂದ ಯುಕ್ತವಾದುದೆಂದು ಹೇಳಲ್ಪಟ್ಟಿತು.) ೬

ಟೀ—ಪರಬ್ರಹ್ಮವನ್ನು ಸೂಚಿಸುವ ವಾಕ್ಯಗಳು ಬ್ರಹ್ಮಸೂತ್ರಗಳು, ಎಂದು ಹೇಳಿದರೆ ಪರಬ್ರಹ್ಮಸೂಚಕತ್ವವು ವೇದಗಳಿಗೂ ಋಷಿವಾಕ್ಯಗಳಿಗೂ ಇರುವುದರಿಂದ ಋಷಿಭಿಃ ಇತ್ಯಾದಿಗಳು ವ್ಯರ್ಥವಾಗುವುವೆಂಬುವ ಅಭಿಪ್ರಾಯದಿಂದ ಗೂಢಾರ್ಥವನ್ನು ಹೇಳುತ್ತಾರೆ—

**ಭಾ॥ ಬ್ರಹ್ಮಸೂತ್ರಾಣಿ ಶಾರೀರಕಸೂತ್ರಾಣಿ ॥ ೫,೬ ॥**

ಅ॥ ಬ್ರಹ್ಮಸೂತ್ರಾಣಿ=ವೇದವ್ಯಾಸರಿಂದ ನಿರ್ಮಿಸಲ್ಪಟ್ಟ ವೇದಾರ್ಥನಿರ್ಣಾಯಕಗಳಾದ ಶಾರೀರಕಗಳಲ್ಲಿ ನಿಯಾಮಕ ಪರಬ್ರಹ್ಮ ಪ್ರತಿಪಾದಕಗಳಾದ ಮೀಮಾಂಸಾ ಸೂತ್ರಗಳು. ೫,೬

ಟೀ—ಕ್ಷೇತ್ರಂ ಯದ್ವಿಕಾರಿ ಎಂದು ಪ್ರತಿಜ್ಞೆ ಮಾಡಿದ ಕ್ಷೇತ್ರದ ವಿಕಾರಗಳನ್ನು ಹೇಳುತ್ತಾರೆ—

**ಗೀ॥ ಇಚ್ಛಾ ದ್ವೇಷಃ ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಂ ॥ ೭ ॥**

ಅ॥ ಇಚ್ಛಾ=ಇಚ್ಛೆಯೂ, ದ್ವೇಷಃ=ದ್ವೇಷವೂ, ಸುಖಂ=ಸುಖವೂ, ದುಃಖಂ=ದುಃಖವೂ, ಸಂಘಾತಃ=ದೇಹವೂ, ಚೇತನಾ=ಮನಸ್ಸಿನ ವೃತ್ತಿಯೂ, ಧೃತಿಃ=ಧೈರ್ಯವೂ, ಏತತ್ [illegible] ಹೀಗೆ ಹೇಳಿದ ಕ್ಷೇತ್ರವು ಸವಿಕಾರಂ=ಇಚ್ಛಾ ಮೊದಲಾದ ವಿಕಾರಗಳಿಂದ ಕೂಡಿದ್ದೆಂದು [illegible] [illegible]

(೪)(ಯತಶ್ಚ ಯತ್ ಸ ಚ ಯಃ ಎಂಬುವುದು ಎರಡು ಪ್ರತಿಜ್ಞೆಗಳಾದರೆ ಅವುಗಳನ್ನು ಹೇಳಬೇಕಿತ್ತು. ಅವು ಎರಡನ್ನು ಹೇಳಲಿಲ್ಲ ಎಂದರೆ –) ಉಪದ್ರಷ್ಟಾ ಅನುಮಂತಾ ಇತ್ಯಾದಿಗಳಿಂದಲೇ ಅನುಮಂತನನ್ನು (ಪ್ರೇರಕ) ಹೇಳಿದ್ದರಿಂದ ಆತನ ಧರ್ಮವಾದ ಅನುಮತಿ (ಪ್ರೇರಣೆ) ಯನ್ನು ಹೇಳಿದಂತೆಯೇ ಆಯಿತು. (೬) (ಯತ್ಪ್ರಭಾವಶ್ಚ ಇತ್ಯಾದಿಗಳಿಂದ ಪ್ರತಿಜ್ಞೆಮಾಡಿದ್ದನ್ನು ಎಲ್ಲಿ ಹೇಳುವುದೆಂದರೆ–) ಜ್ಞೇಯಂ ಯತ್ತತ್ ಇತ್ಯಾದಿಗಳಿಂದ ಯತ್ಪ್ರಭಾವಃ ಎಂಬುವುದು ಉಕ್ತವಾಯಿತು. (೩) (ಚೈತನ್ಯಕ್ಕೆ ವಿಕಾರವಿಲ್ಲದಿರುವುದರಿಂದ ವಿಕಾರಗಳಲ್ಲಿ ಚೇತನಾ ಎಂದು ಹೇಳಿದ್ದು ಹೇಗೆ ಎಂದರೆ–) ಚೇತನಾ = ಚಿತ್ತವ್ಯಾಪ್ತಿಯು (ಮಹಾಭೂತಾನಿ ಇತ್ಯಾದಿಗಳಿಂದ ಹೇಳಿದವುಗಳ ಸಮೂಹವು ಕ್ಷೇತ್ರವಾಗಿರುವುದರಿಂದ ಸಂಘಾತವು ಕಾರ್ಯವೆಂದು ಹೇಳಿದ್ದು ಹೇಗೆ ಎಂಬುವ ಆಶಂಕೆಯನ್ನು ಪರಿಹರಿಸಿಕೊಂಡು ಹೇಳಿದ ಅರ್ಥದಲ್ಲಿ ಪ್ರಮಾಣವನ್ನು ಹೇಳುತ್ತಾರೆ–) ಸಂಘಾತಃ = ದೇಹವು. ಚೇತನಾ = ಚಿತ್ತದ ವ್ಯಾಪ್ತಿಯು. ಎಂಬು ಇದೆ. ॥ ೬–೭ ॥

ಟೀ–ಪ್ರತಿಜ್ಞೆಮಾಡಿದ ೬ರ ಮಧ್ಯದಲ್ಲಿ (1) ಯಚ್ಚ (2) ಯಾದೃಕ್ಚ (3) ಯದ್ವಿಕಾರಿ. ಎಂಬ ಮೂರನ್ನು ಹೇಳಿ (5) ಸ ಚ ಯಃ (6) ಯತ್ಪ್ರಭಾವಃ, ಎಂಬೀ ಎರಡನ್ನು ಜ್ಞೇಯಂ ಇತ್ಯಾದಿಗಳಿಂದ ಹೇಳುವುದಕ್ಕಾಗಿ ಅಂತಹ ಜ್ಞೇಯವಾದ ಭಗವಜ್ಞಾನದ ಸಾಧನಗಳನ್ನು ೫ ಶ್ಲೋಕಗಳಿಂದ ಹೇಳುತ್ತಾರೆ–

**ಗೀ॥ ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಂ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥ ೮ ॥**

ಅ॥ ಅಮಾನಿತ್ವಂ=ತನ್ನನ್ನು ಶ್ಲಾಘನೆಮಾಡಿಕೊಳ್ಳದಿರುವುದು. ಅದಂಭಿತ್ವಂ=ತಾನು ಅಲ್ಪನೆಂದು ತಿಳಿದುಕೊಂಡಿದ್ದರೂ ತಾನು ಮಹಾ ಶ್ರೇಷ್ಠನೆಂದು ತೋರಿಸುವುದು ದಂಭವು, ಹಾಗೆ ತೋರಿಸದೆ ಇರುವಿಕೆಯು. ಅಹಿಂಸಾ=ಬೇರೆಯವರಿಗೆ ಪೀಡೆಯನ್ನು ಕೊಡದಿರುವುದು. ಕ್ಷಾಂತಿಃ=ಸಹಿಸಿಕೊಳ್ಳುವಿಕೆಯು. (ಸುಖ ದುಃಖಾದಿಗಳಲ್ಲಿ ವಿಕಾರವಿಲ್ಲದಿರುವುದು) ಆರ್ಜವಂ=ಸರಳವಾದ ಮಾರ್ಗ(ಸನ್ಮಾರ್ಗ)ದಲ್ಲಿ ಮನಸ್ಸು ವಚನ ಕಾರ್ಯ ಕರ್ಮಗಳಲ್ಲಿ ವ್ಯತ್ಯಾಸವಿಲ್ಲದೆ ಸರಿಯಾಗಿ ಒಂದೇ ರೀತಿಯಾಗಿ ಇರುವುದು. ಆಚಾರ್ಯೋಪಾಸನಂ=ಜ್ಞಾನಿಗಳನ್ನು ಸೇವಿಸುತ್ತಿರುವುದು. ಶೌಚಂ=ಬಾಹ್ಯಾಂತರ ಶುದ್ಧಿಯು. ಸ್ಥೈರ್ಯಂ=ಭಯಾದಿಗಳಿಂದ ತನ್ನ ಧರ್ಮದಿಂದ ಕದಲದೆ ಸ್ಥಿರವಾಗಿ ಇರುವಿಕೆ. ಆತ್ಮವಿನಿಗ್ರಹಃ=ವಿಶೇಷವಾಗಿ ತನ್ನ ಮನಸ್ಸನ್ನು ವಶಪಡಿಸಿಕೊಳ್ಳುವುದು. ॥೮॥

**ಗೀ॥ ಇಂದ್ರಿಯಾರ್ಥೇಷು ವೈರಾಗ್ಯಮನಹಂಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಂ ॥ ೯ ॥**

ಅ॥ ಇಂದ್ರಿಯಾರ್ಥೇಷು=ಶಬ್ದ ಸ್ಪರ್ಶ ಮೊದಲಾದ ವಿಷಯಗಳಲ್ಲಿ, ವೈರಾಗ್ಯಂ=ಅನುರಾಗ (ಸ್ನೇಹ) ವಿಲ್ಲದಿರುವುದು. ಅನಹಂಕಾರಃ=ತನ್ನಲ್ಲಿ ಇಲ್ಲದಿರುವ ಗುಣಗಳು ತನಗೆ ಇರುತ್ತವೆ, ಎಂಬ ಅಜ್ಞಾನವಿಲ್ಲದಿರುವುದು. ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಂ=ಉತ್ಪತ್ತಿ, ಸಾವು ಮುದಿತನ, ರೋಗ, ಇವುಗಳಲ್ಲಿ ದುಃಖವನ್ನು ದೋಷವನ್ನು, ಕಾಣುವುದು, ಅಥವಾ ಇವುಗಳಲ್ಲಿ ದುಃಖ ಸ್ವರೂಪವಾದ ದೋಷವನ್ನು ಪ್ರತಿಕ್ಷಣದಲ್ಲಿ ಅನುಸಂಧಾನಮಾಡಿಕೊಳ್ಳುವುದು, (ಅಂದರೆ ಇವುಗಳಿಂದ ದುಃಖವುಂಟಾಗುತ್ತದೆಂದು ತಿಳಿದುಕೊಳ್ಳುವುದು)

ಟೀ—ಹಿಂದೆ ಪ್ರತಿಜ್ಞೆ ಮಾಡಿದ ೬ ಅರ್ಥಗಳಲ್ಲಿ ಅಮಾನಿತ್ವಾದಿಗಳು ಸೇರದಿರುವುದರಿಂದ ಅವುಗಳನ್ನು ಹೇಳುವುದು ಏತಕ್ಕೆ ಎಂದರೆ —

ಭಾ॥ (೧) ಸ ಚ ಯೋ ಯತ್ಪ್ರಭಾವಶ್ಚೇತಿ ವಕ್ತುಂ ತಜ್ಜ್ಞಾನಸಾಧನಾನ್ಯಾಹ । ಅಮಾನಿತ್ವಮಿತ್ಯಾದಿನಾ ॥ (೨) ಆತ್ಮಾಲ್ಪತ್ವಂ ಜ್ಞಾತ್ವಾಽಪಿ ಮಹತ್ತ್ವಪ್ರದರ್ಶನಂ ದಂಭಃ। ಜ್ಞಾತ್ವಾಽಪಿ ಸ್ವಾತ್ಮನೋಽಲ್ಪತ್ವಂ ದಂಭೋ ಮಾಹಾತ್ಮ್ಯಭಾವನಮಿತ್ಯಭಿಧಾನಂ ॥ (೩) ಆರ್ಜವಂ ಮನೋವಾಕ್ಕಾಯಕರ್ಮಣಾಮನ್ಯೈಪರೀತ್ಯಂ ॥ ೮,೯ ॥

ಅ॥ (೧) ಸ ಚ ಯಃ, ಯತ್ಪ್ರಭಾವಶ್ಚ, ಎಂದು ಹೇಳಿ ಭಗವತ್ಸ್ವರೂಪವನ್ನು ಹೇಳುವುದಕ್ಕಾಗಿ ಶ್ರೇಯವಾದ ಭಗವಜ್ಜ್ಞಾನ ಸಾಧನಗಳನ್ನು ಅಮಾನಿತ್ವಂ ಇತ್ಯಾದಿಗಳಿಂದ ಹೇಳುತ್ತಾರೆ. (೨) ತಾನು ಅಲ್ಪನೆಂದು ತಿಳಿದಿದ್ದರೂ ಶ್ರೇಷ್ಠನೆಂದು ತೋರಿಸುವುದು ದಂಭವು. (ಈ ವಿಷಯದಲ್ಲಿ ಪ್ರಮಾಣವನ್ನು ಕೊಡುತ್ತಾರೆ—) ತನಗೆ ಅಲ್ಪತ್ವವನ್ನು ತಿಳಿದಿದ್ದರೂ ತನಗೆ ಮಾಹಾತ್ಮ್ಯವನ್ನು ತೋರಿಸುವುದು ದಂಭವು, ಎಂದು ಅಭಿಧಾನವಿದೆ (೩) ಆರ್ಜವಂ=ಮನಸ್ಸು, ವಚನ, ಶರೀರ ಕರ್ಮಗಳಿಗೆ ವ್ಯತ್ಯಾಸವಿಲ್ಲದಿರುವುದು. ॥ ೮, ೯ ॥

ಗೀ॥ ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।
ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ ೧೦ ॥

ಅ॥ ಪುತ್ರದಾರಗೃಹಾದಿಷು=ಮಕ್ಕಳು, ಪ್ರಿಯಪತ್ನಿ, ಮನೆ ಮೊದಲಾದ ಪ್ರಿಯ ವಸ್ತುಗಳಲ್ಲಿ, ಅಸಕ್ತಿಃ=ಮಮತೆಯಿಲ್ಲದಿರುವುದು, ಅನಭಿಷ್ವಂಗಃ=ಪುತ್ರ ಮಿತ್ರ ಕಳತ್ರಾದಿಗಳ ಸುಖವೇ ತನ್ನ ಸುಖವೆಂದೂ, ಅವರಿಗೆ ಬರತಕ್ಕ ದುಃಖವೇ ತನ್ನ ದುಃಖವೆಂದೂ, ತೋರ್ಪಡಿಸದಿರುವುದು. ಇಷ್ಟಾನಿಷ್ಟೋಪಪತ್ತಿಷು=ಇಷ್ಟವಸ್ತುವಿನ ಪ್ರಾಪ್ತಿಯಾದರೂ, ಅನಿಷ್ಟವಸ್ತುವಿನ ಪ್ರಾಪ್ತಿಯಾದರೂ ಅವುಗಳಲ್ಲಿ, ನಿತ್ಯಂ=ಯಾವಾಗಲೂ, ಸಮಚಿತ್ತತ್ವಂ=ರಾಗ ದ್ವೇಷಗಳು ಅಥವಾ ಸಂತೋಷ ದುಃಖಗಳು ಇಲ್ಲದೆ ಇರುವಿಕೆ ಎಂಬ ಸಮಚಿತ್ತನಾಗಿರುವಿಕೆಯು. ॥ ೧೦ ॥

ಗೀ॥ ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।
ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ ೧೧ ॥

ಅ॥ ಮಯಿ ಚ=ನನ್ನಲ್ಲಿ, ಅನನ್ಯಯೋಗೇನ=ಪರಮಾತ್ಮನಿಂದ ಇತರರಾದ ರಮಾ ಬ್ರಹ್ಮಾದಿಗಳು ಸ್ವತಂತ್ರರೆಂದು ತಿಳಿಯದಿರುವುದರಿಂದ, ಅವ್ಯಭಿಚಾರಿಣೀ ಭಕ್ತಿಃ=ನಿರ್ದುಷ್ಟವಾದ ಏಕಾಂತ ಭಕ್ತಿಯು (ಅಂದರೆ ರಮಾದಿಗಳಿಗೆ ಸ್ವಾತಂತ್ರ್ಯವನ್ನು ತಿಳಿಯದೆ ಪರಮಾತ್ಮನಲ್ಲಿಯೇ ಸರ್ವ ಸ್ವಾತಂತ್ರ್ಯಜ್ಞಾನಪೂರ್ವಕ ನಿರಂತರ ಸ್ನೇಹಪ್ರವಾಹವು) ವಿವಿಕ್ತದೇಶಸೇವಿತ್ವಂ=ಅಯೋಗ್ಯ ಜನರ ಸಮ್ಮರ್ದವಿಲ್ಲದಿರುವ, ಮತ್ತು ಮನಸ್ಸಿಗೆ ನೈರ್ಮಲ್ಯವನ್ನು ಹೊಂದಿಸಿಕೊಡುವ, ಶುದ್ಧ ಪ್ರದೇಶದಲ್ಲಿ ಇರುವುದು, ಜನಸಂಸದಿ=ಅವಿವೇಕಿಗಳ ಸಭೆಯಲ್ಲಿ, ಅರತಿಃ=ಅನುರಾಗ ಪ್ರೀತಿಯಿಲ್ಲದಿರುವುದು (ಅಂತಹ ಸಭೆಗೆ ಹೋಗುವ ಇಚ್ಛೆಯಿಲ್ಲದಿರುವುದು) ॥ ೧೧ ॥

ಭಾ॥ ಸಕ್ತಿಃ ಸ್ನೇಹಃ । ಸ ಏವಾತಿಸಕ್ತೋಽಭಿಷ್ವಂಗಃ । ಸ್ನೇಹಃ ಸಕ್ತಿಃ ಸ ಏವಾತಿಸಕ್ತೋಽಭಿಷ್ವಂಗ ಉಚ್ಯತ ಇತ್ಯಭಿಧಾನಃ ॥ ೧೦,೧೧ ॥

ಅ ॥ ಸಕ್ತಿಃ=ಸ್ನೇಹವು. ಸ್ನೇಹವೇ ಅತಿ ಪರಿಪಕ್ವವಾದರೆ ಅಭಿಷ್ವಂಗವೆನಿಸುತ್ತದೆ. (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ-) ಸಕ್ತಿಃ=ಸ್ನೇಹವು. ಅದೇ ಅತಿ ಪರಿಪಕ್ವವಾದರೆ ಅಭಿಷ್ವಂಗವೆನ್ನಿಸುತ್ತದೆ. ಎಂದು ಅಭಿಧಾನವಿದೆ ॥ ೧೦, ೧೧ ॥

ಗೀ ॥ ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಂ ।
ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥ ೧೨ ॥

ಅ ॥ ಅಧ್ಯಾತ್ಮಜ್ಞಾನನಿತ್ಯತ್ವಂ=ಭಗವದ್ವಿಷಯಕ ಜ್ಞಾನದಲ್ಲಿ ನಿಯಮದಿಂದ ಸ್ಥಿರವಾಗಿ ಇರುವಿಕೆ, ತತ್ತ್ವಜ್ಞಾನಾರ್ಥದರ್ಶನಂ=ಪರಮಾತ್ಮನ ಅಪರೋಕ್ಷ ಜ್ಞಾನವು ಹುಟ್ಟುವುದಕ್ಕಾಗಿ ಪುರಾಣ ಶಾಸ್ತ್ರಗಳ ವಿಚಾರವು, ಏತತ್=ಅಮಾನಿತ್ವಂ ಇತ್ಯಾದಿಗಳಿಂದ ಹೇಳಲ್ಪಟ್ಟ ೨೦ ಧರ್ಮಗಳ ಸಮುದಾಯವು, ಜ್ಞಾನಮಿತಿ=ಭಗವಜ್ಜ್ಞಾನ ಸಾಧನವೆಂದು. ಪ್ರೋಕ್ತಂ=ಹೇಳಲ್ಪಟ್ಟಿದೆ. ಅತೋಽನ್ಯಥಾ=ಇವುಗಳಿಂದ ಬೇರೆಯಾದುದು. ಯತ್=ಯಾವುದಿದೆಯೋ. (ಅದು) ಅಜ್ಞಾನಂ=ಅಪರೋಕ್ಷಜ್ಞಾನಕ್ಕೆ ಶಾಸ್ತ್ರಪರ್ಯಾಲೋಚನರೂಪವಾದ ಜ್ಞಾನಸಾಧನವೂ ಆಗುವುದಿಲ್ಲವೆಂದು (ಹೇಳಲ್ಪಟ್ಟಿದೆ) ॥ ೧೨ ॥

ಟೀ—ತತ್ತ್ವಜ್ಞಾನಾರ್ಥದರ್ಶನವೆಂದರೆ—ಜ್ಞಾನವೇ. ಅದಕಾರಣ ಅದನ್ನು ಜ್ಞಾನಸಾಧನಗಳಲ್ಲಿ ಹೇಳಿದ್ದು ಹೇಗೆ ಎಂದರೆ—

ಭಾ ॥ ತತ್ತ್ವಜ್ಞಾನಾರ್ಥದರ್ಶನಂ । ಅಪರೋಕ್ಷಜ್ಞಾನಾರ್ಥಂ ಶಾಸ್ತ್ರದರ್ಶನಂ ॥ ೧೨ ॥

ಅ ॥ ತತ್ತ್ವಜ್ಞಾನಾರ್ಥದರ್ಶನಂ=ಪರಮಾತ್ಮನ ಅಪರೋಕ್ಷಜ್ಞಾನಕ್ಕಾಗಿ ಶಾಸ್ತ್ರಗಳ ತಾತ್ಪರ್ಯವನ್ನು ಆಲೋಚಿಸುವುದು. ॥ ೧೨ ॥

ಟೀ—ಜ್ಞೇಯವನ್ನು ಹೇಳುವುದಕ್ಕಾಗಿ ಅಮಾನಿತ್ವಂ ಎಂಬುವ ಶ್ಲೋಕದಿಂದ ಜ್ಞಾನವು ಹೇಳಲ್ಪಡುತ್ತದೆ. ಅದರಲ್ಲಿ ತತ್ತ್ವಜ್ಞಾನಾರ್ಥದರ್ಶನಂ ಎಂಬುವ ಪದದ ಅರ್ಥವನ್ನು ಹೇಳುತ್ತಾರೆ—

ತಾ ॥ (೧) ತತ್ತ್ವಜ್ಞಾನವಿಷಯಸ್ಯ ವಿಷ್ಣೋರಪರೋಕ್ಷದರ್ಶನಂ ತತ್ತ್ವಜ್ಞಾನಾರ್ಥದರ್ಶನಂ । (೨) ಜ್ಞಾಯತೇಽನೇನೇತಿ ಜ್ಞಾನಂ । ಜ್ಞಪ್ತಿರ್ಜ್ಞಾನಮಿತಿ (ಚ) ವ್ಯುತ್ಪತ್ತ್ಯಾ ಏತಜ್ಜ್ಞಾನಮಿತಿ ಪ್ರೋಕ್ತಮಿತಿ ಜ್ಞಾನಸಾಧನಂ ಜ್ಞಾನಂ ಚೋಕ್ತಂ ॥ ೮-೧೨ ॥

ಅ ॥ (೧) ತತ್ತ್ವಜ್ಞಾನಕ್ಕೆ ವಿಷಯನಾದ ವಿಷ್ಣುವಿನ ಅಪರೋಕ್ಷಜ್ಞಾನವು ತತ್ತ್ವಜ್ಞಾನಾರ್ಥದರ್ಶನವು. (೨) (ಅಮಾನಿತ್ವಂ ಇತ್ಯಾದಿಗಳಿಂದ ಜ್ಞಾನಸಾಧನವನ್ನು ತತ್ತ್ವಜ್ಞಾನಾರ್ಥದರ್ಶನಂ ಎಂಬುವುದರಿಂದ ಜ್ಞಾನವನ್ನು ಹೇಳಿ ಅಂತ್ಯದಲ್ಲಿ ಏತಜ್ಜ್ಞಾನಮಿತಿ ಪ್ರೋಕ್ತಂ ಎಂದು ಹೇಳಿದುದು ಹೇಗೆ ಎಂದರೆ-) ಜ್ಞಾಯತೇ ಅನೇನ ಎಂಬುವ ವ್ಯುತ್ಪತ್ತಿಯಿಂದ ಜ್ಞಾನಸಾಧನವು ಜ್ಞಪ್ತಿಃ ಜ್ಞಾನವು ಎಂಬುವ ವ್ಯುತ್ಪತ್ತಿಯಿಂದ ಏತತ್ ಜ್ಞಾನಮಿತಿ ಪ್ರೋಕ್ತಂ ಎಂಬುವುದರಿಂದ ಜ್ಞಾನಸಾಧನವೂ ಜ್ಞಾನವೂ ಹೇಳಲ್ಪಟ್ಟಿದೆ ॥ ೮-೧೨ ॥

ಟೀ—ತತ್ತ್ವಜ್ಞಾನವನ್ನು ಜ್ಞಾನಸಾಧನವನ್ನು ಹೇಳಿ ಈಗ ಸ ಆ ಯು ಯತ್ಪ್ರಭಾವಶ್ಚ ಎಂಬುದರಿಂದ ಜ್ಞಾನವಾದ ಕ್ಷೇತ್ರಜ್ಞ ಸ್ವರೂಪವನ್ನು ಅವನ ಸಾಮರ್ಥ್ಯವನ್ನೂ ಹೇಳುತ್ತಾರೆ. ಅದರಲ್ಲಿ ಅದರ ಹೇಳುವುದಕ್ಕಾಗಿ ಅವನ ಜ್ಞಾನಫಲವನ್ನು ಹೇಳುತ್ತಾರೆ—

ಗೀ॥ ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ ।
ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ೧೩ ॥

ಅ॥ ಯತ್=ಯಾವ ಕ್ಷೇತ್ರಜ್ಞನ ಸ್ವರೂಪವನ್ನು, ಜ್ಞಾತ್ವಾ=ತಿಳಿದುಕೊಂಡು, ಅಮೃತಂ=ಮೋಕ್ಷವನ್ನು, ಅಶ್ನುತೇ=ಹೊಂದುತ್ತಾನೋ, ಜ್ಞೇಯಂ=ಮೋಕ್ಷಕ್ಕಾಗಿ ತಿಳಿಯಲಿಕ್ಕೆ ಅತ್ಯಾವಶ್ಯಕವಾಗಿದೆ, ಯತ್=ಯಾವುದಿದೆಯೋ, ತತ್=ಆ ಭಗವತ್ಸ್ವರೂಪವನ್ನು, ಪ್ರವಕ್ಷ್ಯಾಮಿ=ಸ್ಪಷ್ಟವಾಗಿ ಹೇಳುವೆನು. ತತ್=ಅಂತಹ, ಜ್ಞೇಯಂ=ಜ್ಞೇಯನಾದವನು, ಪರಂ ಬ್ರಹ್ಮ=ಪರಬ್ರಹ್ಮನು (ಪರಂ ಬ್ರಹ್ಮ ಎನ್ನುವುದರಿಂದ ಜ್ಞೇಯಸ್ವರೂಪವು ಉಕ್ತವಾಯಿತು.) (ಸ ಚ ಯಃ ಯತ್ಪ್ರಭಾವಃ ಎಂದು ಹೇಳಿದ ಅವನ ಸಾಮರ್ಥ್ಯವನ್ನು ಹೇಳುತ್ತಾರೆ.) ಪರಂಬ್ರಹ್ಮ=ಪರಬ್ರಹ್ಮನು, ಅನಾದಿಮತ್=ಉತ್ಪತ್ತಿಯುಳ್ಳ ಪ್ರಾಕೃತಗಳಾದ ದೇಹ ಇಂದ್ರಿಯ ಗುಣ ಕರ್ಮಾದಿಗಳು ಇಲ್ಲದವನು. ಸತ್=ವ್ಯಕ್ತ ಎನಿಸಿಕೊಂಡ ಕಾರ್ಯಗಳ ಸಮೂಹದಲ್ಲಿ ಅಂತರ್ಗತನು, ನೋಚ್ಯತೇ=ಅಲ್ಲವೆನ್ನಿಸಿಕೊಳ್ಳುತ್ತಾನೆ. ಅಸತ್=ಅವ್ಯಕ್ತ ಎನಿಸಿಕೊಂಡ ಕಾರಣದಲ್ಲಿ ಸೇರಿದವನು, ನ=ಅಲ್ಲವೆನಿಸಿಕೊಳ್ಳುತ್ತಾನೆ. (ಅಂತೂ ವ್ಯಕ್ತಾವ್ಯಕ್ತ ವಿಲಕ್ಷಣನು. ಅಥವಾ ಮೂರ್ತ (ಪೃಥಿವ್ಯಪ್ ತೇಜಸ್ಸು) ಅಮೂರ್ತ (ವಾಯು ಆಕಾಶ) ವಿಲಕ್ಷಣನು, ಎಂದು ವೇದಗಳಲ್ಲಿ ಹೇಳಿಸಿಕೊಳ್ಳಲ್ಪಡುತ್ತಾನೆ.) ॥ ೧೩ ॥

ಭಾ॥ (೧) ಪರಂ ಬ್ರಹ್ಮೇತಿ ಸ ಚ ಯ ಇತಿ ಪ್ರತಿಜ್ಞಾತಮುಚ್ಯತೇ । ಅನ್ಯಚ್ಚ ಪ್ರಭಾವ ಇತಿ ॥ (೨) ಆದಿಮದ್ದೇಹಾದಿವರ್ಜಿತಮನಾದಿಮತ್ ॥ (೩) ಅನ್ಯಥಾಽನಾದೀತ್ಯೇವ ಸ್ಯಾತ್ ॥ ೧೩ ॥

ಅ॥ (೧) ಪರಂಬ್ರಹ್ಮ ಎಂಬುವದರಿಂದ ಸ ಚ ಯಃ ಎಂದು ಪ್ರತಿಜ್ಞಾತವಾದ ಜ್ಞೇಯವು ಹೇಳಲ್ಪಡುತ್ತದೆ ಅನಾದಿಮತ್ ಇತ್ಯಾದಿಗಳು ಯತ್ಪ್ರಭಾವಃ ಎಂದು ಪ್ರತಿಜ್ಞಾತವಾದ ಪ್ರಭಾವವನ್ನು ಪ್ರತಿಪಾದಿಸುತ್ತವೆ. (೨) ಉತ್ಪತ್ತಿಯುಳ್ಳ ದೇಹ, ಇಂದ್ರಿಯ, ಗುಣ ಕ್ರಿಯಾದಿಗಳುಳ್ಳದ್ದು ಆದಿಮತ್ ಎನಿಸುತ್ತದೆ. ಅದಿಲ್ಲದಿರುವ ಪರಬ್ರಹ್ಮನು ಅನಾದಿಮತ್ ಎನಿಸಿಕೊಳ್ಳುತ್ತಾನೆ (೩) (ಹೀಗೆ ಅರ್ಥವನ್ನು ಹೇಳದೆ ಪರಮಾತ್ಮನು ಕಾರಣ ಇಲ್ಲದವನು ಎಂದಿಷ್ಟೇ ಅರ್ಥವು ವಿವಕ್ಷಿತವಾಗಿದ್ದರೆ ಅನಾದಿ ಎಂದಷ್ಟೇ ಹೇಳಬೇಕಿತ್ತು. ಅನಾದಿಮತ್ ಎಂದುಹೇಳಬೇಕಾಗಿರಲಿಲ್ಲ. ॥ ೧೩ ॥

ಟೀ—ಪುನಃ ಆ ಕ್ಷೇತ್ರಜ್ಞನ ಪ್ರಭಾವವನ್ನು ಹೇಳುತ್ತಾರೆ—

ಗೀ॥ ಸರ್ವತಃ ಪಾಣಿಪಾದಂ ತತ್ಸರ್ವತೋಽಕ್ಷಿಶಿರೋಮುಖಮ್ ।
ಸರ್ವತಃ ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೪ ॥

ಅ॥ ತತ್=ಆ ಪರಬ್ರಹ್ಮನು, ಸರ್ವತಃ=ಎಲ್ಲಾ ಅವಯವಗಳಲ್ಲಿ, ಪಾಣಿಪಾದಂ=ಹಸ್ತ ಪಾದ ಗಳ ಶಕ್ತಿಯುಳ್ಳವನು. (ಅಂದರೆ—ಹಸ್ತ ಪಾದಾದಿಗಳ ಶಕ್ತಿಯುಳ್ಳ ಎಲ್ಲಾ ಅವಯವಗಳೂ ಸಮಾನ ಅವಗಳ ಶಕ್ತಿಯುಳ್ಳವುಗಳು. ಕೃಷ್ಣ ಕೇಶಾವತಾರನಾದ ತ್ರಿವಿಕ್ರಮನಿಗೆ ... ಅವನ ಕೂದಲು ಕೇಶದಲ್ಲಿಯೂ ಪಾಣಿ ಪಾದಾದಿಗಳ ಶಕ್ತಿ ... ಇರುತ್ತದೆ.) ಸರ್ವತಃ ಎಲ್ಲಾ ಅವಯವಗಳಲ್ಲಿಯೂ, ಅಕ್ಷಿಶಿರೋಮುಖಂ=ಕಣ್ಣು ಶಿರಸ್ಸು ... ... ... ಸರ್ವತಃ—...

ಅವಯವಗಳಲ್ಲಿಯೂ, ಶ್ರುತಿಮತ್ = ಶ್ರೋತ್ರೇಂದ್ರಿಯದ ಶಕ್ತಿಯು ಇದೆ. (ಅಂದರೆ—ಎಲ್ಲಾ ಇಂದ್ರಿಯ ಗಳ ವಿಷಯಗಳನ್ನೂ ಕರ್ಮಗಳನ್ನೂ ಎಲ್ಲಾ ಇಂದ್ರಿಯಗಳಿಂದ ತಿಳಿಯುತ್ತಾನೆ. ಮಾಡುತ್ತಾನೆ) ಲೋಕೇ=ಜಗತ್ತಿನಲ್ಲಿ. ಸರ್ವಂ=ಎಲ್ಲಾ ವಸ್ತುವನ್ನು. ಆವೃತ್ಯ=ಒಳಗೂ ಹೊರಗೂ ವ್ಯಾಪಿಸಿಕೊಂಡು, ತಿಷ್ಠತಿ=ಇರುತ್ತಾನೆ. ಅಥವಾ ಸರ್ವ ದೇಶದಲ್ಲಿರತಕ್ಕ ಪರಬ್ರಹ್ಮನು ಹಸ್ತ ಮೊದಲಾದ ಅವಯವ ಗಳಿಂದ ಕೂಡಿದವನಾಗಿ ಲೋಕದಲ್ಲಿ ಸಮಸ್ತವಸ್ತುವನ್ನು ವ್ಯಾಪಿಸಿಕೊಂಡು ಇರುತ್ತಾನೆ. ಅಂದರೆ— ಅಣುಗಳಿಂದಲೂ ಅಣುತರಗಳಾದ ಪಾಣಿಪಾದಾದಿಗಳಿಂದ ಕೂಡಿದ ಅನಂತರೂಪಗಳಿಂದ ಸರ್ವತ್ರ ಇದ್ದ ವನಾಗಿ ವ್ಯಾಪ್ತರೂಪದಿಂದ ಸರ್ವವನ್ನು ವ್ಯಾಪಿಸಿಕೊಂಡು ಇರುತ್ತಾನೆ. ॥೧೪॥

## ಗೀ॥ ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ ।ಅಸಕ್ತಂ ಸರ್ವಭೃಚ್ಚೈವ (ಸರ್ವಭುಕ್ಚೈವ)ನಿರ್ಗುಣಂ ಗುಣಭೋಕ್ತೃ ಚ॥೧೫॥

ಅ॥ (ಆ ಪರಬ್ರಹ್ಮನು) ಸರ್ವೇಂದ್ರಿಯಗುಣಾಭಾಸಂ=ಚಕ್ಷುಸ್ಸು ಮೊದಲಾದ ಎಲ್ಲಾ ಇಂದ್ರಿಯ ಗಳೂ, ರೂಪ ಮೊದಲಾದ ಇಂದ್ರಿಯ ವಿಷಯಗಳೂ ಇವುಗಳನ್ನು ತಾನು ಸಂಪೂರ್ಣ ತಿಳಿದವನು. ಇತರ ರಿಗೆ ತಿಳಿಸಿಕೊಡುವವನು. ಸರ್ವೇಂದ್ರಿಯವಿವರ್ಜಿತಂ=ಪ್ರಾಕೃತಗಳೂ ತನ್ನಿಂದ ಭಿನ್ನಗಳೂ ಆದ ಇಂದ್ರಿ ಯಗಳು ಇಲ್ಲದವನು. (ಅಪ್ರಾಕೃತಗಳಾದ ಚಿದ್ರೂಪಗಳಾದ ಇಂದ್ರಿಯಗಳುಳ್ಳವನು.) ಅಸಕ್ತಂ=ಪ್ರಾಕೃ ತಾಪಗಳ ಲೇಶವಿಲ್ಲದವನು. ಸರ್ವಭೃಚ್ಚ=ಸರ್ವ ವಸ್ತುವನ್ನು ಧರಿಸುವವನು. ಪೋಷಿಸುವವನು. (ಅಥವಾ ಸರ್ವಭುಕ್ಚ=ಸಮಸ್ತ ಪದಾರ್ಥಗಳ ಸಾರವನ್ನು ಉಣ್ಣುವವನು. ಅಥವಾ ಸರ್ವ ಸಂಹಾರಕನು.) ನಿರ್ಗುಣಂ= ಸತ್ತ್ವ ರಜಸ್ತಮೋಗುಣಗಳಿಲ್ಲದವನು. ಗುಣಭೋಕ್ತೃ ಚ=ಆನಂದ ಮೊದಲಾದ ಸಮಸ್ತ ಕಲ್ಯಾಣ ಗುಣಗಳನ್ನೇ ಅನುಭವಿಸಿಕೊಂಡಿರುವವನು. ॥೧೫॥

## ಗೀ॥ ಬಹಿರಂತಶ್ಚ ಭೂತಾನಾಮಚರಂ ಚರಮೇವ ಚ । ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾಂತಿಕೇ ಚ ತತ್ ॥ ೧೬ ॥

ಅ॥ (ಆ ಪರಬ್ರಹ್ಮನು) ಭೂತಾನಾಂ=ಸಮಸ್ತ ಪ್ರಾಣಿಗಳ ಬಹಿಃ=ಹೊರಗೂ. ಅಂತಃ= ಒಳಗೂ, (ನಿಯಾಮಕನಾಗಿ ಇರುತ್ತಾನೆ.) ಅಚರಂ=ವಿಕಾರಾದಿ ದೋಷಗಳಿಲ್ಲದವನು, ಅಥವಾ ಸರ್ವ ಜ್ಞತ್ವ ಮೊದಲಾದ ಗುಣಗಳಿಂದ ಸರ್ವದಾ ಕದಲದಿರುವವನು. (ಅಂದರೆ ಸರ್ವದಾ ಏಕಪ್ರಕಾರ ನಾಗಿಯೇ ಇರುವವನು.) ಚರಮೇವ ಚ=ಸರ್ವ ದೇಶಗಳಲ್ಲಿಯೂ ನಿಯಾಮಕನಾಗಿ ಸಂಚರಿಸುವವನು ತತ್=ಬ್ರಹ್ಮನು, ಸೂಕ್ಷ್ಮತ್ವಾತ್=ಪರಮ ಸೂಕ್ಷ್ಮನಾದುದರಿಂದ. ಅವಿಜ್ಞೇಯಂ=ಪ್ರಾಕೃತಗಳಾದ ಚಕ್ಷುರಾದಿ ಇಂದ್ರಿಯಗಳಿಂದ ತಿಳಿದುಕೊಳ್ಳಲಿಕ್ಕೆ ಅಶಕ್ಯನು. ತತ್=ಆ ಪರಬ್ರಹ್ಮನು. ದೂರಸ್ಥಂ= ಸರ್ವತ್ರ ವ್ಯಾಪ್ತನಾದುದರಿಂದ ದೂರದಲ್ಲಿಯೂ ಇರುವವನು. ಅಂತಿಕೇ ಚ=ಸರ್ವರ ಸಮೀಪದಲ್ಲಿಯೂ ಇರುವವನು. ॥೧೬॥

## ಗೀ॥ ಅವಿಭಕ್ತಂ ಚ ಭೂತೇಷು (ವಿಭಕ್ತೇಷು) ವಿಭಕ್ತಮಿವ ಚ ಸ್ಥಿತಂ । ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥ ೧೭ ॥

ಅ॥ ತತ್=ಆ ಪರಬ್ರಹ್ಮನು, ವಿಭಕ್ತೇಷು (ಭೂತೇಷು ಚ)=ಪರಸ್ಪರ ಭಿನ್ನಗಳಾಗಿರುವ ನಾನಾ ವಿಧಪ್ರಾಣಿಗಳಲ್ಲಿ, ಅವಿಭಕ್ತಂ ಚ=ಭಿನ್ನನಾಗದೆ ಒಬ್ಬನೇ ಇದ್ದರೂ. (ಅಂದರೆ ಸಮಸ್ತ ಪ್ರಾಣಿಗಳ

...ಯಾಮಕವಾಗಿರುವ ಭಗವದ್ರೂಪಗಳಿಗೆ ಭೇದವಿಲ್ಲದಿದ್ದರೂ) ವಿಭಕ್ತಮಿವ ಸ್ಥಿತಂ=ನಿಯಾಮಕವಾಗಿರುವ ...ಪವು ಬೇರೆ ಬೇರೆ ಎಂಬುವಂತೆ ಇರುತ್ತದೆ (ಅಂದರೆ ಆಯಾಯ ವಸ್ತುಗಳಿಗೆ ನಿಯಾಮಕಗಳಾಗಿರುವ ಭಗ ...ದ್ರೂಪಗಳಿಗೆ ವಸ್ತುತಃ ಅತ್ಯಲ್ಪ ಭೇದವೂ ಇಲ್ಲದಿದ್ದರೂ ನಿಯಮ್ಯ ವಸ್ತುಗಳಿಗೆ ಭೇದವಿದ್ದುದರಿಂದ ...ನಭೇದ ಪ್ರಯುಕ್ತವಾಗಿ ಅಜ್ಞರಿಗೆ ಭೇದವುಳ್ಳವನಂತೆ ತೋರುವನು.) ಆ ಪರಬ್ರಹ್ಮನು, ಭೂತ ...ರ್ತೃ=ಸಮಸ್ತ ಪ್ರಾಣಿಗಳನ್ನು ಧರಿಸುವವನು, ಪೋಷಿಸುವವನು, ಗ್ರಸಿಷ್ಣು=ಪ್ರಲಯಕಾಲದಲ್ಲಿ ಸರ್ವ ವಸ್ತುಗಳನ್ನು ಸಂಹರಿಸುವವನು. ಪ್ರಭವಿಷ್ಣು ಚ=ಸೃಷ್ಟಿಕಾಲದಲ್ಲಿ ಸಮಸ್ತ ವಸ್ತುಗಳನ್ನು ಸೃಷ್ಟಿಸು ವವನು. ಇತಿ=ಹೀಗೆ, ಜ್ಞೇಯಂ=ತಿಳಿಯತಕ್ಕದು. ॥ ೧೭ ॥

ಟೀ—ಅನಾದಿಮತ್ಪರಂ ಬ್ರಹ್ಮ (ಶ್ಲೋ. ೧೩) ಎಂಬುವಲ್ಲಿ ಅನಾದಿ ಎಂದಿಷ್ಟೇ ಸಾಕಾಗುವುದ ...ದ ಅನಾದಿಮತ್ ಎಂದು ಹೇಳಿದ್ದು ಏತಕ್ಕೆಂದರೆ—

ಶಾ ॥ (೧) ಅನಾದೀತ್ಯುಕ್ತೇ ಸ್ವಯಂ ಕಾರಣಂ ನ ಭವತೀತ್ಯಾಶಂಕಾ ಸ್ಯಾದಿತಿ ತನ್ನಿವೃತ್ತ್ಯರ್ಥಮನಾದಿಮದಿತ್ಯಾಹ ॥ (೨) ಮುಖ್ಯತೋ ಗುಣಪೂರ್ಣತ್ವಾತ್ಪರಂ ಬ್ರಹ್ಮ ಜನಾರ್ದನಃ । ಮೂರ್ತಾಮೂರ್ತವ್ಯತೀತತ್ವಾನ್ನ ಸನ್ನೈವಾಸದುಚ್ಯತ ಇತಿ ಚ ॥ (೩) ಮೂರ್ತಂ ಸದವಗಮ್ಯತ್ವಾದಜ್ಞೇಯತ್ವಾದಸತ್ಪರಂ । ಪುಂಸಾಮಥ್ಯಾರ್ದಗಮ್ಯತ್ವಾತ್ಸರ್ವವೇದಪ್ರಸಿದ್ಧಿತಃ । ವಿಲಕ್ಷಣಃ ಸದಸತೋರ್ಭಗವಾನ್ವಿಷ್ಣುರವ್ಯಯ ಇತಿ ಚ ॥ ೧೩—೧೭ ॥

ಅ ॥ (೧) ಅನಾದಿ ಎಂದಿಷ್ಟೇ ಹೇಳಿದರೆ ತಾನು ಯಾವುದಕ್ಕೂ ಕಾರಣನಲ್ಲ, ಎಂಬ ಆಶಂಕೆಯು ಬರುವುದು. ಅದನ್ನು ನಿವೃತ್ತಿಗೊಳಿಸುವುದಕ್ಕಾಗಿ ಅನಾದಿಮತ್ ಎಂದು ಹೇಳಿದ್ದಾರೆ. (ಅಂದರೆ ಈ ಶಂಕೆಯ ನಿವೃತ್ತಿಗಾಗಿಯೂ ಉತ್ಪತ್ತಿಯುಳ್ಳ ದೇಹೇಂದ್ರಿಯಾದಿಗಳು ಇಲ್ಲದವನೆಂಬುವ ಅರ್ಥ ವಿಶೇಷವನ್ನು ತಿಳಿಸುವುದಕ್ಕಾಗಿಯೂ ಅನಾದಿಮತ್ ಎಂದು ಹೇಳಿದ್ದಾರೆ.) (೨) (೧೩ನೇ ಶ್ಲೋಕದಲ್ಲಿದ್ದ ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ಎಂಬುವುದಕ್ಕೆ ಪ್ರಮಾಣೋದಾಹರಣಪೂರ್ವಕವಾಗಿ ಅರ್ಥವನ್ನು ಹೇಳುತ್ತಾರೆ—) ಜನಾರ್ದನನು ಮುಖ್ಯವಾಗಿ ಸರ್ವಗುಣಗಳಿಂದ ಪರಿಪೂರ್ಣನಾಗಿರುವುದರಿಂದ ಪರಂಬ್ರಹ್ಮ ಎನಿಸುತ್ತಾನೆ. ಮೂರ್ತ ಅಮೂರ್ತಗಳಿಂದ ವಿಲಕ್ಷಣನಾದುದರಿಂದ ಸತ್‌ಭಿನ್ನನೆಂದೂ ಅಸತ್‌ಭಿನ್ನನೆಂದೂ ಅನಿಸಿಕೊಳ್ಳುತ್ತಾನೆ. (೩) ತಿಳಿಯಲ್ಪಡುವುದರಿಂದ ಮೂರ್ತವು (ಪೃಥಿವೀ ಜಲ ತೇಜಸ್ಸುಗಳು) ಸತ್ ಎನಿಸಿಕೊಳ್ಳುತ್ತವೆ. ಅಮೂರ್ತವು (ವಾಯು ಆಕಾಶಗಳು,) ಬಾಹ್ಯ ಪ್ರತ್ಯಕ್ಷದಿಂದ ತಿಳಿಯಲ್ಪಡ ದಿರುವುದರಿಂದ ಅಸತ್ ಎನಿಸಿಕೊಳ್ಳಲ್ಪಡುತ್ತವೆ. ಷಡ್ಗುಣಪೂರ್ಣನೂ ನಾಶರಹಿತನೂ ಆದ ಶ್ರೀಪರ ಮಾತ್ಮನು ಪುರುಷರ ಸಾಮರ್ಥ್ಯದಿಂದ ತಿಳಿಯಲ್ಪಡದಿರುವುದರಿಂದಲೂ ಸಮಸ್ತ ವೇದಗಳಲ್ಲಿ ಪ್ರಸಿದ್ಧನಾಗಿರುವುದರಿಂದಲೂ ಸದಸತ್ತುಗಳಿಂದ ವಿಲಕ್ಷಣನು ಎಂದು ಅನಿಸಿಕೊಳ್ಳುತ್ತಾನೆ. ॥ ೧೩—೧೭ ॥

ಗೀ ॥ ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।
ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಂ ॥ ೧೮ ॥

ಅ ॥ ತತ್—ಆ ಪರಬ್ರಹ್ಮನು, ಜ್ಯೋತಿಷಾಮಪಿ=ಸೂರ್ಯ ಮೊದಲಾದ ತೇಜಸ್ಸುಗಳಿಗೂ ಜ್ಯೋತಿಃ—ಪ್ರಕಾಶಕ ಶಕ್ತಿಯನ್ನು ಕೊಡುವವನು, ತಮಸಃ=ಸತ್ವರಜಸ್ತಮೋಗುಣಾತ್ಮಕವಾದ ಪ್ರಕೃ...

ಗಿಂತಲೂ. ಮೃತ್ಯುವಿನ ದೆಶೆಯಿಂದಲೂ ಅಥವಾ ಅಜ್ಞಾನದೆಶೆಯಿಂದಲೂ, ಪರಂ — ವಿಭಾರಿದವನೆಂಬ, ಉಚ್ಯತೇ — ತಮಸಃ ಪರಸ್ತಾತ್ ಇದು ಮೊದಲಾದ ವೇದಾದಿಗಳಲ್ಲಿ ಹೇಳಿಸಿಕೊಳ್ಳಲ್ಪಡುತ್ತಾನೆ. (ಅಂದರೆ–ಪ್ರಕೃತಿಬಂಧವಿಲ್ಲದವನು. ಮರಣ ಅಜ್ಞಾನಗಳ ಸಂಬಂಧವೂ ಇಲ್ಲದವನು.) ಜ್ಞಾನಃ= ಪ್ರಕಾಶಸ್ವರೂಪರು. ಜ್ಞೇಯಂ=ತನ್ನಿಂದಲೇ ತಿಳಿಯಲ್ಪಡತಕ್ಕವನು. ಸ್ವಪ್ರಕಾಶನು. (ಅಂದರೆ–ಜೀವ ರಲ್ಲಿ ಸ್ವಪ್ರಕಾಶತ್ವವಿದ್ದರೂ ಅದು ಶ್ರೀಹರಿಯ ಅಧೀನವಾದುದು. ಶ್ರೀಹರಿಯು ಇತರರ ಅಪೇಕ್ಷೆಯಿಲ್ಲ ದೇನೇ ಸ್ವಪ್ರಕಾಶಸ್ವರೂಪನು.) ಜ್ಞಾನಗಮ್ಯಂ=ಅಪರೋಕ್ಷಜ್ಞಾನದಿಂದ ಮೋಕ್ಷದಲ್ಲಿ ಹೊಂದಲ್ಪಡ ತಕ್ಕವನು. ಸರ್ವಸ್ಯ=ಬ್ರಹ್ಮಾದಿ ಎಲ್ಲಾ ಜೀವರ, ಹೃದಿ=ಹೃದಯದಲ್ಲಿಯೂ, ವಿಷ್ಠಿತಂ=ವಿಶೇಷವಾಗಿ ನಿಯಾಮಕನಾಗಿ ಇರುವವನು. ॥ ೧೭ ॥

ಭಾ ॥ (೧) ಸರ್ವೇಂದ್ರಿಯಾಣಿ ಗುಣಾಂಶ್ಚಾಭಾಸಯತೀತಿ ಸರ್ವೇಂದ್ರಿಯಗುಣಾಭಾಸಃ ।
(೨) ಇಂದ್ರಿಯವರ್ಜಿತತ್ವಾದ್ಯರ್ಥ ಉಕ್ತಃ ಪುರಸ್ತಾತ್ ॥ ೧೫—೧೬ ॥

ಅ ॥ (೧) ಸರ್ವೇಂದ್ರಿಯಗುಣಾಭಾಸಂ=ಸಮಸ್ತ ಚಕ್ಷುರಾದಿ ಇಂದ್ರಿಯಗಳೂ, ರೂಪಾದಿಗುಣ ಗಳೂ ಇವುಗಳನ್ನು ತಿಳಿಸುವವನು. ಮತ್ತು ಸಂಪೂರ್ಣ ತಿಳಿಯುವವನು. (೨) ಸರ್ವೇಂದ್ರಿಯವಿವ ರ್ಜಿತಂ ಇತ್ಯಾದಿಗಳಿಗೆ ಪ್ರಾಕೃತ ಇಂದ್ರಿಯಗಳಿಲ್ಲದವನು, ಇತ್ಯಾದಿ ರೂಪವಾದ ಅರ್ಥವು ಮೊದಲೇ ಹೇಳಲ್ಪಟ್ಟಿದೆ. ॥ ೧೫—೧೬ ॥

ಟೀ—ಇದನೇ ಶ್ಲೋಕದಲ್ಲಿದ್ದ ಜ್ಞಾನಗಮ್ಯಂ ಎಂಬುವುದರಿಂದ ಜ್ಞಾನವಿಷಯತ್ವವು ಹೇಳಲ್ಪಟ್ಟಿದೆ, ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ತಾ ॥ (೧) ಜ್ಞಾನೇನ ಮುಕ್ತೌ ಪ್ರಾಪ್ಯತ್ವಾಜ್ಜ್ಞಾನಗಮ್ಯಂ ॥ (೨) ಸ್ವಯಮೇವಾತ್ಮಾನಂ ವೇತ್ತೀತಿ ಸ್ವಜ್ಞೇಯತ್ವಾಜ್ಜ್ಞೇಯಂ ॥ (೩) ಅನ್ಯಜ್ಞೇಯತ್ವಸ್ಯ ಜ್ಞೇಯಃ ಯತ್ತದಿತಿ ಪೂರ್ವಮೇವ ಸಿದ್ಧತ್ವಾತ್ ॥ (೪) ಕರ್ತೃಕರ್ಮವಿರೋಧವಾದಿಮತಃ ನಿರಾಕರೋತ್ಯುಕ್ತರಜ್ಞೇಯಶಬ್ದೇನ ॥ (೫) ಸ್ವವೇತ್ತಾ ವೇದನಂ ಚ ಸ್ವಂ ಸ್ವೇನ ವೇದ್ಯಶ್ಚ ಕೇಶವಃ । ಪರಸ್ಯ ವೇತ್ತಾ ವಿತ್ತಿಶ್ಚ ವೇದ್ಯಶ್ಚ ಸ್ಯಾತ್ಪರೈಃ ಕ್ವಚಿತ್ । ತತ್ಪ್ರಸಾದಂ ವಿನಾ ಶಕ್ತಿರ್ನೈವ(ನಂ) ವೇತ್ತುಂ ಹಿ ಶಕ್ನುಯಾತ್ । ಸ್ವವೇದನೇಽನ್ಯವಿತ್ತ್ವಾ ನಾಸಾವನ್ಯದಪೇಕ್ಷತೇ । ಸ್ವಪ್ರಕಾಶ ಇತಿ ಪ್ರೋಕ್ತಸ್ತೇನೈಷ ಪುರುಷೋತ್ತಮಃ। ಜೀವಾನಾಂ ಸ್ವಪ್ರಕಾಶತ್ವಂ ತತ್ಪ್ರಸಾದಾತ್ಸ್ವವೇದನಮಿತಿ ಚ ॥ ೧೮ ॥

ಅ ॥ (೧) ಅಪರೋಕ್ಷಜ್ಞಾನದಿಂದ ಮೋಕ್ಷದಲ್ಲಿ ಹೊಂದಲ್ಪಡುವುದರಿಂದ ಶ್ರೀಪರಮಾತ್ಮನ ಜ್ಞಾನಗಮ್ಯನು. (೨) ಇದನೇ ಶ್ಲೋಕದಲ್ಲಿದ್ದ ಜ್ಞೇಯಪದದಿಂದ ಇತರರಿಂದ ಜ್ಞೇಯತ್ವವು ಹೇಳಲ್ಪಡುತ್ತದೆ ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—) ತಾನೇ ತನ್ನಿಂದ ತನ್ನನ್ನು ತಿಳಿಯುತ್ತಾನೆ, ಹೀಗೆ ತನ್ನಿಂದ ತಿಳಿಯಲ್ಪಡುವವನಾದುದರಿಂದ ಜ್ಞೇಯನು (೩) (ಬೇರೆಯವರಿಂದ ತಿಳಿಯಲ್ಪಡುವವನೆಂಬುವ ಅರ್ಥವು ಏಕೆ ಆಗಲಾರದೆಂದರೆ—) ಇಲ್ಲಿ ಸ್ವಜ್ಞೇಯತ್ವವೇ ಹೇಳಲ್ಪಡುತ್ತದೆ ಇತರರಿಂದ ಜ್ಞೇಯತ್ವವು ಹೇಳಲ್ಪಡುತ್ತಿಲ್ಲ ಅನ್ಯಜ್ಞೇಯತ್ವವು ಜ್ಞೇಯಂ ಯತ್ತತ್ ಪ್ರವಕ್ಷ್ಯಾಮಿ (೧೨) ಎಂದು ಉಪಕ್ರಮ ವಾಕ್ಯದಲ್ಲಿಯೇ ಹೇಳಿದ್ದರಿಂದ (ಪುನಃ ಹೇಳಿದರೆ ಪುನರುಕ್ತಿದೋಷ ಬ

...ಗುವುದು.) (೪) (ಪರಮಾತ್ಮನು ತನ್ನನ್ನು ತಾನು ತಿಳಿಯುತ್ತಾನೆ, ಎಂಬುವ ಅರ್ಥವನ್ನು ಹೇಳಿ ...ವ ಪರಮಾತ್ಮನ ಸಾಮರ್ಥ್ಯವನ್ನು ಹೇಳಿದಂತೆ ಆಗುವುದು ಹೇಗೆ? ಎಂದರೆ—) ಜ್ಞೇಯಶಬ್ದದಿಂದ ಜ್ಞೇಯಂ ಯತ್ತತ್ ಪ್ರವಕ್ಷ್ಯಾಮಿ ಎಂಬುವ ೧೩ನೇ ಶ್ಲೋಕಕ್ಕಿಂತ ಮೇಲಿನ ೧೨ನೇ ಶ್ಲೋಕದಲ್ಲಿ ...ವ ಜ್ಞೇಯಶಬ್ದದಿಂದ ಸ್ವಜ್ಞೇಯತ್ವವನ್ನು ಹೇಳಿದರೆ ಜ್ಞಾನಕ್ರಿಯೆಯಲ್ಲಿ ವಿರೋಧವು ಬರುತ್ತದೆ, ...ದು ಹೇಳುವ ವಾದಿಗಳ ಮತವನ್ನು ನಿರಾಕರಿಸುತ್ತಾರೆ. (ಅಂದರೆ ಒಂದು ಕ್ರಿಯೆಯಲ್ಲಿ ಒಬ್ಬನಿಗೇನೇ ...ರ್ತೃಕರ್ಮಗಳು ಕೂಡದಿದ್ದರೂ ಪರಮಾತ್ಮನಲ್ಲಿ ಅಘಟಿತಘಟಕವಾದ ಅಚಿಂತ್ಯಶಕ್ತಿ ಐಶ್ವರ್ಯವಿದ್ದುದ ...ಂದ ಶ್ರೀಹರಿಗೆ ತನ್ನ ಜ್ಞಾನದಲ್ಲಿ ಕರ್ತೃಕರ್ಮಭಾವವು ಕೂಡುತ್ತದೆ. ಆದಕಾರಣ ಶ್ರೀಪರಮಾತ್ಮನಿಗೆ ಸಾಮರ್ಥ್ಯವನ್ನು ಹೇಳಿದಂತೆ ಆಯಿತು.) (೫) (ಶ್ರೀಪರಮಾತ್ಮನು ಸ್ವಜ್ಞೇಯನೆಂಬುವಲ್ಲಿ ಪ್ರಮಾಣಾಂತರವನ್ನು ಹೇಳುತ್ತಾರೆ—) ಸ್ವತಂತ್ರವಾಗಿ ತನ್ನನ್ನು ತಿಳಿಯುವವನು ಪರಾನಧೀನವಾದ (ಸ್ವತಂತ್ರವಾದ) ಜ್ಞಾನರೂಪನು. ಶ್ರೀಪರಮಾತ್ಮನು ತನ್ನಿಂದಲೇ ತಾನು ವೇದ್ಯನು. ಮತ್ತು ಪರಮಾತ್ಮನು ಇತರರನ್ನು ಸ್ವತಂತ್ರವಾಗಿ ತಿಳಿಯುತ್ತಾನೆ. ಸರ್ವ ಸ್ವತಂತ್ರ ಜ್ಞಾನರೂಪನು ಇತರರಿಂದ ಕೆಲವು ಕಡೆ ತಿಳಿಯಲ್ಪಡುತ್ತಾನೆ. (ಕ್ವಚಿತ್ ಎಂಬುವುದನ್ನು ವಿವರಿಸುತ್ತಾರೆ-) ಯಾವನೊಬ್ಬನೂ ಶ್ರೀಪರಮಾತ್ಮನ ಅನುಗ್ರಹವಿಲ್ಲದೆ ಶ್ರೀಪರಮಾತ್ಮನನ್ನು ತಿಳಿಯಲಿಕ್ಕೆ ಸಮರ್ಥನಾಗಲಾರನು. (ಪರಮಾತ್ಮನು ಸರ್ವ ಸ್ವತಂತ್ರನಾದುದರಿಂದ) ತನ್ನನ್ನು ತಿಳಿಯುವ ವಿಷಯದಲ್ಲಿಯಾಗಲೀ, ಇತರರನ್ನು ತಿಳಿಯುವ ವಿಷಯದಲ್ಲಿ ಆಗಲೀ ಇತರರನ್ನು ಅಪೇಕ್ಷಿಸುವುದಿಲ್ಲ ಆದುದರಿಂದ ಶ್ರೀಪರಮಾತ್ಮನು ಒಬ್ಬನೇ ಸ್ವಪ್ರಕಾಶನೆಂದು ಹೇಳಿಸಿಕೊಳ್ಳಲ್ಪಡುತ್ತಾನೆ. ಜೀವರಿಗೆ ಇರುವ, ಸ್ವವಿಷಯಜ್ಞಾನರೂಪತ್ವರೂಪವಾದ ಸ್ವಪ್ರಕಾಶತ್ವವು ಶ್ರೀಪರಮಾತ್ಮನ ಪ್ರಸಾದದಿಂದಲೇ, ಸ್ವತಂತ್ರವಾದುದಲ್ಲ. ॥ ೧೮ ॥

ಗೀ ॥ ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।
ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ ೧೯ ॥

ಅ ॥ ಇತಿ = ಹಿಂದೆ ಹೇಳಿದ ಪ್ರಕಾರ, ಕ್ಷೇತ್ರಂ = ಮಹಾಭೂತಾನಿ ಇತ್ಯಾದಿಗಳಿಂದ ಕ್ಷೇತ್ರವೂ, (ಹಾಗೆಯೇ ಇಚ್ಛಾ ಇತ್ಯಾದಿಗಳಿಂದ ಕ್ಷೇತ್ರವಿಕಾರಗಳೂ) ತಥಾ = ಹಾಗೆಯೇ, ಜ್ಞಾನಂ = (ಅಮಾನಿತ್ವಂ ಇತ್ಯಾದಿಗಳಿಂದ ಜ್ಞಾನಸಾಧನವೂ, ತತ್ವಜ್ಞಾನಾರ್ಥದರ್ಶನಂ ಎಂಬುವುದರಿಂದ) ಶ್ರೀಪರಮಾತ್ಮನ ಅಪರೋಕ್ಷಜ್ಞಾನವೂ, ಜ್ಞೇಯಂ ಚ = (ಜ್ಞೇಯಂ ಯತ್ತತ್ ಇತ್ಯಾದಿಗಳಿಂದ) ಮೋಕ್ಷಕ್ಕಾಗಿ ತಿಳಿಯಲು ಅತ್ಯಾವಶ್ಯಕನಾದ ಪರಮಾತ್ಮನೂ ಕೂಡ ಸಮಾಸತಃ = ಸಂಗ್ರಹಿಸಿ, ಉಕ್ತಂ = ಹೇಳಲ್ಪಟ್ಟಿದೆ. ಏತತ್ = ಇವುಗಳನ್ನೆಲ್ಲಾ, ಮದ್ಭಕ್ತಃ = ನನ್ನ ಭಕ್ತನು ವಿಜ್ಞಾಯ = ತಿಳಿದುಕೊಂಡು, ಮದ್ಭಾವಾಯ = ನನ್ನಲ್ಲಿ ಇರುವದಕ್ಕಾಗಿ, (ಮೋಕ್ಷಕ್ಕಾಗಿ) ಅಥವಾ ಸಾಯುಜ್ಯರೂಪವಾದ ಮೋಕ್ಷವನ್ನು ಹೊಂದುವುದಕ್ಕೋಸ್ಕರ ಉಪಪದ್ಯತೇ = ಯೋಗ್ಯನಾಗುತ್ತಾನೆ. (ಅಂದರೆ ಮುಕ್ತನಾಗುತ್ತಾನೆ.) ॥ ೧೯ ॥

ಭಾ ॥ (೧) ವಿಕಾರಾಂತರ್ಭಾವಾಜ್ಜ್ಞಾನಸಾಧನಂ ಪ್ರಥಮತ ಉಕ್ತಂ ॥ (೨) ಬಹು-
ತ್ವಾತ್ಸಾಧನಾತ್ಮುಪಯೋಗಾತ್ತ್ವಭಾವಃ ॥ ೧೯ ॥

ಅ ॥ (೧) ವಿಕಾರಗಳಲ್ಲಿ ಅಂತರ್ಭಾವವನ್ನು ತಿಳಿಸುವುದಕ್ಕಾಗಿ ವಿಕಾರವನ್ನು ಹೇಳಿದ ಮೇಲೆ ಉಪೋದ್ಘಾತಪ್ರಕ್ರಿಯೆಯಿಂದ ಹೇಳಲ್ಪಟ್ಟ ಅಮಾನಿತ್ವ ಮೊದಲಾದ ಜ್ಞಾನಸಾಧನವು ಜ್ಞೇಯನಾದ ಬ್ರಹ್ಮನನ್ನು ಹೇಳುವುದಕ್ಕಿಂತ ಮೊದಲು ಹೇಳಲ್ಪಟ್ಟಿದೆ. (೨) (ಉದ್ದೇಶ ಕ್ರಮವನ್ನನುಸರಿಸಿ ಯತತ್ತ

ಯತ್ ಎಂಬುವುದನ್ನು ಪ್ರಥಮತಃ ಹೇಳದೆ ಸ ಚ ಯಃ । ಯತ್ಪ್ರಭಾವಶ್ಚ ಎಂಬುವುದನ್ನು ಮೊದಲ ಏಕೆ ಹೇಳಿದ್ದೆಂದರೆ—) ಪ್ರಭಾವೋಕ್ತಿಯು ಹೆಚ್ಚು ಇದ್ದ ಪ್ರಯುಕ್ತವೂ (ಅಲೌಕಿಕವಾದ ಪ್ರಭಾವ ಬುದ್ಧಿಯಲ್ಲಿ ಆರೂಢವಾಗಲಿಕ್ಕೆ) ಸಾಧನಗಳು ಅತ್ಯುಪಯುಕ್ತಗಳಾಗಿವೆ, ಎಂದು ತಿಳಿಸುವುದಕ್ಕಾಗಿ ಜ್ಞಾನ ಸಾಧನವನ್ನು ಹೇಳಿದೊಡನೆಯೇ ಅದರ ಪ್ರಸಂಗದಿಂದ ಪ್ರಭಾವವು ಹೇಳಲ್ಪಟ್ಟಿದೆ. ॥ ೧೮ ॥

ಟೀ—ಮದ್ಭಾವಾಯ ನನ್ನಲ್ಲಿ ಐಕ್ಯಹೊಂದುವುದಕ್ಕಾಗಿ ಎಂಬುವ ಅನ್ಯಥಾ ಪ್ರತೀತಿಯ ಹೋಗಲಾಡಿಸುತ್ತಾರೆ—

ತಾ ॥ ಮದ್ಭಾವಾಯ ಮಯಿ ಭಾವಾಯ ॥ ೧೮ ॥

ಅ ॥ ಮದ್ಭಾವಾಯ=ವಿಶೇಷವಾಗಿ ನನ್ನ ಅಧೀನವಾದ ಸ್ಥಿತಿಯನ್ನು ಹೊಂದುವುದಕ್ಕಾಗಿ (ಅಂದರೆ ಮೋಕ್ಷವನ್ನು ಹೊಂದುವುದಕ್ಕಾಗಿ) (ನನ್ನಲ್ಲಿ ಐಕ್ಯಹೊಂದುವುದಕ್ಕಾಗಿ ಎಂದರ್ಥವಲ್ಲ.) ॥ ೧೮

ಟೀ—ಸರ್ವಪ್ರೇರಕನಾದ ಶ್ರೀಪರಮಾತ್ಮನ ಸಾಮರ್ಥ್ಯವನ್ನು ಹೇಳಿದ ಮೇಲೆ ಪ್ರೇರ್ಯವಾದ ವಸ್ತುವನ್ನು ಅವಶ್ಯವಾಗಿ ತಿಳಿಯಬೇಕಾದುದರಿಂದ ಶ್ರೀಪರಮಾತ್ಮನಿಂದ ಪ್ರೇರಿಸಲ್ಪಡುವ ಪುರುಷಾ ರೂಪವಾದ ಕ್ಷೇತ್ರವನ್ನು ಹೇಳುತ್ತಾರೆ—

ಗೀ ॥ ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।
ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ ೨೦ ॥

ಅ ॥ ಪ್ರಕೃತಿಂ=ಮಹಾಭೂತಾನಿ ಇತ್ಯಾದಿಗಳಿಂದ ಹೇಳಲ್ಪಟ್ಟ ೨೪ ತತ್ತ್ವಗಳನ್ನು, ಪುರುಷಂ= ಜೀವನನ್ನು, ಉಭಾವಪಿ=ಇಬ್ಬರನ್ನು, ಅನಾದೀ=ಉತ್ಪತ್ತಿರಹಿತರನ್ನಾಗಿಯೂ ಕಾರಣರಹಿತರನ್ನಾ ಗಿಯೂ, ವಿದ್ಧಿ=ತಿಳಿ. ಪ್ರಕೃತಿಸಂಭವಾನ್=ಪ್ರಧಾನವೇ ಉಪಾದಾನಕಾರಣವಾಗಿ ಉಳ್ಳ, ವಿಕಾ ರಾಂಶ್ಚ=ಹಿಂದೆ ಹೇಳಿದ ಇಚ್ಛೆ ಮೊದಲಾದ ಎಲ್ಲಾ ಪ್ರಕೃತಿ ವಿಕಾರಗಳನ್ನೂ, ಗುಣಾಂಶ್ಚೈವ=ಸತ್ತ್ವಾದಿ ಗುಣಗಳನ್ನೂ ಕೂಡ, ವಿದ್ಧಿ=ತಿಳಿ. (ಅಂತೂ ಈ ಶ್ಲೋಕದಲ್ಲಿ ಶ್ರೀಪರಮಾತ್ಮನು ಹೊರತು ಬೇರೆ ಎಲ್ಲಾ ಪ್ರೇರೇಪಿಸಲ್ಪಡುವ ಚೇತನ ಅಚೇತನ ಪ್ರಪಂಚವು ಉಕ್ತವಾಯಿತು.) ಅಥವಾ ಪ್ರಕೃತಿಂ ಚೇತನಾಚೇತನ ಪ್ರಕೃತಿಗಳನ್ನು. ಪುರುಷಂ=ಜೀವನನ್ನು ಪರಮಾತ್ಮನನ್ನು, ಇಬ್ಬರನ್ನು ಅನಾದಿಗಳನ್ನಾಗಿ ತಿಳಿ. ಇಚ್ಛಾದಿ ವಿಕಾರಗಳನ್ನು ಸತ್ತ್ವಾದಿಗುಣಗಳನ್ನು ಪ್ರಕೃತಿಯೇ ಉಪಾದಾನಕಾರಣಗಳಾಗಿ ಉಳ್ಳವುಗಳನ್ನಾಗಿ ತಿಳಿ ॥ ೨೦ ॥

ಭಾ ॥ (೧) ಯತಶ್ಚ ಯದಿತಿ ವಕ್ತುಂ ಪ್ರಕೃತಿವಿಕಾರಪುರುಷಾನ್ಸಂಕ್ಷಿಪ್ಯಾಹ ॥ (೨) ಗುಣಾಃ ಸತ್ತ್ವಾದಯಃ । ತೇಷಾಮಲ್ಪೋ ವಿಶೇಷೋ ಲಯೋತ್ಸರ್ಗೇ ಇತಿ ವಿಕಾರಾಃ ಪೃಥ- ಗುಕ್ತಾಃ ॥ (೩) ಕಾರ್ಯಾಕಾರ್ಯಗುಣಾಸ್ತಿಸ್ರೋ ಯತಃ ಸ್ವಲ್ಪೋದ್ಭವಾ ಜನಾ- ವಿತಿ ಮಾಧುಚ್ಛಂದಸಶಾಖಾಯಾಂ ॥ ೨೦ ॥

ಅ ॥(೧)ಯತಶ್ಚ ಯತ್ ಎಂದು ಪ್ರತಿಜ್ಞಾತನಾದ ಪ್ರೇರಕನಾದ ಶ್ರೀಪರಮಾತ್ಮನ ಸ್ವರೂಪವನ್ನು ಹೇಳಲಿಕ್ಕೆ (ಆತನಿಂದ ಪ್ರೇರೇಪಿಸಲ್ಪಡುವ, ಧರ್ಮಗಳಿಂದ ಕೂಡಿರುವ ಕ್ಷೇತ್ರವನ್ನು ನಿರೂಪಿಸುವುದು ಅತ್ಯಾವಶ್ಯಕವಾಗಿರುವುದರಿಂದ) ಪ್ರಕೃತಿ,(೨೪ ತತ್ತ್ವಗಳು) ವಿಕಾರ, ಪುರುಷ (ಜೀವ)ರನ್ನು ಸಂಕ್ಷೇಪದಿಂ

ಹೇಳುತ್ತಾರೆ. (ಶ್ರೀಪರಮಾತ್ಮನು ಹೊರತಾದ ಎಲ್ಲಾ ಚೇತನಾಚೇತನ ಸಮುದಾಯವು ಕ್ಷೇತ್ರ ವೆನಿಸುತ್ತದೆ.) ಕ್ಷೇತ್ರದಲ್ಲಿ ಸೇರಿದ ಗುಣತ್ರಯ ಮೊದಲಾದವುಗಳೂ, ಇಚ್ಛಾದಿಗಳೂ, ಎಲ್ಲಾ ವಿಕಾರಗಳೂ ಇವುಗಳನ್ನು ವಿಕಾರಶಬ್ದದಿಂದ ತಿಳಿದುಕೊಳ್ಳಬೇಕು.) ಯಾವತ್ಸಂಜಾಯತೇ ಇತ್ಯಾದಿ ಯಿಂದ ಈ ಪ್ರಕೃತ್ಯಾದಿಗಳನ್ನೇ ಮುಂದಕ್ಕೆ ವಿವರಿಸಿ ಹೇಳುವರು) (ಆದಕಾರಣ ಈಗ ಸಂಕ್ಷೇಪದಿಂದ ಹೇಳಿದ್ದು.) (೨) (ಕೆಲವರು ಸುಖ ದುಃಖ ಮೋಹಗಳು ಗುಣಗಳೆಂದು ಹೇಳುವರು. ಗುಣಗಳನ್ನು ಕಾರ್ಯ ಕಾರಣ ರೂಪಗಳೆಂದು ಇತರರು ಹೇಳುವರು. ಈ ಎರಡನ್ನು ನಿರಾಕರಿಸುತ್ತಾ ಸರಿಯಾದ ಅರ್ಥವನ್ನು ಹೇಳುತ್ತಾರೆ—) ಗುಣಾಃ = ಸತ್ವರಜಸ್ತಮೋಗುಣಗಳು. (ಸತ್ವರಜಸ್ತಮೋಗುಣಗಳೂ, ಪ್ರಕೃತಿವಿಕಾರ ಗಳಾಗಿರುವುದರಿಂದ ವಿಕಾರದಲ್ಲಿಯೇ ಗುಣಗಳು ಸೇರುವುವರಿಂದ ವಿಕಾರಾಂಶ್ಚ ಗುಣಾಂಶ್ಚ ಎಂದು ಪ್ರತ್ಯೇಕ ಗುಣಗಳನ್ನು ಹೇಳಿದ್ದು ಏಕೆ ಎಂದರೆ-) ಆ ಸತ್ವಾದಿಗುಣಗಳಿಗೆ ಪ್ರಲಯಕಾಲಕ್ಕಿಂತ ಮೊದಲು ಸೃಷ್ಟಿಕಾಲದಲ್ಲಿ ಇಚ್ಛಾದಿಗಳಂತೆ ಸ್ವರೂಪೋತ್ಪತ್ತಿಯಿಲ್ಲದೆ ಅತ್ಯಲ್ಪ ಉತ್ಪತ್ತಿರೂಪವಾದ ವಿಶೇಷವಿರುವುದ ರಿಂದ ಇಚ್ಛಾದಿರೂಪವಿಕಾರಗಳಿಂದ ಪ್ರತ್ಯೇಕ ಹೇಳಿದ್ದು. (೩) ಯಾವ ಕಾರಣದಿಂದ ಸೃಷ್ಟಿಕಾಲದಲ್ಲಿ ಸತ್ವಾದಿ ಮೂರು ಗುಣಗಳು ಕಾರ್ಯಗಳೆಂದೂ, ಅಕಾರ್ಯಗಳೆಂದೂ, ಅನ್ನಿಸಿಕೊಳ್ಳುತ್ತವೆ. ಏಕೆಂದರೆ ಸೃಷ್ಟಿಕಾಲದಲ್ಲಿ ಸ್ವಲ್ಪ ಉತ್ಪತ್ತಿಯುಳ್ಳವುಗಳು. (ಅಂದರೆ ಸೃಷ್ಟಿಕಾಲದಲ್ಲಿ ಮಹಾ ಭೂತಾದಿಗಳಿಗಿಂತ ಅಲ್ಪ ಉಪಚಯ ರೂಪವಾದ ಸ್ವಲ್ಪ ಉತ್ಪತ್ತಿಯಿರುವುದರಿಂದ ಕಾರ್ಯತ್ವವು. ಬಹು ಉಪಚಯವಿಲ್ಲದಿರು ವುದರಿಂದ ಅಕಾರ್ಯತ್ವವು, ಎಂದು ಮಾಧುಚ್ಛಂದಸ ಶಾಖೆಯಲ್ಲಿ ಹೇಳಿದೆ. ‖ ೨೦ ‖

ಪೀ – ಇಚ್ಛಾದಿವಿಕಾರಗಳೆಲ್ಲವೂ ಪ್ರಕೃತಿಯಿಂದಲೇ ಹುಟ್ಟಿದವುಗಳೆಂಬುದನ್ನು ವಿವರಿಸುತ್ತಾರೆ—

**ಗೀ ‖ ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ‖ ೨೧ ‖**

ಅ ‖ ಕಾರ್ಯಕಾರಣಕರ್ತೃತ್ವೇ = ಜೀವನ ದೇಹ, ಇಂದ್ರಿಯ ಇವುಗಳನ್ನು ಸೃಷ್ಟಿ ಮಾಡುವ ವಿಷಯದಲ್ಲಿ, ಪ್ರಕೃತಿಃ = ಚಿತ್ಪ್ರಕೃತಿಯು, ಹೇತುಃ = ಕಾರಣವೆಂದು, ಉಚ್ಯತೇ = ಹೇಳಲ್ಪಡುತ್ತದೆ. ಸುಖ ದುಃಖಾನಾಂ ಭೋಕ್ತೃತ್ವೇ = ಪ್ರಕೃತಿವಿಕಾರಗಳಾದ ಸುಖ ದುಃಖಗಳನ್ನು ತನ್ನದ್ದಾಗಿ ಜೀವನು ಭೋಗಿ ಸುವ ವಿಷಯದಲ್ಲಿ, ಪುರುಷಃ = ಶ್ರೀಪರಮಾತ್ಮನು, ಹೇತುಃ = ಕಾರಣನೆಂದು, ಉಚ್ಯತೇ = ಹೇಳಲ್ಪಡುತ್ತಾನೆ.

ವಿ ‖ (1) ಶ್ರೀಪರಮಾತ್ಮನು ಸರ್ವಕರ್ತೃ ಕಾರಣನಾಗಿರುವುದರಿಂದ ಜೀವರ ದೇಹ ಇಂದ್ರಿಯಗಳನ್ನು ಮಾಡುವ ವಿಷಯದಲ್ಲಿಯೂ ಕಾರಣನಾಗಿರುತ್ತಾನೆ. ಹಾಗೆಯೇ ಲಕ್ಷ್ಮೀದೇವಿಯು ಜೀವರಿಗೆ ಸುಖ ದುಃಖ ಭೋಗಗಳನ್ನು ಕೊಡಲಿಕ್ಕೆ ಕಾರಣಳಾಗಿರುತ್ತಾಳೆ. ಹೀಗೆ ಇರಲು ಕಾರ್ಯಕಾರಣ ಕರ್ತೃತ್ವ ದಲ್ಲಿ ಪ್ರಕೃತಿಯು ಕಾರಣಳೆಂದೂ ಜೀವನು ಸುಖ ದುಃಖಗಳನ್ನು ಭೋಗಿಸುವ ವಿಷಯದಲ್ಲಿ ಶ್ರೀಪರ ಮಾತ್ಮನು ಕಾರಣನೆಂದೂ, ವಿಶಿಷ್ಟ ಹೇಳಿದ್ದು ಹೇಗೆ? ಎಂದರೆ-ಲಕ್ಷ್ಮೀದೇವಿಗೆ ಸುಖ ದುಃಖಗಳ ಭೋಗ ವನ್ನು ಕೊಡುವ ವಿಷಯದಲ್ಲಿ ಅಲ್ಪ ಪ್ರವೃತ್ತಿಯು. ಕಾರ್ಯಕಾರಣ ಕರ್ತೃತ್ವದಲ್ಲಿ ಭೋಗವನ್ನು ಕೊಡುವ ಪ್ರವೃತ್ತಿಗಿಂತ ಹೆಚ್ಚು ಪ್ರವೃತ್ತಿಯು. ಆದಕಾರಣ ಕಾರ್ಯಕಾರಣ ಕರ್ತೃತ್ವದಲ್ಲಿ ಲಕ್ಷ್ಮೀಯು ಕಾರಣಳೆಂದೂ, ಜೀವನಿಗೆ ಸುಖ ದುಃಖಗಳ ಭೋಗವನ್ನು ಕೊಡುವ ವಿಷಯದಲ್ಲಿ ಪರಮಾತ್ಮನು ಕಾರಣ ನೆಂದೂ, ವಿಶಿಷ್ಯ ಹೇಳಿದ್ದು ಕೂಡುತ್ತದೆ. (2) ಅಥವಾ ದೇಹೇಂದ್ರಿಯಗಳ ಪರಿಣಾಮ ಕ್ರಿಯೆಯಲ್ಲಿ ಜಡ ಪ್ರಕೃತಿಯು ಕಾರಣವು. ಸುಖ ದುಃಖಗಳನ್ನು ಅನುಭವಿಸಲಿಕ್ಕೆ ಜೀವನು ಕರ್ತನು. ‖ ೨೧ ‖

ಟೀ—ಪ್ರಕೃತಿಂ ಪುರುಷಂ ಚ ಎಂಬುವ ಉಕ್ತಿಯಿಂದಲೇ ಉಭೌ ಎಂದು ಸಿದ್ಧಿಸುವುದರಿಂದ ಉಭೌ ಎಂದು ಪುನಃ ಹೇಳಿದ್ದು ಏತಕ್ಕೆಂದರೆ—

ತಾ ॥ (೧) ಪ್ರಕೃತಿಂ ಪುರುಷಂ ಚೇತ್ಯತ್ರ ಪುರುಷಶಬ್ದೇನ ಜೀವಪರಯೋಃ ಪ್ರಕೃತಿಶಬ್ದೇನ ಚೇತನಾಚೇತನಪ್ರಕೃತ್ಯೋಃ ಸ್ವೀಕಾರಾಯೋಭಾವಪೀತಿ ॥ (೨) ವಿಕಾರಾಣಾಂ ಸತ್ತ್ವಾದೀನಾಂ ಚೋಪಾದಾನತ್ವವಿವಕ್ಷಯಾ ಪ್ರಕೃತಿಸಂಭವತ್ವಂ ॥ (೩) ಸ್ವಾತಂತ್ರ್ಯಂ ತು ಪರಮೇಶ್ವರ(ಮ)ಸ್ಯೈವ । ಉಪದ್ರಷ್ಟಾಽನುಮಂತಾ ಚೇತ್ಯಾದಿ ವಕ್ಷ್ಯಮಾಣತ್ವಾತ್ ॥ (೪) ಗುಣಾನಾಂ ಚ ವಿಕಾರತ್ವೇಽಪ್ಯಧಿಕವಿಕಾರತ್ವಾಪೇಕ್ಷಯಾನ್ಯೇಷಾಂ ವಿಕಾರಾಂಶ್ಚ ಗುಣಾಂಶ್ಚೇತಿ ಪೃಥಗುಕ್ತಿಃ ॥ ೧ ॥

ಅ ॥ (೧) ಪ್ರಕೃತಿಂ ಪುರುಷಂ ಚ (ಶ್ಲೋ. ೨೦) ಎಂಬುವಲ್ಲಿ ಪುರುಷ ಶಬ್ದದಿಂದ ಜೀವನನ್ನೂ ಪರಮಾತ್ಮನನ್ನೂ, ಪ್ರಕೃತಿ ಶಬ್ದದಿಂದ ಚೇತನ ಅಚೇತನ ಪ್ರಕೃತಿಗಳನ್ನು ಇಟ್ಟುಕೊಳ್ಳಬೇಕೆಂದು ತಿಳಿಸುವುದಕ್ಕಾಗಿ ಉಭೌ ಎಂದು ಹೇಳಿದ್ದು. (೨) (ವಿಕಾರಾಂಶ್ಚ ಗುಣಾಂಶ್ಚ (ಶ್ಲೋ. ೨೦) ಎಂಬುವಲ್ಲಿ ವಿಕಾರಾದಿಗಳಿಗೆ ಪ್ರಕೃತಿಯು ಸ್ವತಂತ್ರಕಾರಣವು, ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—) ಇಚ್ಛಾದಿ ವಿಕಾರಗಳಿಗೂ, ಸತ್ವಾದಿಗುಣಗಳಿಗೂ ಪ್ರಕೃತಿಯು ಉಪಾದಾನಕಾರಣವು ಎಂಬುವ ಅಭಿಪ್ರಾಯದಿಂದ ವಿಕಾರಗಳೂ ಸತ್ವಾದಿಗುಣಗಳೂ ಪ್ರಕೃತಿಯಿಂದ ಹುಟ್ಟಿದವುಗಳೆಂದು ಹೇಳಿದೆ. (೩) (ಪ್ರಕೃತಿಯು ಸ್ವತಂತ್ರಕಾರಣವೆಂದು ಏಕೆ ಹೇಳಬಾರದು ಎಂದರೆ—) ಸರ್ವಕ್ಕೂ ಸ್ವತಂತ್ರಕಾರಣನು ಪರಮಾತ್ಮನೊಬ್ಬನೇ. ಏಕೆಂದರೆ—ಉಪದ್ರಷ್ಟಾ ಅನುಮಂತಾ ಚ (ಶ್ಲೋ. ೨೩ರಲ್ಲಿ) ಪರಮಾತ್ಮನಿಗೇನೇ ಸರ್ವ ಸ್ವಾತಂತ್ರ್ಯವನ್ನು ಹೇಳುವುದರಿಂದ ಪ್ರಕೃತಿಗೆ ಸ್ವತಂತ್ರಕಾರಣತ್ವವಿಲ್ಲ. ಉಪಾದಾನ (ಪರಿಣಾಮ) ಕಾರಣತ್ವವೇ. (೪) (ಇಚ್ಛಾದಿಗಳಂತೆಯೇ ಸತ್ವಾದಿಗುಣಗಳೂ ವಿಕಾರಗಳಾಗಿರುವುದರಿಂದ ವಿಕಾರಾಂಶ್ಚ ಗುಣಾಂಶ್ಚ ಎಂದು ಪ್ರತ್ಯೇಕ ಹೇಳಲಿಕ್ಕೆ ಕಾರಣವೇನು? ಎಂದರೆ—) ಸತ್ವಾದಿಗುಣಗಳು ವಿಕಾರಗಳಾದಾಗ್ಯೂ ಸತ್ವಾದಿಗುಣಗಳಲ್ಲಿ ಅಲ್ಪ ವಿಕಾರಗಳು, ಇಚ್ಛಾದಿಗಳಲ್ಲಿ ಅಧಿಕ ವಿಕಾರಗಳು ಈ ಅಭಿಪ್ರಾಯದಿಂದ ವಿಕಾರಾಂಶ್ಚ ಗುಣಾಂಶ್ಚ ಎಂದು ಪ್ರತ್ಯೇಕ ಹೇಳಿದ್ದು … ॥ ೧ ॥

ಟೀ—ಕಾರ್ಯಕಾರಣಕರ್ತೃತ್ವೇ (ಶ್ಲೋ. ೨೧) ಎಂಬುವ ಶ್ಲೋಕವು ಜಡಪ್ರಕೃತಿ ಜೀವವಿಷಯಕಮಾತ್ರವಲ್ಲ. ಮತ್ತೆ ಲಕ್ಷ್ಮೀ, ಪರಮಾತ್ಮವಿಷಯಕವೂ ಆಗಿದೆ, ಎಂಬುವ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—

ತಾ ॥ (೧) ಸ್ವದೇಹೇಂದ್ರಿಯಹೇತುತ್ವಂ ಯಜ್ಜೀವಸ್ಯ ಸ್ವಕರ್ಮಭಿಃ । ಅವ್ಯಕ್ತವಿಷ್ಣುತತ್ಸ್ತ್ರೀ ತದ್ಧೇತುಸ್ತ್ವಿತಿ ಪ್ರಕೃತಿರ್ಮತಾ ॥ (೨) ಜೀವಸ್ಯ ಸುಖದುಃಖಾನಾಂ ಭೋಗಕರ್ತೃತ್ವಪ್ರದಃ ಸದಾ । ಪರಮಃ ಪುರುಷೋ ವಿಷ್ಣುಃ ॥ (೩) ಸರ್ವಕರ್ತಾಽಪಿ ಸನ್ಸದಾ । ವಿಶೇಷಕರ್ತಾ ಕೇಷಾಂಚಿದುಕ್ತ್ಯಾ ಯದ್ವದ್ವಿಶಾಂಪತಿಃ । ಉಚ್ಯತೇ ಸರ್ವಪಾಲೋಽಪಿ ವಿಶೇಷೇಣ ಸ್ವ(ಸ)ಕರ್ಮಣೇತಿ ಚ । (೪) ಪರಮೇಶ್ವರಸ್ಯೈವ ಸರ್ವಕರ್ತೃತ್ವೇ ಭೋಕ್ತೃತ್ವದಾನೇ ದೇವ್ಯಾ ಅಲ್ಪತ್ವವ ತ್ವಿರಿತಿ ದರ್ಶಯಿತುಮುಕ್ತತ … ಮೋಕ್ಷಪ್ರದತ್ವೇ ॥ (೫) ತತ್ಕರ್ತೃತ್ವೇಽಪಿ ಸ ಏವ ಮುಖ್ಯತಃ । ತಥಾಽಪಿ ಭೋಕ್ತೃ…

**ಪ್ಯಪೇಕ್ಷಯಾ ತಸ್ಯಾ ಅಧಿಕಪ್ರವೃತ್ತಿರಿತಿ ಕರ್ತೃತ್ವೇ ಹೇತುಃ ಪ್ರಕೃತಿರುಚ್ಯತ ಇತಿ ಸರ್ವಹೇತುತ್ವೇಽಪಿ ವಿಷ್ಣೋಃ ಪ್ರಕೃತೇರ್ಜೀವಂ ಪ್ರತಿ ಭೋಕ್ತೃತ್ವದಾನೇಽಲ್ಪಪ್ರವೃತ್ತಿರಿತಿ ಪುರುಷೋ ಭೋಕ್ತೃತ್ವೇ ಹೇತುರುಚ್ಯತ ಇತಿ ವಿಶೇಷಹೇತೋರೇವಮುಕ್ತಿಃ (ತ ಏವ) | ಮುಖ್ಯತಸ್ತು, ಸರ್ವಹೇತುತ್ವಂ ವಿಷ್ಣೋರೇವೇತಿ ಭಾವಃ || (೬) ಪುರುಷಃ ಪ್ರಕೃತಿಸ್ಥ ಇತ್ಯತ್ರ ಪುರುಷಶಬ್ದೋ ಜೀವೇ | ಉಭಯೋರಪಿ ಪುರುಷಶಬ್ದೇನ ಪೂರ್ವಂ ಪ್ರಸ್ತುತತ್ವಾತ್ | ಯಥಾಯೋಗ್ಯಮುಪಪತ್ತೇಃ || ೨ || || ೨೧ ||**

ಅ || (೧) ಪೂರ್ವದಲ್ಲಿಯೇ ತನ್ನಿಂದ (ಜೀವನಿಂದ) ಸಂಪಾದಿಸಲ್ಪಟ್ಟ ಸಂಸಾರಬಂಧಕ ಕರ್ಮಗಳಿಂದ ತನ್ನ ಶರೀರ ಇಂದ್ರಿಯಗಳನ್ನು ಕುರಿತು ಜೀವನಿಗೆ ಕಾರಣತ್ವವಿದೆ, ಎಂಬುವ ವಿಷಯದಲ್ಲಿ ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯು ಜೀವನಿಗೆ ವಿಷ್ಣುವಿನ ಸ್ವಭಾವತಃ ಇರುವ ಸ್ಥಿತಿಯನ್ನು ತಿಳಿಸದೆ, ಕಾರಣಳಾಗಿರುತ್ತಾಳೆ. (೨) ಸರ್ವೋತ್ತಮನಾದ ಗುಣಪೂರ್ಣನಾದ ಶ್ರೀಪರಮಾತ್ಮನು ಜೀವರಿಗೆ ಸುಖದುಃಖಗಳ ಭೋಗಶಕ್ತಿಯನ್ನು ಸದಾ ಕೊಡುವವನು. (೩) (ಶ್ರೀಪರಮಾತ್ಮನೇ ಸರ್ವಕರ್ತೃ [illegible]ದರಿಂದ ಜೀವರಿಗೆ ಭೋಗಶಕ್ತಿಯನ್ನು ಕೊಡುವವನೆಂದು ವಿಶಿಷ್ಯ ಹೇಳಿದ್ದು ಹೇಗೆ? ಎಂದರೆ ) ಶ್ರೀಪರಮಾತ್ಮನು ಎಲ್ಲರನ್ನು ರಕ್ಷಿಸುವವನಾದಾಗ್ಯೂ ವೈಕುಂಠಕ್ಕೆ ಮುಕ್ತರ ಪಾಲಕನು [illegible]ದರಿಂದ ವೈಕುಂಠಪ ಎಂದು ವಿಶಿಷ್ಯ ಶ್ರೀಪರಮಾತ್ಮನು ಹೇಗೆ ಹೇಳಿಸಿಕೊಳ್ಳಲ್ಪಡುತ್ತಾನೋ, ಹಾಗೆಯೇ ಶ್ರೀಪರಮಾತ್ಮನು ಸರ್ವಕರ್ತನಾದಾಗ್ಯೂ ಭೋಕ್ತೃತ್ವ ಮೊದಲಾದವುಗಳಿಗೆ ವಿಶೇಷ ಕಾರಣನಾದುದರಿಂದ ವಿಶೇಷಕಾರಣನೆಂದು ವಿಶೇಷವಾದ ತನ್ನ ಪ್ರೇರಣಾದಿರೂಪವಾದ ವ್ಯಾಪಾರದಿಂದಲೇ ಹೇಳಲ್ಪಡುತ್ತಾನೆ (೪) [illegible] ಪರಮಾತ್ಮನಿಗೆ ಕಾರ್ಯಕಾರಣ ಕರ್ತೃತ್ವದಲ್ಲಿ ಹೇತುತ್ವವಿದ್ದರೂ, ಜೀವರಿಗೆ ಸುಖದುಃಖಾದಿರೂಪವಾದ ಭೋಗವನ್ನು ಕೊಡಲಿಕ್ಕೆ ಲಕ್ಷ್ಮೀದೇವಿಗೆ ಅಲ್ಪ ಪ್ರವೃತ್ತಿಯು, ಅದಕ್ಕಿಂತ ಕಾರ್ಯಕಾರಣ ಕರ್ತೃತ್ವದಲ್ಲಿ ಹೆಚ್ಚು ಪ್ರವೃತ್ತಿಯು. ಆದಕಾರಣ ಲಕ್ಷ್ಮೀದೇವಿಯು ಕಾರ್ಯಕಾರಣ ಕರ್ತೃತ್ವದಲ್ಲಿ ಕಾರಣಳೆಂದು ಹೇಳಿದ್ದು ಯುಕ್ತವು. ಹಾಗೆಯೇ ಶ್ರೀಪರಮಾತ್ಮನಿಗೆ ಸರ್ವ ಕರ್ತೃತ್ವವಿದ್ದರೂ, ವಿಶಿಷ್ಯ ಭೋಕ್ತೃತ್ವವನ್ನು ಶ್ರೀಪರಮಾತ್ಮನು ಕೊಡುತ್ತಾನೆಂದು ಹೇಳಿದ್ದು ಯುಕ್ತವು. ಭೋಕ್ತೃತ್ವವನ್ನು ಕೊಡಲಿಕ್ಕೆ ಲಕ್ಷ್ಮೀದೇವಿಗೆ ಅಲ್ಪ ಪ್ರವೃತ್ತಿಯು. ಶ್ರೀಪರಮಾತ್ಮನಿಗೇನೇ ಹೆಚ್ಚು ಪ್ರವೃತ್ತಿಯು, ಎಂದು ಸೂಚಿಸುವುದಕ್ಕಾಗಿ ಈ [illegible] ಪೂರ್ವಾರ್ಧದಲ್ಲಿಯೂ ಉತ್ತರಾರ್ಧದಲ್ಲಿಯೂ ಉಚ್ಯತೇ ಎಂದು ಹೇಳಿದ್ದು. (೫) (ಈ ಅರ್ಥವು [illegible] ಹೇಗೆ ಸಿದ್ಧವಾಯಿತೆಂದರೆ—) ಭೋಕ್ತೃತ್ವದಂತೆ ಕರ್ತೃತ್ವದಲ್ಲಿಯೂ ಸಹ ಶ್ರೀಪರಮಾತ್ಮನೇ [illegible] ಕಾರಣನು. ಆದರೂ ಜೀವರಿಗೆ ಭೋಕ್ತೃತ್ವವನ್ನು ಕೊಡುವ ಪ್ರವೃತ್ತಿಗಿಂತ ಲಕ್ಷ್ಮೀದೇವಿಗೆ [illegible] ಕರ್ತೃತ್ವದಲ್ಲಿ ಹೆಚ್ಚು ಪ್ರವೃತ್ತಿಯು ಇದೆ. ಆದಕಾರಣ ಲಕ್ಷ್ಮೀದೇವಿಯು ಕಾರ್ಯಕಾರಣ ಕರ್ತೃತ್ವದಲ್ಲಿ ಕಾರಣಳೆಂದು ಹೇಳಲ್ಪಡುತ್ತಾಳೆ. ಹಾಗೆ ಶ್ರೀವಿಷ್ಣುವು ಸರ್ವಕರ್ತೃ ಕಾರಣನಾದಾಗ್ಯೂ ಜೀವನಿಗೆ [illegible] ಕೊಡಲಿಕ್ಕೆ ಲಕ್ಷ್ಮೀದೇವಿಗೆ ಅಲ್ಪ ಪ್ರವೃತ್ತಿಯು. ಶ್ರೀಪರಮಾತ್ಮನು ಭೋಕ್ತೃತ್ವ [illegible] ಕಾರಣನು ಈ ಅರ್ಥವು [illegible] ಹೀಗೆ ಹೇಳಿದ್ದು. ಮುಖ್ಯವಾಗಿ ಶ್ರೀವಿಷ್ಣುವೇ ಸರ್ವ [illegible] ಎಂದು ಭಾವವು. (೬) ಪುರುಷಃ ಪ್ರಕೃತಿಸ್ಥಃ (ಶ್ಲೋ [illegible]) [illegible] ಶ್ರೀಪರಮಾತ್ಮನು ಹೇಳಿಸಿಕೊಳ್ಳಲ್ಪಡುತ್ತಾನೆ, ಎಂಬ [illegible] ಪುರುಷಃ ಪ್ರಕೃತಿಸ್ಥಃ ಎಂಬಲ್ಲಿ [illegible] (ಶ್ಲೋ [illegible]) ಎಂಬಲ್ಲಿ [illegible] ಶ್ರೀಪರಮಾತ್ಮನ [illegible] [illegible] ಶ್ರೀಪರಮಾತ್ಮನ [illegible]

ಅದರೂ ಪ್ರಕೃತಿಂ ಪುರುಷಂ ಚ ಎಂಬುವಲ್ಲಿ ಪುರುಷ ಶಬ್ದದಿಂದ ಪರಮಾತ್ಮನಂತೆ ಜೀವನೂ ಪ್ರಸ್ತುತನಾಗಿದ್ದಾನೆ. ಆದಕಾರಣ ಪುರುಷಃ ಪ್ರಕೃತಿಸ್ಥಃ ಎಂಬುವಲ್ಲಿ ಪುರುಷ ಶಬ್ದದಿಂದ ಜೀವನನ್ನು ತೆಗೆದುಕೊಳ್ಳುವುದು ಯುಕ್ತವು (ಜೀವನು ಪ್ರಸ್ತುತನಾದಾಗ್ಯೂ ಸವಿಧಪದಲ್ಲಿ ಪ್ರಸ್ತುತನಾದ ಪರಮಾತ್ಮನನ್ನು ಬಿಟ್ಟು ದೂರದಲ್ಲಿ ಪ್ರಸ್ತುತನಾದ ಜೀವನನ್ನು ತೆಗೆದುಕೊಳ್ಳುವುದು ಯುಕ್ತವಲ್ಲ ಎಂದರೆ—) (ಪರಮಾತ್ಮನು ಸವಿಧಪದಲ್ಲಿ ಪ್ರಸ್ತುತನಾದಾಗ್ಯೂ ಅದನ್ನು ಬಿಟ್ಟು ದೂರ ಪ್ರಸ್ತುತನಾದ ಜೀವನನ್ನು ತೆಗೆದುಕೊಳ್ಳುವುದು ಯುಕ್ತವು. ಏಕೆಂದರೆ ಪ್ರಕೃತಿಯುಂದುಂಟಾದ ಗುಣಗಳನ್ನು ಭೋಗಿಸುವವನೆಂದು ತೋರುತ್ತದೆ ಪರಮಾತ್ಮನಿಗೆ ಅದು ಸರ್ವಥಾ ಕೂಡಲಾರದು. ಜೀವನಿಗೆ ಆ ಭೋಗವು ಕೂಡುತ್ತದೆ ಆದಕಾರಣ ಅರ್ಥವು ಯೋಗ್ಯವಾಗುವಂತೆ ಹೇಳುವುದು ಯುಕ್ತವು. ॥ ೨೧ ॥

ಟೀ—ಪ್ರಕೃತಿಯಿಂದ ಮಾಡಲ್ಪಟ್ಟ ದೇಹ ಇಂದ್ರಿಯಗಳ ಸಂಬಂಧದಿಂದ ಜೀವನು ಸುಖದುಃಖಗಳನ್ನು ಭೋಗಿಸುವವನು. ಲಕ್ಷ್ಮೀನಾರಾಯಣರು ಜೀವರಿಗೆ ನಿಯಾಮಕರು. ಎಂದು ಹೇಳಿದ್ದು ಅಯುಕ್ತವು ಏಕೆಂದರೆ – ದೇಹಾದಿಗಳ ಸಂಬಂಧಾದಿಗಳು ಮಿಥ್ಯೆಯಾಗಿವೆ, ಎಂದರೆ-

**ಗೀ॥ ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥ ೨೨ ॥**

ಅ॥ ಪುರುಷಃ—ಜೀವನು, ಪ್ರಕೃತಿಸ್ಥಃ—ಪ್ರಕೃತಿಯಿಂದುಂಟಾದ ದೇಹಾದಿಗಳಲ್ಲಿ ಇದ್ದು, ಪ್ರಕೃತಿಜಾನ್ ಗುಣಾನ್—ಪ್ರಕೃತಿಯಿಂದ ಹುಟ್ಟಿದ ಸುಖ ದುಃಖಾದಿಗಳನ್ನು, ಭುಂಕ್ತೇ—ಅನುಭವಿಸುತ್ತಾನೆ. ಹಿ—ಈ ವಿಷಯವು ಸರ್ವರಿಗೂ ಅನುಭವ ಸಿದ್ಧವು. (ಶುದ್ಧನಾದ ಜೀವನು ಪ್ರಕೃತಿಯಲ್ಲಿರಲಿಕ್ಕೆ ಕಾರಣವೇನು? ಎಂದರೆ—) ಅಸ್ಯ—ಈ ಜೀವನಿಗೆ, ಸದಸದ್ಯೋನಿಜನ್ಮಸು—ನಿರ್ದುಷ್ಟಯೋನಿ, ದುಷ್ಟಯೋನಿಗಳಲ್ಲಿ ಉತ್ಪತ್ತಿಯಲ್ಲಿ, ಗುಣಸಂಗಃ—ಸತ್ವಾದಿ ಗುಣಗಳ ಸಂಬಂಧವು, ಕಾರಣಂ—ಕಾರಣವು. ॥ ೨೨ ॥

ಟೀ—ಕಾರ್ಯಕಾರಣ ಶಬ್ದಗಳ ಅರ್ಥವನ್ನು ಹೇಳುತ್ತಾರೆ—

**ಭಾ॥ (೧) ಕಾರ್ಯಂ ಶರೀರಂ । ಶರೀರಂ ಕಾರ್ಯಮುಚ್ಯತ ಇತ್ಯಭಿಧಾನಂ । ಕಾರಣಾನೀಂದ್ರಿಯಾಣಿ ॥ (೨) ಭೋಗೋಽನುಭವಃ । ಸ ಹಿ ಚಿದ್ರೂಪತ್ವಾದನುಭವಃ । ಪ್ರಕೃತಿಶ್ಚ ಜಡತ್ವಾತ್ಪರಿಣಾಮಿನೀ ॥ (೩) ಕಾರ್ಯಕಾರಣಕರ್ತೃತ್ವೇ ಕಾರಣಂ ಪ್ರಕೃತಿಂ ವಿದುಃ । ಭೋಕ್ತೃತ್ವೇ ಸುಖದುಃಖಾನಾಂ ಪುರುಷಂ ಪ್ರಕೃತೇಃ ಪರಮಿತಿ ಭಾಗವತೇ ॥ ೨೧,೨೨ ।**

ಅ॥ (೧) ಕಾರ್ಯಂ—ಶರೀರವು. ಶರೀರವು ಕಾರ್ಯವೆನಿಸುತ್ತದೆ ಎಂದು ಅಭಿಧಾನವು. ಕಾರಣಾನಿ—ಚಕ್ಷುರಾದಿ ಇಂದ್ರಿಯಗಳು ಭೋಗಃ—ತನ್ನದೆಂಬುವ ಸಾಕ್ಷಾತ್ಕಾರವು. (ಭೋಗವು ಪ್ರಕೃತಿಗೇನೇ ಪುರುಷನಿಗೆ ಭೋಗವಿಲ್ಲ. ಆದಕಾರಣ ಪುರುಷಃ ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ಎಂದದ್ದು ಹೇಗೆ? ಎಂದು ಸಾಂಖ್ಯರು ಹೇಳುವುದನ್ನು ನಿರಾಕರಿಸುತ್ತಾರೆ) ಜೀವನು ಚಿದ್ರೂಪನಾದುದರಿಂದ ಸುಖದುಃಖಗಳನ್ನು ಭೋಗಿಸುತ್ತಾನೆ (ಜಡಪ್ರಕೃತಿಯು ಅಚೇತನವಾಗಿರುವುದರಿಂದ ಸುಖದುಃಖಗಳನ್ನು ಅನುಭವಿಸುವುದಿಲ್ಲ) ಪ್ರಕೃತಿಗೆ ಭೋಗವು ಏಕೆ ಇಲ್ಲ ಎಂದರೆ ಪ್ರಕೃತಿಯು ಜಡವಾಗಿರುವುದರಿಂದ ಪರಿಣಾಮವನ್ನು ಹೊಂದತಕ್ಕದು (ಅದು ಪರಿಣಾಮ ಕಾರಣವಾಗಿರುವುದರಿಂದ ಅದಕ್ಕೆ ಕರ್ತೃತ್ವವು

..ವಿಕಾರಂಗಳು.)(೩)(ಈ ಶ್ಲೋಕಾರ್ಥದಲ್ಲಿ ಪುರಾಣಸಮ್ಮತಿಯನ್ನು ಹೇಳುತ್ತಾರೆ.) ಶರೀರ, ಮತ್ತು ..ಯಗಳನ್ನು ಹುಟ್ಟಿಸುವ ವಿಷಯದಲ್ಲಿ ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯನ್ನು ಕಾರಣಳನ್ನಾಗಿ ತಿಳಿ..ತ್ತಾರೆ. ಸುಖ ದುಃಖಗಳನ್ನು ಜೀವನು ಭೋಗಿಸುವ ವಿಷಯದಲ್ಲಿ ಪ್ರಕೃತಿಯನ್ನು ವಿನಾಂದ (ಅಪ್ರಾ..ಕ್ಯಾದಿ) ಪರಮಾತ್ಮನನ್ನು ಕಾರಣನನ್ನಾಗಿ ತಿಳಿಯುತ್ತಾರೆ, ಎಂದು ಭಾಗವತದಲ್ಲಿದೆ. ॥ ೨೧, ೩ ॥

ಟೀ॥ (೧) ಕಾರ್ಯಕಾರಣಸಂಬಂಧಂ ಭೋಗಂ ಚ ಮಿಥ್ಯೇತಿ ವದತಾಂ ನಿರಾಕರಣಾಯಾಽಽಹ । ಪುರುಷಃ ಪ್ರಕೃತಿಸ್ಥೋ ಹೀತಿ । ಹೀತ್ಯನುಭವವಿರೋಧಂ ದರ್ಶಯತಿ ತೇಷಾಂ ॥ (೨) ನ ಹಿ ಜ್ಞಾನಾಜ್ಞಾನಸುಖದುಃಖಾದಿವಿಷಯಸ್ಯಾಂತರಾನುಭವಸ್ಯ ಭ್ರಾಂತಿತ್ವಂ ಕ್ವಚಿದ್ದೃಷ್ಟಂ ॥ (೩) ನ ಚಾಸ್ಯ ಮಿಥ್ಯಾತ್ವೇ ಕಿಂಚಿನ್ಮಾನಂ । ಶರೀರಮಾರಭ್ಯೈವ ಹ್ಯಪರೋಕ್ಷಭ್ರಮೋ ದೃಷ್ಟಃ । ತತ್ರಾಪಿ ಬಲವತ್ಪ್ರಮಾಣವಿರೋಧಾದೇವ ಭ್ರಾಂತಿತ್ವಂ ಕಲ್ಪ್ಯಂ ॥ (೪) ಸಾಕ್ಷಿಸಿದ್ಧಸ್ಯಾಪಿ ಭ್ರಾಂತಿತ್ವಾಂಗೀಕಾರೇ ಯೇನ ಸರ್ವಸ್ಯ ಭ್ರಾಂತಿತ್ವಮಭ್ರಾಂತಿತ್ವಂ ಚಾತ್ಮನೋಽವಗತಂ ತದಪಿ ಪ್ರಮಾಣಮಾತ್ರೈವ ॥ (೫) ವ್ಯವಹಾರತೋಽಪ್ಯಸ್ತೀತ್ಯತ್ರ ಪ್ರಮಾಣಾಭಾವಾತ್ ॥ ೧ ॥

ಅ॥ (೧) ದೇಹ ಇಂದ್ರಿಯಾದಿಗಳ ಸಂಬಂಧವೂ ಸುಖ ದುಃಖಾದಿಭೋಗವೂ ಮಿಥ್ಯೆಯೆಂದು ಹೇಳುವವರ ಮತವನ್ನು ನಿರಾಕರಿಸುವುದಕ್ಕಾಗಿ ಪುರುಷಃ ಪ್ರಕೃತಿಸ್ಥೋ ಹಿ ಎಂದು ಹೇಳಿರುತ್ತಾರೆ. ಹಿ ಎಂಬುದರಿಂದ ಕಾರ್ಯಕಾರಣಗಳ ಸಂಬಂಧವೂ ಸುಖ ದುಃಖಾದಿಗಳ ಭೋಗವೂ ಜೀವರಿಗೆ ಅನುಭವಸಿದ್ಧವೆಂದು ಹೇಳಿದ್ದರಿಂದ ಅವುಗಳು ಮಿಥ್ಯೆಯೆಂದು ಹೇಳುವವರಿಗೆ ಅನುಭವ ವಿರೋಧವನ್ನು ತೋರಿಸುತ್ತಾರೆ. (೨) (ಅಹಂ ಸುಖೀ ಇತ್ಯಾದ್ಯನುಭವವು ಭ್ರಮೆಯೆಂದು ಕೂಡುವುದರಿಂದ ಸುಖ ದುಃಖಾದಿಗಳ ಭೋಗವು ಮಿಥ್ಯೆಯೆಂದು ಹೇಳಿದರೆ ಅನುಭವ ವಿರೋಧವು ಹೇಗೆ ಎಂದರೆ—) ಜ್ಞಾನ ಅಜ್ಞಾನ ಸುಖ ದುಃಖಾದಿ ವಿಷಯಕವಾದ ಸಾಕ್ಷ್ಯನುಭವವು ಭ್ರಮೆಯೆಂದು ಎಲ್ಲಿಯೂ ಕಂಡಿಲ್ಲ. (ಅಂದರೆ ಸಾಕ್ಷ್ಯನುಭವವಾದುದರಿಂದ ಸುಖಾದಿವಿಷಯಕವಾದ ಅನುಭವವು ಭ್ರಮೆಯಲ್ಲ.) (೩) (ಬಾಧಕವಿಲ್ಲದಿರುವುದರಿಂದಲೂ ಈ ಸಾಕ್ಷ್ಯನುಭವವು ಭ್ರಮೆಯಲ್ಲ ಎನ್ನುತ್ತಾರೆ.) ಸುಖ ದುಃಖಾದಿ ವಿಷಯಕವಾದ ಅನುಭವವು ಭ್ರಮೆಯೆಂಬುವ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ. (ಜೈನ ಮೊದಲಾದವರು ಆತ್ಮಾದಿಗಳಿಗೆ ಮಧ್ಯಮ ಪರಿಮಾಣವನ್ನು ತ್ತಾರೆ ಅವರ ಜ್ಞಾನವು ಭ್ರಮೆಯೆಂದು ನಿಮ್ಮಿಂದ ಅಂತರಾರ್ಥಾನುಭವವು ಭ್ರಮೆಯಾಗುವುದಿಲ್ಲವೆಂದು ಹೇಳುವುದು ಹೇಗೆ? ಎಂದರೆ-) ಶರೀರ ವನ್ನಾರಂಭಿಸಿಯೇ ಅಪರೋಕ್ಷ ಭ್ರಮೆಯು ಕಂಡಿದೆ. (ಅಂದರೆ — ಬಾಹ್ಯಾರ್ಥವಿಷಯಕವಾದ ಅಪರೋಕ್ಷ ಜ್ಞಾನವು ಭ್ರಮೆಯಾಗಿ ಕಂಡಿದೆ. ನಾನು ಕೇವಲ ಅಂತರಾರ್ಥಾನುಭವವು ಭ್ರಮೆಯಾಗುವುದಿಲ್ಲವೆಂದು ಹೇಳುವುದಿಲ್ಲ. ಮತ್ತು ಅಂತರಾರ್ಥವಿಷಯಕವಾದ ಅಪರೋಕ್ಷಜ್ಞಾನವು ಭ್ರಮೆಯಲ್ಲವೆಂದು ಹೇಳಿದ್ದು ಅಪರೋಕ್ಷಜ್ಞಾನಕ್ಕೆ ಬಾಹ್ಯಾರ್ಥದಲ್ಲಿ ಕದಾಚಿತ್ ಭ್ರಮತ್ವವಿದ್ದರೂ ಅಂತರಾರ್ಥಾನುಭವಕ್ಕೆ ಪ್ರಮಾತ್ವವಿರುವುದೇ ಸಿದ್ಧವಾಗುತ್ತದೆ. ಜೈನ ಮೊದಲಾದವರಿಗೆ ಅನುಮಾನಾದಿಗಳಿಂದಲೇ ಆತ್ಮಾದಿಗಳಿಗೆ ಮಧ್ಯಮ ಪರಿಮಾಣತ್ವದ ಜ್ಞಾನವು. ಅದು ಅಂತರಾರ್ಥವಿಷಯಕ ಅಪರೋಕ್ಷಜ್ಞಾನವಲ್ಲ) ಬಾಧಕಪ್ರಮಾಣವಿಲ್ಲದಿದ್ದರೂ ಸುಖಾದ್ಯನುಭವವು ಭ್ರಮೆಯೆಂದು [illegible] ಎಂದರೆ—) ಯಾವ ಬಾಹ್ಯಾರ್ಥದಲ್ಲಿ ಅನುಭವಕ್ಕೆ ಭ್ರಮತ್ವವಿದೆಯೋ, ಅಲ್ಲಿಯೂ [illegible] ವಿಷಯಕ ಅಪರೋಕ್ಷಾನುಭವಕ್ಕೆ ಪ್ರಬಲ ಪ್ರಮಾಣ ವಿರೋಧದಿಂದಲೇ ಭ್ರಮೆಯೆಂದು ಕಲ್ಪಿಸಬೇಕು [illegible]

।

ವಿಷಯಕ ಅನುಭವವು ಅಂತರಾರ್ಥ ವಿಷಯಕಾನುಭವವಾದುದರಿಂದಲೂ ಬಾಧಕವಿಲ್ಲದಿರುವುದರಿಂದ
ಅದನ್ನು ಸರ್ವಥಾ ಭ್ರಮೆಯೆಂದು ಹೇಳಕೂಡದು. (೪) (ಹೇತ್ವಂತರದಿಂದಲೂ ಸುಖಾದ್ಯನುಭವ
ಪ್ರಮತ್ವವನ್ನು ಹೇಳಬಾರದೆನ್ನುತ್ತಾರೆ–) ಪ್ರಮಾಣಭೂತವಾದ ಸಾಕ್ಷ್ಯನುಭವಸಿದ್ಧವಾದ ಸು
ದುಃಖಾದಿಗಳಿಗೂ ಭ್ರಾಂತಿಪರಿಕಲ್ಪಿತತ್ವವನ್ನಂಗೀಕರಿಸಿದರೆ ಸರ್ವವೂ ಮಿಥ್ಯೆಯು. ಆತ್ಮನು ಸತ್ಯ
ಎಂಬೀ ವ್ಯವಸ್ಥೆಯೂ ಸಿದ್ಧಿಸಲಾರದು ಈ ವ್ಯವಸ್ಥೆಯೂ ಕೂಡ ಸಾಕ್ಷ್ಯನುಭವ ಸಿದ್ಧವಾಗಿರುವು
ದರಿಂದ ಅದೂ ಸುಳ್ಳು ಎಂದೇ ಆಗಬೇಕಾಗುವುದು. ಆದುದರಿಂದ ಯಾವುದರಿಂದ ಸಮಸ್ತ ವಸ್ತುಗಳ
ಭ್ರಾಂತಿಪರಿಕಲ್ಪಿತತ್ವವೂ ಆತ್ಮನಿಗೆ ಅಭ್ರಾಂತಿಪರಿಕಲ್ಪಿತತ್ವವೂ ತಿಳಿಯಲ್ಪಟ್ಟಿದೆಯೋ, ಆ ಪ್ರಮಾಣ
ಅಪ್ರಮಾಣವಾದ ಸಾಕ್ಷಿಯೇ ಆಗಿರುತ್ತದೆ. (ಆದುದರಿಂದ ಸಾಕ್ಷ್ಯನುಭವವು ಅಪ್ರಮಾಣವೆಂದು ಹೇ
ಳುವರಿಗೆ ಹಿಂದೆ ಹೇಳಿದ ಯಾವ ವ್ಯವಸ್ಥೆಯೂ ಸಿದ್ಧವಾಗಲಾರದು ) (೫) (ಆತ್ಮ ಹೊರತಾದುದು ಎಲ್ಲ
ಮಿಥ್ಯೆಯು. ಆತ್ಮನೊಬ್ಬನೇ ಸತ್ಯನು, ಎಂಬುವ ವ್ಯವಸ್ಥೆಯೂ ಕೂಡ ವ್ಯಾವಹಾರಿಕವಾಗಿಯೇ ಇರು
ವುದು ಪಾರಮಾರ್ಥಿಕವಾಗಿ ಈ ವ್ಯವಸ್ಥೆಯೂ ಸಿಗುವುದಿಲ್ಲ. ಆದಕಾರಣ ಈ ವ್ಯವಸ್ಥೆಯು ಸಿದ್ಧಿಸ
ಬೇಕಾಗುವುದೆಂಬುವುದೂ ನಮಗೆ ಅನಿಷ್ಟವಾಗಲಾರದೆಂದರೆ–) ಸಾಕ್ಷಿಯು ಅಪ್ರಮಾಣವೆಂದು ಹೇ
ದರೆ ಈ ವ್ಯವಸ್ಥೆಯೂ ವ್ಯಾವಹಾರಿಕವಾಗಿಯೇ ಇದೆ. ಪಾರಮಾರ್ಥಿಕವಾಗಿ ಯಾವ ವ್ಯವಸ್ಥೆಯೂ
ಎಂಬೀ ವಿಷಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಸಿದ್ಧವಾಗಲಾರದು.

ಹೀ—ಸಾಕ್ಷ್ಯನುಭವಕ್ಕೆ ಪ್ರಾಮಾಣ್ಯವನ್ನು ಒಪ್ಪದಿದ್ದರೆ ಒಂದು ಕಂಬವನ್ನು ಗೂಟವೆಂದು ತಿ
ಯುವುದು ಭ್ರಮೆಯು. ಕಂಬವನ್ನು ಕಂಬವೆಂದು ತಿಳಿಯುವುದು ಭ್ರಮೆಯಲ್ಲ ಎಂದು ಭ್ರಾಂತಿ
ಅಭ್ರಾಂತಿತ್ವ ವ್ಯವಸ್ಥೆಯೂ ಸಿದ್ಧಿಸುವುದಿಲ್ಲ. ಇಂತಹ ವ್ಯವಸ್ಥೆಯೇ ಸಿದ್ಧಿಸದಿದ್ದರೆ ಯಾವ ವ್ಯವಹಾರ
ಸಿದ್ಧಿಸಲಿಕ್ಕಿಲ್ಲವೆನ್ನುತ್ತಾರೆ—

**ತಾ ॥ (೧) ಭ್ರಾಂತಿರಭ್ರಾಂತಿರ್ವಾ ನ ಕಿಂಚಿತ್ಸಿದ್ಧ್ಯತಿ ॥ (೨) ಅನುಭವೋ ಭ್ರಾಂತ ಇ
ತ್ಯುಕ್ತೇ ಭ್ರಾಂತತ್ವೇ (ತಸ್ಯ)ಪ್ರಮಾಣಂ ತತ್ಪ್ರಾಮಾಣ್ಯಂ ಚ ಕುತಃ ಸಿದ್ಧ್ಯೇತ್ ॥ (೩
ವ್ಯವಹಾರತಃ ಸರ್ವಮಂಗೀಕುರ್ಮ ಇತ್ಯುಕ್ತೇ ವ್ಯವಹಾರೋ ವ್ಯವಹರ್ತಾ ಚ
ಕುತಃ ಸಿದ್ಧಃ ॥ (೪) ಪ್ರತೀತತ ಇತ್ಯುಕ್ತೇ ಸೈವ ಕುತಃ ॥ (೫) ಸ್ವತ ಇತ್ಯುಕ್ತೇ ಸ್ವ
ಭ್ರಾಂತಿ(ಸ್ವಸ್ಯಾಭ್ರಾಂತಿ)ತ್ವೇ ಪ್ರತೀತಿಂ ವಿನೈವ ಪ್ರತೀತಿರಸ್ತೀತಿ ಭ್ರಾಂತಿಃ ಸ್ಯಾತ್
(೬) ಸ್ವಾಭಾವೋಽಪಿ ಸ್ಯಾತ್ ॥ ೨**

ಅ ॥ (೧) ಇದಂ ರಜತಂ ಎಂಬುವ ಜ್ಞಾನವು ಭ್ರಮೆಯೆಂದೂ, ಅಯಂ ಘಟಃ ಎಂಬ
ದ್ಜ್ಞಾನವು ಯಥಾರ್ಥಜ್ಞಾನವೆಂದೂ, ಎಂಬೀ ವ್ಯವಸ್ಥೆಯನ್ನು ಸಾಕ್ಷಿಯೇ ಗ್ರಹಿಸತಕ್ಕದಾದುದರಿಂದ
ಸಾಕ್ಷಿಯೇ ಅಪ್ರಮಾಣವೆಂದಾದರೆ-ಭ್ರಮೆಯಾಗಲೀ, ಯಥಾರ್ಥಜ್ಞಾನವೆಂದಾಗಲೀ ಯಾವ ವ್ಯವಸ್ಥೆ
ಅಲ್ಲದೆ ಆತ್ಮ ಹೊರತಾದುದೆಲ್ಲವೂ ಮಿಥ್ಯೆಯು ಆತ್ಮನೊಬ್ಬನು ಸತ್ಯನು, ಎಂಬೀ ವ್ಯವಸ್ಥೆಯೂ ಸಿದ್ಧಿ
ಹೋಗುವುದು ) (೨) (ಬಾಧಕ ಪ್ರಮಾಣವಿಲ್ಲದಿರುವುದರಿಂದ ಅಹಂ ಸುಖೀ ದುಃಖೀ ಇತ್ಯಾದಿ
ಯಕ ಸಾಕ್ಷ್ಯನುಭವವು ಭ್ರಮೆಯುಲ್ಲವೆಂದು ಹೇಳಿದ್ದು ಯುಕ್ತವಲ್ಲ. ಏಕೆಂದರೆ—ವಿಮುಕ್ತಸ್ತ ವಿ
ಷ್ಯತೇ. ತರತಿ ಶೋಕಮಾತ್ಮವಿತ್ ಇತ್ಯಾದಿ ದುಃಖಾದಿ ಸಂಸಾರಕ್ಕೆ ಮಿಥ್ಯಾತ್ವ, ತೋರಿಸ
ಅವಿದ್ಯಾಕಾರ್ಯತ್ವಾದಿಗಳನ್ನು ಹೇಳುವ ಬಾಧಕ ಪ್ರಮಾಣವಿದೆ ಎಂದರೆ–) ಸುಖಾದಿ ವಿಷಯ
ಅನುಭವವು ಭ್ರಮೆಯೆಂದು ಹೇಳಿದರೆ ಭ್ರಾಂತಿಯೆಂಬುವಲ್ಲಿ ಪ್ರಮಾಣವೂ ಆ ಪ್ರಮಾಣಕ್ಕೆ ಪ್ರಾಮಾಣ

ಯಾವ ಪ್ರಮಾಣದಿಂದ ಸಿದ್ಧಿಸುವದು? (ಅಂದರೆ ಸುಖಾದಿವಿಷಯಕವಾದ ಅನುಭವವು ಭ್ರಮೆಯೆಂಬು ವುದು ವಿಮುಕ್ತರಲ್ಲಿ ವಿಮುಚ್ಯತೇ ಇದು ಮೊದಲಾದ ಪ್ರಮಾಣ ಬಲದಿಂದ ಸಿದ್ಧಿಸುತ್ತದೆಂದು ಹೇಳಿದ್ದು ಕೂಡುವುದಿಲ್ಲ. ಏಕೆಂದರೆ—ವಿಮುಕ್ತರಲ್ಲಿ ವಿಮುಚ್ಯತೇ ಎಂಬುವ ವಾಕ್ಯಜ್ಞಾನವೂ ಆ ವಾಕ್ಯ ದಿಂದುಂಟಾದ ಜ್ಞಾನದ ಪ್ರಾಮಾಣ್ಯವೂ ಸಾಕ್ಷಿಯಿಂದಲೇ ಸಿದ್ಧವಾಗುವುದೆಂದು ಹೇಳಬೇಕು ಸಾಕ್ಷ್ಯನು ಭವಕ್ಕೆ ಪ್ರಾಮಾಣ್ಯವನ್ನು ಒಪ್ಪದಿದ್ದರೆ ಹಿಂದೆ ಹೇಳಿದ ಪ್ರಾಮಾಣ್ಯಸಿದ್ಧಿಯೂ ಕೂಡುವುದಿಲ್ಲ. ತಥಾ ಚ ಬಾಧಕವಿಲ್ಲದಿರುವುದರಿಂದ ಸಾಕ್ಷ್ಯನುಭವಕ್ಕೆ ಪ್ರಾಮಾಣ್ಯವನ್ನು ಒಪ್ಪಲೇ ಬೇಕು.) (೩) (ಸುಖಾದಿ ವಿಷಯದಲ್ಲಿಯೇ ಸಾಕ್ಷ್ಯನುಭವಕ್ಕೆ ಭ್ರಮತ್ವವು. ಪ್ರಮಾಣ ಸ್ವರೂಪಾದಿಗಳಲ್ಲಿ ಭ್ರಮತ್ವವು ಇಲ್ಲ ವೆಂಬುವುದು ಯುಕ್ತವಲ್ಲ. ಹಾಗೆ ಹೇಳಲಿಕ್ಕೆ ವಿಶೇಷ ಪ್ರಮಾಣವಿಲ್ಲ. ಹಾಗಾದರೆ ಸಾಕ್ಷ್ಯನುಭವವು ಭ್ರಮೆಯಾದರೂ, ಪ್ರಮಾಣ ಸ್ವರೂಪ, ಪ್ರಾಮಾಣ್ಯಗಳು ಲೋಕ ವ್ಯವಹಾರದಿಂದ ಸಿದ್ಧಿಸುತ್ತವೆ, ಎಂದರೆ—) ಲೋಕವ್ಯವಹಾರದಿಂದಲೇ ಎಲ್ಲವನ್ನೂ ಒಡಂಬಡುತ್ತೇವೆ ಎಂದು ಹೇಳಿದರೆ ವ್ಯವಹಾರವೂ (ಮಾತನಾಡುವುದೂ) ವ್ಯವಹಾರ ಮಾಡುವ ಪುರುಷನೂ ಯಾವ ಪ್ರಮಾಣದಿಂದ ಸಿದ್ಧನಾಗುತ್ತಾನೆ. (ಅಂದರೆ ಲೋಕವ್ಯವಹಾರದಿಂದ ಪ್ರಮಾಣಸ್ವರೂಪಾದಿಗಳು ಸಿದ್ಧಿಸುತ್ತವೆ ಎಂದು ಹೇಳಕೂಡದು. ಜನರೂ ಜನರ ವ್ಯವಹಾರವೂ ಇವುಗಳನ್ನು ಸಾಕ್ಷಿಯೇ ಗ್ರಹಿಸಬೇಕು. ಸಾಕ್ಷಿಯನ್ನು ಭ್ರಾಂತಿಯೆಂದು ಅಂಗೀಕರಿಸಿರುವ ಕಾರಣ ಅವುಗಳು ಸಿದ್ಧಿಸಲಾರವು.) (೪) (ಸಾಕ್ಷಿಗೆ ಭ್ರಾಂತಿತ್ವವಿದ್ದರೂ ಲೋಕಪ್ರತೀತಿ ಯಿಂದಲೇ ವ್ಯವಹಾರ ವ್ಯವಹರ್ತೃಗಳ ಸ್ವರೂಪವು ಸಿದ್ಧಿಸುವದೆಂದರೆ—) ಲೋಕಪ್ರತೀತಿಯಿಂದಲೇ ವ್ಯವಹಾರಾದಿಗಳು ಸಿದ್ಧಿಸುತ್ತವೆ ಎಂದರೆ— ಪ್ರತೀತಿಯು ಇದೆ ಎಂಬುವುದೇ ಹೇಗೆ ಸಿದ್ಧಿಸುವದು? (ಪ್ರತೀತಿ ಸಾಧಕವಾದುದು ಯಾವ ಪ್ರಮಾಣವೂ ಇಲ್ಲ.) (೫) ಸಾಕ್ಷಿಯಿಂದಲೇ ಪ್ರತೀತಿಯು ಸಿದ್ಧ ವಾಗುತ್ತದೆ ಎಂದು ಹೇಳಿದರೆ ಸಾಕ್ಷಿಯು ಸುಖಾದಿ ವಿಷಯದಲ್ಲಿ ಭ್ರಮೆಯಾದರೆ ಪ್ರತೀತಿಯು ಇಲ್ಲ ದೇನೇ ಪ್ರತೀತಿಯು ಇದೆ ಎಂದು ಹೇಳಿದ್ದರಿಂದ ಭ್ರಮೆಯಾಗುವುದು. (ಅಂದರೆ ಸಾಕ್ಷಿಯಿಂದ ಪ್ರತೀ ತಿಯು ಸಿದ್ಧಿಸುವುದಿಲ್ಲ. ಸಾಕ್ಷಿಯನ್ನು ಸುಖಾದಿಗಳಲ್ಲಿ ಭ್ರಮೆಯೆಂದು ಒಡಂಬಟ್ಟರೆ ಪ್ರತೀತಿಯು ಇದೆ. ಎಂಬುವ ವಿಷಯದಲ್ಲಿಯೂ ಭ್ರಮೆಯೆಂಬುವ ಶಂಕೆಯು ಬರಬಹುದಾದುದರಿಂದ ಸಾಕ್ಷಿಯಿಂದ ಪ್ರತೀ ತಿಯು ಸಿದ್ಧವಾಗುತ್ತದೆಂಬುವುದೂ ಕೂಡಲಾರದು. (೬) (ಹೇತ್ವಂತರದಿಂದಲೂ ಸುಖಾದಿವಿಷಯಕ ಅನುಭವಕ್ಕೆ ಭ್ರಮತ್ವವನ್ನು ಹೇಳಬಾರದೆನ್ನುತ್ತಾರೆ ) ಸುಖಾದಿವಿಷಯಕವಾದ ಅನುಭವವು ಭ್ರಮೆ ಯೆಂದು ಒಡಂಬಟ್ಟರೆ ಆತ್ಮಸಾಧಕ ಪ್ರಮಾಣವು ಇಲ್ಲದಿರುವುದರಿಂದ ಆತ್ಮನೇ ಇಲ್ಲವೆಂದಾಗಬೇಕಾಗು ವುದು. ॥ ೨ ॥

ಟೀ—ಅಹಂ ಅಸ್ಮಿ ಇತ್ಯಾದಿ ಪ್ರತ್ಯಕ್ಷದಿಂದಲೇ ಆತ್ಮನು ತೋರುವುದರಿಂದ ಸಾಧಕ ಪ್ರಮಾಣವು ಇಲ್ಲವೆಂದದ್ದು ಹೇಗೆ? ಎಂದರೆ—

ಟಾ ॥ (೧) ಸ್ವಯಮಸ್ತೀತಿ ಚ ಭ್ರಮಃ ಸ್ಯಾತ್ ॥ (೨) ನಿರಾಲಂಬನೋ ಭ್ರಮೋ ನೋ-
ಪಪದ್ಯತ ಇತ್ಯಸ್ಯಾಪಿ ಭ್ರಮತ್ವೋಪಪತ್ತೇಃ । ತತ್ಪ್ರಮಾಣಮಪ್ಯಪ್ರಮಾಣಮೇವ ॥
(೩) ಪ್ರಮಾಣತ್ವಭ್ರಮ ಇತಿ (ನ ಸಿದ್ಧಮಿತಿ) ನ ಕಿಂಚಿತ್ಸಿದ್ಧ್ಯತಿ ॥ (೪) ಭ್ರಮ
ಇತ್ಯಸ್ಯೈವಾಭ್ರಮತ್ವೇಽಸ್ಯಾಭ್ರಮತ್ವಮೇವ ಭವತಿ ॥ (೫) ಸುಖದುಃಖಾದಿವಿ-
ಷಯಂ ಜ್ಞಾನಮಾತ್ಮಸ್ವರೂಪಮೇವೇತಿ ತಸ್ಯ ಭ್ರಮತ್ವೇ ಧರ್ಮಿಣಾ ವಿನೈವ ಭ್ರಮತ್ವ-
ವಾದೋ ಭವತಿ ॥ (೬) ನ ಚ ವೃತ್ತಿಜ್ಞಾನವಿಷಯಮಜ್ಞಾನಾದಿಕಂ ಕೇವಲಾನುಭವಾ ।

ಭ್ರಮಸ್ಯ ಚಾವಿದ್ಯಾಕಾರ್ಯತ್ವಾಂಗೀಕಾರಾತ್ । ಆತ್ಮಸ್ವರೂಪಸ್ಯಾಪ್ಯವಿದ್ಯಾಕಾ-
ರ್ಯತ್ವಂ ಸ್ಯಾತ್ ॥ ೩ ॥

ಅ ॥ (೧) ಆತ್ಮನಿದ್ದಾನೆಂಬುವ ಅಹಮಸ್ಮಿ ಇತ್ಯಾದಿ ಸಾಕ್ಷಿ ಪ್ರತೀತಿಯೂ ಕೂಡ ಭ್ರಮೆಯಾಗ ಬೇಕಾಗುವುದು. ಅಂದರೆ ಅಹಂ ಎಂಬುವ ಅನುಭವದಿಂದ ಆತ್ಮನು ಸಿದ್ಧಿಸುವುದಿಲ್ಲ. ಸುಖಾದಿಗಳಲ್ಲಿ ಅನುಭವಕ್ಕೆ ಭ್ರಾಂತಿತ್ವವನ್ನು ಒಪ್ಪಂಬಟ್ಟ ಪ್ರಯುಕ್ತ ಆತ್ಮನಲ್ಲಿಯೂ ಭ್ರಮೆಯೆಂಬುವ ಶಂಕೆಯನ್ನು ನಿವಾರಿಸುವುದು ಯಾವುದು ಇಲ್ಲವೇ ಇಲ್ಲ. (೨) (ಅಧಿಷ್ಠಾನವಿಲ್ಲದೆ ಭ್ರಮೆಯು ಕೂಡದಿರುವುದರಿಂದ ಸುಖ ದುಃಖಾದಿಗಳ ಭ್ರಮೆಗೆ ಅಧಿಷ್ಠಾನಭೂತನಾದ ಆತ್ಮನು ಇದ್ದಾನೆಂದು ಒಪ್ಪಲೇ ಬೇಕು ಎಂದರೆ—) ನಿರಧಿಷ್ಠಾನವಾದ ಭ್ರಮೆಯು ಕೂಡುವುದಿಲ್ಲ ಎಂಬುವ ತರ್ಕದಿಂದ ಆತ್ಮನು ಸಿದ್ಧಿಸುತ್ತಾನೆಂದು ಹಿಂದೆ ಹೇಳಿದ್ದು ಕೂಡುವುದಿಲ್ಲ. ಏಕೆಂದರೆ ಈ ತರ್ಕದಿಂದುಂಟಾಗುವ ಅನುಭವದಲ್ಲಿಯೂ ಸುಖಾದ್ಯನುಭವದಂತೆ ಭ್ರಮತ್ವ ಶಂಕೆಯು ಬಂದರೆ ಪರಿಹಾರವು ಯಾವುದೂ ಇರಲಿಲ್ಲ. (ಆತ್ಮನು ಇದ್ದಾನೆಂಬುವಲ್ಲಿ ಸಾಕ್ಷಿಯನ್ನು ಪ್ರಮಾಣವೆಂದು ಹೇಳುವುದಿಲ್ಲ. ಮತ್ತೆ ವೇದವು ಪ್ರಮಾಣವು ಎನ್ನುತ್ತೀವೆ ಎಂದರೆ—) ವೇದವು ಪ್ರಮಾಣವೆಂದು ಹೇಳಿದರೆ ಆತ್ಮಸಾಧಕವಾದ ವೇದಕ್ಕೂ ಪ್ರಾಮಾಣ್ಯವು ಸಿದ್ಧಿಸುವುದಿಲ್ಲ. ಏಕೆಂದರೆ ವೇದವು ಆತ್ಮನಲ್ಲಿ ಪ್ರಮಾಣವೆಂದು ಯಾವುದು ಹೇಳಲ್ಪಡುತ್ತದೋ, ಅಂತಹ ವೇದವು ಪ್ರಮಾಣವೆಂದು ಸಾಧಿಸುವಂತಹ ಪ್ರಮಾಣವು ಇಲ್ಲದಿರುವುದರಿಂದ ವೇದವು ಅಪ್ರಮಾಣವೆಂದು ಹೇಳಲಿಕ್ಕೂ ಬರುವುದರಿಂದ ವೇದದಿಂದ ಆತ್ಮನು ಸಿದ್ಧಿಸುವುದಿಲ್ಲ. (೩) (ವೇದವು ಪ್ರಮಾಣವು ಎಂಬೀ ಅನುಭವವು ಸಾಕ್ಷಿಪ್ರತ್ಯಕ್ಷದಿಂದ ಸಿದ್ಧಿಸುವಪ್ರಯುಕ್ತ ವೇದವು ಅಪ್ರಮಾಣವಾಗುವುದು ಹೇಗೆ ಎಂದರೆ—) ಸಾಕ್ಷ್ಯನುಭವದಿಂದ ವೇದಕ್ಕೆ ಪ್ರಾಮಾಣ್ಯವು ಸಿದ್ಧಿಸುವುದಿಲ್ಲ. ಸುಖಾನುಭವದಂತೆ ಶ್ರುತಿಪ್ರಾಮಾಣ್ಯಾನುಭವದಲ್ಲಿಯೂ ಭ್ರಮೆಯೆಂಬುವ ಶಂಕೆಯು ಬರಬಹುದಾದುದರಿಂದ ಹಿಂದೆ ಹೇಳಿದ ಪ್ರಕಾರ ಸಾಕ್ಷ್ಯನುಭವವು ಭ್ರಮೆಯಾದರೆ ಸರ್ವವೂ ಮಿಥ್ಯೆಯು, ಆತ್ಮನು ಸತ್ಯನು, ಎಂಬುವ ವ್ಯವಸ್ಥೆ ಮೊದಲಾದುದು ಯಾವುದೂ ಸಿದ್ಧಿಸುವುದಿಲ್ಲ. (೪) (ಸುಖಾದ್ಯನುಭವವು ಭ್ರಮವು, ಎಂಬುವ ಅರ್ಥವನ್ನು ಸಾಧಿಸುವ ವೇದವು ಪ್ರಮಾಣವೆಂದು ಸಿದ್ಧಿಸದಿರುವುದರಿಂದ ಆ ವೇದದಿಂದ ಸುಖಾದ್ಯನುಭವಕ್ಕೆ ಭ್ರಮತ್ವವು ಸಿದ್ಧಿಸುವುದಿಲ್ಲ, ಎಂದು ಉಕ್ತವಾಗಿದೆ ಈಗ ವೇದದಿಂದ ಹುಟ್ಟುವ ಅನುಭವವೂ ಭ್ರಮೆಯೆಂದಾದುದರಿಂದ ಸುಖಾದ್ಯನುಭವವು ಬಾಧಕವಿಲ್ಲದಿರುವುದರಿಂದ ಭ್ರಮೆಯಲ್ಲವೆಂದೇ ಆಗುವುದು ಪರಸ್ಪರ ವಿರುದ್ಧಗಳಲ್ಲಿ ಒಂದನ್ನು ನಿಷೇಧಿಸುವಾಗ ಇನ್ನೊಂದು ಸಿದ್ಧಿಸುತ್ತದೆ, ಎನ್ನುತ್ತಾರೆ. ಸುಖಾದ್ಯನುಭವವು ಭ್ರಮೆಯು ಎಂಬುವುದೇ ಭ್ರಮೆಯುಂದಾದರೆ ಸುಖಾದ್ಯನುಭವಕ್ಕೆ ಭ್ರಮತ್ವವಿಲ್ಲವೆಂದೇ ಆಗುವುದು. (೫) (ಹೇತ್ವಂತರದಿಂದಲೂ ಸುಖಾದ್ಯನುಭವಕ್ಕೆ ಭ್ರಮತ್ವವು ಕೂಡಲಾರದೆನ್ನುತ್ತಾರೆ) ಮತ್ತು ಸುಖ ದುಃಖಾದಿವಿಷಯಕವಾದ ಜ್ಞಾನವು ಆತ್ಮಸ್ವರೂಪವೇ. ಅದು ಭ್ರಮೆಯೆಂದಾದರೆ ಘಟವಿಲ್ಲದೇನೇ ಶೂನ್ಯವಾದವು ಪ್ರಾಪ್ತವಾಯಿತು. (ಅಂದರೆ – ಸುಖಾದ್ಯನುಭವವು ಭ್ರಮೆಯೆಂದಾದರೆ ಪ್ರಚ್ಛನ್ನವಾದ ಬೌದ್ಧಮತವನ್ನೇ ಅಂಗೀಕರಿಸಿದುದನ್ನು ಪ್ರಕಟಿಸಿದಂತೆ ಆಯಿತು. ಸುಖಾದಿವಿಷಯಕವಾದ ಅನುಭವವು ಆತ್ಮಸ್ವರೂಪವು (ಅಂತಹ ಅನುಭವವು ಅಪ್ರಮಾಣವೆಂದು ಒಪ್ಪಿದರೆ ಆತ್ಮನಿಲ್ಲವೆಂದು ಆಗುವುದರಿಂದ ಶೂನ್ಯವಾದ ಮತ ಪ್ರವೇಶವೇ ಬರುವುದು.) (೬) (ಸುಖಾದಿವಿಷಯಕವಾದ ಅನುಭವವು ಆತ್ಮಸ್ವರೂಪವೇ, ಎಂದು ನಿಮ್ಮ (ದ್ವೈತಿಗಳ) ಮತದಲ್ಲಿಯೇ ನಮ್ಮ (ಅದ್ವೈತಿಗಳ) ಮತದಲ್ಲಿ ಇಲ್ಲ ನಾವು ಸುಖಾದಿವಿಷಯಕ ಜ್ಞಾನವನ್ನು ಮನೋವೃತ್ತಿರೂಪವೆನ್ನುತ್ತೀವೆ ಎಂದರೆ—) ಅಜ್ಞಾನ ಮೊದಲಾದುದು ವೃತ್ತಿಜ್ಞಾನವಿಷಯವೆಂದು ಅದ್ವೈತಿಗಳೂ ಒಪ್ಪಲಿಲ್ಲ. (ಅಂತೂ ಅಜ್ಞಾನವು ಹೇಗೆ ಸಾಕ್ಷಿಸಿದ್ಧವೋ ಅದರಂತೆ ಸುಖಾದಿಗಳೂ ಸಾಕ್ಷಿವಿಷಯಗಳೆಂದೇ ಪ್ರಾಚೀನರು ಒಪ್ಪಿರುವದರಿಂದ ಸುಖಾದಿವಿಷಯಕ ಜ್ಞಾನವು ವೃತ್ತಿ

ಸ್ವರೂಪವೆಂದು ಹೇಳಿದರೆ ನಿಮಗೆ ಅಪಸಿದ್ಧಾಂತವು (ಪೂರ್ವಾಚಾರ್ಯರು ಯಾವುದನ್ನು ಪ್ರಾಮಾಣಿಕವೆಂದು ಒಪ್ಪಿರುತ್ತಾರೋ, ಅದಕ್ಕೆ ವಿರುದ್ಧವಾಗಿ ಅಂಗೀಕರಿಸುವುದು) ತಪ್ಪಿದ್ದಲ್ಲ. (ಸುಖಾದ್ಯನುಭವಕ್ಕೆ ಭ್ರಮತ್ವವಿದ್ದರೂ ಆತ್ಮಸ್ವರೂಪತ್ವವೂ ಇರಲಿ. ಆತ್ಮನಿಲ್ಲವೆಂದಾಗುವುದು ಹೇಗೆ? ಎಂದರೆ—) ಸುಖಾದಿವಿಷಯಕವಾದ ಅನುಭವವು ಭ್ರಮೆಯೆಂದಾದರೆ—ಅವಿದ್ಯಾಕಾರ್ಯವೆಂದಾಗಬೇಕಾಗುವುದು. ಭ್ರಮೆಯು ಅವಿದ್ಯಾಕಾರ್ಯವೆಂದು ಅಂಗೀಕೃತವಾಗಿದೆ. ಸುಖಾದಿವಿಷಯಕ ಅನುಭವವೇ ಆತ್ಮಸ್ವರೂಪವಾಗಿರುವುದರಿಂದ ಆತ್ಮನೂ ಅವಿದ್ಯಾಕಾರ್ಯನೆಂದಾಗಬೇಕಾಗುವನು. (ಆತ್ಮನು ಅವಿದ್ಯಾಕಾರ್ಯನೆಂದಾದರೆ ಆತ್ಮನಿಗೆ ಮಿಥ್ಯಾತ್ವವು ತಪ್ಪಿದ್ದಲ್ಲ.) ॥ ೩ ॥

ಶಂ—ಹೀಗೆ ಆತ್ಮನು ಯುಕ್ತಿಯಿಂದ ದುರ್ಘಟನಾಗಲಿ. ಆದರೂ ಆತ್ಮನು ಪ್ರಮಾಣಸಿದ್ಧನಾದುದರಿಂದ ಅದು ಬಾಧಕವಲ್ಲ. ಪ್ರಮಾಣಸಿದ್ಧವಾದುದು ಯುಕ್ತಿಯಿಂದ ದುರ್ಘಟವೆಂದಿಷ್ಟುಮಾತ್ರದಿಂದ ಬಾಧವು ಬರಲಾರದೆಂದರೆ—

**ಟೀ ॥ (೧) ದುರ್ಘಟತ್ವಂ ಭೂಷಣಮಿತ್ಯುಕ್ತೇ ದುರ್ಘಟತ್ವಂ ಸುಘಟತ್ವಂ ಚೋಭಯಂ ಭೂಷಣಮಸ್ಮಾಕಮಿತ್ಯುತ್ತರಂ । (೨) ನ ಹಿ ಪ್ರಮಾಣಸಿದ್ಧಸ್ಯ ದುರ್ಘಟತ್ವೇ ಸುಘಟತ್ವೇ ವಾಽಪವಾದೋ ದೃಷ್ಟಃ ॥ (೩) ದುರ್ಘಟತ್ವಂ ಭೂಷಣಮಿತಿ ವದದ್ಭಿರಾತ್ಮನೋಽಪ್ಯವಿದ್ಯಾತ್ವಮಂಗೀಕೃತ್ಯ(ತಂ ।) ತದಯುಕ್ತಮಿತ್ಯುಕ್ತೇ ತತ್ರಾಪಿ ಭೂಷಣತ್ವಂ ಕಿಮಿತಿ ನಾಂಗೀಕ್ರಿಯತೇ ॥ (೪) ಅತಿಸುಕರತ್ವಾತ್ ॥ (೫) ನ ಚಾತ್ಮನೋಽಪ್ಯವಿದ್ಯಾತ್ವಂ ವದತಾಂ ತೇಷಾಮುತ್ತರಂ । ಅತೋಽನಂತದೋಷದುಷ್ಟತ್ವಾದ್ವೀತಿ ಪ್ರಸಿದ್ಧ್ಯೈವ ಭಗವತಾ ನಿರಾಕೃತಾಃ ॥ (೬) ಅಸ್ಯ ಜೀವಸ್ಯ ಸದಸದ್ಯೋನಿಜನ್ಮಸು ಕಾರಣಂ ಸತ್ತ್ವಾದಿಗುಣಸಂಗಃ ॥ ೪ ॥ ॥ ೨೨ ॥**

ಅ ॥ (೧) ದುರ್ಘಟತ್ವವು ಭೂಷಣವು ಎಂದು ಹೇಳಿದರೆ ದುರ್ಘಟತ್ವವೂ ಸುಘಟತ್ವವೂ ಎರಡೂ ನಮಗೆ ಭೂಷಣವು, ಎಂದುತ್ತರವು. (ಅಂದರೆ ಆತ್ಮನು ಪ್ರಮಾಣಸಿದ್ಧನಾದುದರಿಂದ ಯುಕ್ತಿಯಿಂದ ದುರ್ಘಟನಾದಾಗ್ಯೂ ಬಾಧಕವಲ್ಲವೆಂದು ಹೇಳುವುದಾದರೆ ಸುಖಾದಿಗಳಿಗೂ ದುರ್ಘಟತ್ವವೂ ಸುಘಟತ್ವವೂ ಬರಲಿ. ಪ್ರಮಾಣಸಿದ್ಧವಾದ ಪ್ರಯುಕ್ತ ಅದು ಬಾಧಕವಲ್ಲವೆಂದು ಹೇಳಬೇಕು. (೨) (ಏಕೆಂದರೆ) ಪ್ರಮಾಣಸಿದ್ಧವಾದುದಕ್ಕೆ ದುರ್ಘಟತ್ವವು ಬಂದರೂ ಸುಘಟತ್ವವು ಬಂದರೂ ಎಲ್ಲಿಯೂ ಬಾಧಕವು ಕಂಡು ಬರಲಿಲ್ಲ. (೩) (ಯುಕ್ತಿಸಿದ್ಧವಾದ ದುರ್ಘಟತ್ವವನ್ನು ಪರಿಗಣಿಸದೆ ದುರ್ಘಟತ್ವವು ಬಾಧಕವಲ್ಲವೆಂದು ಹೇಳಿದರೆ ಅತಿಪ್ರಸಂಗವನ್ನು ಹೇಳುತ್ತಾರೆ—) ಯುಕ್ತಿಯಿಂದ ದುರ್ಘಟತ್ವವು ಬಾಧಕವಲ್ಲ. ಮತ್ತೆ ಭೂಷಣವೇ ಎಂದು ಇಟ್ಟುಕೊಂಡು ದುರ್ಘಟವಾದ ಆತ್ಮಾಸ್ತಿತ್ವವನ್ನು (ಆತ್ಮನಿದ್ದಾನೆಂಬುವುದನ್ನು) ಒಡಂಬಟ್ಟರೆ ಆತ್ಮನಿಗೆ ಅವಿದ್ಯಾತ್ವವು ದುರ್ಘಟವಾದುದನ್ನಾದರೂ ಒಡಂಬಡಬೇಕಾಗುವುದು. (ಅಂದರೆ ಹಾಗೆ ಅಂಗೀಕಾರಮಾಡಿ ಯುಕ್ತಿಯಿಂದ ಅಯುಕ್ತವೆಂದು ಹೇಳಿದರೆ ಅಯುಕ್ತತ್ವರೂಪವಾದ ದುರ್ಘಟತ್ವವು ಭೂಷಣವೇ ಎಂದು ಏಕೆ ಒಪ್ಪಬಾರದು) (೪) (ಪ್ರಮಾಣಸಿದ್ಧವಾದುದು ಯುಕ್ತಿಯಿಂದ ದುರ್ಘಟವಾದರೆ ಬಾಧಕವಲ್ಲ. ಆತ್ಮನಿಗೆ ಅವಿದ್ಯಾತ್ವವು ಪ್ರಾಮಾಣಿಕವಲ್ಲ. ಅವಿದ್ಯಾತ್ವವು ಪ್ರಾಮಾಣಿಕವಾಗಿದ್ದರೆ ಯುಕ್ತಿಯಿಂದ ದುರ್ಘಟತ್ವವೂ ಬಾಧಕವಲ್ಲವೆಂದು ಹೇಳಬಹುದಿತ್ತು. ಎಂದರೆ—) ಆತ್ಮನಿಗೆ ಅವಿದ್ಯಾತ್ವವು ಅಪ್ರಾಮಾಣಿಕವಲ್ಲ. ಏಕೆಂದರೆ ಕೆಲವು ಚೇತನವು, ಕೆಲವು ಅಚೇತನವು ಎಂದಂಗೀಕರಿಸಿದರೆ

ಗೌರವವು ಬರುವುದು. ಸರ್ವವೂ ಅಚೇತನವು ಎಂದಂಗೀಕರಿಸುವುದೇ ಶ್ರೇಷ್ಠವು, ಎಂಬುವ ಪಕ್ಷ ಸ್ವರೂಪ ಯುಕ್ತಿಸಿದ್ಧವಾಗಿದೆ. (೫) (ಆತ್ಮನಿಗೆ ಅವಿದ್ಯಾತ್ವವು ಪ್ರಮಾಣವಿರುದ್ಧವು. ಅದಕಾರಣ ಯುಕ್ತಿಯಿಂದ ದುರ್ಘಟತ್ವವು ಬಾಧಕವೇ ಎಂದರೆ—) ಆತ್ಮನಿಗೆ ಅವಿದ್ಯಾತ್ವವಿದ್ದುದರಿಂದ ಮಿಥ್ಯಾತ್ವವನ್ನು ಹೇಳುವ ಶ್ರುತಿಶಕ್ತಿಗಳಿಗೆ ಹಿಂದೆ ಹೇಳಿದ ಪ್ರಕಾರ ಯಾವುದೊಂದು ಪ್ರಮಾಣ ವಿರೋಧವೂ ಇಲ್ಲ (೬) (ಹೀಗೆ ಅನುಭವ ಬಲದಿಂದ ಕಾರ್ಯಕಾರಣ ಸಂಬಂಧಕ್ಕೂ ಸುಖ ದುಃಖಾದಿ ಭೋಗಕ್ಕೂ ಸತ್ಯತ್ವವನ್ನು ಹೇಳುವ ವೇದವ್ಯಾಸರು ಅನುಭವಕ್ಕೆ ಭ್ರಮತ್ವವನ್ನು ಹೇಳುವವರ ಮತವನ್ನು ಏಕೆ ನಿರಾಕರಿಸಲಿಲ್ಲ, ಎಂದರೆ—) ಅದಕಾರಣ ಸುಖಾದಿವಿಷಯಕ ಸಾಕ್ಷ್ಯನುಭವವು ಭ್ರಮೆಯೆಂಬುವುದು ಹಿಂದೆ ಹೇಳಿದ ಪ್ರಕಾರ ಅನಂತದೋಷಗಳಿಂದ ದುಷ್ಟವಾಗಿದೆ, ಎಂದು ತೋರುವುದರಿಂದ ಹಿ ಎಂಬುವುದರಿಂದ ಪ್ರಸಿದ್ಧವು ಎಂದು ಹೇಳಿದ್ದರಿಂದ ಪ್ರತ್ಯೇಕವಾಗಿ ವೇದವ್ಯಾಸರು ನಿರಾಕರಿಸಲಿಲ್ಲ. (ಸ್ವತಃ ಶುದ್ಧನಾದ ಜೀವನಿಗೆ ಸಾಧ್ವಸಾಧುಯೋನಿಗಳಲ್ಲಿ ಜನ್ಮವು ಬರಲಿಕ್ಕೆ ಸತ್ವಾದಿಗುಣ ಸಂಬಂಧವು ಕಾರಣವೆನ್ನುತ್ತಾರೆ—) ಅಜ್ಞ ಜೀವನಿಗೆ ಸಾಧ್ವಸಾಧುಯೋನಿಗಳಲ್ಲಿ ಹುಟ್ಟಲಿಕ್ಕೆ ಸತ್ವ ರಜಸ್ತಮೋಗುಣ ಸಂಬಂಧವು ಕಾರಣವು (ಅಂದರೆ—ಜೀವನಿಗೆ ಶರೀರ ಸಂಬಂಧವು ಬರಲಿಕ್ಕೆ ಸತ್ವಾದಿಗುಣಗಳ ಸಂಬಂಧವೇ ಕಾರಣವು.)॥ ೨೨ ॥

ಪೀ — ಸಾಧ್ವಸಾಧುಯೋನಿಗಳಲ್ಲಿ ಹುಟ್ಟಲಿಕ್ಕೆ ಸತ್ವಾದಿಗುಣಸಂಬಂಧವು ನಿಮಿತ್ತಮಾತ್ರ ಕಾರಣವು ಶ್ರೀಪರಮಾತ್ಮನೇ ಸ್ವತಂತ್ರಕಾರಣನೆನ್ನುತ್ತಾರೆ—

**ಗೀ ॥ ಉಪದ್ರಷ್ಟಾಽನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ಪುರುಷಃ ಪರಃ ॥ ೨೩ ॥**

ಅ॥ ಅಸ್ಮಿನ್ ದೇಹೇ=ಈ ಶರೀರದಲ್ಲಿರತಕ್ಕ, ಪರಃ=ಸರ್ವೋತ್ತಮನೂ ಶರೀರದಲ್ಲಿರತಕ್ಕ ಜೀವನಿಂತ ಭಿನ್ನನೂ ಆದ, ಪುರುಷಃ=ಸರ್ವಗುಣ ಪರಿಪೂರ್ಣನಾದ ಶ್ರೀಪರಮಾತ್ಮನು. ಉಪದ್ರಷ್ಟಾ=ಎಲ್ಲರಿಗಿಂತಲೂ ಮೇಲೆ ಇದ್ದವನಾಗಿ ಅಂದರೆ ಸರ್ವೋತ್ತಮನಾಗಿ ಜೀವರು ಮಾಡುವ ಎಲ್ಲಾ ವ್ಯಾಪಾರಗಳನ್ನು ನೋಡು ತ್ತಿರುವವನು, ಅನುಮಂತಾ = ಪುನಃಪುನಃ ಕಾರ್ಯಮಾಡುವುದನ್ನು ವಿಶೇಷವಾಗಿ ಅರಿಯುತ್ತ ಕೊಂಡಿರುವವನು. ಅಥವಾ ತನಗೆ ಅನುಕೂಲವಾಗಿ ಬುದ್ಧಿಪೂರ್ವಕವಾಗಿ ಜೀವರಿಗೆ ಎಲ್ಲಾ ವ್ಯಾಪಾರ ಗಳನ್ನು ಪ್ರೇರೇಪಿಸುವವನು ಭರ್ತಾ ಚ = ಬ್ರಹ್ಮಾದಿಗಳನ್ನು ಪೋಷಿಸಿಕೊಂಡಿರುವವನು. ಭೋಕ್ತಾ = ಎಲ್ಲಾ ಕರ್ಮ ಫಲಗಳ ಸಾರವನ್ನು ಭೋಗಿಸಿಕೊಂಡಿರುವವನು. ಮಹೇಶ್ವರಃ = ಅಪರಿಮಿತ ಶಕ್ತಿ ಯುಳ್ಳವನಾದುದರಿಂದ ಸರ್ವರಿಗೂ ಮಹಾಸ್ವಾಮಿಯು, ಪರಮಾತ್ಮೇತಿ ಚ = ಪರಮ ಚೇತನನೆಂದೂ ಉಕ್ತಃ = ಹೇಳಿಸಿಕೊಳ್ಳಲ್ಪಟ್ಟಿದ್ದಾನೆ ॥ ೨೩ ॥

ಪೀ—ಜೀವರ ಜನ್ಮಕ್ಕೆ ಕಾರಣವಾದ ಸತ್ವಾದಿಗುಣ ಸಂಬಂಧವು ಜಡವಾದುದರಿಂದ ಸ್ವತಂತ್ರ ಕಾರಣವಾಗಲಾರದು ಅದಕಾರಣ ಸ್ವತಂತ್ರ ಕಾರಣನು ಯಾರೆಂದರೆ—

ತಾ ॥ (೧) ಸ್ವತಂತ್ರಕಾರಣಂ ತು ಪರಮೇಶ್ವರ (ಪರಮ) ಏವೇತ್ಯಾಹ । ಉಪದ್ರಷ್ಟಾಽನು-
ಮಂತೇತಿ ॥ (೨) ಸರ್ವೇಭ್ಯ ಉಪರಿ (ಸೋ) ದ್ರಷ್ಟಾ ಯದುಪದ್ರಷ್ಟೃತಾಽಮಲಾ ।
ಸ್ವಾತಂತ್ರ್ಯೇಣ್ಯಾನುಕೂಲ್ಯೇನ ಮತ್ವಾ ಪ್ರೇರಯತಿ ಸ್ಮ ಯತ್ । ಅನುಮಂತೇ
ಶ್ಯತಃ ಸ್ವಯಂ ಪ್ರಭುರಸೌ ಹರಿಃ । ಮಹಾಶಕ್ತಿರ್ಯತೋ ವಿಷ್ಣುರ್ಮಹೇಶ್ವರ

ಇತೀರಿತಃ । ಪರಮತ್ವಾಚ್ಚ ತಸ್ಯೈವ ಹ್ಯನುಮಂತೃತ್ವಮುಚ್ಯತೇ । ಸ ಏವ ಸರ್ವದೇಹೇಷು ದೇಹಿನೋಽನ್ಯೋ ವ್ಯವಸ್ಥಿತ ಇತಿ ಚ ॥ (೩) ಮಾಂ ವಿದ್ಧಿ ಸರ್ವಕ್ಷೇತ್ರೇಷ್ವಿತಿ ದೇಹೇಽಪ್ಯುಕ್ತಃ । ತೇನಾಹಮೇವ ಸ ಇತಿ ದರ್ಶಯತಿ ॥ ೨೩ ॥

ಅ ॥ (೧) ಉಪದ್ರಷ್ಟಾಽನುಮಂತಾ ಎಂಬುವುದರಿಂದ ಸ್ವತಂತ್ರಕಾರಣನಾದರೂ ಶ್ರೀಪರಮಾತ್ಮನೆ ಎನ್ನುತ್ತಾರೆ. (೨) (ಇದರಿಂದ ಶ್ರೀಪರಮಾತ್ಮನು ಸ್ವತಂತ್ರಕಾರಣನೆಂದು ಸಿಗುವುದು ಹೇಗೆಂದರೆ-) ಬ್ರಹ್ಮರುದ್ರಾದಿಗಳಿಗೆಲ್ಲರಿಗಿಂತಲೂ ಮೇಲೆ ಅಂದರೆ ಸರ್ವೋತ್ತಮನಾಗಿ ಜೀವರ ವ್ಯಾಪಾರಗಳನ್ನು ನೋಡುವುದರಿಂದ ಉಪದ್ರಷ್ಟಾ ಎಂದು ಹೆಸರುಳ್ಳವನು. ಸರ್ವ ಸಮರ್ಥನೂ ಉತ್ಪತ್ತಿ ರಹಿತನೂ ಆದ ಶ್ರೀಪರಮಾತ್ಮನು ತಾನೇ ಸರ್ವ ಸ್ವಾತಂತ್ರ್ಯದಿಂದ ತನ್ನ ಮನಸ್ಸಿಗೆ ವಿಕ್ಷೇಪರೂಪ ದೋಷವಿಲ್ಲದಿದ್ದವನಾಗಿ ನೋಡುತ್ತಾ ಬುದ್ಧಿಪೂರ್ವಕವಾಗಿ ಪ್ರೇರಿಸುವವನು ಅನುಮಂತಾ ಎನಿಸುತ್ತಾನೆ. ಶ್ರೀಪರಮಾತ್ಮನಿಗೆ ಮಹಾ ಶಕ್ತಿಯು ಇದ್ದುದರಿಂದ ಆತನು ಮಹೇಶ್ವರಃ ಎನಿಸುತ್ತಾನೆ. ಅವನೇ ಸರ್ವೋತ್ಕೃಷ್ಟನಾದುದರಿಂದ ಅಂದರೆ ಪರಮ ಚೇತನನಾದುದರಿಂದ ಅನುಮಂತಾ ಎನಿಸುತ್ತಾನೆ. ಆ ಶ್ರೀಪರಮಾತ್ಮನೇ ಬ್ರಹ್ಮಾದಿ ಜೀವರ ಶರೀರಗಳಲ್ಲಿ ನಿಯಾಮಕನಾಗಿದ್ದು ಆ ಜೀವರಿಗಿಂತ ಭಿನ್ನನಾಗಿ ಇರುತ್ತಾನೆ (೩) ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ಎಂದು ಮೊದಲು ಅನುಮಂತನಾಗಿ (ಪ್ರೇರಕನಾಗಿ) ದೇಹದಲ್ಲಿ ಇದ್ದಾನೆಂದು ಹೇಳಿದ್ದರಿಂದ ದೇಹೇಽಸ್ಮಿನ್ ದೇಹದಲ್ಲಿದ್ದಾನೆಂದು ಹೇಳಿದ್ದಾಗುತ್ತದೆ. ಆದರಿಂದ ದೇಹದಲ್ಲಿದ್ದ ನಾನೇ ಅನುಮಂತನು. (ಸರ್ವ ಪ್ರೇರಕನಾದ ಶ್ರೀಪರಮಾತ್ಮನು.) ಎಂದು ತೋರಿಸುತ್ತಾರೆ. ॥ ೨೩ ॥

ಟೀ—ಪ್ರಕೃತಿಂ ಪುರುಷಂ ಚೈವ ವಿದ್ಧಿ ಎಂದು ಹೇಳಿದ ಅರ್ಥದಲ್ಲಿ ಅಧಿಕಾರಿಗಳಿಗೆ ಆದರಾತಿಶಯವು ಹುಟ್ಟುವುದಕ್ಕಾಗಿ ಅವುಗಳ ಜ್ಞಾನಫಲವನ್ನು ಹೇಳುತ್ತಾರೆ –

**ಗೀ॥ ಯ ಏವಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಃ ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥ ೨೪ ॥**

ಅ ॥ ಯಃ — ಯಾವಾತನು, ಏವಂ ಪುರುಷಂ = ಜೀವ ಪರಮಾತ್ಮರೆಂಬ ಇಬ್ಬರು ಪುರುಷರನ್ನೂ ಪ್ರಕೃತಿಂ ಚ — ಅಚೇತನ ಚೇತನವೆಂಬುವ ಎರಡು ಪ್ರಕೃತಿಗಳನ್ನು ಕೂಡ, ಗುಣೈಃ ಸಹ – ಅವುಗಳಲ್ಲಿರುವ ಗುಣಗಳಿಂದ ಕೂಡಿಕೊಂಡು, ಅಂದರೆ ಜೀವನು ಪ್ರಕೃತಿಗುಣಗಳಿಂದ ಬದ್ಧನಾಗಿ ಸುಖ ದುಃಖಾದಿಗಳನ್ನನುಭವಿಸುವವನು. ಶ್ರೀಪರಮಾತ್ಮನು ಪ್ರಕೃತಿಸಂಬಂಧವಿಲ್ಲದವನು ಮಹಾ ಶಕ್ತಿಯುಳ್ಳವನು. ಸರ್ವರಿಗೆ ನಿಯಾಮಕನೂ ಜೀವರಿಗಿಂತ ವಿಲಕ್ಷಣನೂ ಈ ಪ್ರಕಾರ ವೇತ್ತಿ — ಪರೋಕ್ಷವಾಗಿ ತಿಳಿದು ಅಪರೋಕ್ಷವಾಗಿ ತಿಳಿಯುತ್ತಾನೋ, ಸಃ — ಆ ಅಧಿಕಾರಿಯು, ಸರ್ವಥಾವರ್ತಮಾನೋಽಪಿ — ಪ್ರಮಾದದಿಂದ ಅನ್ಯಾಯಕಾರ್ಯಗಳಲ್ಲಿ ಪ್ರವೃತ್ತಿಮಾಡಿದವನಾದಾಗ್ಯೂ, ಭೂಯಃ — ತಿರುಗಿ ನಾಭಿಜಾಯತೇ ಹುಟ್ಟುವದಿಲ್ಲ. (ಮುಕ್ತನಾಗುತ್ತಾನೆ.) ॥ ೨೪ ॥

ತಾ ॥ (೧) ಯತತ್ವ ಯದಿಕ್ಯಾಹ । ಉಪದ್ರಷ್ಟೇತಿ ॥ (೨) ಅನುಮಂತಾ ಇತ್ಯನು ವಿಶೇಷಕೋ ನಿರೂಪಕಃ ॥ (೩) ಪುರುಷಃ ಸುಖದುಃಖಾನಾಮಿತಿ ಜೀವ ಉಕ್ತಃ । ಪುರುಷಂ ಪ್ರಕೃತಿಂ ಚೇತಿ ಜೀವೇಶ್ವರೌ ಸಹೈವೋಚ್ಯೇತೇ ॥ (೪) ಅನ್ಯತ್ರ ಮಹಾತಾತ್ಪ-

ರ್ಯವಿರೋಧಃ । ಉತ್ಕರ್ಷೇ ಹಿ ಮಹಾತಾತ್ಪರ್ಯಂ ॥ (೫) ತಥಾ ಹಿ ಸೌಕರಾಯಣಶ್ರುತಿಃ । ಅವಾಚ್ಯೋತ್ಕರ್ಷೇ ಮಹತ್ತ್ವಾತ್ಸರ್ವವಾಚಾಂ ಸರ್ವನ್ಯಾಯಾನಾಂ ಚ ಮಹತ್ತತ್ಪರತ್ವಂ । ವಿಷ್ಣೋರನಂತಸ್ಯ ಪರಾತ್ಪರಸ್ಯ ತಚ್ಚಾಪ್ಯಸ್ತ್ಯೇವ ನ ಚಾತ್ರ ಶಂಕಾ ॥೧॥

ಟೀ ॥ (೧) ಯತಶ್ಚ ಯತ್=ಜಗತ್ತು ಯಾರಿಂದ ಕಾರ್ಯಗಳಲ್ಲಿ ಪ್ರವೃತ್ತಿಯನ್ನು ಮಾಡುತ್ತದೆ ಎಂದು ಪ್ರತಿಜ್ಞಾತವಾದುದನ್ನು ಉಪದ್ರಷ್ಟಾ (೨೩) ಎಂಬುವ ಶ್ಲೋಕದಿಂದ ಹೇಳುತ್ತಾರೆ. (೨) (ಅನುಮಂತಾ ಎಂಬುವ ಶಬ್ದದ ಅರ್ಥವನ್ನು ಹೇಳುತ್ತಾರೆ-) ಅನುಮಂತಾ=ಮತ್ತು ಮತ್ತು ಕರ್ತವ್ಯವಾದುದನ್ನು ವಿಶೇಷವಾಗಿ ಆಲೋಚಿಸುವವನು ಅಂದರೆ ಈ ಕರ್ಮವು ಇವನಿಗೆ ಮಾಡಲು ಶಕ್ಯವೆಂದು ವಿಮರ್ಶೆ ಮಾಡತಕ್ಕವನು (೩) (ಯ ಏನಂ ವೇತ್ತಿ ಪುರುಷಂ. (ಶ್ಲೋ. ೨೪) ಎಂಬುವಲ್ಲಿದ್ದ ಪುರುಷ ಶಬ್ದವನ್ನು ವ್ಯಾಖ್ಯಾನಮಾಡಲಿಕ್ಕೆ ಉಪೋದ್ಘಾತವನ್ನು ಹೇಳುತ್ತಾರೆ) ಪುರುಷಃ ಸುಖದುಃಖಾನಾಂ. (೨೧) ಎಂಬುವಲ್ಲಿ ಸುಖ ದುಃಖಭೋಕ್ತೃತ್ವವು ತೋರುವುದರಿಂದ ಜೀವನು ಹೇಳಲ್ಪಟ್ಟಿದ್ದಾನೆ. (ಉಪದ್ರಷ್ಟಾ (ಶ್ಲೋ. ೨೩) ಎಂಬುವುದರಿಂದ ಶ್ರೀಪರಮಾತ್ಮನು ಹೇಳಲ್ಪಟ್ಟಿದ್ದಾನೆ.) (ಹೀಗೆ ಜೀವೇಶ್ವರರಿಬ್ಬರೂ ಪ್ರಸ್ತುತರಾದುದರಿಂದ ಯ ಏನಂ ವೇತ್ತಿ ಪುರುಷಂ ಪ್ರಕೃತಿಂ (ಶ್ಲೋ. ೨೪) ಎಂಬುವಲ್ಲಿ ಪುರುಷಶಬ್ದದಿಂದ ಜೀವೇಶ್ವರರು ಇಬ್ಬರೂ ಒಟ್ಟಿಗೇನೇ ಹೇಳಲ್ಪಡುತ್ತಾರೆ. (೪) (ಯ ಏನಂ ವೇತ್ತಿ ಪುರುಷಂ ಎಂಬುವಲ್ಲಿ ಸಾಕ್ಷಾತ್ ಪರಮಾತ್ಮನೇ ನಾನಾಗಿದ್ದೇನೆಂದು ತಿಳಿದುಕೊಂಡು ಜೀವಬ್ರಹ್ಮೈಕ್ಯವು ಈ ವಾಕ್ಯದಿಂದ ಸಿದ್ಧವಾಗುತ್ತದೆಂದು ಕೆಲವರು ವ್ಯಾಖ್ಯಾನಮಾಡಿರುವರು. ಅದನ್ನು ದೂಷಿಸುತ್ತಾರೆ) ಜೀವಬ್ರಹ್ಮೈಕ್ಯವನ್ನು ಹೇಳಿದರೆ—ಸಮಸ್ತ ವೇದಗಳೂ ಪ್ರಧಾನವಾಗಿ (ಸರ್ವೋತ್ತಮನೆಂದು) ಪರಮಾತ್ಮನನ್ನು ಹೇಳುತ್ತವೆ, ಎಂದು ಹೇಳಿದ್ದರಿಂದ ವಿರೋಧವು ಬರುವುದು. (ಹೇಗೆಂದರೆ) ಸಮಸ್ತ ವೇದಗಳಿಗೆ ಶ್ರೀಪರಮಾತ್ಮನು ಸರ್ವೋತ್ತಮನು ಸರ್ವಗುಣಪರಿಪೂರ್ಣನೆಂಬುವಲ್ಲಿಯೇ ಮುಖ್ಯ ತಾತ್ಪರ್ಯವು (೫) (ಈ ವಿಷಯದಲ್ಲಿ ವೇದಪ್ರಮಾಣವನ್ನು ಹೇಳುತ್ತಾರೆ—) ಅದೇ ಅಭಿಪ್ರಾಯವನ್ನು ಸೌಕರಾಯಣ ಶ್ರುತಿಯು ಹೇಳುತ್ತದೆ. ಸರ್ವೋತ್ತಮನೂ ಅನಂತನೂ ಆದ ಶ್ರೀಪರಮಾತ್ಮನಿಗೆ ಸರ್ವೋತ್ಕೃಷ್ಟತ್ವವಿರುವುದರಿಂದಲೇ ಆತನ ಮಹಿಮೆಯನ್ನು ಸಂಪೂರ್ಣ ಹೇಳಲಿಕ್ಕೆ ಅಶಕ್ಯವಾಗಿರುವುದರಿಂದ ಅವಾಚ್ಯವೆಂದು ಕರೆಯಲ್ಪಟ್ಟ ವಿಷ್ಣು ಸರ್ವೋತ್ತಮತ್ವದಲ್ಲಿ ಸಮಸ್ತ ವೇದವಚನಗಳಿಗೂ ಸಮಸ್ತ ನ್ಯಾಯವ್ಯಾಖ್ಯಾದಿಗಳಾದ ಮೀಮಾಂಸಾ ಶಾಸ್ತ್ರಕ್ಕೂ ಮಹಾ ತಾತ್ಪರ್ಯವು. ಉತ್ಕರ್ಷದಲ್ಲಿ ಕೇವಲ ತಾತ್ಪರ್ಯವಲ್ಲದೆ ಉತ್ಕರ್ಷವೂ ಪಾರಮಾರ್ಥಿಕವಾಗಿಯೇ ಇದೆ. ಈ ವಿಷಯದಲ್ಲಿ ಶಂಕಾಕ್ಕೆ ಕಾರಣವಾದ ಯಾವ ಬಾಧಕವೂ ಇಲ್ಲ.

ಟೀ — ಹೇಗೆ ಬಾಧಕವಿಲ್ಲವೆಂದರೆ—

ಭಾ ॥ (೧) ಅತೋ ವಿರುದ್ಧಂ ತು ಯದತ್ರ ಮಾನಂ ತದಕ್ಷಜಾದಾವಥವಾಪಿ ಯುಕ್ತಿಃ ನ ತತ್ಪ್ರಮಾಣಂ ಭವಯೋ ವದಂತಿ ನ ಚಾಪಿ ಯುಕ್ತಿರ್ಹ್ಯಾಗಮತೋಽತಿದೃಷ್ಟೇರಿತಿ ॥ (೨) ಅತೋ ಯುಕ್ತಿಭಿರಪ್ಯೇತದಪಲಾಪ್ಯೋ ನ ಯುಜ್ಯತೇ ॥ (೩) ಪ್ರತೀಯಯಾ ಯುಕ್ತ್ಯಾ ವಿದ್ಯಮಾನತ್ವಾದಿ ಕಲ್ಪಯತಿ ಸಾಽಪ್ಯಾಭಾಸರೂಪೇತಿ ಸದಾ ಮಾಹಾತ್ಮ್ಯಂ ವೇದೈರುಚ್ಯತ ಇತಿ ಸಿದ್ಧ್ಯತಿ ॥(೪) ಅವಾಂತರಂ ಚ ತಾತ್ಪರ್ಯ

ಅ ॥ (೧) ಶ್ಯಾಮೋಽಥವಾ ಹೃದಯೇ ಸೋಽಶ್ವಬಾಹುಃ ಧ್ಯೇಯಸ್ಸ ವೈ ಲೋಹಿತಾಕ್ಷವರ್ಣಃ ಇತ್ಯಾದಿ ವೇದಗಳಲ್ಲಿ ಶ್ರೀಪರಮಾತ್ಮನಿಗೆ ಶ್ಯಾಮತ್ವಾದಿ ರೂಪಗಳನ್ನು ಅಶ್ವಬಾಹುವೇ ಮೊಲಾದ ಆಕಾರವನ್ನು ಹೇಳಿದೆ. (ರೂಪಾದಿಗಳು ಇಲ್ಲವೆಂದು ಹೇಳುವ ಶ್ರುತಿಗಳಿಗೆ ಪ್ರಾಕೃತರೂಪಾದಿಗಳು ಇಲ್ಲವೆಂದರ್ಥವು.) (೨) (ವೇದಗಳಿಂದ ವಿರೋಧವಿದ್ದ ಪ್ರಯುಕ್ತ ಯುಕ್ತ್ಯಾದಿಗಳು ಅಪ್ರಮಾಣಗಳೆಂದು ಹೇಳಿದೆ. ಇದು ಯುಕ್ತವಲ್ಲ ಹಾಗೆ ಹೇಳಲಿಕ್ಕೆ ನಿಯಾಮಕವಿಲ್ಲ. ಯುಕ್ತ್ಯಾದಿಗಳಿಂದ ವಿರೋಧವಿದ್ದ ಪ್ರಯುಕ್ತ ವೇದವೇ ಅಪ್ರಮಾಣವೆಂದು ಹೇಳಬಹುದಷ್ಟೆ ಎಂದರೆ—) ಪುರುಷರ ಅಜ್ಞಾನದಿಂದ ಪರಿಕಲ್ಪಿತವೆಂದು ತೋರುವುದರಿಂದ ಪುರುಷರ ಬುದ್ಧಿಯಿಂದ ಕಲ್ಪಿತಗಳಾದ ಯುಕ್ತ್ಯಾದಿಗಳಿಗೆ ಆಭಾಸತ್ವವು ಯುಕ್ತವು ಸಂಭಾವಿತವು. ಅಪೌರುಷೇಯವಾಗಿರುವುದರಿಂದ ಪುರುಷರ ಆಪ್ತ್ಯಾದಿ ಗುಣವನ್ನ ಪೇಕ್ಷಿಸದೇನೇ ಪ್ರಾಮಾಣ್ಯವುಳ್ಳ ಸ್ವತ ಏವ ಪ್ರಮಾಣವಾಗಿರತಕ್ಕ ವೇದಕ್ಕೆ (ಶುಷ್ಕಯುಕ್ತಿ ವಿರೋಧದಿಂದ ಆಭಾಸತ್ವವು (ಅಪ್ರಾಮಾಣ್ಯವು) ಸರ್ವಥಾ ಯುಕ್ತವಲ್ಲ. (೩) (ಯುಕ್ತಿಯು ಅಜ್ಞಾನ ಮೂಲಕವು ಎಂದು ಹೇಳಿದ್ದನ್ನು ಉಪಪಾದನ ಮಾಡುತ್ತಾರೆ-) ಬಹು ಪುರುಷರಿಗೂ ಅಜ್ಞಾನವು ಇರಬಹುದಾದ್ದರಿಂದ ಅನುಮಾನದಲ್ಲಿ ಬರುವ ವ್ಯಭಿಚಾರಾದಿ ದೋಷಗಳು ಇರುವುದು ಸಂಭಾವಿತವೇ. (ಅಂದರೆ—ವೇದಕ್ಕೂ ಯುಕ್ತ್ಯಾದಿಗಳಿಗೂ ಪರಸ್ಪರ ವಿರೋಧವು ಬಂದಲ್ಲಿ ಎರಡೂ ಪ್ರಮಾಣಗಳಾಗಲಾರವು. [illegible] ಎರಡರಲ್ಲಿ ಒಂದು ಅಪ್ರಮಾಣವೆಂದು ಕಲ್ಪಿಸಬೇಕು. ಆಗ ಯುಕ್ತ್ಯಾದಿಗಳು ಅಜ್ಞಾನ ಮೂಲಕಗಳೆಂದು ತೋರುವುದರಿಂದ ಯುಕ್ತ್ಯಾದಿಗಳೇ ಅಪ್ರಮಾಣಗಳೆಂದು ಕಲ್ಪಿಸಬೇಕು. ವೇದಕ್ಕೆ ಅಜ್ಞಾನಮೂಲಕತ್ವವು ತೋರದಿರುವುದರಿಂದ ವೇದಕ್ಕೆ ಆಭಾಸತ್ವವನ್ನು ಕಲ್ಪಿಸಕೂಡದು.) (೪) ವೇದಕ್ಕೆ ಯುಕ್ತಿವಿರೋಧವು ವೇದಗಳಿಗೆ ಅಪ್ರಾಮಾಣ್ಯ ಹೇಳುವುದರಲ್ಲಿ ಕಾರಣವಾಗದಿದ್ದರೂ, ನಾವು ತಿಳಿಯದಿರುವ ವೇದಾಂಗಳಲ್ಲಿ ಭಗವಂತನಿಗೆ ಗುಣೋತ್ಕರ್ಷವು ಇಲ್ಲವೆಂದು ಹೇಳಿದೆ ಎಂದಾಗಬೇಕಾಗುವದೆಂದು ಹೇಳಕೂಡದು. ಏಕೆಂದರೆ ಅದೇ ಶ್ರುತಿಯಲ್ಲಿ ಭಗವಂತನು ಸರ್ವಗುಣಪರಿಪೂರ್ಣನು ಸರ್ವೋತ್ತಮನು ಎಂಬುವುದಕ್ಕೆ ವಿರುದ್ಧಗಳಾದ ವಚನಗಳು ಇಲ್ಲವೇ ಇಲ್ಲ. ಗುಣೋತ್ಕರ್ಷಕ್ಕೆ ವಿರುದ್ಧಗಳಾದ ಯುಕ್ತಿಗಳು ಇಲ್ಲ, ಎಂದು ಚತುರ್ಮುಖನು ಹೇಳಿರುವನು ಎಂದು ವೇದಪುರುಷನು ಹೇಳಿದ್ದಾನೆ (೫)(ಸಮಸ್ತ ವೇದಗಳಿಗೆ ಭಗವದ್ಗುಣೋತ್ಕರ್ಷದಲ್ಲಿಯೇ ಮಹಾ ತಾತ್ಪರ್ಯವನ್ನು ಹೇಳಿರುವದರಿಂದ ಶ್ರೀಪರಮಾತ್ಮನಿಗೆ ಜೀವೈಕ್ಯವು ವೇದಾದಿ ಪ್ರಮಾಣಗಳಿಂದಲೂ ಸೂತ್ರ ಇತಿಹಾಸಾದಿಗಳಿಂದಲೂ ವಿರುದ್ಧವಾಗಿದೆ, ಎನ್ನುತ್ತಾರೆ-) ರೂಪಂ ರೂಪಂ ಪ್ರತಿರೂಪೋ ಬಭೂವ ಎಂಬುವ ಶ್ರುತಿಯಿಂದ ಜೀವನು ‡ ಪ್ರತಿಬಿಂಬನಾದುದರಿಂದ ಮುಕ್ತ್ಯಾದಿ ಭಗವದ್ರೂಪಗಳಿಗೆ ಸಮಾನನಲ್ಲವೇ ಅಲ್ಲ. (ಇದರಿಂದ ಪರಮಾತ್ಮನಿಂದ ಐಕ್ಯವೂ ನಿಷಿದ್ಧವಾಯ್ತು) ॥ ೩

ಟೀ—ಜೀವಬ್ರಹ್ಮೈಕ್ಯವು ತೋರುವುದಿಲ್ಲವೆಂಬುವಲ್ಲಿ ಭಾರತ ಪ್ರಮಾಣವನ್ನು ದಾಖಲಿಸುತ್ತಾರೆ—

ಭಾ ॥ (೧) ಜನಮೇಜಯ ಉವಾಚ । ಬಹವಃ ಪುರುಷಾ ಬ್ರಹ್ಮನ್ನುತಾಹೋ ಏಕ ಏವ ತು । ಕೋ ಹ್ಯತ್ರ ಪುರುಷಶ್ರೇಷ್ಠಸ್ತಂ ಭವಾನ್ವಕ್ತುಮರ್ಹತಿ ॥ ವೈಶಂಪಾಯನ ಉವಾಚ । ನೈತದಿಚ್ಛಂತಿ ಪುರುಷಮೇಕಂ ಕುರುಕುಲೋದ್ವಹ । ಬಹೂನಾಂ ಪುರುಷಾಣಾಂ ಹಿ ಯಥೈಕಾ ಯೋನಿರುಚ್ಯತೇ । ತಥಾ ತಂ ಪುರುಷಂ ವಿಶ್ವಮಾಖ್ಯಾಸ್ಯಾಮಿ ಗುಣಾಧಿಕಮಿತಿ ಮೋಕ್ಷಧರ್ಮೇ ॥ (೨) ನ ಚೈತತ್ಸರ್ವಂ ಸ್ವಪ್ನೇಂದ್ರಜಾಲವತ್ ॥ (೩) ವೈಧರ್ಮ್ಯಾಚ್ಚ ನ ಸ್ವಪ್ನಾದಿವದಿತಿ ಭಗವದ್ವಚನಂ ॥ (೪) ನ ಚ

‡ [illegible]

**ಸ್ವಪ್ನಾದಿವದೇಕಜೀವಕಲ್ಪಿತತ್ವೇ ಮಾನಂ ಪಶ್ಯಾಮಃ ॥ (೫) ವಿಪರ್ಯಯೇ ಮಾ ಕೋಕ್ತಾ ದ್ವಿತೀಯೇ ॥ ೯ ॥**

**ಟೀ ॥** (೧) ಜನಮೇಜಯರಾಜನು ವೈಶಂಪಾಯನಾಚಾರ್ಯರೊಡನೆ ಪ್ರಶ್ನೆ ಮಾಡುತ್ತಾನೆ. ಎಲೋ ವೈಶಂಪಾಯನಾಚಾರ್ಯರೇ ಲೋಕದಲ್ಲಿ ಬಹುಮಂದಿ ಪುರುಷರೋ, ಅಥವಾ ಒಬ್ಬನೇ ಪುರುಷನೋ, ಬಹುಮಂದಿ ಚೇತನರೋ ಎಂಬುವ ಪಕ್ಷದಲ್ಲಿಯೂ ಅವರಲ್ಲಿ ಎಲ್ಲರೂ ಸಮಾನರೋ, ಅಥವಾ ಅವರಲ್ಲಿ ಒಬ್ಬನು ಶ್ರೇಷ್ಠನಿದ್ದಾನೋ, ಶ್ರೇಷ್ಠನಿದ್ದಾನೆಂದಾದರೆ=ಆ ಚೇತನರಲ್ಲಿ ಶ್ರೇಷ್ಠನು ಯಾರು? ಅವನು ಹೇಗೆ ಶ್ರೇಷ್ಠನು. ಶ್ರೇಷ್ಠತ್ವನಿಮಿತ್ತವಾದ ಧರ್ಮಗಳಿಂದ ಕೂಡಿದ ಪುರುಷನನ್ನು ಹೇಳಬೇಕು, ಎಂದು ಪ್ರಶ್ನೆಸಿದಾಗ ವೈಶಂಪಾಯನಾಚಾರ್ಯರು ಉತ್ತರ ಹೇಳುತ್ತಾರೆ. ಎಲೋ ಜನಮೇಜಯನೇ ಈ ಜಗತ್ತಿನಲ್ಲಿ ಒಬ್ಬನೇ ಚೇತನನೆಂಬುವುದನ್ನು ಜ್ಞಾನಿಗಳು ಒಡಂಬಡುವುದಿಲ್ಲ. (ವಾಸ್ತವ ಬಹು ಚೇತನರು ಇದ್ದಾರೆ.) ಆ ಬಹುಚೇತನರ ಮಧ್ಯದಲ್ಲಿ ಯಾರು ಮುಖ್ಯವಾಗಿ ಸರ್ವರಿಗೂ ಕಾರಣಭೂತನೋ, ಸರ್ವರಿಗಿಂತಲೂ ಶ್ರೇಷ್ಠನೋ ಅಂತಹ ಪುರುಷನೆನಿಸಿದ ಶ್ರೀಹರಿವಿಷ್ಣುವನ್ನು ಸರ್ವತ್ರ ವ್ಯಾಪ್ತನನ್ನಾಗಿಯೂ ಸರ್ವಗುಣಪರಿಪೂರ್ಣನನ್ನಾಗಿಯೂ ನಿನಗಾಗಿಯೂ ಹೇಳುವೆನು, ಎಂದು ಮೋಕ್ಷಧರ್ಮದಲ್ಲಿದೆ. (೨) (ಸಂಪೂರ್ಣ ಜಗತ್ತೂ ಸ್ವಪ್ನದಂತೆ ಒಬ್ಬ ಜೀವನ ಅಜ್ಞಾನದಿಂದ ಕಲ್ಪಿತವಾದದ್ದು, ಎಂದು ಏಕಜೀವವಾದಿಗಳು ಹೇಳುತ್ತಾರೆ. ಇಂದ್ರಜಾಲದಂತೆ ಅನೇಕ ಜೀವರ ಅಜ್ಞಾನದಿಂದ ಪರಿಕಲ್ಪಿತವೆಂದು ಬಹುಜೀವವಾದಿಗಳು ಹೇಳುತ್ತಾರೆ. ತಥಾಚ ನಿಕೃಷ್ಟವಾದ ಜಗತ್ತು ಸುಳ್ಳಾದುದರಿಂದ ಉತ್ಕೃಷ್ಟನಾದ ಪುರುಷೋತ್ತಮ ಇರಲಾರನು. ಆದಕಾರಣ ಸಮಸ್ತ ವೇದಗಳಿಗೆ ಶ್ರೀಹರಿಸರ್ವಾತ್ಮನ ಸರ್ವೋತ್ಕರ್ಷದಲ್ಲಿ ಮಹಾ ತಾತ್ಪರ್ಯವೆಂಬುವುದು ಹೇಗೆ ಕೂಡುವುದು? ಎಂದರೆ—) ಸಂಪೂರ್ಣ ಜಗತ್ತು ಸ್ವಾಪ್ನ ಪದಾರ್ಥದಂತೆ ಒಬ್ಬನ ಅಜ್ಞಾನದಿಂದ ಪರಿಕಲ್ಪಿತವೆಂದೂ, ಇಂದ್ರಜಾಲದಂತೆ ಅನೇಕ ಜೀವರ ಅಜ್ಞಾನದಿಂದ ಕಲ್ಪಿತವೆಂದು ಸರ್ವಥಾ ಹೇಳಕೂಡದು. (೩) ಪ್ರತ್ಯಕ್ಷಾದಿ ಪ್ರಮಾಣಗಳಿಂದ ಜಗತ್ತು ವಾಸ್ತವವಾಗಿ ಇದೆ ಎಂದು ಸ್ಪಷ್ಟವಾಗಿ ತಿಳಿದು ಬರುವ ಜಗತ್ತೂ, ಸ್ವಾಪ್ನ ಪದಾರ್ಥ, ಹಗ್ಗವನ್ನು ಹಾವು ಎಂದು ತಿಳಿದುಕೊಳ್ಳುವುದು ಇತ್ಯಾದಿಗಳಂತೆ ಸುಳ್ಳು ಎಂದು ಸರ್ವಥಾ ಹೇಳಕೂಡದು. ಸ್ವಪ್ನಾದಿಗಳಲ್ಲಿ ಉತ್ತರಕಾಲದಲ್ಲಿ ಇದು ಸ್ವಪ್ನವು. ಜಾಗ್ರತ್ಪದಾರ್ಥವಲ್ಲ, ಹಗ್ಗವನ್ನು ನೋಡಿ ಹಾವೆಂದು ತಿಳಿದಲ್ಲಿ ಉತ್ತರಕಾಲದಲ್ಲಿ ಇದು ಹಗ್ಗವೇ, ಹಾವಲ್ಲ, ಇದು ಮೊದಲಾದ ಅನುಭವವು ಇದೆ ಎಂದು ಹೇಳುವ ವೈಧರ್ಮ್ಯವಿದ್ದು "ನ ಸ್ವಪ್ನಾದಿವತ್" ಎಂಬುವ ಭಗವದ್ವಚನದಿಂದಲೂ (ಜಗತ್ತಿಗೆ ಸತ್ಯತ್ವವು ಸಿದ್ಧವಾಗುತ್ತದೆ.) (೪) ಸ್ವಾಪ್ನಪದಾರ್ಥದಂತೆ ಜಗತ್ತು ಒಬ್ಬ ಜೀವನಿಂದ ಕಲ್ಪಿಸಲ್ಪಟ್ಟಿದೆಂಬುವ ವಿಷಯದಲ್ಲಿಯೂ (ಇಂದ್ರಜಾಲದಂತೆ ಬಹುಜೀವರಿಂದ ಕಲ್ಪಿಸಲ್ಪಟ್ಟಿದ್ದೆಂಬುವ ವಿಷಯದಲ್ಲಿಯೂ) ಯಾವ ಪ್ರಮಾಣವೂ ಇರುವುದಿಲ್ಲ. (೫) ಜಗತ್ತು ಸತ್ಯವೇ, ಎಂಬುವ ವಿಷಯದಲ್ಲಿ ೨ನೇ ಅಧ್ಯಾಯದಲ್ಲಿ ಪು. ೬೫ರಲ್ಲಿ "ವಿಶ್ವಂ ಸತ್ಯಂ ಯುಷ್ಮದೀಶ ಸತ್ಯಮಿತ್" ಇದು ಮೊದಲಾದ ಅನೇಕ ಪ್ರಮಾಣಗಳು ಹೇಳಲ್ಪಟ್ಟಿವೆ. ॥ ೯ ॥

ಟೀ—ಜಗತ್ತು ಸತ್ಯವೇ ಎಂದಾದರೆ—ಅಪಿದ್ಯಮಾನೋ ಹ್ಯವಧಾತಿ ಹಿ ದ್ವಯೋ ಧ್ಯಾತುರ್ಧಿಯಾ ಸ್ವಪ್ನಮನೋರಥೋ ಯಥಾ ಎಂದು ಭಾಗವತಾದಿ ಪುರಾಣಗಳಲ್ಲಿ ಜಗತ್ತಿಗೆ ಸ್ವಪ್ನಾದಿಗಳ ಸಾಮ್ಯವು ಹೇಳಿದ್ದು ಹೇಗೆ ಎಂದರೆ—

**ತಾ ॥** (೧) ಉಕ್ತಂ ಚಾಯಾಸ್ಯಶಾಖಾಯಾಂ । ಸ್ವಪ್ನೋ ಜನಾ ಅಯಂ ಚಂಚಲತ್ವಾನ್ನ ಚ ಸ್ವಪ್ನೋ ಸಹಿ ವಿಚ್ಛೇದ ಇತರಿತಿ ॥ (೨) ನಾಮಯಂ ದೋಷಃ । ಸ ಏವಿಸ್ವರಸ

ಜೀವೈಕ್ಯಮುಚ್ಯತೇ ॥ (೩) ಜೀವಸ್ಯ ಹೀಶ್ವರೈಕ್ಯಮಿತಿ ಧ್ಯೇಯಂ ॥ (೪) ತದಪಿ ನ ನಿರುಪಾಧಿಕಂ । ಅತೋ ನ ಪ್ರತಿಬಿಂಬತ್ವವಿರೋಧ್ಯೈಕ್ಯಂ ॥ (೫) ತಥಾ ಚ ಮಾಧುಚ್ಛಂದಸಶ್ರುತಿಃ । ಐಕ್ಯಂ ಚಾಪಿ ಪ್ರಾತಿಬಿಂಬ್ಯೇನ ವಿಷ್ಣೋರ್ಜೀವಸ್ಯೈವೈತದ್ಧ್ಯೃಷಯೋ ವದಂತೀತಿ ॥ (೬) ಅಹಂಗ್ರಹೋಪಾಸನೇ ಚ ಫಲಾಧಿಕ್ಯಮಾಗ್ನಿವೇಶ್ಯಶ್ರುತಿಸಿದ್ಧಂ ॥ (೭) ಅಹಂಗ್ರಹೋಪಾಸಕಸ್ತಸ್ಯ ಸಾಮ್ಯಮಭ್ಯಾಶೋ ಹ ವಾ ಅಶ್ನುತೇ ನಾತ್ರ ಶಂಕೇತಿ । ತದೀಯೋಽಹಮಿತಿ ಜ್ಞಾನಮಹಂಗ್ರಹ ಇತೀರಿತ ಇತಿ ವಾಮನೇ॥ (೮) ತದ್ವಶತ್ವಾತ್ತು ಸೋಽಸ್ಮೀತಿ ಭೃತ್ಯೈರೇವ ನತು ಸ್ವತ ಇತಿ ಚ । ಪ್ರಾತಿಬಿಂಬ್ಯೇನ ಸೋಽಸ್ಮಿ ಭೃತ್ಯಶ್ಚೇತಿ ಭಾವನಾ । ತಥಾ ಹ್ಯಯಾಸ್ಯಶಾಖಾಯಾಂ । ಭೃತ್ಯಸ್ತ್ವಾಹಂ ಪ್ರಾತಿಬಿಂಬ್ಯೇನ ಸೋಽಸ್ಮೀತ್ಯೇವಂ ಹ್ಯುಪಾಸ್ಯಃ ಪರಮಃ ಪುಮಾನ್ಸ ಇತಿ। ಪ್ರಾತಿಬಿಂಬ್ಯಂ ಚ ತತ್ಸಾಮ್ಯಮೇವ ॥ ೫ ॥ ॥ ೨೩,೨೪ ॥

ಅ ॥ (೧) ಈ ಜಗತ್ತು ಅನಿತ್ಯವಾಗಿರುವುದರಿಂದಲೂ ವಿಕಾರವುಳ್ಳದ್ದಾಗಿರುವುದರಿಂದಲೂ ಸ್ವಪ್ನ ಮನೋರಥದಂತೆ ಎಂದು ಹೇಳಲ್ಪಡುತ್ತದೆ. ವಸ್ತುತಃ ಸ್ವಪ್ನಸದೃಶವಲ್ಲ. (ಸುಳ್ಳು ಅಲ್ಲ.) ಏಕೆಂದರೆ ಎಚ್ಚೆತ್ತ ಮೇಲೆ ಈ ವಸ್ತುವು ಕನಸಿನಲ್ಲಿಯೇ ತೋರಿದ್ದು. ಜಾಗ್ರತ್ಪದಾರ್ಥದಲ್ಲಿ ತೋರಿದ ವಸ್ತುವಲ್ಲ, ಎಂದು ಇತ್ಯಾದಿ ರೀತಿಯಿಂದ ಸ್ವಾಪ್ನಾರ್ಥದಲ್ಲಿ ಬಾಧಜ್ಞಾನವು ಇದ್ದಂತೆಯೇ ಈ ಜಗತ್ತು ಇಲ್ಲವೆಂದು ಜಗದ್ವಿಷಯದಲ್ಲಿ ಬಾಧಜ್ಞಾನವಿಲ್ಲ. (೨) (ಅಹಂ ಬ್ರಹ್ಮಾಸ್ಮಿ ಎಂದು ಜೀವನು ಪರಬ್ರಹ್ಮನನ್ನು ಉಪಾಸನಾಮಾಡತಕ್ಕದು. ಜೀವನು ಸರ್ವೋತ್ಕೃಷ್ಟನಲ್ಲ. ಅಂತಹ ಜೀವನಿಂದ ಐಕ್ಯಹೊಂದಿದ ಶ್ರೀಪರಮಾತ್ಮನು ಸರ್ವೋತ್ತಮನು ಹೇಗೆ ಆದಾನು ಎಂದರೆ—) ಶ್ರೀಪರಮಾತ್ಮನಿಗೆ ಜೀವನಿಂದ ಐಕ್ಯವನ್ನು ಯಾವ ಶ್ರುತಿಯೂ ಹೇಳುವುದಿಲ್ಲ. ಆದುದರಿಂದ ಶ್ರೀಪರಮಾತ್ಮನಿಗೆ ಸರ್ವೋತ್ಕರ್ಷವು ಕೂಡ ಲಾರದೆಂಬುವ ದೋಷವಿಲ್ಲ. (೩) ಯದ್ಯಪಿ ಅಹಂ ಬ್ರಹ್ಮಾಸ್ಮಿ ಎಂಬುವ ಶ್ರುತಿಯಲ್ಲಿ ಜೀವನಿಗೆ ಅಪಾತತಃ ಬ್ರಹ್ಮೈಕ್ಯವು ತೋರುವುದರಿಂದ ಅಹಂಗ್ರಹೋಪಾಸ್ತಿಯು ಅವಶ್ಯ ಕರ್ತವ್ಯವೆಂದು ತೋರುತ್ತದೆ. (೪) ಆದರೂ ಜೀವನಿಗೆ ಪರಬ್ರಹ್ಮನಿಂದ ತೋರುವ ಐಕ್ಯವು ನಿರುಪಚರಿತವಲ್ಲ. ಅಂದರೆ ಸ್ವರೂಪೈಕ್ಯರೂಪವಾದ ಮುಖ್ಯೈಕ್ಯವಲ್ಲ. ಆದಕಾರಣ ಜೀವನಿಗೆ ಪರಮಾತ್ಮನಿಂದ ಸಾಕ್ಷಾದೈಕ್ಯವು ವಿವಕ್ಷಿತವಾಗದಿರುವುದರಿಂದ ಅಹಂ ಬ್ರಹ್ಮಾಸ್ಮಿ ಇತ್ಯಾದಿಗಳಲ್ಲಿ ಹೇಳಲ್ಪಡತಕ್ಕ ಐಕ್ಯವು ಪ್ರತಿಬಿಂಬತ್ವಕ್ಕೆ ವಿರೋಧಿಯಲ್ಲ. ಮತ್ತೆ ಅಪಾತತಃ ತೋರುವ ಐಕ್ಯವು ಜೀವನಿಗೆ ಶ್ರೀಪರಮಾತ್ಮನ ಪ್ರತಿಬಿಂಬತ್ವರೂಪವಾದುದೇ. (ಪ್ರತಿಬಿಂಬತ್ವವೆಂದರೆ ಶ್ರೀಪರಮಾತ್ಮನ ಅಧೀನನಾಗಿದ್ದು ಶ್ರೀಪರಮಾತ್ಮನಿಂದ ಯತ್ಕಿಂಚಿತ್ ಸಾದೃಶ್ಯವಿರುವುದು.) (೫) (ಸಾಕ್ಷಾತ್ ಐಕ್ಯವೆಂದು ಏಕೆ ಅರ್ಥವಾಗಬಾರದು. ಪ್ರತಿಬಿಂಬತ್ವರೂಪವೇ ಎಂದು ಏಕೆ ಹೇಳಬೇಕು ಎಂದರೆ—) ಜೀವನಿಗಾದರೂ ಶ್ರೀವಿಷ್ಣುವಿನಿಂದ ಐಕ್ಯವನ್ನು ಋಷಿಗಳು ಏನು ಹೇಳುತ್ತಾರೋ ಅದು ಪ್ರತಿಬಿಂಬರೂಪವಾದ ನಿಮಿತ್ತದಿಂದಲೇ. ಎಂದು ಮಾಧುಛಂದಸ ಶ್ರುತಿಯಲ್ಲಿ ಹೇಳಿದೆ (೬) ನಾನು ಶ್ರೀಪರಮಾತ್ಮನ ದಾಸನಾಗಿದ್ದೇನೆ ಎಂಬ ಅಹಂಗ್ರಹೋಪಾಸನದಲ್ಲಿ ಅಧಿಕಾರಿಗೆ ಫಲವು ಹೆಚ್ಚು ಇದೆ ಎಂಬುವುದು ಅಗ್ನಿವೇಶ್ಯಶ್ರುತಿಸಿದ್ಧವಾಗಿದೆ. ನಾನು ಶ್ರೀಪರಮಾತ್ಮನ ಭೃತ್ಯನೆಂದು ಉಪಾಸನಾಮಾಡುವವನು ಶೀಘ್ರವಾಗಿ ಅಲ್ಪಕಾಲದಿಂದಲೇ ಶ್ರೀಪರಮಾತ್ಮನ ಸಾಮ್ಯವನ್ನು ಹೊಂದುತ್ತಾನೆ ಈ ವಿಷಯದಲ್ಲಿ ಸಂದೇಹವಿಲ್ಲ. ಅಹಂಗ್ರಹೋಪಾಸನೆಗೆ ಶ್ರೀಪರಮಾತ್ಮನ ಸಾರೂಪ್ಯವೇ ಫಲ ಪ್ರಯೋಜನವು. ವಾಚ್ಯವಾಗಿ ಐಕ್ಯವನ್ನೇ ಉಪಾಸನೆಮಾಡುವುದೇ ಆದರೆ ದಂ ಯಥಾ ಯಥೋಪಾಸತೇ ತದೇವ ಭವತಿ ಎಂಬ ಶ್ರುತಿಯ ಅರ್ಥದಿಂದ ಅಧಿಕ … ಅನಿಷ್ಟವಾದ ಫಲ …

ನ್ಯಕ್ಕೆ ಹೇಳಿದ್ದು ಕೂಡದೆ ಹೋಗುವುದು) (ಅಹಂಗ್ರಹಃ ಎಂಬುವ ಉಪಾಸನೆಯು ನಾನೇ ಪರಮಾತ್ಮನೆಂಬುವ ಮುಖ್ಯೋಪಾಸನೆಯಲ್ಲ, ಮತ್ತೆ ನಾನು ಶ್ರೀಪರಮಾತ್ಮನ ಅಧೀನನೆಂಬುವ ಜ್ಞಾನವೇ ಅಹಂಗ್ರಹಶಬ್ದಾರ್ಥವು, ಎಂದು ವಾಮನಪುರಾಣದಲ್ಲಿದೆ. (೮) ಜೀವನು ಶ್ರೀಪರಮಾತ್ಮನ ಅಧೀನದಲ್ಲಿದ್ದುದರಿಂದ ಶ್ರೀಪರಮಾತ್ಮನ ಅಧೀನನೇ ನಾನಾಗಿದ್ದೇನೆ, ಎಂದು ಭೃತ್ಯರಿಂದಲೇ ಉಪಾಸನಾಮಾಡಲ್ಪಡತಕ್ಕವನು. ಜೀವನಿಗೆ ಪರಬ್ರಹ್ಮನಿಂದ ಸಾಕ್ಷಾತ್ ಐಕ್ಯದಿಂದ ಈ ಉಪಾಸನೆಯೆಂದು ಹೇಳಕೂಡದು. ಪರಮಾತ್ಮನ ಅಧೀನನಾಗಿದ್ದು ಪರಮಾತ್ಮನ ಕಿಂಚಿತ್ಸಾದೃಶ್ಯವಿದ್ದುದರಿಂದ ಸೋऽಹಮಸ್ಮಿ ಎಂದು ಅಹಂಗ್ರಹೋಪಾಸನೆಯು. ಅಂದರೆ ಶ್ರೀಪರಮಾತ್ಮನ ಭೃತ್ಯನೆಂದು ಭಾವನೆಯು. ಇದೇ ಅಭಿಪ್ರಾಯವನ್ನು ಅಯಾಸ್ಯಶಾಖೆಯಲ್ಲಿಯೂ ಹೇಳಿದೆ. ಪರಮಾತ್ಮನಿಗೆ ಸದೃಶನಾಗಿ ಪರಮಾತ್ಮನ ಅಧೀನನಾಗಿದ್ದುದರಿಂದ ನಾನು ಶ್ರೀಪರಮಾತ್ಮನ ಭೃತ್ಯನು, ಎಂಬೀ ಭಾವನೆಯಿಂದ ಸರ್ವೋತ್ತಮನಾದ ಪುರುಷಶಬ್ದವಾಚ್ಯನಾದ ಶ್ರೀಪರಮಾತ್ಮನನ್ನು ಸೋऽಹಮಸ್ಮಿ ಎಂದು ಉಪಾಸನಾ ಮಾಡಬೇಕು. ಪ್ರತಿಬಿಂಬನೆಂದರೆ—ಶ್ರೀಪರಮಾತ್ಮನ ಕಿಂಚಿತ್ಸಾದೃಶ್ಯವಿದ್ದು ಪರಮಾತ್ಮನ ಅಧೀನನಹುದೇ, ಎಂದು ತಿಳಿಯಬೇಕು. ಸರ್ವಥಾ ಐಕ್ಯರೂಪವಲ್ಲ. (ಆದುದರಿಂದ ಶ್ರೀಪರಮಾತ್ಮನಿಗೆ ಜೀವನಿಂದಲಾಗಲೀ ಜೀವನಿಗೆ ಪರಮಾತ್ಮನಿಂದಲಾಗಲೀ ಮುಖ್ಯೈಕ್ಯವು ಯಾವ ಶ್ರುತಿಯಲ್ಲಿಯೂ ಹೇಳದಿದ್ದುದರಿಂದ ಶ್ರೀಪರಮಾತ್ಮನಿಗೆ ಸರ್ವೋತ್ಕರ್ಷದಲ್ಲಿ ಎಲ್ಲಾ ವೇದಗಳಿಗೆ ಮಹಾತಾತ್ಪರ್ಯವಿದೆ, ಎಂದು ಹೇಳಿದ್ದಕ್ಕೆ ಯಾವ ವಿರೋಧವೂ ಇಲ್ಲ.) ॥ ೨೩, ೨೪ ॥

ಪೀ—ಶ್ರೀಪರಮಾತ್ಮನ ದರ್ಶನಸಾಧನವನ್ನು ಹೇಳುತ್ತಾರೆ—

**ಗೀ ॥ ಧ್ಯಾನೇನಾऽऽತ್ಮನಿ ಪಶ್ಯಂತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥ ೨೫ ॥**

ಅ ॥ ಕೇಚಿತ್=ಶಾಸ್ತ್ರಶ್ರವಣ ಮನನಗಳನ್ನು ಮಾಡಿದ ಕೆಲವು ಅಧಿಕಾರಿಗಳು, ಧ್ಯಾನೇನ—ಧ್ಯಾನದಿಂದ, ಆತ್ಮನಾ—ಬುದ್ಧಿಯಿಂದ, ಆತ್ಮಾನಂ—ಶ್ರೀಪರಮಾತ್ಮನನ್ನು, ಆತ್ಮನಿ=ದೇಹದಲ್ಲಿ ಪಶ್ಯಂತಿ=ನೋಡುತ್ತಾರೆ. ಅನ್ಯೇ—ಇನ್ನಿತರರು. (ಶಾಸ್ತ್ರಜನ್ಯಜ್ಞಾನವಿಲ್ಲದಿದ್ದು ಶಾಸ್ತ್ರಶ್ರವಣಮಾಡಲಿಕ್ಕೆ ಶಕ್ತಿಯುಳ್ಳವರು) ಸಾಂಖ್ಯೇನ ಯೋಗೇನ=ಶಾಸ್ತ್ರಗಳಿಂದುಂಟಾಗತಕ್ಕ ಜ್ಞಾನರೂಪ ಉಪಾಯದಿಂದ (ಅಂದರೆ ವೇದಗಳಲ್ಲಿ ಹೇಳಿದ ಭಗವತ್ಸ್ವರೂಪದ ಪರೋಕ್ಷಜ್ಞಾನರೂಪ ಉಪಾಯದಿಂದ ಮತ್ತು ಧ್ಯಾನದಿಂದಲೂ ಕೂಡ.) ಆತ್ಮಾನಂ—ಶ್ರೀಪರಮಾತ್ಮನನ್ನು, ಪಶ್ಯಂತಿ=ನೋಡುತ್ತಾರೆ. ಅಪರೇ—ಪ್ರಥಮತಃ ಶಾಸ್ತ್ರಶ್ರವಣಾದಿಗಳನ್ನು ಮಾಡಲಿಕ್ಕೆ ಶಕ್ತಿಯಿಲ್ಲದವರು. ಕರ್ಮಯೋಗೇನ ಚ—ಕರ್ಮರೂಪವಾದ ಉಪಾಯದಿಂದಲೂ. ಪರೋಕ್ಷಜ್ಞಾನದಿಂದಲೂ ಧ್ಯಾನದಿಂದಲೂ, ಆತ್ಮಾನಂ—ಶ್ರೀಪರಮಾತ್ಮನನ್ನು, ಪಶ್ಯಂತಿ—ನೋಡುತ್ತಾರೆ.

ವಿ ॥ (1) ಶ್ರವಣಾದಿಗಳಿಲ್ಲದ ಕೆಲವು ಅಧಿಕಾರಿಗಳು ಸಾಧುಕರ್ಮಗಳನ್ನು ಮಾಡಿ ಮನಸ್ಸನ್ನು ಶುದ್ಧಪಡಿಸಿಕೊಂಡು ಶ್ರೀಪರಮಾತ್ಮನ ಪ್ರಸಾದವನ್ನು ಹೊಂದಿ, ಶ್ರೀಪರಮಾತ್ಮನ ಅನುಗ್ರಹದಿಂದ ಶ್ರವಣಾದಿಗಳನ್ನು ಮಾಡುವ ಸಾಮರ್ಥ್ಯವನ್ನು ಹೊಂದಿ ಆ ಮೇಲೆ ಶಾಸ್ತ್ರ ಶ್ರವಣ ಮನನಾದಿಗಳನ್ನು ಮಾಡಿ ಭಗವಜ್ಜ್ಞಾನವನ್ನು ಸಂಪಾದಿಸಿಕೊಂಡು ವಿಶೇಷವಾಗಿ ಭಗವಂತನನ್ನು ಧ್ಯಾನಮಾಡಿ ಶ್ರೀಪರಮಾತ್ಮನನ್ನು ನೋಡುತ್ತಾರೆ. (2) ಧ್ಯಾನ ಮಾಡಲಿಕ್ಕೆ ಅಶಕ್ತರಾದವರು ಜ್ಞಾನವನ್ನು [illegible] ಮಾಡಿ ಜ್ಞಾನಮಾಡಿ ಪರಮಾತ್ಮನನ್ನೇ ಅಪರೋಕ್ಷೀಕರಿಸುತ್ತಾರೆ ಧ್ಯಾನಮಾಡಲಿಕ್ಕೆ [illegible]

ಪಾಯದಿಂದ ಶ್ರವಣಾದಿಗಳನ್ನು ಮಾಡಿ ಶ್ರೀಪರಮಾತ್ಮನನ್ನು ನೋಡಬೇಕು ) ಅಥವಾ ಕೆಲವು ಋಷಿಗಳು ತಮ್ಮ ಪ್ರತಿಭೆಯಿಂದಲೂ ಶಾಸ್ತ್ರ ಶ್ರವಣದಿಂದಲೂ ಶ್ರೀಪರಮಾತ್ಮನನ್ನು ತಿಳಿದು ಮನಸ್ಸಿನಿಂದ ಹೃದಯದಲ್ಲಿ ಪರಮಾತ್ಮನನ್ನು ಸಾಕ್ಷಾತ್ಕರಿಸುತ್ತಾರೆ. ನಾರದಾದಿ ಋಷಿಗಳು ಹೃದಯದೊಳಗೂ ಹೊರಗೂ ನೋಡುತ್ತಾರೆ. ದೇವತೆಗಳು ವಿಷ್ಣುವಿನ ಪ್ರಸಾದದಿಂದ ಲಬ್ಧವಾದ ಪ್ರತಿಭಾರೂಪವಾದ ಜ್ಞಾನದಿಂದಲೇ ದೇಹದೊಳಗೂ ಹೊರಗೂ ಶ್ರೀಪರಮಾತ್ಮನನ್ನು ನೋಡುತ್ತಾರೆ. ಕ್ಷತ್ರಿಯಶ್ರೇಷ್ಠರಾದ ರಾಜರು ಅಶ್ವಮೇಧ ಮೊದಲಾದ ಕರ್ಮರೂಪ ಉಪಾಯದಿಂದಲೂ, ಶಾಸ್ತ್ರ ಶ್ರವಣದಿಂದಲೂ, ಪ್ರತಿಭೆಯಿಂದಲೂ, ನಿತ್ಯದಲ್ಲಿಯೂ ಶ್ರೀಪರಮಾತ್ಮನನ್ನು ಸ್ಮರಣೆಮಾಡುತ್ತಾ ಯಜ್ಞಮಾಡುವ ಕಾಲದಲ್ಲಿ ಹವಿರ್ಭಾಗವನ್ನು ಸ್ವೀಕರಿಸಲು ಬಂದಿರುವ ಶ್ರೀಪರಮಾತ್ಮನನ್ನು ನೋಡುತ್ತಾರೆ. ॥ ೨೫ ॥

ಗೀ ॥ ಅನ್ಯೇ ತ್ವೇವಮಜಾನಂತಃ ಶ್ರುತ್ವಾಽನ್ಯೇಭ್ಯ ಉಪಾಸತೇ ।
ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೨೬ ॥

ಅ ॥ ಅನ್ಯೇ ತು = ಮನುಷ್ಯರಾದರೂ, ಏವಂ = ಹಿಂದೆ ಹೇಳಿದ ಪ್ರಕಾರ, ತಮ್ಮ ಪ್ರತಿಭೆಯ ಬಲದಿಂದ, ಅಜಾನಂತಃ = ಶ್ರೀಪರಮಾತ್ಮನನ್ನು ತಿಳಿಯದವರಾಗಿ, ಅನ್ಯೇಭ್ಯಃ = ಬೇರೆಯವರಿಂದ, ಶ್ರುತ್ವಾ = ಶಾಸ್ತ್ರಶ್ರವಣ ಮನನಗಳನ್ನು ಮಾಡಿ, ಉಪಾಸತೇ = ಧ್ಯಾನ ಮಾಡುತ್ತಾರೆ. (ಆ ಮೇಲೆ ಪ್ರತ್ಯಕ್ಷೀಕರಿಸಿ ಕೊಳ್ಳುತ್ತಾರೆ.) ತೇಽಪಿ ಚ = ಅತ್ಯಲ್ಪ ಪ್ರತಿಭೆಯುಳ್ಳವರೂ ಕೂಡ, ಶ್ರುತಿಪರಾಯಣಾಃ = ವೇದ ಮತ್ತು ಶಾಸ್ತ್ರ ಶ್ರವಣಗಳಲ್ಲಿ ಆಸಕ್ತರಾದವರಾಗಿ, ಮೃತ್ಯುಂ = ಜನನ ಮರಣಾದಿರೂಪವಾದ ಸಂಸಾರವನ್ನು, ಅತಿತರಂತ್ಯೇವ = ನಿಶ್ಚಯವಾಗಿಯೂ ದಾಟುತ್ತಾರೆ. ॥ ೨೬ ॥

ಟೀ — ಅನ್ಯೇ ಸಾಂಖ್ಯೇನ ಯೋಗೇನ ಎಂಬುವಲ್ಲಿ ಕಾಪಿಲ ತಂತ್ರದಲ್ಲಿ ಹೇಳಿದ ಪ್ರಕೃತಿಪುರುಷ ವಿವೇಕಜ್ಞಾನವು ಸಾಂಖ್ಯವೆನಿಸುತ್ತದೆ, ಎಂದು ಪರರು ವ್ಯಾಖ್ಯಾನಮಾಡಿದ್ದು ಯುಕ್ತವಲ್ಲ. ಏಕೆಂದರೆ ಅವೈದಿಕವಾದ ಕಾಪಿಲತಂತ್ರವನ್ನು ಇಲ್ಲಿ ತೆಗೆದುಕೊಂಡಿದ್ದಾರೆಂಬುದು ಕೂಡಲಾರದು. ಮತ್ತೆ ಪ್ರಕೃತಿಪುರುಷ ವಿವೇಕ ಜ್ಞಾನವು ಪರಮಾತ್ಮನನ್ನು ನೋಡಲಿಕ್ಕೆ ಪ್ರಧಾನ ಸಾಧನವೆಂಬುವುದೂ ಕೂಡಲಾರದು. ಆದಕಾರಣ ಸರಿಯಾದ ಅರ್ಥವನ್ನು ಹೇಳುತ್ತಾರೆ.

ಭಾ ॥ (೧) ಸಾಂಖ್ಯೇನ ವೇದೋಕ್ತಭಗವತ್ಸ್ವರೂಪಜ್ಞಾನೇನ ॥ (೨) ಕರ್ಮಿಣಾಮಪಿ ಶ್ರುತ್ವಾ ಜ್ಞಾತ್ವಾ ಧ್ಯಾತ್ವಾ ದೃಷ್ಟಿಃ । ಶ್ರಾವಕಾಣಾಂ ಚ ಜ್ಞಾತ್ವಾ ಧ್ಯಾತ್ವಾ । ಸಾಂಖ್ಯಾನಾಂ ಚ ಧ್ಯಾತ್ವಾ ॥ (೩) ತಥಾ ಚ ಗೌಪವನಶ್ರುತಿಃ । ಕರ್ಮಕೃಚ್ಛ್ರುತ್ವಾ ಜ್ಞಾತ್ವಾ ಧ್ಯಾತ್ವಾಽನುಪಶ್ಯತಿ । ಶ್ರಾವಕೋಽಪಿ ತಥಾ ಜ್ಞಾತ್ವಾ ಧ್ಯಾತ್ವಾ ಜ್ಞಾನ್ಯಪಿ ಪಶ್ಯತಿ ॥ (೪) ಅನ್ಯಥಾ ತಸ್ಯ ದೃಷ್ಟಿರ್ನ ಕಥಂಚಿನ್ನೋಪಜಾಯತ ಇತಿ । ಅನ್ಯ ಇತ್ಯುತ್ತಮಾನಾಮಪ್ಯುಪಾಯದರ್ಶನಾರ್ಥಂ ॥ ೨೫,೨೬ ॥

ಅ ॥ (೧) ಸಾಂಖ್ಯೇನ = ವೇದದಲ್ಲಿ ಹೇಳಿದ ಭಗವದ್ವಿಷಯಕ ಪರೋಕ್ಷಜ್ಞಾನದಿಂದ (೨) (ಧ್ಯಾನೇನ ಎಂಬಲ್ಲಿ ಕೇವಲ ಧ್ಯಾನಾದಿಗಳೇ ಶ್ರೀಪರಮಾತ್ಮನನ್ನು ಅಪರೋಕ್ಷೀಕರಿಸಲಿಕ್ಕೆ ಸಾಧನಗಳೆಂದು ಹೇಳುತ್ತದೆ ಎಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾರೆ—) ಪ್ರಥಮತಃ [illegible] ಶ್ರವಣಮಾಡಿ [illegible] ಶಾಸ್ತ್ರ ಶ್ರವಣ ಮಾಡಿ ಜ್ಞಾನವನ್ನು ಸಂಪಾದಿಸಿ [illegible]

ಭಗವಂತನನ್ನು ಅಪರೋಕ್ಷೀಕರಿಸಬೇಕು. ಪ್ರಥಮತಃ ಶಾಸ್ತ್ರ ಶ್ರವಣಮಾಡಿದವರು ಜ್ಞಾನವನ್ನು ಸಂಪಾದಿಸಿ ಧ್ಯಾನಮಾಡಿ ಅಪರೋಕ್ಷೀಕರಿಸಬೇಕು. ಜ್ಞಾನಿಗಳು ಧ್ಯಾನಮಾಡಿ ಅಪರೋಕ್ಷೀಕರಿಸಬೇಕು. ಹಾಗೆಯೇ ಗೌಪವನ ಶ್ರುತಿಯು ಹೇಳುತ್ತದೆ. ಸತ್ಕರ್ಮಮಾಡಿದವನು ಶಾಸ್ತ್ರವನ್ನು ಶ್ರವಣಮಾಡಿ ಜ್ಞಾನವನ್ನು ಸಂಪಾದಿಸಿ ಧ್ಯಾನಮಾಡಿ ಶ್ರೀಪರಮಾತ್ಮನನ್ನು ಪ್ರತ್ಯಕ್ಷೀಕರಿಸಿಕೊಳ್ಳುತ್ತಾನೆ. ಹಾಗೆಯೇ ಶಾಸ್ತ್ರಶ್ರವಣಮಾಡಿದವನೂ ಜ್ಞಾನವನ್ನು ಹೊಂದಿ ಧ್ಯಾನಮಾಡಿ ಪ್ರತ್ಯಕ್ಷೀಕರಿಸಿಕೊಳ್ಳುತ್ತಾನೆ ಜ್ಞಾನಿಯೂ ಕೂಡ ಧ್ಯಾನಮಾಡಿ ಪರಮಾತ್ಮನನ್ನು ಅಪರೋಕ್ಷೀಕರಿಸಿಕೊಳ್ಳುತ್ತಾನೆ. ಶಾಸ್ತ್ರಶ್ರವಣಾದಿಗಳನ್ನು ಮಾಡದಿದ್ದರೆ ಆತನಿಗೆ ಭಗವಂತನ ಅಪರೋಕ್ಷಜ್ಞಾನವು ಹೇಗೂ ಉಂಟಾಗಲಾರದು. (೪) (ಕೇಚಿತ್ ಅನ್ಯೇ ಪರೇ ಎಂದು ಹೇಳಿದ್ದಕ್ಕೆ ಪ್ರಯೋಜನವನ್ನು ಹೇಳುತ್ತಾರೆ—) ಅನ್ಯೇ ಇತ್ಯಾದಿಗಳು ಧ್ಯಾನಾದಿಗಳಲ್ಲಿ ಅಶಕ್ತರಾದವರಿಗೂ ಉಪಾಯವನ್ನು ತೋರಿಸುವುದಕ್ಕಾಗಿ ಹೇಳಿದ್ದು.

ವಿ॥ ಧ್ಯಾನಾದಿಗಳಲ್ಲಿ ಪರೋಕ್ಷಜ್ಞಾನಾದಿಗಳಿಗಿಂತ ಉತ್ತರೋತ್ತರ ಸಾಧನಗಳಲ್ಲಿ (ಅಂದರೆ ಜ್ಞಾನವು ಹುಟ್ಟಿದ ಮೇಲೆ ಧ್ಯಾನವು. ಶಾಸ್ತ್ರಶ್ರವಣವಾದ ಮೇಲೆ ಜ್ಞಾನವು. ಸತ್ಕರ್ಮಗಳನ್ನನುಷ್ಠಾನ ಮಾಡಿದ ಮೇಲೆ ಶಾಸ್ತ್ರ ಶ್ರವಣ ಈ ರೀತಿಯಾದ ಸಾಧನಗಳಲ್ಲಿ) ಸಾಕ್ಷಾತ್ ಅಶಕ್ತರಾದವರಿಗೂ ಆಯಾವ ಧ್ಯಾನಾದಿಗಳಿಗೆ ಉಪಾಯಭೂತಜ್ಞಾನಾದಿಗಳನ್ನು ತೋರಿಸುವುದಕ್ಕಾಗಿ ಒಬ್ಬನಿಗೇನೇ ಕರ್ಮಿತ್ವ, ಶಾಸ್ತ್ರಶ್ರವಣ ಜ್ಞಾನಿತ್ವ, ಧ್ಯಾನಿತ್ವರೂಪವಾದ ಅವಸ್ಥಾಭೇದವನ್ನಾಶ್ರಯಿಸಿ ಅನ್ಯೇ ಇತ್ಯಾದಿಗಳನ್ನು ಹೇಳಿದ್ದು. ॥ ೨೫, ೨೬ ॥

ಟೀ—ಪ್ರಕೃತಿಂ ಪುರುಷಂ ಚೈವ (ಶ್ಲೋ. ೨೦) ಇತ್ಯಾದಿ ಅರ್ಥವನ್ನು ಅವಶ್ಯವಾಗಿ ತಿಳಿಯಬೇಕೆಂಬುವ ಇಚ್ಛೆಯನ್ನು ಹುಟ್ಟಿಸುವುದಕ್ಕಾಗಿ ಅದನ್ನು ತಿಳಿದುಕೊಂಡರೆ ಅದಕ್ಕೆ ಫಲವನ್ನು ಯ ಏವಂ (ಶ್ಲೋ. ೨೪) ಎಂಬುವ ಶ್ಲೋಕದಿಂದ ಹೇಳುತ್ತಾರೆ. ಪ್ರಮಾಣವಚನದಿಂದ ಅದರ ಅರ್ಥವನ್ನು ಹೇಳುತ್ತಾರೆ—

ತಾ॥ (೧) ದ್ವಿವಿಧಂ ಪುರುಷಂ ಚೈವ ಪ್ರಕೃತಿಂ ದ್ವಿವಿಧಾಮಪಿ । ಸಹ ತತ್ತದ್ಗುಣೈಸ್ಸಮ್ಯಗ್ಜ್ಞಾತ್ವಾ ಪಶ್ಯತಿ ಯಃ ಪುಮಾನ್ । ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥ (೨) ಅನಾದಿಯೋಗ್ಯತಾಭೇದಾತ್ಪುಂಸಾಂ ದರ್ಶನಸಾಧನಂ । ನಾನ್ಯೈವ ತತ್ರ ವಿಷ್ಣೋಸ್ತು ಪ್ರಸಾದಾದ್ವ್ಯಕ್ತವಾಂ ವಪುಃ । ಸ್ವಯಂ ವಿಜ್ಞಾಯತೇ ಕೇಚಿಚ್ಛ್ರೂಯತೇ ಕಿಂಚಿದನ್ಯತಃ ॥ (೩) ತಥಾ ಜ್ಞಾತ್ವಾ ಹರಿಂ ಧ್ಯಾತ್ವಾ ಸ್ವಾಂತಃ ಪಶ್ಯಂತಿ ಕೇಚನ । ಋಷಯಃ ಕೇಚಿದೃಷಯೋ ನಾರದಾದ್ಯಾ ಬಹಿಸ್ತ್ವಪಿ ॥ (೪) ದೇವಾ ವಿಷ್ಣುಪ್ರಸಾದೇನ ಲಬ್ಧಸತ್ಪ್ರತಿಭಾಬಲಾತ್ । ಸರ್ವಂ ಕ್ರಮೇಣ ವಿಜ್ಞಾಯ ಪ್ರತಿಭಾಸ್ಪಷ್ಟತಾಕ್ರಮಾತ್ । ಪಶ್ಯಂತಿ ಬಹಿರಂತಶ್ಚ ವಿಷ್ಣುಂ ಧ್ಯಾನವ್ರತೇಽಪಿ ತು ॥ ॥ ೧ ॥

ಅ॥ (೧) ಯಾವ ಅಧಿಕಾರಿಯು ಜೀವ ಪರಮಾತ್ಮರೆಂಬ ಇಬ್ಬರು ಪುರುಷರನ್ನೂ, ಜಡಪ್ರಕೃತಿ ಚಿತ್ಪ್ರಕೃತಿಯಾದ ಲಕ್ಷ್ಮೀದೇವಿ ಇವರಿಬ್ಬರನ್ನೂ ಅವರವರ ಗುಣಗಳಿಂದ ಸಹಿತರಾಗಿ ಚೆನ್ನಾಗಿ ಪರೋಕ್ಷವಾಗಿ ತಿಳಿದುಕೊಂಡು ಅಪರೋಕ್ಷವಾಗಿ ತಿಳಿದುಕೊಳ್ಳುತ್ತಾನೋ, ಆತನು ಪ್ರಮಾದವಿಂದ ಅನ್ಯ ಸಾಧನಗಳಿಂದ ಇದ್ದರೂ ತಿರುಗಿ ಭೂಲೋಕದಲ್ಲಿ ಹುಟ್ಟುವುದಿಲ್ಲ. (ಅವನಿಗೆ ಮೋಕ್ಷವು ಸಿದ್ಧವಾಗುವದು) (೨)

(ಸರ್ವೋತ್ಕೃಷ್ಟನಾದ ಶ್ರೀಮನ್ನಾರಾಯಣ ಮೊದಲಾದವರನ್ನು ನೋಡಲಾವಶ್ಯಕವಾದ ಸಾಧನವನ್ನು ಹೇಳುತ್ತಾರೆ) ಪುರುಷರಿಗೆ ಅನಾದಿಯಾಗಿರತಕ್ಕ ಯೋಗ್ಯತಾಭೇದದಿಂದ ಭಗವದ್ದರ್ಶನ ಸಾಧನವಾದುದು ಅನೇಕವಿದೆ. (ಅದು ಯಾವುದೆಂದರೆ—) ಅವರಲ್ಲಿ ಶ್ರೀವಿಷ್ಣುವಿನ ಪ್ರಸಾದದಿಂದ ಪರಬ್ರಹ್ಮಸ್ವರೂಪವು ತನ್ನ ಪ್ರತಿಭೆಯಿಂದಲೇ ಸ್ವಲ್ಪ ತಿಳಿಯಲ್ಪಡುತ್ತದೆ. ಸ್ವಲ್ಪ ಇತರರಿಂದ ಕೇಳಲ್ಪಡುತ್ತದೆ. (೩) ಶ್ರವಣ ಪ್ರತಿಭಾ ರೂಪ ಎರಡು ಪ್ರಕಾರಗಳಿಂದ ಕೆಲವು ಋಷಿಗಳು ಶ್ರೀಪರಮಾತ್ಮನನ್ನು ತಿಳಿದು ಧ್ಯಾನಮಾಡಿ ತಮ್ಮ ಹೃದಯದೊಳಗೆ ನೋಡುತ್ತಾರೆ. (ಇದರಿಂದ ಧ್ಯಾನೇನಾತ್ಮನಿ (ಶ್ಲೋ ೨೫) ಎಂಬುವ ಶ್ಲೋಕದ ಅರ್ಥವು ಉಕ್ತವಾಯಿತು.) (ಕೇಚಿತ್ ಎಂದು ಹೇಳಿದ್ದರಿಂದ ಅಂತಹವರಿಗೆ ಧ್ಯಾನವು ಹೊರತು ದೀಕ್ಷಾ ಸಾಧನಗಳು ಇದ್ದರೂ ಅವುಗಳು ಅಲ್ಪಗಳಾಗಿರುವುದರಿಂದ ಅವುಗಳನ್ನು ಹೇಳಲಿಲ್ಲ. (ಕೇಚನ ಎಂದದ್ದು ಏತಕ್ಕೆಂದರೆ) ಕೆಲವು ನಾರದ ಮೊದಲಾದ ಋಷಿಗಳಾದರೂ ಹೃದಯದೊಳಗೂ ಹೊರಗೂ ಕೂಡ ನೋಡುತ್ತಾರೆ. (೪) ದೇವತೆಗಳಾದರೂ ಶ್ರೀವಿಷ್ಣುವಿನ ಪ್ರಸಾದದಿಂದ ಹೊಂದಿದ ನಿರ್ದುಷ್ಟವಾದ § ಪ್ರತಿಭಾರೂಪವಾದ ಜ್ಞಾನಸಾಮರ್ಥ್ಯದಿಂದ ವಿಶೇಷಾಕಾರವಾಗಿ ವಿಷ್ಣುವಿನ ಧ್ಯಾನವಿಲ್ಲದೇನೇ ಕಾಲಪ್ರವಾಹದಿಂದ ತಮತಮಗೆ ಯೋಗ್ಯವಾದುದೆಲ್ಲವನ್ನು ತಿಳಿದು ಪ್ರತಿಭೆಯಿಂದ ಕಾಲಕ್ರಮದಿಂದ ಹೆಚ್ಚೆಚ್ಚು ವಿಷಯಗಳನ್ನು ವಿಷಯೀಕರಿಸುವ ಮೂಲಕ ಶ್ರೀವಿಷ್ಣುವನ್ನು ಹೊರಗೂ ಹೃದಯದೊಳಗೂ ನೋಡುತ್ತಾರೆ. (೫)

ಶಂ—ದೇವತೆಗಳಿಗೆ ಧ್ಯಾನವಿಲ್ಲದೆ ಭಗವದ್ದರ್ಶನವಾಗುವುದಾದರೆ—ದರ್ಶನಕ್ಕೆ ವಿರೋಧಿಯಾದ ಧ್ಯಾನವನ್ನು ಏಕೆ ಅವರು ಮಾಡುತ್ತಾರೆ ಎಂದರೆ—

ತಾ ॥ (೧) ಯೇಷಾಂ ಧ್ಯಾನಮೃತೇ ದೃಷ್ಟಿಸ್ತೇಷಾಂ ಧ್ಯಾನೇಽಪಿ ದರ್ಶನಂ । ಸ್ಯಾದೇವ ಸಾಂಖ್ಯಯೋಗಾಸ್ತೇ ದೇವಾಃ ॥ (೨) ಬ್ರಹ್ಮಾಽಧಿಕೋಽತ್ರ ಚ ॥ (೩) ಕೇಚಿತ್ತು ಕ್ಷತ್ರಿಯವರಾ ಅಶ್ವಮೇಧಾದಿಕರ್ಮಭಿಃ । ಯಜಂತೋ ಭಕ್ತಿಮಂತಶ್ಚ ಯಜ್ಞಭಾಗಾರ್ಥಮಾಗತಂ । ಶ್ರವಣಪ್ರತಿಭಾಭ್ಯಾಂ ಚ ಸ್ಮರಂತಃ ಪುರುಷೋತ್ತಮಂ । ಪಶ್ಯಂತಿ ॥ (೪) ಅನ್ಯೇ ಕಥಾಽನ್ಯೇಭ್ಯಃ ಸರ್ವಂ ಶ್ರುತ್ವಾಽನುಮತ್ಯ ಚ । ಉಪಾಸ್ಯೈವ ತು ಪಶ್ಯಂತಿ ನಾನ್ಯಥಾ ತು ಕಥಂಚನ ॥ (೫) ಋಷೀನ್ನಾರದಮುಖಾಸ್ತಥಾಽಽರಭ್ಯ ಪ್ರತಿಭಾಭೃದಧಿಕಾಕ್ರಮಾತ್ । ಯಾವದ್ಬ್ರಹ್ಮಾ ಬ್ರಹ್ಮಣಸ್ತು ಪ್ರಾಯೋ ನಾಪ್ರತಿಭಾಷಿತಂ ॥ (೬) ವಿಷ್ಣೋಃ ಪ್ರೀತ್ಯರ್ಥಮೇವಾಸ್ಯ ಪ್ರೋಕ್ತಮ್ಂ ಪ್ರಾಯಶೋ ಹರೇಃ ॥ (೭) ಅನ್ಯೇಷಾಂ ಶ್ರವಣಾಜ್ಞಾನಂ ಕ್ರಮಶೋ ಮಾನುಷೋತ್ತರಂ । ಅತ್ಯಲ್ಪಪ್ರತಿಭಾನಸ್ತ್ವಾನುಷಾಃ ಶ್ರುತವೇದಿನಃ । ಸರ್ವೇ ತೇ ದರ್ಶನಾರ್ಥಾಸ್ತ್ವಯೋಗಾನುಕ್ತಿಗಾಮಿನ ಇತಿ ಚ ॥ [illegible] ॥

ಅ ॥ (೧) ಯಾರಿಗೆ ಧ್ಯಾನವಿಲ್ಲದೆ ಭಗವದ್ದರ್ಶನವಾಗುತ್ತದೋ, ಅವರಿಗೆ ಕೇವಲ ಧ್ಯಾನವು [illegible] ನಲ್ಲಿ ಸಾಧನವಾಗುವುದು. ಅಂತಹ ದೇವತೆಗಳು ಸಾಂಖ್ಯಯೋಗರೆನಿಸುತ್ತಾರೆ [illegible] ಪ್ರತಿಭೆಯು ಯೋಗಃ—ದರ್ಶನೋಪಾಯವು ಯಾರಿಗೋ ಅವರು ಸಾಂಖ್ಯಯೋಗರೆನಿಸುತ್ತಾರೆ [illegible]

§ ಪ್ರಜ್ಞಾಂ ನವನವೋನ್ಮೇಷ ಶಾಲಿನೀಂ ಪ್ರತಿಭಾಂ ವಿದುಃ ಶಾಸ್ತ್ರಾನುಸಾರಿ ಕಲ್ಪಿತ್ತು ಧಗವ್ತತ್ಪ್ರ [illegible] ವಿಷಯಗಳನ್ನು ವಿಷಯೀಕರಿಸುವ ಪ್ರಜ್ಞೆಯನ್ನು ಪ್ರತಿಭೆ ಎನ್ನುತ್ತಾರೆ

ಇದರಿಂದ ಅನ್ಯೇ ಸಾಂಖ್ಯೇನ ಎಂಬೀ (೨೪) ಶ್ಲೋಕವು ವ್ಯಾಖ್ಯಾತವಾಯಿತು.) (ಅಂತೂ ಪ್ರತಿಭೆಯು ಪ್ರಚುರವಾಗಿ ದರ್ಶನಕ್ಕೆ ಸಾಧನವಾಗಿದ್ದಾಗ್ಯೂ ಧ್ಯಾನವೂ ದರ್ಶನಕ್ಕೆ ಸಾಧನವೇ ಆಗಿದೆ ಧ್ಯಾನವು ಭಗವದ್ದರ್ಶನಕ್ಕೆ ಪ್ರತಿಬಂಧಕವಲ್ಲ.) (೨) (ಶ್ರೀಪರಮಾತ್ಮನು ಸರ್ವೋತ್ತಮನೆಂಬುವ ಪ್ರತಿಭಾವಿಶೇಷವು ದೇವತೆಗಳಲ್ಲಿ ಚತುರ್ಮುಖನಿಗೆ ಮುಖ್ಯವಾದುದೆನ್ನುತ್ತಾರೆ—) ಹೆಚ್ಚೆಚ್ಚು ಪ್ರತಿಭೆಯುಳ್ಳ ದೇವತೆಗಳಲ್ಲಿ ಚತುರ್ಮುಖ ಬ್ರಹ್ಮನು ಶ್ರೇಷ್ಠನು. (೩) ಕೆಲವು ಕ್ಷತ್ರಿಯ ಶ್ರೇಷ್ಠರಾದ ರಾಜರು ಅಶ್ವಮೇಧ ಮೊದಲಾದ ಕರ್ಮಗಳಿಂದ ಯಜ್ಞಮಾಡುತ್ತಾ ವಿಶೇಷ ಭಕ್ತಿಯುಳ್ಳವರಾಗಿ, ಶಾಸ್ತ್ರಶ್ರವಣ, ಮತ್ತು ಸ್ವಲ್ಪ ಪ್ರತಿಭಾವಿಶೇಷ, ಇವುಗಳಿಂದಲೂ ಸದಾ ಕ್ಷರಾಕ್ಷರ ಪುರುಷರಿಂದುತ್ತಮನಾದ ಶ್ರೀಪರಮಾತ್ಮನನ್ನು ಸ್ಮರಣೆಮಾಡುತ್ತಾ (ಯಜ್ಞಗಳನ್ನು ಮಾಡುವ ಕಾಲದಲ್ಲಿ ಯಜ್ಞಭಾಗವನ್ನು ಸ್ವೀಕರಿಸುವುದಕ್ಕಾಗಿ ಬಂದಿರುವ ಶ್ರೀಪರಮಾತ್ಮನನ್ನು ನೋಡುತ್ತಾರೆ. (ಇದರಿಂದ ಕರ್ಮಯೋಗೇನ ಚಾಪರೇ ಎಂಬುದು ವ್ಯಾಖ್ಯಾತವಾಯಿತು.) (ಇಲ್ಲಿಯೂ ಶಾಸ್ತ್ರಶ್ರವಣ ಪ್ರತಿಭೆಗಳು ಅಲ್ಪಗಳೆಂದು ತಿಳಿಯಬೇಕು.) (೪) ಹಾಗೆಯೇ ಹಿಂದೆ ಹೇಳಿದವರಿಗಿಂತ ಇತರರಾದ ಮನುಷ್ಯರಾದರೂ ತಮ್ಮಿಂದ ಉತ್ತಮರಾದ ಗುರುಗಳಿಂದ ತಂತಮಗೆ ಯೋಗ್ಯವಾದುದೆಲ್ಲಾ ಶಾಸ್ತ್ರಗಳನ್ನು ಶ್ರವಣಮಾಡಿ ಮನನವನ್ನು ಮಾಡಿ ಶ್ರೀಪರಮಾತ್ಮನನ್ನು ಉಪಾಸನಮಾಡಿಯೇ ಶ್ರೀಪರಮಾತ್ಮನನ್ನು ಪ್ರತ್ಯಕ್ಷೀಕರಿಸಿಕೊಳ್ಳುತ್ತಾರೆ. ಶ್ರವಣಾದಿಗಳನ್ನು ಮಾಡದೆ ಹೇಗೂ ಭಗವದ್ದರ್ಶನವಾಗುವುದಿಲ್ಲ. (ಇದರಿಂದ ಅನ್ಯೇ ತ್ವೇವಂ ಎಂಬೀ ೨೫ನೇ ಶ್ಲೋಕವು ವ್ಯಾಖ್ಯಾತವಾಯಿತು.) (೫) (ಋಷಿಗಳು, ದೇವತೆಗಳು, ರಾಜರು ಇವರ ಪ್ರತಿಭೆಗೆ ವೈಲಕ್ಷಣ್ಯವಿದೆ. ಎನ್ನುತ್ತಾರೆ—) ಶರೀರದೊಳಗೆ ಮಾತ್ರ ಭಗವಂತನನ್ನು ಉಪಾಸನಾ ಮಾಡತಕ್ಕ ಋಷಿಗಳನ್ನಾರಂಭಿಸಿ ಹಾಗೆಯೇ ರಾಜರನ್ನಾರಂಭಿಸಿ ದೇವತೆಗಳಿಗೆ ಚತುರ್ಮುಖಬ್ರಹ್ಮಪರ್ಯಂತ ಕ್ರಮವಾಗಿ ಪ್ರತಿಭೆಯು ಅಧಿಕವಾಗಿರುತ್ತದೆ. ಚತುರ್ಮುಖಬ್ರಹ್ಮನಿಗೆ ಮಾತ್ರ ಪ್ರಾಯಶಃ ವೇದಾದಿಗಳಲ್ಲಿ ಹೇಳಿದ ತತ್ವದಲ್ಲಿ ತಿಳಿಯದಿರುವ ಅಂಶವು ಇರುವುದಿಲ್ಲ. (೬) (ಹಾಗಾದರೆ ಚತುರ್ಮುಖ ಬ್ರಹ್ಮನು ಶ್ರೀಪರಮಾತ್ಮನಿಂದ ಶಾಸ್ತ್ರಶ್ರವಣಮಾಡುವುದು ಏತಕ್ಕೆಂದರೆ—) ಚತುರ್ಮುಖಬ್ರಹ್ಮನಿಗೆ ಶ್ರೀಪರಮಾತ್ಮನಿಂದ ಕೇಳುವ ಯಾವುದು ಪ್ರಮೇಯವು ಇದೆಯೋ, ಅದು ಪ್ರಾಯಶಃ ತಿಳಿದಿದ್ದರೂ ಶ್ರೀಪರಮಾತ್ಮನ ಪ್ರೀತಿಗಾಗಿಯೇ ಶಾಸ್ತ್ರಶ್ರವಣ ಮಾಡುವುದು. (ತಿಳಿದುಕೊಳ್ಳುವುದಕ್ಕಾಗಿ ಅಲ್ಲ. ತನ್ನ ಪ್ರತಿಭೆಯಿಂದಲೇ ಸಕಲ ವೇದಾದಿಗಳ ಅರ್ಥವನ್ನು ತಿಳಿದಿರುತ್ತಾನೆ.) (೭) (ಜ್ಞಾನವು ಹುಟ್ಟುವುದಕ್ಕಾಗಿ ಯಾರು ಕೇಳುವುದೆಂದರೆ -) ಚತುರ್ಮುಖಬ್ರಹ್ಮನಿಗಿಂತ ಇತರರಾದ ಮನುಷ್ಯರಿಗೆ ಜ್ಞಾನವು ಹೆಚ್ಚು ಹೇಗಾದೀತೋ ಹಾಗೆ ಯೋಗ್ಯತಾಕ್ರಮದಿಂದಲೂ ಪ್ರತಿಭೆಯ ಅಲ್ಪ ಕ್ರಮಾನುಸಾರವಾಗಿಯೂ ಶಾಸ್ತ್ರಶ್ರವಣದಿಂದ ಜ್ಞಾನವುಂಟಾಗುತ್ತದೆ. (ಧ್ಯಾನಾದಿ ಉಪಾಯವುಳ್ಳವರೂ ಶ್ರವಣಾದಿಗಳನ್ನೇ ಮಾಡುವುದಾದರೆ ಶ್ರುತವೇದಿನಃ ಶಾಸ್ತ್ರಗಳನ್ನು ತಿಳಿದವರೆಂದು ಹೇಳಿದ್ದು ಹೇಗೆ? ಎಂದರೆ—) ಅತ್ಯಲ್ಪವಾದ ಪ್ರತಿಭೆಯುಳ್ಳವರಾದುದರಿಂದ ಮನುಷ್ಯರು ಮೊದಲೇ ಶಾಸ್ತ್ರಶ್ರವಣ ಮಾಡಿದವರು ಅವರೆಲ್ಲರೂ ತಂತಮಗೆ ಯೋಗ್ಯವಾದ ಭಗವಂತನ ಅಪರೋಕ್ಷವನ್ನು ಹೊಂದಿ ಮೋಕ್ಷವನ್ನು ಹೊಂದುತ್ತಾರೆ. ॥ ೨ ॥

ಟೀ—ಧ್ಯಾನ ಮೊದಲಾದ ಉಪಾಯವುಳ್ಳವರಿಗೂ ಶಾಸ್ತ್ರಶ್ರವಣಾದಿಗಳು ಇವೆ, ಎಂದು ಹೇಳಿದ್ದು ಯುಕ್ತವಲ್ಲ ಹಾಗೆ ಇದ್ದರೆ ಶ್ರುತ್ವಾನ್ಯೇಭ್ಯಃ (ಶ್ಲೋ. ೨೬) ಎಂದು ವಿಶಿಷ್ಯ ಹೇಳಿದ್ದು ಕೂಡದೆ ಹೋಗುವುದು ಎಂದರೆ—

ತಾ ॥ (೧) ಅನ್ಯೇಷಾಮಪಿ ಕಿಂಚಿಚ್ಛ್ರವಣೇ ವಿದ್ಯಮಾನೇಽಪಿ ಮನುಷ್ಯಾಣಾಮತ್ಯಲ್ಪಪ್ರತಿಭಾನತ್ವಾಚ್ಛ್ರುತ್ವಾನ್ಯೇಭ್ಯ ಇತಿ ವಿಶೇಷಣಂ ॥ (೨) ಮನುಷ್ಯಾಣಾಂ ಪ್ರತಿ[illegible]

**ಭಾಮೂಲಪ್ರಮಾಣಾಪೇಕ್ಷಾ ಪ್ರಾಯೋ ನ ಸಮ್ಯಗುತ್ಪದ್ಯತೇಽಲ್ಪಾ ಚೇತಿ ಶ್ರುತಿಪರಾಯಣಾ ಇತಿ ॥ (೩) ಅಶ್ರುತಪ್ರತಿಭಾ ಯಸ್ಯ ಶ್ರುತಿಸ್ಮೃತ್ಯವಿರೋಧಿನೀ । ವಿಶ್ರುತಾ ನೃಷು ಜಾತಂ ಚ ತಂ ವಿದ್ಯಾದ್ದೇವಸತ್ತಮಂ ॥ (೪) ಯಶ್ಚ ಸ್ವಮುಖಮಾನೇನ ನವಾಧೋ ದೇಹವಾನ್ಪುಮಾನ್ । ಅಷ್ಟಮಾನವತೀ ಸ್ತ್ರೀ ಚ ಷಣ್ಣವತ್ಯಂಗುಲಾ ಪುನಃ । ದಶತಾಲೌ ಸಪ್ತಪಾದೌ ವಿದ್ಯಾತ್ತೌ ಚ ಸುರೋತ್ತಮೌ ॥ (೫) ಯಾವತ್ಪಂಚಾಂಗುಲೋನಂ ತದ್ದೇ(ದೆ)ವಮಾನಂ ಕ್ರಮಾತ್ಪರಂ । ಪಾದೇ ತ್ರ್ಯಂಗುಲಮಾತ್ರೋನಂ ॥ (೬) ತದೂನಂ ಚತುರಂಗುಲಂ । ಯಾವದೇವೋಪದೇವಾನಾಂ ಪಾದಃ ಚೋನಾಂಗುಲಂ ಪುನಃ ॥ ೩ ॥**

ಅ॥ (೧) ಧ್ಯಾನ ಮೊದಲಾದ ಉಪಾಯವುಳ್ಳವರಿಗೆ ಕಿಂಚಿತ್ ಶ್ರವಣಾದಿಗಳಿದ್ದರೂ ಮನುಷ್ಯರಿಗೆ ಅತ್ಯಲ್ಪ ಪ್ರತಿಭೆಯಿದ್ದುದರಿಂದ (ಶಾಸ್ತ್ರಶ್ರವಣವು ಹೆಚ್ಚು ಇದ್ದ ಪ್ರಯುಕ್ತ) ಶ್ರುತ್ವಾಽನ್ಯೇಭ್ಯಃ ಉಪಾಸತೇ ಎಂದು ವಿಶೇಷವಾದ ಉಕ್ತಿಯು ಕೂಡುತ್ತದೆ. (೨) (ಮನುಷ್ಯರಿಗೆ ಶ್ರುತಿಪರಾಯಣಾಃ (೨೬) ಎಂದು ಶಾಸ್ತ್ರಶ್ರವಣವೇ ಮುಖ್ಯಾಶ್ರಯವೆಂದು ಹೇಳಿದ್ದರಿಂದ ಅತ್ಯಲ್ಪ ಪ್ರತಿಭೆಯಾದರೂ ಹೇಗೆ ಕೂಡುತ್ತದೆ ಎಂದರೆ—) ಮನುಷ್ಯರಿಗೆ ಅತ್ಯಲ್ಪ ಪ್ರತಿಭೆಯು ಇದ್ದರೂ ಆ ಪ್ರತಿಭೆಗೆ ಪ್ರಾಮಾಣ್ಯನಿಶ್ಚಯಕ್ಕಾಗಿ ಮೂಲ ಪ್ರಮಾಣ ಸಂವಾದಾಪೇಕ್ಷೆಯಿದ್ದುದರಿಂದ ಸ್ವಾತಂತ್ರ್ಯವಿಲ್ಲದಿರುವ ಪ್ರಯುಕ್ತವೂ ಪ್ರಾಯಶಃ ಪ್ರತಿಭೆಯು ಅತ್ಯಲ್ಪವಾಗಿರುವುದರಿಂದಲೂ ಶ್ರುತಿಪರಾಯಣಾಃ ಎಂಬುವ ವಿಶೇಷಣವು ಕೂಡುತ್ತದೆ. (೩) (ಮನುಷ್ಯರಿಗೆ ಪ್ರತಿಭೆಗೆ ಮೂಲವಾದ ಪ್ರಮಾಣಾಪೇಕ್ಷೆಯು ಪ್ರಾಯಶಃ ಚೆನ್ನಾಗಿ ಹುಟ್ಟುವುದಿಲ್ಲ. ಅಲ್ಪವು ಆಗಿದೆ ಎಂದು, ಹೇಳಿದ್ದು ಯುಕ್ತವಲ್ಲ ಪಾಂಡವಾದಿ ಮನುಷ್ಯರು ಶಾಸ್ತ್ರಾರ್ಥವನ್ನು ಕೇಳದಿದ್ದರೂ ಅವರಿಗೆ ಚೆನ್ನಾಗಿ ಬಹುಪ್ರತಿಭೆಯು ಕಂಡದೆ. ಎಂಬೀ ಆಶಂಕೆಯನ್ನು ಪ್ರಮಾಣವಾಕ್ಯವನ್ನು ಹೇಳಿ ಪರಿಹರಿಸುತ್ತಾರೆ—) ಯಾರ ಪ್ರತಿಭೆಯು ಶ್ರುತವಾಗದಿದ್ದ ಶಾಸ್ತ್ರಾರ್ಥವನ್ನು ವಿಷಯೀಕರಿಸುತ್ತದೋ, ಸಮಸ್ತ ವೇದಗಳಿಗೂ ಸ್ಮೃತಿಗಳಿಗೂ ಅವಿರುದ್ಧಗಳಾಗಿವೆಯೋ ಸರ್ವತ್ರ ಕೀರ್ತಿಯಿಂದ ವ್ಯಾಪಿಸಿಕೊಂಡಿದೆಯೋ, ಅತನನ್ನು ದೇವೋತ್ತಮನೇ ಮನುಷ್ಯರಲ್ಲಿ ಅವತಾರಮಾಡಿದವನನ್ನಾಗಿ ತಿಳಿಯಬೇಕು. (ಇವಂಥ ದೇವತೆಗಳ ಲಕ್ಷಣವಾದ ಅಶ್ರುತ ಪ್ರತಿಭೆಯು ಪಾಂಡವಾದಿಗಳು ಇದ್ದಲ್ಲಿ ಇದ್ದುದರಿಂದ ಪಾಂಡವಾದಿಗಳು ಸರ್ವಸಾಧಾರಣ ಮನುಷ್ಯರಲ್ಲ, ಮತ್ತೆ ದೇವಾಂಶರು.) (೪) (ದೇವತೆಗಳ ಲಕ್ಷಣಾಂತರಗಳನ್ನು ಹೇಳುತ್ತಾರೆ-) ಯಾವ ಪುರುಷನಿಗೆ ಕುತ್ತಿಗೆಯಿಂದ ಕೆಳಗಿನ ದೇಹದಲ್ಲಿ ತನ್ನ ಮುಖದ ಪರಿಮಾಣದಿಂದ ಒಂಭತ್ತು ಹೆಚ್ಚು ಪರಿಮಾಣವಿದೆಯೋ, ಯಾವ ಸ್ತ್ರೀಯರಿಗೆ ಕುತ್ತಿಗೆಯಿಂದ ಕೆಳಗಿನ ದೇಹದಲ್ಲಿಯು ಮುಖಪರಿಮಾಣದಿಂದ ಎಂಟು ಹೆಚ್ಚು ಪರಿಮಾಣವಿದೆಯೋ ಆ ಸ್ತ್ರೀಪುರುಷರಿಬ್ಬರೂ ತಮ್ಮ ಅಂಗುಲಿಪರಿಮಾಣದಿಂದ ತೊಂಭತ್ತಾರು (೯೬) ಅಂಗುಲ ಪರಿಮಾಣವುಳ್ಳವರು. ತಂತಮ್ಮ § [illegible] ಮಾಣದಿಂದ ಹತ್ತು (೧೦) ತಾಲ ಪರಿಮಾಣವುಳ್ಳವರು. ತಂತಮ್ಮ ಪಾದ ಪರಿಮಾಣದಿಂದ ಏಳು [illegible] (ಹೆಚ್ಚು) ಪರಿಮಾಣವುಳ್ಳವರು. ಇಂಥವರನ್ನು ದೇವಶ್ರೇಷ್ಠರನ್ನಾಗಿ ತಿಳಿಯಬೇಕು. (ಅವರು [illegible] ನಾರಾಯಣರು, ಬ್ರಹ್ಮವಾಯುಗಳು ಸ್ವರೂಪತಃ [illegible]ರು. ಈ ದೇವೋತ್ತಮರ ಲಕ್ಷಣವು) (೫) (ಈಗ ಸರ್ವಸಾಮಾನ್ಯವಾಗಿ ಎಲ್ಲಾ ದೇವತೆಗಳ ಲಕ್ಷಣವನ್ನು ಹೇಳುತ್ತಾರೆ ) ದೇವತೆಗಳಿಗೆ [illegible] ೯೬ ಅಂಗುಲವು ಅಧಮಾಧಮ ದೇವತೆಗಳಲ್ಲಿ ಆ ಮೇಲಿಂದ ಕ್ರಮವಾಗಿ ೯೧ ಅಂಗುಲ ಪರ್ಯಂತವಾಗಿ[illegible]

§ [illegible]

ಣಯು ಸಾಮಾನ್ಯವಾಗಿ ಎಲ್ಲಾ ದೇವತೆಗಳ ಪರಿಮಾಣವು ಆಗುತ್ತದೆ. (ತಥಾಚ ಸಮಸ್ತ ದೇವತೆಗಳ ಲಕ್ಷಣವು ಕ್ರಮದಿಂದ ಹ್ರಾಸವಾಗಿ ಅಂದರೆ೯೬ ಅಂಗುಲವನ್ನಾರಂಭಿಸಿ ೯೧ ಅಂಗುಲ ಪರಿಮಾಣವುಳ್ಳವರು.) ಪಾದದ ಪರಿಮಾಣವಾದರೂ ಕ್ರಮದಿಂದ ಹ್ರಾಸವಾಗಿ ಒಂದು ಅಂಗುಲ ಮಾತ್ರ ಕಡಿಮೆಯಾಗುತ್ತದೆ. ಅಂದರೆ ದೇವತೆಗಳಲ್ಲಿ ಏಳು ಹೆಜ್ಜೆ ಇದ್ದ ಪರಿಮಾಣವು ಕ್ರಮದಿಂದ ಹ್ರಾಸವಾಗಿ ಒಂದು ಅಂಗುಲ ಮಾತ್ರ ಕಡಿಮೆಯಾಗುತ್ತದೆ) (೬) (ಗಂಧರ್ವಾದಿಗಳ ಲಕ್ಷಣವನ್ನು ಹೇಳುತ್ತಾರೆ—) ಕೆಳಗಿನ ದೇವತೆಗಳಿಗೆ ಶ್ರೀವ ೯೧ ಅಂಗುಲ ಪರಿಮಾಣವು ಕ್ರಮದಿಂದ ಹ್ರಾಸವಾಗಿ ನಾಲ್ಕು ಅಂಗುಲ ಪರಿಮಾಣವು ಕಡಿಮೆಯಾಗುವುದು. ಉಪದೇವತೆಗಳ (ಗಂಧರ್ವರ) ಪರಿಮಾಣವಾಗುತ್ತದೆ. ಗಂಧರ್ವ ಶ್ರೇಷ್ಠರಲ್ಲಿ ೯೧ ಪೂರ್ಣಪರಿಮಾಣವಿದ್ದು ಕ್ರಮದಿಂದ ಹ್ರಾಸವಾಗಿ (೮೭) ಎಂಭತ್ತೇಳು ಪರಿಮಾಣದ ವರೆಗೆ ಹ್ರಾಸವಾಗುತ್ತದೆ. (ಅಂದರೆ ೯೧ ಆರಂಭಿಸಿ ೮೭ ಪರ್ಯಂತ ಕ್ರಮದಿಂದ ಹ್ರಸಿತವಾದ ಅಂಗುಲ ಪರಿಮಾಣವುಳ್ಳವರು ಗಂಧರ್ವರು) ದೇವ ಗಂಧರ್ವಾದಿಗಳಿಗೂ ಏಳು ಹೆಜ್ಜೆ ಪರಿಮಾಣವು ಕ್ರಮದಿಂದ ಹ್ರಾಸವಾಗಿ ದೇವತೆಗಳಿಗಿಂತ ಪಾದದಲ್ಲಿ ಪುನಃ ಒಂದು ಅಂಗುಲವು ಕಡಿಮೆಯಾಗುತ್ತದೆ. || ೩ ||

ಟೀ—ಮನುಷ್ಯ ಗಂಧರ್ವರು ರಾಜರು, ಮನುಷ್ಯೋತ್ತಮರು ಇವರ ಲಕ್ಷಣವನ್ನು ಹೇಳುತ್ತಾರೆ—

**ಶಾ || (೧) ತಾವನ್ಮನುಷ್ಯಮಾನಂ ಸ್ಯಾತ್ || (೨) ತತೋऽಧಸ್ತ್ವಾಸುರಂ ಸ್ಮೃತಂ || (೩) ದ್ವಿಚತ್ವಾರ್ಯಧಿಕಂ ತಸ್ಮಾತ್ ಷಣ್ಣವತ್ಯಂಗುಲಾದಧಃ | ಜ್ಞೇಯಮಂಗುಲಮಾನಂ ತದುಪದೇವಾದಿಷು ಸ್ಫುಟಂ || (೪) ದೇವೇಷ್ವವರಜ್ಞೇಯಮೃಷೀಣಾಂ ಚಕ್ರವರ್ತಿನಾಂ || (೫) ಯಾವದ್ವ್ಯಾವೃತ್ತಿಯೋ ವಿಷ್ಣೋಸ್ತಾವತ್ತ್ರೀಪುಂಸ್ವರೂಪಿಣಃ | ಹರೇಃ ಸಾದೃಶ್ಯಮಸ್ಯ ಸ್ಯಾದನಾದಿಕ್ರಮಸುಸ್ಥಿರಮಿತಿ ಚ || ೪ || || ೨೬ ||**

ಅ || (೧) ೯೬ ಅಂಗುಲ ಪರಿಮಾಣವು ಮನುಷ್ಯ ಗಂಧರ್ವರು, ರಾಜರು, ಮನುಷ್ಯೋತ್ತಮರು, ಇವರ ಪರಿಮಾಣವಾಗುತ್ತದೆ. (೨) (ಇಲ್ಲಿ ಅಸುರ ಪದದಿಂದ ಏಕಗುಣೋಪಾಸಕರಾದ ಮನುಷ್ಯ ಪರ್ಯಂತ ಮೋಕ್ಷಯೋಗ್ಯರಿಗಿಂತ ಬೇರೆಯವರನ್ನು ಇಟ್ಟುಕೊಳ್ಳಬೇಕು. ಆದರಿಂದ ನಿತ್ಯಸಂಸಾರಿಗಳು ಏಕತ್ರಿತರಾಗಿದ್ದಾರೆ, ಇಂತಹ ಅಸುರರಿಗೆ ಲಕ್ಷಣವನ್ನು ಹೇಳುತ್ತಾರೆ—) ಎಂಭತ್ತೇಳು ಅಂಗುಲ ೮೭ ಪರಿಮಾಣಕ್ಕಿಂತ ಕಡಿಮೆ ಅಂಗುಲ ಪರಿಮಾಣವು ಅಸುರ ಪರಿಮಾಣವು (೩) (ದೇವತೆಗಳೂ ಗಂಧರ್ವರೂ ಇವರ ಪರಿಮಾಣವನ್ನು ಒಟ್ಟಿಗೆ ಹೇಳುತ್ತಾರೆ—) ೮೭ ಅಂಗುಲ ಪರಿಮಾಣದಿಂದ ಮೇಲೆ ಇರುವ ದೇವಶ್ರೇಷ್ಠರ ಪರಿಮಾಣವಾದ ೯೬ ಅಂಗುಲದೆತ್ತರಿಯಿಂದ ಕೆಳಗಿರುವ ಎಂಟು ಅಂಗುಲ ಪರಿಮಾಣವು ಕ್ರಿಷ್ಟವಾಗಿ ದೇವತೆಗಳೂ ಗಂಧರ್ವರೂ ಇವರ ಪರಿಮಾಣವೆಂದು ತಿಳಿಯಬೇಕು. (೪) (ಮನುಷ್ಯ ಗಂಧರ್ವರಿಗಿಂತ ಶ್ರೇಷ್ಠರಾದ ದೇವಗಂಧರ್ವರು, ಚಿರಪಿತೃಗಳು, ಆಜಾನಜದೇವತೆಗಳು, ಅವರಿಗೆ ಸಮರಾದ ಶತಸಂಖ್ಯಾಕದೇವತೆಗಳು ಇವರ ಲಕ್ಷಣವನ್ನು ಹೇಳಿ ಕರ್ಮಜ ದೇವತೆಗಳಿಗೆ ಸಮರಾದ ಋಷ್ಯಾದಿಗಳ ಲಕ್ಷಣವನ್ನು ಹೇಳುತ್ತಾರೆ—) ತತ್ತ್ವದೇವತೆಗಳಲ್ಲಿ ಅವರರಾದ ದೇವತೆಗಳಿಗೆ ಹೇಗೆ ೯೨ ಅಂಗುಲ ಪರಿಮಾಣ ಲಕ್ಷಣವೋ, ಹಾಗೆಯೇ ಚ್ಯವನ ಉತಥ್ಯ ಮೊದಲಾದ ಋಷಿಗಳಿಗೂ, ಪೃಥು ಕಾರ್ತವೀರ್ಯ, ಶಶಿಬಿಂದು ಮೊದಲಾದ ಚಕ್ರವರ್ತಿಗಳಿಗೂ ತಿಳಿದುಕೊಳ್ಳಬೇಕು. (೫) (ಈ ಲಕ್ಷಣವು ಹೆಚ್ಚು ಕಡಿಮೆಯಾಗಲಿಕ್ಕೆ ಕಾರಣವನ್ನು ಹೇಳುತ್ತಾರೆ.) ಸ್ತ್ರೀ ಪುರುಷ ಸ್ವರೂಪವುಳ್ಳ ಶ್ರೀವಿಷ್ಣುವಿಗೆ ಹೇಗೆ ಹೇಗೆ ಎಷ್ಟೆಷ್ಟು ಜೀವನು ಪ್ರಿಯನಾಗುತ್ತಾನೋ, ಅಷ್ಟಷ್ಟು ಭೇದವು ಹೆಚ್ಚು ಕಡಿಮೆಯಿದ್ದುದರಿಂದಲೇ, ಸ್ತ್ರೀ ಪುರುಷ ಸ್ವರೂಪವುಳ್ಳ ಈ ಜೀವನಿಗೆ ಪರಮಾತ್ಮನ ಲಕ್ಷಣಕ್ಕೆ ಸದೃಶವಾದ ಲಕ್ಷಣವು ಬರುವುದು.

ಅದು ಅನಾದಿಯಾಗಿರತಕ್ಕ ಯೋಗ್ಯತಾತ್ರಮದಿಂದ ಸುಸ್ಥಿರವಾಗಿದೆ. ಅಂದರೆ ನಾಶವಿಲ್ಲದಿದ್ದುದು ಧರ್ಮ ಏರುವ ಪರ್ಯಂತ ಇರತಕ್ಕುದು (ಅಂದರೆ-ಯಾವಾಗಲೂ ಇರತಕ್ಕುದು.) ॥ ೪ ॥ ॥ ೨೫ ॥

ಪೀ—ತಿರುಗಿ ಪ್ರಕೃತಿ, ಪುರುಷ, ಶ್ರೀಪರಮಾತ್ಮರ ಸ್ವರೂಪವನ್ನು ಬಿಡಿಸಿ ಹೇಳುತ್ತಾರೆ—

**ಗೀ ॥ ಯಾವತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರಜಂಗಮಮ್ ।**
**ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ॥ ೨೬ ॥**

ಅ ॥ ಭರತರ್ಷಭ=ಭರತಕುಲದಲ್ಲಿ ಶ್ರೇಷ್ಠನಾದ ಅರ್ಜುನನೇ, ಯಾವತ್=ಯಾವ ಯಾವ, ಸ್ಥಾವರಜಂಗಮಂ=ಸ್ಥಿರ ಚರ ಸ್ವರೂಪವಾದ, ಕಿಂಚಿತ್ ಸತ್ತ್ವಂ=ಜೀವರ ಸಮುದಾಯವು, (ಇರುತ್ತದೋ) ತತ್=ಆ ಜೀವರ ಸಮುದಾಯವು, ಕ್ಷೇತ್ರಕ್ಷೇತ್ರಜ್ಞಸಂಯೋಗಾತ್=ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯು, ಶ್ರೀಪರಮಾತ್ಮ ಇವರ ಸಂಬಂಧದಿಂದ, ಸಂಜಾಯತೇ ಇತಿ=ಹುಟ್ಟುತ್ತದೆ ಎಂದು ವಿದ್ಧಿ=ತಿಳಿ. ॥ ೨೬ ॥

ಪೀ—ಸಾಧ್ವಸಾಧುಯೋನಿಗಳಲ್ಲಿ ಯಥಾಯೋಗ್ಯವಾಗಿ ಸಮಸ್ತ ಜೀವರು ಹುಟ್ಟಲಿಕ್ಕೆ ಶ್ರೀಪರಮಾತ್ಮನೇ ಸ್ವತಂತ್ರಕಾರಣನೆಂದು ಹೇಳಿದುದನ್ನು ಯಾವತ್ಸಂಜಾಯತೇ ಎಂಬುವ ಶ್ಲೋಕದಿಂದ ವಿವರಿಸುತ್ತಾರೆ. ಅದರಲ್ಲಿ ಕ್ಷೇತ್ರಜ್ಞನಾದ ಶ್ರೀಹರಿಗೆ ಕ್ಷೇತ್ರ ಸಂಯೋಗವೆಂದರೆ—ಜಡದೇಹ ಸಂಬಂಧವು ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

**ತಾ ॥ (೧) ಕ್ಷೇತ್ರಕ್ಷೇತ್ರಜ್ಞಸಂಯೋಗಾದಿತ್ಯತ್ರ ಕ್ಷೇತ್ರಂ ಶ್ರೀಃ । ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಮಿತಿ ವಕ್ಷ್ಯಮಾಣತ್ವಾತ್ ॥ (೨) ಅವ್ಯಕ್ತಂ ಚ ಮಹದ್ಬ್ರಹ್ಮ ಪ್ರಧಾನಂ ಕ್ಷೇತ್ರಮಿತ್ಯಪಿ । ಉಚ್ಯತೇ ಶ್ರೀಃ ಸದಾ ವಿಷ್ಣೋಃ ಪ್ರಿಯಾ ಹಿದೋಷವರ್ಜಿತಾ । ಸಾ ಹಿ ನ ವ್ಯಜ್ಯತೇ ವಿಷ್ಣುರತ್ರಕ್ಷೇತಿ ಮಹಾಗುಣಾ । ಜೀವೋತ್ತಮಾ ಚ ತೇನೈತೈಃ ಶಬ್ದೈರೇತಾಃಭಿಧೀಯತೇ ॥ (೩) ಮಹಾನ್ (ಮಹತ್) ಬ್ರಹ್ಮಾ ಜೀವಮಹಾನ್ ॥ (೪) ಪರಾತ್ಮಪ್ರೇರಿತಾಃ ಕ್ರಿಯಾಃ । ಅಹಂ ಕರ್ತೇತಿ ಯೇನಾಯಂ ಜೀವೋ ಮನ್ಯತ್ಯಸೌ ಶಿವಃ । ಅಹಂಕಾರ ಇತಿ ಪ್ರೋಕ್ತೋ ಜೀವಾಹಂಮತಿಕೃದ್ಯತಃ ॥ (೫) ಉಮಾ ಬುದ್ಧಿರಿತಿ ಜ್ಞೇಯಾ ಶಬ್ದಾದಿಜ್ಞಾನದಾಯತಃ ॥ ೧ ॥**

ಅ ॥ (೧) (ಯಾವತ್ಸಂಜಾಯತೇ ಎಂಬುದರ ವಿವರಣರೂಪವಾದ ಮಮ ಯೋನಿಃ (ಅಧ್ಯಾಯ ೧೪. ಶ್ಲೋ ೩) ಎಂಬ ಮೇಲಿನ ಅಧ್ಯಾಯದಲ್ಲಿರತಕ್ಕ ವಾಕ್ಯದಲ್ಲಿ ಲಕ್ಷ್ಮೀನಾರಾಯಣರ ಸಂಯೋಗದಿಂದ ಸಮಸ್ತ ಪ್ರಾಣಿಗಳೂ ಹುಟ್ಟುತ್ತವೆಂದು ಹೇಳುವುದರಿಂದ ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಂ ಲಕ್ಷ್ಮೀದೇವಿಯು ನನ್ನ ಪತ್ನಿಯು ಅವಳಲ್ಲಿ ಗರ್ಭವನ್ನು ಧರಿಸುತ್ತೇನೆಂದು ಮುಂದೆ ಹೇಳುವುದರಿಂದ ಕ್ಷೇತ್ರ ಕ್ಷೇತ್ರಜ್ಞಸಂಯೋಗಾತ್ ಎಂಬ ಪದ್ಯದಲ್ಲೂ ಕ್ಷೇತ್ರಶಬ್ದದಿಂದ ಲಕ್ಷ್ಮೀದೇವಿಯೇ ಹೇಳಲ್ಪಡುತ್ತಾಳೆ (೨) (ಕ್ಷೇತ್ರ ಶಬ್ದವು ಲಕ್ಷ್ಮೀವಾಚಕ ಎಂಬುವಲ್ಲಿಯೂ ಮಹಾಭೂತಾನಿ (ಶ್ಲೋ. ೬) ಇತ್ಯಾದಿಗಳಲ್ಲಿ ಹೇಳಿದ ಅಹಂಕಾರಾದಿ ಶಬ್ದಗಳು ದೇವತಾವಾಚಕಗಳೆಂಬುದ ವಿಷಯ

ಪ್ರಮಾಣವನ್ನು ತೋರಿಸುತ್ತಾರೆ—) ಅವ್ಯಕ್ತ, ಮಹದ್ಬ್ರಹ್ಮ, ಪ್ರಧಾನ, ಕ್ಷೇತ್ರ, ಈ ಶಬ್ದಗಳಿಂದ ಶ್ರೀಪರಮಾತ್ಮನಿಗೆ ಪ್ರಿಯಳಾದ ಲಕ್ಷ್ಮೀದೇವಿಯೇ ಸದಾ ಹೇಳಿಸಿಕೊಳ್ಳಲ್ಪಡುತ್ತಾಳೆ. ಆ ಲಕ್ಷ್ಮೀದೇವಿಯು ಸದಾ ದೋಷಲೇಶವಿಲ್ಲದವಳು. ಪ್ರಾಕೃತ ದೇಹಾದಿಸಂಬಂಧರೂಪಗಳಾದ ದೋಷಗಳಿಲ್ಲದಿರುವ ಚಿದಾನಂದಾತ್ಮಕ ದೇಹವುಳ್ಳವಳು. ಎಲ್ಲರಿಗೆ ಸ್ಪಷ್ಟವಾಗಿ ತೋರದಿರುವುದರಿಂದ ಅವ್ಯಕ್ತಳೆಂದೂ ಶ್ರೀಪರಮಾತ್ಮನು ಲಕ್ಷ್ಮೀದೇವಿಯಲ್ಲಿ ಕ್ಷೇತಿ ಆವಾಸಮಾಡಿಕೊಂಡಿರುವುದರಿಂದ ಕ್ಷೇತ್ರಳೆಂದೂ, ಬ್ರಹ್ಮಾದಿಗಳಿಂದ ಶ್ರೇಷ್ಠ ಹೆಚ್ಚು ಗುಣಗಳುಳ್ಳವಳಾದುದರಿಂದ ಮಹದ್ಬ್ರಹ್ಮ ಎಂದೂ. ಬ್ರಹ್ಮಾದಿ ಜೀವರಿಗಿಂತ ಉತ್ತಮಳಾದುದರಿಂದ (ಪ್ರಧಾನ) ಳೆಂದೂ ಹೀಗೆ ಈ ಶಬ್ದಗಳಿಂದ ಮುಖ್ಯವಾಗಿ ಲಕ್ಷ್ಮೀದೇವಿಯು ಹೇಳಲ್ಪಡುತ್ತಾಳೆ. (೩) ಚತುರ್ಮುಖ ಬ್ರಹ್ಮನು ಮಹತ್ತತ್ವಕ್ಕೆ ಅಭಿಮಾನಿಯಾಗಿರುವುದರಿಂದ, ಮಹಾನ್ ಎಂದೂ, ಬ್ರಹ್ಮಾ ಎಂದೂ, ಜೀವಮಹಾನ್ ಎಂದೂ, ಅನಿಸಿಕೊಳ್ಳುತ್ತಾನೆ. (೪) ಜೀವನು ಪರಮಾತ್ಮನಿಂದ ಪ್ರೇರೇಪಿಸಲ್ಪಟ್ಟ ಕ್ರಿಯೆಗಳನ್ನುದ್ದೇಶಿಸಿ ನಾನು ಮಾಡುವವನೆಂದು ಯಾವ ರುದ್ರನ ಪ್ರೇರಣೆಯಿಂದ ತಿಳಿದುಕೊಳ್ಳುತ್ತಾನೋ, ಈ ಶಿವನು ಜೀವನಿಗೆ ಅಹಂಕರೋಮಿ ಎಂದು ಅಹಂಕಾರವನ್ನು ಹುಟ್ಟಿಸುವವನಾದುದರಿಂದ ಅಹಂಕಾರನೆಂದೂ ಹೇಳಿಸಲ್ಪಡುತ್ತಾನೆ (೫) ಪಾರ್ವತೀ ದೇವಿಯು ಶಬ್ದಾದಿಗಳ ಜ್ಞಾನವನ್ನು ಹುಟ್ಟಿಸುವವಳಾದುದರಿಂದ (ಬೋಧಯತಿ=ಶಬ್ದಾದಿಗಳ ಜ್ಞಾನವನ್ನು ತಿಳಿಸುತ್ತಾಳೆಂಬುವ ವ್ಯುತ್ಪತ್ತಿಯಿಂದ) ಬುದ್ಧಿಃ ಎನಿಸುತ್ತಾಳೆ. ॥ ೧ ॥

ಕಾ ॥ (೧) ಮತಿದೋ ಮನ ಉದ್ದಿಷ್ಟ ಇಂದ್ರಃ ಸ್ಕಂದೋಽಪಿ ತತ್ಸುತಃ । ಶ್ರೋತ್ರಂ ತು
ಶ್ರಾವಯಂಶ್ಚಂದ್ರಃ ಸ್ಪರ್ಶೋ ವಾಯುಸುತೋ ಮರುತ್ । ಚಕ್ಷುಃ ಸೂರ್ಯಶ್ಚ
ಕ್ಷಯತಿ ಜಿಹ್ವಾ ವಾರಿಪತಿರ್ಹ್ಯತೇಃ ॥ (೨) ಅಶ್ವಿನೌ ಘ್ರಾಣಮಾಘ್ರಾತೇರ್ವಾಗಗ್ನಿ-
ರ್ವಚನಾದಪಿ । ಹಸ್ತೌ ವಾಯುಸುತೌ ಜ್ಞೇಯೌ ಮರುತೌ ಹಾನಿಲಾಭಯೋಃ ।
ಪಾದೌ ತು ವಿಷ್ವಕ್ಸೇನೋ ವಿಷ್ಣೋ ಯಜ್ಞಶಂಭೂ ಪಚೀಸುತೌ । ಪದನಾದೇವ ಪಾ.
ಯುಶ್ಚ ಭಕ್ತಸ್ಯೈವಾಪ್ಯಯಾದ್ಯಮಃ । ಸಂತತ್ಯುಪಸ್ಥಿತಿಕೃತೇರುಪಸ್ಥಃ ಸ ಶಿವೋ
ಮನುಃ । ವಿನಾಯಕಸ್ತಥಾಽಽಕಾಶೋ ನಿರಾವೃತ್ಯಾ ಪ್ರಕಾಶನಾತ್ ॥ (೩) ಪ್ರಧಾನ
ವಾಯುಜೋ ಭೂತವಾಯುರ್ನಾಮ್ನಾ ಮರೀಚಿಕಃ । ಅಗ್ನಿಶ್ಚ ಪೃಥಿವೀ ಚೈವ
ಪ್ರಸಿದ್ಧೌ ॥ (೪) ವರುಣೋ ಜಲಂ । ಅದನಾತ ಧನಾಜ್ಞನ್ನಲಯಹೇತೋಸ್ತಥಾ-
ಭಿಧಾಃ ॥ ೨ ॥

ಅ ॥ (೧) ಇಂದ್ರನೂ, ಕಾಮರೂಪನಾದ ಸ್ಕಂದನೂ ಕಾಮಪುತ್ರನಾದ ಅನಿರುದ್ಧನೂ. ಜನರ ಬುದ್ಧಿಗೆ ಪ್ರೇರಕರಾದುದರಿಂದ ಮನಃ ಎಂದೂ, ಚಂದ್ರನು ಜನರಿಗೆ ಶಬ್ದವನ್ನು ಕೇಳಿಸುವವನಾದುದರಿಂದ ಶ್ರೋತ್ರನೆಂದೂ, ವಾಯುವಿನ ಪುತ್ರನಾದ ಪ್ರವಹಾಖ್ಯವಾಯುವು ಸ್ಪರ್ಶವನ್ನು ತಿಳಿಸುವುದರಿಂದ ಸ್ಪರ್ಶನೆಂದೂ ಸೂರ್ಯನು ಪದಾರ್ಥಗಳನ್ನು ತೋರಿಸುವವನಾದುದರಿಂದ ಚಕ್ಷುಃ ಎಂದೂ, ಜಲಾಧಿಪತಿಯಾದ ವರುಣನು ರಸಗಳ ಸಾಕ್ಷಾತ್ಕಾರಕ್ಕೆ ಕಾರಣನಾದುದರಿಂದ ಜಿಹ್ವಾ ಎಂದೂ ಅನಿಸಿಕೊಳ್ಳುತ್ತಾನೆ. (೨) ಅಶ್ವಿನೀ ದೇವತೆಗಳು ಸುಗಂಧ ದುರ್ಗಂಧಗಳ ಜ್ಞಾನಕ್ಕೆ ಕಾರಣರಾಗಿರುವುದರಿಂದ ಘ್ರಾಣಂ ಎಂದೂ, ಅಗ್ನಿಯು ವಚನಗಳಿಗೆ ಪ್ರವರ್ತಕನಾದುದರಿಂದ ವಾಕ್ ಎಂದೂ, ವಾಯುಪುತ್ರರಾದ ಮರುತ್ತುಗಳು ಹಾನಿ ಲಾಭಗಳ ನಿಮಿತ್ತದಿಂದ ಹಸ್ತೌ ಎಂದೂ ಶಚೀಪುತ್ರರಾದ ಶ್ರೀಪರಮಾತ್ಮನಿಂದ ಉಪಿಷ್ಟರಾದ ಯಜ್ಞ ಶಂಭುಗಳು ಸಂಚಾರಪ್ರವರ್ತಕರಾದುದರಿಂದ ಪಾದೌ ಎಂದೂ ಅನಿಸಿಕೊಳ್ಳುತ್ತಾರೆ. ಯಮನ

ಉಂಡದ್ದನ್ನೇ ಹೊರಗೋಳಿಸುವ ಸ್ವಭಾವವುಳ್ಳವನಾದುದರಿಂದ ಪಾಯುಃ ಎಂದೂ, ಶಿವನು ಮತ್ತು ಮನುವು ಪುತ್ರಾದಿರೂಪವಾದ ಸಂತತಿಗೆ ಉಪಸ್ಥಿತಿಯನ್ನು ಮಾಡುವುದರಿಂದ (ಅಂದರೆ ಕೊಡುವುದರಿಂದ) ಉಪಸ್ಥನೆಂದೂ, ಗಣಪತಿಯು ಜನರ ಸಂಚಾರಕ್ಕೆ ಪ್ರತಿಬಂಧಕವಾಗದಂತೆ ಅವಕಾಶವನ್ನು ಕೊಡುವವನಾದುದರಿಂದ ಮತ್ತು ಭಕ್ತರ ವಿಘ್ನಗಳನ್ನು ಪರಿಹರಿಸತಕ್ಕವನಾದುದರಿಂದ ಆಕಾಶನೆಂದೂ ಅನಿಸುತ್ತಾನೆ. (೩) ಪ್ರಧಾನ ವಾಯುವಿನ ಪುತ್ರನಾದ ಮರೀಚಿನಾಮಕನು ಭೂತ ವಾಯುವಿಗೆ ಅಭಿಮಾನಿಯಾಗಿರುವುದರಿಂದಲೂ ಗಾಳಿ ಬೀಜಿಸುವುದಕ್ಕೆ ಕಾರಣನಾಗಿರುವುದರಿಂದಲೂ ಭೂತವಾಯು ಎಂದು ಹೆಸರುಳ್ಳವನು. ಸರ್ವಭಕ್ಷಕನಾದುದರಿಂದ ಅಗ್ನಿ ಎನಿಸಿಕೊಂಡವನಿಗೆ ಅಭಿಮಾನಿಯು ವಹ್ನಿಯು ಎಂದೂ. ವಿಸ್ತೃತವಾಗಿರುವುದರಿಂದ ಪೃಥಿವೀ ಎನಿಸಿಕೊಂಡ ಭೂಮಿದೇವಿಗೆ ಅಭಿಮಾನಿನಿಯು ಧರಾದೇವಿಯು ಎಂದೂ ಪ್ರಸಿದ್ಧರು. (೪) ವರುಣನು ಉತ್ಪತ್ತಿಗೂ ನಾಶಕ್ಕೂ ಕಾರಣನಾದುದರಿಂದ ಜಲವೆನಿಸುತ್ತಾನೆ.

ವಿ ॥ (1) ಹುಟ್ಟು ಸಾವುಗಳು ಜಲಾಧೀನವೆಂದು ತೋರುವುದರಿಂದ ಜಲಾಭಿಮಾನಿ ದೇವತೆಗೂ ಜನ್ಮ ಲಯ ಕಾರಣತ್ವವು ಸಿದ್ಧವಾಗಿದೆ. (2) ರೇತಸ್ಸು ರಕ್ತಗಳು ಜಲಾತ್ಮಕಗಳಾಗಿರುವುದರಿಂದ ಗರ್ಭಿಣೀದೇಹದಲ್ಲಿ ಜಲವೃದ್ಧಿಯಾದ ಮೇಲೆಯೇ ಶೀಘ್ರದಲ್ಲಿ ಪ್ರಸವವಾಗುವುದರಿಂದಲೂ ಉತ್ಪತ್ತಿಯು ಜಲಾಧೀನವು (3) ಶರೀರದಲ್ಲಿ ಶ್ಲೈಷ್ಮವು ಜಾಸ್ತಿಯಾಗಿ ತೇಜಸ್ಸು ನೊಂದಿದಾಗ ಸಾವು ಕಂಡದ್ದರಿಂದ ನಾಶವೂ ಜಲಾಧೀನವೆಂದು ತಿಳಿಯಬೇಕು. ॥ ೨ ॥

ತಾ ॥ (೧) ಶಬ್ದಾದ್ಯಾಃ ಪಂಚಶಿವಜಾಃ ಶಬ್ದನಾತ್ಸ್ಪರ್ಶನಾದಪಿ । ರೂಪಣಾದ್ರಸನಾಚ್ಚೈವ
ಗಂಧನಾಚ್ಚ ತಥಾಭಿಧಾಃ ॥ (೨) ಸುಖಂ ಧೃತಿಶ್ಚೇತನಾ ಚ ಸುಖನಾದ್ಧಿಧೃತೇರಪಿ ।
ಚೇತೋ ನೇತೃತ್ವತಶ್ಚೈವ ಮುಖ್ಯವಾಯುಃ ಸರಸ್ವತೀ । ಶ್ರೀಶ್ಚ ॥ (೩) ಇಚ್ಛಾ ಚೈವ
ಸಾ ವಾಯೋಃ ಪತ್ನೀ ತ್ವೇವಂ(ವ) ಧೃತಿರ್ಮತಾ । ಇಚ್ಛಾದಾನಾತ್ತು ಸೈವೇಚ್ಛಾ ॥
(೪) ಸ್ಥಾನಭೇದಾತ್ತು ದೇವತಾಃ । ಪೃಥಕ್ಪೃಥಕ್ಚ ಕಥ್ಯಂತೇ ಲಕ್ಷ್ಮ್ಯಾದ್ಯಾ ಉದಿತಾ
ಅಪಿ ॥ ೩ ॥

ಅ ॥ (೧) ಶಬ್ದಪ್ರವರ್ತಕ, ಸ್ಪರ್ಶಪ್ರವರ್ತಕ, ರೂಪಪ್ರವರ್ತಕ, ರಸಪ್ರವರ್ತಕ, ಗಂಧಪ್ರವರ್ತಕರಾದುದರಿಂದ ಶಿವಪುತ್ರರು ಐದು ಮಂದಿ ಬೃಹಸ್ಪತಿ ಅಪಾನ ಮೊದಲಾದವರು ಶಬ್ದಾದಿನಾಮವುಳ್ಳವರು ಶಬ್ದಾದಿಗಳಿಗೆ ಅಭಿಮಾನಿಗಳು. (೨) ಮುಖ್ಯವಾಯುವು ಭಕ್ತರಿಗೆ ಸುಖವನ್ನು ಹೊಂದಿಸಿಕೊಡುವುದರಿಂದ ಸುಖನೆಂದೂ, ಸರಸ್ವತಿಯು ಧೈರ್ಯವನ್ನು ಕೊಡುವವಳಾದುದರಿಂದ ಧೃತಿಯೆಂದೂ ಲಕ್ಷ್ಮೀದೇವಿಯು ಮನಸ್ಸಿಗೆ ಪ್ರೇರಕಳಾದುದರಿಂದ ಚೇತನಾ ಎಂದೂ, ಅನ್ನಿಸಿಕೊಳ್ಳುತ್ತಾರೆ. (೩) ಲಕ್ಷ್ಮೀದೇವಿಯು ಇಚ್ಛೆಗೆ ಅಭಿಮಾನಿನಿಯಾಗಿರುವುದರಿಂದ ಇಚ್ಛಾ ಎಂದು ಅನಿಸುತ್ತಾಳೆ. ಸರಸ್ವತಿಯು ಮುಖ್ಯಪ್ರಾಣನ ಪತ್ನಿಯಾದ ಭಾರತಿಯೂ ಕೂಡ ಸರ್ವಧಾರಕಳಾದುದರಿಂದ ಧೃತಿಯೆನಿಸಿಕೊಳ್ಳುತ್ತಾಳೆ ಆ ಲಕ್ಷ್ಮೀಭಾರತೀಯರೇ ಜೀವನಿಗೆ ಇಚ್ಛೆಯನ್ನು ಕೊಡುವವರಾದುದರಿಂದ ಇಚ್ಛಾ ಎಂದೂ ಎನಿಸುತ್ತಾರೆ. (೪) (ಅವ್ಯಕ್ತ, ಚೇತನಾ, ಇಚ್ಛಾದಿ ಶಬ್ದಗಳಿಂದ ಲಕ್ಷ್ಮೀದೇವಿಯೂ, ಅಹಂಕಾರ ಉಪಸ್ಥ ಗಳಿಂದ ಶಿವನೂ, ಸ್ಪರ್ಶ, ಭೂತವಾಯು ಪದಗಳಿಂದ ಪ್ರವಹನೂ ಜಿಹ್ವಾ, ಜಲ, ಪದಗಳಿಂದ ವರುಣನೂ, ವಾಕ್ ಅಗ್ನಿ ಪದಗಳಿಂದ ಅಗ್ನಿಯೂ, ಹೇಳಲ್ಪಡುವುದಾದರೆ ಕೆಲವು ಕಡೆ ಅವ್ಯಕ್ತವನ್ನು ಪುನಃ ಚೇತನಾದಿಗಳನ್ನು ಹೇಳುವುದು ಹೇಗೆ? ಎಂದರೆ—) ಲಕ್ಷ್ಮ್ಯಾದಿದೇವತೆಗಳು ಹೇಳಲ್ಪಟ್ಟಿ ಸ್ಥಾನಭೇದ ಪ್ರಯುಕ್ತ ರೂಪವಿಶೇಷದಿಂದ ಪುನಃಪುನಃ ಪ್ರತ್ಯೇಕ ಪ್ರತ್ಯೇಕ ಶಬ್ದಾಂತರಗಳಿಂದ ಹೇ

ಸುತ್ತಾರೆ. (ಏವಂಚ ಅವ್ಯಕ್ತ ಎನಿಸಿದ ಲಕ್ಷ್ಮೀದೇವಿಗೂ ಇತರರಿಗೂ ಸ್ಥಾನಭೇದ ಪ್ರಯುಕ್ತ ರೂಪಭೇದವಿದ್ದುದರಿಂದ ಚೇತನಾದಿ ಪದಗಳಿಂದ ಎರಡನೇ ಸಲ ಹೇಳಿದ್ದು ಯುಕ್ತವು.) ॥ ೩ ॥

**ತಾ ॥ (೧) ದುಃಖದ್ವೇಷೌ ಕಲಿಶ್ಚೈವ ದ್ವಾಪರೌ ಬ್ರಹ್ಮಣಃ ಸುತೌ । ಪ್ರವರಾವಸುರಾಣಾಂ ತೌ ॥ (೨) ಸಂಘಾತಶ್ಚೇತನಾಃ ಪರೇ ॥ (೩) ಏತೈರಭಿಮತಂ ಯಚ್ಚ ತತ್ತನ್ನಾಮ್ನಾಽಭಿಧೀಯತೇ ॥ (೪) ಚೇತನಾಚೇತನಂ ತ್ವೇತತ್ಸರ್ವಂ ಕ್ಷೇತ್ರಮಿತೀರಿತಂ । ಕ್ಷಿತೇರೇತದ್ಭಗವತೋ ಯದತಃ ಕ್ಷೇತ್ರಮೀರ್ಯತೇ । ಕ್ಷಿಣೋತಿ ತ್ರಾತಿ ಚೈವೈತದ(ಶ್ಲೋ)ತೋ ವಾ ಕ್ಷೇತ್ರಮುಚ್ಯತೇ । ಕ್ಷಿತಿಂ ಕೃತ್ವಾ ತ್ರಾತಿ ಚೈತದತೋ ವಾ ಕ್ಷೇತ್ರಮೀರಿತಂ । ಏತಸ್ಮಾತ್ಕ್ಷಿಣಮೇತೇನ ತ್ರಾತಮಿತ್ಯಥವಾ ಪುನಃ ॥ ೪ ॥**

ಅ ॥ (೧) ಕಲಿಯು ದುಃಖ ದ್ವೇಷಗಳಿಗೆ ಅಭಿಮಾನಿಯು. ದ್ವಾಪರನು ದ್ವೇಷಾಭಿಮಾನಿಯು ಇವರಿಬ್ಬರೂ ಚತುರ್ಮುಖನಿಂದಲೇ ಹುಟ್ಟಿದವರು. ಅಸುರರಲ್ಲಿ ಕಲಿಯು ಶ್ರೇಷ್ಠನು. ಅಂದರೆ ಹೆಚ್ಚು ದುಃಖವುಳ್ಳವನು ಆ ಮೇಲೆ ದ್ವಾಪರನು. **ಅತಃ ಕಲೇರನಂತರಃ ಸ ವಿಪ್ರಚಿತ್ತಿನಾಮಕಃ** ಎಂದು ಕಲಿಯ ಅನಂತರ **ವಿಪ್ರಚಿತ್ತಿ** ಎಂದು ತಾತ್ಪರ್ಯನಿರ್ಣಯದಲ್ಲಿ ಹೇಳಿದ್ದರಿಂದ **ದ್ವಾಪರ ವಿಪ್ರಚಿತ್ತಿ**ಗಳು ಸಮರೆಂದು ತಿಳಿಯಬೇಕು) (೨) ಇತರರಾದ ಜೀವರು ಅವರವರ ದೇಹಗಳಿಗೆ ಅಭಿಮಾನಿಗಳು. **ಅಥವಾ ದೇಹೇಂದ್ರಿಯಪ್ರಾಣಧಿಯಾಂ ತ್ವಿತ್ಯೈವ ಹ್ಯಭಿಮಾನಿನಃ** । ಎಂಬುವ ಪ್ರಮಾಣದಿಂದ ವೈಶ್ರವಣ ಮೊದಲಾದ ಚೇತನರು ದೇಹಾಭಿಮಾನಿಗಳು (೩) (**ಅವ್ಯಕ್ತಾದಿ ಶಬ್ದಗಳು ಲಕ್ಷ್ಮ್ಯಾದಿ** ವಾಚಕಗಳೇ ಎಂದಾದರೆ--) ಅವ್ಯಕ್ತ ಮೊದಲಾದ ಶಬ್ದಗಳಿಂದ ಜಡಪದಾರ್ಥಗಳು ವಾಚ್ಯಗಳೆಂದು ಹೇಳುವುದು ಹೇಗೆ? ಎಂದರೆ--)ಜಡಪ್ರಕೃತಿ ಮೊದಲಾದವುಗಳು ಅವ್ಯಕ್ತಾದಿ ನಾಮಗಳುಳ್ಳ ಲಕ್ಷ್ಮ್ಯಾದಿ ದೇವತೆಗಳಿಂದ ಅಭಿಮನ್ಯಮಾನಗಳಾಗಿರುವುದರಿಂದ ಜಡವಸ್ತುಗಳೂ ಕೂಡ ಅವ್ಯಕ್ತಾದಿ ಶಬ್ದಗಳಿಂದ ಹೇಳಲ್ಪಡುತ್ತವೆ. (೪) (**ಏತತ್ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಂ** (ಶ್ಲೋ. ೭) ಎಂಬಲ್ಲಿ ಇಚ್ಛಾದಿ ವಿಕಾರಗಳಿಂದ ಕೂಡಿದ ಮಹಾಭೂತಾದಿಗಳು ಕ್ಷೇತ್ರವೆನಿಸುತ್ತವೆ, ಎಂದು ಹೇಳಿದುದನ್ನು ವಿವರಿಸುತ್ತಾರೆ—) ಈ ಚೇತನಾಚೇತನವೆಲ್ಲವೂ ಕ್ಷೇತ್ರವೆನಿಸುತ್ತದೆ. (1) ಚೇತನಾಚೇತನವೆಲ್ಲವೂ ಶ್ರೀಪರಮಾತ್ಮನಿಗೆ ಕ್ಷಿತಿಃ=ಆವಾಸಭೂಮಿಯಾಗಿದೆ ಆದಕಾರಣ ಎಲ್ಲವೂ ಕ್ಷೇತ್ರವೆನಿಸುತ್ತದೆ. (2) ಅಥವಾ ಚೇತನಾಚೇತನಾತ್ಮಕ ಸಮಸ್ತ ಜಗತ್ತನ್ನು ಶ್ರೀಪರಮಾತ್ಮನು ಪ್ರಳಯಕಾಲದಲ್ಲಿ ನಾಶಗೊಳಿಸುತ್ತಾನೆ. ಸ್ಥಿತಿಕಾಲದಲ್ಲಿ ರಕ್ಷಿಸುತ್ತಾನೆ ಹೀಗೆ ಶ್ರೀಪರಮಾತ್ಮನಿಂದ ರಕ್ಷಿಸಲ್ಪಡುವುದರಿಂದಲೂ ನಾಶಹೊಂದುವುದರಿಂದಲೂ ಚೇತನಾಚೇತನಾತ್ಮಕ ಜಗತ್ತು ಕ್ಷೇತ್ರವೆನಿಸುತ್ತದೆ. (3) ಅಥವಾ ಚೇತನಾಚೇತನ ಸಮಸ್ತ ಜಗತ್ತನ್ನು ತನಗೆ ಆವಾಸಸ್ಥಾನವನ್ನಾಗಿ ಮಾಡಿಕೊಂಡು ಅದನ್ನು ತಾನು ರಕ್ಷಿಸುವುದರಿಂದ ಆ ಜಗತ್ತು ಕ್ಷೇತ್ರವೆನಿಸುತ್ತದೆ (4) ಅಥವಾ ಚೇತನಾಚೇತನವು ಶ್ರೀಪರಮಾತ್ಮನಿಗಿಂತ ಅಧಮವು. ಶ್ರೀಪರಮಾತ್ಮನಿಂದ ರಕ್ಷಿಸಲ್ಪಡುತ್ತದೆ ಆದಕಾರಣ ಕ್ಷೇತ್ರವೆನಿಸುತ್ತದೆ. ॥ ೪ ॥

ಹೀ—ಮಹಾ ಭೂತಾದಿಗಳಂತೆಯೇ ಇಚ್ಛಾದಿಗಳಿಗೂ ಕ್ಷೇತ್ರ ಎಂದು ಹೆಸರು ಇರುವುದಾದರೆ ಇವುಗಳೂ ಅವುಗಳಲ್ಲಿಯೇ ಸೇರುವುದರಿಂದ ಪೃಥಕ್ ಇಚ್ಛಾದಿಗಳಿಗೆ ವಿಕಾರಗಳೆಂದು ಹೆಸರು ಹೇಳುವುದೇಕೆ ಎಂದರೆ –

**ತಾ ॥ (೧) ಇಚ್ಛಾದ್ಯಾನಾಂ ಕ್ಷೇತ್ರನಾಮ್ನಾಮಪಿ ನಾಮಾಂತರಂ ಸ್ಮೃತಂ ॥ (೨) ವಿಕಾರಾ(ಶೇಷಾ) ಇತಿ ಯಸ್ಮಾತ್ತೇ ವಿಶೇಷವಿಕೃತಿಸ್ಥಿತಾಃ । ವಿಶೇಷಾತ್ಕ್ರಿಯತೇ ಯಸ್ಮಾ-**

ದ್ವಿಕಾರಂ ಕಾರ್ಯಮಂತಿಮಂ(ತಗಂ) । ವಿಗತಂ ಕಾರಣಂ ಚಾ(ವಾ)ತ್ರ ಪುನರ್ನಾ-
ಶಮೃತೇ ಯತಃ ॥ (೩) ತತ್ಸಂಬಂಧಾದ್ವಿಕಾರಾಖ್ಯಾ ಇಚ್ಛಾದ್ಯಾ ಅಭಿಮಾನಿನಃ ।
ಏತತ್ಸರ್ವಂ ಸರ್ವದೈವ ನಿರ್ದೋಷೇಣೈವ ಚಕ್ಷುಷಾ । ಪ್ರೇರಯನ್ನೇವ ಜಾನಾತಿ
ತ(ಯ)ತ್ಕ್ಷೇತ್ರಜ್ಞೋ ಹರಿಸ್ತತ ಇತಿ ಚ॥(೪)ಯಸ್ಯಾತ್ಮಾ ಶರೀರಮಿತ್ಯಾದಿಶ್ರುತೇಶ್ಚೇ-
ತನಸ್ಯಾಪೀದಂ ಶರೀರಂ ಕೌಂತೇಯೇತಿ ತಶರೀರತ್ವೋಕ್ತಿರ್ಯುಜ್ಯತೇ ॥ (೫) ಸತ್ತ್ವಂ
ಜೀವಃ ಕ್ವಚಿತ್ಪ್ರೋಕ್ತಃ ಕ್ವಚಿತ್ಸತ್ತ್ವಂ ಜನಾರ್ದನಃ । ಸತ್ತ್ವಂ ನಾಮ ಗುಣಃ ಕ್ವಾಪಿ
ಕ್ವಚಿತ್ಸಾಧುತ್ವಮುಚ್ಯತ ಇತಿ ಶಬ್ದನಿರ್ಣಯೇ ॥ (೬) ತಯೋರನ್ಯಃ ಪಿಪ್ಪಲಂ ಸ್ವಾ-
ದ್ವತ್ತೀತಿ ॥ (೭) ಸತ್ವಮಿತಿ ಚ ಪೈಂಗಿಶ್ರುತಿಃ । ಜನಿ ಪ್ರಾದುರ್ಭಾವ ಇತಿ ಧಾತೋಃ
ರ್ಜೀವಸ್ಯಾಪಿ ಶರೀರೇ ವ್ಯಕ್ತ್ಯಪೇಕ್ಷಯಾ ಜನಿರ್ಯುಜ್ಯತೇ ॥ ೫ ॥ ॥ ೨೬ ॥

೫ ॥ (೧) ಇಚ್ಛಾದಿಗಳು ಮಹದಾದಿಗಳಿಗಿಂತ ಹೆಚ್ಚು ವಿಕಾರವುಳ್ಳವುಗಳಾಗಿರುವುದರಿಂದ ಇಚ್ಛಾದಿಗಳಿಗೆ ಕ್ಷೇತ್ರ ಎಂದು ಹೆಸರಿದ್ದರೂ ವಿಕಾರಾಃ ಎಂದು ನಾಮಾಂತರವನ್ನು ಹೇಳಿದ್ದಾರೆ (೨) (ಘಟಾದಿಗಳಲ್ಲಿಯೂ ಇಂತಹುದೇ ವಿಕಾರವೆನ್ನುತ್ತಾರೆ—) ಯಾವ ಕಾರಣದಿಂದ ಮಹದಾದಿಗಳ ವಿ...ಯಿಂದ ಅತಿಶಯವಾಗಿ ಮಹದಾದಿಗಳು ಅಸಂಸ್ಕೃತಗಳಾಗಿರುವದರಿಂದ ಅವುಗಳ ಸೂಕ್ಷ್ಮರೂಪ ನಿತ್ಯವು. ಘಟಾದಿಗಳು ಸಂಸ್ಕೃತಗಳಾಗಿರುವುದರಿಂದ ಅನಿತ್ಯಗಳು, ಇಂತಹ ವಿಶೇಷದಿಂದ ಅಂತ್ಯವ...ಯಾದ ಘಟಾದಿಗಳೇ ದ್ರವ್ಯಾಂತರಕ್ಕೆ ಕಾರಣಗಳಾಗದೆ ಇರುವುದರಿಂದ ತನ್ನ ನಾಶ ಹೊರತು ಅವ...ಮತ್ತೊಂದು ಕಾರ್ಯದ್ರವ್ಯವು ಹುಟ್ಟದಿರುವುದರಿಂದ ವಿಕಾರವೆನಿಸುತ್ತದೆ. ಎವಂಚ ಕಾರಣತ್ವವಿ...ದರಿಂದ ವಿಕಾರ ಎಂದು ಹೆಸರು. (೩) (ಅಭಿಮಾನಿ ದೇವತೆಗಳಿಗೂ ಇಚ್ಛಾದಿ ಶಬ್ದವಾಚ್ಯತ್ವವಿದ್ದ...ಅವರಿಗೆ ವಿಕಾರತ್ವವು ಹೇಗೆಂದರೆ—) ಇಚ್ಛಾ ಮೊದಲಾದ ಅಭಿಮಾನಿದೇವತೆಗಳಿಗೂ ಆ ವಸ್ತುಗಳಿಗೂ ನಿಯಮ್ಯ ನಿಯಾಮಕಭಾವ ಸಂಬಂಧವಿದ್ದುದರಿಂದ ದೇವತೆಗಳಿಗೆ ವಿಕಾರ ಎಂದು ಹೆಸರು ಇದೆ ...ಲ್ಲವನ್ನು ಶ್ರೀಪರಮಾತ್ಮನು ಯಾವಾಗಲೂ ಸರ್ವರಿಗೂ ಪ್ರೇರೇಪಿಸುವವನಾಗಿಯೇ ಪಾರತಂತ್ರ್ಯ ಮೊದಲಾದ ದೋಷಗಳೂ ಇಲ್ಲದಿರುವ ಕಣ್ಣಿನಿಂದಲೇ ನೋಡುತ್ತಾನೆ. ಆದಕಾರಣ ಕ್ಷೇತ್ರಜ್ಞನೆನಿಸುತ್ತಾನೆ (೪) (ಚೇತನಾಚೇತನವೆಲ್ಲವೂ ಕ್ಷೇತ್ರವೆಂದದ್ದು ಯುಕ್ತವಲ್ಲ. ಹಿಂಸಾಹೇತುತ್ವ ಜೀವಸ್ಯ ...ಹೇಳಿದ ಅರ್ಥವು ಚೇತನನಲ್ಲಿ ಕೂಡದಿರುವುದರಿಂದ, ಚೇತನನಿಗೆ ಇದಂ ಶರೀರಂ ಎಂದು ಹೇಳಿದ ಶ...ರತ್ವವು ಕೂಡಲಾರದೆಂದರೆ -) ಯಾವ ಶ್ರೀಪರಮಾತ್ಮನಿಗೆ ಜೀವನು ಶರೀರಸ್ಥಾನೀಯನು. ಇದು ಮೊದಲಾದ ಶ್ರುತಿಗಳಿಂದ (ಜೀವನಿಗೆ ಹಿಂಸಾಹೇತುರೂಪವಾದ ಶರೀರತ್ವವು ಕೂಡದಿದ್ದರೂ ಪೃಥಿವ್ಯಾದಿ ದೇವತಾಃಸ್ತು ದೇಹವದ್ಭೃತ್ಯತತ್ಪರಾಃ ಎಂದು ಹೇಳಿದ ಪ್ರಕಾರ ಭಗವಂತನ ಅಧೀನತ್ವರೂಪ...ತ್ವವು ಕೂಡುವುದರಿಂದ) ಜೀವರಿಗೂ ಕೂಡ ಇದಂ ಶರೀರಂ ಕೌಂತೇಯ ಎಂದು ಹೇಳಿದ ...ಕೂಡುತ್ತದೆ (೫) (ಯಾವತ್ಸಂಜಾಯತೇ ಕಿಂಚಿತ್ ಎಂಬುವಲ್ಲಿ ಸತ್ವ ಶಬ್ದವು ಜೀವವಾಚಕವೆಂ...ವಲ್ಲಿ ಪ್ರಮಾಣ ಹೇಳುತ್ತಾರೆ.) ಕೆಲವು ಕಡೆ ಸತ್ವ ಶಬ್ದದಿಂದ ಜೀವನೂ, ಕೆಲವು ಕಡೆ ಶ್ರೀ...ವನೂ, ಕ್ವಚಿತ್ ಸತ್ವಗುಣವೂ, ಕೆಲವು ಕಡೆ ಸಾಧುತ್ವವೂ, ಹೇಳಲ್ಪಡುತ್ತದೆಂಬು ಶಬ್ದನಿ...(೬) ಜೀವ ಪರಮಾತ್ಮರಲ್ಲಿ ಒಬ್ಬನು ದೇಹದಿಂದುಂಟಾದ ಕರ್ಮಫಲವನ್ನು ಆಸ್ವಾದುವಾದಾಗ...ವಾಗಿಯೇ ಉಣ್ಣುತ್ತಾನೆ ಎಂಬುವಲ್ಲಿ ತಯೋರನ್ಯಃ— ಎಂದು ಅಥರ್ವಣದಲ್ಲಿ ಹೇಳಿದ ಜೀವನ...ಎಂದು ಪೈಂಗಿ ಶ್ರುತಿಯಲ್ಲಿ ಹೇಳಿದ್ದಾರೆ. (೭) (ಸತ್ವ ಶಬ್ದದಿಂದ ಜೀವನನ್ನು ಇಟ್ಟುಕೊಂಡರೆ ...ಅನಾದಿಯಾಗಿರುವುದರಿಂದ ಯಾವತ್ಸಂಜಾಯತೇ ಎಂದು ಹೇಳಿದ ಉತ್ಪತ್ತಿಯು ಕೂಡಲಾರದೆ...

ಧರ್ಮಾರ್ಥಕವಾದ ಜನಿಧಾತುವಿನಿಂದ ಜೀವನಿಗೂ ಶರೀರದಲ್ಲಿ ಅಭಿವ್ಯಕ್ತಿಯಾಗುವುದರಿಂದ ಜಾಯತೇ ಎಂದು ಹೇಳಿದ ಜನಿಯು ಕೂಡುತ್ತದೆ. ॥ ೨೭ ॥

ಟೀ — ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಎಂದು ಶ್ರೀಪರಮಾತ್ಮನು ಸರ್ವರ ಶರೀರದಲ್ಲಿದ್ದಾನೆಂದು ಹೇಳಿದ್ದು ಯುಕ್ತವಲ್ಲ ಹಾಗಿದ್ದರೆ— ಆಯಾವ ವಸ್ತುಗಳ ತಾರತಮ್ಯವಿದ್ದ ಪ್ರಯುಕ್ತ ಶ್ರೀಪರಮಾತ್ಮನಿಗೆ ತಾರತಮ್ಯವೂ ಮತ್ತು ದುಃಖಗಳೊಂದಿಗೆ ಇದ್ದುದರಿಂದ ಶ್ರೀಪರಮಾತ್ಮನಿಗೆ ದುಃಖವೂ ಬರಬೇಕಾಗುವುದು ಎಂದರೆ—

ಗೀ ॥ ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ ।
ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ ೨೮ ॥

ಅ ॥ ಯಃ = ಯಾವ ಅಧಿಕಾರಿಯು. ಸರ್ವೇಷು ಭೂತೇಷು = ನೀಚೋಚ್ಚಭಾವವಿರುವ ಎಲ್ಲಾ ಪ್ರಾಣಿಗಳಲ್ಲಿಯೂ, ತಿಷ್ಠಂತಂ = ಇರುವ. ಪರಮೇಶ್ವರಂ = ಅಚಿಂತ್ಯ ಶಕ್ತಿಯುಳ್ಳ ಶ್ರೀಪರಮಾತ್ಮನನ್ನು, ಸಮಂ = ನ್ಯೂನಾಧಿಕಭಾವವಿಲ್ಲದಿರುವವನನ್ನಾಗಿಯೂ, ಎಲ್ಲಾ ಪ್ರಾಣಿಗಳಲ್ಲಿ ಇದ್ದರೂ ಸಮಸ್ತ ಸದ್ಗುಣ ಗಳಿಂದಲೇ ಕೂಡಿದವನನ್ನಾಗಿಯೂ, ಪಶ್ಯತಿ = ನೋಡುತ್ತಾನೋ, ಮತ್ತು ವಿನಶ್ಯತ್ಸು = ಸುಖ ದುಃಖ ಜನನ ಮರಣ ಮೊದಲಾದ ದೋಷಗಳುಳ್ಳ ಪ್ರಾಣಿಗಳಲ್ಲಿರುವ ಶ್ರೀಪರಮಾತ್ಮನನ್ನು, ಅವಿನಶ್ಯಂತಂ = ದುಃಖಾದಿ ದೋಷರಹಿತನನ್ನಾಗಿಯೂ, ಪಶ್ಯತಿ = ತಿಳಿಯುತ್ತಾನೋ, ಸಃ = ಅತನೇ, ಪಶ್ಯತಿ = ಭಗವದ್ವಿಷಯಕ ಯಥಾರ್ಥಜ್ಞಾನವುಳ್ಳವನು. ॥ ೨೮ ॥

ಟೀ — ಇಂತಹ ಸಾಮ್ಯಾದಿ ಜ್ಞಾನಕ್ಕೆ ಫಲವನ್ನು ಹೇಳುತ್ತಾರೆ —

ಗೀ ॥ ಸಮಂ ಪಶ್ಯನ್ಹಿ ಸರ್ವತ್ರ ಸಮವಸ್ಥಿತಮೀಶ್ವರಂ ।
ನ ಹಿನಸ್ತ್ಯಾತ್ಮನಾಽಽತ್ಮಾನಂ ತತೋ ಯಾತಿ ಪರಾಂ ಗತಿಂ ॥ ೨೯ ॥

ಅ ॥ ಸರ್ವತ್ರ = ಚೇತನ ಅಚೇತನ ನಿಖಿಲ ವಸ್ತುಗಳಲ್ಲಿಯೂ, ಸಮವಸ್ಥಿತಂ = ದುಃಖಾದಿ ದೋಷ ರಹಿತನೂ ಸರ್ವಗುಣಪರಿಪೂರ್ಣನೂ ಆಗಿಯೇ ಅನ್ಯಾನ ನಿಯಾಮಕನಾಗಿರುವ, ಈಶ್ವರಂ = ಸರ್ವ ಸ್ವಾಮಿಯಾದ ಶ್ರೀಪರಮಾತ್ಮನನ್ನು, ಸಮಂ = ಸಮಸ್ತವಸ್ತುಗಳಲ್ಲಿಯೂ ನಿರ್ದೋಷನೂ ಸರ್ವಗುಣ ಪರಿ ಪೂರ್ಣನೂ ಎಂದು ಒಂದೇ ಪ್ರಕಾರ ಇರುವವನನ್ನಾಗಿಯೂ, ಪಶ್ಯನ್ = ತಿಳಿಯುವ ಅಧಿಕಾರಿಯು, ಆತ್ಮನಾ = ಬುದ್ಧಿಯಿಂದ, ಆತ್ಮಾನಂ = ತನ್ನನ್ನು, ನ ಹಿನಸ್ತಿ = ನರಕದಲ್ಲಿ ಕೆಡಹಾಕಿಕೊಳ್ಳುವುದಿಲ್ಲ. ತತಃ — ಇಂತಹ ಭಗವದ್ವಿಷಯಕ ಜ್ಞಾನದಿಂದ ಪರಾಂ ಗತಿಂ = ಮುಕ್ತಿಯನ್ನು ಕೂಡ, ಯಾತಿ = ಹೊಂದುತ್ತಾನೆ.
॥ ೨೯ ॥

ಭಾ ॥ ಪುನಶ್ಚ ಪ್ರಕೃತಿಪುರುಷೇಶ್ವರಸ್ವರೂಪಂ ಸಾಮ್ಯಾದಿಧರ್ಮಾನ್ಯುಕ್ತಮಾಹ । ಯಾವ-ದಿತ್ಯಾದಿನಾ ॥ ೨೭,೨೮,೨೯ ॥

ಅ ॥ ಯಾವತ್ಸಂಜಾಯತೇ ಇತ್ಯಾದಿಗಳಿಂದ ತಿರುಗಿ ಪ್ರಕೃತಿ ಪುರುಷ ಪರಮಾತ್ಮ ಇವರ ಸ್ವರೂಪವನ್ನು ಸಾಮ್ಯ ಮೊದಲಾದ ಧರ್ಮಗಳಿಂದೊಡಗೂಡಿದುದನ್ನಾಗಿ ಹೇಳುತ್ತಾರೆ (ಅಂದ

ಸಮಸ್ತ ಕಾರ್ಯಗಳ ಉಪಾದಾನಕಾರಣತ್ವವು ಪ್ರಕೃತಿಧರ್ಮವು. ಜಡಪ್ರಕೃತಿಯೇ ಉಪಾದಾನಕಾರಣವಾಗಿ ಉಳ್ಳ ದೇಹ ಇಂದ್ರಿಯಾದಿಗಳ ಸಂಬಂಧವು ಜೀವರ ಧರ್ಮವು. ಇಂತಹ ಪ್ರಕೃತಿ ಪುರುಷರ ಧರ್ಮಕ್ಕಿಂತ ಶ್ರೀಪರಮಾತ್ಮನ ಧರ್ಮವು ವಿಲಕ್ಷಣವಾದುದು. ಅಂದರೆ ಸರ್ವತ್ರ ಇರತಕ್ಕ ಶ್ರೀಪರಮಾತ್ಮನಿಗೆ ದೋಷಲೇಶವಿಲ್ಲದಿರುವುದರಿಂದಲೂ ಸರ್ವ ಗುಣಪರಿಪೂರ್ಣತ್ವವಿದ್ದುದರಿಂದಲೂ ಸರ್ವತ್ರ ಸಾಮ್ಯವು ಇದು ಶ್ರೀಪರಮಾತ್ಮನ ಧರ್ಮವು ॥ ೨೭–೨೮ ॥

**ತಾ ॥ (೧) ಜೀವೇಷು ದುಃಖಯೋಗಾದಿರೂಪೇಣ ವಿನಶ್ಯತ್ಸ್ವಪಿ ತಥಾಭೂತಂ ।(೨)ದುಃಖಯೋಗಾದಿರೂಪೇಣ ಜೀವೇಷು ವಿನಶತ್ಸ್ವಪಿ । ದುಃಖಯೋಗಾದಿರಹಿತಃ ಸರ್ವಜೀವೇಷ್ವವಸ್ಥಿತಃ ॥ (೩) ಗುಣೈಃ ಸರ್ವೈಃ ಸಮೋ ನಿತ್ಯಂ ನ ಹೀನೋ ಹೀನಗೋsಪಿ ಸನ್ । ಇತಿ ಪಶ್ಯತಿ ಯೋ ವಿಷ್ಣುಂ ಸ ಏವ ನ ತಮೋ ವ್ರಜೇದಿತಿ ಪಾದ್ಮೇ ॥೨೮,೨೯॥**

ಅ ॥ (೧) ಜೀವರು ದುಃಖಸಂಬಂಧ ದೇಹಹಾನ್ಯಾದಿರೂಪದಿಂದ ವಿನಾಶ ಹೊಂದಿದರೂ ಶ್ರೀಪರಮಾತ್ಮನು ದುಃಖಾದಿಗಳ ಸಂಬಂಧವಿಲ್ಲದವನು ನಾಶಾದಿಗಳಿಲ್ಲದವನು (೨ ಎರಡು(೨೮. ೨೯) ಶ್ಲೋಕಗಳ ಅರ್ಥವನ್ನು ಸ್ಮೃತಿಪ್ರಮಾಣದಿಂದಲೇ ಹೇಳುತ್ತಾರೆ–) ದುಃಖ ಸಂಬಂಧ ದೇಹವಿಯೋಗಾದಿಗಳಿಂದ ಜೀವರಿಗೆ ನಾಶ ಬಂದರೂ ದುಃಖ ಸಂಬಂಧಾದಿಗಳು ಇಲ್ಲದವನಾಗಿಯೇ ಸಮಸ್ತ ಜೀವರಲ್ಲಿಯೂ ನಿಯಾಮಕನಾಗಿರುತ್ತಾನೆ. (೩) ಶ್ರೀಪರಮಾತ್ಮನು ನಿಕೃಷ್ಟ ವಸ್ತುಗಳಲ್ಲಿದ್ದವನಾದಾಗ್ಯೂ ಶ್ರೀಹರಿಯು ಹೀನನಾಗುವುದಿಲ್ಲ ಮತ್ತು ನಿತ್ಯದಲ್ಲಿಯೂ ಸಮಸ್ತ ಗುಣಗಳಿಂದಲೂ ಸರ್ವತ್ರ ಸಮನಾಗಿಯೇ ಇದ್ದಾನೆ. ಹೀಗೆ ಯಾವಾತನು ಶ್ರೀವಿಷ್ಣುವನ್ನು ಸದಾ ತಿಳಿಯುತ್ತಾನೋ, ಆತನೇ ಅಂಧಂತಮಸ್ಸನ್ನು ಹೊಂದಲಾರನು, (ಮುಕ್ತಿ ಮೋಕ್ಷಾದಿ ಪುರುಷಾರ್ಥವನ್ನು ಹೊಂದುತ್ತಾನೆ.) ಎಂದು ಪಾದ್ಮಪುರಾಣದಲ್ಲಿದೆ. ॥ ೨೮, ೨೯ ॥

ಹೀ—ಶ್ರೀಪರಮಾತ್ಮನು ಆಯಾಯ ಜೀವರು ಮಾಡಿದ ಕರ್ಮಗಳನ್ನು ಅಪೇಕ್ಷಿಸದೇನೇ ನಾನಾ ಯೋನಿಗಳಲ್ಲಿ ಜೀವರು ಹುಟ್ಟಲಿಕ್ಕೆ ಸ್ವತಂತ್ರ ಕಾರಣನೆಂದಾದರೆ—ಶ್ರೀಪರಮಾತ್ಮನಿಗೆ ವೈಷಮ್ಯಾದಿ ದೋಷವು ಬರಬೇಕಾಗುವುದು. ಜೀವರು ಮಾಡಿದ ಕರ್ಮಗಳನ್ನು ಅಪೇಕ್ಷಿಸಿಕೊಂಡು ಕಾರಣನಾಗುವುದಾದರೆ ಶ್ರೀಪರಮಾತ್ಮನಿಗೆ ಸ್ವಾತಂತ್ರ್ಯವು ಇಲ್ಲವೆಂದಾಗಬೇಕಾಗುವುದು. ಎಂದರೆ—

**ಗೀ ॥ ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾऽऽತ್ಮಾನಮಕರ್ತಾರಂ ಸ ಪಶ್ಯತಿ ॥ ೩೦ ॥**

ಅ ॥ ಪ್ರಕೃತ್ಯಾ = ಅತಿ ಹಿಂದಿನದಾದ ಜೀವರ ಕರ್ಮವನ್ನು ದ್ಯೋತಿಸಿ ಅದನ್ನು ಅನುಸರಿಸಿ, ಈಶ್ವರೇಣೈವ ಚ=ಶ್ರೀಪರಮಾತ್ಮನಿಂದಲೇ ಕ್ರಿಯಮಾಣಾನಿ=ಮಾಡಲ್ಪಡತಕ್ಕ, ಸರ್ವಶಃ=ಎಲ್ಲಾ, ಕರ್ಮಗಳನ್ನು, ಯಃ = ಯಾವನು, ಪಶ್ಯತಿ = ತಿಳಿಯುತ್ತಾನೋ, ತಥಾ = ಹಾಗೆಯೇ, ಆತ್ಮಾನಂ = ಶ್ರೀಪರಮಾತ್ಮನನ್ನು, ಅಕರ್ತಾರಂ = ಆತನನ್ನು ಸೃಷ್ಟಿಸುವವನು ಇನ್ನೊಬ್ಬನು ಇಲ್ಲದವನನ್ನಾಗಿ ತಿಳಿಯುತ್ತಾನೋ, ಸಃ = ಅವನು, ಪಶ್ಯತಿ = ಯಥಾರ್ಥವಾಗಿ ಪರಮಾತ್ಮನನ್ನು ತಿಳಿಯುತ್ತಾನೆ ಎಂದು (ಶ್ರೀಪರಮಾತ್ಮನು ಸ್ವತಂತ್ರನೆಂದು ತಿಳಿದುದಕ್ಕೆ ಫಲವನ್ನು ಹೇಳುತ್ತಾರೆ ) ಸ್ವತಂತ್ರಕರ್ತನಾದ ಶ್ರೀಪರಮಾತ್ಮನಿಂದ,) ಪ್ರಕೃತ್ಯೈವ = ನಿಮಿತ್ತಭೂತವಾದ ಜಡ ಪ್ರಕೃತಿಯಿಂದ, ಮಾಡಲ್ಪಡತಕ್ಕ ಸಮಸ್ತ

ಕರ್ಮಗಳನ್ನು ಯಾವನು ತಿಳಿಯುತ್ತಾನೋ, ಹಾಗೆಯೇ ತನ್ನನ್ನು ಅಸ್ವತಂತ್ರಕರ್ತನನ್ನಾಗಿ ಯಾವನು ತಿಳಿಯುತ್ತಾನೋ, ಆತನೇ ಶ್ರೀಪರಮಾತ್ಮನನ್ನು ತಿಳಿಯುತ್ತಾನೆ.

ವಿ ॥ (1) ಪರಮಾತ್ಮನಿಗೆ ಸೃಷ್ಟಿಕರ್ತನು ಇನ್ನೊಬ್ಬನಿಲ್ಲದಿರುವುದರಿಂದ ಶ್ರೀಪರಮಾತ್ಮನಿಗೆ ಸ್ವಾತಂತ್ರ್ಯವು. (2) ತನ್ನ ಅಧೀನದಲ್ಲಿಯೇ ಇರುವ ಆಯಾವ ಜೀವರ ಪೂರ್ವ ಕರ್ಮವನ್ನು ಅಪೇಕ್ಷಿಸಿಕೊಂಡು ಸಮಸ್ತವನ್ನು ಮಾಡುವುದರಿಂದ ವೈಷಮ್ಯಾದಿ ದೋಷವೂ ಇಲ್ಲ. ॥ ೩೦ ॥

ಭಾ ॥ ಆತ್ಮಾನಂ ಚಾಕರ್ತಾರಂ ಯಃ ಪಶ್ಯತಿ ಸ ಪಶ್ಯತಿ ॥ ೩೦ ॥

ಅ ॥ ಶ್ರೀಪರಮಾತ್ಮನಿಗೆ ಇನ್ನೊಬ್ಬ ಕರ್ತನಿಲ್ಲವೆಂದು ಯಾವನು ತಿಳಿಯುತ್ತಾನೋ, ಆತನು ಶ್ರೀಪರಮಾತ್ಮನನ್ನು ಯಥಾರ್ಥವಾಗಿ ತಿಳಿಯುತ್ತಾನೆ. ॥ ೩೦ ॥

ಟೀ—ಜಡಪ್ರಕೃತಿಯೇ ಸ್ವತಂತ್ರಕರ್ತೃ. ಶ್ರೀಪರಮಾತ್ಮನು ಸ್ವತಂತ್ರ ಕರ್ತನಲ್ಲ ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ಟಾ ॥ (೧) ಪ್ರಕೃತ್ಯ ಸ್ವಯಮೇವ ಪ್ರಾರಭ್ಯ ವಿಷ್ಣುನಾ ಕ್ರಿಯಮಾಣಾನಿ ॥ (೨) ವಿಷ್ಣೋರ್ನಾನ್ಯಃ ಪೂರ್ವಪ್ರೇರಕ ಇತಿ ॥ (೩) ಪೂರ್ವಂ ತು ಬಾದರಾಯಣೋ ಹೇತುವ್ಯಪದೇಶಾದಿತಿ ಭಗವದ್ವಚನಾತ್ ॥ (೪) ದ್ರವ್ಯಂ ಕರ್ಮ ಚ ಕಾಲಶ್ಚೇತಿ (ಕಾಲಶ್ಚ ಸ್ವಭಾವೋ ಜೀವ ಏವ ಚ । ಯದನುಗ್ರಹತಃ ಸಂತಿ ನಯದುಪೇಕ್ಷಯೇತಿ) ಚ ॥ (೫) ಸ್ವಯಂ ಪ್ರಕೃತ್ಯ ಭಗವಾನ್ಕರೋತಿ ನಿಖಿಲಂ ಜಗತ್ । ನೈವ ಕರ್ತಾ ಹರೇಃ ಕಶ್ಚಿದಕರ್ತಾ ತೇನ ಕೇಶವ ಇತಿ (ಚ) ಸ್ಕಾಂದೇ ॥ (೬) ತೇನೇತಿ ಪ್ರಸ್ತುತತ್ವಾದೇವ ಸಿದ್ಧಂ ॥ ೧ ॥

ಅ ॥ (೧) ಪ್ರಕೃತ್ಯ—ಪೂರ್ವಕರ್ಮಾದಿಗಳನ್ನು ತಾನೇ ಜೀವನಿಗೆ ಪ್ರಬೋಧಿಸಿ ಅದನ್ನನುಸರಿಸಿ ಶ್ರೀವಿಷ್ಣುವಿನಿಂದ ಮಾಡಲ್ಪಡತಕ್ಕ ಕರ್ಮಗಳು (೨) ಅಂದರೆ ಶ್ರೀವಿಷ್ಣುವಿಗೆ ಇನ್ನೊಬ್ಬನು ಪೂರ್ವಪ್ರೇರಕನು ಇಲ್ಲ. (ಅಂದರೆ—ಶ್ರೀಪರಮಾತ್ಮನು ಕರ್ಮಗಳನ್ನು ಅಪೇಕ್ಷಿಸಿಕೊಂಡಿದ್ದರೂ ಶ್ರೀಪರಮಾತ್ಮನಿಗೆ ಸ್ವಾತಂತ್ರ್ಯವು ತಪ್ಪುವುದಿಲ್ಲ. ಏಕೆಂದರೆ ಶ್ರೀಪರಮಾತ್ಮನು ತಾನೇ ಪೂರ್ವಕರ್ಮಾದಿಗಳನ್ನು ಪ್ರಬೋಧಿಸಿ ಅದನ್ನಪೇಕ್ಷಿಸಿ ಈಗ ಕರ್ಮಗಳನ್ನು ಮಾಡಿಸುತ್ತಾನೆ ಕರ್ಮಾದಿಗಳು ಶ್ರೀವಿಷ್ಣುವಿಗೆ ಉದ್ಬೋಧಕ (ಪ್ರೇರಕ) ಗಳಲ್ಲ.) (೩) (ಈ ಅರ್ಥವು ಹೇಗೆ ಸಿದ್ಧವಾಗುತ್ತದೆಂದರೆ ) ಪೂರ್ವೋಕ್ತನಾದ ಬ್ರಹ್ಮನೇ ಸ್ವತಂತ್ರ ಕರ್ತನಾಗಿ ಸತ್ಕರ್ಮಗಳಿಗೆ ಪ್ರವ[illegible]ನು. ಕರ್ಮವು ಬ್ರಹ್ಮನಿಗೆ ಪ್ರವರ್ತಕವಲ್ಲ. ಪುಣ್ಯೇನ ಪುಣ್ಯಂ ಲೋಕಂ ನಯತಿ ಇತ್ಯಾದಿಗಳಲ್ಲಿ ಪರಬ್ರಹ್ಮನು ಕರ್ತನೆಂದೂ ಕರ್ಮವು ಕರಣವೆಂದೂ ಶ್ರೀ ವೇದವ್ಯಾಸರು ಬ್ರಹ್ಮಸೂತ್ರದಲ್ಲಿ ಹೇಳಿರುವರು (೪) (ಶ್ರೀಪರಮಾತ್ಮನು ಕರ್ಮಾದಿಗಳಿಗೆ ಉದ್ಬೋಧಕನು. ಕರ್ಮವು ಶ್ರೀಪರಮಾತ್ಮನಿಗೆ ಪ್ರೇರಕವಲ್ಲವೆಂದಾಗಲಿ ಆದರೂ ಶ್ರೀಪರಮಾತ್ಮನಿಗೆ ಕರ್ಮಗಳ ಅಪೇಕ್ಷೆ ಇದ್ದುದರಿಂದ ಸ್ವಾತಂತ್ರ್ಯವಿಲ್ಲವೆಂದಾಗುವುದೆಂದರೆ ಕರ್ಮಾದಿಗಳ ಸ್ಥಿತಿಯೂ ಕೂಡ ಭಗವಂತನ ಅಧೀನವೇ ಆಗಿದೆ ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಪ್ರಕೃತಿ ಮೊದಲಾದ ತತ್ವಗಳೂ, ಧರ್ಮ, ಅಧರ್ಮಗಳೂ, ಕಾಲವೂ, (ಇತ್ಯಾದಿಗಳೆಲ್ಲವೂ ಶ್ರೀಪರಮಾತ್ಮನ ಅಧೀನಗಳು ಎಂದು ಶ್ರುತಿಯು ) (೫) (ಈ ಹೇಳಿದ ಅರ್ಥದಲ್ಲಿ ಸ್ಪಷ್ಟಪ್ರಮಾಣವನ್ನು ತೋರಿಸುತ್ತಾರೆ ) ಶ್ರೀಪರಮಾತ್ಮನು ತಾನೇ ಪೂರ್ವಕರ್ಮಾದಿಗಳನ್ನು ದ್ಬೋಧಿಸಿ ಸಂಪೂರ್ಣ ಜಗತ್ತನ್ನು (ಅಂದರೆ ಕರ್ಮಗಳನ್ನು,

ಕರ್ಮಾಧೀನ ಶರೀರಗಳೂ, ಶರೀರೋಪಯುಕ್ತವಾದುದೂ, ಶರೀರದಿಂದ ಉಪಭೋಗ್ಯವಾದ ಸುಖ ದುಃಖಾದಿಗಳೂ ಇದು ಮೊದಲಾದ ಜಗತ್ತನ್ನು) ಸೃಷ್ಟಿಸುತ್ತಾನೆ. ಯಾವನೊಬ್ಬನೂ ಶ್ರೀಪರಮಾತ್ಮ ನನ್ನು ಸೃಷ್ಟಿಸುವವನಿಲ್ಲವೇ ಇಲ್ಲ. ಆದಕಾರಣ ಶ್ರೀಪರಮಾತ್ಮನು ಅಕರ್ತಾ ಎನಿಸುತ್ತಾನೆ. ಎಂದು ಸ್ಕಾಂದಪುರಾಣದಲ್ಲಿದೆ (೬) (ಈಶ್ವರೇಣ ಎಂಬುವ ೩ನೇ ಶ್ಲೋಕದಲ್ಲಿ ಇಲ್ಲದಿರುವುದರಿಂದ ಈ ಅರ್ಥವು ಹೇಗೆ ಸಿದ್ಧಿಸುತ್ತದೆ ಎಂದರೆ—) ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಂ ಎಂದು ಶ್ರೀಹರಿಯು ಪ್ರಸ್ತುತನಾದ ದರಿಂದಲೇ ಈಶ್ವರೇಣ ಎಂದು ಹೇಳದಿದ್ದರೂ ಸಿದ್ಧವಾಗುತ್ತದೆ. ॥ ೧ ॥

ಹೀ—ಅಕರ್ತಾ ಎಂಬುವ ವಾಕ್ಯಕ್ಕೆ, ಶ್ರೀಪರಮಾತ್ಮನಿಗೆ ಇನ್ನೊಬ್ಬ ಕರ್ತನಿಲ್ಲವೆಂಬ ಅರ್ಥ ವನ್ನು ಏಕೆ ಕಲ್ಪಿಸುವುದು? ಶ್ರೀಪರಮಾತ್ಮನಿಗೆ ಕರ್ತೃತ್ವವೇ ಇಲ್ಲವೆಂಬ ಅರ್ಥವನ್ನು ಏಕೆ ಹೇಳಬಾರದೆಂದರೆ ಹಿಂದೆ ಹೇಳಿದ ಸ್ಮೃತಿವಿರೋಧವನ್ನೂ, ವಾಕ್ಯಾಂತರ ವಿರೋಧವನ್ನೂ ತೋರಿಸುತ್ತಾರೆ—

ತಾ ॥ (೧) ಅಹಂ ಸರ್ವಸ್ಯ ಪ್ರಭವಃ । ಸ ಹಿ ಕರ್ತಾ । ಕರ್ತಾರಮೀಶಂ ಪುರುಷಂ ಬ್ರ ಹ್ಮಯೋನಿಂ । ಜನ್ಮಾದ್ಯಸ್ಯ ಯತಃ । ಮತ್ತ ಏವೇತಿ ತಾನ್ವಿದ್ಧೀತ್ಯಾದಿಸಕಲಪ್ರ ಮಾಣವಿರೋಧಶ್ಚಾನ್ಯಥಾ ॥ (೨) ಪ್ರಕೃತ್ಯೈವ ಚೇತಿ ಚಶಬ್ದಾತ್ತೇ(ತ್ವೈತೇ)ನೇವೇತಿ ಸಿದ್ಧ್ಯತಿ । ಪ್ರಕೃತೇನ ಕ್ರಿಯಾಯೋಗಂ ಚಶಬ್ದಃ ಕ್ವಚಿದೀರಯೇತ್ । ಕ್ವಚಿತ್ಸಮು ಚ್ಚಯಂ ಬ್ರೂಯಾತ್ಕ್ವಚಿದ್ದೌರ್ಲಭ್ಯವಾಚಕ ಇತಿ ಶಬ್ದನಿರ್ಣಯೇ ॥ (೩) ಪ್ರಕೃತೇಃ ಕರ್ತೃತ್ವಂ ರಚನಾನುಪಪತ್ತೇಶ್ಚ, ನಾನುಮಾನಮಿತ್ಯಾದಿಭಗವದ್ವಚನೇನ (ನಾ ಚ್ಚ) ನಿರಸ್ತಂ ॥ (೪) ನ ಋತೇ ತ್ವತ್ಕ್ರಿಯತೇ ಕಿಂಚನಾರ ಇತಿ ಚ ॥ ೨ ॥

ಅ ॥ (೧) (1) ನಾನು ಸಮಸ್ತ ಜಗತ್ತಿಗೂ ಸೃಷ್ಟಿಕರ್ತನು (ಗೀ.) (2) ಆ ಶ್ರೀಪರಮಾತ್ಮನೇ (ಸರ್ವ ಜಗತ್ತಿಗೂ) ಸೃಷ್ಟಿಕರ್ತನು (ಬ್ರ. ಉ) (3) ಸೃಷ್ಟಿಕರ್ತನು, ಸರ್ವರಿಗೂ ಸ್ವಾಮಿಯು, ಸರ್ವ ಗುಣಪರಿಪೂರ್ಣನು, ಚತುರ್ಮುಖನಿಗೂ ಕಾರಣನು. (ಆ ಶ್ರೀಹರಿಯನ್ನು ತಿಳಿದು ಅಧಿಕಾರಿಯು ಮುಕ್ತ ನಾಗುತ್ತಾನೆ) (ಅಥರ್ವಣ) (4) ಚೇತನಾಚೇತನಾತ್ಮಕ ನಿಖಿಲಜಗತ್ತಿಗೆ ಯಾವ ಶ್ರೀಪರಮಾತ್ಮನಿಂದ ಸೃಷ್ಟಿಸ್ಥಿತ್ಯಾದಿಗಳು ಆಗುತ್ತವೋ (ಅತನು ಪರಬ್ರಹ್ಮನು) (ಬ್ರ. ಸೂ.) (5) ನನ್ನಿಂದಲೇ ಸೃಷ್ಟಿಸಿ ತಾದಿ ಗಳನ್ನು ತಿಳಿ (ಗೀ.) ಇದು ಮೊದಲಾದ ಗೀತಾ ಉಪ, ಬ್ರ. ಸೂತ್ರ, ಇತ್ಯಾದಿ ಎಲ್ಲಾ ಪ್ರಮಾಣ ಗಳಿಂದ ಶ್ರೀಪರಮಾತ್ಮನಿಗೆ ಕರ್ತೃತ್ವವನ್ನು ಒಪ್ಪಂಬಡದಿದ್ದರೆ ವಿರೋಧವು ಬರುವುದು. (೨) ಪ್ರಕೃತ್ಯೈವ ಚ ಎಂಬುವಲ್ಲಿದ್ದ ಚ ಶಬ್ದದಿಂದ ತೇನೈವ=ಶ್ರೀಪರಮಾತ್ಮನಿಂದಲೇ ಎಂದು ಸಿದ್ಧಿಸುತ್ತದೆ. (ಇದು ಚ ಶಬ್ದದಿಂದ "ಪರಮಾತ್ಮನಿಂದ" ಎಂಬ ಅರ್ಥವು ಹೇಗೆ ಸಿದ್ಧವಾಗುವುದೆಂದರೆ—) ಪ್ರಕೃತ ವಾದ ಶಬ್ದವಿನಿಂದ ಹೇಳಲ್ಪಡತಕ್ಕ ಕ್ರಿಯೆಯನ್ನು ಪ್ರಕೃತನಾದವನಿಗೆ ಕರ್ತೃತ್ವವನ್ನು ಚ ಶಬ್ದ ಕ್ವಚಿತ್ ಹೇಳುತ್ತದೆ. ಕ್ವಚಿತ್ ಸಮುಚ್ಚಯವನ್ನು ಕ್ವಚಿತ್ ದೌರ್ಲಭ್ಯವನ್ನು ಹೇಳುತ್ತದೆ, ಎಂದು ಶಬ್ದ ನಿರ್ಣಯದಲ್ಲಿದೆ (೩) (ಏವಂಚ ಶ್ರೀಪರಮಾತ್ಮನೇ ಸರ್ವ ಕರ್ತನು, ಎಂದು ಹೇಳತಕ್ಕ ಪ್ರಮಾಣಗಳಿಗೆ ವಿರೋಧವು ಬರುವುದರಿಂದ ಅಕರ್ತಾ ಎಂಬುವ ವಾಕ್ಯಕ್ಕೆ ಸರ್ವಥಾ ಶ್ರೀಪರಮಾತ್ಮನಿಗೆ ಕರ್ತೃತ್ವವಿಲ್ಲ ವೆಂಬುವ ಅರ್ಥಗಳನ್ನು ಕಲ್ಪಿಸುವುದು ಯುಕ್ತವಲ್ಲವೆಂದು ಸಿದ್ಧವಾಯಿತು) (ಇವಲ್ಲದೆ ಪ್ರಕೃತಿಗೆ ಕರ್ತೃ ತ್ವವು ಶ್ರುತ್ಯಾದಿಗಳಿಂದ ನಿಷಿದ್ಧವಾದ ಪ್ರಯುಕ್ತವೂ ಯುಕ್ತವಲ್ಲವೆನ್ನುತ್ತಾರೆ—) ಅಚೇತನಕ್ಕೆ ಸ್ವತಃ ಪ್ರವೃತ್ತಿಯು ಕೂಡದಿರುವುದರಿಂದ ಅನುಮಾನ ಪರಿಕಲ್ಪಿತವಾದ ಪ್ರಕೃತಿಗೆ ಜಗತ್ಕರ್ತೃತ್ವವು ಯುಕ್ತವೇ ದಿಲ್ಲ ಇದು ಮೊದಲಾದ ಬ್ರಹ್ಮಸೂತ್ರರೂಪವಾದ ಭಗವದ್ವಚನದಿಂದಲೂ ಜಡಪ್ರಕೃತಿಗೆ ಕರ್ತೃತ್ವ

ಸಿದ್ಧವಾಗಿದೆ. (೪) (ಈ ವಿಷಯದಲ್ಲಿ ವೇದಪ್ರಮಾಣವನ್ನು ಹೇಳುತ್ತಾರೆ.) ನೀನು ಹೊರತು ಯಾವು ದೂ ಸಮೀಪದಲ್ಲಿ ಆಗಲೀ, ದೂರದಲ್ಲಿ ಆಗಲೀ, ಯಾವುದೊಂದೂ ಮಾಡಲ್ಪಡುವುದಿಲ್ಲ. (ನೀನೇ ಸರ್ವಕ್ಕೂ ಸ್ವತಂತ್ರಕರ್ತನು ಸರ್ವ ಸ್ವಾಮಿಯು.) ॥ ೨ ॥

ಟಾ ॥ (೧) ಕೇವಲಪ್ರಕೃತೇಃ ಕರ್ತೃತ್ವಾಂಗೀಕಾರೇ ಚಶಬ್ದೋಽಪಿ ವ್ಯರ್ಥಃ ॥ (೨) ತತ ಏವ ಚ ವಿಸ್ತಾರಮಿತಿ ವಾಕ್ಯಶೇಷವಿರೋಧಶ್ಚ । ಅಹಂ ಬೀಜಪ್ರದಃ ಪಿತೇತಿ ವಕ್ಷ್ಯಮಾಣಮತ್ರಾಪಿ ಕ್ಷೇತ್ರಕ್ಷೇತ್ರಜ್ಞಸಂಯೋಗಾದಿತಿ ಪ್ರಕೃತಮಿತಿ ತೇನಾಪಿ ವಿರೋಧಃ॥ (೩) ಅಚೇತನಂ ಕರೋತೀತಿ ಸ್ವೋಕ್ತಿವಿರೋಧಶ್ಚ । ಇಚ್ಛಾಪೂರ್ವಂ(ರ್ವ)ಕ್ರಿಯಾದಾನಂ ಕರ್ತೃತ್ವಂ ಮುಖ್ಯಮೀರಿತಮಿತಿ (೬) ಪೈಂಗಿಶ್ರುತಿಃ ॥ (೪) ವಿಕಾರಲಕ್ಷಣಂ ಕರ್ತೃತ್ವಂ ತು ಪ್ರಕೃತೇರಂಗೀಕೃತಮೇವ । ತಥಾಽಪಿ ಲಕ್ಷ್ಮೀಪರಮೇತ್ವರಮುಖ್ಯಚೇಷ್ಟಾಸು ಶದಭಾವಾತ್ಸರ್ವತ ಇತ್ಯಸ್ಯ ಸಂಕೋಚಪ್ರಾಪ್ತಿಃ ॥ (೫) ಅಚೇತನಾಶ್ರಿತಂ ಕರ್ಮ ವಿಕಾರಾತ್ಮಕಮೀರಿತಂ । ಯತ್ತು ಕೇವಲಚಿತ್ಸಂಸ್ಥಂ ಪ್ರತ್ಯಭಿಜ್ಞಾಪ್ರಮಾಣತಃ । ಅವಿಕಾರಾತ್ಮಕಂ ಜ್ಞೇಯಂ ತನ್ನ ತತ್ಪ್ರಾಕೃತಂ ಭವೇದಿತಿ ಚ ॥ ॥ ೩ ॥ ॥ ೩೦ ॥

ಅ ॥ (೧) ಕೇವಲ ಜಡಪ್ರಕೃತಿಗೇನೇ ಕರ್ತೃತ್ವವನ್ನಂಗೀಕರಿಸಿದರೆ— ಪ್ರಕೃತ್ಯೈವ ಚ ಎಂಬುವ ದ್ದರಿಂ ಪರಬ್ರಹ್ಮನೇ ಕರ್ತನೆಂದು ತೋರಿಸಿಕೊಡುವ ಚ ಶಬ್ದವು ವ್ಯರ್ಥವಾಗಬೇಕಾಗುವುದು. (೨) (ಶ್ರೀ ಪರಮಾತ್ಮನು ಸರ್ವಕ್ಕೆ ಸ್ವತಂತ್ರಕರ್ತನಲ್ಲವೆಂದು ಹೇಳಿದರೆ –) ತತ ಏವಚ ವಿಸ್ತಾರಂ (ಶ್ಲೋ. ೩೧) ಎಂದು ಶ್ರೀಪರಮಾತ್ಮನಿಂದಲೇ ಸರ್ವಕ್ಕೂ ಉತ್ಪತ್ತಿಯನ್ನು ಹೇಳತಕ್ಕ ವಾಕ್ಯಶೇಷದಿಂದ ವಿರೋಧವು ಬರುವುದು (೩) ಅಹಂ ಬೀಜಪ್ರದಃ ಪಿತಾ (ಅಧ್ಯ ೧೪. ಶ್ಲೋ. ೪.) ನಾನು ಗರ್ಭಾಧಾನಮಾಡತಕ್ಕ ತಂದೆಯು, ಎಂದು ಮುಂದೆ ಹೇಳುವರು. ಇಲ್ಲಿಯೂ ಯಾವತ್ಸಂಜಾಯತೇ ಕಿಂಚಿತ್ಸತ್ವಂ ಕ್ಷೇತ್ರಕ್ಷೇತ್ರಜ್ಞಸಂಯೋಗಾತ್ (ಶ್ಲೋ ೨೬) ಎಂಬುವಲ್ಲಿ ಶ್ರೀಪರಮಾತ್ಮನೇ ಸರ್ವಕ್ಕೂ ಕರ್ತನೆಂದು ಪ್ರಕೃತವಾಗಿದೆ. ಆದುದರಿಂದಲೂ ಶ್ರೀಪರಮಾತ್ಮನಿಗೆ ಕರ್ತೃತ್ವವಿಲ್ಲವೆಂಬುವ ವ್ಯಾಖ್ಯಾನವು ವಿರುದ್ಧವಾಯಿತು. (೩) ಅಚೇತನಂ ಕರೋತಿ = ಜಡಪದಾರ್ಥವು ಸೃಷ್ಟಿಸುತ್ತದೆ, ಎಂದು ಹೇಳಿದರೆ ಅಚೇತನ ಎಂಬುವ ಶಬ್ದದಿಂದ ಅಚೇತನ ವಸ್ತುಗಳಿಗೆ ಜ್ಞಾನ ಇಚ್ಛಾ ಪ್ರಯತ್ನಾದಿಗಳು ಇಲ್ಲವೆಂದು ಒಪ್ಪಿಕೊಂಡು ಅವುಗಳಿಗೆ ಜ್ಞಾನ ಇಚ್ಛಾ ಪ್ರಯತ್ನರೂಪವಾದ ಕರ್ತೃತ್ವವನ್ನು ಹೇಳಿದರೆ ಮೇ ಮಾತಾ ವಂಧ್ಯಾ ನನ್ನ ತಾಯಿಯು ಬಂಜೆಯು ಎಂಬುವ ವಾಕ್ಯದಂತೆ ತನ್ನ ಮಾತೇ ತನಗೆ ವಿರುದ್ಧವಾಗುವುದು. (ತನ್ನ ಮಾತಿನಿಂದ ವಿರೋಧವು ಬರುವುದು ಹೇಗೆಂದರೆ-) ಇಚ್ಛಾಪೂರ್ವಕವಾಗಿ ಕ್ರಿಯೆಯನ್ನು ಮಾಡುವುದು ಮುಖ್ಯವಾಗಿ ಕರ್ತೃತ್ವವೆನಿಸುತ್ತದೆ, ಎಂದು ಪೈಂಗಿಶ್ರುತಿಯು (ಅಂದರೆ ಅಚೇತನವೆಂದರೆ ಇಚ್ಛಾದಿಗಳಿಲ್ಲದವುದು. ಅದಕಾರಣ ಅಚೇತನವೂ ಆಗಿದೆ. ಮತ್ತೆ ಕ್ರಿಯೆಯನ್ನು ಮಾಡುತ್ತದೆ ... ಇಚ್ಛೆ ... ಹಿಂದೆ ಹೇಳಿದ ರೀತಿಯಿಂದ ವ್ಯಾಹತಿಯು) (೪) ವಿಕಾರರೂಪವಾದ ಗೌಣಕರ್ತೃತ್ವವಾದರೂ ಪ್ರಕೃತಿಗೆ ಅಂಗೀಕೃತವೇ ಆಗಿದೆ. ಆದರೂ ಲಕ್ಷ್ಮೀ ಪರಮಾತ್ಮ ಮುಖ್ಯಚೇಷ್ಟೆಗಳಲ್ಲಿ ಪ್ರಕೃತಿ ಕಾರ್ಯ ... ದರಿಂದ ಸರ್ವಶಃ ಎಂಬುವುದಕ್ಕೆ ಅರ್ಥಸಂಕೋಚ ಮಾಡಬೇಕು. (ಅಂದರೆ ... ಪ್ರಕೃತಿಗೆ ವಿಕಾರರೂಪವಾದ ಕರ್ತೃತ್ವವು ಅಂಗೀಕೃತವೇ ಆಗಿದೆ. ಆದರೂ ಆದಕಾರಣ ಈ ಶ್ಲೋಕದ ಹೊರಟವಲ್ಲ ಈ ಶ್ಲೋಕದಲ್ಲಿ ಸಮಸ್ತ ಕರ್ಮಗಳೂ ಪ್ರಕೃತಿಯಿಂದಲೇ ಮಾಡಲ್ಪಡುತ್ತವೆ ...

ಇದಕ್ಕಾಗಿಯೇ ಪರಮೇಶ್ವರಾದಿಗಳ ಕರ್ಮಗಳಲ್ಲಿ ಪ್ರಕೃತಿವಿಕಾರತ್ವವಿಲ್ಲದಿರುವುದರಿಂದ 'ಸರ್ವಶಃ ಎಂಬುವ ಪದಕ್ಕೆ ಅರ್ಥ ಸಂಕೋಚವನ್ನು ಮಾಡಬೇಕು) (ಅ) (ಪರಮೇಶ್ವರಾದಿ ಕರ್ಮಗಳಿಗೆ ಪ್ರಕೃತಿ ವಿಕಾರತ್ವಾಭಾವವು ಹೇಗೆ ಎಂದರೆ—) ಅಚೇತನವನಾಶ್ರಯಿಸಿಕೊಂಡಿರುವ ಕರ್ಮವು ಪ್ರಕೃತಿ ವಿಕಾರವೆಂದು ಪ್ರಮಾಣಗಳಲ್ಲಿ ಹೇಳಲ್ಪಟ್ಟಿದೆಯೋ, ಯಾವುದು ಕೇವಲ ಚಿದ್ರೂಪರಾದ ಪರಮಾತ್ಮ ಲಕ್ಷ್ಮೀ ಮುಕ್ತರಲ್ಲಿರತಕ್ಕ ಕರ್ಮವೋ, ಅದು ಪ್ರಕೃತಿ ವಿಕಾರಾತ್ಮಕವಾದ ಪ್ರಾಕೃತವಾದುದಲ್ಲ. ಎಂದು ತಿಳಿಯಬೇಕು. 'ವಿಕಾರವಿದ್ದರೆ ಅನಿತ್ಯತ್ವವು ಬರಬೇಕಾಗುವುದು. ಅನಿತ್ಯತ್ವವಿದ್ದರೆ ತದೇವೇದಂ ಕರ್ಮ ಎಂಬುವ ಪ್ರತ್ಯಭಿಜ್ಞೆಯು ಕೂಡಲಾರದು. (ಏವಂಚ ಯಾವುದು ಕೇವಲ ಚಿದಾಶ್ರಿತವೋ, ಅದು ನಿತ್ಯವು. ಯಾವುದು ನಿತ್ಯವೋ ಅದು ಪ್ರಕೃತಿ ವಿಕಾರಾತ್ಮಕವಲ್ಲ. ಆದುದರಿಂದ ವಿಷ್ಣ್ವಾದ್ಯಾಶ್ರಿತವಾದ ಕರ್ಮವು ಪ್ರಕೃತಿಕಾರ್ಯವಾಗುವುದಿಲ್ಲ. ॥ ೨೯ ॥

ಪೀ—ಶ್ರೀಪರಮಾತ್ಮನು ಸರ್ವರಿಗೂ ಪ್ರೇರಕನು ಇತ್ಯಾದಿಗಳನ್ನು ಮಾತ್ರ ತಿಳಿದುಕೊಂಡರೆ ಸಾಲದು, ಮತ್ತೆ ಶ್ರೀಹರಿಯು ಸರ್ವಾಧಾರನು ಇತ್ಯಾದಿ ಶ್ರೀಹರಿಯ ಮಹಿಮೆಯನ್ನು ಅವಶ್ಯವಾಗಿ ತಿಳಿಯತಕ್ಕದ್ದೆನ್ನುತ್ತಾರೆ—

ಗೀ ॥ ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ ।
ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ ೩೦ ॥

ಪ್ರ ॥ ಯದಾ=ಯಾವಾಗ, ಭೂತಪೃಥಗ್ಭಾವಂ=ಭೂತ=ಜೀವರ, ಪೃಥಗ್ಭಾವಂ=ನಾನಾ ವಿಧವಾದ ಭೇದವನ್ನು, ಏಕಸ್ಥಂ=ಸರ್ವೋತ್ತಮನಾದ ಶ್ರೀವಿಷ್ಣುವಿನಲ್ಲಿರತಕ್ಕುದುದನ್ನಾಗಿ, ಪಶ್ಯತಿ=ತಿಳಿಯುತ್ತಾನೋ, (ಅಂದರೆ-ಶ್ರೀವಿಷ್ಣುವಿಗೂ ಸಮಸ್ತ ವಸ್ತುಗಳಿಗೂ ಭೇದವು, ಚೇತನಾಚೇತನವಸ್ತುಗಳಿಗೂ ಪರಸ್ಪರ ಭೇದವು. ಇಂತಹ ನಾನಾ ವಿಧ ಭೇದವುಳ್ಳ ಸಮಸ್ತ ಪ್ರಾಣಿಗಳೂ ಸರ್ವೋತ್ತಮನಾದ ಒಬ್ಬ ಶ್ರೀಪರಮಾತ್ಮನನ್ನೇ ಆಶ್ರಯಿಸಿಕೊಂಡಿವೆ, ಎಂದು ಯಾವನು ತಿಳಿಯುತ್ತಾನೋ.) ತತ ಏವ=ಅಂತಹ ಶ್ರೀವಿಷ್ಣುವಿನಿಂದಲೇ (ಸಮಸ್ತ ವಸ್ತುಗಳಿಗೆ) ವಿಸ್ತಾರಂ=ಉತ್ಪತ್ತಿಯನ್ನು, ಅನುಪಶ್ಯತಿ=(ತಾರತಮ್ಯದಿಂದ, ಅವರವರ ಯೋಗ್ಯತಾನುಸಾರ) ತಿಳಿಯುತ್ತಾನೋ, ತದಾ=ಆಗ, ಬ್ರಹ್ಮ=ಪರಬ್ರಹ್ಮನನ್ನು, ಸಂಪದ್ಯತೇ=ಹೊಂದುತ್ತಾನೆ (ಅಂದರೆ ಇಂತಹ ಜ್ಞಾನವುಳ್ಳವನೇ ಮೋಕ್ಷವನ್ನು ಹೊಂದುತ್ತಾನೆ) ॥ ೩೦ ॥

ಪೀ – ಏಕಸ್ಥಂ ಎಂಬುವುದಕ್ಕೆ ಏಕಮೇವ ತಿಷ್ಠತಿ ಪ್ರಲಯೇ ಎಂಬುವ ವ್ಯುತ್ಪತ್ತಿಯಿಂದ ಏಕಸ್ಥಂ ಪ್ರಲಯಕಾಲದಲ್ಲಿ ಒಬ್ಬ ಬ್ರಹ್ಮನೇ ಇರುವವನು, ಸರ್ವವೂ ಬ್ರಹ್ಮಾತ್ಮಕವಾದುದು. ಎಂಬ ಪರರ ವ್ಯಾಖ್ಯಾನವು ಸರ್ವ ಪ್ರಮಾಣ ವಿರುದ್ಧವೆಂಬುವ ಅಭಿಪ್ರಾಯದಿಂದ ಸರಿಯಾಗಿ ಹೇಳುತ್ತಾರೆ—

ಭಾ ॥ (೧) ಏಕಸ್ಥಮೇಕಸ್ಮಿನ್ನೇವ ವಿಷ್ಣೌ ಸ್ಥಿತಂ ॥ (೨) ತತ ಏವ ಚ ವಿಷ್ಣೋರ್ವಿಸ್ತಾರಂ ॥ ೩೦ ॥

ಅ ॥ (೧) ಏಕಸ್ಥಂ=ಸರ್ವೋತ್ತಮನಾದ ಒಬ್ಬ ಶ್ರೀವಿಷ್ಣುವಿನಲ್ಲಿಯೇ ಇರತಕ್ಕುದನ್ನು (-) (ತನ್ನಿಂದಲೇ ಜಗತ್ತಿಗೆ ವಿಸ್ತಾರವನ್ನು ಎಂಬ ವ್ಯಾಖ್ಯಾನವು ಅಯುಕ್ತವೆನ್ನುತ್ತಾರೆ) ತತ ಏವ ಶ್ರೀವಿಷ್ಣುವಿನಿಂದಲೇ, ವಿಸ್ತಾರಂ=(ಜಗತ್ತಿಗೆ) ಉತ್ಪತ್ತಿಯನ್ನು.

ಹೀ— ಪ್ರಮಾಣವನ್ನು ದಾಹರಿಸಿ ಶ್ಲೋಕಾರ್ಥವನ್ನು ಹೇಳುತ್ತಾರೆ—

ಶ॥ ಏಕವಿಷ್ಣ್ವಾಶ್ರಿತಾನಾಂ ತು ಜೀವಾನಾಂ ಭೇದಮೇವ ಯಃ । ತತಃ ಪರಸ್ಪರಂ ಚೈವ ತಾರತಮ್ಯೇನ ಪಶ್ಯತಿ । ವಿಷ್ಣೋರೇವ ಚ ವಿಸ್ತಾರಂ ಜಗತಃ ಸ ವಿಮುಚ್ಯತ ಇತಿ ಚ ॥ ೩೧ ॥

ಅ॥ ಯಾವನು ಸರ್ವೋತ್ತಮನಾದ ಒಬ್ಬ ಶ್ರೀವಿಷ್ಣುವನ್ನು ಆಶ್ರಯಿಸಿಕೊಂಡಿರುವ ಜೀವರಿಗೆ ಭೇದವನ್ನು (ಅಂದರೆ ಶ್ರೀವಿಷ್ಣುವಿಗೂ ಜೀವರಿಗೂ ಪರಸ್ಪರ ಭೇದವನ್ನು) ಜೀವರೊಳಗೆ ಪರಸ್ಪರ ಭೇದವನ್ನೂ ನೀಚೋಚ್ಚಭಾವವನ್ನೂ ತಿಳಿಯುತ್ತಾನೋ, ಶ್ರೀವಿಷ್ಣುವಿನಿಂದಲೇ ಜಗತ್ತಿಗೆ ಉತ್ಪತ್ತಿಯನ್ನೂ ತಿಳಿಯುತ್ತಾನೋ, ಅತನೇ ಮುಕ್ತನಾಗುತ್ತಾನೆ. ॥ ೩೧ ॥

ಹೀ— ಸಮಸ್ತ ಭೂತಗಳಲ್ಲಿ ಶ್ರೀಪರಮಾತ್ಮನು ನಿಯಾಮಕನಾಗಿ ಇದ್ದರೂ ಶ್ರೀಪರಮಾತ್ಮನಿಗೆ ವಿಕಾಶವಿಲ್ಲವೆಂದು ಹೇಳಿದೆ. ನಶ್ವರ ಶರೀರ ಸಂಬಂಧವಿದ್ದರೆ ನಾಶಾದಿಗಳು ಅವಶ್ಯವಾಗಿ ಬರಲೇಬೇಕು, ಅಂತರೆ ವ್ಯಯ ಪಾಪಲೇಪಾದಿಗಳು ಇಲ್ಲವೆಂಬುವುದನ್ನು ಸಹೇತುಕವಾಗಿ ಹೇಳುತ್ತಾನೆ—

ಗೀ॥ ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಯಮವ್ಯಯಃ ।
ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥ ೩೨ ॥

ಅ॥ ಕೌಂತೇಯ = ಅರ್ಜುನನೇ, ಅಯಂ ಪರಮಾತ್ಮಾ = ಈ ಪರಮಾತ್ಮನು. ಶರೀರಸ್ಥೋಽಪಿ = ವಿಕಾಶವುಳ್ಳ ದೇಹದಲ್ಲಿದ್ದವನಾದಾಗ್ಯೂ, ಅನಾದಿತ್ವಾತ್ = ಹುಟ್ಟುವಿಕೆ ಇಲ್ಲದವನಾದುದರಿಂದಲೂ, ನಿರ್ಗುಣತ್ವಾತ್ = ಸತ್ತ್ವರಜಸ್ತಮೋಗುಣಗಳ ಸಂಬಂಧವಿಲ್ಲದವನಾದುದರಿಂದಲೂ, ಅವ್ಯಯಃ = ನಾಶ ಮೊದಲಾದ ವ್ಯಯವಿಲ್ಲದವನು. ನ ಲಿಪ್ಯತೇ = ಚಿಂತಾ ಸಂತಾಪ ದುಃಖ ಮೊದಲಾದ ದೋಷಗಳಿಂದ ಸಂಬದ್ಧನಾಗುವುದಿಲ್ಲ. ನ ಕರೋತಿ ಚ = ಲೌಕಿಕ ಕ್ರಿಯೆಗಳಿಂದ ವಿಲಕ್ಷಣವಾದ ಕ್ರಿಯೆಯುಳ್ಳವನಾದುದರಿಂದ ಸರ್ವಕರ್ತನಾದಾಗ್ಯೂ ಕರ್ಮಗಳನ್ನು ಮಾಡುವವನಲ್ಲ. (ಎಂದು ಹೇಳಿಸಲ್ಪಡುತ್ತಾನೆ.) ಅಥವಾ ಅಯಂ ಪರಮಾತ್ಮಾ = ಈ ಪರಮಾತ್ಮನು, ಅನಾದಿತ್ವಾತ್ = ದೇಹ ಸಂಬಂಧ ನಿಮಿತ್ತವಾದ ಉತ್ಪತ್ತಿಯಿಲ್ಲದಿರುವುದರಿಂದಲೂ ಸತ್ತ್ವಾದಿಗುಣಗಳು ಇಲ್ಲದಿರುವುದರಿಂದಲೂ. ಶರೀರಸ್ಥೋಽಪಿ = ನಶ್ವರ ಶರೀರದಲ್ಲಿ ನಿಯಾಮಕನಾಗಿದ್ದರೂ ಶರೀರಕ್ಕೆ ಅಭಿಮಾನಿಯಾಗಿ ಶರೀರದಲ್ಲಿರತಕ್ಕ ಸುಖ ದುಃಖಾದಿಗಳನ್ನು ಭೋಗಿಸಿಕೊಂಡಿರುವ ಜೀವಸ್ವರೂಪನು ಆಗುವುದಿಲ್ಲ. (ಹೀಗಿಲ್ಲ ಜಡಾತ್ಮಕನಾಗುವುದಿಲ್ಲವೆಂದು ಸುತರಾಂ ಸಿದ್ಧವಾಗುತ್ತದೆ.) ಕರೋತಿ — ಸರ್ವಕರ್ತನಾದ ಪ್ರಯುಕ್ತ ಮಾಡುತ್ತಾನೆಸ್ತಿ ಕಾಣುತ್ತಾನೆ. ನ ಲಿಪ್ಯತೇ = ದುಃಖಾದಿ ಫಲವನ್ನು ಭೋಗಿಸದಿರುವುದರಿಂದ ಚಿಂತಾದಿಗಳಿಂದ ಸಂಬದ್ಧನಾಗುವುದಿಲ್ಲವೆನ್ನಿಸಿಕೊಳ್ಳುತ್ತಾನೆ. ಜೀವನಾದರೂ ಸ್ವಾತಂತ್ರ್ಯವಿಲ್ಲದಿರುವುದರಿಂದ ನ ಕರೋತಿ = ಮಾಡುವವನಲ್ಲ. ಲಿಪ್ಯತೇ = ಪರಾಧೀನಕರ್ತೃತ್ವವಿದ್ದ ಪ್ರಯುಕ್ತ ದುಃಖಾದಿಗಳಿಂದ ಲೇಪಿಸಲ್ಪಡುತ್ತಾನೆ. ॥ ೩೨ ॥

ಹೀ— ಶ್ರೀಪರಮಾತ್ಮನಿಗೆ ದುಃಖಾದಿಗಳ ಲೇಪವಿಲ್ಲವೆಂಬುವುದನ್ನು ದೃಷ್ಟಾಂತದಿಂದ ತೋರಿಸುತ್ತಾರೆ—

ಗೀ॥ ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಪಲಿಪ್ಯತೇ ।
ಸರ್ವತ್ರಾವಸ್ಥಿತೋ ದೇಹೇ ತಥಾಽಽತ್ಮಾ ನೋಪಲಿಪ್ಯತೇ ॥ ೩೩ ॥

ಅ ॥ ಯಥಾ=ಹೇಗೆ, ಆಕಾಶಂ=ಆಕಾಶವು, ಸರ್ವಗತಂ=ಕೆಸರು ಮೊದಲಾದ ಸಮಸ್ತ ಪದಾರ್ಥಗಳ ಸಂಬಂಧವುಳ್ಳದ್ದಾಗ್ಯೂ, ಸೌಕ್ಷ್ಮ್ಯಾತ್=ತಡೆಯಿಲ್ಲದಿರುವ ವಸ್ತುವಾದುದರಿಂದ ಮತ್ತು ಪ್ರಾಣಿಗಳ ಸಂಚಾರಕ್ಕೆ ಅವಕಾಶವನ್ನು ಕೊಡತಕ್ಕ ವಸ್ತುವಾದುದರಿಂದ ನೋಪಲಿಪ್ಯತೇ=ಆಯಾಯ ವಸ್ತುಗಳ ಗುಣ ದೋಷಗಳಿಂದ ಸಂಬಂಧಿಸಲ್ಪಡುವುದಿಲ್ಲವೋ. ತಥಾ=ಹಾಗೆಯೇ. ಆತ್ಮಾ=ಶ್ರೀಪರಮಾತ್ಮನು. ಸರ್ವತ್ರ ದೇಹೇ=ನೀಚರೂ ಉತ್ತಮರೂ ಆದ ಸಮಸ್ತ ಜೀವರ ಶರೀರಗಳಲ್ಲಿ, ಅವಸ್ಥಿತಃ=ಇದ್ದರೂ, ನೋಪಲಿಪ್ಯತೇ=ಶರೀರಗಳ ಗುಣ ದೋಷಗಳಿಂದ ಲೇಪಿಸಲ್ಪಡುವುದಿಲ್ಲ. ॥ ೩೩ ॥

ಪೀ—ಶ್ರೀಪರಮಾತ್ಮನು ಕ್ಷೇತ್ರಜ್ಞನೆಂಬುವುದನ್ನು ದೃಷ್ಟಾಂತದಿಂದ ತೋರಿಸುತ್ತಾರೆ—

ಗೀ ॥ ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।
ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ ೩೪ ॥

ಅ ॥ ಭಾರತ=ಅರ್ಜುನನೇ ಯಥಾ=ಹೇಗೆ, ಏಕಃ ರವಿಃ=ಒಬ್ಬ ಸೂರ್ಯನೇ. ಕೃತ್ಸ್ನಂ=ಸಮಸ್ತವಾದ, ಇಮಂ ಲೋಕಂ=ಈ ಲೋಕವನ್ನು, ಪ್ರಕಾಶಯತಿ=ಪ್ರಕಾಶಗೊಳಿಸುತ್ತಾನೋ, ತಥಾ=ಹಾಗೆಯೇ ಕ್ಷೇತ್ರೀ=ಕ್ಷೇತ್ರಗಳಲ್ಲಿರುವ ಕ್ಷೇತ್ರಸ್ವಾಮಿಯಾದ ಶ್ರೀಪರಮಾತ್ಮನು. ಕೃತ್ಸ್ನಂ ಕ್ಷೇತ್ರಂ=ಚೇತನಾಚೇತನರೂಪವಾದ ಸಮಸ್ತವಸ್ತುವನ್ನು, ಪ್ರಕಾಶಯತಿ=ಪ್ರಕಾಶಪಡಿಸುತ್ತಾನೆ. ॥ ೩೪ ॥

ಪೀ—ಅವ್ಯಯಃ ಎಂಬುವುದರಿಂದ ಪಾಪಾದಿಗಳ ಲೇಪವಿಲ್ಲವೆಂದಿಷ್ಟು ಮಾತ್ರ ವಿಹಿತವಾಗುತ್ತದೆ ಎಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ಭಾ ॥ (೧) ನ ಚ ವ್ಯಯಾದಿಸ್ತಸ್ಯೇತ್ಯಾಹ । ಅನಾದಿತ್ವಾದಿತಿ । ಸಾದಿ ಹಿ ಪ್ರಾಯೋ ವ್ಯಯಿ ಗುಣಾತ್ಮಕಂ ಚ ॥ (೨) ನ ಕರೋತೀತ್ಯಾದೇರರ್ಥ ಉಕ್ತಃ ಪುರಸ್ತಾತ್ । ನ ಲೌಕಿಕಕ್ರಿಯಾದಿಸ್ತಸ್ಯ । ಅತೋ ನ ಪ್ರಜ್ಞಮಿತ್ಯಾದಿವದಿತಿ ॥ ೩೨,೩೩,೩೪ ॥

ಅ ॥ (೧) ಅನಾದಿತ್ವಾತ್ ಎಂಬುವ ಶ್ಲೋಕದಿಂದ ಶ್ರೀಪರಮಾತ್ಮನಿಗೆ ವ್ಯಯ ದುಃಖ ಲೇಪಾದಿಗಳು ಇಲ್ಲವೆನ್ನುತ್ತಾರೆ. ಯಾವುದು ವ್ಯಯವುಳ್ಳದ್ದೋ, ಅದು ಪ್ರಾಯಶಃ ಸಾದಿಯೂ ಗುಣಾತ್ಮಕವೂ ಆಗಿದೆ ಶ್ರೀಪರಮಾತ್ಮನು ಅನಾದಿಯೂ ನಿರ್ಗುಣನೂ ಆಗಿರುವುದರಿಂದ ಅವ್ಯಯನು. (೨) ನ ಕರೋತಿ ಇತ್ಯಾದಿಗಳಿಗೆ ಮೊದಲೇ ಅರ್ಥವು ಹೇಳಲ್ಪಟ್ಟಿದೆ. ಅಂದರೆ—ಶ್ರೀಪರಮಾತ್ಮನಿಗೆ ಲೌಕಿಕ ಕ್ರಿಯಾದಿಗಳು ಇಲ್ಲ. ಆದಕಾರಣ ನ ಪ್ರಜ್ಞಂ ಇತ್ಯಾದಿಗಳಂತೆ ಲೌಕಿಕ ಕ್ರಿಯಾದಿಗಳು ಇಲ್ಲವೆಂದು ಅರ್ಥವನ್ನು ಹೇಳಬೇಕು. ॥ ೩೨–೩೪ ॥

ಪೀ—ಶ್ರೀಪರಮಾತ್ಮನು ಸಮಸ್ತ ಚೇತನಾಚೇತನಾತ್ಮಕ ವಸ್ತುಸ್ವರೂಪನಾದುದರಿಂದ ಪರಮಾತ್ಮನಿಂದ ಆ ವಸ್ತುಗಳಿಗೆ ಭೇದವು ಹೇಗೆಂದರೆ—ಅನಾದಿತ್ವಾತ್ ಎಂಬುವ ಶ್ಲೋಕದಿಂದ ಸಮಾಧಾನ ಹೇಳುತ್ತಾರೆ ಶ್ರೀಪರಮಾತ್ಮನು ಸರ್ವ ಕರ್ತನಲ್ಲವೆಂಬುವ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಶರೀರಸ್ಥ ಪದಕ್ಕೆ ಅರ್ಥವನ್ನು ಹೇಳುತ್ತಾರೆ—

ತಾ ॥ (೧) ಶರೀರಸ್ಥೋ ಜೀವಃ । ಸ್ವಪ್ನೇನ ಶಾರೀರಮಭಿಪ್ರಹತ್ಯಾಸುಪ್ತಃ ಸುಪ್ತಾನಭಿಚಾಕಶೀತೀತಿ ಶ್ರುತೇಃ ॥ (೨) ಶರೀರಸ್ಥಸ್ತು ಸಂಸಾರೀ ಶರೀರಾಭಿಮಾನವರ್ಜಿತಃ ।

**ವಿಷ್ಣೋಃ ಶರೀರಗೋಽಪ್ಯೇಷ ನ ಶರೀರಸ್ಥ ಉಚ್ಯತೇ । ಶರೀರಾಭಿಮತಿರ್ಯಸ್ಮಾನ್ನೈವಾಸ್ಯಾಸ್ತಿ ಕದಾಚನ ॥ (೩) ತದ್ಗತಾನಾಂ ತು ದುಃಖಾನಾಂ ಭೋಗೋಽಭಿಮತಿರುಚ್ಯತೇ । ತದಭಾವಾನ್ನಾಭಿಮಾನೀ ಭಗವಾನ್ಪುರುಷೋತ್ತಮ ಇತಿ ಚ ॥ (೪) ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾ ಜೀವೋಽಪಿ ನ ಕಿಮುತ ಜಡಂ ನ ಭವತೀತಿ ॥ (೫) ಶರೀರೋತ್ಪತ್ತಿಲಕ್ಷಣಮಸ್ಯಾದಿಮತ್ತ್ವಂ ಪರಸ್ಯ ನಾಸ್ತೀತಿ ವಿಶೇಷಃ । ಜೀವಸ್ಯ ಹಿ ತದಸ್ತೀತಿ । ಸತ್ತ್ವಾದಿಗುಣಸಂಬಂಧಶ್ಚ ॥ (೬) ಸರ್ವಂ ಕರೋತಿ ಪರಮಾತ್ಮಾ ತಥಾಪಿ ನಲಿಪ್ಯತೇ ॥ (೭) ವಾದಿಪ್ರಸಿದ್ಧತ್ವಾದೇವೇಷ್ಟಾಪೂರ್ತಂ ಮನ್ಯಮಾನಾ ವರಿಷ್ಠಮಿತ್ಯಾದಿವನ್ನಿಷೇಧಃ ॥ ೧ ॥**

**ಅ ॥** (೧) **ಶರೀರಸ್ಥಃ**=ಜೀವನು (ಶರೀರಸ್ಥ ಪದವು ಜೀವವಾಚಕವು ಹೇಗೆಂದರೆ-) ಸ್ವಪ್ನದಿಂದ ಶರೀರದಲ್ಲಿದ್ದ ಜೀವನನ್ನು ಸಂಯೋಜಿಸಿ ಸುಪ್ತಿಯಿಲ್ಲದಿದ್ದ ಶ್ರೀಪರಮಾತ್ಮನು ಗಾಢನಿದ್ದೆ ಹೊಂದಿದ ಜೀವನನ್ನು ಪ್ರಕಾಶಗೊಳಿಸುತ್ತಾನೆ ಎಂದು ಶ್ರುತಿಯು. (ಇಲ್ಲಿದ್ದ ಶಾರೀರ ಪದದಿಂದ ಶರೀರದಲ್ಲಿದ್ದ ಜೀವನನ್ನು ತೆಗೆದುಕೊಂಡದ್ದರಿಂದ ಶರೀರಸ್ಥ ಪದವು ಜೀವನನ್ನು ಹೇಳುತ್ತದೆಂದು ಸಿದ್ಧವಾಗುವುದು.) (೨) (ಜೀವರಂತೆ ಶ್ರೀಪರಮಾತ್ಮನೂ ಶರೀರದಲ್ಲಿದ್ದುದರಿಂದ ಜೀವರನ್ನೇ ಶರೀರಸ್ಥ ಪದದಿಂದ ತೆಗೆದುಕೊಳ್ಳಬೇಕೆಂಬುವುದು ಹೇಗೆಂದರೆ—)ಸಂಸಾರಿ ಜೀವರಿಗೇನೇ ನನ್ನ ಶರೀರವೆಂದು ಅಭಿಮಾನವಿದ್ದುದರಿಂದ ಆದ್ದರಿಂದ ಸಂಸಾರಿಯು ಶರೀರಸ್ಥನೆನಿಸುತ್ತಾನೆ. ಶ್ರೀವಿಷ್ಣುವು ಎಲ್ಲರ ಶರೀರದಲ್ಲಿ ನಿಯಾಮಕನಾಗಿದ್ದರೂ ಶ್ರೀವಿಷ್ಣುವಿಗೆ ಯಾವಾಗಲೂ ಶರೀರಾಭಿಮಾನವಿಲ್ಲದಿರುವುದರಿಂದ ಶರೀರಸ್ಥನೆನಿಸುವುದಿಲ್ಲ. (೩) (ಸರ್ವಶರೀರದಲ್ಲಿ ನಿಯಾಮಕನಾಗಿದ್ದ ಶ್ರೀವಿಷ್ಣುವಿಗೆ, ಶರೀರಾಭಿಮಾನವು ಏಕೆ ಇಲ್ಲವೆಂದರೆ ಶರೀರಾಭಿಮಾನ ಶಬ್ದಾರ್ಥವನ್ನು ಹೇಳುತ್ತಾರೆ-) ಶರೀರ ನಿಮಿತ್ತಕಗಳಾದ ಮನೋವಿಕಾರಗಳಾದ ದುಃಖಗಳನ್ನು ಕೇವಲ ಅನುಭವಿಸುವುದಕ್ಕೆ ಶರೀರಾಭಿಮಾನವೆಂದು ಹೆಸರು. ಅಂತಹ ಅಭಿಮಾನವು ಶ್ರೀಹರಿಗೆ ಇಲ್ಲದಿರುವುದರಿಂದ ಕ್ಷರಾಕ್ಷರ ಪುರುಷರಿಂದ ಉತ್ತಮನಾದ ಶ್ರೀಭಗವಂತನು ಶರೀರಾಭಿಮಾನಿ ಎಂದೆನಿಸಿಕೊಳ್ಳುವುದಿಲ್ಲ (೪) (**ಅನಾದಿತ್ವಾನ್ನಿರ್ಗುಣತ್ವಾತ್** ಎಂಬುವ ಶ್ಲೋಕದ ಅರ್ಥವನ್ನು ಹೇಳುತ್ತಾರೆ.) ಜನ್ಮಯಿಲ್ಲದಿರುವವನಾದುದರಿಂದಲೂ, ಸತ್ತ್ವರಜಸ್ತಮೋಗುಣಗಳಿಲ್ಲದಿರುವವನಾದುದರಿಂದಲೂ. ಶ್ರೀಪರಮಾತ್ಮನು ಜೀವನಿಂದಲೂ ಅತ್ಯಂತ ಭಿನ್ನನು ಜಡದಿಂದ ಭಿನ್ನನೆಂದು ಏನು ಹೇಳಬೇಕು. (೫) (ಜೀವನೂ ಸ್ವರೂಪತಃ ಅನಾದಿಯಾಗಿರುವುದರಿಂದ ಶ್ರೀಪರಮಾತ್ಮನಿಗೆ ಮಾತ್ರ ಅನಾದಿಯೆಂದು ವಿಶೇಷಣವನ್ನು ವಿಶಿಷ್ಟ ಹೇಳಲು ಕಾರಣವೇನು ಎಂದರೆ-) ಪರಮಾತ್ಮನಿಗೆ ಶರೀರೋತ್ಪತ್ತಿರೂಪವಾದ ಆದಿಮತ್ತ್ವವೂ ಇಲ್ಲವೆಂಬುವ ವಿಶೇಷವಿದ್ದುದರಿಂದ ಅನಾದಿ ಎಂದು ವಿಶಿಷ್ಟ ಹೇಳಿದ್ದು ಜೀವನು ಹುಟ್ಟದಿದ್ದರೂ ಜೀವನಿಗೆ ದೇಹೋತ್ಪತ್ತಿಯು ಇದೆ. ಜೀವನಿಗೆ ಸತ್ತ್ವ ರಜಸ್ತಮೋಗುಣಗಳ ಸಂಬಂಧವೂ ಇದೆ. (ಶ್ರೀಪರಮಾತ್ಮನಿಗೆ ಸತ್ತ್ವಾದಿಗುಣ ಸಂಬಂಧವೇ ಇಲ್ಲ) (೬) (ಜೀವೇಶ್ವರರಿಗೆ ಭೇದವಿದೆ ಎಂಬುವಲ್ಲಿ **ಕರೋತಿ ನ ಲಿಪ್ಯತೇ** ಎಂಬ ಹೇತ್ವಂತರದ ಅರ್ಥವನ್ನು ಹೇಳುತ್ತಾರೆ—) ಶ್ರೀಪರಮಾತ್ಮನು ಸರ್ವವನ್ನು ಸೃಷ್ಟಿಸುವವನಾದರೂ ದುಃಖಾದಿ ದೋಷಗಳಿಂದ ಲೇಪಿಸಲ್ಪಡುವುದಿಲ್ಲ (೭) ವಾದಿಗಳ ಪ್ರಸಿದ್ಧಿಯನ್ನು ಇಟ್ಟುಕೊಂಡು. **ಇಷ್ಟಾಪೂರ್ತಂ ಮನ್ಯಮಾನಾಃ** ಇತ್ಯಾದಿಗಳಂತೆ ನಿಷೇಧವು.

ವಿ ॥ (1) ಹೇಗೆ ಶೂನ್ಯತತ್ತ್ವವು ಜಗತ್ತಿಗೆ ಕಾರಣವು ಎಂಬುವುದು ಶೂನ್ಯವಾದಿಗಳ ಮತ [illegible] ದಿಂದ ಪ್ರಯುಕ್ತ **ತದ್ವೈತ ಅಹಃ** ಇತ್ಯಾದಿಗಳಿಂದ ಅದರ ನಿಷೇಧವು ಮಾಡಲ್ಪಡುತ್ತದೆ [illegible]

ಸರ್ವೈಕ್ಯವನ್ನು ಹೇಳುವ ವಾದಿಗಳ ಮತದಿಂದ ಅದ್ವೈತವು ಪ್ರಾಪ್ತವಾದ ಪ್ರಯುಕ್ತ ಅದ್ವೈತನಿಷೇಧವು ಆಗುತ್ತದೆ. (2) ಹೀಗೆ ಜ್ಞಾನದ್ವಾರಾ ಮೋಕ್ಷಕ್ಕಾಗಿ ಕರ್ಮಗಳಿಂದ ಶ್ರೀಪರಮಾತ್ಮನೇ ಪೂಜಿಸಲ್ಪಡಬೇಕು. ಎಂಬುವ ಕರ್ಮಶ್ರುತಿಯ ಅಭಿಪ್ರಾಯವನ್ನು ತಿಳಿಯದಿರುವುದರಿಂದ ಪ್ರಾಪ್ತವಾದ ಕೇವಲ ಕರ್ಮದಿಂದಲೇ ಸ್ವರ್ಗಾದಿ ಪುರುಷಾರ್ಥವು ಸಿಗುತ್ತದೆ, ಎಂಬುವುದಕ್ಕೆ ಇಷ್ಟಾಪೂರ್ತಂ ಮನ್ಯಮಾನಾಃ ಇತ್ಯಾದಿಗಳಿಂದ ನಿಷೇಧವು ಮಾಡಲ್ಪಡುತ್ತದೋ, ಹಾಗೆಯೇ ಸರ್ವಂ ಖಲ್ವಿದಂ ಬ್ರಹ್ಮ ಇತ್ಯಾದಿ ಶ್ರುತಿಗಳಿಗೆ ಶ್ರೀಪರಮಾತ್ಮನಿಂದ ಸರ್ವವೂ ವ್ಯಾಪ್ತವಾಗಿದೆ, ಎಂದು ಅಭಿಪ್ರಾಯವೆಂದು ತಿಳಿಯದಿರುವುದರಿಂದ ಪ್ರಾಪ್ತವಾದ ಅದ್ವೈತಕ್ಕೆ ನಿಷೇಧವು. . ||೧||

ಪೀ—ಅಪಾತತಃ ತೋರುವ ಅರ್ಥವೇ ಏಕೆ ಆಗಲಾರದೆಂದರೆ—ನಾವು ಹೇಳಿದ ಅರ್ಥವೇ ಆಗಬೇಕೆಂಬುವಲ್ಲಿ ಪ್ರಮಾಣಾಂತರ ಸಮ್ಮತಿಯನ್ನು ಹೇಳುತ್ತಾರೆ—

ತಾ || (೧) ಕುರ್ವಾಣೋಽಪಿ ಯತಸ್ಸರ್ವಂ ಪುಣ್ಯಪಾಪೈರ್ನ ಲಿಪ್ಯತೇ | ಜನ್ಮಮೃತ್ಯಾದಿ-
ರಹಿತಃ ಸತ್ತ್ವಾದಿಗುಣವರ್ಜಿತಃ | ವಿಷ್ಣುಸ್ತದ್ವಿಪರೀತಸ್ತು ಜೀವೋಽತಸ್ತೌ ಪೃಥಕ್ಸ-
ದೇತಿ ಚ || ೨ || || ೩೨,೩೩,೩೪ ||

ಅ || (೧) ಶ್ರೀಪರಮಾತ್ಮನೇ ಸಮಸ್ತವನ್ನು ಮಾಡುವವನಾದಾಗ್ಯೂ ಪುಣ್ಯಪಾಪಗಳಿಂದ ಲೇಪಿಸಲ್ಪಡುವುದಿಲ್ಲ. ಜನನ ಮರಣಾದಿಗಳಿಂದ ವಿರಹಿತನು. ಸತ್ವರಜಸ್ತಮೋಗುಣ ವಿರಹಿತನು. ಜೀವನಾದರೂ ಅದಕ್ಕಿಂತ ವಿಪರೀತನು. (ಅಂದರೆ—ಪುಣ್ಯ ಪಾಪಗಳ ಲೇಪವುಳ್ಳವನು. ಜನನ ಮರಣಾದಿ ದೋಷಗಳುಳ್ಳವನು. ಸತ್ವಾದಿಗುಣಗಳ ಸಂಬಂಧವುಳ್ಳವನು.) ಆದಕಾರಣ ಜೀವೇಶ್ವರರಿಬ್ಬರೂ ಸದಾ ಪರಸ್ಪರ ಭೇದವುಳ್ಳವರು. (೨) (ಶ್ರೀಪರಮಾತ್ಮನು ಚೇತನಾಚೇತನಗಳಿಂದ ಭಿನ್ನನೆಂಬುವಲ್ಲಿ ಶ್ರುತಿಸಮ್ಮತಿಯನ್ನು ಹೇಳುತ್ತಾರೆ—) ಆ ಈ ಶ್ರೀಪರಮಾತ್ಮನು ಚೇತನರಂತೆಯೂ ಅಲ್ಲ. ಅಚೇತನಗಳಂತೆಯೂ ಅಲ್ಲ. (ಅಂದರೆ-ಜೀವ ಜಡಗಳಿಂದ ಶ್ರೀಪರಮಾತ್ಮನು ಪಾರಮಾರ್ಥಿಕವಾಗಿ ಅತ್ಯಂತ ಭೇದವುಳ್ಳವನು.) || ೩೨—೩೪ ||

ಪೀ—ಫಲವನ್ನು ಹೇಳುತ್ತಾ ಅಧ್ಯಾಯಾರ್ಥವನ್ನು ಕೊನೆಗೊಳಿಸುತ್ತಾರೆ—

ಗೀ || ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ |
ಭೂತಪ್ರಕೃತಿಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಂ || ೩೫ ||

ಅ || ಏವಂ = ಹಿಂದೆ ಹೇಳಿದ ಪ್ರಕಾರ, ಕ್ಷೇತ್ರಕ್ಷೇತ್ರಜ್ಞಯೋಃ = ಕ್ಷೇತ್ರ ಕ್ಷೇತ್ರಜ್ಞರ, ಅಂತರಂ = ಭೇದವನ್ನು, ಜ್ಞಾನಚಕ್ಷುಷಾ = ವಿವೇಕ ದೃಷ್ಟಿಯಿಂದ, ಯೇ = ಯಾರು, ವಿದುಃ = ತಿಳಿಯುತ್ತಾರೋ, ಭೂತಪ್ರಕೃತಿಮೋಕ್ಷಂ ಚ = ಜೀವರಿಗೆ ಅಚೇತನ ಪ್ರಕೃತಿಯಿಂದ, ಮೋಕ್ಷಕ್ಕೆ (ಬಿಡುಗಡೆಗೆ) ಸಾಧನವಾದ ಅಮಾನಿತ್ವ ಮೊದಲಾದುದನ್ನು ಅಥವಾ ಜೀವರಿಗೆ ಭೂತಗಳಿಂದಲೂ ಅಚೇತನ ಪ್ರಕೃತಿಯಿಂದಲೂ ಮೋಕ್ಷವು ಯಾವುದರಿಂದ ಆಗುತ್ತದೋ, ಅಂತಹದನ್ನು ಅಮಾನಿತ್ವ ಮೊದಲಾದ ಹಿಂದೆ ಹೇಳಿದ ಮೋಕ್ಷಸಾಧನವನ್ನು, ಯೇ = ಯಾರು, ವಿದುಃ = ತಿಳಿಯುತ್ತಾರೋ, ತೇ = ಅವರು, ಪರಂ = ಪರಬ್ರಹ್ಮನನ್ನು, ಯಾಂತಿ = ಹೊಂದುತ್ತಾರೆ (ಮುಕ್ತರಾಗುತ್ತಾರೆ) || ೩೫ ||

ಗೀ ॥ ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಕ್ಷೇತ್ರಕ್ಷೇತ್ರಜ್ಞಯೋಗೋ ನಾಮ ತ್ರಯೋದಶೋಽಧ್ಯಾಯಃ ॥ ೧೨ ॥

ಅ ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಕ್ಷೇತ್ರಕ್ಷೇತ್ರಜ್ಞಯೋಗವೆಂಬ ಹದಿಮೂರನೇ ಅಧ್ಯಾಯವು ಮುಗಿಯಿತು. ॥ ೧೩ ॥

ಭಾ ॥ ಭೂತೇಭ್ಯಃ ಪ್ರಕೃತೇಶ್ಚ ಮೋಕ್ಷಸಾಧನಂ । ಅಮಾನಿತ್ವಾದಿಕಂ ॥ ೩೫ ॥

ಅ ॥ ಪೃಥಿವ್ಯಾದಿ ಭೂತಗಳ ದೆಸೆಯಿಂದಲೂ ಜಡ ಪ್ರಕೃತಿಯಿಂದಲೂ ಮೋಕ್ಷಕ್ಕೆ ಸಾಧನವಾದ ಅಮಾನಿತ್ವ ಮೊದಲಾದ ಸಾಧನವನ್ನು. ॥ ೩೫ ॥

ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ತ್ರಯೋದಶೋಽಧ್ಯಾಯಃ ॥ ೧೩ ॥

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಶ್ರೀಭಗವದ್ಗೀತಾಭಾಷ್ಯದಲ್ಲಿ ಹದಿಮೂರನೇ ಅಧ್ಯಾಯವು ಮುಗಿಯಿತು. ॥ ೧೩ ॥

ತಾ ॥ ಸ ಏಷ ನೇತಿ ನೇತೀತ್ಯಾದಿ ಚ । ಜೀವಾನಾಮಚೇತನಪ್ರಕೃತೇರ್ಮೋಕ್ಷಂ ಭೂತಪ್ರಕೃತಿಮೋಕ್ಷಂ ॥ ೩೫ ॥

ಅ ॥ ಜೀವರಿಗೆ ಅಚೇತನ ಪ್ರಕೃತಿಯ ದೆಸೆಯಿಂದ ಮೋಕ್ಷವು (ಬಿಡುಗಡೆಯು) ಯಾವುದರಿಂದ ಉಂಟಾದೀತೋ ಅಂತಹ ಮೋಕ್ಷಕ್ಕೆ ಸಾಧನವಾದ ಅಮಾನಿತ್ವ ಮೊದಲಾದ ಸಾಧನವನ್ನು, ಎಂದು ಭೂತಪ್ರಕೃತಿ ಮೋಕ್ಷಂ ಎಂಬುವುದಕ್ಕೆ ಅರ್ಥವು. ॥ ೩೫ ॥

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾತಾತ್ಪರ್ಯನಿರ್ಣಯೇ ತ್ರಯೋದಶೋಽಧ್ಯಾಯಃ ॥ ೧೩ ॥

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾತಾತ್ಪರ್ಯನಿರ್ಣಯದಲ್ಲಿ ಹದಿಮೂರನೇ ಅಧ್ಯಾಯವು ಮುಗಿಯಿತು ॥ ೧೩ ॥

॥ ಶ್ರೀಕೃಷ್ಣಾರ್ಪಣಮಸ್ತು ॥

---

|| ಶ್ರೀಃ ||

# ಹದಿನಾಲ್ಕನೇ ಅಧ್ಯಾಯವು.

ಟೀ—ಬುದ್ಧಿಯೋಗೇ ತ್ವಿಮಾಂ ಶೃಣು ಎಂದು ಎರಡನೇ ಅಧ್ಯಾಯದಲ್ಲಿ ಹೇಳಿದ್ದನ್ನೇ ಅಧ್ಯಾಯ ಸಮಾಪ್ತಿ ಪರ್ಯಂತ ನಿಷ್ಕಾಮ ಕರ್ಮವು ಮತ್ತು ಧ್ಯಾನರೂಪವಾದುದು ಜ್ಞಾನಸಾಧನವೆಂದು ಹೇಳಿದೆ ಅದರ ಇತಿಕರ್ತವ್ಯತಾಂಶವನ್ನು ೧೪—೧೮ ಪರ್ಯಂತ (೫) ಅಧ್ಯಾಯಗಳಿಂದ ವಿವರಿಸುತ್ತಾರೆ. ಶ್ರೋತೃಗಳಿಗೆ ಅದರ ಹುಟ್ಟುವುದಕ್ಕಾಗಿ ಮುಂದೆ ಹೇಳುವ ಪ್ರಮೇಯವನ್ನು ಸ್ತುತಿಸುತ್ತಾರೆ—

ಗೀ || || ಶ್ರೀಭಗವಾನುವಾಚ ||

ಓಂ || ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಂ |
ಯಜ್ಜ್ಞಾತ್ವಾ ಮುನಯಃ ಸರ್ವೇ ಪರಾಂ ಸಿದ್ಧಿಮಿತೋ ಗತಾಃ ||೧||

ಅ || ಶ್ರೀಭಗವಾನ್=ಶ್ರೀಕೃಷ್ಣನು, ಉವಾಚ=ಉಪದೇಶಿಸುತ್ತಾನೆ ಯತ್=ಯಾವುದನ್ನು, ಜ್ಞಾತ್ವಾ=ತಿಳಿದುಕೊಂಡು, ಸರ್ವೇಮುನಯಃ=ಎಲ್ಲಾ ಜ್ಞಾನಿಗಳು, ಇತಃ=ಈ ಸಂಸಾರ ದೆಸೆಯಿಂದ (ಸಂಸಾರವನ್ನು ದಾಟಿ) ಪರಾಂ ಸಿದ್ಧಿಂ=ಅತ್ಯುತ್ತಮವಾದ ಮೋಕ್ಷವನ್ನು, ಗತಾಃ=ಹೊಂದಿರುವರೋ, (ಅಂತಹ) ಪರಂ=ಹಿಂದೆ ಹೇಳಿದುದಕ್ಕಿಂತ ಬೇರೆಯಾದ, ಜ್ಞಾನಾನಾಂ=ತಿಳಿಯಲು ಯೋಗ್ಯಗಳಾದ ಪ್ರಮೇಯಗಳ ಮಧ್ಯದಲ್ಲಿ. ಉತ್ತಮಂ ಜ್ಞಾನಂ=ಅತ್ಯುತ್ಕೃಷ್ಟವಾದ ತಿಳಿಯಲು ಯೋಗ್ಯವಾದ ಪರಬ್ರಹ್ಮಸ್ವರೂಪವನ್ನು. ಭೂಯಃ=ತಿರುಗಿ, ಪ್ರವಕ್ಷ್ಯಾಮಿ=ಚೆನ್ನಾಗಿ ಹೇಳುವೆನು ||೧||

ಗೀ || ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ |
ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ||೨||

ಅ || ಇದಂ ಜ್ಞಾನಂ=ಮುಂದೆ ಹೇಳುವ ಪರಬ್ರಹ್ಮ ವಿಷಯಕ ಜ್ಞಾನವನ್ನು, ಉಪಾಶ್ರಿತ್ಯ=ಸಂಪಾದಿಸಿಕೊಂಡು, ಮಮ=ನನ್ನ. ಸಾಧರ್ಮ್ಯಂ=ಸಾರೂಪ್ಯವನ್ನು, ಆಗತಾಃ=ಹೊಂದಿರುತ್ತಾರೆ (ಅಂತಹ ಮುಕ್ತರು) ಸರ್ಗೇಽಪಿ=ಸೃಷ್ಟಿಕಾಲದಲ್ಲಿಯೂ, ನೋಪಜಾಯಂತೇ=ಹುಟ್ಟುವುದಿಲ್ಲ ಪ್ರಲಯೇ=ಪ್ರಳಯಕಾಲದಲ್ಲಿಯೂ, ನ ಚ ವ್ಯಥಂತಿ=ನಾಶಹೊಂದುವುದಿಲ್ಲ. ೨

ಭಾ || ಓಂ || ಸಾಧನಂ ಪ್ರಾಧಾನ್ಯೇನೋಕ್ತಂ ತ್ರಿಭಿರಧ್ಯಾಯೈರ್ವಕ್ತಿ ||೧,೨||

ಅ || ಮೇಲಿನ ಅಧ್ಯಾಯಗಳಿಂದ ಜ್ಞಾನಸಾಧನವನ್ನು ಪ್ರಧಾನವಾಗಿ ಹೇಳುತ್ತಾರೆ ೧-೨

ಟೀ—ಅಂತಹ ಪ್ರಮೇಯವನ್ನು ಹೇಳುತ್ತಾರೆ—

ಗೀ || ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ಗರ್ಭಂ ದಧಾಮ್ಯಹಂ |
ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ ||೩||

ಅ ॥ ಭಾರತ=ಅರ್ಜುನನೇ, ಮಹದ್ಬ್ರಹ್ಮ=ಚಿತ್ಪ್ರಕೃತಿಯೆನಿಸಿಕೊಂಡ ಮಹಾ ಲಕ್ಷ್ಮೀದೇವಿಯು, ಮಮ=ನನ್ನ, ಯೋನಿಃ=ಪ್ರಿಯಪತ್ನಿಯು. ತಸ್ಮಿನ್=ಆ ಲಕ್ಷ್ಮೀದೇವಿಯಲ್ಲಿ, ಅಹಂ=ನಾನು, ಗರ್ಭಂ=ಗರ್ಭವನ್ನು, ದಧಾಮಿ=ಧರಿಸುತ್ತೇನೆ. (ಅಂದರೆ ತನ್ನ ಉದರದೊಳಗಿರುವ ೨೪ ತತ್ವಾಂಶಗಳಿಂದ ಕೂಡಿದ ದೇವತೆಗಳನ್ನೂ ಎಲ್ಲಾ ಜೀವರಾಶಿಯನ್ನೂ ರೇತೋರೂಪದಿಂದ ಹೊರಗೊಳಿಸಿ ಲಕ್ಷ್ಮೀದೇವಿಯ ಉದರದಲ್ಲಿ ಇಡುತ್ತೇನೆ.) ತತಃ=ಲಕ್ಷ್ಮೀದೇವಿಯ ಉದರದಲ್ಲಿ ಗರ್ಭವನ್ನು ಇಡುವುದರಿಂದ, ಸರ್ವಭೂತಾನಾಂ=ಸಮಸ್ತ ಪ್ರಾಣಿಗಳಿಗೆ, ಸಂಭವಃ=ಶರೀರ ಸಂಬಂಧರೂಪವಾದ ಉತ್ಪತ್ತಿಯು, ಭವತಿ=ಆಗುತ್ತದೆ. ॥ ೩ ॥

ಪೀ—ಈ ಅಧ್ಯಾಯದಲ್ಲಿ ಹೇಳಲ್ಪಡತಕ್ಕ ಅರ್ಥವನ್ನು ತೋರಿಸುತ್ತಾರೆ—

ಟೀ ॥ ಓಂ ॥ (೧) ಕ್ಷೇತ್ರಕ್ಷೇತ್ರಜ್ಞಸಂಯೋಗಸೃಷ್ಟೀಕರಣಪೂರ್ವಕಂ ತ್ರೈಗುಣ್ಯಂ ವಿವಿಚ್ಯ ದರ್ಶಯತಿ ॥ (೨) ಯೋನಿರ್ಭಾರ್ಯಾ ತಥಾ ಸ್ಥಾನಂ ಯೋನಿಃ ಕಾರಣಮೇವ ಚೇತಿ ಶಬ್ದನಿರ್ಣಯೇ । ಅತ್ರ ಯೋನಿರ್ಭಾರ್ಯಾ । ತಸ್ಮಿನ್ಗರ್ಭಂ ದಧಾಮ್ಯಹ-ಮಿತಿ ವಾಕ್ಯಶೇಷಾತ್ ॥ ೧–೩ ॥

ಅ ॥ (೧) ಕ್ಷೇತ್ರ ಕ್ಷೇತ್ರಜ್ಞರ ಸಂಬಂಧವನ್ನು ಸೃಷ್ಟೀಕರಿಸುತ್ತಾ ತ್ರೈಗುಣ್ಯವನ್ನು ಬಿಡಿಸಿ ತೋರಿಸುತ್ತಾರೆ. (ಅಂದರೆ—ಮೇಲಿನ ಅಧ್ಯಾಯಗಳಿಂದ ಪ್ರಧಾನವಾಗಿ ಮೋಕ್ಷಸಾಧನವೇ ಹೇಳಲ್ಪಡುತ್ತದೆ. ಅದರಲ್ಲಿ ಬಂಧಪ್ರಕಾರವನ್ನು ತಿಳಿದರೇನೇ ಬಂಧನಿವೃತ್ತಿರೂಪವಾದ ಮೋಕ್ಷ ಸಾಧನವನ್ನು ಮಾಡಲಿಕ್ಕೆ ಸಾಧ್ಯವಾಗುವುದು. ಸಂಸಾರಬಂಧವು ಸತ್ವರಜಸ್ತಮೋಗುಣಾತ್ಮಕವು. ಅದಕಾರಣ ಯಾವತ್ಸಂಜಾಯತೇ ಎಂದು ಹೇಳಿದುದನ್ನು ವಿವರಣಮಾಡುತ್ತಾ ಕಾರಣಂ ಗುಣಸಂಗೋಽಸ್ಯ ಎಂದು ಹೇಳಿದ ಗುಣಸಂಬಂಧವನ್ನು ವಿವರಿಸಿ ತ್ರಿಗುಣ ವಿಕಾರಸ್ಥಿತಿಯನ್ನೂ ಮತ್ತು ತ್ರಿಗುಣ ವಿಕಾರಗಳ ಪರಿಹಾರೋಪಾಯವನ್ನೂ ಈ ಅಧ್ಯಾಯದಿಂದ ತೋರಿಸುತ್ತಾರೆ) (೨) (ಪರಂ ಭೂಯಃ ಪ್ರವಕ್ಷ್ಯಾಮಿ (ಶ್ಲೋ. ೧) ಎಂದು ಪ್ರತಿಜ್ಞೆಮಾಡಿದುದನ್ನು ಮಮ ಯೋನಿಃ ಎಂಬುವುದರಿಂದ ಹೇಳುತ್ತಾರೆ.) (ಅದರಲ್ಲಿ ಯೋನಿ ಶಬ್ದಕ್ಕೆ ಕಾರಣವೆಂದರ್ಥವು ಎಂಬುವ ಪ್ರತೀತಿಯನ್ನು ಹೋಗಲಾಡಿಸುತ್ತಾ ಪತ್ನೀ ಮೊದಲಾದ ಅರ್ಥವಿದೆ, ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ-) ಯೋನಿಶಬ್ದಕ್ಕೆ ಪತ್ನೀ, ಗುಹ್ಯಸ್ಥಾನ, ಕಾರಣ ಎಂಬೀ ಮೂರು ಈ ಅರ್ಥಗಳಿವೆ, ಎಂದು ಶಬ್ದನಿರ್ಣಯದಲ್ಲಿದೆ. ಯೋನಿ ಶಬ್ದಕ್ಕೆ ಅನೇಕಾರ್ಥಗಳಿದ್ದರೂ ಇಲ್ಲಿದ್ದ ಯೋನಿ ಶಬ್ದದಿಂದ ಪತ್ನೀ ಎಂಬುವ ಅರ್ಥವನ್ನು ಇಟ್ಟುಕೊಳ್ಳಬೇಕು (ಯೋನಿ ಶಬ್ದಕ್ಕೆ ಅನೇಕಾರ್ಥಗಳಿದ್ದುದರಿಂದ ಇಲ್ಲಿ ಪತ್ನೀ ಎಂಬುವ ಅರ್ಥವನ್ನೇ ಏಕೆ ಇಟ್ಟುಕೊಳ್ಳಬೇಕೆಂದರೆ—) ತಸ್ಮಿನ್ ಗರ್ಭಂ ದಧಾಮ್ಯಹಂ ಎಂಬೀ ಶಿಷ್ಟವಾಕ್ಯ ಪರ್ಯಾಲೋಚನೆಯಿಂದ ಇಲ್ಲಿದ್ದ ಯೋನಿಶಬ್ದಕ್ಕೆ ಪತ್ನೀ ಎಂಬುವ ಅರ್ಥವೆಂದೇ ನಿಶ್ಚಿತವಾಗುತ್ತದೆ. ॥ ೧–೩ ॥

ಪೀ—ಆದಿಸೃಷ್ಟಿಯಲ್ಲಿ ಮಾತ್ರ ಲಕ್ಷ್ಮೀನಾರಾಯಣರು ಸರ್ವ ಜಗತ್ಸೃಷ್ಟಿಯಲ್ಲಿ ಕಾರಣರೆಂದಲ್ಲ ಮತ್ತೆ ಸರ್ವದಾ ಕಾರಣರೆನ್ನುತ್ತಾರೆ—

ಗೀ ॥ ಸರ್ವಯೋನಿಷು ಕೌಂತೇಯ ಮೂರ್ತಯಃ ಸಂಭವಂತಿ ಯಾಃ ।
ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥ ೪ ॥

ಅ ॥ ಕೌಂತೇಯ=ಅರ್ಜುನನೇ, ಸರ್ವಯೋನಿಷು=ದೇವತೆಗಳು, ಮನುಷ್ಯರು, ತಿರ್ಯಕ್ ಮೊದಲಾದ ಸಮಸ್ತ ಯೋನಿಗಳಲ್ಲಿ, ಯಾಃ ಮೂರ್ತಯಃ=ದೇಹಾದಿರೂಪಗಳಾದ ಯಾವ ಕಾರ್ಯ ವ್ಯಕ್ತಿಗಳು, ಸಂಭವಂತಿ=ಹುಟ್ಟುತ್ತವೋ, ತಾಸಾಂ=ಆ ಕಾರ್ಯ ವ್ಯಕ್ತಿಗಳ ಪ್ರತಿ ಉತ್ಪತ್ತಿಯಲ್ಲಿಯೂ, ಮಹದ್ಬ್ರಹ್ಮ=ಮಹಾ ಲಕ್ಷ್ಮೀದೇವಿಯು ಯೋನಿಃ=ಕ್ಷೇತ್ರರೂಪಳಾದ ಕಾರಣಳು. (ಮಾತೃಸ್ಥಾನೀಯಳು) ಅಹಂ=ನಾನು, ಬೀಜಪ್ರದಃ=ಗರ್ಭಾಧಾನವನ್ನು ಮಾಡುವ, ಪಿತಾ=ತಂದೆಯು. ॥ ೪ ॥

ಟೀ—ಮಹದ್ಬ್ರಹ್ಮ ಪದದಿಂದ ಜಡಭೂತವಾದ ಅವಿದ್ಯೆಯನ್ನು ಇಟ್ಟುಕೊಳ್ಳಬೇಕೆಂದು ಪರರು ಹೇಳುವುದು ಅಯುಕ್ತವೆನ್ನುತ್ತಾರೆ—

ಭಾ ॥ (೧) ಮಹದ್ಬ್ರಹ್ಮ ಪ್ರಕೃತಿಃ । ಸಾ ಚ ಶ್ರೀಭೂದುರ್ಗೇತಿ ಭಿನ್ನಾ । ಉಮಾಸರಸ್ವತ್ಯಾದ್ಯಾಸ್ತು ತದಂಶಯುತಾ ಅನ್ಯಜೀವಾಃ ॥ (೨) ತಥಾ ಚ ಕಾಷಾಯಣಶ್ರುತಿಃ । ಶ್ರೀರ್ಭೂರ್ದುರ್ಗಾ ಭಗವತೀ ತು ಮಾಯಾ ಸಾ ಲೋಕಸೂತಿರ್ಜಗತೋ ಬಂಧಿಕಾ ಚ । ಉಮಾವಾಗಾದ್ಯಾ ಅನ್ಯಜೀವಾಸ್ತದಂಶಾಸ್ತದಾತ್ಮನಾ ಸರ್ವವೇದೇಷು ಗೀತಾ ಇತಿ ॥ (೩) ಮಮ ಯೋನಿರಿತಿ ಗರ್ಭಾಧಾನಾರ್ಥಾ ಯೋನಿಃ । ನ ತು ಮಾತಾ । ವಾಕ್ಯಶೇಷಾತ್ ॥ (೪) ತಥಾ ಹಿ ಸಾಮವೇದೇ ಶಾರ್ಕರಾಕ್ಷಶ್ರುತೌ । ವಿಷ್ಣೋರ್ಯೋನಿರ್ಗರ್ಭಸಂಧಾರಣಾರ್ಥಾ ಮಹಾಮಾಯಾ ಸರ್ವದುಃಖೈರ್ವಿಹೀನಾ । ತಥಾಽಽತ್ಮಾನಂ ದುಃಖಿವನ್ಮೋಹನಾರ್ಥಂ ಪ್ರಕಾಶಯಂತೀ ಸಹ ವಿಷ್ಣುನಾ ಸೇತಿ॥ (೫) ಅತಃ ಸೀತಾ ದುಃಖಾದಿಕಂ ಸರ್ವಂ ಮೃಷಾ ಪ್ರದರ್ಶನಮೇವ । ತಥಾ ಕೂರ್ಮಪುರಾಣೇ । (೬) ನ ಚೇಯಂ ಭೂಃ ॥ ತಥಾ ಚ ಸೌಕರಾಯಣಶ್ರುತಿಃ । ಅನ್ಯಾ ಭೂರ್ಭೂರಿಯಂ ತಸ್ಯ ಛಾಯಾಭೂತಾವಮಾ ಸಾ ಹಿ ಭೂತ್ಯೈಕಯೋನಿರಿತಿ ॥ (೭) ಅವಾಪ ಸ್ವೇಚ್ಛಯಾ ದಾಸ್ಯಂ ಜಗತಾಂ ಪ್ರಪಿತಾಮಹೀತ್ಯಾದ್ಯನಭಿಮ್ಲಾನಶ್ರುತಿಃ । ಮತ್ಸ್ಯಪುರಾಣೋಕ್ತಮಪಿ ಸ್ವೇಚ್ಛಯೈವ ॥ (೮) ಮಹದ್ಬ್ರಹ್ಮಶಬ್ದವಾಚ್ಯಾ ಪ್ರಕೃತಿರೇವ । ಮಹತೀ ಬ್ರಹ್ಮಣೀ ದ್ವೇ ತು ಪ್ರಕೃತಿಶ್ಚ ಮಹೇಶ್ವರ ಇತಿ ತತ್ರೈವ ॥ ೩,೪ ॥

ಅ ॥ (೧) ಮಹದ್ಬ್ರಹ್ಮ ಶಬ್ದದಿಂದ ಚಿತ್ಪ್ರಕೃತಿ (ಲಕ್ಷ್ಮಿ) ಯನ್ನು ಇಟ್ಟುಕೊಳ್ಳಬೇಕು. ಅವಳು ಶ್ರೀ, ಭೂ, ದುರ್ಗಾ, ಎಂದು ಮೂರು ರೂಪವುಳ್ಳವಳು. (ಮಹಾ ಲಕ್ಷ್ಮಿಯು ಮಾಹೇಶ್ವರೀ, ಬ್ರಾಹ್ಮೀ, ಇತ್ಯಾದಿ ೭ ರೂಪಗಳುಳ್ಳವಳೆಂದು ಆಗಮದಲ್ಲಿ ಹೇಳಿರುವುದರಿಂದ ಮೂರು ರೂಪಗಳುಳ್ಳವಳೆಂದು ಹೇಳಿದ್ದು ಹೇಗೆಂದರೆ—) ಪಾರ್ವತೀ ಸರಸ್ವತೀ ಮೊದಲಾದವರು ಲಕ್ಷ್ಮೀದೇವಿಯ ಅಂಶದಿಂದ ಕೂಡಿದ್ದು ಲಕ್ಷ್ಮೀದೇವಿಯಿಂದ ಭಿನ್ನರಾದ ಜೀವರು (ದುಃಖಸ್ಪೃಷ್ಟ ಚೇತನರು.) (೨) ಹಾಗೆಯೇ ಕಾಷಾಯಣ ಶ್ರುತಿಯುದೆ. ಶ್ರೀಃ, ಭೂಃ, ದುರ್ಗಾ ಎಂಬೀ ಮೂವರು ಮಹಾ ಲಕ್ಷ್ಮೀಸ್ವರೂಪಭೂತರು. ಪಡ್ಗು ಸ್ವರೂಪರು, ಜಗತ್ತಿಗೆ ಉತ್ಪಾದಕರು, ಜಗತ್ತನ್ನು ಬಂಧಿಸುವವರು ಪಾರ್ವತೀ ಸರಸ್ವತೀ ಮೊದಲಾದವರು ಲಕ್ಷ್ಮಿಗಿಂತ ಭಿನ್ನರಾದ ಜೀವರು, ಲಕ್ಷ್ಮೀದೇವಿಯ ಅಂಶವಿರುವವರಾದುದರಿಂದ ಲಕ್ಷ್ಮೀದೇವಿ ಸ್ವರೂಪರೆಂದು ಗೌಣವಾಗಿ ಎಲ್ಲಾ ವೇದಗಳಲ್ಲಿ ಹೇಳಲ್ಪಟ್ಟಿರುತ್ತಾರೆ. (೩) ಮಮ ಯೋನಿ ಎಂಬಲ್ಲಿ ಗರ್ಭಾಧಾನಕ್ಕೆ ಅರ್ಹಳಾದ ಪತ್ನಿಯು ಎಂದೇ ಅರ್ಥವು ತಸ್ಮಿನ್ ಗರ್ಭಂ ದಧಾಮ್ಯಹಂ ಎಂಬ

ವಾಕ್ಯವಿದ್ದುದರಿಂದ ಯೋನಿಃ ಎಂಬುವುದಕ್ಕೆ ಪತ್ನೀ ಎಂದೇ ಅರ್ಥನಿಶ್ಚಯವಾಗುತ್ತದೆ. ಯೋನಿಃ= ಕಾರಣ ತಾಯಿಯು ಎಂದರ್ಥವಲ್ಲ. (೪) (ಶ್ರುತಿಬಲದಿಂದಲೂ ಯೋನಿಶಬ್ದಕ್ಕೆ ಭಾರ್ಯಾ ಎಂದು ಹೇಳುತ್ತಾರೆ—) ಶ್ರೀವಿಷ್ಣುವಿನ ಪತ್ನಿಯು ಗರ್ಭಧಾರಣೆಯೇ ಪ್ರಯೋಜನವಾಗಿ ಉಳ್ಳವಳು. ಯೋಗ್ಯರಿಗೆ ಮಹಾ ಮೋಹವನ್ನು ಹೊಂದಿಸುವವಳು. ಸರ್ವ ದುಃಖಗಳಿಂದ ವಿರಹಿತಳು. ಆದಾಗ್ಯೂ ವಿಷ್ಣುವಿನಿಂದ ಕೂಡಿ ಕೊಂಡಿರತಕ್ಕವಳೇ, ಅಜ್ಞರಿಗೆ ಮೋಹಗೊಳಿಸುವುದಕ್ಕಾಗಿ ತನ್ನನ್ನು ದುಃಖ ಪರಳಂತೆ ಪ್ರವರ್ತಿಸುತ್ತಾಳೆ. ಎಂದು ಸಾಮವೇದದಲ್ಲಿ ಶಾರ್ಕರಾಕ್ಷ ಶ್ರುತಿಯಲ್ಲಿ ಹೇಳಿದೆ (೫)ಆದ ಕಾರಣ ಸೀತಾದೇವಿಯು ದುಃಖ ಮೊದಲಾದುದನ್ನು ಅಯಥಾರ್ಥವಾಗಿಯೇ ತೋರಿಸಿದ್ದು. ಹಾಗೆಯೇ ಕೂರ್ಮಪುರಾಣದಲ್ಲಿ ಹೇಳಿದೆ. (ಹೇಗೆಂದರೆ – ದಗ್ಧ್ವಾ ಮಾಯಾಮಯೀಂ ಸೀತಾಂ ಭಗವಾನುಗ್ರದೀಧಿತಿಃ। ರಾಮಾಯಾದರ್ಶಯತ್ಸೀತಾಂ ಪಾವಕೋಽಸೌ ಸುರಪ್ರಿಯಃ। ಇತ್ಯಾದಿ ಪ್ರಕಾರ ಹೇಳಿದೆ) (೬)(ಮಹಾ ಲಕ್ಷ್ಮಿಯು ಶ್ರೀ, ಭೂ, ದುರ್ಗಾ, ಎಂದು ಮೂರು ರೂಪಗಳುಳ್ಳವಳೆಂದು ಹೇಳಿದೆ ಗೌರ್ಭೂರ್ಶ್ವಾಽಸ್ತ್ರಮಃಷೇ ಪಿನ್ನಾ ಎಂದು ಭೂದೇವಿಗೆ ದುಃಖವು ತೋರುತ್ತದೆ. ಆದಕಾರಣ ಲಕ್ಷ್ಮೀದೇವಿಗೆ ದುಃಖಲೇಶವೂ ಇಲ್ಲದಿರುವುದರಿಂದ ಭೂದೇವಿಯು ಲಕ್ಷ್ಮೀದೇವಿಯು ಆಗುವುದು ಹೇಗೆ ಎಂದರೆ—) ಭೂತಾಭಿಮಾನಿನಿಯಾದ ಪ್ರಸಿದ್ಧವಾದ ಈ ಧರಾದೇವಿಯು ಲಕ್ಷ್ಮೀದೇವಿಯ ಸ್ವರೂಪಳಲ್ಲ. ಈ ಭೂದೇವಿಯು (ಧರಾದೇವಿಯು) ಲಕ್ಷ್ಮೀದೇವಿಯಿಂದ ಭಿನ್ನಳೇ. (ಏಕೆಂದರೆ—) ಮಹಾ ಲಕ್ಷ್ಮೀ ಸ್ವರೂಪವಾದುದು ಭೂದೇವಿಯು ಬೇರೆ. ಈ ಪ್ರಸಿದ್ಧವಾದ ಭೂಮಿಯು ಬೇರೆ ಈ ಪ್ರಸಿದ್ಧಳಾದ ಭೂದೇವಿಯು ಲಕ್ಷ್ಮೀದೇವಿಗೆ ಪ್ರತಿಮಾಸ್ಥಾನೀಯಳು. ಧರಾದೇವಿಯು ಪಂಚಭೂತಗಳಲ್ಲಿ ನಿಕೃಷ್ಟಳು ಆ ಭೂರೂಪವಾದ ಲಕ್ಷ್ಮೀದೇವಿಯು ಎಲ್ಲಾ ಪ್ರಾಣಿಗಳಿಗೆ ಮುಖ್ಯಕಾರಣಳು. ಎಂದು ಸೌಕರಾಯಣಶ್ರುತಿಯು. (೭) (ಸಾಕ್ಷಾತ್ಸೀತೆಯೇ ವಾಲ್ಮೀಕಿ ಋಷಿಯ ಭೃತ್ಯಳಾದದ್ದು, ಎಂದು ಮತ್ಸ್ಯಪುರಾಣದಲ್ಲಿ ಹೇಳಿದೆ. ಭೃತ್ಯಳೆಂದಾದಮೇಲೆ ದುಃಖವೂ ತಪ್ಪಿದ್ದಲ್ಲ. ಆದಕಾರಣ ದುಃಖವುಳ್ಳವಳಲ್ಲ ಎಂದದ್ದು ಹೇಗೆ ಎಂದರೆ-) ಸರ್ವ ಜಗತ್ತಿಗೂ ಪ್ರಪಿತಾಮಹಿಯಾದ ಲಕ್ಷ್ಮೀಸ್ವರೂಪಳಾದ ಸೀತಾದೇವಿಯು ತನ್ನ ಇಚ್ಛೆಯಿಂದಲೇ ವಾಲ್ಮೀಕಿ ಋಷಿಯ ದಾಸ್ಯವನ್ನು ಹೊಂದಿದ್ದು. (ಆದಕಾರಣ ಸರ್ವಥಾ ದುಃಖಾನುಭವವು ಇಲ್ಲ.) ಎಂದು ಪರಿವಸ್ಥಾನ ಶ್ರುತಿಯು. ಮತ್ಸ್ಯಪುರಾಣದಲ್ಲಿ ತನ್ನ ಇಚ್ಛೆಯಿಂದಲೇ ವಾಲ್ಮೀಕಿ ಋಷಿಯ ದಾಸ್ಯವನ್ನು ಹೊಂದಿದಳೆಂದು ಹೇಳಿದ್ದು (೮) ಮಹದ್ಬ್ರಹ್ಮಶಬ್ದವಾಚ್ಯಳೂ ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯೇ. ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯೂ, ಶ್ರೀಪರಮಾತ್ಮನೂ, ಇಬ್ಬರೂ ಮಹನ್ಬ್ರಹ್ಮರೆನಿಸುತ್ತಾರೆ, ಎಂದೂ ಮತ್ಸ್ಯಪುರಾಣದಲ್ಲಿಯೇ ಹೇಳಿದೆ. ॥ ೩. ೪ ॥

ಟೀ—ಜೀವರು ಬಂಧನಿವೃತ್ತಿಗಾಗಿ ಸಾಧನವನ್ನು ಮಾಡಬೇಕಾದರೆ ಬಂಧಕಜ್ಞಾನವಾವಶ್ಯಕವಾದುದರಿಂದ ಸತ್ವರಜಸ್ತಮೋಗುಣಗಳಿಂದ ಮಾಡಲ್ಪಟ್ಟ ಬಂಧಪ್ರಕಾರವನ್ನು ಹೇಳುತ್ತಾರೆ—

ಗೀ॥ ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ।
ನಿಬಧ್ನಂತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ॥ ೫ ॥

ಅ॥ ಹೇ ಮಹಾಬಾಹೋ=ಅರ್ಜುನನೇ, ಪ್ರಕೃತಿಸಂಭವಾಃ= ಸತ್ವರಜಸ್ತಮೋಗುಣಾತ್ಮಕವಾದ ಜಡಪ್ರಕೃತಿಯಿಂದ ಹುಟ್ಟತಕ್ಕ, ಜಡಪ್ರಕೃತಿಯ ಅಂಶಭೂತಗಳಾದ, ಸತ್ತ್ವಂ ರಜಸ್ತಮ ಇತಿ ಗುಣಾಃ— ಸತ್ವರಜಸ್ತಮಗಳೆಂಬ ಗುಣಗಳು, ಪ್ರಕೃತಿಸಂಭವಾಃ— ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯಿಂದ ಸೃಷ್ಟಿಕಾಲದಲ್ಲಿ ವಿಭಾಗಮಾಡಲ್ಪಟ್ಟವುಗಳಾಗಿ, ಮತ್ತು ಸತ್ವ ರಜಸ್ತಮೋಗುಣಗಳಿಗೆ ಅಭಿಮಾನಿಯಾದ [illegible] ಗುಣಗಳಿರುವಿಕೆ, (ರಜಃ) [illegible]

ದುಃಖವನ್ನು ಹೊಂದಿಸಿಕೊಡುವಿಕೆ ಈ ಮೂರು ನಿಮಿತ್ತಗಳಿಂದ ಸತ್ವ ರಜಸ್ತಮಃ ಎನಿಸಿಕೊಂಡ ಶ್ರೀ, ಭೂ. ದುರ್ಗಾ, ಎಂಬೀ ಮೂರು ದೇವಿಯರು ಕೂಡ, ದೇಹೇ=ಶರೀರದಲ್ಲಿರತಕ್ಕ, ಅವ್ಯಯಂ=ಸ್ವರೂಪತಃ ನಾಶವಿಲ್ಲದಿರುವ, ದೇಹಿನಂ=ಜೀವರ ಸಮುದಾಯವನ್ನು ನಿಬಧ್ನಂತಿ=ಬಂಧಿಸುತ್ತವೆ. ಬಂಧಿಸುತ್ತಾರೆ.

ವಿ ॥ ಇಲ್ಲಿ ಶ್ರೀ, ಭೂ, ದುರ್ಗಾ ಎಂಬೀ ಮೂರು ದೇವಿಯರೂ ಸಮಸ್ತ ಜೀವರಿಗೂ ಬಂಧಕರಾದಾಗ್ಯೂ ಸತ್ವಾಭಿಮಾನಿನಿಯಾದ ಶ್ರೀದೇವಿಯು ದೇವತೆಗಳಿಗೆ ಬಂಧಕಳು ರಜೋಗುಣಕ್ಕೆ ಅಭಿಮಾನಿಯಾದ ಭೂ ದೇವಿಯು ಮನುಷ್ಯರಿಗೆ ಬಂಧಕಳು. ತಮೋಗುಣಕ್ಕೆ ಅಭಿಮಾನಿನಿಯಾದ ದುರ್ಗಾ ದೇವಿಯು ದೈತ್ಯರಿಗೆ ಬಂಧಕಳು. ॥ ೫ ॥

ಟೀ—ಶ್ರೀ ಭೂ ದುರ್ಗಾದೇವಿಯವರು ಮೂರು ರೂಪಗಳಿಂದ ಮಾಡುವ ಮೂರು ವಿಧ ಬಂಧನ ರೀತಿಯನ್ನು ಮೂರು ಶ್ಲೋಕಗಳಿಂದ ವಿವರಿಸಿ ಹೇಳುತ್ತಾರೆ—

ಗೀ ॥ ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಂ ।
ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ ೬ ॥

ಅ ॥ ಅನಘ=ಪಾಪವಿಲ್ಲದಿರುವ ಅರ್ಜುನನೇ. ತತ್ರ=ಆ ಸತ್ವ ರಜಸ್ತಮೋಗುಣಗಳಲ್ಲಿಯೂ ಆ ಗುಣಗಳಿಗೆ ಅಭಿಮಾನಿಯರಾದ ಶ್ರೀ ಭೂ ದುರ್ಗಾದೇವಿಯರಲ್ಲಿಯೂ. ಸತ್ವಂ=ಸತ್ವಗುಣವೂ, ಸತ್ವಗುಣಕ್ಕೆ ಅಭಿಮಾನಿನಿಯಾದ ಲಕ್ಷ್ಮೀದೇವಿಯೂ. ನಿರ್ಮಲತ್ವಾತ್=ನಿರ್ದೋಷವಾದುದರಿಂದ ನಿಷ್ಕಲ್ಮಷಳಾಗಿರುವುದರಿಂದ (ದೋಷಲೇಶವಿಲ್ಲದವಳಾದುದರಿಂದ.) ಅನಾಮಯಂ=ರೋಗ ವ್ಯಾಧಿ ಮೊದಲಾದ ಉಪದ್ರವಗಳನ್ನು ಹುಟ್ಟದಂತೆ ಮಾಡುವುದಾಗಿ, ಮಾಡುವವಳಾಗಿ, ಪ್ರಕಾಶಕಂ=ತತ್ವಜ್ಞಾನವನ್ನು ಹುಟ್ಟಿಸುವುದಾಗಿ. ಹುಟ್ಟಿಸುವವಳಾಗಿ, ಸುಖಸಂಗೇನ=ಸುಖ ಸಂಬಂಧದಿಂದಲೂ ಜ್ಞಾನಸಂಗೇನ ಚ=ತತ್ವಜ್ಞಾನ ಸಂಬಂಧದಿಂದಲೂ, ಬಧ್ನಾತಿ=ದೇವತೆಗಳನ್ನು ಬಂಧಿಸುತ್ತದೆ. ಬಂಧಿಸುತ್ತಾಳೆ. ॥ ೬ ॥

ಭಾ ॥ ಬಂಧಪ್ರಕಾರಂ ದರ್ಶಯತಿ ಸಾಧನಾನುಷ್ಠಾನಾಯ ಸತ್ತ್ವಮಿತ್ಯಾದಿನಾ ॥ ೫,೬ ॥

ಅ ॥ (ಯಾವನು ತಾನು ಸಂಸಾರದಲ್ಲಿ ಬದ್ಧನಾಗಿದ್ದೇನೆಂದು ತಿಳಿಯುತ್ತಾನೋ, ಅವನೇ ಬಂಧನಿವೃತ್ತಿ ಸಾಧನವನ್ನು ವಿಚಾರಮಾಡಿ ತಿಳಿದುಕೊಂಡು ಮಾಡುತ್ತಾನೆ. ಆದಕಾರಣ ಸಂಸಾರಬಂಧವನ್ನು ನಿವೃತ್ತಿಗೊಳಿಸಲಿಕ್ಕೆ ಅವಶ್ಯಕವಾದ) ಸಾಧನಗಳನ್ನು ಮಾಡುವುದಕ್ಕಾಗಿ (ಅದನ್ನು ತಿಳಿಸುವುದಕ್ಕಾಗಿ ವಿಶೇಷ ಜಿಜ್ಞಾಸಾವನ್ನು ಹುಟ್ಟಿಸುವುದಕ್ಕಾಗಿ) ಸತ್ವರಜಸ್ತಮೋಗುಣಗಳಿಂದ ಮಾಡಲ್ಪಟ್ಟ ಬಂಧಪ್ರಕಾರವನ್ನು ಸತ್ವಂ ರಜಃ ಇತ್ಯಾದಿ ಶ್ಲೋಕಗಳಿಂದ ತೋರಿಸುತ್ತಾರೆ ॥ ೫,೬ ॥

ಗೀ ॥ ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಂ ।
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ ದೇಹಿನಂ ॥ ೭ ॥

ಅ ॥ ಕೌಂತೇಯ=ಅರ್ಜುನನೇ. ತೃಷ್ಣಾಸಂಗಸಮುದ್ಭವಂ=ತೃಷ್ಣಾ, ಈ ವಸ್ತು ನನಗೆ ಸಿಗಲಿ ಆ ವಸ್ತುವು ಸಿಗಲಿ ಎಂಬುವ ಆಶೆಯು, ಸಂಗ. ವಸ್ತುಗಳಲ್ಲಿ ಆಸಕ್ತಿಯು, ಇವುಗಳನ್ನು ಹು

ಪವ. ರಜಃ=ರಜೋಗುಣವನ್ನು, ರಜೋಗುಣಕ್ಕೆ ಅಭಿಮಾನಿನಿಯಾದ ಭೂದೇವಿಯನ್ನು, ರಾಗಾತ್ಮಕಂ=ಪದಾರ್ಥಗಳ ಸ್ಪೃಹ್ಯಾದಿಗಳನ್ನು ಮಾಡಿ ವಿಶೇಷವಾಗಿ ಅವುಗಳನ್ನು ಪ್ರಕಾಶಗೊಳಿಸುವ ಸ್ವರೂಪವನ್ನಾಗಿ ಸ್ವರೂಪಳನ್ನಾಗಿ, ವಿದ್ಧಿ=ತಿಳಿ. ತತ್=ರಜೋಗುಣವೂ, ರಜೋಗುಣಾಭಿಮಾನಿನಿಯಾದ ಭೂದೇವಿಯೂ, ಕರ್ಮಯೋಗೇನ=ಅವರವರಿಗೆ ಯೋಗ್ಯವಾದ ಕರ್ಮಸಂಬಂಧದಿಂದ, ದೇಹಿನಂ=ಮನುಷ್ಯ ಜೀವನನ್ನು, ನಿಬಧ್ನಾತಿ=ಬಂಧಿಸುತ್ತದೆ. ಬಂಧಿಸುತ್ತಾಳೆ. ||೭||

ಟೀ - ತೃಷ್ಣಾಸಂಗಗಳಿಂದ ಹುಟ್ಟಿದ್ದೆಂದು ಪರರು ಹೇಳುವ ಅರ್ಥವು ಅಯುಕ್ತವೆಂಬುವ ಅಭಿಪ್ರಾಯದಿಂದ ಸರಿಯಾದ ಅರ್ಥವನ್ನು ಹೇಳುತ್ತಾರೆ–

ಭಾ || ತೃಷ್ಣಾಸಂಗಯೋಃ ಸಮುದ್ಭವಂ | ತಯೋಃ ಕಾರಣಂ ||೭||

ಅ || ಆಶೆಯು ಮತ್ತು ಸ್ನೇಹಗಳಿಗೆ ಕಾರಣವು. ಅಂತೂ ಇವುಗಳನ್ನು ಹುಟ್ಟಿಸುವಂಥಾದ್ದು, ಎಂದೇ ಅರ್ಥವು. (ಇವುಗಳಿಂದ ಹುಟ್ಟಿದ್ದೆಂದು ಅರ್ಥವಲ್ಲ.) ||೭||

ಗೀ || ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಂ |
ಪ್ರಮಾದಾಲಸ್ಯನಿದ್ರಾಭಿಸ್ತನ್ನಿಬಧ್ನಾತಿ ಭಾರತ ||೮||

ಅ || ಭಾರತ=ಅರ್ಜುನನೇ, ಅಜ್ಞಾನಜಂ=ಅಜ್ಞಾನ, ವಿಪರೀತ ಜ್ಞಾನಗಳನ್ನು ಹುಟ್ಟಿಸುವ, ತಮಸ್ತು=ತಮೋಗುಣವನ್ನು, ತಮೋಗುಣಕ್ಕೆ ಅಭಿಮಾನಿನಿಯಾದ ದುರ್ಗಾದೇವಿಯನ್ನು, ಸರ್ವದೇಹಿನಾಂ=ಸಮಸ್ತ ಜೀವರಿಗೆ, ಮೋಹನಂ=ಮಿಥ್ಯಾಜ್ಞಾನವನ್ನು ಹುಟ್ಟಿಸುವುದನ್ನಾಗಿ, ಹುಟ್ಟಿಸುವವಳನ್ನಾಗಿ, ವಿದ್ಧಿ=ತಿಳಿದುಕೊಳ್ಳು. ತತ್=ತಮೋಗುಣವೂ, ಆ ತಮೋಗುಣಾಭಿಮಾನಿನಿಯಾದ ದುರ್ಗಾದೇವಿಯೂ, ಪ್ರಮಾದಾಲಸ್ಯನಿದ್ರಾಭಿಃ=ಪ್ರಮಾದ-ಅವಶ್ಯವಾಗಿ ಮಾಡಬೇಕಾದ ಕಾರ್ಯವನ್ನು ಮರೆಯುವಿಕೆ, ಆಲಸ್ಯ-ಅವಶ್ಯ ಕರ್ತವ್ಯಕರ್ಮವನ್ನು ಮಾಡಲಿಕ್ಕೆ ಪ್ರಯತ್ನ ಪಡದೆ ಔದಾಸೀನ್ಯದಿಂದ ಇರುವಿಕೆ, ನಿದ್ರಾ=ಜಾಗ್ರದವಸ್ಥೆಯಿಲ್ಲದೆ ಸ್ವಪ್ನಸುಷುಪ್ತಿ ಅವಸ್ಥೆಗಳಲ್ಲಿ ಕಾಲವನ್ನು ಕಳೆಯುವದು, ಇವುಗಳಿಂದ, ನಿಬಧ್ನಾತಿ=ದೈತ್ಯ ಜನರನ್ನು ಬಂಧನಮಾಡುತ್ತದೆ ಚೆನ್ನಾಗಿ ಬಂಧನಮಾಡುತ್ತಾಳೆ. ಎವಂಚ ತಮೋಽಭಿಮಾನಿಯಾದ ದುರ್ಗೆಯೂ ತಮೋಗುಣವೂ ದೈತ್ಯರಿಗೆ ಬಂಧಕಿಯು. ||೮||

ಟೀ—ಸತ್ವಾದಿಗುಣಗಳು ಸುಖಾದಿಗಳನ್ನು ಹೊಂದಿಸಿಯೇ ಬಂಧಕಗಳೆಂಬುವ ಹಿಂದೆ ಹೇಳಿದ ಕ್ರಮೇಯುವನ್ನು ದೃಢೀಕರಿಸುತ್ತಾರೆ –

ಗೀ || ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ |
ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ||೯||

ಅ || ಭಾರತ=ಅರ್ಜುನನೇ, ಸತ್ವಂ=ಸತ್ವಗುಣವೂ ಸತ್ವಗುಣಕ್ಕೆ ಅಭಿಮಾನಿನಿಯಾದ ಶ್ರೀದೇವಿಯೂ ಸುಖೇ=ಸಾತ್ವಿಕ ಸುಖವಿಷಯದಲ್ಲಿ ಸಂಜಯತಿ-ಜೀವರಿಗೆ ಪ್ರವೃತ್ತಿಮಾಡುವಂತೆ, ಮಾಡುತ್ತದೆ ಮಾಡುತ್ತಾಳೆ. ರಜಃ=ರಜೋಗುಣವೂ, ರಜೋಭಿಮಾನಿನಿಯಾದ ಭೂದೇವಿಯೂ, ಕರ್ಮಣಿ ಕರ್ಮ ಮಾಡುವ ವಿಷಯದಲ್ಲಿ, ಸಂಜಯತಿ=ಜೀವರು ಪ್ರವರ್ತಿಸುವಂತೆ, ಮಾಡುತ್ತದೆ, ಮಾಡುತ್ತಾಳೆ. ತಮಸ್ತು=ತಮೋಗುಣವೂ, ತಮೋಽಭಿಮಾನಿನಿಯಾದ ದುರ್ಗಾದೇವಿಯೂ ಜ್ಞಾನಂ=ಜ್ಞಾನವನ್ನಾಗಿ ಇರು...

ಉತ್ತಮ ತತ್ವಜ್ಞಾನಶಕ್ತಿಯನ್ನು, ಆವೃತ್ಯ=ತಡೆದು, (ಬಾರದಿದ್ದಂತೆ ಮಾಡಿ) ಪ್ರಮಾದೇ=ಮಹಾತ್ಮರು ಉಪದೇಶಿಸಿದ ಯೋಗ್ಯವಾದ ಅರ್ಥದಲ್ಲಿ ಮನಸ್ಸು ನಿಲ್ಲದೆ ಅಧರ್ಮ ಬುದ್ಧ್ಯಾದಿರೂಪವಾದ ಅರ್ಥದಲ್ಲಿಯೂ, ಉತ=ಆಲಸ್ಯಾದಿಗಳಲ್ಲಿಯೂ, (ಪ್ರವೃತ್ತಿಯಾಗುವಂತೆ) ಸಂಜಯತಿ=ತಗಲಿಸುತ್ತಾ ಇರುತ್ತದೆ. ಇರುತ್ತಾಳೆ. (ಈ ರೀತಿಯಾಗಿ ಈ ಮೂರು ದೇವಿಯರು ಮೂರು ಪ್ರಕಾರ ಬಂಧಿಸುತ್ತಾ ಇರುತ್ತಾರೆ) ॥೯॥

ಟೀ—ಸತ್ವ ರಜಸ್ತಮೋಗುಣಗಳಿಗೆ ಮೂರಕ್ಕೂ. ಸರ್ವ ಬಂಧಕತ್ವವು ಸಮಾನವಾಗಿರುವಾಗ ಒಬ್ಬೊಬ್ಬರಲ್ಲಿ ಒಂದೊಂದು ಗುಣಕಾರ್ಯವೇ ಕಾಣುವುದು ಹೇಗೆ? ಎಂದರೆ—

ಗೀ ॥ ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।
ರಜಸ್ಸತ್ತ್ವಂ ತಮಶ್ಚೈವ ತಮಸ್ಸತ್ತ್ವಂ ರಜಸ್ತಥಾ ॥ ೧೦ ॥

ಭಾರತ=ಅರ್ಜುನನೇ, ಸತ್ವಂ=ಸತ್ವಗುಣವು (ಶ್ರೀಪರಮಾತ್ಮನ ಇಚ್ಛೆಯಿಂದ ಅತಿಶಯವಾಗಿ) ರಜಃ= ರಜೋಗುಣವನ್ನು, ತಮಶ್ಚ=ತಮೋಗುಣವನ್ನು, ಅಭಿಭೂಯ=ತಿರಸ್ಕರಿಸಿ, ಭವತಿ=ಆಗುತ್ತದೆ (ಅಂದರೆ ರಜಸ್ತಮೋಗುಣಗಳ ಕಾರ್ಯಗಳನ್ನು ಆಗದಿದ್ದಂತೆ ಮಾಡಿ ತನ್ನಿಂದ ಆಗುವಂತಹ ಭಕ್ತಿ ಜ್ಞಾನಾದಿ ಸುಖಗಳನ್ನುಂಟುಮಾಡುವುದರಲ್ಲಿಯೇ ಸಮರ್ಥವಾಗುತ್ತದೆ.) ತಥಾ=ಹಾಗೆಯೇ, ರಜಃ=ರಜೋಗುಣವು, (ಶ್ರೀಪರಮಾತ್ಮನ ಇಚ್ಛೆಯಿಂದ ಹೆಚ್ಚಾಗಿ) ಸತ್ವಂ=ಸತ್ವಗುಣವನ್ನು, ತಮಶ್ಚ=ತಮೋಗುಣವನ್ನು, ತಿರಸ್ಕರಿಸಿ, (ಅವುಗಳ ಕಾರ್ಯವಾಗದಿದ್ದಂತೆ ಮಾಡಿ ಕರ್ಮಾದಿಗಳಲ್ಲಿ ಆಸಕ್ತ್ಯಾದಿರೂಪವಾದ ತನ್ನ ಕಾರ್ಯವನ್ನುಂಟುಮಾಡುವುದರಲ್ಲಿಯೇ ಸಮರ್ಥವಾಗುತ್ತದೆ.) ಹಾಗೆಯೇ, ತಮಃ=ತಮೋಗುಣವು, (ಹೆಚ್ಚಾಗಿ) ಸತ್ವಂ=ಸತ್ವಗುಣವನ್ನು, ರಜಃ=ರಜೋಗುಣವನ್ನು, ತಿರಸ್ಕರಿಸಿ, (ಅಂದರೆ—ಅವುಗಳ ಕಾರ್ಯವಾಗದಿದ್ದಂತೆ ಮಾಡಿ) (ಪ್ರಮಾದ ಆಲಸ್ಯ ನಿದ್ರಾ ಮೊದಲಾದ ತನ್ನ ಕಾರ್ಯವನ್ನುಂಟುಮಾಡುವುದರಲ್ಲಿಯೇ ಸಮರ್ಥವಾಗುತ್ತದೆ. (ಇಲ್ಲಿ ಸತ್ವ ರಜಸ್ತಮೋಗುಣಗಳೇ ಕಾರ್ಯಶಕ್ತಿಗೆ ಪ್ರತಿಬಂಧಕಗಳು. ಅಭಿಮಾನಿದೇವತೆಗಳಿಗೆ ಉದಾಸೀನ್ಯವೇ ಎಂದು ತಿಳಿಯಬೇಕು. ಏವಂಚ ಎಲ್ಲರಿಗೂ ಸತ್ವ ರಜ ಸ್ತಮೋಗುಣಗಳೂ, ಶ್ರೀ, ಭೂ, ದುರ್ಗಾದೇವಿಯರು ಮೂವರೂ ಬಂಧಕರಾದಾಗ್ಯೂ, ಪ್ರಾಬಲ್ಯಾನುಸಾರ ಅವರವರ ಕಾರ್ಯವ್ಯವಹಾರಗಳು ಆಗುತ್ತವೆಂದು ಇಟ್ಟುಕೊಳ್ಳಬೇಕು.) ॥ ೧೦ ॥

ಟೀ—ಮುಂದಿನ ಮೂರು ಶ್ಲೋಕಗಳಿಂದ ಸತ್ವಾದಿಗುಣಗಳ ಅಭಿವೃದ್ಧಿಗೆ ಜ್ಞಾಪಕವನ್ನು ಹೇಳುತ್ತಾರೆ—

ಗೀ ॥ ಸರ್ವದ್ವಾರೇಷು ದೇಹೇಽಸ್ಮಿನ್ಪ್ರಕಾಶ ಉಪಜಾಯತೇ ।
ಜ್ಞಾನಂ ಯದಾ ತದಾ ವಿದ್ಯಾದ್ವಿವೃದ್ಧಂ ಸತ್ತ್ವಮಿತ್ಯುತ ॥ ೧೧ ॥

ಅ ॥ ಅಸ್ಮಿನ್ ದೇಹೇ=ಈ ಶರೀರದಲ್ಲಿ, ಸರ್ವದ್ವಾರೇಷು=ಶ್ರೋತ್ರ ಮೊದಲಾದ ಎಲ್ಲಾ ಇಂದ್ರಿಯಗಳ ದ್ವಾರಗಳಲ್ಲಿಯೂ, ಜ್ಞಾನಂ=ಚೆನ್ನಾಗಿ ಶಬ್ದಾದಿಗಳ ಜ್ಞಾನವೆಂಬುವ ಪ್ರಕಾಶವು, ಉತ=ಸುಖಾದಿಗಳೂ ಕೂಡ, ಯದಾ=ಯಾವಾಗ, ಉಪಜಾಯತೇ=ಹುಟ್ಟುತ್ತವೋ, ತದಾ=ಆಗ, ಸತ್ವಂ=ಸತ್ವಗುಣವು, ವಿವೃದ್ಧಮಿತಿ=ಅಭಿವೃದ್ಧವಾಗಿದೆ ಎಂದು ವಿದ್ಯಾತ್=ತಿಳಿಯಬೇಕು

ಗೀ || ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ |
ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ || ೧೨ ||

ಅ || ಭರತರ್ಷಭ=ಅರ್ಜುನನೇ. ಲೋಭಃ=ಧನಾದಿಗಳಲ್ಲಿ ಅಭಿಲಾಷೆಯಿಂದ ತ್ಯಾಗಮಾಡಬಾರ ದೆಂಬುವ ಇಚ್ಛೆಯು, ಪ್ರವೃತ್ತಿಃ=ಕಾರ್ಯವನ್ನು ಮಾಡುವುದರಲ್ಲಿ ವ್ಯರ್ಥವಾದ ಉದ್ಯೋಗವು. ಕರ್ಮಣಾಂ= ಕಾಮ್ಯಕರ್ಮಗಳ, ಆರಂಭಃ=ಪ್ರಾರಂಭಮಾಡುವಿಕೆಯು. ಅಶಮಃ=ಮನಸ್ಸಿಗೆ ವಿಷಯಗಳಲ್ಲಿ ಅಲಂ ಬುದ್ಧಿಯಿಲ್ಲದಿರುವುದು, (ಬಹು ವಿಷಯಗಳನ್ನು ಭೋಗಿಸಿದರೂ ಸಾಕೆಂಬ ಬುದ್ಧಿಯಿಲ್ಲದಿರುವಿಕೆಯು) ಸ್ಪೃಹಾ=ಸರ್ವಥಾ ಸಿಗಲಿಕ್ಕೆ ಅಸಾಧ್ಯಗಳಾದ ವಸ್ತುಗಳಲ್ಲಿ ಅಭಿಲಾಷೆಯು. ಏತಾನಿ=ಇವುಗಳೆಲ್ಲವೂ. ರಜಸಿ=ರಜೋಗುಣವು, ವಿವೃದ್ಧೇ ಸತಿ=ಅಭಿವೃದ್ಧವಾಗುತ್ತಿರಲು, ಜಾಯಂತೇ=ಹುಟ್ಟುತ್ತವೆ. (ಈ ಕಾರ್ಯಗಳಿಂದ ರಜೋಗುಣವು ಅಭಿವೃದ್ಧಿಯಾಗಿದೆ ಎಂದು ತಿಳಿದುಕೊಳ್ಳಬೇಕು.) || ೧೨ ||

ಗೀ || ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ |
ತಮಸ್ಯೇತಾನಿ ಜಾಯಂತೇ ವಿವೃದ್ಧೇ ಕುರುನಂದನ || ೧೩ ||

ಅ || ಕುರುನಂದನ=ಅರ್ಜುನನೇ, ಅಪ್ರಕಾಶಃ=ಶ್ರೋತ್ರ ಮೊದಲಾದ ಜ್ಞಾನೇಂದ್ರಿಯಗಳಿಂದ ಶಬ್ದ ಮೊದಲಾದ ಗುಣಗಳ ಜ್ಞಾನವು ಹುಟ್ಟದಿರುವುದು, ಅಪ್ರವೃತ್ತಿಶ್ಚ=ಸತ್ಕಾರ್ಯ ಮಾಡುವದರಲ್ಲಿ ಉದ್ಯೋಗವಿಲ್ಲದಿರುವುದು, ಪ್ರಮಾದಃ=ಕಾಲದಲ್ಲಿ ಮಾಡತಕ್ಕ ಕಾರ್ಯಗಳನ್ನು ವಿಚಾರಿಸದೆ ವ್ಯಾಮರ ಣೀತನವು. (ಅಜಾಗ್ರತೆಯು) ಮೋಹಃ=ವಿಪರೀತಜ್ಞಾನವು, ಏತಾನಿ=ಇವುಗಳು. ತಮಸಿ=ತಮೋ ಗುಣವು ವಿವೃದ್ಧೇ=ಅಭಿವೃದ್ಧವಾಗುತ್ತಿರಲು. (ಹೆಚ್ಚುಯಿರಲಾಗಿ) ಜಾಯಂತೇ=ಹುಟ್ಟುತ್ತವೆ. (ಈ ಚಿಹ್ನೆಗಳಿಂದ ತಮೋಗುಣವು ವಿಶೇಷವಾಗಿ ಅಭಿವೃದ್ಧಿಯಾಗಿದೆ, ಎಂದು ತಿಳಿಯಬೇಕು. || ೧೩ ||

ಟೀ—ಸತ್ವ ಮೊದಲಾದ ಗುಣಗಳು ಅಭಿವೃದ್ಧಿಯಾದಾಗ ಮರಣ ಹೊಂದಿದವರಿಗೆ ಆಗತಕ್ಕ ಗತಿ ಭೇದವನ್ನು ಹೇಳುತ್ತಾರೆ—

ಗೀ || ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ |
ತದೋತ್ತಮವಿದಾಂ ಲೋಕಾನಮಲಾನ್ಪ್ರತಿಪದ್ಯತೇ || ೧೪ ||

ಅ || ಯದಾ=ಯಾವಾಗ, ಸತ್ವೇ=ಸತ್ವಗುಣವು, ಪ್ರವೃದ್ಧೇ ತು=ಅಭಿವೃದ್ಧಿಯಾದಾಗ, ದೇಹ ಭೃತ್=ಜೀವನು, ಪ್ರಲಯಂ=ಮರಣವನ್ನು, ಯಾತಿ=ಹೊಂದುತ್ತಾನೋ, (ಸಾಯುತ್ತಾನೋ) ತದಾ=ಆಗ ಉತ್ತಮವಿದಾಂ=ವಿಷ್ಣುತತ್ವಜ್ಞಾನಿಗಳಿಗೆ ಹೊಂದಲು ಯೋಗ್ಯಗಳಾದ, ಅಮಲಾನ್ ನಿರ್ಮಲಗಳಾದ, ಲೋಕಾನ್=ದೇಹಗಳನ್ನು, ಪ್ರತಿಪದ್ಯತೇ=ಹೊಂದುತ್ತಾನೆ (ಅಂದರೆ ಸಾತ್ವಿಕ ಕುಲದಲ್ಲಿ ಹುಟ್ಟುತ್ತಾನೆ. || ೧೪ ||

ಗೀ || ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ |
ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ || ೧೫ ||

ಅ || ರಜಸಿ=ರಜೋಗುಣವು, (ಅಭಿವೃದ್ಧವಾಗುತ್ತಿರಲು,) (ರಜೋಗುಣವು ವೃದ್ಧಿಯಾಗಿದ್ದ ಕಾಲದಲ್ಲಿ) ಪ್ರಲಯಂ=ಮರಣವನ್ನು, ಗತ್ವಾ=ಹೊಂದಿ, ಕರ್ಮಸಂಗಿಷು=ಕಾಮ್ಯಕರ್ಮಗಳನ್ನು ಮಾಡುವವರಲ್ಲಿ, (ಕಾಮ್ಯಕರ್ಮಿಗಳ ಕುಲದಲ್ಲಿ) ಜಾಯತೇ=ಹುಟ್ಟುತ್ತಾನೆ. ತಥಾ=ಹಾಗೆಯೇ, ತಮಸಿ=ತಮೋಗುಣವು, (ಅಭಿವೃದ್ಧವಾಗುತ್ತಿರಲು.) (ತಮೋಗುಣವು ಹೆಚ್ಚಿದ್ದ ಕಾಲದಲ್ಲಿ) ಪ್ರಲೀನಃ=ಮರಣಹೊಂದಿದವನು, ಮೂಢಯೋನಿಷು=ದೈತ್ಯರೇ ಮೊದಲಾದ ಕುಲಗಳಲ್ಲಿ, ಜಾಯತೇ=ಹುಟ್ಟುತ್ತಾನೆ. || ೧೫ ||

ಟೀ—ತಮಸ್ತ್ವಜ್ಞಾನಜಂ ಎಂಬುವುದಕ್ಕೆ ಅಜ್ಞಾನದಿಂದ ಹುಟ್ಟಿದ್ದೆಂಬುವ ಅಪವ್ಯಾಖ್ಯಾನವನ್ನು ನಿರಾಕರಿಸುತ್ತಾರೆ—

ಭಾ || ಅಜ್ಞಾನಂ ಜಾಯತೇ ಯತಸ್ತದಜ್ಞಾನಜಂ | ಪ್ರಮಾದಮೋಹೌ ತಮಸ ಇತಿ ವಾಕ್ಯಶೇಷಾತ್ || ೮—೧೬ ||

ಅ || ಪ್ರಮಾದ ಮೋಹಗಳು ತಮೋಗುಣದಿಂದ ಹುಟ್ಟುತ್ತವೆಂದು ವಾಕ್ಯಶೇಷದಲ್ಲಿ ಅಜ್ಞಾನವು ತಮೋಗುಣದ ಕಾರ್ಯವೆಂದು ಹೇಳಿದ್ದರಿಂದ ಅಜ್ಞಾನಜಂ ಎಂಬುವುದಕ್ಕೆ ಅಜ್ಞಾನವು ಯಾವುದರಿಂದ ಹುಟ್ಟುತ್ತದೋ ಅದು ಅಜ್ಞಾನಜವು ಅಜ್ಞಾನಕ್ಕೆ ಕಾರಣವು ಎಂದರ್ಥವು. || ೮—೧೫ ||

ಟೀ—ಸಾತ್ವಿಕರಾಜಸತಾಮಸರ ಕರ್ಮಗಳಿಗೆ ಫಲವನ್ನು ಹೇಳುತ್ತಾರೆ—

ಗೀ || ಕರ್ಮಣಃ ಸುಕೃತಸ್ಯಾಹುಃ ಸಾತ್ವಿಕಂ ನಿರ್ಮಲಂ ಫಲಂ |
ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಂ || ೧೬ ||

ಅ || ಸುಕೃತಸ್ಯ=ಜ್ಞಾನಿಗಳ ಕುಲದಲ್ಲಿ ಹುಟ್ಟಿದವನಿಂದ ಚೆನ್ನಾಗಿ ಮಾಡಲ್ಪಟ್ಟ, ಕರ್ಮಣಃ=ಯೋಗ್ಯಕರ್ಮಗಳಿಗೆ. ಸಾತ್ವಿಕಂ=ಸತ್ವಗುಣವೇ ಪ್ರಧಾನವಾಗಿ ಉಳ್ಳ, ನಿರ್ಮಲಂ=ದುಃಖಲೇಶವೂ ಇಲ್ಲದ. ಫಲಂ=ಸುಖರೂಪಉತ್ತಮ ಫಲವನ್ನು, ಆಹುಃ=ಹೇಳುತ್ತಾರೆ. ರಜಸಸ್ತು=ರಾಜಸಕರ್ಮಕ್ಕಾದರೋ, ದುಃಖಂ=ದುಃಖಮಿಶ್ರವಾದ ಸುಖವನ್ನು, ಫಲವನ್ನಾಗಿ ಹೇಳುತ್ತಾರೆ. ತಮಸಸ್ತು=ತಾಮಸಕರ್ಮಕ್ಕಾದರೂ ಅಜ್ಞಾನಂ=ಅಜ್ಞಾನವನ್ನು. ಅಜ್ಞಾನಕಾರ್ಯವನ್ನು ಫಲಂ=ಫಲವನ್ನಾಗಿ ಹೇಳುತ್ತಾರೆ || ೧೬ ||

ಟೀ—ನಿರ್ಮಲತ್ವಾದಿರೂಪವಾದ ಫಲವನ್ನು ವಿವರಿಸಿ ಹೇಳುತ್ತಾರೆ—

ಗೀ || ಸತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ |
ಪ್ರಮಾದಮೋಹೌ ತಮಸೋ ಭವತೋಽಜ್ಞಾನಮೇವ ಚ || ೧೭ ||

ಅ || ಸತ್ವಾತ್=ಸತ್ವಗುಣದಿಂದಲೇ. ಜ್ಞಾನಂ=ಪರಾಪರ ತತ್ವವಿಷಯಕ ಜ್ಞಾನವು. ಸಂಜಾಯತೇ=ಹುಟ್ಟುತ್ತದೆ. ರಜಸಃ=ರಜೋಗುಣದಿಂದ. ಲೋಭ ಏವ=ಸ್ವರ್ಗ ಮೊದಲಾದ ವಿಷಯಗಳಲ್ಲಿ ಆಸಕ್ತಿಯೂ, ಸಂಜಾಯತೇ=ಹುಟ್ಟುತ್ತದೆ. ತಮಸಃ=ತಮೋಗುಣದಿಂದ. ಪ್ರಮಾದಮೋಹೌ=ಪ್ರಮಾದವೂ, ಮೂಢಭಾವ ಇವುಗಳೂ, ಭವತಃ=ಆಗುತ್ತವೆ. ಅಜ್ಞಾನಂ ಚ ಅಜ್ಞಾನವೂ ಕೂಡ ಭವತಿ=ಉಂಟಾಗುತ್ತದೆ || ೧೭ ||

ಪೀ — ಸತ್ತ್ವಮೊದಲಾದ ಗುಣಗಳ ದೆಸೆಯಿಂದ ಜ್ಞಾನ ಲೋಭ ಪ್ರಮಾದಾದಿಗಳು ಸಾಕ್ಷಾತ್ತಾಗಿ ಹುಟ್ಟುವುದಾದರೂ ಅವುಗಳು ಸ್ವಭಾವತಃ ಸಾಕ್ಷಾತ್ ಫಲಗಳಾಗದೆ ಇರುವುದರಿಂದ ಸತ್ತ್ವಾದಿ ಗುಣಗಳ ವೃದ್ಧಿಯಿಂದುಂಟಾಗತಕ್ಕ ಫಲಗಳನ್ನು ಹೇಳುತ್ತಾರೆ —

ಗೀ ॥ ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾ ಮಧ್ಯೇ ತಿಷ್ಠಂತಿ ರಾಜಸಾಃ ।
ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛಂತಿ ತಾಮಸಾಃ ॥ ೧೮ ॥

ಅ ॥ ಸತ್ತ್ವಸ್ಥಾಃ = ಸಾತ್ತ್ವಿಕ ಜನರು, ಜ್ಞಾನೇನ = ಜ್ಞಾನದಿಂದ, ಊರ್ಧ್ವಂ = ಜನೋಲೋಕ ಮೊದಲಾದ ಮೇಲಿನ ಉತ್ತಮ ಲೋಕಗಳನ್ನು, ಗಚ್ಛಂತಿ = ಹೊಂದುತ್ತಾರೆ. ರಾಜಸಾಃ = ಕಾಮ್ಯಕರ್ಮಗಳನ್ನು ಮಾಡುವ ಜನರೂ ಮಧ್ಯೇ = ಸ್ವರ್ಗ ಮೊದಲಾದ ಲೋಕಗಳಲ್ಲಿ, ತಿಷ್ಠಂತಿ = ಇರುತ್ತಾರೆ. ಜಘನ್ಯಗುಣವೃತ್ತಿಸ್ಥಾಃ = ಸತ್ತ್ವಗುಣ ರಜೋಗುಣಗಳಿಗಿಂತ ನಿಕೃಷ್ಟವಾದ ತಮೋಗುಣದ ಪರಿಣಾಮವಾದ ಅಜ್ಞಾನ, ಪ್ರಮಾದ ನಿದ್ರಾ ಆಲಸ್ಯಗಳುಳ್ಳ, ತಾಮಸಾಃ = ತಾಮಸಜನರು, ಅಧಃ ಗಚ್ಛಂತಿ = ನರಕವನ್ನು ಹೊಂದುತ್ತಾರೆ. ॥ ೧೮ ॥

ಪೀ — ರಜಸಸ್ತು ಫಲಂ ದುಃಖಂ (ಶ್ಲೋ. ೧೬) ಎಂಬುವಲ್ಲಿನ ದುಃಖಶಬ್ದವು ಕೇವಲ ದುಃಖವಾಚಕವೆಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ —

ಭಾ ॥ (೧) ರಜಸಸ್ತು ಫಲಂ ದುಃಖಮಿತ್ಯಲ್ಪಸುಖಂ ದುಃಖಂ ॥ (೨) ತಥಾ ಹಿ ಶಾರ್ಕರಾಕ್ಷಶಾಖಾಯಾಂ । ರಜಸೋ ಹ್ಯೇವ ಜಾಯತೇ ಮಾತ್ರಯಾ ಸುಖಂ ದುಃಖಂ ತಸ್ಮಾತ್ತಾನ್ಸುಖಿನೋ ದುಃಖಿನ ಇತ್ಯಾಚಕ್ಷತ ಇತಿ ॥ (೩) ಅನ್ಯಥಾ ದುಃಖಸ್ಯಾತಿಕೃಷ್ಟತ್ವಾತ್ । ತಮೋಧಿಕತ್ವಂ ರಜಸೋ ನ ಸ್ಯಾತ್ ॥ ೧೬,೧೭,೧೮ ॥

ಅ ॥ ರಜಸಸ್ತು ಫಲಂ ದುಃಖಂ ಎಂಬುವಲ್ಲಿದ್ದ ದುಃಖಶಬ್ದದಿಂದ ಅಲ್ಪ ಸುಖಮಿಶ್ರಿತವಾದ ದುಃಖವು ಹೇಳಲ್ಪಡುತ್ತದೆ. (೨) (ಅದು ಹೇಗೆಂದರೆ —) ರಜೋಗುಣದಿಂದಲೇ ಅತ್ಯಲ್ಪವಾದ ಸುಖವೂ ಸುಖಕ್ಕಿಂತ ಹೆಚ್ಚು ದುಃಖವೂ ಕೂಡ ಹುಟ್ಟುತ್ತದೆ. ಆದಕಾರಣ ರಾಜಸ ಪುರುಷರನ್ನು ಸುಖಿಗಳನ್ನಾಗಿಯೂ, ದುಃಖವುಳ್ಳವರನ್ನಾಗಿಯೂ ಹೇಳುತ್ತಾರೆ, ಎಂದು ಶಾರ್ಕರಾಕ್ಷ ಶಾಖೆಯಲ್ಲಿ ಹೇಳಿದೆ. (೩) ಸುಖಮಿಶ್ರಿತ ದುಃಖವೆಂಬರ್ಥವನ್ನಂಗೀಕರಿಸದೆ ಕೇವಲ ದುಃಖವೆಂಬರ್ಥವನ್ನಂಗೀಕರಿಸಿದರೆ ದುಃಖವು ತಮಸ್ಸಿನ ಫಲವಾದ ಅಜ್ಞಾನಕ್ಕಿಂತಲೂ ನಿಕೃಷ್ಟವಾಗಿರುವುದರಿಂದ ಕೇವಲ ದುಃಖವೇ ಫಲವಾಗಿರುವ ರಜೋಗುಣಕ್ಕೆ ತಮೋಗುಣಕ್ಕಿಂತ ಆಧಿಕ್ಯ ಹೇಳಿದ್ದು ಕೂಡದೆ ಹೋಗುವುದು. (ಅಂದರೆ — ಮಧ್ಯೇ ತಿಷ್ಠಂತಿ ರಾಜಸಾಃ ಅಧೋ ಗಚ್ಛಂತಿ ತಾಮಸಾಃ ಇತ್ಯಾದಿಗಳನು ಹೇಳಿದ್ದು ಕೂಡದೆ ಹೋಗುವುದು.) ॥ ೧೬-೧೮ ॥

ಪೀ — ಹೀಗೆ ಸತ್ತ್ವ ರಜಸ್ತಮೋಗುಣಗಳನ್ನು ವಿವರಿಸಿ ಅವುಗಳು ಜಗತ್ತಿಗೆ ಬಂಧಕಗಳೆಂದು ಹೇಳಿ ಅವುಗಳಿಂದುಂಟಾಗತಕ್ಕ ಫಲಗಳನ್ನು ಹೇಳಿದರು. ಹೀಗೆಯೇ ಕಾರ್ಯಕಾರಣಕರ್ತೃತ್ವವನ್ನು ... ಎಂಬುವಲ್ಲಿ ಸಂಕ್ಷೇಪವಾಗಿ ಹೇಳಿದ ಕರ್ತೃತ್ವವನ್ನು ವಿವರಿಸಿ ಹೇಳುವಾಗ ಗುಣಗಳೇ ಸರ್ವೋತ್ಕೃಷ್ಟಗಳು. ಅವುಗಳಿಗಿಂತ ಇನ್ನೊಬ್ಬನು ಸರ್ವೋತ್ಕೃಷ್ಟನಿಲ್ಲ, ಎಂಬ ಶಂಕೆಯು ಬರುವುದು. ಅದನ್ನು ಹೋಗಲಾಡಿಸುತ್ತಾರೆ —

ಗೀ ॥ ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।
ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ ೧೯ ॥

ಅ ॥ ದ್ರಷ್ಟಾ=ಜೀವನು, ಯದಾ=ಯಾವಾಗ, ಗುಣೇಭ್ಯಃ=ಸತ್ವಾದಿ ಗುಣಗಳಿಗಿಂತ, ಅನ್ಯಂ= ಇನ್ನೊಂದು, ಕರ್ತಾರಂ=ಪರಿಣಾಮಕಾರಣವಾದ ವಸ್ತುವನ್ನು. ನಾನುಪಶ್ಯತಿ=ನೋಡುವುದಿಲ್ಲವೋ, ಗುಣೇಭ್ಯಶ್ಚ=ಸತ್ವಾದಿ ಗುಣಗಳಿಗಿಂತ, ಪರಂ=ಸರ್ವಸ್ವತಂತ್ರನಾದ ಶ್ರೀಪರಮಾತ್ಮನನ್ನು. ವೇತ್ತಿ= ತಿಳಿಯುತ್ತಾನೋ, ಸಃ=ಅಂತಹ ಜ್ಞಾನಿಯು, ಮದ್ಭಾವಂ=ನನ್ನಲ್ಲಿ ಜ್ಞಾನಾನಂದಾತ್ಮಕವಾದ ಸ್ಥಿತಿಯನ್ನು, ಅಧಿಗಚ್ಛತಿ=ಹೊಂದುತ್ತಾನೆ ಅಥವಾ ಯಾವನು ಗುಣಗಳ ದೆಶೆಯಿಂದ ಇನ್ನೊಬ್ಬ ಸ್ವತಂತ್ರ ಕರ್ತನು ಶ್ರೀಪರಮಾತ್ಮನೆಂದು ಯಾವಾಗ ತಿಳಿಯುತ್ತಾನೋ, ಹಾಗೆ ನೋಡುವವನೇ ಸಾ=ಜ್ಞಾನಿಯಾದ ಪುರುಷನು. (ಇಲ್ಲವಾದರೆ ಪಶುತುಲ್ಯನು.) ಗುಣಗಳಿಗಿಂತ ಶ್ರೀಪರಮಾತ್ಮನು ಭಿನ್ನನೆಂದು ನೋಡುವವನು ಮಾತ್ರ ಪುರುಷನೆಂದಲ್ಲ. ಮತ್ತೆ ಶ್ರೀಪರಮಾತ್ಮನು ಗುಣಗಳಿಂದ ಉತ್ತಮನೆಂದು ತಿಳಿದವನೂ ಪುರುಷನೆನಿಸುವನು. ಏಕೆಂದರೆ—ಹಾಗೆ ತಿಳಿದವನು ಮೋಕ್ಷವನ್ನು ಹೊಂದುತ್ತಾನೆ. ॥ ೧೯ ॥

ಪೀ—ಸುಖದುಃಖಾದಿರೂಪವಾದ ಬಾಧಕ್ಕೆ ಸತ್ವ ರಜಸ್ತಮೋಗುಣಗಳು ಕಾರಣಗಳಾಗಿರುವುದರಿಂದ ಆ ಗುಣಗಳನ್ನು ಅತಿಕ್ರಮಿಸಿದರೇ ಸಂಸಾರಬಂಧವು ನಾಶವಾಗುವುದು. ಇಲ್ಲವಾದರೆ ನಾಶವಾಗಲಾರದೆನ್ನುತ್ತಾರೆ—

ಗೀ ॥ ಗುಣಾನೇತಾನತೀತ್ಯ ತ್ರೀನ್ದೇಹೀ ದೇಹಸಮುದ್ಭವಾನ್ ।
ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ ೨೦ ॥

ಅ ॥ ದೇಹೀ=ಜೀವನು. ದೇಹಸಮುದ್ಭವಾನ್=ಆವಾವ ಗುಣ ಪರಿಣಾಮಗಳಾದ ದೇಹಗಳಲ್ಲಿ ಪ್ರಕಟೀಭೂತಗಳಾದ, ತ್ರೀನ್ ಏತಾನ್ ಗುಣಾನ್=ಈ ಮೂರು ಗುಣಗಳನ್ನು, ಅತೀತ್ಯ=ದಾಟಿ, ಜನ್ಮಮೃತ್ಯುಜರಾದುಃಖೈಃ=ಅತಿಘೋರ ದುಃಖವಿರುವ ಉತ್ಪತ್ತಿ ಮರಣ ಮುದಿತನ ದುಃಖಗಳಿಂದ, ವಿಮುಕ್ತಃ=ಬಿಡಲ್ಪಟ್ಟವನಾಗಿ, ಅಮೃತಂ=ಪರಬ್ರಹ್ಮನನ್ನು, ಅಶ್ನುತೇ=ಹೊಂದುತ್ತಾನೆ. (ಮುಕ್ತನಾಗುತ್ತಾನೆ) ॥ ೨೦ ॥

ಗೀ ॥ ॥ ಅರ್ಜುನ ಉವಾಚ ॥
ಕೈರ್ಲಿಂಗೈಸ್ತ್ರೀನ್ಗುಣಾನೇತಾನತೀತೋ ಭವತಿ ಪ್ರಭೋ ।
ಕಿಮಾಚಾರಃ ಕಥಂ ಚೈತಾಂಸ್ತ್ರೀನ್ಗುಣಾನತಿವರ್ತತೇ ॥ ೨೧ ॥

ಅ ॥ ಅರ್ಜುನಃ=ಅರ್ಜುನನು. ಉವಾಚ=ಪ್ರಶ್ನಿಸುತ್ತಾನೆ. ಪ್ರಭೋ=ಸರ್ವ ಸಮರ್ಥನಾದ ಶ್ರೀಕೃಷ್ಣನೇ, ಏತಾನ್=ಈ ಸರ್ವಬಂಧಕಗಳಾದ, ತ್ರೀನ್ ಗುಣಾನ್=ಸತ್ವ ರಜಸ್ತಮೋ ಮೂರು ಗುಣಗಳನ್ನು, ಅತೀತಃ=ಅತಿಕ್ರಮಿಸಿದ ಪುರುಷನು, ಕೈಃ ಲಿಂಗೈಃ=ಯಾವ ಚಿಹ್ನೆಗಳಿಂದ ಕೂಡಿದವನು ಭವತಿ=ಆಗುತ್ತಾನೆ. (ಗುಣಾತೀತನಿಗೆ ಏನು ಲಕ್ಷಣವು?) (ಗುಣಾತೀತನು) ಕಿಮಾಚಾರಃ=ಎಂತಹ ಆಚಾರವುಳ್ಳವನಾಗುತ್ತಾನೆ. ಕಥಂಚ=ಯಾವ ಉಪಾಯದಿಂದ. ಏತಾನ್ ತ್ರೀನ್ ಗುಣಾನ್=ಈ ಸತ್ವ ರಜಸ್ತಮೋ ಮೂರು ಗುಣಗಳನ್ನು. ಅತಿವರ್ತತೇ=ಅತಿಕ್ರಮಿಸುವನು. (ಗುಣಾತೀತನಾಗುವದಕ್ಕೆ ಉಪಾಯವೇನು?) ॥ ೨೧ ॥

ಪೀ—ನಾನ್ಯಂ ಗುಣೇಭ್ಯಃ ಕರ್ತಾರಂ ಎಂದು ಗುಣಗಳಿಗೇನೇ ಸ್ವತಂತ್ರ ಕರ್ತೃತ್ವವು ಇದ್ದರೆ ಸಾರೂಪ್ಯ ಬರುತ್ತದೆ. ಆದರಿಂದ ಅಲ್ಲ, ಎಂಬೀ ಅಪವ್ಯಾಖ್ಯಾನವನ್ನು ನಿರಾಕರಿಸುತ್ತಾರೆ—

ಭಾ ॥ (೧) ಪರಿಣಾಮಿಕರ್ತಾರಂ ಗುಣೇಭ್ಯೋಽನ್ಯಂ ನ ಪಶ್ಯತಿ ॥ (೨) ಅನ್ಯಥಾ ಯದಾ ಪಶ್ಯಃ ಪಶ್ಯತೇ ರುಕ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮಿತಿ ಶ್ರುತಿವಿರೋಧ ಇತಿ ॥ (೩) ನಾಹಂ ಕರ್ತಾ ನ ಕರ್ತಾ ತ್ವಂ ಕರ್ತಾ ಯಸ್ತು ಸದಾ ಪ್ರಭುರಿತಿ ಮೋಕ್ಷಧರ್ಮೇ ॥ ೧೯,೨೦,೨೧ ॥

ಅ ॥ (೧) ಗುಣಗಳಿಗಿಂತ ಇತರವಸ್ತುವನ್ನು ಪರಿಣಾಮ ಕರ್ತನೆಂದು ನೋಡುವುದಿಲ್ಲ (೨) (ಹಾಗಿಲ್ಲದಿದ್ದರೆ—) ಗುಣಗಳಿಂದ ಬೇರೆ ವಸ್ತುವಿಗೆ ಕರ್ತೃತ್ವವಿಲ್ಲವೆಂದು ಹೇಳುವುದಾದರೆ ಯಾವಾಗ ಜೀವನು ಸ್ವರ್ಣದಂತೆ ವರ್ಣವುಳ್ಳವನೂ, ಸರ್ವ ಜಗತ್ಕರ್ತನೂ, ಸರ್ವ ಸ್ವಾಮಿಯೂ, ಚತುರ್ಮುಖನಿಗೆ ತಂದೆಯೂ ಆದ ಗುಣಪರಿಪೂರ್ಣನಾದ ಶ್ರೀಪರಮಾತ್ಮನನ್ನು ನೋಡುತ್ತಾನೋ, ಇತ್ಯಾದಿ ಶ್ರುತಿಗಳಲ್ಲಿ (ಶ್ರೀಪರಮಾತ್ಮನಿಗೆ ಸರ್ವ ಜಗತ್ಕರ್ತೃತ್ವಾದಿಗಳನ್ನು ಹೇಳಿದ ಕಾರಣ) ಆ ಶ್ರುತಿಗಳಿಂದ ವಿರೋಧವು ಬರುವುದು (೩) ನಾನು ಕರ್ತನಲ್ಲ ನೀನೂ ಕರ್ತನಲ್ಲ. ಯಾವನು ಸದಾ ಸರ್ವರಿಗೂ ಸ್ವಾಮಿಯಾಗಿ ದ್ದಾನೋ ಅವನೇ ಸರ್ವಕರ್ತನು, ಎಂದು ಮೋಕ್ಷಧರ್ಮದಲ್ಲಿ (ಶ್ರೀಪರಮಾತ್ಮನಿಗೆ ಸರ್ವ ಕರ್ತೃತ್ವ ವನ್ನು ಹೇಳಿದ್ದರಿಂದ ಅದರಿಂದ ವಿರೋಧವು ) ॥ ೧೯–೨೧ ॥

೧೪ ॥ ॥ ಶ್ರೀಭಗವಾನುವಾಚ ॥

ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।
ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ ೨೨ ॥

ಅ ॥ ಶ್ರೀಭಗವಾನ್=ಹೀಗೆ ಪ್ರಶ್ನಿಸಲ್ಪಟ್ಟ ಶ್ರೀಕೃಷ್ಣನು. ಉವಾಚ=ಉತ್ತರಕೊಟ್ಟನು. (ಸತ್ತ್ವಾದಿ ಗುಣಗಳು ಸ್ಥೂಲ ಸೂಕ್ಷ್ಮಗಳೆಂದು ಎರಡು ವಿಧಗಳು. ಸ್ಥೂಲಗಳಾದ ಸತ್ತ್ವಾದಿಗುಣಗಳ ದೆಶೆಯಿಂದ ಲೌಕಿಕ ಅರ್ಥವಿಷಯಕಗಳಾದ ಪ್ರಕಾಶ, ಪ್ರವೃತ್ತಿ ಮೋಹಗಳು ಹುಟ್ಟುತ್ತವೆ. ಸೂಕ್ಷ್ಮಗಳಾದ ಸತ್ತ್ವಾದಿ ಗುಣಗಳ ದೆಶೆಯಿಂದ ಪರಮೇಶ್ವರಾದಿ ವಿಷಯಕಗಳಾದ ಪ್ರಕಾಶ ಪ್ರವೃತ್ತಿ ಮೋಹಗಳು ಹುಟ್ಟುತ್ತವೆ.) ಪಾಂಡವ=ಎಲೋ ಅರ್ಜುನನೇ, (ಗುಣಾತೀತನು) ಸಂಪ್ರವೃತ್ತಾನಿ=(ಅವುಗಳಲ್ಲಿ ಸ್ಥೂಲಗಳಾದ ಸತ್ತ್ವಾದಿಗುಣಗಳ ದೆಶೆಯಿಂದ) ತನಗೆ ಬಂದಿರುವ, ಪ್ರಕಾಶಂ ಚ=ಸತ್ತ್ವಗುಣದ ಕಾರ್ಯವಾದ ಲೌಕಿಕ ಅರ್ಥ ವಿಷಯಕವಾದ ಜ್ಞಾನವನ್ನು. ಪ್ರವೃತ್ತಿಂ ಚ—ರಜೋಗುಣದ ಕಾರ್ಯವಾದ ಉದ್ಯೋಗವನ್ನು. ಮೋಹಮೇವ ಚ=ತಮೋಗುಣದಿಂದ ಹುಟ್ಟತಕ್ಕ ಅಜ್ಞಾನ ಮೊದಲಾದುವನ್ನು ಕೂಡ, ಇವುಗಳನ್ನೆಲ್ಲಾ. ನ ದ್ವೇಷ್ಟಿ=ಪ್ರಾಯಶಃ ದ್ವೇಷಮಾಡುವುದಿಲ್ಲ. (ಅಂದರೆ—ಬಂಧಕಗಳಾದ ಗುಣಗಳಿಂದ ಇವುಗಳು ಹುಟ್ಟಿರುತ್ತವೆಂದು ಮನಸ್ಸಿನಲ್ಲಿ ದ್ವೇಷಿಸುವುದಿಲ್ಲ) ನಿವೃತ್ತಾನಿ ಚ=ಹೋದುದನ್ನು. ನ ಕಾಂಕ್ಷತಿ= ಇಚ್ಛಿಸುವುದಿಲ್ಲ. (ಇಂತಹವನೇ ಗುಣಾತೀತನೆಂದು ತಿಳಿಯಬೇಕು.) ಹಾಗೆಯೇ ಸೂಕ್ಷ್ಮಗಳಾದ ಸತ್ತ್ವಾದಿಗುಣಗಳಿಂದುಂಟಾದ ವಿಷ್ಣುವಿಷಯಕ ಪ್ರಕಾಶವನ್ನು ಪ್ರವೃತ್ತಿಯನ್ನು ಇಚ್ಛಿಸುತ್ತಾನೆ ಅದ ವನ್ನು ದ್ವೇಷಿಸುತ್ತಾನೆ. ಅಥವಾ ಇತರ ಪುರುಷರಲ್ಲಿ, ಇರತಕ್ಕ ಪ್ರಕಾಶ ಮೊದಲಾದ ಸ್ವಭಾವಗುಣ ಸಮುದಾಯಗಳಿಂದುಂಟಾದವುಗಳನ್ನು ದ್ವೇಷಿಸುವುದಿಲ್ಲ. ಅವ್ಯಕ್ತವಾದ ಮೋಹ ಮೊದಲಾದ ಅಸ್ವಾಭಾ ವಿಕ ಸಮುದಾಯವನ್ನು ಇಚ್ಛಿಸುವುದಿಲ್ಲ. ಅಂದರೆ ಗುಣಾತೀತನು ಇತರರಿಗೆ ಇಷ್ಟವು ನಿಜವಾ ದಿಂದಿರಲಿ ಅನಿಷ್ಟವು ಬರಬೇಕೆಂದೂ ಇಚ್ಛಿಸುವುದಿಲ್ಲ. ಅಥವಾ ಪಾಂಡವ=ಅರ್ಜುನನೇ, ಪ್ರಕಾಶಂ ಭಗವದ್ವಿಷಯಕ ಜ್ಞಾನವನ್ನು. ಪ್ರವೃತ್ತಿಂ ಚ=ಸೂಕ್ಷ್ಮ ರಜಃ ಕಾರ್ಯಭೂತವಾದ ಪ್ರವೃತ್ತಿಯನ್ನು ನ ದ್ವೇಷ್ಟಿ=ದ್ವೇಷಿಸುವುದಿಲ್ಲ. (ನಿವೃತ್ತವಾದುದನ್ನು) ಕಾಂಕ್ಷತಿ=ಇಚ್ಛಿಸುತ್ತಾನೆ. [illegible]

ಕಾರ್ಯವಾದ ಭಗವದ್ವಿಷಯಕವಾದ ಮೋಹವನ್ನು ಪ್ರವೃತ್ತವಾದುದನ್ನು ದ್ವೇಷಿಸುತ್ತಾನೆ ನಿವೃತ್ತವಾದುದನ್ನು ಇಚ್ಛಿಸುವುದಿಲ್ಲ. ಲೌಕಿಕ ವಿಷಯಕವಾದ ಜ್ಞಾನವನ್ನು ಪ್ರವೃತ್ತಿಯನ್ನು ಮೋಹವನ್ನು ಕೂಡ ಪ್ರಾಯಶಃ ದ್ವೇಷಿಸುವುದೂ ಇಲ್ಲ ॥ ೨೨ ॥

ಹೀ—ಗುಣಾತೀತನ ಆಚಾರಗಳನ್ನು ಹೇಳುತ್ತಾರೆ—

ಗೀ ॥ ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।
ಗುಣಾ ವರ್ತಂತ ಇತ್ಯೇವಂ ಯೋಽವತಿಷ್ಠತಿ ನೇಂಗತೇ ॥ ೨೩ ॥

ಅ ॥ ಯಃ—ಯಾವ ಗುಣಾತೀತನಾದ ಪುರುಷನು, ಉದಾಸೀನವದಾಸೀನಃ=ಉದಾಸೀನನಾದ ಮನುಷ್ಯನಂತೆ ಇರುತ್ತಾನೋ, (ವಸ್ತುತಃ ವೈಷ್ಣವ ಧರ್ಮಗಳನ್ನು ಮಾಡುವವನಾದುದರಿಂದ ಸರ್ವಥಾ ಉದಾಸೀನನಲ್ಲ.) ಗುಣೈಃ=(ವಿಷ್ಣುವಿಗೆ ಪ್ರೀತಿಕರಗಳಾದ ಧರ್ಮಗಳನ್ನು ಮಾಡುವವನಾದುದರಿಂದ) ಸತ್ತ್ವ ಮೊದಲಾದ ಗುಣಗಳಿಂದ ಮತ್ತು ಗುಣ ಕಾರ್ಯಗಳಾದ ಸುಖ ದುಃಖಾದಿಗಳಿಂದ, ನ ವಿಚಾಲ್ಯತೇ=ಆ ನಿಮಿತ್ತದಿಂದ ವಿಕಾರವನ್ನು ಹೊಂದುವುದಿಲ್ಲವೋ ಗುಣಾಃ=ಸತ್ತ್ವಾದಿಗುಣಗಳು ವರ್ತಂತ ಏವ—ಶ್ರೀಪರಮಾತ್ಮನ ಇಚ್ಛೆಯಿಂದಲೇ ಪ್ರವರ್ತಿಸುತ್ತವೆ. (ಸ್ವತಂತ್ರವಾಗಿ ಪ್ರವರ್ತಿಸುವವುಗಳಲ್ಲ) ಇತಿ—ಈ ಪ್ರಕಾರ, ಅವತಿಷ್ಠತಿ—ತಿಳಿದುಕೊಳ್ಳುತ್ತಾನೋ, (ಆತನು) ನೇಂಗತೇ=ವಿಷ್ಣುವಿಗೆ ಪ್ರೀತಿಕರಗಳಾಗದ ಕರ್ಮಗಳನ್ನು ಮಾಡಲಿಕ್ಕೆ ಪ್ರವರ್ತಿಸುವುದಿಲ್ಲ. (ಅಂದರೆ—ಶ್ರೀವಿಷ್ಣುವಿಗೆ ಪ್ರೀತಿಕರಗಳಾದ ಕರ್ಮಗಳನ್ನೇ ಮಾಡುತ್ತಾನೆ. ಅವೈಷ್ಣವ ಕರ್ಮಗಳನ್ನು ಮಾಡುವುದಿಲ್ಲ.) ಇಂತಹ ದು ಗುಣಾತೀತನ ಆಚಾರವು.) ॥ ೨೩ ॥

ಹೀ—ಗುಣಾತೀತನ ಬೇರೆ ಆಚಾರಗಳನ್ನು ಹೇಳುತ್ತಾರೆ—

ಗೀ ॥ ಸಮದುಃಖಸುಖಃ ಸ್ವಸ್ಥಃ ಸಮಲೋಷ್ಟಾಶ್ಮಕಾಂಚನಃ ।
ತುಲ್ಯಪ್ರಿಯಾಪ್ರಿಯೋ ಧೀರಸ್ತುಲ್ಯನಿಂದಾತ್ಮಸಂಸ್ತುತಿಃ ॥ ೨೪ ॥

ಅ ॥ ಸಮದುಃಖ ಸುಖ—ದುಃಖವನ್ನು ಹೇಗೆ ಹೇಯವೆಂದು ತಿಳಿದುಕೊಳ್ಳುತ್ತಾನೋ, ಹಾಗೆಯೇ ವೈಷಯಿಕಸುಖವನ್ನು ಹೇಯವೆಂದು ತಿಳಿದು ಕೊಳ್ಳುವವನು, ಸ್ವಸ್ಥಃ—ಹೆಚ್ಚಾಗಿ ನಿರ್ವಿಕಾರನೂ, ಸಮಲೋಷ್ಟಾಶ್ಮಕಾಂಚನಃ—ಮಣ್ಣಿನ ಹೆಂಟೆ ಕಲ್ಲು ಕಾಂಚನಗಳನ್ನು ಸಮವಾಗಿಯೇ ತಿಳಿದುಕೊಂಡವನು ಅಂದರೆ—ಲೋಷ್ಟಾದಿಗಳು ಹೇಗೆ ಹೇಯಗಳೋ ಹಾಗೆಯೇ ಕಾಂಚನದಲ್ಲಿಯೂ ಹೇಯವೆಂಬುವ ಬುದ್ಧಿಯುಳ್ಳವನು) ತುಲ್ಯಪ್ರಿಯಾಪ್ರಿಯಃ—ಪ್ರಿಯವಸ್ತುವನ್ನು ಅಪ್ರಿಯ ವಸ್ತುಗಳನ್ನು ಸಮವಾಗಿ ತಿಳಿದುಕೊಳ್ಳುವವನು, (ಅಂದರೆ—) ಅಪ್ರಿಯ ವಸ್ತುಗಳು ಹೇಗೆ ಹೇಯಗಳೋ ಹಾಗೆಯೇ ಲೌಕಿಕ ಪ್ರಿಯವಸ್ತುಗಳನ್ನು ಹೇಯವೆಂದು ತಿಳಿದುಕೊಂಡವನು,) ಧೀರಃ—ಧೈರ್ಯವಿರುವವನು ತುಲ್ಯನಿಂದಾತ್ಮಸಂಸ್ತುತಿಃ—ಇತರರು ತನ್ನನ್ನು ನಿಂದಿಸುವಾಗ ಹೇಗೆ ಸಂತೋಷಗೊಳ್ಳುವುದಿಲ್ಲವೋ ಹಾಗೆಯೇ ತನ್ನನ್ನು ಸ್ತುತಿಸುವಾಗಲೂ ಸಂತೋಷಗೊಳ್ಳದಿರುವವನು.

ವಿ ॥ (1) ವಿಷ್ಣು ಭಜನಾದಿಗಳನ್ನು ಮಾಡುವುದರಲ್ಲಿ ದುಃಖವಿದ್ದರೂ ವಿಷ್ಣು ಭಜನಾದಿಗಳನ್ನು ಏಕಪ್ರಕಾರವಾಗಿಯೇ ಮಾಡುತ್ತಿರುವವನು (2) ಹೀಗೆಯೇ ವಿಷ್ಣು ಭಜನಾದಿಗಳ

ಎಂದರೆ— ಮಣ್ಣಿನ ಹೆಂಟೆ ಕಲ್ಲು ಮೊದಲಾದ ಅನಿಷ್ಟ ಪ್ರಾಪ್ತಿಯಾಗುವುದಾದರೂ, ಬಟ್ಟರೆ ಕಾಂಚನ ಮೊದಲಾದುದು ಸಿಗುವುದಾದರೂ, ಶ್ರೀವಿಷ್ಣುವಿನ ಭಜನಾದಿಗಳನ್ನು ಬಿಡದಿರುವವನು. ಅಂತೂ ಲೌಕಿಕ ಪುರುಷಾರ್ಥವು ಸಿಕ್ಕಿದರೂ ಸಿಗದಿದ್ದರೂ ವಿಷ್ಣುಭಜನಾದಿಗಳನ್ನು ಬಿಡಕೂಡದೆಂದು ಭಾವವು. (3) ಶ್ರೀವಿಷ್ಣುವಿನ ಭಜನಾದಿಗಳ ಅನುಷ್ಠಾನಾನನುಷ್ಠಾನಗಳಿಂದ ಇಷ್ಟಾನಿಷ್ಟಗಳು ಪ್ರಾಪ್ತಗಳಾಗುವುದಾದರೂ ವಿಷ್ಣುಭಜನಾದಿಗಳನ್ನು ಸದಾ ಮಾಡಲೇ ಬೇಕು. (4) ಹಾಗೆಯೇ ವಿಷ್ಣುಭಜನಾದ್ಯನುಷ್ಠಾನ ಅನನುಷ್ಠಾನಗಳಿಂದ ತನ್ನ ನಿಂದಾ ಸ್ತುತಿಗಳುಂಟಾಗುವುದಾದರೂ ವಿಷ್ಣುಭಕ್ತ್ಯಾದಿಗಳನ್ನು ಬಿಡದಿರುವವನು. ಏಕೆಂದರೆ— ಆ ಗುಣಾತೀತನು ಧೀರನು. ಅಂದರೆ ಶ್ರೀವಿಷ್ಣುವಿನ ವಿಶೇಷ ಮಾಹಾತ್ಮ್ಯಜ್ಞಾನವುಳ್ಳವನು. ಆದುದರಿಂದಲೇ ಶ್ರೀವಿಷ್ಣುವಿನ ಧರ್ಮದಿಂದ ಕದಲದಿರುವವನು. || ೨೪ ||

ಟೀ — ಪ್ರಕಾಶಂ ಚ ಪ್ರವೃತ್ತಿಂ ಚ (ಶ್ಲೋ. ೨೨.) ಎಂಬುವುದರಿಂದ ಗುಣಾತೀತನಿಗೆ ಸರ್ವಥಾ ಸತ್ವಾದಿಗುಣಗಳ ಕಾರ್ಯಗಳಾದ ಪ್ರಕಾಶಾದಿಗಳಲ್ಲಿ ದ್ವೇಷವೂ ಇಚ್ಛೆಯೂ ಇಲ್ಲ, ಎಂದು ಹೇಳಲ್ಪಡುತ್ತವೆ. ಎಂದು ಪರರು ಹೇಳುವ ಅರ್ಥವು ಅಯುಕ್ತವೆನ್ನುತ್ತಾರೆ—

ಭಾ || (೧) ಪ್ರಾಯೋ ನ ದ್ವೇಷ್ಟಿ ನ ಕಾಂಕ್ಷತಿ || (೨) ತಥಾಹಿ ಸಾಮವೇದೇ ಭಾಲ್ಲವೇಯಶಾಖಾಯಾಂ । ರಜಸ್ತಮಸ್ಸತ್ತ್ವಗುಣಾನ್ಪ್ರವೃತ್ತಾನ್ಪ್ರಾಯೋ ನ ಚ ದ್ವೇಷ್ಟಿ ನ ಚಾಪಿ ಕಾಂಕ್ಷತೇ । ತಥಾಽಪಿ ಸೂಕ್ಷ್ಮಂ ಸತ್ತ್ವಗುಣಂ ಚ ಕಾಂಕ್ಷೇದ್ಧೃದಿ ಪ್ರವಿಷ್ಟಂ ಸುತಮಶ್ಚ ಜಹ್ಯಾದಿತಿ || (೩) ನಹಿ ದೇವಾ ಋಷಯಶ್ಚ ಸತ್ತ್ವಸ್ಥಾ ನ್ಯಪಸತ್ತಮ । ಹೀನಾಃ ಸತ್ತ್ವೇನ ಸೂಕ್ಷ್ಮೇಣ ತತೋ ವೈಕಾರಿಕಾ ಮತಾಃ । ಕಥಂ ವೈಕಾರಿಕೋ ಗಚ್ಛೇತ್ಪುರುಷಃ ಪುರುಷೋತ್ತಮಮಿತಿ ಮೋಕ್ಷಧರ್ಮೇ || (೪) ಸಾತ್ತ್ವಿಕಃ ಪುರುಷವ್ಯಾಘ್ರ ಭವೇನ್ಮೋಕ್ಷಾರ್ಥನಿಶ್ಚಿತ ಇತಿ ಚ || ೨೨,೨೩,೨೫ ||

ಅ || (೧) ಪ್ರಾಯಶಃ ದ್ವೇಷಿಸುವುದಿಲ್ಲ. ಇಚ್ಛಿಸುವುದಿಲ್ಲ. (ಅಂದರೆ— ಸ್ಥೂಲ ಸೂಕ್ಷ್ಮಗಳೆಂದು ಸತ್ವಾದಿಗುಣಗಳು ಎರಡು ವಿಧಗಳು. ಸ್ಥೂಲಗಳ ದೆಸೆಯಿಂದ ಲೌಕಿಕ ಅರ್ಥವಿಷಯಕಗಳಾದ ಪ್ರಕಾಶ ಪ್ರವೃತ್ತಿ ಮೋಹಗಳು ಹುಟ್ಟುತ್ತವೆ. ಸೂಕ್ಷ್ಮಗಳಾದ ಸತ್ವಾದಿಗುಣಗಳ ದೆಸೆಯಿಂದ ಭಗವದಾದಿ ವಿಷಯಕಗಳಾದ ಪ್ರಕಾಶ ಪ್ರವೃತ್ತಿ ಮೋಹಗಳು ಹುಟ್ಟುತ್ತವೆ. ಅದರಲ್ಲಿ ಸ್ಥೂಲಗಳಾದ ಸತ್ವಾದಿ ಗುಣಗಳಲ್ಲಿ ಗುಣಾತೀತನಿಗೆ ಪ್ರಾಯಶಃ ದ್ವೇಷ ಇಚ್ಛೆಗಳು ಇರುವುದಿಲ್ಲ. ಸರ್ವಥಾ ಇಲ್ಲವೆಂದಲ್ಲ. ಏಕೆಂದರೆ— ಗುಣಾತೀತನಾದ ಅಪರೋಕ್ಷ ಜ್ಞಾನಿಗೂ ಪ್ರಾರಬ್ಧಕರ್ಮಾನುಸಾರವಾಗಿ ಕದಾಚಿತ್ ಲೌಕಿಕ ಧರ್ಮ ವಿಷಯಕ ಪ್ರಕಾಶಾದಿಗಳಲ್ಲಿ ಆಕಾಂಕ್ಷಾ ಮೋಹಗಳು ಕಂಡಿವೆ. ಭಗವದ್ವಿಷಯಕಗಳಾದ ಸೂಕ್ಷ್ಮ ಸತ್ವಾದಿ ಕಾರ್ಯಗಳಾದ ಪ್ರಕಾಶ ಪ್ರವೃತ್ತಿ ಮೋಹಗಳಲ್ಲಿ ಆಕಾಂಕ್ಷಾದಿಗಳು ಇವೆ. ಅಂದರೆ— ಸೂಕ್ಷ್ಮ ಸತ್ವಗುಣ ರಜೋಗುಣಕಾರ್ಯಗಳಾದ ಪರಮಾತ್ಮವಿಷಯಕಗಳಾದ ಪ್ರಕಾಶಪ್ರವೃತ್ತಿಗಳಲ್ಲಿ ಆಕಾಂಕ್ಷೆಯೂ ಸೂಕ್ಷ್ಮ ತಮೋಗುಣದ ಕಾರ್ಯವಾದ ಭಗವದ್ವಿಷಯಕವಾದ ಮೋಹದಲ್ಲಿ ದ್ವೇಷವೂ ಕೂಡ ಸರ್ವಥಾ ಇಲ್ಲ ಉಂಟು.) (೨) (ಹೀಗೆ ಏಕೆ ಇಟ್ಟುಕೊಳ್ಳಬೇಕೆಂದರೆ—) ಪ್ರವೃತ್ತಗಳಾದ ರಜೋಗುಣ, ತಮೋಗುಣ, ಸತ್ವಗುಣಗಳನ್ನು ಪ್ರಾಯಶಃ ದ್ವೇಷಿಸುವುದಿಲ್ಲ ಇಚ್ಛಿಸುವುದೂ ಇಲ್ಲ. (ಯದ್ಯಪಿ ನ ದ್ವೇಷ್ಟಿ ಇತ್ಯಾದಿಗಳನ್ನು ಸಾಮಾನ್ಯತಃ ಹೇಳಿದ್ದು.) ಆದಾಗ್ಯೂ (ಅಂದರೆ ಸ್ಥೂಲ ಸತ್ವಾದಿಕಾರ್ಯ ಲೌಕಿಕಾರ್ಥ ವಿಷಯಕ ಪ್ರಕಾಶ ಪ್ರವೃತ್ತಿ ಮೋಹಗಳಲ್ಲಿ ಪ್ರಾಯಶಃ ಆಕಾಂಕ್ಷಾದಿಗಳು [illegible]) ಸೂಕ್ಷ್ಮವಾದ ಸತ್ವಗುಣಕಾರ್ಯವಾದ ಭಗವದ್ವಿಷಯಕ ಪ್ರಕಾಶವನ್ನು (ಸೂಕ್ಷ್ಮ ರಜೋ [illegible]

ಭಗವದ್ವಿಷಯಕವಾದ ಪ್ರವೃತ್ತಿಯನ್ನು) ಇಚ್ಛಿಸುವನು. ಭಗವದ್ವಿಷಯದಲ್ಲಿ ಮೋಹವನ್ನು ಹೊಂದಿ ಕೊಡುವ ಸೂಕ್ಷ್ಮವಾದ ತಮೋಗುಣವೂ. ಅಥವಾ ಸೂಕ್ಷ್ಮತಮೋಗುಣದಿಂದ ಹುಟ್ಟಿದ ಭಗವದ್ವಿಷಯಕ ಮೋಹವು ದುರದೃಷ್ಟ ವಶದಿಂದ ಗುಣಾತೀತನಾದ ಜ್ಞಾನಿಗೆ ಬಂದರೆ (ಅಂದರೆ—ಸೂಕ್ಷ್ಮ ತಮೋಗುಣದಿಂದ ಭಗವದ್ವಿಷಯದಲ್ಲಿ ವಿಪರೀತ ಜ್ಞಾನವು ಉಂಟಾದರೆ–) ಶೀಘ್ರದಲ್ಲಿ ವಿಚಾರಮಾಡಿ ಅದನ್ನು ದ್ವೇಷಿಸುತ್ತಾನೆ, ಎಂದು ಸಾಮವೇದದಲ್ಲಿ ಭಾಲ್ಲವೇಯ ಶಾಖೆಯಲ್ಲಿ ಹೇಳಿದೆ. (೩) (ಗುಣಾತೀತರಾದ ಜ್ಞಾನಿಗಳಿಗೆ ಸೂಕ್ಷ್ಮಸತ್ವಗುಣವಿದೆ. ಎಂಬುವಲ್ಲಿ ಭಾರತವಾಕ್ಯವನ್ನು ಪ್ರಮಾಣವಾಗಿ ಹೇಳುತ್ತಾರೆ ದೇವತೆಗಳೂ ಋಷಿಗಳೂ ಕೂಡ ಸೂಕ್ಷ್ಮವಾದ ಸತ್ವಗುಣದಿಂದ ವಿರಹಿತರೆಂದಾದರೆ–) ಆಗ ಸಾತ್ವಿಕಗುಣವುಳ್ಳವರೆಂದು ಹೇಳಲ್ಪಡದೆ ಇರದೇಕಾಗುವರು. ಮತ್ತೆ ಆಗ ಭೌತಿಕ ದೇಹಾದಿಗಳುಳ್ಳವರೆಂದು ಆಗಬೇಕಾಗುವುದು. ಆದರಿಂದ ಪಾಂಚಭೌತಿಕ ದೇಹವಿರುವವನು ಪುರುಷೋತ್ತಮನಾದ ಶ್ರೀಪರಮಾತ್ಮನನ್ನು ಹೊಂದಿಯಾನು. (ಅಂದರೆ– ಅವರಿಗೆ ಮೋಕ್ಷವು ಆಗದೆ ಹೋಗುವುದು. ಆದಕಾರಣ ಅವರು ಸೂಕ್ಷ್ಮ ಸತ್ವಗುಣವುಳ್ಳವರೇ.) ಎಂದು ಮೋಕ್ಷಧರ್ಮದಲ್ಲಿ ಹೇಳಿದೆ. (೪) ಎಲೋ ರಾಜನೇ ಸೂಕ್ಷ್ಮಸತ್ವಗುಣವುಳ್ಳವನು ಮೋಕ್ಷರೂಪ ಪುರುಷಾರ್ಥದಲ್ಲಿ ನಿಶ್ಚಿತನಾಗುವನು. (ಸ ಸೂಕ್ಷ್ಮಸತ್ವಸಂಯುಕ್ತಃ ಸಂಯುಕ್ತಸ್ತ್ರಿಭಿರಕ್ಷರೈಃ । ಪುರುಷಃ ಪುರುಷಂ ಗಚ್ಛೇನ್ನಿಷ್ಕ್ರಿಯಃ ಪಂಚವಿಂಶಕಃ. ಎಂದು ಸೂಕ್ಷ್ಮಸತ್ವ ಪ್ರಕರಣವಾಗಿರುವುದರಿಂದ ಸಾತ್ವಿಕಃ ಎಂಬುವುದಕ್ಕೆ ಸೂಕ್ಷ್ಮ ಸತ್ವಗುಣವುಳ್ಳವನೆಂದು ಅರ್ಥವು. ॥ ೨೨–೨೪ ॥

## ಗೀ ॥ ಮಾನಾಪಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।
## ಸರ್ವಾರಂಭಪರಿತ್ಯಾಗೀ ಗುಣಾತೀತಃ ಸ ಉಚ್ಯತೇ ॥ ೨೫ ॥

ಅ ॥ ಮಾನಾಪಮಾನಯೋಃ—ಬಹುಮಾನ ಅವಮಾನಗಳು ಪ್ರಾಪ್ತಗಳಾದರೂ, ತುಲ್ಯಃ—ವಿಷ್ಣು ಭಕ್ತ್ಯಾದಿಗಳಲ್ಲಿ ಸಮಾನನೇ. (ಸರ್ವಥಾ ವಿಷ್ಣು ಭಕ್ತ್ಯಾದಿಗಳನ್ನು ಬಿಡದಿರುವವನು.) ಮಿತ್ರಾರಿಪಕ್ಷಯೋಃ—(ವಿಷ್ಣುಭಕ್ತಿ ಕರ್ಮ ಮಾಡುವುದರಲ್ಲಿಯೂ ಮಾಡದಿರುವುದರಲ್ಲಿಯೂ) ಶತ್ರುಗಳ ಪಕ್ಷ ಮಿತ್ರಪಕ್ಷಗಳು ಇದ್ದರೂ, ಉಪಕಾರ ಮಾಡಿದರೂ ಅಪಕಾರ ಮಾಡಿದರೂ ಏನು ಮಾಡಿದರೂ ತುಲ್ಯಃ—ಸಮನು. (ಶ್ರೀವಿಷ್ಣುವಿನಪೂಜಾದಿಗಳ ನಿಮಿತ್ತದಿಂದ ಒಬ್ಬನ ಶತ್ರುತ್ವವು ಬಂದರೂ ಮಿತ್ರತ್ವವು ಬಂದರೂ ವಿಷ್ಣುಪೂಜಾ ಭಕ್ತ್ಯಾದಿಗಳನ್ನು ಮಾಡುತ್ತಲೇ ಇರುವವನು.) ಸರ್ವಾರಂಭಪರಿತ್ಯಾಗೀ—ಯಾವುದೊಂದು ಪ್ರಯೋಜನ ವಿಶೇಷದಿಂದಲೂ ವಿಷ್ಣುವಿಗೆ ಪ್ರೀತಿಕರಗಳಾಗದ ಸಮಸ್ತ ಕರ್ಮಗಳನ್ನು ಆರಂಭಿಸದಿರುವವನು. ಅಥವಾ ಅತೀ ದೀರ್ಘಗಳಾದ ಅಪೈಷ್ಟವ ಕರ್ಮಗಳನ್ನು ತ್ಯಾಗ ಮಾಡಿದವನು. ಸಃ—ಅಂತಹವನು. ಗುಣಾತೀತಃ—ಗುಣಾತೀತನೆಂದು, ಉಚ್ಯತೇ—ಹೇಳಲ್ಪಡುತ್ತಾನೆ. ॥ ೨೫ ॥

ಪೀ—ಸಮದುಃಖಸುಖಃ ಇತ್ಯಾದಿಗಳಿಂದ ಸರ್ವಥಾ ಸುಖಾದಿಗಳಲ್ಲಿ ಸಾಮ್ಯಬುದ್ಧಿಯು ಹೇಳಲ್ಪಡುತ್ತದೆ ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ಭಾ ॥ ತುಲ್ಯತ್ವಾರ್ಥ ಉಕ್ತಃ ಪುರಸ್ತಾತ್ ॥ ೨೫ ॥

ಅ ॥ ತುಲ್ಯತ್ವವನ್ನು ಹೇಳುವ ಶಬ್ದದ ಅರ್ಥವು ಅಂದರೆ ದುಃಖವು ಹೇಗೆ ಹೇಯವೋ ಹಾಗೆಯೇ ಲೌಕಿಕ ಸುಖವನ್ನು ಹೇಯವೆಂದು ತಿಳಿಯುವವನು ಎಂಬೀ ಅರ್ಥವು ಮೊದಲೇ ಪು... ... ಹೇಳಿಯದೆ ...

ಪೀ—ಗುಣಾತೀತನಿಗೆ ಲಕ್ಷಣವನ್ನೂ ಆತನ ಆಚಾರವನ್ನೂ ಹೇಳಿ ಆತನು ಗುಣಗಳನ್ನು ದಾಟು ವುದು ಹೇಗೆ ಎಂಬುವ ಪ್ರಶ್ನೆಗೆ ಉತ್ತರವನ್ನು ಹೇಳುತ್ತಾನೆ.—

**ಗೀ ॥ ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ ॥ ೨೬ ॥**

ಅ ॥ ಯಃ=ಯಾವನು, ಅವ್ಯಭಿಚಾರೇಣ ಭಕ್ತಿಯೋಗೇನ=ಯಾವುದೊಂದೂ ವಿಚ್ಛೇದವಿಲ್ಲ ದಿರುವ (ಅಂದರೆ ನಿತ್ಯದಲ್ಲಿಯೂ) ವಿಷ್ಣುಭಕ್ತಿಯೆಂಬುವ ಉಪಾಯದಿಂದ, ಮಾಂಚ=ನನ್ನನ್ನೂ ಕೂಡ, ಸೇವತೇ=ಸೇವಿಸುತ್ತಾನೋ. ಸಃ=ಆ ಅಧಿಕಾರಿಯು, ಏತಾನ್ ಗುಣಾನ್=ಸತ್ವಾದಿಗುಣಗಳಂ ದಲೂ ಆ ಗುಣಗಳಿಗೆ ಅಭಿಮಾನಿಯರಾದ ಶ್ರೀ ಭೂ ದುರ್ಗಾ ದೇವಿಯರಿಂದಲೂ ಮಾಡಲ್ಪಟ್ಟ ಬಂಧವನ್ನು, ಸಮತೀತ್ಯ=ದಾಟಿ, ಬ್ರಹ್ಮಭೂಯಾಯ=ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯಂತೆ ಆಗುವುದಕ್ಕಾಗಿ. ಕಲ್ಪತೇ=ಸಮರ್ಥನಾಗುತ್ತಾನೆ. (ಅಂದರೆ—ಲಕ್ಷ್ಮೀದೇವಿಯು ಹೇಗೆ ಶ್ರೀಪರಮಾತ್ಮನಿಗೆ ಪ್ರಿಯಳಾಗಿರು ತ್ತಾಳೋ ಹಾಗೆಯೇ ಗುಣಾತೀತನೂ ಕೂಡ ಶ್ರೀವಿಷ್ಣುವಿಗೆ ಯೋಗ್ಯತಾನುಸಾರ ಪ್ರಿಯನಾಗುತ್ತಾನೆ.) ಅಥವಾ ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯನ್ನು ಹೊಂದುವುದಕ್ಕಾಗಿ ಶಕ್ತನಾಗುತ್ತಾನೆ. ॥ ೨೬ ॥

ಪೀ—ಬ್ರಹ್ಮಭೂಯಾಯ ಎಂಬುವುದಕ್ಕೆ ಪರಬ್ರಹ್ಮನಾಗಲಿಕ್ಕೆ ಎಂಬುವ ಅರ್ಥವು ಪ್ರಮಾಣ ವಿರುದ್ಧವೆಂಬುವ ಅಭಿಪ್ರಾಯದಿಂದ ಸರಿಯಾದ ಅರ್ಥವನ್ನು ಹೇಳುತ್ತಾರೆ—

**ಭಾ ॥ (೧) ಬ್ರಹ್ಮವತ್ ಪ್ರಕೃತಿವತ್ ಭಗವತ್ಪ್ರಿಯತ್ವಂ ಬ್ರಹ್ಮಭೂಯಂ । ನತು ತಾವತ್ಪ್ರಿಯ- ತ್ವಂ । ಕಿಂತು ಪ್ರಿಯತ್ವಮಾತ್ರಂ । (೨) ಬದ್ಧೋ ವಾಽಪಿ ತು ಮುಕ್ತೋ ವಾ ನ ರಮಾ- ವತ್ಪ್ರಿಯೋ ಹರೇರಿತಿ ಪಾದ್ಮೇ । ಭೂಯಾಯ ಭಾವಾಯ ॥ ೨೬ ॥**

ಅ ॥ (೧) (ಬ್ರಹ್ಮಣೋ ಹಿ ಪ್ರತಿಷ್ಠಾಽಹಂ ಎಂಬೀ ಉತ್ತರ ವಾಕ್ಯದಲ್ಲಿ ಬ್ರಹ್ಮಶಬ ವಾಚ್ಯನಿಗೆ ನಾನು (ಶ್ರೀಕೃಷ್ಣನು) ಆಶ್ರಯನೆಂದು ಹೇಳಿದ್ದರಿಂದ ಇಲ್ಲಿದ್ದ ಬ್ರಹ್ಮಶಬ್ದದಿಂದ ಪರಬ್ರಹ್ಮನನ್ನು ಇಟ್ಟು ಕೊಳ್ಳಕೂಡದು. ಮತ್ತೆ ಮಮಯೋನಿರ್ಮಹದ್ಬ್ರಹ್ಮ ಎಂಬುವಲ್ಲಿ ಪ್ರಕೃತಳಾದ ಮಹಾ ಲಕ್ಷ್ಮೀ ದೇವಿಯನ್ನೇ ಇಟ್ಟುಕೊಳ್ಳಬೇಕು ಎಂಬ) ಬ್ರಹ್ಮವತ್=ಪ್ರಕೃತಿ ಶಬ್ದವಾಚ್ಯಳಾದ ಮಹಾ ಲಕ್ಷ್ಮೀ ದೇವಿಯಂತೆ ಭೂಯಂ=ಪರಮಾತ್ಮನಿಗೆ ಪ್ರಿಯನಾಗುವಿಕೆಯು ಬ್ರಹ್ಮಭೂಯವು (ಲಕ್ಷ್ಮೀದೇವಿಯು ಎಷ್ಟು ಪರಮಾತ್ಮನಿಗೆ ಪ್ರಿಯಳೋ,) ಅಷ್ಟು ಗುಣಾತೀತನೂ ಪರಮಾತ್ಮನಿಗೆ ಪ್ರಿಯನಲ್ಲ. ಮತ್ತೆ ಯಥಾ ಯೋಗ್ಯವಾಗಿ ಪ್ರೀತಿಪಾತ್ರನಾಗುತ್ತಾನೆ. (೨) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ) ಸಂಸಾರದಲ್ಲಿರುವವನಾಗಲೀ ಮೋಕ್ಷವನ್ನು ಹೊಂದಿದವನಾಗಲೀ ಶ್ರೀ ಲಕ್ಷ್ಮೀದೇವಿಯಂತೆ ಶ್ರೀಪರಮಾ ತ್ಮನಿಗೆ ಪ್ರಿಯನಲ್ಲ. (ಮತ್ತೆ ಯಥಾಯೋಗ್ಯವಾಗಿ ಪ್ರೀತಿಪಾತ್ರನಾಗುತ್ತಾನೆ.) ಎಂದು ಪಾದ್ಮಪುರಾಣ ದಲ್ಲಿ ಹೇಳಿದೆ. (ಇಲ್ಲಿ ಭೂಯಃ ಶಬ್ದಕ್ಕೆ ಪ್ರಿಯತ್ವನೆಂದರ್ಥವಲ್ಲ. ಮತ್ತೆ) ಭೂಯಾಯ ... ಹೊಂದುವುದ ಕ್ಕಾಗಿ (ಏವಂಚ ಲಕ್ಷ್ಮೀದೇವಿಯಂತೆ ಪ್ರಿಯತ್ವವನ್ನು ಹೊಂದುವುದಕ್ಕಾಗಿ ಎಂದರ್ಥವು) ॥ ೨೬ ॥

ಪೀ—ಗುಣಾತೀತನಿಗೆ ಶ್ರೀಪರಮಾತ್ಮನ ಸಾಮ್ರಾಜ್ಯಾದಿಗಳನ್ನೇ ಹೇಳಬೇಕು ಲಕ್ಷ್ಮೀ... ಹೊಂದುತ್ತಾನೆಂದು ಏಕೆ ಹೇಳುವುದು ಎಂದರೆ—

**ಗೀ ॥ ಬ್ರಹ್ಮಣೋ ಹಿ ಪ್ರತಿಷ್ಠಾಽಹಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ ೨೭ ॥**

ಅ ॥ ಅಹಂ ಹಿ=ನಾನೇ, ಬ್ರಹ್ಮಣಃ=ಮಹಾ ಲಕ್ಷ್ಮೀದೇವಿಗೂ, ಅವ್ಯಯಸ್ಯ=ನಾಶವಿಲ್ಲದಿರುವ ಅಮೃತಸ್ಯ ಚ=ಮುಕ್ತವರ್ಗಕ್ಕೂ, ಶಾಶ್ವತಸ್ಯ=ಅವಿನಾಶಿ ಫಲವುಳ್ಳ, ಧರ್ಮಸ್ಯ ಚ=ನಿಷ್ಕಾಮ ಧರ್ಮಕ್ಕೂ, ಏಕಾಂತಿಕಸ್ಯ=ಇದಕ್ಕಿಂತ ಇದು ಉತ್ತಮವೆಂದು ಗಣನೆಮಾಡುವಾಗ ಸುಖ ಒಂದೇ ಅಂಶದಲ್ಲಿ ಪೂರ್ಣವಾಗಿ ಉಳ್ಳ, ಅಂದರೆ ದುಃಖ ಮಿಶ್ರವಾಗದಿರುವ, ಸುಖಸ್ಯ ಚ=ಮೋಕ್ಷಕ್ಕೂ, ಪ್ರತಿಷ್ಠಾ=ಆಧಾರನು. (ಆದಕಾರಣ ನನ್ನಿಂದ ವಿಯೋಗವಿಲ್ಲದಿರುವ ಲಕ್ಷ್ಮೀದೇವಿಯನ್ನು ಹೊಂದಿದವನು ನನ್ನನ್ನೇ ಹೊಂದುತ್ತಾನೆ ಅಂದರೆ ಜೀವನಿಗೆ ಲಕ್ಷ್ಮೀದೇವಿಯು ನನ್ನ (ಶ್ರೀಕೃಷ್ಣನ) ಪ್ರಾಪ್ತಿಯಾಗುವಂತೆ ಮಾಡುವಳು. ಏವಂಚ ಗುಣಾತೀತನು ಲಕ್ಷ್ಮೀದೇವಿಯ ಸಮೀಪಕ್ಕೆ ಹೋಗಿ ಅವಳ ಅನುಗ್ರಹವನ್ನು ಸಂಪಾದಿಸಿ ಆಮೇಲೆ ಶ್ರೀಪರಮಾತ್ಮನನ್ನು ಹೊಂದುತ್ತಾನೆ. ಅಥವಾ ಹಿ=ಯಾವಕಾರಣದಿಂದ. ಅಮೃತಸ್ಯ=ಸರ್ವಥಾ ಮರಣವಿಲ್ಲದಿರುವ, ಅವ್ಯಯಸ್ಯ=ದುಃಖಾದಿರೂಪ ವ್ಯಯವಿಲ್ಲದಿರುವ, ಶಾಶ್ವತಸ್ಯ=ವೃದ್ಧಿಹ್ರಾಸಗಳಿಲ್ಲದಿರುವ, ಧರ್ಮಸ್ಯ=ಮುಕ್ತರಿಗೂ ಧಾರಕಳಾದ, ಬ್ರಹ್ಮಣಃ=ಮಹಾ ಲಕ್ಷ್ಮೀದೇವಿಗೂ ಅಹಂ=ನಾನೇ, ಪ್ರತಿಷ್ಠಾ=ಆಶ್ರಯನೋ, (ಆದುದರಿಂದ) ಅವ್ಯಯಸ್ಯ=ನಾಶವಿಲ್ಲದಿರುವ, ಅಮೃತಸ್ಯ=ಮುಕ್ತವರ್ಗಕ್ಕೂ. ಶಾಶ್ವತಸ್ಯ=ಶಾಶ್ವತ ಫಲವುಳ್ಳ, ಧರ್ಮಸ್ಯ=ಪರೋಕ್ಷ ಜ್ಞಾನವು ಹುಟ್ಟಿದ ಮೇಲೆ ಮಾಡಿದ ಪುಣ್ಯಕ್ಕೂ, ಏಕಾಂತಿಕಸ್ಯ ಸುಖಸ್ಯ ಚ=ಜ್ಞಾನಕರ್ಮಗಳಿಂದ ಅಭಿವ್ಯಕ್ತವಾಗುವ ಆತ್ಯಂತಿಕ ದುಃಖ ನಿವೃತ್ತಿಪೂರ್ವಕ ಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷಕ್ಕೂ, ಪ್ರತಿಷ್ಠಾ=ಆಶ್ರಯನು. ॥ ೨೭ ॥

**ಗೀ ॥ ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಗುಣತ್ರಯವಿಭಾಗಯೋಗೋ ನಾಮ ಚತುರ್ದಶೋಽಧ್ಯಾಯಃ ॥ ೧೪ ॥**

ಅ ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನ ಸಂವಾದದಲ್ಲಿ ಗುಣತ್ರಯವಿಭಾಗಯೋಗವೆಂಬ ಹದಿನಾಲ್ಕನೇ ಅಧ್ಯಾಯವು ಮುಗಿಯಿತು. ॥ ೧೪ ॥

ಟೀ—ಬ್ರಹ್ಮಣೋ ಹಿ ಎಂಬುವುದಕ್ಕೆ ಪರಬ್ರಹ್ಮನಿಗೆ ಎಂದು ಕೆಲವರು ಅರ್ಥ ಹೇಳುವರು. ಬ್ರಹ್ಮಣಃ ಪ್ರತಿಷ್ಠಾಽಹಂ ಬ್ರಹ್ಮನಿಗೆ ನಾನು ಆಶ್ರಯನೆಂದು ಹೇಳಿದ್ದರಿಂದ ಆ ಅರ್ಥವು ಅಯುಕ್ತವೆನ್ನುತ್ತಾರೆ—

**ಭಾ ॥ ಬ್ರಹ್ಮಣೋ ಮಾಯಾಯಾಃ ॥ ೨೭ ॥**

ಅ ॥ ಬ್ರಹ್ಮಣಃ=ಎಂಬುವುದಕ್ಕೆ ಮಹಾಲಕ್ಷ್ಮೀದೇವಿಗೆ ಎಂದರ್ಥವು. ॥

**ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ಚತುರ್ದಶೋಽಧ್ಯಾಯಃ ॥ ೧೪ ॥**

ಅ || ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಶ್ರೀಭಗವದ್ಗೀತಾ ತಾತ್ಪರ್ಯದಲ್ಲಿ ಹದಿನಾಲ್ಕನೇ ಅಧ್ಯಾಯವು ಮುಗಿಯಿತು. || ೧೪ ||

ಟೀ—ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿಸಂಭವಾಃ । ನಿಬಧ್ನಂತಿ (ಶ್ಲೋ. ೫.) ಎಂದು ಉಪಕ್ರಮಿಸಿಕೊಂಡು ತತ್ರ ಸತ್ತ್ವಂ ನಿರ್ಮಲತ್ವಾತ್ ಇತ್ಯಾದಿಗಳಿಂದ ಸತ್ವ ರಜಸ್ತಮೋಗುಣವಿಕಾರವಾದ ಬಂಧಸ್ವರೂಪವನ್ನು ವಿವರಿಸಿ ಹೇಳಿದಾಗ ಆ ಗುಣತ್ರಯಯುಕ್ತ ಬಂಧಕ ಅಜ್ಞಾನಾದಿಗಳಿಗೂ, ಸ್ವರ್ಗಾದಿಲೋಕಗಳ ಪ್ರಾಪ್ತಿಗೂ ಸಾಧ್ವಸಾಧು ಯೋನಿಪ್ರಾಪ್ತಿಗೂ ಸತ್ವ ರಜಸ್ತಮೋಗುಣಗಳು ಕಾರಣಗಳೆಂದು ತಿಳಿಯುತ್ತದೆ. ಆಗ ಗುಣಗಳೇ ಸರ್ವೋತ್ತಮಗಳು. ಗುಣಗಳನ್ನು ಬಿಟ್ಟು ಇನ್ನೊಬ್ಬನು ಸರ್ವೋತ್ತಮನಿಲ್ಲ ಎಂಬುವ ಶಂಕೆಯು ಬರುವುದು. ಆ ಶಂಕೆಯನ್ನು ನಾನ್ಯಂ ಗುಣೇಭ್ಯಃ (ಶ್ಲೋ. ೧೯.) ಎಂಬುವ ಶ್ಲೋಕದಿಂದ ಪರಿಹರಿಸಿದರು. ಇಲ್ಲಿ ಗುಣಗಳಿಗೇನೇ ಕರ್ತೃತ್ವವು, ಶ್ರೀಪರಮಾತ್ಮನಿಗೆ ಕರ್ತೃತ್ವವೇ ಇಲ್ಲ, ಎಂಬುವ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾರೆ—

**ತಾ || (೧) ಏತೇಭ್ಯಃ ಸತ್ತ್ವಾದಿಗುಣೇಭ್ಯೋಽನ್ಯಂ ಕರ್ತಾರಮೀಶಂ ಯದಾ ಪಶ್ಯತಿ ತದ್ವೈವಾಯಂ ನಾ ಪುರುಷಃ । ಅನ್ಯಥಾ ಪಶುಸಮಃ । ನ ಕೇವಲಮನ್ಯತ್ವೇನ ಪಶ್ಯನ್ನಾ । ತಂ ಕರ್ತಾರಂ ವಿಷ್ಣುಂ ಕಿಂತು ಗುಣೇಭ್ಯ ಉತ್ತಮತ್ವೇನ ಚ । ಕಥಂ ಸ ಏವ ನಾ । ಯಸ್ಮಾನ್ಮದ್ಭಾವಂ ಸೋಽಧಿಗಚ್ಛತಿ ॥ (೨) ಮಹಾಲಕ್ಷ್ಮೀರಿತಿ ಪರಾ ಭಾರ್ಯಾ ನಾರಾಯಣಸ್ಯ ಯಾ । ಪ್ರಕೃತಿರ್ನಾಮ ಸಾ ಜ್ಞೇಯಾ ಪ್ರಕರ್ಷೇಣ ಕರೋತಿ ಯತ್ । ತಸ್ಯಾಸ್ತು ತ್ರೀಣಿ ರೂಪಾಣಿ ॥ (೩) ಸತ್ತ್ವಂ ನಾಮ ರಜಸ್ತಮಃ । ಸೃಷ್ಟಿಕಾಲೇ ವಿಭಜ್ಯಂತೇ ಸತ್ತ್ವಂ ಶ್ರೀಃ ಸದ್ಗುಣಪ್ರಭಾ(ವಾ) ॥ (೪) ರಜೋ ರಂಜನಕರ್ತೃತ್ವಾದ್ಭೂಃ ಸಾ ಸೃಷ್ಟಿಕರೀ ಯತಃ । ಯದಾವೇಶಾದಿಯಂ ಪೃಥ್ವೀ ಭೂಮಿರಿತ್ಯೇವ ಕಥ್ಯತೇ ॥ (೫) ಜೀವಾನಾಂ ಗ್ಲಪನಾದ್ದುರ್ಗಾ ತಮ ಇತ್ಯೇವ ಕೀರ್ತಿತಾ ॥ ೧ ॥**

ಅ || (೧) ಶ್ರೀಪರಮಾತ್ಮನನ್ನು ಈ ಸತ್ವಾದಿಗುಣಗಳ ದೆಸೆಯಿಂದ ಭಿನ್ನನೆಂದೂ ಸರ್ವಜಗತ್ಕರ್ತನೆಂದೂ ಯಾವಾಗ ನೋಡುತ್ತಾನೋ, ಆವಾಗಲೇ ಇವನು, ನಾ=ಜ್ಞಾನಿಯಾದ ಪುರುಷನು. ಇಲ್ಲವಾದರೆ ಪಶುವಿಗೆ ಸಮಾನನು. ಸರ್ವಜಗತ್ಕರ್ತನಾದ ಶ್ರೀಪರಮಾತ್ಮನನ್ನು ಕೇವಲ ಗುಣಗಳ ದೆಸೆಯಿಂದ ಭಿನ್ನನೆಂದು ತಿಳಿದವನು ಮಾತ್ರ ಪುರುಷನೆಂದು ಅಲ್ಲ. ಮತ್ತೆ ಸರ್ವ ಜಗತ್ಕರ್ತನಾದ ಶ್ರೀವಿಷ್ಣುವನ್ನು ಗುಣಗಳ ದೆಸೆಯಿಂದ ಉತ್ತಮನನ್ನಾಗಿಯೂ ತಿಳಿದವನು ಜ್ಞಾನಿಯಾದ ಪುರುಷನು. ಅವನೇ ಪುರುಷನೆನ್ನಿಸುವುದು ಹೇಗೆ? ಎಂದರೆ—ಯಾವ ಕಾರಣ ದೆಸೆಯಿಂದ ಹಾಗೆ ತಿಳಿದವನೇ ನನ್ನ ಜ್ಞಾನಾನಂದಾದಿರೂಪವಾದ ಸ್ಥಿತಿಯನ್ನು (ಅಂದರೆ ಮೋಕ್ಷವನ್ನು) ಹೊಂದುತ್ತಾನೋ. ಆದಕಾರಣ ಅವನು ಜ್ಞಾನಿಯಾದ ಪುರುಷನು. (೨) (ಮಮ ಯೋನಿಃ (ಶ್ಲೋ. ೩.) ಇತ್ಯಾದಿಗಳ ಅರ್ಥವನ್ನು ಹೇಳುತ್ತಾರೆ) ಶ್ರೀಮನ್ನಾರಾಯಣನ ಪತ್ನಿಯಾದ ಮಹಾ ಲಕ್ಷ್ಮೀದೇವಿಯು ಜಾಂಬವತೀ ಮೊದಲಾದ ಪತ್ನಿಯರಿಂದ ಉತ್ತಮಳು. ಅವಳು ಚೆನ್ನಾಗಿ ಸೃಷ್ಟಿಸುವವಳಾದುದರಿಂದ ಪ್ರಕೃತಿ ಎನಿಸುತ್ತಾಳೆ. ಮಹಾಲಕ್ಷ್ಮೀದೇವಿಯೆಂದು ಪ್ರಸಿದ್ಧವಾದ ಮೂಲರೂಪದಿಂದ ಸೃಷ್ಟಿಕಾಲದಲ್ಲಿ ಪ್ರತ್ಯಕ್ಷಿಯಾದ [illegible] ರೂಪಗಳಾದ ಸತ್ವ ರಜಃ ತಮಃ ಎಂಬೀ ಮೂರು ರೂಪಗಳು ವಿಭಕ್ತಗಳಾಗುತ್ತವೆ (೩) ಶ್ರೀದೇವಿಯು

ಸದ್ಗುಣಗಳುಳ್ಳವಳಾದುದರಿಂದ ಸತ್ ಎಂದೂ ತ್ವಿಷ ದೀಪ್ತೌ ಎಂಬೀ ಧಾತು ವ್ಯಾಖ್ಯಾನದಿಂದ ಪ್ರಭಾ (ಕಾಂತಿ) ರೂಪಳಾದುದರಿಂದ ತ್ವಂ ಎಂದೂ ಅಥವಾ ಸದ್ಗುಣಗಳನ್ನು ಕೊಡುವವಳಾದುದರಿಂದ ಸತ್ವಂ ಎಂದೂ ಅನಿಸುತ್ತಾಳೆ. (೪) ಭೂದೇವಿಯು ಜಗತ್ಸೃಷ್ಟಿಯನ್ನು ಮಾಡುತ್ತಾ ಪ್ರಕಾಶವನ್ನು ಮಾಡುವುದರಿಂದ ರಜಃ ಎನಿಸುತ್ತಾಳೆ. (ಭೂದೇವಿಯು ಮಾಡಿದ ಸೃಷ್ಟಿಯಿಂದ ಮೊದಲು ಅವ್ಯಕ್ತವಾದುದಕ್ಕೆ ಪ್ರಕಾಶವುಂಟಾಗುತ್ತದೆ. ಹೀಗೆ ಭೂಶಬ್ದದಿಂದ ಪ್ರಸಿದ್ಧವಾದ ಪಂಚಭೂತಗಳಿಂದ ಅಪರವಾದ ಪೃಥಿವೀ ದೇವತೆಯಾದ ಧರಾದೇವಿಯನ್ನು ಇಟ್ಟುಕೊಳ್ಳುವುದೋ ಎಂದರೆ—) ಲಕ್ಷ್ಮೀರೂಪಳಾದ ಭೂದೇವಿಯ ಆವೇಶದಿಂದ ಈ ಪ್ರಸಿದ್ಧವಾದ ಪೃಥಿವಿಗೆ ಅಭಿಮಾನಿನಿಯಾದ ಧರಾದೇವಿಯೂ ಕೂಡ ಅಮುಖ್ಯವಾಗಿ ಭೂಮಿಯೆಂದು ಹೇಳಲ್ಪಡುತ್ತಾಳೆ. ಆ ಲಕ್ಷ್ಮೀರೂಪಳಾದ ಭೂದೇವಿಯೇ ಮುಖ್ಯ ವೃತ್ತಿಯಿಂದಲೇ ಭೂಮಿಯೆನಿಸುತ್ತಾಳೆ. ಜೀವರಿಗೆ ಸಂಸಾರವನ್ನು ಹೊಂದಿಸಿಕೊಟ್ಟು ದುಃಖಪಡಿಸುವುದರಿಂದ ದುರ್ಗಾದೇವಿಯು ತಮಃ ಎನಿಸುತ್ತಾಳೆ. ॥ ೧ ॥

ತಾ ॥ (೧) ಏತಾಭಿಸ್ತ್ರಿಸೃಭಿರ್ಜೀವಾಃ ಸರ್ವೇ ಬದ್ಧಾ ಅಮುಕ್ತಿಗಾಃ ॥ (೨) ಸರ್ವಾನ್ಬಧ್ನಂತಿ ಸರ್ವಾಶ್ಚ ತಥಾಽಪಿ ತು ವಿಶೇಷತಃ । ಶ್ರೀರ್ದೇವಬಂಧಿ(ಧ)ಕಾ ನೄಣಾಂ ಭೂರ್ದೈತ್ಯಾನಾಂ ತ(ನಾಮ)ಥಾಪರಾ ॥ (೩) ಏತಾಭ್ಯೋಽನ್ಯಂ ಪರಂ ಚೈವ ವಿಷ್ಣುಂ ಜ್ಞಾತ್ವಾ ವಿಮುಚ್ಯತೇ ॥ (೪) ಸಾಮರ್ಥ್ಯಾತಿಶಯಾದಾಸಾಂ ನೈತಾಭ್ಯೋ ವಿದ್ಯತೇ ಪರಃ । ಇತಿ ಯಾವದ್ವಿಜಾನಾತಿ ತಾವತ್ತಂ ಪಶುಂ ವಿದುಃ । ತಸ್ಮಾದಾಭ್ಯೋಽಧಿಕಗುಣೋ ವಿಷ್ಣುರ್ಜ್ಞೇಯಃ ಸದೈವ ಚೇತಿ ಮಹಾವಿಷ್ಣುಪುರಾಣೇ ॥ ೨ ॥

•

ಅ ॥ (೧) ಮೋಕ್ಷವನ್ನು ಹೊಂದದಿರುವ ಎಲ್ಲಾ ಜೀವರೂ ಈ ಸತ್ವರಜಸ್ತಮೋಗುಣಗಳಿಗೆ ಅಭಿಮಾನಿಯರಾದ ಶ್ರೀ ಭೂ ದುರ್ಗಾದೇವಿಯರಿಂದ ಅಭಿಮನ್ಯಮಾನಗಳಾದ ಸತ್ವಾದಿಗುಣಗಳಿಂದ ಬದ್ಧರಾಗಿರುತ್ತಾರೆ. (ಅಮುಕ್ತಿಗಾಃ ಎಂಬುದರಿಂದ ದೇಹೇ ದೇಹಿನಂ (ಶ್ಲೋ. ೫.) ಎಂಬುದರ ಅರ್ಥವು ಉಕ್ತವಾಯಿತು.) (೨) (ಯಾರು ಯಾರನ್ನು ಬಂಧಿಸುವವಳೆಂದರೆ) ಶ್ರೀ ಭೂ ದುರ್ಗಾದೇವಿಯರೆಲ್ಲರೂ ಎಲ್ಲರನ್ನೂ ಬಂಧಿಸುತ್ತಾರೆ. ಆದರೂ ಶ್ರೀದೇವಿಯು ದೇವತೆಗಳನ್ನು ಬಂಧಿಸುವವಳು. ಭೂದೇವಿಯು ಮನುಷ್ಯರನ್ನು ಬಂಧಿಸುವವಳು. ದುರ್ಗಾದೇವಿಯು ದೈತ್ಯರನ್ನು ಬಂಧಿಸುವವಳು. (ಇದರಿಂದ ತತ್ರ ಸತ್ವಂ (ಶ್ಲೋ. ೬.) ಇತ್ಯಾದಿಗಳ ಅಭಿಪ್ರಾಯವು ಉಕ್ತವಾಯಿತು.) (೩) (ಹೀಗೆ ಶ್ರೀ ಭೂ ದುರ್ಗಾದೇವಿಯರು ಸರ್ವಬಂಧಕರಾದುದರಿಂದ ಅವರಿಗೆ ಅತಿಸಾಮರ್ಥ್ಯವಿದ್ದ ಪ್ರಯುಕ್ತ ಅವರನ್ನು ಸರ್ವೋತ್ತಮರೆಂದು ತಿಳಿಯಕೂಡದೆನ್ನುತ್ತಾರೆ—) ಈ ಶ್ರೀ ಭೂ ದುರ್ಗಾದೇವಿಯರಿಂದ ಭಿನ್ನನೇ ಆದ ಶ್ರೀ ವಿಷ್ಣುವನ್ನೇ ಸರ್ವೋತ್ತಮನನ್ನಾಗಿಯೇ ತಿಳಿದೇ ಮುಕ್ತನಾಗುತ್ತಾನೆ. (೪) ಈ ಶ್ರೀ ಭೂ ದುರ್ಗಾದೇವಿಯರಿಗೆ ಹೆಚ್ಚು ಸಾಮರ್ಥ್ಯವಿದ್ದುದರಿಂದ ಇವರಿಗಿಂತ ಇನ್ನೊಬ್ಬನು ಸರ್ವೋತ್ತಮನಿಲ್ಲವೆಂದು ತಿಳಿದರೆ ಅವನನ್ನು ಪಶುವನ್ನಾಗಿ ತಿಳಿಯುತ್ತಾರೆ. (ಅಂದರೆ-ಶ್ರೀವಿಷ್ಣುವನ್ನು ಸರ್ವೋತ್ತಮನೆಂದು ತಿಳಿದವನೇ ಮುಕ್ತನಾಗುವ ಕಾರಣ ಅವನೇ ಜ್ಞಾನಿಯಾದ ಪುರುಷನು. ಆದಕಾರಣ ಶ್ರೀ ಭೂ ದುರ್ಗಾದೇವಿಯರಿಗಿಂತ ಇನ್ನೊಬ್ಬನು ಸರ್ವೋತ್ತಮನಿಲ್ಲವೆಂದು ತಿಳಿದವನು ಪಶುವು.) ಆದುದರಿಂದ ಈ ಶ್ರೀ ಭೂ ದುರ್ಗಾದೇವಿಯರಿಗಿಂತ ಶ್ರೀವಿಷ್ಣುವು ಸದಾ ಅತ್ಯಧಿಕ ಗುಣಗಳುಳ್ಳವನೆಂದೇ ತಿಳಿಯಬೇಕು, ಎಂದು ಮಹಾವಿಷ್ಣುಪುರಾಣದಲ್ಲಿದೆ ॥ ೨ ॥

ಟೀ—ರಜಸಸ್ತು ಫಲಂ ದುಃಖಂ (ಶ್ಲೋ. ೧೬) ಎಂಬುವಲ್ಲಿ ದುಃಖಶಬ್ದವು ಕೇವಲ ದುಃಖಾ[illegible]ವು ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ಪ್ರ। (೧) ರಜಸಸ್ತು ಫಲಂ ದುಃಖಮಿತ್ಯತ್ರ ದುಃಖಮಿತಿ ದುಃಖಮಿಶ್ರಂ ಸುಖಂ। ದುಃಖಂ ದುರಿತಿ ಸಂಪ್ರೋಕ್ತಂ ಖಂ ನಾಮ ಸುಖಮುಚ್ಯತ ಇತಿ ಶಬ್ದನಿರ್ಣಯೇ ॥ (೨) ಕರ್ಮಣೋ ರಾಜಸಸ್ಯೋಕ್ತಂ ದುಃಖಮಿಶ್ರಂ ಸುಖಂ ಫಲಂ। ಅಜ್ಞಾನದಂ ತಾಮಸಸ್ಯ ನಿತ್ಯದುಃಖಂ ಫಲಂ ವಿದುರಿತಿ ಸ್ಕಾಂದೇ॥ (೩) ಲೋಕಸ್ಥಿತಾನ್ಪ್ರಕಾಶಾದೀನ್ ಪ್ರಾಯೋ ನ ದ್ವೇಷ್ಟಿ ನೇಚ್ಛತಿ ॥ (೪) ಸ್ವಯಂಪ್ರಕಾಶೀ ಮೋಹೋಽಜ್ಞಸ್ತಥಾಪಿ ಪುನರಿಚ್ಛತಿ। ವಿಷ್ಣೌ ಪ್ರಕಾಶಂ ತಂ ಚಾಪಿ (ಚೈವ) ನಿತ್ಯಭಕ್ತ್ಯಾಭಿಸೇವತೇ ॥ ೩ ॥

ಅ। ರಜಸಸ್ತು ಫಲಂ ದುಃಖಂ ಎಂಬುವಲ್ಲಿದ್ದ ದುಃಖ ಶಬ್ದದಿಂದ ದುಃಖಮಿಶ್ರವಾದ ಸುಖವನ್ನು [illegible]ತಿಳಿದುಕೊಳ್ಳಬೇಕು. (ಈ ಅರ್ಥವು ಹೇಗೆ ಸಿಗುವುದೆಂದರೆ—) ದುಃ ಎಂದರೆ ದುಃಖವು ಖಂ ಎಂದರೆ ಸುಖವು. (ಎವಾಗೆ ದುಃಖಂ ಎಂದರೆ ದುಃಖಮಿಶ್ರ ಸುಖವು) ಎಂದು ಶಬ್ದನಿರ್ಣಯದಲ್ಲಿದೆ (೨) [illegible]ರಜೋಗುಣಕ್ಕೆ ದುಃಖಮಿಶ್ರ ಸುಖವು ಫಲವೆಂಬುವಲ್ಲಿ ಸ್ಮೃತಿಪ್ರಮಾಣವಿದ್ದುದರಿಂದ ಇಲ್ಲಿದ್ದ ದುಃಖ[illegible]ವು ಕೇವಲ ದುಃಖವಾಚಕವಾಗುವುದಿಲ್ಲವೆನುತ್ತಾರೆ) ರಾಜಸಕರ್ಮಕ್ಕೆ ದುಃಖಮಿಶ್ರವಾದ ಸುಖವು [illegible]ವ ತಾಮಸಕರ್ಮಕ್ಕೆ ಅಜ್ಞಾನದಿಂದುಂಟಾದ ನಿತ್ಯ ದುಃಖವು ಫಲವು. ಎಂದು ತಿಳಿಯುತ್ತಾರೆ [illegible]ಗೆ ಸ್ಕಾಂದಪುರಾಣದಲ್ಲಿ ಹೇಳಿದೆ (ಇದರಿಂದ ಅಜ್ಞಾನಂ ತಮಸಃ ಫಲಂ ಎಂಬೀ ೧೬ನೇ ಶ್ಲೋಕದ [illegible]ವ್ಯಾಖ್ಯಾತವಾಯಿತು) (೩) (ಸತ್ತ್ವಾದಿಗುಣಗಳನ್ನು ದಾಟುವ ಉಪಾಯಾದಿಗಳು ಯಾವುವು ಎಂಬುವ [illegible]ಶ್ನೆಗೆ ಪರಿಹಾರವನ್ನು ಪ್ರಕಾಶಂ ಚ (ಶ್ಲೋ. ೨೨) ಎಂಬುವ ಶ್ಲೋಕದಿಂದ ಹೇಳುತ್ತಾರೆ. [illegible] [illegible]ಲ್ಲಿ ಪ್ರಕಾಶವನ್ನು ಇಚ್ಛಿಸುವುದಿಲ್ಲ. ತನ್ನಲ್ಲಿದ್ದ ಮೋಹವನ್ನು ದ್ವೇಷಿಸುವುದಿಲ್ಲ. ಹಾಗೆಯೇ ಸಮ ದುಃಖಸುಖಃ (ಶ್ಲೋ. ೨೪) ಇತ್ಯಾದಿಗಳಲ್ಲಿನ ದುಃಖಾದಿಗಳ ಸಾಮ್ಯವೆಂದರೆ ಸ್ವ್ಯ[illegible]ಹಾದಿಗಳು ಇ[illegible] [illegible]ವು ಮಾತ್ರ. ಹಾಗೆಯೇ ಸರ್ವಾರಂಭಪರಿತ್ಯಾಗೀ (ಶ್ಲೋ. ೨೫) ಎಂಬುವುದಕ್ಕೆ ಎಲ್ಲಾ [illegible] [illegible]ಲ್ಲಿಯೂ ಔದಾಸೀನ್ಯವು. ಎಂಬೀ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ [illegible] [illegible]ದೀದ ಅದರ ಅರ್ಥವನ್ನು ಹೇಳುತ್ತಾರೆ) ಗುಣಾತೀತನು ಬೇರೆ ಪುರುಷನಲ್ಲಿರತಕ್ಕ ಸೂ[illegible] ಸತ್ತ್ವಗು[illegible] [illegible]ರಜೋಗುಣಗಳಿಂದುಂಟಾದ ಪ್ರಶಸ್ತ ಪ್ರಕಾಶ ಪ್ರವೃತ್ತಿಗಳನ್ನು ಪ್ರಾಯಶಃ ದ್ವೇಷಿಸುವುದಿಲ್ಲ (ಪಾ[illegible] [illegible]ವರ್ಣನುಸಾರ ಕದಾಚಿತ್ ಅನ್ಯಗಳಲ್ಲಿ [illegible]ವೂ ಬರಬಹುದು) ಪುರುಷಾಂತರದಲ್ಲಿರದ, [illegible] [illegible]ಪ್ರಕಾಶ ಪ್ರವೃತ್ತಿ ಮೋಹಗಳು ಸ್ಥೂಲಸತ್ತ್ವಾದಿಗುಣಗಳಿಂದುಂಟಾದವುಗಳು, [illegible] [illegible]ಗಳನ್ನು ಸೂಕ್ಷ್ಮತಮೋಗುಣದಿಂದ [illegible]ಟ್ಟಿದ [illegible]ಸಾಧ್ಯವಾದ ಭಗವ[illegible] [illegible] ಪ್ರಾಯಶಃ ಇಚ್ಛಿಸುವುದಿಲ್ಲ. (ಪಾ[illegible] [illegible]ನುಸಾರ [illegible] [illegible] [illegible]ದು) (೪) (ಗುಣಾತೀತನು ಭಗವದ್ವಿಷಯದಲ್ಲಿ [illegible] ರಜೋಗುಣ[illegible] [illegible]ಪ್ರಕಾಶಪ್ರವೃತ್ತಿಗಳನ್ನು [illegible] [illegible] [illegible] [illegible]ವ್ಯಾದಿಗಳು ಇಲ್ಲವೆಂದು ಏಕೆ [illegible]—) [illegible] [illegible] [illegible]ದಿಂದುಂಟಾದ ಭಗವದ್ವಿಷಯಕ ಪ್ರ[illegible] [illegible] [illegible] [illegible] [illegible]ತ್ಯ ಲೋಕವಿಷಯಕ [illegible] [illegible] [illegible]

ಪರಮಾತ್ಮನನ್ನು ನಿತ್ಯದಲ್ಲಿಯೂ ಮಹಾ ಭಕ್ತಿಯಿಂದ ಸೇವಿಸುತ್ತಾ ಇರುತ್ತಾನೆ (ತಂ ಚಾಪಿ (ಶ್ಲೋ ೩) ಎಂಬುವುದರಿಂದ ಮಾಂ ಚ ಯೋಽವ್ಯಭಿಚಾರೇಣ (೨೬) ಶ್ಲೋಕವು ವ್ಯಾಖ್ಯಾತವಾಯಿತು.) ॥ ೩ ॥

ಟೀ – ಸಮದುಃಖಸುಖಃ (ಶ್ಲೋ. ೨೪.) ಎಂಬುದರ ಅಭಿಪ್ರಾಯವನ್ನು ಹೇಳುತ್ತಾರೆ–

ತಾ ॥ (೧) ಸುಖದುಃಖಾದಿಭಾವೇಽಪಿ ವಿಷ್ಣುಭಕ್ತೌ ಸಮಃ ಸದಾ । ಅರ್ಥಾರ್ಥಂ ವಾ ಪ್ರಿಯಾರ್ಥಂ ವಾ ನಿಂದಾದೀನಾಂ ಭಯಾದಪಿ । ನ ವಿಷ್ಣುಭಕ್ತಿಹ್ರಾಸೋಽಸ್ಯ ಕಿಂತು ಸಾಮ್ಯಮಥೋನ್ನತಿಃ ॥ (೨) ಅನ್ಯೈಷ್ಣವಾರಂಭವರ್ಜೀ ವಿಷ್ಣುಂ ಯಾತಿ ನ ಸಂಶಯ ಇತಿ ಚ ॥ (೩) ಉದಾಸೀನವದಿತ್ಯುಕ್ತೇಶ್ಚ ನ ಕೇವಲೋದಾಸೀನತ್ವಂ । ನೇಂಗತ ಇತ್ಯುದಾಸೀನ(ಪ್ರ)ವೃತ್ತಿನಿಷೇಧಃ । (೪) ಸರ್ವಾರಂಭಪರಿತ್ಯಾಗೀತಿ ವಿಶೇಷಪ್ರಯೋಜನಾಪೇಕ್ಷಯಾಽಪಿ ನಾನ್ಯೈಷ್ಣವಾರಂಭ ಇತಿ ॥ (೫) ಇಂಗನಂ ಕ್ಷಣಿಕಂ ಕರ್ಮ ದೀರ್ಘಮಾರಂಭ ಉಚ್ಯತ ಇತಿ ಶಬ್ದನಿರ್ಣಯೇ ॥ ೪ ॥

ಅ ॥ (೧) ವಿಷ್ಣುಭಕ್ತಿಯನ್ನು ಬಿಟ್ಟರೆ ಸುಖವು ಲಭಿಸುವುದಾದರೂ, ವಿಷ್ಣುಭಕ್ತಿಯನ್ನು ಮಾಡಿದರೆ ದುಃಖವುಂಟಾಗುವುದಾದರೂ ವಿಷ್ಣುವಿನಲ್ಲಿ ಭಕ್ತಿಯನ್ನು ಬಿಟ್ಟರೆ ಬಂಗಾರು ಮೊದಲಾದ ಅರ್ಥವು ಪತ್ನೀ ಮೊದಲಾದ ಪ್ರಿಯವಸ್ತುವೂ, ಇವನು ಶ್ರೇಷ್ಠನೆಂಬುವ ಸ್ತುತಿಯೂ, ಮಾನವೂ, ಮಿತ್ರರು ಮಾತ ಕಳ್ಳಸ್ನೇಹವೂ, ಇವುಗಳು ಲಭಿಸುವುದಾದರೂ, ವಿಷ್ಣುಭಕ್ತಿಯನ್ನು ಮಾಡಿದರೆ ಅರ್ಥ ಹಾನಿಯೂ ಪ್ರಿಯವಸ್ತುವಿನ ನಾಶವೂ, ನಿಂದಾ ಅವಮಾನಾದಿ ಪ್ರಯುಕ್ತ ಭಯಗಳು ಪ್ರಾಪ್ತಗಳಾದರೂ ಈ ಗುಣಾತೀತನಿಗೆ ವಿಷ್ಣುಭಕ್ತಿಯ ಹ್ರಾಸವಾಗುವುದಿಲ್ಲ. ಮತ್ತೆ ವಿಷ್ಣುಭಕ್ತಿಯು ಸಮವಾಗಿಯೇ ಇರುತ್ತದೆ. ಏಕಪ್ರಕಾರವಾಗಿಯೇ ಇರುತ್ತದೆ. ಅದಕಾರಣ ಸುಖ ದುಃಖಾದಿಗಳು ಇದ್ದರೂ ವಿಷ್ಣುಭಕ್ತಿಯ ಸಾಮ್ಯವಿದ್ದುದರಿಂದ ಪುನಃ ಭಕ್ತಿಗೆ ಆಧಿಕ್ಯವೇ ಬರುವುದು. (ಇದರಿಂದ ಸಮಲೋಷ್ಟಾಶ್ಮಕಾಂಚನಃ (ಶ್ಲೋ. ೨೪.) ಎಂಬುವುದು ವ್ಯಾಖ್ಯಾತವಾಯಿತು.) (೨) ಶ್ರೀವಿಷ್ಣುವಿಗೆ ಪ್ರೀತಿಕರಗಳಾಗದ ಕರ್ಮಗಳನ್ನು ಬಿಟ್ಟವನು ಶ್ರೀವಿಷ್ಣುವನ್ನು ಹೊಂದುತ್ತಾನೆ. ಸಂದೇಹವಿಲ್ಲ, ಎಂದೂ ಹೇಳಿದೆ (I) ಅವೈಷ್ಣವ ಎಂಬುವುದರಿಂದ ಸರ್ವಾರಂಭಪರಿತ್ಯಾಗೀ (ಶ್ಲೋ. ೨೫) ಎಂಬುವುದು ವ್ಯಾಖ್ಯಾತವಾಯಿತು. (2) ವಿಷ್ಣುಂ ಯಾತಿ ಎಂಬುವುದರಿಂದ ಸಗುಣಾನ್ ಸಮತೀತ್ಯ (ಶ್ಲೋ. ೨೬) ಎಂಬುವುದು ವ್ಯಾಖ್ಯಾತವಾಯಿತು. (೩) (ಸರ್ವಾರಂಭಪರಿತ್ಯಾಗೀ (ಶ್ಲೋ. ೨೫) ಎಂಬುವುದರಿಂದ ಸರ್ವತ್ರ ವಿಷ್ಣುಪೂಜಾದಿಗಳಲ್ಲಿಯೂ ಉದಾಸೀನತ್ವವೂ ಹೇಳಲ್ಪಡುವುದಿಲ್ಲ. ಏಕೆಂದರೆ ಉದಾಸೀನವತ್ ಎಂದು ಈ ಶ್ಲೋಕದಲ್ಲಿ ಉದಾಸೀನತ್ವವು ಇಲ್ಲವೆಂದು ಹೇಳಿದೆ. ಇಲ್ಲವಾದರೆ ಉದಾಸೀನ ಏವ ಎಂದು ಹೇಳುತ್ತಿದ್ದರು (ನೇಂಗತೇ (ಶ್ಲೋ. ೨೩) ಎಂದು ಪೂರ್ವವಾಕ್ಯದಲ್ಲಿ ಕರ್ಮವಿಲ್ಲವೆಂದು ಹೇಳಿದ್ದರಿಂದ ವಿಷ್ಣುಪೂಜಾದಿಗಳಲ್ಲಿ ಉದಾಸೀನತ್ವವಿಲ್ಲವೆಂದದ್ದು ಹೇಗೆಂದರೆ –) ನೇಂಗತೇ ಎಂಬುವುದರಿಂದ ಯಾವ ಪ್ರವೃತ್ತಿಯೂ ಇಲ್ಲವೆಂದಲ್ಲ ಮತ್ತೆ ಪರಮಾತ್ಮನನ್ನು ಬಿಟ್ಟು ಇದ್ದುದು, ಅಂದರೆ ವಿಷ್ಣುವಿಗೆ ಪ್ರೀತಿಕರಗಳಾಗದ ಕರ್ಮಗಳಿಗೆ ನಿಷೇಧವನ್ನು ನೇಂಗತೇ ಎಂಬುವುದರಿಂದ ಮಾಡಿದ್ದು. (೪) ನೇಂಗತೇ ಎಂಬುವುದರಿಂದಲೇ ಅವೈಷ್ಣವ ಕರ್ಮಗಳನ್ನು ಮಾಡಬಾರದೆಂದು ಹೇಳಿದ್ದರಿಂದ ತಿರುಗಿ ಸರ್ವಾರಂಭಪರಿತ್ಯಾಗೀ ಎಂದದ್ದು ಅಯುಕ್ತವೆಂದರೆ–) ಸರ್ವಾರಂಭಪರಿತ್ಯಾಗೀ ಎಂಬುವುದಕ್ಕೆ ವಿಶೇಷ ಪ್ರಯೋಜನವನ್ನು ಅಪೇಕ್ಷಿಸಿಯೂ ಅವೈಷ್ಣವಕರ್ಮಗಳನ್ನು ಪ್ರಾರಂಭಿಸುವುದಿಲ್ಲವೆಂದು ಹೇಳುತ್ತದೆ (೫) (ನೇಂಗತೇ

ತಿಳಿಯೇ ಹೇಳಲ್ಪಡುತ್ತಾರೆ. (೫) (ಪ್ರಮಾಣಾಂತರದಿಂದಲೂ ಈ ಅರ್ಥವನ್ನೇ ಸಾಧಿಸುತ್ತಾರೆ.) ಏತ್ತು ಭಕ್ತನು ಮಹಾ ಲಕ್ಷ್ಮೀದೇವಿಯ ಮೂರು ರೂಪಗಳನ್ನು (ಅಂದರೆ—ಸತ್ವ ರಜಸ್ತಮೋಗುಣಗಳಿಗೆ ಅಭಿಮಾನಿನಿಯರಾದ ಶ್ರೀ ಭೂ ದುರ್ಗಾದೇವಿಯರಿಂದ ಅಭಿಮನ್ಯಮಾನಗಳಾದ ಮೂರು ಗುಣಗಳನ್ನು) ಅತಿಕ್ರಮಿಸಿ ಮಹಾ ಲಕ್ಷ್ಮೀದೇವಿಯನ್ನು ಹೊಂದುತ್ತಾನೆ. ಮೂಲರೂಪಿಯಾದ ಪ್ರಕೃತಿ ಎನಿಸಿದ ಮಹಾ ಲಕ್ಷ್ಮೀದೇವಿಯಿಂದ ಅನುಗೃಹೀತನಾಗಿ ಶ್ರೀವಿಷ್ಣುವನ್ನು (ಮೋಕ್ಷವನ್ನು) ಹೊಂದುತ್ತಾನೆ. ॥ ೫ ॥

ಟೀ—ಗುಣಾತೀತನಿಗೆ ಭಗವಂತನ ಪ್ರಾಪ್ತ್ಯಾದಿಗಳನ್ನೇ ಹೇಳಬೇಕು. ಲಕ್ಷ್ಮೀಪ್ರಾಪ್ತಿಯಾಗುತ್ತದೆಂದು ಹೇಳಿದ್ದು ಏಕೆ ಎಂದರೆ—

**ತಾ ॥ (೧) ಬ್ರಹ್ಮಪ್ರಾಪ್ತೋ ಮತ್ಪ್ರಾಪ್ತ ಏವ ಭವತೀತ್ಯಾಹ । ಬ್ರಹ್ಮಣೋ ಹೀತಿ ॥ (೨) ಮದವಿಯೋಗಾತ್ತಸ್ಯಾ ಅಪಿ ಮತ್ಸ್ಥ ಏವ ಭವತೀತ್ಯರ್ಥಃ ॥ (೩) ತಥಾಪಿ ಮತ್ಪ್ರಾಪ್ತಿಕ್ರಮವಿವಕ್ಷಯಾ ತದುಕ್ತಿಃ ॥ (೫) ಏಕಾಂತಿಕಸ್ಯ ಸುಖಸ್ಯ ಮೋಕ್ಷಸ್ಯ ॥೬॥ ॥೪-೨೭॥**

ಅ ॥ (೧) ಲಕ್ಷ್ಮೀದೇವಿಯನ್ನು ಹೊಂದಿದವನು ನನ್ನನ್ನೇ ಹೊಂದುತ್ತಾನೆಂದು ಬ್ರಹ್ಮಣೋ ಹಿ ಎಂಬುವ ಶ್ಲೋಕದಿಂದ ಹೇಳುತ್ತಾರೆ. (೨) (ಇಲ್ಲಿ ಲಕ್ಷ್ಮೀದೇವಿಯು ಶ್ರೀಪರಮಾತ್ಮನನ್ನು ಆಶ್ರಯಿಸಿಕೊಂಡೇ ಇರುತ್ತಾಳೆಂದೇ ಹೇಳುತ್ತದೆ. ಲಕ್ಷ್ಮೀಪ್ರಾಪ್ತಿಯಿಂದ ಭಗವಂತನ ಪ್ರಾಪ್ತಿಯು ಹೇಳಲ್ಪಡುವುದಿಲ್ಲ ಎಂದರೆ—) ಲಕ್ಷ್ಮೀದೇವಿಗೆ ನನ್ನಿಂದ (ಶ್ರೀಪರಮಾತ್ಮನಿಂದ) ವಿಯೋಗವು ಇಲ್ಲದಿರುವುದರಿಂದ ಗುಣಾತೀತನು ಲಕ್ಷ್ಮೀದೇವಿಯಲ್ಲಿದ್ದರೆ ನನ್ನಲ್ಲಿ (ಶ್ರೀಪರಮಾತ್ಮನಲ್ಲಿ) ಇದ್ದಾನೆಂದೇ ಆಗುತ್ತದೆ (೩) (ಲಕ್ಷ್ಮೀನಾರಾಯಣರಿಗೆ ವಿಯೋಗವು ಇಲ್ಲವೆಂದಾದರೆ ಗುಣಾತೀತನು ನನ್ನನ್ನು ಹೊಂದುತ್ತಾನೆಂದೇ ಹೇಳಬೇಕಿತ್ತು. ಲಕ್ಷ್ಮೀಪ್ರಾಪ್ತಿಯಾಗಿ ಭಗವಂತನ ಪ್ರಾಪ್ತಿಯಾಗುತ್ತದೆಂದು ಕ್ರಮವನ್ನು ಏಕೆ ಹೇಳಿದ್ದೆಂದರೆ) (ಯದ್ಯಪಿ ಲಕ್ಷ್ಮೀನಾರಾಯಣರಿಗೆ ವಿಯೋಗವು ಸರ್ವಥಾ ಇಲ್ಲವೇ ಇಲ್ಲ.) ಆದರೂ ಲಕ್ಷ್ಮೀದೇವಿಯ ಸಮೀಪವನ್ನು ಹೊಂದಿ ಲಕ್ಷ್ಮೀದೇವಿಯನ್ನು ಪ್ರವೇಶಿಸಿ ತದ್ವಾರಾ ಲಕ್ಷ್ಮೀದೇವಿಯ ಅನುಜ್ಞೆಯಿಂದ ಶ್ರೀಪರಮಾತ್ಮನ ಪ್ರಾಪ್ತಿಯಾಗುತ್ತದೆ. ಎಂಬುವ ಅಭಿಪ್ರಾಯದಿಂದ ಈ ಕ್ರಮವನ್ನು ಇಟ್ಟುಕೊಂಡು ಪರಂಪರೆ ಹೇಳಿದ್ದು ಯುಕ್ತವು. (೪) (ಸುಖಸ್ಯೈಕಾಂತಿಕಸ್ಯ ಎಂಬುದರ ಅರ್ಥವನ್ನು ಹೇಳುತ್ತಾರೆ-) ಇದಕ್ಕಿಂತ ಇದು ಶ್ರೇಷ್ಠವೆಂದು ಗಣನೆಮಾಡುವಾಗ ಎಲ್ಲವುಗಳಿಂದಲೂ ಕೊನೆಗೆ ಇರತಕ್ಕದು. ಇಂತಹ ದುಃಖಮಿಶ್ರವಾಗದಿರುವ, ಜ್ಞಾನಕರ್ಮಗಳಿಂದ ಅಭಿವ್ಯಕ್ತವಾಗುವ ಅನುಭವಿಸಲ್ಪಡತಕ್ಕ ಪರಮಾನಂದ ಸ್ವರೂಪವಾದ ಮೋಕ್ಷಕ್ಕೂ ಎಂದರ್ಥವು. ॥ ೬ ॥ ॥ ೪—೨೭ ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾತಾತ್ಪರ್ಯನಿರ್ಣಯೇ ಚತುರ್ದಶೋಽಧ್ಯಾಯಃ ॥ ೧೪ ॥**

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾತಾತ್ಪರ್ಯನಿರ್ಣಯದಲ್ಲಿ ಹದಿನಾಲ್ಕನೇ ಅಧ್ಯಾಯವು ಮುಗಿಯಿತು ॥ ೧೪ ॥

ಶ್ರೀಮಾಧ್ವಭಾಷ್ಯತಾತ್ಪರ್ಯಭಾವಾನುಸರಣಾದ್ವೃತಃ ।
ಶ್ರೀಕೃಷ್ಣಭಗವದ್ಗೀತಾಕರ್ಣಾಟವಿವೃತೇಶ್ಶುಭಃ ॥
ಪೂರ್ಣೋ ದ್ವಿತೀಯಭಾಗೋಽಯಂ ಹರೇರ್ಮಧ್ವಗುರೋರ್ಮುದೇ ।
ತಂತ್ರಿನಾರಾಯಣಾಖ್ಯೇನ ಧರಣೌ ರಚಿತೋ ಲಸೇತ್ ।

॥ ಶ್ರೀಕೃಷ್ಣಾರ್ಪಣಮಸ್ತು ॥

ಎಂಬುವುದರಿಂದ ಅಲ್ಪವಾಗಿಯೂ ಅವೈಷ್ಣವ ಕರ್ಮದಲ್ಲಿ ಪ್ರವೃತ್ತಿ ಮಾಡಬಾರದೆಂದೂ. ಸರ್ವಾರಂಭ ಪರಿತ್ಯಾಗೀ ಎಂಬುವುದರಿಂದ ದೀರ್ಘವಾದ ಅವೈಷ್ಣವ ಕರ್ಮದಲ್ಲಿ ಪ್ರವೃತ್ತಿ ಮಾಡಬಾರದೆಂದೂ ಹೇಳಲ್ಪಡುತ್ತದೆ, ಎಂಬುವ ಅಭಿಪ್ರಾಯದಿಂದ ಇಂಗನ ಶಬ್ದಕ್ಕೆ ಅಲ್ಪಕರ್ಮವೆಂದರ್ಥವು. ಆರಂಭ ಶಬ್ದಕ್ಕೆ ಮಹತ್ಕರ್ಮವೆಂದರ್ಥವು. ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಇಂಗನ ಶಬ್ದದಿಂದ ಕ್ಷಣಿಕ ಕರ್ಮವೂ ಆರಂಭ ಶಬ್ದದಿಂದ ದೀರ್ಘಕರ್ಮವೂ ಹೇಳಲ್ಪಡುತ್ತವೆ, ಎಂದು ಶಬ್ದ ನಿರ್ಣಯದಲ್ಲಿದೆ ॥೮॥

ಟೀ - ಸ ಗುಣಾನ್ ಸಮತೀತ್ಯೈತಾನ್ (ಶ್ಲೋ ೨೬) ಎಂಬುವಲ್ಲಿ ಗುಣಶಬ್ದದಿಂದ ಶ್ರೀ ಭೂ ದುರ್ಗಾದೇವಿಯರು ವಿವಕ್ಷಿತರಾದುದರಿಂದ ಅವರ ಅತಿಕ್ರಮವನ್ನು ಹೇಗೆ ಹೇಳುವುದು ಎಂದರೆ—

ತಾ ॥ (೧) ಲಕ್ಷ್ಮ್ಯಾದಿಭಿಃ ಕೃತೋ ಬಂಧೋ ಯೋಽನಾದಿಃ ಪುರುಷಸ್ಯ ತು । ತಮತ್ಯೇತೀಹ ಯೋ ವಿದ್ವಾನ್ಸ ವಿಜ್ಞೇಯೋ ಗುಣಾತ್ಯಯೀತಿ ಚ ಪ್ರವೃತ್ತೇ ॥ (೨) ತತ್ಕೃತಬಂಧಾತ್ಯಯಾತ್ತದಧಿಕವಿಷ್ಣುಪ್ರಾಪ್ತೇಶ್ಚ ತದತ್ಯಯೀತ್ಯುಚ್ಯತೇ ॥ (೩) ಯಥಾ ದ್ವಾರಪಾಲಮತೀತ್ಯ ರಾಜಾನಂ ಗಚ್ಛತೀತಿ ॥ (೪) ಬ್ರಹ್ಮಣಿ ಭೂಯಂ ಬ್ರಹ್ಮಭೂಯಂ । ಬ್ರಹ್ಮೇತಿ ಪ್ರಕೃತಾ ಮಹಾಲಕ್ಷ್ಮೀಃ ॥ (೫) ಅತೀತ್ಯ ತ್ರೀಣಿ ರೂಪಾಣಿ ಮಹಾಲಕ್ಷ್ಮ್ಯಾಂ ಪ್ರಪದ್ಯತೇ । ತಯಾ ತ್ವನುಗೃಹೀತೋಽಸೌ ವೈಷ್ಣವೋ ವಿಷ್ಣುಗೋ ಭವೇತ್। ಇತಿ ಚ ॥ ೫ ॥

ಅ ॥ (೧) ಜೀವರಿಗೆ ಶ್ರೀ ಭೂ ದುರ್ಗಾದೇವಿಯರಿಂದ ಮಾಡಲ್ಪಟ್ಟದ್ದು ಯಾವುದು ಅನಾದಿಯಾದ ಬಂಧವಿದೆಯೋ. ಅದನ್ನು ಯಾವ ಜ್ಞಾನಿಯು ಅತಿಕ್ರಮಿಸುತ್ತಾನೋ, ಅವನು ಗುಣಾತ್ಯಯೀ ಎನಿಸುತ್ತಾನೆ. ಲಕ್ಷ್ಮ್ಯಾದಿಗಳ ಅತಿಕ್ರಮವು ವಿವಕ್ಷಿತವಲ್ಲ. ಎಂದು ಪ್ರವೃತ್ತವೆಂಬುವ ಗ್ರಂಥದಲ್ಲಿ ಹೇಳಿದೆ (೨) (ಸ್ಮೃತಿಯಲ್ಲಿ ಹೇಳಿದ ಅರ್ಥವನ್ನು ಹೇಳುತ್ತಾ ಬೇರೆ ಅರ್ಥವನ್ನು ಹೇಳುತ್ತಾರೆ—) ಆ ಲಕ್ಷ್ಮ್ಯಾದಿಗಳು ಮಾಡಿದ ಸಂಸಾರಬಂಧವನ್ನು ಅತಿಕ್ರಮಿಸಿರುವುದರಿಂದಲೂ ಆ ಮೂವರಿಗಿಂತಲೂ ಅತ್ಯುತ್ತಮನಾದ ಶ್ರೀವಿಷ್ಣುವನ್ನು ಹೊಂದಿರುವುದರಿಂದಲೂ ಗುಣಾತ್ಯಯೀ (ಗುಣಾತೀತ)ನೆನಿಸುತ್ತಾನೆ. (೩) (ತದತ್ಯಯವೆಂದರೆ—ಸತ್ವ ರಜಸ್ತಮೋಗುಣಗಳ ಸಂಬಂಧಾತಿಕ್ರಮ, ಮತ್ತು ಆ ಗುಣಾಭಿಮಾನಿಯರಿಗಿಂತಲೂ ಉತ್ತಮನಾದ ಶ್ರೀವಿಷ್ಣುವಿನ ಪ್ರಾಪ್ತಿಯು ಎಂಬ ಎರಡರ್ಥದಲ್ಲಿ ಪ್ರಯೋಗವನ್ನು ತೋರಿಸುತ್ತಾರೆ—) ದ್ವಾರಪಾಲಮತೀತ್ಯ ರಾಜಾನಂ ಗಚ್ಛತಿ ಎಂಬೀ ವಾಕ್ಯದಲ್ಲಿ ಹೇಗೆ ದ್ವಾರಪಾಲಕನು ಕಾಯುತ್ತಿ ಬಾಗಿಲನ್ನು ದಾಟಿ ರಾಜನನ್ನು ಹೊಂದುವವನು ದ್ವಾರಪಾಲಕನನ್ನು ಅತಿಕ್ರಮಿಸಿ ರಾಜನನ್ನು ಹೊಂದುತ್ತಾನೆಂದು ಹೇಳಲ್ಪಡುತ್ತಾನೋ, ಹೇಗೆ ಯಾವನು ರಾಜನನ್ನು ಹೊಂದುತ್ತಾನೋ ಆತನು ದ್ವಾರಪಾಲಕನನ್ನು ದಾಟಿ ಹೋಗುತ್ತಾನೆ ಎನ್ನಿಸುತ್ತಾನೋ, ಹಾಗೆಯೇ ಸತ್ವಾದಿಗುಣಗಳಿಗೆ ಅಭಿಮಾನಿಯರಾದ ಶ್ರೀ ಭೂ ದುರ್ಗಾದೇವಿಯರಿಂದ ಮಾಡಲ್ಪಟ್ಟ ಬಂಧವನ್ನು ಕಳೆದುಕೊಂಡು ಶ್ರೀಪರಮಾತ್ಮನನ್ನು ಹೊಂದುವವನು ಗುಣಾತೀತನೆನಿಸುತ್ತಾನೆ (೪) (ಬ್ರಹ್ಮಭೂಯಾಯ (ಶ್ಲೋ. ೨೬.) ಎಂಬುವುದಕ್ಕೆ ಬ್ರಹ್ಮತ್ವವನ್ನು ಹೊಂದುವುದಕ್ಕಾಗಿ ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಹೇಳುತ್ತಾರೆ—) ಚಿತ್ಪ್ರಕೃತಿಯಲ್ಲಿ ಇರುವುದು ಅಂದರೆ ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯನ್ನು ಹೊಂದುವುದು. (ಇಲ್ಲಿನ ಬ್ರಹ್ಮಶಬ್ದದಿಂದ ಶ್ರೀಪರಮಾತ್ಮನನ್ನು ತಿಳಿದುಕೊಳ್ಳಬೇಕೆಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—) ಮಮ ಯೋನಿರ್ಮಹದ್ಬ್ರಹ್ಮ ಎಂದು ಮೂಲರೂಪಳೆನಿಸಿದ ಮಹಾಲಕ್ಷ್ಮೀದೇವಿಯು ಬ್ರಹ್ಮಶಬ್ದದಿಂದ ಪ್ರಸ್ತುತಳಾಗಿರುವುದರಿಂದ ಇಲ್ಲಿಯೂ

॥ ಶ್ರೀಃ ॥

# ಹದಿನೈದನೇ ಅಧ್ಯಾಯವು.

---

ಗೀತಾಯಾಃ ಮಾಧ್ವತಾತ್ಪರ್ಯಭಾಷ್ಯಾರ್ಥಾನುಗಃ ಶುಭಃ ।
ಕರ್ನಾಟಭಾಷ್ಯಾ ಗ್ರಥಿತಃ ತೃತೀಯೋ ಭಾಗ ಏಷಕಃ ॥
ಸದ್ವೃಂದಬಂಧಮೋಕ್ಷಾಯ ಪ್ರಸಾದಾಯ ಹರೇರ್ಗುರೋಃ ।
ತಂತ್ರಿನಾರಾಯಣಾರಬ್ಧಃ ಪೂರ್ಣಃ ಸ್ಯಾತ್ಕೃಪಯಾ ಹರೇಃ ॥
ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿಧಃ ।
ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಮ್ ॥



ಟೀ—ಈ ನೇ ಅಧ್ಯಾಯದಲ್ಲಿ ಸಂಸಾರಕ್ಕೆ ಕಾರಣವಾದ ಪ್ರಕೃತಿ, ಮಹತ್ತತ್ವ, ಅಹಂಕಾರ ತತ್ವ, ಮೊದಲಾದ ತತ್ವಸಮೂಹರೂಪವಾದ ಜಗತ್ಸ್ವರೂಪವನ್ನು ಹೇಳಿ ಯ ಏನಂ ವೇತ್ತಿ ಪುರುಷಂ ಇತ್ಯಾದಿಗಳಿಂದ ಶ್ರೀಪರಮಾತ್ಮನೇ ಮೊದಲಾದವರ ಜ್ಞಾನವೂ ಸಂಸಾರದಿಂದ ಬಿಡುಗಡೆಯಾಗುವ ಉಪಾಯವೆಂದ ಹೇಳಲ್ಪಟ್ಟಿದೆ. ಅವುಗಳನ್ನು ಈ ಅಧ್ಯಾಯದಲ್ಲಿ ವಿಸ್ತರಿಸಿ ಹೇಳುತ್ತಾ ಭಗವನ್ಮಹಿಮೆಯನ್ನು ಹೇಳುತ್ತಾರೆ. ಪ್ರಕೃತ ಜಗತ್ಸ್ವರೂಪವನ್ನು ಹೇಳುತ್ತಾರೆ—

ಗೀ ॥ ॥ ಶ್ರೀಭಗವಾನುವಾಚ ॥

ಓಂ ॥ ಊರ್ಧ್ವಮೂಲಮಧಶ್ಶಾಖಮಶ್ವತ್ಥಂ ಪ್ರಾಹುರವ್ಯಯಂ ।
ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ ೧ ॥

ಅ ॥ ಶ್ರೀಭಗವಾನ್ = ಶ್ರೀಕೃಷ್ಣ ಪರಮಾತ್ಮನು, ಉವಾಚ = ಉಪದೇಶಿಸುತ್ತಾನೆ. ಅಶ್ವತ್ಥಂ = ಇಂದಿನಂತೆ ನಾಳೆಯೂ ಒಂದೇ ರೀತಿಯಾಗಿ ಇಲ್ಲದಿರುವುದರಿಂದ ಅಥವಾ ಅಶ್ವದಂತೆ ಚಂಚಲವಾಗಿರುವುದರಿಂದ ಅಶ್ವತ್ಥನೆನಿಸಿಕೊಂಡ ಚೇತನಾಚೇತನಾತ್ಮಕವಾದ ಜಗತ್ತೆಂಬ ವೃಕ್ಷವನ್ನು, ಊರ್ಧ್ವಮೂಲಂ = ಊರ್ಧ್ವ ಸರ್ವೋತ್ತಮನಾದ ಶ್ರೀಹರಿಯೂ, ಪರತಂತ್ರರಲ್ಲಿ ಉತ್ತಮಳಾದ ಲಕ್ಷ್ಮೀದೇವಿಯೂ, ಚೇತನಗಳಲ್ಲಿ ಉತ್ತಮನಾದ ಜಡಪ್ರಕೃತಿಯೂ, ಇವುಗಳನ್ನು, ಮೂಲಂ = ಮೂಲವಾಗಿ ಉಳ್ಳ [illegible] ಅಧಃ ಶಾಖಂ = ಅಧಃ ಹಿಂದೆ ಹೇಳಿದ ವಿಷ್ಣು ಮೊದಲಾದ ಮೂವರಿಗಿಂತ ಅಧಮರಾದ [illegible] ಪೃಥಿವ್ಯಪ್ತೇಜಸ್ಸು ವಾಯು ಆಕಾಶ ಮಹತ್ತತ್ವ ಅಹಂಕಾರತತ್ವ ಬುದ್ಧಿತತ್ವ ಈ ಎಂಟು [illegible] ಇವುಗಳಿಗೆ ಅಭಿಮಾನಿಗಳಾದ ದೇವತೆಗಳೂ ಇವುಗಳು, ಶಾಖಂ = ಶಾಖೆ(ಗೆಲ್ಲು) [illegible] ವುಗಳನ್ನಾಗಿಯೂ, ಅವ್ಯಯಂ = ಸರ್ವಥಾ ನಾಶ ಹೊಂದದಿರುವುದನ್ನಾಗಿಯೂ, (ಅಂದರೆ [illegible] ಹೀಗೆ ಇತ್ತೋ ಹಾಗೆಯೇ ಕಲ್ಪಾಂತರದಲ್ಲಿಯೂ ಇರತಕ್ಕದು. ಒಂದು ಜಗತ್ತು ನಾಶ [illegible] ಮತ್ತೊಂದು ಜಗತ್ತು ಹುಟ್ಟುವುದರಿಂದ ನದಿಯ ಪ್ರವಾಹದಂತೆಯೇ ಅವ್ಯಯತ್ವ [illegible] ಯೂ.) (ಜ್ಞಾನಿಗಳು) ಪ್ರಾಹುಃ = ಹೇಳುತ್ತಾರೆ ಯಸ್ಯ = ಯಾವ ಜಗತ್ತೆಂಬ ವೃಕ್ಷದ [illegible]

ಋಗಾದಿ ವೇದಗಳೂ ವೇದಾಭಿಮಾನಿ ದೇವತೆಗಳೂ ಇವರನ್ನು, ಪರ್ಣಾನಿ=ಎಲೆಗಳನ್ನಾಗಿ ಹೇಳುತ್ತಾರೋ, ತಂ=ಆ ಜಗದ್ವೃಕ್ಷವನ್ನು, ಯಃ=ಯಾವನು, ವೇದ=ತಿಳಿಯುತ್ತಾನೋ, ಸಃ=ಅವನು ವೇದವಿತ್=ಸರ್ವ ವೇದಾರ್ಥಗಳನ್ನು ತಿಳಿದವನು. ॥೧॥

ಪೀ—ಈ ಅಧ್ಯಾಯದಲ್ಲಿ ಹೇಳಲ್ಪಡತಕ್ಕ ಸಾರಾಂಶವನ್ನು ಹೇಳುತ್ತಾರೆ—

**ಭಾ ॥ ಓಂ ॥ (೧) ಸಂಸಾರಸ್ವರೂಪತದತ್ಯಯೋಪಾಯವಿಜ್ಞಾನಾನ್ಯಸ್ಮಿನ್ನಧ್ಯಾಯೇ ದರ್ಶಯತಿ ॥ (೨) ಊರ್ಧ್ವೋ ವಿಷ್ಣುಃ । ಊರ್ಧ್ವಪವಿತ್ರೋ ವಾಜಿನೀವಸ್ವಮೃತಮಸ್ಮಿ ದ್ರವಿಣಂ ಸವರ್ಚಸಮಿತಿಹಿಶ್ರುತಿಃ ॥ (೩) ಊರ್ಧ್ವಃ ಉತ್ತಮಃ ಸರ್ವತಃ । ಅಧೋ ನಿಕೃಷ್ಟಂ । ಶಾಖಾ ಭೂತಾನಿ ॥ (೪) ಶ್ವೋಽಪ್ಯೇಕಪ್ರಕಾರೇಣ ನ ತಿಷ್ಠತೀತ್ಯಶ್ವತ್ಥಃ ॥ (೫) ತಥಾಽಪಿ ನ ಪ್ರವಾಹವ್ಯಯಃ । ಪೂರ್ವಬ್ರಹ್ಮಕಾಲೇ ಯಥಾ ಸ್ಥಿತಿಸ್ತಥಾ ಸರ್ವತ್ರಾಪೀತ್ಯವ್ಯಯತಾ ॥ (೬) ಫಲಕಾರಣತ್ವಾಚ್ಛಂದಸಾಂ ಪರ್ಣತ್ವಂ । ನಹಿ ಕದಾಽಪ್ಯಜಾತೇ ಪರ್ಣೇ ಫಲೋತ್ಪತ್ತಿಃ ॥೧॥**

ಅ ॥ (೧) ಪ್ರಕೃತಿ ಮೊದಲಾದ ಕ್ಷೇತ್ರ, ಆ ಸಂಸಾರವನ್ನು ದಾಟಲಿಕ್ಕೆ ಬೇಕಾದ ಉಪಾಯ, ಅಲೌಕಿಕ ಭಗವನ್ಮಾಹಾತ್ಮ್ಯ ಇವುಗಳನ್ನು ಈ ಅಧ್ಯಾಯದಲ್ಲಿ ತೋರಿಸುತ್ತಾರೆ. (ಅಂದರೆ—ಹಿಂದಿನ ಅಧ್ಯಾಯದಲ್ಲಿ ಸಂಸಾರದ ಏಕದೇಶಗಳಾದ ಗುಣಗಳ ಸ್ಥಿತಿಯನ್ನು ತೋರಿಸಿದರು. ಈ ಅಧ್ಯಾಯದಲ್ಲಿ ಸಂಪೂರ್ಣ ಸಂಸಾರ ಸ್ವರೂಪವನ್ನು ತೋರಿಸುತ್ತಾ ಸಂಸಾರದಿಂದ ಬಿಡುಗಡೆ ಹೊಂದಬೇಕೆಂಬ ಇಚ್ಛೆಯನ್ನು ಹುಟ್ಟಿಸಿ ಅದರ ಸಾಧನವನ್ನು ತಿಳಿಯಲಿಚ್ಛಿಸುವವನಿಗೆ ಹಿಂದೆ ಹೇಳಿದ ಸಾಧನವನ್ನು ವಿವರಿಸುತ್ತಾರೆ ಅಲೌಕಿಕ ಭಗವನ್ಮಹಿಮೆಯನ್ನು ತೋರಿಸುತ್ತಾರೆ—) (೨) ಊರ್ಧ್ವಃ=ವಿಷ್ಣುವು. (ಆ ಅರ್ಥವು ಹೇಗೆ ಸಿಗುವದೆಂದರೆ—ಪ್ರಮಾಣ ಹೇಳುತ್ತಾರೆ—) ನಾನು ಊರ್ಧ್ವಪವಿತ್ರಃ=ಆದಿಯಲ್ಲಿ ಸರ್ವೋತ್ತಮನಾದ ವಿಷ್ಣುವಿನ ಅನುಗ್ರಹದಿಂದ ಸಂಚಿತ ಪಾಪವಿಲ್ಲದವನೂ ವಾಜಿನೀವಸ್ವಮೃತಂ=ಅನ್ನರೂಪನೂ ಬುದ್ಧ್ಯಾದಿಗಳಿಗೆ ಪ್ರೇರಕನೂ ಆಗಿರುವ ಪ್ರಯುಕ್ತ ವಾಜಿನೀ ಎನಿಸಿಕೊಂಡ ಸೂರ್ಯನಲ್ಲಿ ನಿಯಾಮಕನಾಗಿರುವ ವಿಷ್ಣುವಿನ ಅನುಗ್ರಹದಿಂದ ಪ್ರಾರಬ್ಧಕರ್ಮದಿಂದ ಬಿಡುಗಡೆ ಹೊಂದಿದವನೂ. ಸವರ್ಚಸಂ ದ್ರವಿಣಂ=ಅನುಭವಿಸಲ್ಪಡತಕ್ಕ ಅನರ್ಘ್ಯವಾದ ಧನಸ್ವರೂಪನೂ, ಸುಖಸ್ವರೂಪನೂ, ನಿತ್ಯಾನಂದ ಸ್ವರೂಪನೂ ಆಗಿರುತ್ತೇನೆ ಎಂದು ತೈತ್ತಿರೀಯಶ್ರುತಿಯು. (ಇದರಲ್ಲಿ ಊರ್ಧ್ವ ಶಬ್ದವು ವಿಷ್ಣುವಿನಲ್ಲಿಯೇ ಪ್ರಯುಕ್ತವಾಗಿದೆ.) (೩) (ಊರ್ಧ್ವಶಬ್ದವು ವಿಷ್ಣುವಿನಲ್ಲಿ ಹೇಗೆ ಇರುವುದೆಂದರೆ) ಎಲ್ಲರಿಂದಲೂ ಉತ್ತಮನಾದುದರಿಂದ ವಿಷ್ಣುವು ಊರ್ಧ್ವನೆನಿಸುವನು. ಅಧಃ=ನಿಕೃಷ್ಟಗಳು. ಶಾಖಾಃ=ಕೊಂಬೆಗಳಂತಿರುವ ಪಂಚ ಮಹಾ ಭೂತಗಳು. ಮೂಲ (ಬುಡ) ಕ್ಕಿಂತ ಕೊಂಬೆಗಳು ನಿಕೃಷ್ಟಗಳು. ವಿಷ್ಣು ಜಡಪ್ರಕೃತಿ ಚೇತನಪ್ರಕೃತಿ ಸತ್ವರಜಸ್ತಮೋಗುಣ. ಇವುಗಳಿಗಿಂತ ಪಂಚಭೂತಾದಿಗಳು ನಿಕೃಷ್ಟಗಳು. (ಏವಂ ಸಂಸಾರವೃಕ್ಷಕ್ಕೆ ಪಂಚಭೂತ ಮಹತ್ತತ್ತ್ವ, ಅಹಂಕಾರ, ಬುದ್ಧಿತತ್ತ್ವ. ಇವುಗಳು ಕೊಂಬೆಗಳಂತಿರುವವುಗಳು.) (೪) ಇಂದಿನಂತೆಯೇ ನಾಳೆಯೂ ಕಾಲಾಂತರದಲ್ಲಿಯೂ ಒಂದೇ ರೀತಿ ಇಲ್ಲದಿರುವುದರಿಂದ (ಜಗದ್ವೃಕ್ಷವು) ಅಶ್ವತ್ಥಃ ಎನಿಸುತ್ತದೆ. (೫) ಅದಕ್ಕೆ ವಿಕಾರವಿದ್ದರೂ ನದಿಯ ಪ್ರವಾಹದಂತೆ ವಿನಾಶವಿಲ್ಲದಿರುವುದು. ಪ್ರವಾಹತಃ (ಅನಾದಿನಿತ್ಯವು) ಅಂದರೆ ಹಿಂದಿನ ಬ್ರಹ್ಮಕಲ್ಪದಲ್ಲಿ ಹೇಗೆ ಜಗತ್ತು ಇರುತ್ತಿತ್ತೋ, ಹಾಗೆಯೇ ಸರ್ವ ಕಾಲದಲ್ಲಿ ಇರುತ್ತದೆ. ಆದಕಾರಣ ಜಗತ್ತಿಗೆ ಅವ್ಯಯತ್ವವು (ನಾಶವಿಲ್ಲದಿರುವಿಕೆ) (೬) ವೇದಗಳು ಮೋಕ್ಷ, ಕಾಮಗಳೆಂಬ ಫಲಗಳಿಗೆ ಕಾರಣಗಳಾಗಿರುವುದರಿಂದ ಎಲೆಗಳೆನಿ-

ಬಿತ್ತವೆ. (ಪರ್ಣಗಳು ಫಲಕ್ಕೆ ಕಾರಣಗಳೆಂಬುವುದು ಹೇಗೆಂದರೆ—) ಯಾವಾಗಲಾದರೂ ಎಲೆಯು ಹುಟ್ಟದಿದ್ದರೆ ಫಲವು ಸರ್ವಥಾ ಹುಟ್ಟುವುದೇ ಇಲ್ಲ (ಏವಂಚ ಲೋಕದಲ್ಲಿ ವೃಕ್ಷಗಳಲ್ಲಿ ಎಲೆಗಳಿದ್ದರೇನೇ ಫಲವು ತೋರುವುದರಿಂದ ವೇದಗಳು ಕಾಮ ಮೋಕ್ಷಗಳೆಂಬುವ ಎರಡು ಫಲಗಳಿಗೆ ಕಾರಣಗಳಾಗಿರುವುದರಿಂದ ವೇದಗಳನ್ನು ಪರ್ಣಸ್ಥಾನೀಯಗಳೆಂದದ್ದು. ॥ ೧ ॥

ಗೀ ॥ ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾ
ಗುಣಪ್ರವೃದ್ಧಾ ವಿಷಯಪ್ರವಾಲಾಃ ।
ಅಧಶ್ಚ ಮೂಲಾನ್ಯನುಸಂತತಾನಿ
ಕರ್ಮಾನುಬಂಧೀನಿ ಮನುಷ್ಯಲೋಕೇ ॥ ೨ ॥

ಅ ॥ ತಸ್ಯ=ಜಗತ್ತೆಂಬ ವೃಕ್ಷಕ್ಕೆ, ಗುಣಪ್ರವೃದ್ಧಾಃ=ಸತ್ತ್ವಾದಿಗುಣಗಳಿಂದ ಪುಷ್ಪಗಳಾದ, ವಿಷಯಪ್ರವಾಲಾಃ=ಶಬ್ದ ರೂಪ ಸ್ಪರ್ಶ ಮೊದಲಾದ ವಿಷಯಗಳೇ ಚಿಗುರು ಎಲೆಗಳಂತಿರುವ, ಶಾಖಾಃ=ಗೆಲ್ಲುಗಳಂತಿರುವ ಮಹತ್ತತ್ತ್ವ ಅಹಂಕಾರತತ್ತ್ವ ಮೊದಲಾದ ತತ್ತ್ವಗಳೂ ಅವುಗಳಿಗೆ ಅಭಿಮಾನಿಗಳಾದ ದೇವತೆಗಳೂ, ಅಧಃ=ತಮಗಿಂತ ನಿಕೃಷ್ಟಗಳಾದ ಶರೀರಾದಿ ಕಾರ್ಯಗಳಲ್ಲಿಯೂ, ಊರ್ಧ್ವಂ ಚ=ತಮಗಿಂತ ಉತ್ಕೃಷ್ಟವಾದ ಕಾರಣವಾದ ಅವ್ಯಕ್ತ ತತ್ತ್ವದಲ್ಲಿಯೂ, ಪ್ರಸೃತಾಃ=ಸೂಕ್ಷ್ಮರೂಪಗಳಿಂದ ವ್ಯಾಪಿಸಿಕೊಂಡಿರುತ್ತಾರೆ ಮನುಷ್ಯಲೋಕೇ=ಭೂಲೋಕದಲ್ಲಿ. ಕರ್ಮಾನುಬಂಧೀನಿ=ಕರ್ಮಗಳನ್ನನುಸರಿಸಿ ಫಲಗಳನ್ನು ಕೊಡುವ, ಮೂಲಾನಿ=ವೃಕ್ಷಕ್ಕೆ ಬೇರುಗಳಂತಿರುವ ವಿಷ್ಣುವಿನ ರೂಪಗಳೂ, ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯೂ, ಜಡಪ್ರಕೃತಿಯೂ, ಸತ್ತ್ವ ರಜಸ್ತಮೋಗುಣಗಳೂ, ಅಧಶ್ಚ=ಜಗತ್ತೆಂಬ ವೃಕ್ಷಕ್ಕೆ ಗೆಲ್ಲುಗಳಂತಿರುವ ಚತುರ್ಮುಖಾದಿ ದೇವತೆಗಳಲ್ಲಿಯೂ ಮಹತ್ತತ್ತ್ವಾದಿಗಳಲ್ಲಿಯೂ, ಅನುಸಂತತಾನಿ=ವ್ಯಾಪಿಸಿರುತ್ತವೆ.

ವಿ ॥ (1) ಸಂಸಾರವೃಕ್ಷಕ್ಕೆ ಸತ್ತ್ವಾದಿಗುಣಗಳಿಂದ ಪುಷ್ಟಗಳಾದ ಮಹತ್ತತ್ತ್ವ ಮೊದಲಾದ ಪದಾರ್ಥಗಳು ಕೊಂಬೆಗಳಂತಿರುವವುಗಳು. (2) ತತ್ಕಾಲದಲ್ಲಿ ಸುಖವನ್ನು ಹುಟ್ಟಿಸುವ ಶಬ್ದಾದಿ ವಿಷಯಗಳು ಚಿಗುರು ಎಲೆಗಳಂತಿರುವವುಗಳು. (3) ಶ್ರೀವಿಷ್ಣುರೂಪಾದಿಗಳು ಚತುರ್ಮುಖಾದಿಗಳಲ್ಲಿ ವ್ಯಾಪಿಸಿಕೊಂಡಿರುತ್ತವೆ. ಮತ್ತೂ ಆಯಾಯ ಜೀವರು ಮಾಡಿದ ಕರ್ಮಗಳನ್ನು ಅನುಸರಿಸಿ ಫಲವನ್ನು ಕೊಡುವವುಗಳು. ॥ ೨ ॥

ಭಾ ॥ (೧) ಅವ್ಯಕ್ತೇಽಪಿ ಸೂಕ್ಷ್ಮರೂಪೇಣ ಸಂತಿ ಶರೀರಾದೌ ಚ ಭೂತಾನೀತ್ಯಧಶ್ಚೋ-
ರ್ಧ್ವಂ ಚ ಪ್ರಸೃತಾಃ ॥ (೨) ಗುಣೈಃ ಸತ್ತ್ವಾದಿಭಿಃ । ಪ್ರತೀತಿಮಾತ್ರಸುಖತ್ವಾತ್
ಪ್ರವಾಲಾಃ ವಿಷಯಾಃ ॥ (೩) ಮೂಲಾನಿ ಭಗವದ್ರೂಪಾದೀನಿ । ಭಗವಾನಪಿ
ಕರ್ಮಾನುಬಂಧೇನ ಹಿ ಫಲಂ ದದಾತಿ ॥(೪) ತಥಾ ಚ ಭಾಲ್ಲವೇಯಶಾಖಾಯಾಂ ।
ಬ್ರಹ್ಮ ವಾ ಅಸ್ಯ ಪೃಥಙ್ಮೂಲಂ ಪ್ರಕೃತಿಃ ಸಮೂಲಂ ಸತ್ತ್ವಾದಯೋಽರ್ವಾಚೀನ-
ಮೂಲಂ ಭೂತಾನಿ ಶಾಖಾಃ ಛಂದಾಂಸಿ ಪತ್ರಾಣಿ ದೇವಸ್ತಿರ್ಯಂಚಶ್ಚ ಶಾಖಾಃ
ಪತ್ರೇಭ್ಯೋ ಹಿ ಫಲಂ ಜಾಯತೇ ಮಾತ್ರಾಃ ಶಿಫಾಃ ಮುಕ್ತಿಃ ಫಲಮಮುಕ್ತಿಃ ಫಲಂ
ಮೋಕ್ಷೋ ರಸೋಽಮೋಕ್ಷೋ ರಸಃ ಅವ್ಯಕ್ತೇ ಚ ಶಾಖಾಃ ವ್ಯಕ್ತೇ ಚ ಶಾಖಾಃ

**ಅವ್ಯಕ್ತೇ ಚ ಮೂಲಂ ವ್ಯಕ್ತೇ ಚ ಮೂಲಂ ವಿಷೋಽಶ್ವತ್ಥೋ ಗುಣಾಲೋಽಪ್ರ ಕ್ತೋ ನ ಸ್ಥೀಯತೇ ಸ ನ ಸ್ಥೀಯತೇ ನ ಹ್ಯೇಷ ಕದಾಚನಾನ್ಯಥಾ ಜಾಯತೇ ನಾನ್ಯಥಾ ಜಾಯತ ಇತಿ ॥ ೨ ॥**

ಅ ॥ (೧) ಜಗದ್ವೃಕ್ಷಕ್ಕೆ ಕೊಂಬೆಗಳಂತಿರುವ ಪಂಚಭೂತಗಳು ತಮಗಿಂತ ನಿಕೃಷ್ಟಗಳಾದ ಶರೀರ ಮೊದಲಾದ ಕಾರ್ಯಗಳಲ್ಲಿಯೂ, ಉತ್ತಮ ಕಾರಣವಾದ ಅವ್ಯಕ್ತ ತತ್ತ್ವದಲ್ಲಿಯೂ, ಪ್ರಸೃತಾಃ=ಸೂಕ್ಷ್ಮ ರೂಪಗಳಿಂದ ಇರುತ್ತವೆ. (೨) (ಗುಣಪ್ರವೃದ್ಧಾಃ ಎಂಬುವಲ್ಲಿದ್ದ ಗುಣಶಬ್ದದ ಅರ್ಥವನ್ನು ಹೇಳುತ್ತಾರೆ-) ಗುಣೈಃ—ಸತ್ತ್ವ ಮೊದಲಾದ ಗುಣಗಳಿಂದ (ವಿಷಯಗಳಿಗೆ ಪ್ರವಾಲತ್ವವು ಹೇಗೆಂದರೆ—) ಗಂಧಾದಿಗಳ ಜ್ಞಾನವುಂಟಾಗುವ ಸಮಯದಲ್ಲಿ ಮಾತ್ರ ಸುಖಕ್ಕೆ ಕಾರಣವಾಗಿರುವುದರಿಂದ ಗಂಧ ಮೊದಲಾದ ವಿಷಯಗಳು ಚಿಗುರೆಲೆಗಳೆನ್ನಿಸುತ್ತವೆ. (೩) (ಅಧಶ್ಚ ಮೂಲಾನಿ ಎಂಬಲ್ಲಿ ರಾಗ ದ್ವೇಷ ಮೊದಲಾದುವುಗಳ ಸಂಸ್ಕಾರಗಳು ಮೂಲಗಳು ಎಂದು ಪರರು ಹೇಳುವ ಅರ್ಥವು ಯುಕ್ತವಲ್ಲವೆನ್ನುತ್ತಾರೆ—) ಭಗವದ್ರೂಪ, ಚೇತನಾಚೇತನ ಪ್ರಕೃತಿ, ಸತ್ತ್ವಾದಿ ಗುಣ ಇವುಗಳು ಬೇರುಗಳಂತಿರುವವುಗಳು. ಶ್ರೀಪರಮಾತ್ಮನೂ ಕೂಡ ಅವರವರ ಕರ್ಮಾನುಸಾರವಾಗಿಯೇ ಫಲವನ್ನು ಕೊಡುತ್ತಾನೆ (ಆದಕಾರಣ ಕರ್ಮಾನುಬಂಧಿತ್ವವು ಕೂಡುತ್ತದೆ.) (೪) (ಈ ಶ್ಲೋಕಗಳ ಅರ್ಥದಲ್ಲಿ ವೇದಸಮ್ಮತಿಯನ್ನು ಹೇಳುತ್ತಾರೆ-) ಭಾಲ್ಲವೇಯ ಶಾಖೆಯಲ್ಲಿ ಹೀಗೆಯೇ ಹೇಳಿದೆ. ಜಗದ್ವೃಕ್ಷಕ್ಕೆ ಪರಬ್ರಹ್ಮನು ವೃಕ್ಷಸ್ವರೂಪದಲ್ಲಿ ಅಂತರ್ಗತನಾಗದೆ ಮೂಲಭೂಮಿಯಂತಿರುವವನು. ಜಡ ಪ್ರಕೃತಿಯು ಬೀಜದಂತೆ ಸಂಪೂರ್ಣ ವೃಕ್ಷಸ್ವರೂಪದಲ್ಲಿಯೇ ಸೇರಿ ಮೂಲವಾದದ್ದು. (ಅಂದರೆ—ಸ್ಥೂಲ ಪ್ರಕೃತಿ, ಸೂಕ್ಷ್ಮ ಪ್ರಕೃತಿ ಎಂದು ಪ್ರಕೃತಿಯು ಎರಡು ವಿಧವು. ಅದರಲ್ಲಿ ಭೂಮಿಯಲ್ಲಿ ಬೀಜ ಹಾಕಿದಾಗ ಪ್ರಸಿದ್ಧ ವೃಕ್ಷಕ್ಕೆ ಭೂಮಿಯಂತೆ ಜಗದ್ವೃಕ್ಷಕ್ಕೆ ಮೂಲ ಪ್ರಕೃತಿಯೆಂದು ಹೆಸರುಳ್ಳ ಸ್ಥೂಲ ಪ್ರಕೃತಿಯು ಉಪಾದಾನ ಕಾರಣವು. ಸತ್ತ್ವಾದಿಗುಣಗಳಿಗೆ ಉಪಾದಾನ ಕಾರಣವಾದ ಸೂಕ್ಷ್ಮ ಪ್ರಕೃತಿಯು ಪ್ರಸಿದ್ಧ ವೃಕ್ಷಕ್ಕೆ ಬೀಜದಂತೆ ಉಪಾದಾನ ಕಾರಣವು. ಹೀಗೆ ಜಗದ್ವೃಕ್ಷಕ್ಕೆ ಸ್ಥೂಲ ಸೂಕ್ಷ್ಮ ಪ್ರಕೃತಿಗಳು ಸಹಭೂತ ಉಪಾದಾನ ಕಾರಣವು.) ಸತ್ತ್ವಾದಿಗುಣಗಳು ಪ್ರಸಿದ್ಧ ವೃಕ್ಷೈಕದೇಶಭೂತವಾದ ಭೂಮಿಯೊಳಗಣ ಪ್ರಧಾನಮೂಲ ಸಂಬಂಧವಾದ ಅಲ್ಪ ಮೂಲದಂತೆ ಚಿಕ್ಕ ಚಿಕ್ಕ ಬೇರು. ಪಂಚಮಹಾಭೂತಗಳು ಗೆಲ್ಲುಗಳಂತಿರುವವುಗಳು. ವೇದಗಳು ಎಲೆಗಳಂತಿರುವವುಗಳು. (ಛಂದಾಂಸಿ ಎಂಬುವುದನ್ನು ವಿವರಿಸುತ್ತಾರೆ-) ಎಲೆಗಳಿಂದಲೇ ಫಲವು ಹುಟ್ಟುತ್ತದೆ. ದೇವತೆಗಳು ಮನುಷ್ಯರು ತಿರ್ಯಕ್ಪ್ರಾಣಿಗಳು ಇವುಗಳ ಶರೀರಗಳು ಉಪಶಾಖೆಗಳೆನಿಸುತ್ತವೆ. ಸಣ್ಣ ಸಣ್ಣ ಗೆಲ್ಲುಗಳು ಉಪಶಾಖೆಗಳು ದೇವಾದಿಗಳ ಶರೀರಗಳು ಗೆಲ್ಲುಗಳಂತಿರುವ ಪಂಚಮಹಾಭೂತಗಳ ರೂಪಾಂತರಗಳಾಗಿರುವುದರಿಂದ ಅವುಗಳ ಸಂಬಂಧಿಗಳಾಗಿ ಉಪಶಾಖೆಗಳೆನಿಸುತ್ತವೆ. ಮಾತ್ರಾಃ—ಭೂತಸೂಕ್ಷ್ಮಗಳು ಅಂದರೆ ಪಂಚಭೂತಗಳಿಗೆ ಉಪಾದಾನಕಾರಣಗಳಾದ ಪಂಚತನ್ಮಾತ್ರೆಗಳು, ಶಿಫಾಃ—ಜಟೆಗಳು (ಕೆಳಗೆ ಇಳಿಯುವ ಬೇರುಗಳು) (ಅಂದರೆ—ರೂಪ ರಸ ಶಬ್ದಾದಿಗಳು (1) ಪಂಚಭೂತಗಳಿಗೆ ಉಪಾದಾನಕಾರಣಗಳಾದವುಗಳು. (2) ಭೌತಿಕಗಳು. ಎಂದು ಎರಡು ವಿಧಗಳು. ಅವರಲ್ಲಿ 1ನೇದು ಜಟೆಗಳೆನಿಸುತ್ತವೆ. 2ನೇದು ಚಿಗುರೆಲೆಗಳಂತಿರುವವುಗಳು) ಮೋಕ್ಷವೆಂಬ ಪುರುಷಾರ್ಥಕ್ಕೆ ಸಾಧನವಾದ ಜ್ಞಾನವು ಅವಾಂತರ (ಅಮುಖ್ಯ) ಫಲವು. ಮೋಕ್ಷ ಹೊರತು ಬೇರೆ ಪುರುಷಾರ್ಥವನ್ನು ಹೊಂದಿಸಿಕೊಡುವ ಕಾಮ್ಯಕರ್ಮವು ಅಮುಖ್ಯ ಫಲವು. ಜ್ಞಾನಕರ್ಮಗಳಿಗೆ ಮೋಕ್ಷಸ್ವರ್ಗಗಳೆಂಬ ಪುರುಷಾರ್ಥಗಳೇ ಶ್ರೇಷ್ಠ ಫಲವು ಶಾಖಾಃ—ಪಂಚಭೂತಗಳು ಅವ್ಯಕ್ತ ತತ್ತ್ವದಲ್ಲಿ ಇರುತ್ತವೆ (ಕಾರಣದಲ್ಲಿ ಕಾರ್ಯವು ಇರುತ್ತದೆ.) ಹಾಗೆಯೇ ಪಂಚಭೂತಗಳು ತಮಗಿಂತ ನಿಕೃಷ್ಟವಾದ ಶರೀರಾದಿ ಕಾರ್ಯಗಳಲ್ಲಿಯೂ ಇರುತ್ತವೆ. (ಕಾರ್ಯಗಳಲ್ಲಿ ಕಾರಣವು ಇದೆ.) ಅವಾಚೀನ [illegible]

ಣ್ಯ ಮೊದಲಾದುದು ಅಥವಾ ಪರಬ್ರಹ್ಮನು ಅವ್ಯಕ್ತದಲ್ಲಿ ನಿಯಾಮಕನಾಗಿರುತ್ತಾನೆ. ಹಾಗೆಯೇ ವ್ಯಕ್ತವಾದ ಶಾಖಾಭೂತವಾದ ಪಂಚಭೂತಾದಿಗಳಲ್ಲಿಯೂ ಶರೀರಾದಿ ಕಾರ್ಯಗಳಲ್ಲಿಯೂ ಭಗವದ್ರೂಪವೂ ಚೇತನಾಚೇತನ ಪ್ರಕೃತಿಗಳೂ ಸತ್ವ ಮೊದಲಾದ ಅರ್ವಾಚೀನ ರೂಪಮೂಲವು ಇವೆ. ಈ ಜಗದ್ವೃಕ್ಷವು ವಿಷಯುಗಳೆಂಬ ಚಿಗುರು ಎಲೆಗಳುಳ್ಳದ್ದು. ಒಂದೇ ರೀತಿಯಾಗಿ ಇರುವುದೇ ಇಲ್ಲ. ನದಿಯ ಪ್ರವಾಹದಂತೆ ಪ್ರವಾಹತಃ ನಿತ್ಯವು. ಇದು ಯಾವಾಗಲೂ ಸರ್ವಥಾ ವ್ಯತ್ಯಾಸವನ್ನು ಹೊಂದುವುದೇ ಇಲ್ಲ. ॥ ೨ ॥

ಕಾ ॥ ಓಂ ॥ (೧) ತ್ರಯೋದಶಾಧ್ಯಾಯೋಕ್ತಂ ವಿವಿಚ್ಯ ದರ್ಶಯತಿ ॥(೨) ಪೃಥಙ್ಮೂಲಂ ಹರಿಸ್ತಸ್ಯ ಜಗದ್ವೃಕ್ಷಸ್ಯ ಭೂಮಿವತ್ । ಸತ್ತ್ವಾದಿಯುಕ್ತೇ ಚಿದಚಿತ್ಪ್ರಕೃತೀ ಮೂಲಭಾಗವತ್ ॥ (೩) ಅತ್ರಾಪಿ ಚಿದಚಿದ್ಯೋಗೋ ವೃಕ್ಷವತ್ಸಂಪ್ರಕೀರ್ತಿತಃ । ಪೃಥಿವೀ ದೇವತಾ ತಾವದ್ಧರಿರ್ಮೃರ್ದ್ವದಚೇತನಾ ॥ (೪) ಉಕ್ತಮುಕ್ತಾತ್ತು ಮೂಲಾನಾಮೂರ್ಧ್ವಮೂಲಸ್ತ್ವಯಂ ಸ್ಮೃತಃ । ನೀಚಾಸ್ತತೋ ಮಹದಹಂಬುದ್ಧಯೋ ಭೂತಸಂಯುತಾಃ । ಶಾಖಾಃ ॥ (೫) ಛಂದಾಂಸಿ ಪರ್ಣಾನಿ ಕಾಮಮೋಕ್ಷಫಲೇ ಹ್ಯತಃ । ಕಾರಣೇಷು ಸ್ಥಿತಂ ಕಾರ್ಯಂ ವ್ಯಾಪ್ತಂ ಕಾರ್ಯೇಷು ಕಾರಣಂ । ಅನ್ಯೋನ್ಯಸಂಯುತಾಃ ಶಾಖಾ ಮೂಲಾನಿ ತು ಸದೈವ ತು । ವಿಷಯಾ ದರ್ಶನೀಯತ್ವಾತ್ಪ್ರವಾಲಸದೃಶಾ ಮತಾಃ ॥ (೬) ಜಗದ್ವೃಕ್ಷೋಽಯಮಶ್ವತ್ಥೋ ಹ್ಯಶ್ವವಚ್ಚಂಚಲಾತ್ಮಕಃ । ಅವ್ಯಯೋಽಯಂ ಪ್ರವಾಹೇಣ ॥ ೧,೨ ॥

ಅ ॥ (೧) ಹದಿಮೂರನೇ ಅಧ್ಯಾಯದಲ್ಲಿ ಇದಂ ಶರೀರಂ ಕೌಂತೇಯ (ಶ್ಲೋ. ೨) ಎಂದು ಪ್ರಾರಂಭಿಸಿ ಮಹಾಭೂತಾನಿ (ಶ್ಲೋ. ೬.) ಇತ್ಯಾದಿಗಳಿಂದ ಹೇಳಿದ ಜಗತ್ಸ್ವರೂಪವನ್ನು ಈ ಅಧ್ಯಾಯದಲ್ಲಿ ಊರ್ಧ್ವಮೂಲಂ ಇತ್ಯಾದಿಗಳಿಂದ ವಿವರಿಸಿ ತೋರಿಸುತ್ತಾರೆ ಆ ಜಗತ್ತೇ ಸಂಸಾರ ಸ್ವರೂಪವು. ಸಂಸಾರವನ್ನು ಬಿಡಲಿಚ್ಛಿಸುವವನು ಸಂಸಾರ ಸ್ವರೂಪವನ್ನು ಅವಶ್ಯವಾಗಿ ತಿಳಿಯಬೇಕು. (ಮತ್ತು ೧೩ನೇ ಅಧ್ಯಾಯದಲ್ಲಿ ಅಮಾನಿತ್ವಂ (ಶ್ಲೋ. ೮.) ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥದರ್ಶನಂ (ಶ್ಲೋ. ೧೨.) ಎಂಬ ಪರ್ಯಂತ ಹೇಳಿದ ಸಂಸಾರ ಛೇದನೋಪಾಯವನ್ನು ನಿರ್ಮಾನಮೋಹಾಃ (ಶ್ಲೋ. ೫) ಇತ್ಯಾದಿಗಳಿಂದ ತೋರಿಸುತ್ತಾರೆ—) (ಮತ್ತು ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ (ಅಧ್ಯಾ ೧೩. ಶ್ಲೋ. ೧೩) ಎಂದು ಉಪಕ್ರಮಿಸಿ ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ಇತ್ಯಾದಿಗಳಿಂದ ಹೇಳಿದ ಮುಖ್ಯ ಜ್ಞೇಯವಾದ ಭಗವತ್ಸ್ವರೂಪವನ್ನು ದ್ವಾವಿಮೌ ಪುರುಷೌ ಲೋಕೇ ಇತ್ಯಾದಿಗಳಿಂದ ತೋರಿಸುತ್ತಾರೆ—) (೨) (ಅದರಲ್ಲಿ ಅಪ್ರತಿಪತ್ತಿ (ಊರ್ಧ್ವ ಮೊದಲಾದ ಶಬ್ದಗಳಿಗೆ ಶ್ರೀಪರಮಾತ್ಮನು ಇದು ಮೊದಲಾದ ಮುಖ್ಯಾರ್ಥವನ್ನು ತಿಳಿಯದಿರುವುದು.) ಅನ್ಯಥಾಪ್ರತಿಪತ್ತಿ (ಊರ್ಧ್ವಶಬ್ದವು ಸ್ವರ್ಗಾದಿಪರವೆಂದೂ ಅಧಃಶಬ್ದವು ಪಾತಾಳಾದಿ ಲೋಕಪರವೆಂದು ವದ...) ಇವುಗಳನ್ನು ನಿರಾಕರಿಸುವುದಕ್ಕಾಗಿ ವೇದಪ್ರಮಾಣವನ್ನು ದಾಹರಿಸಿಕೊಂಡು ಈ ಅಧ್ಯಾಯಾರ್ಥವನ್ನು ವ್ಯಾಖ್ಯಾನ ಮಾಡುತ್ತಾರೆ ವೃಕ್ಷಕ್ಕೆ ಭೂಮಿಯು ಮರದ ಏಕದೇಶವಾಗಿ ಮೂಲವಾಗುವಂತೆ ಶ್ರೀಹರಿಯು ಜಗತ್ತಿನ ಏಕದೇಶನಾಗದೆ ಭಿನ್ನನಾಗಿಯೇ ಇದ್ದು ಸಂಸಾರಕ್ಕೆ ಮೂಲಕಾರಣನು. (ಬೇರೆ ರೀತಿಯಾಗಿಯೂ ಊರ್ಧ್ವಮೂಲ ಎಂಬುವುದಕ್ಕೆ ಅರ್ಥವನ್ನು ಹೇಳುತ್ತಾರೆ—) ಸತ್ವಗುಣ ಮೊದಲಾದ ಗುಣಗಳಿಂದ ಕೂಡಿದ ಚೇತನಾಚೇತನ ಪ್ರಕೃತಿಗಳು ಪ್ರಸಿದ್ಧ ವೃಕ್ಷದ ಏಕದೇಶಭೂತವಾದ ಮೂಲದಂತೆ ಮೂಲವು (ಮ...

ಗಳಿಂದಲೇ ಕೊಂಬೆಗಳು ಅಭಿವೃದ್ಧಗಳಾಗುತ್ತವೆ.) (೩) (ಜಗತ್ತು ಅಚೇತನವಾಗಿರುವುದರಿಂದ ಜಡಪ್ರಕೃತಿಯೇ ಜಗತ್ತಿಗೆ ಮೂಲವು. ಚೇತನ ಪ್ರಕೃತಿಯು ಮೂಲವಲ್ಲ, ಎಂದರೆ—) ಸಂಸಾರವೃಕ್ಷದಲ್ಲಿಯೂ ಪ್ರಸಿದ್ಧ ವೃಕ್ಷದಂತೆಯೇ ಚೇತನಾಚೇತನಗಳ ಸಂಬಂಧವು ಇದೆ. (ಅಂದರೆ—ಜಡಪ್ರಕೃತಿಯು ಸತ್ತ್ವಾದಿ ಗುಣಗಳೂ ಭೂಮಿಯಂತೆ ಉಪಾದಾನಕಾರಣವು. ಚಿತ್ಪ್ರಕೃತಿಯಾದ ಲಕ್ಷ್ಮೀದೇವಿಯು ಜಗದ್ವೃಕ್ಷಕ್ಕೆ ನಿಯಾಮಕಳು.) (ಶ್ರೀಹರಿಯೂ ಭೂಮಿಯಂತೆ ಮೂಲಕಾರಣನೆಂದಾದರೆ— ಭೂಮಿಯ ಅಂಶಗಳಿಗೆ ಲೋಕದಲ್ಲಿ ಪರಿಣಾಮವು ಕಂಡಂತೆ ಶ್ರೀಹರಿಗೂ ಜಗದ್ರೂಪದಿಂದ ಪರಿಣಾಮವು ಆಗಬೇಕಾಗುವುದು ಎಂದರೆ—) ಸಂಸಾರ ವೃಕ್ಷದಲ್ಲಿ ಶ್ರೀಹರಿಯು ಪ್ರಸಿದ್ಧ ವೃಕ್ಷಕ್ಕೆ ಪೃಥಿವೀ ದೇವತೆಯಾದ ಧರಾದೇವಿಯಂತೆ ನಿಮಿತ್ತಕಾರಣನಾದುದರಿಂದ ಮೂಲನೆನಿಸುತ್ತಾನೆ. ಮಣ್ಣಿನಂತೆ ಉಪಾದಾನಕಾರಣನಾಗಿ ಅಲ್ಲ. ಜಗದ್ವೃಕ್ಷಕ್ಕೆ ಜಡಪ್ರಕೃತಿಯು ಮಣ್ಣಿನಂತೆ ಉಪಾದಾನಕಾರಣವು. (೪) (ಹೀಗಾದರೆ ಜಗದ್ವೃಕ್ಷಕ್ಕೆ ವಿಷ್ಣ್ವಾದಿಗಳು ಮೂಲವಾಗುವರು. ಊರ್ಧ್ವಮೂಲವು ಎಂದು ಹೇಳಿದ್ದು ಹೇಗೆ ಎಂದರೆ—) ವಿಷ್ಣುವು ಸರ್ವೋತ್ತಮನಾಗಿರುವುದರಿಂದಲೂ ಚಿತ್ಪ್ರಕೃತಿಯಾದ (ಲಕ್ಷ್ಮೀದೇವಿಯು) ಪರತಂತ್ರಗಳಲ್ಲಿ ಉತ್ತಮಳಾಗಿರುವುದರಿಂದಲೂ (ಅಚಿತ್ಪ್ರಕೃತಿಯಾದ ಜಡಪ್ರಕೃತಿಯು) ಅಚೇತನಗಳಲ್ಲಿ ಉತ್ತಮವಾಗಿರುವುದರಿಂದಲೂ ಈ ಸಂಸಾರ ವೃಕ್ಷವು ಉತ್ತಮರಾದ ವಿಷ್ಣ್ವಾದಿಗಳೇ ಮೂಲವಾಗಿ ಉಳ್ಳದ್ದಾದುದರಿಂದ ಊರ್ಧ್ವಮೂಲ ಎನಿಸುತ್ತದೆಂದು ಹೇಳಿದ್ದು. ಜಗದ್ವೃಕ್ಷಕ್ಕೆ ಶ್ರೀಪರಮಾತ್ಮನಿಗಿಂತಲೂ ಚಿದಚಿತ್ಪ್ರಕೃತ್ಯಾದಿಗಳಿಗಿಂತಲೂ) ನಿಕೃಷ್ಟಗಳಾದ ಮಹತ್ತತ್ತ್ವ ಅಹಂಕಾರತತ್ತ್ವ ಬುದ್ಧಿತತ್ತ್ವ, ಪಂಚಭೂತಗಳು ಕೊಂಬೆಗಳಂತಿರುವವುಗಳು. (ಆದಕಾರಣ ಅಧಶ್ಶಾಖಂ ಎಂದು ಹೇಳಿದ್ದು.) (೫) (ಗಾಯತ್ರೀ ಮೊದಲಾದ ಛಂದೋಬದ್ಧಗಳಾದ ವೇದಗಳು ಐಹಿಕಾಮುಷ್ಮಿಕ ಫಲಗಳಿಗೆ ಕಾರಣಗಳಾಗಿರುವುದರಿಂದ) ಛಂದಸ್ಸುಗಳು ಜಗದ್ವೃಕ್ಷಕ್ಕೆ ಪರ್ಣಗಳೆನಿಸುತ್ತವೆ. ಛಂದಸ್ಸಿಗೆ ಐಹಿಕವಾದ ಐಶ್ವರ್ಯಾದಿ, ಆಮುಷ್ಮಿಕವಾದ ಸ್ವರ್ಗಾದಿರೂಪ ವಿಷಯವೂ, ಮೋಕ್ಷವೂ ಇವುಗಳೇ ಫಲಗಳಾಗುತ್ತವೆ (ಲೋಕದಲ್ಲಿ ಎಲೆಯು ಹುಟ್ಟಿದ ಮೇಲೆಯೇ ಫಲವು ಕಂಡದ್ದರಿಂದ ಇಲ್ಲಿಯೂ ಛಂದಸ್ಸುಗಳು ಐಹಿಕಾಮುಷ್ಮಿಕ ಫಲಕಾರಣಗಳಾಗಿರುವುದರಿಂದ ಪರ್ಣಗಳೆನಿಸುತ್ತವೆ.) ಫಲಕಾರಣಗಳಾದ ಛಂದಸ್ಸುಗಳು ಪರ್ಣಗಳೆಂದು ಹೇಳಿದ ಕಾರಣ ಜಗದ್ವೃಕ್ಷಕ್ಕೆ ಕಾಮ ಮೋಕ್ಷಗಳೆಂದು ಎರಡು ಫಲಗಳೆಂದು ಉಕ್ತವಾಯಿತು. (ಅಧಶ್ಚೋರ್ಧ್ವಂ ಚ ಎಂಬುದಕ್ಕೆ ಅರ್ಥ ಹೇಳುತ್ತಾರೆ. ಕಾರಣಗಳಲ್ಲಿ ಕಾರ್ಯವು ಇದ್ದುದರಿಂದ ಮೂಲಗಳಲ್ಲಿ ಕೊಂಬೆಗಳು ಹರಡಿಕೊಂಡಿವೆ. ಕಾರ್ಯಗಳಲ್ಲಿ ಕಾರಣವು ವ್ಯಾಪಿಸಿಕೊಂಡಿದ್ದ ಕಾರಣ ಮೂಲಗಳು ಕೊಂಬೆಗಳಲ್ಲಿ ವ್ಯಾಪಿಸಿಕೊಂಡಿವೆ. ಆದಕಾರಣ ಯಾವಾಗಲೂ ವಿಶೇಷಾಕಾರವಾಗಿ ಪ್ರಸಿದ್ಧ ವೃಕ್ಷದಲ್ಲಿ ಕೆಳಗಿನ ಕೊಂಬೆಗಳು ಮೇಲಿನ ಮೂಲಗಳಲ್ಲಿಯೂ ಬೇರುಗಳು ಕೆಳಗಿನ ಕೊಂಬೆಗಳಲ್ಲಿಯೂ ವ್ಯಾಪ್ತಗಳಾಗಿ ಇದ್ದಂತೆಯೇ ಹಿಂದೆ ಹೇಳಿದ ವಿಷ್ಣ್ವಾದಿ ಮೂರು ಮೂಲಗಳೂ ಮಹದಾದಿ ಎಂಟು ಶಾಖೆಗಳೂ ಈ ಜಗದ್ವೃಕ್ಷವನ್ನು ವ್ಯಾಪಿಸಿಕೊಂಡಿದ್ದಾವೆ. ಯಾವಾಗಲೂ ಅತ್ಯಾದರದಿಂದ ದರ್ಶನೀಯಗಳಾಗಿರುವುದರಿಂದ ವಿಷಯಗಳು ಜಗದ್ವೃಕ್ಷದ ಚಿಗುರು ಎಲೆಗೆ ಸದೃಶಗಳು. (೬) ಈ ಸಂಸಾರ ವೃಕ್ಷವು ಗಾಳಿಯಂತೆ ಚಂಚಲ ಸ್ವಭಾವವುಳ್ಳದ್ದಾದುದರಿಂದ ಅಶ್ವತ್ಥ ಎನಿಸುತ್ತದೆ. ಈ ವೃಕ್ಷವು ನದಿಯ ಪ್ರವಾಹದಂತೆ ಪ್ರವಾಹರೂಪದಿಂದ ನಾಶವಿಲ್ಲದಿರುವುದು ॥ ೧, ೨ ॥

ಗೀ ॥ ನ ರೂಪಮಸ್ಯೇಹ ತಥೋಪಲಭ್ಯತೇ
ನಾಂತೋ ನ ಚಾದಿರ್ನ ಚ ಸಂಪ್ರವಿಷ್ಠಃ ।
ಅಶ್ವತ್ಥಮೇನಂ ಸುವಿರೂಢಮೂಲ-
ಮಸಂಗಶಸ್ತ್ರೇಣ ದೃಢೇನ ಛಿತ್ವಾ ॥ ೩ ॥

ಅ ॥ ಅಸ್ಯ= ಈ ಜಗತ್ತೆಂಬ ವೃಕ್ಷದ, ರೂಪಂ= ಆಕಾರವು, ತಥಾ= ಪೂರ್ವಕಾಲದಲ್ಲಿ ಹೇಗೆ ಇತ್ತೋ, ಹಾಗೆಯೇ, ಇಹ= ಈ ಭೂಲೋಕದಲ್ಲಿ, ನೋಪಲಭ್ಯತೇ=ಸರ್ವದಾ ಒಂದೇ ರೀತಿಯಾಗಿ ಕಾಣಬರುವುದಿಲ್ಲ. (ಅಂದರೆ— ಜಗತ್ತು ಯಾವಾಗಲೂ ವಿಕಾರವನ್ನು ಹೊಂದುತ್ತಿರುವುದರಿಂದ ಈ ದಿವಸ ಇರುವಂತೆ ನಾಳೆ ಇರುವುದಿಲ್ಲ. ನಿನ್ನೆ ಇದ್ದಂತೆ ಇಂದು ಇರುವುದಿಲ್ಲ ಆದಕಾರಣ ಒಂದೇ ರೀತಿ ಯಾಗಿ ತೋರಿಬರುವುದಿಲ್ಲ.) ಅಂತಃ ನ ಜಗತ್ತಿಗೆ ನಾಶಕನಾದ ಶ್ರೀವಿಷ್ಣುವು ಕಾಣುವುದಿಲ್ಲ. ನ ಚಾದಿಃ ಜಗತ್ತಿಗೆ ಉತ್ಪಾದಕನಾದ ಶ್ರೀವಿಷ್ಣುವು ಕಾಣುವುದಿಲ್ಲ. ಸಂಪ್ರತಿಷ್ಠಾ ಚ=(ಜಗತ್ತಿಗೆ ಉತ್ಪತ್ತಿ ಸಂಹಾರಗಳನ್ನು ಮಾಡುವುದರಿಂದ ಆದಿ ಅಂತ ಪದಗಳಿಂದ ಹೇಳಲ್ಪಟ್ಟ ಶ್ರೀವಿಷ್ಣುವು ಜಗತ್ತನ್ನು) ಪ್ರವೇಶಿಸಿ ಕೊಂಡಿದ್ದರೂ, ನೋಪಲಭ್ಯತೇ= ಕಂಡುಬರುವುದಿಲ್ಲ. ಸುವಿರೂಢಮೂಲಂ= ಅತಿ ಘಟ್ಟಿಯಾದ ಮೂಲಗಳುಳ್ಳ (ಅಂದರೆ—ಸರ್ವೋತ್ಕೃಷ್ಟನಾದ ವಿಷ್ಣುವೇ ಮೊದಲಾದ ಅನೇಕ ಕಾರಣಗಳುಳ್ಳ.) ಏನಂ= ಹಿಂದೆ ಹೇಳಿದ, ಅಶ್ವತ್ಥಂ= ಜಗತ್ತೆಂಬ ವೃಕ್ಷವನ್ನು, ದೃಢೇನ= ಅತಿ ಘಟ್ಟಿಯಾದ, ಅಸಂಗಶಸ್ತ್ರೇಣ= ವಿಷಯಗಳಲ್ಲಿ ಸ್ನೇಹ ತೊರೆದು ವೈರಾಗ್ಯದಿಂದ ಸಂಪಾದಿಸಲ್ಪಟ್ಟ ಜ್ಞಾನವೆಂಬ ಶಸ್ತ್ರದಿಂದ, ಛಿತ್ವಾ= ಛೇದಿಸಿಕೊಂಡು (ಅಂದರೆ ಶ್ರೀಪರಮಾತ್ಮನು ಸರ್ವೋತ್ತಮನು, ಸರ್ವ ಕಾರಣನು ಜಗತ್ತಿಗಿಂತ ಭಿನ್ನನು, ಜಗತ್ತು ಪರತಂತ್ರವೇ, ಇತ್ಯಾದಿ ರೀತಿ ಯಾಗಿತಿಳಿದುಕೊಂಡು ಶ್ರೀಪರಮಾತ್ಮನನ್ನು ಹೊಂದಬೇಕು. ॥ ೩ ॥

ಭಾ ॥ (೧) ಯಥಾ ಸ್ಥಿತಸ್ತಥಾ ನೋಪಲಭ್ಯತೇ । ಅಂತಾದಿರ್ವಿಷ್ಣುಃ । ತ್ವಮಾದಿರಂತೋ ಜಗತೋಽಸ್ಯ ಮಧ್ಯಮಿತಿ ಭಾಗವತೇ ॥ (೨) ಅನಾದ್ಯಂತಂ ಪರಂ ಬ್ರಹ್ಮ ನ ದೇವಾ ಋಷಯೋ ವಿದುರಿತಿ ಮೋಕ್ಷಧರ್ಮೇ ॥ (೩) ಅಸಂಗಶಸ್ತ್ರೇಣ ಸಂಗರಾಹಿತ್ಯಸಹಿತೇನ ಜ್ಞಾನೇನ । ಜ್ಞಾನಾಸಿನೋಪಾಸನಯಾ ಸಿತೇನೇತಿ ಭಾಗವತೇ । ಛೇದಶ್ಚ ವಿಮರ್ಶ ಏವ ॥ (೪) ತತಶ್ಚ ತಸ್ಯೈವಾಬಂಧಕಂ ಭವತಿ । ತಥಾ ಹಿ । ಮೂಲಸ್ಥಂ ಬ್ರಹ್ಮ ಪ್ರತೀಯತೇ ॥ (೫) ತಚ್ಚೋಕ್ತಂ । ತಚ್ಛ್ರುತಾವೇವ ವಿಮರ್ಶೋ ಹ್ಯಸ್ಯ ಛೇದಃ ತಂ ನ ಬಧ್ನಾತಿ ಬಧ್ನಾತಿ ಚಾನ್ಯಾನಿತಿ ॥ ೩ ॥

ಅ ॥ (೧) ಜಗದ್ವೃಕ್ಷಕ್ಕೆ ವಿಕಾರ ನಾಶಾದಿಗಳಿದ್ದರೂ, ಹಾಗೆ ಕಾಣುವುದಿಲ್ಲ. (ಜಗತ್ತನ್ನು ಸಂಹರಿಸುವುದರಿಂದ) ಅಂತನೆಂದೂ (ಸೃಷ್ಟಿಸುವುದರಿಂದ) ಆದಿಯೆಂದೂ ಎನಿಸಿಕೊಂಡ ವಿಷ್ಣುವು (ಕಾಣುವುದಿಲ್ಲ.) (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಎಲೋ ಶ್ರೀಹರಿಯೇ ನೀನು ಈ ಜಗತ್ತಿಗೆ ಸೃಷ್ಟಿಕರ್ತನು, ಸಂಹಾರಕನು, ಸ್ಥಿತಿಕರ್ತನು, ಎಂದು ಭಾಗವತದಲ್ಲಿದೆ. (೨) (ಶ್ರೀಹರಿಯು ಎಲ್ಲರಿಗೆ ಕಾಣಬರುವುದಿಲ್ಲ ಎಂಬುವಲ್ಲಿ ಪ್ರಮಾಣವನ್ನು ಹೇಳುತ್ತಾರೆ-) ಉತ್ಪತ್ತಿ ನಾಶಗಳಿಲ್ಲದಿರುವ ಪರಬ್ರಹ್ಮನನ್ನು ದೇವತೆಗಳೂ ಋಷಿಗಳೂ ಸಂಪೂರ್ಣ ತಿಳಿಯುವುದಿಲ್ಲ, ಎಂದು ಮೋಕ್ಷಧರ್ಮದಲ್ಲಿದೆ. (೩) ಅಸಂಗಶಸ್ತ್ರೇಣ= ಪುತ್ರಾದಿಗಳಲ್ಲಿ ಸ್ನೇಹವಿಲ್ಲದಿರುವುದರಿಂದೊಡಗೂಡಿದ ಜ್ಞಾನದಿಂದ, (ಅಸಂಗವೇ ಶಸ್ತ್ರ ಎಂದು ಪ್ರತೀತವಾದ ಅರ್ಥವೇ ಏಕೆ ಆಗಲಾರದೆಂದರೆ—) ಭಗವದುಪಾಸನೆಯಿಂದ ಹರಿತ (ತೀಕ್ಷ್ಣ)ವಾದ ಜ್ಞಾನವೆಂಬ ಖಡ್ಗದಿಂದ. ಎಂದು ಭಾಗವತದಲ್ಲಿದೆ. ಇಲ್ಲಿ ಛೇದವೆಂದರೆ ವಿಚಾರಪೂರ್ವಕ ತಿಳಿದುಕೊಳ್ಳುವಿಕೆಯೇ. (ಅವಿದ್ಯಾರೂಪವಾದ ಬೀಜ ಸಹಿತವಾಗಿ ವಿನಾಶ ಹೊಂದಿ ಎಂಬ ಪರರ [illegible] ಯುಕ್ತವಲ್ಲ.) (೪) (ಪ್ರಕೃತಿ ಮೊದಲಾದ ಜಗತ್ತಿಗೆ ಅನಿತ್ಯತ್ವಾದಿ ಜ್ಞಾನವೇ ಛೇದವು [illegible] ನಾಶವಲ್ಲ.) ಆದುದರಿಂದಲೇ ಯಾವನು ವಿಚಾರ ಮಾಡುತ್ತಾನೋ, ಅವನನ್ನೇ [illegible] [illegible]ವುದಿಲ್ಲ (ಹೀಗೆ ಅರ್ಥವಾದದಿದ್ದರೆ—ಒಬ್ಬನು ಅವಿದ್ಯೆಯನ್ನು ಛೇದಿಸಿಕೊಂಡರೆ [illegible]

ಮುಕ್ತಿಯಾಗದೇಹೋದೀತು.) (ಛೇದವೆಂಬುವುದಕ್ಕೆ ಈ ಅರ್ಥವೇ ಆಗಬೇಕೆನ್ನುತ್ತಾರೆ,) (ಇಲ್ಲಿ ಸಂಸಾರ ವೃಕ್ಷವನ್ನು ಛೇದಿಸಿ ಆಮೇಲೆ ಪರಬ್ರಹ್ಮ ವಿಷಯಕ ಶ್ರವಣ ಮನನಾದಿಗಳನ್ನು ಮಾಡಬೇಕು. ಅದರಿಂದ ವಿಶ್ವಛೇದವು ಬ್ರಹ್ಮಜ್ಞಾನವು ಬರಲಿಕ್ಕೆ ಕಾರಣವೆಂದು ತೋರುತ್ತದೆ. ಹೇಗೆಂದರೆ– ಜಗತ್ತು ಹುಟ್ಟತಕ್ಕದೆಂದು ವಿಚಾರ ಮಾಡಿದಾಗ ಕಾರ್ಯಕ್ಕೆ ಕಾರಣದ ಅಪೇಕ್ಷೆಯಿದೆ. ಚೇತನರು ನಿಯಾಮಕರಾಗದಿದ್ದು ಕೇವಲ ಉಪಾದಾನಕಾರಣದಿಂದ ಯಾವುದೊಂದು ವಸ್ತುವೂ ಹುಟ್ಟಲಾರದು. ಪರತಂತ್ರರಾದ ಬ್ರಹ್ಮಾದಿ ದೇವತೆಗಳು ಮುಖ್ಯ ನಿಯಾಮಕರಾಗಲಾರರು.) ಆದಕಾರಣ ಉಪಾದಾನಕಾರಣಕ್ಕೆ ನಿಯಾಮಕನಾದ ಒಬ್ಬ ಬ್ರಹ್ಮನು ಇರಬೇಕೆಂದು (ಜಗತ್ತೆಲ್ಲವೂ ಕಾರ್ಯವೆಂಬುವ ಜ್ಞಾನದಿಂದ) ತಿಳಿದು ಬರುತ್ತದೆ. (ಛೇದವೆಂದರೆ– ವಿಶ್ವಕ್ಕೆ ವಿನಾಶವೆಂದು ಇಟ್ಟುಕೊಂಡರೆ ಬ್ರಹ್ಮಜ್ಞಾನವೇ ಬರಲಾರದು. ಆದಕಾರಣ ವಿಮರ್ಶವೇ ಛೇದ ಶಬ್ದಾರ್ಥವು ಸರ್ವಥಾ ವಿನಾಶವಲ್ಲ.) (ಆ) (ಜಗತ್ತು ಸುಳ್ಳು ಎಂಬ ಜ್ಞಾನವೇ ಛೇದವು. ಎಂದರೆ- ಹಾಗೆ ಹೇಳಕೂಡದು. ಅದು ಮಿಥ್ಯಾಜ್ಞಾನವಾಗಿದೆ ಶ್ರುತಿ ವಿರೋಧವೂ ಅದೆ ಎನ್ನುತ್ತಾರೆ–) ಆ ಪ್ರಮೇಯವು ತಂ ವೈ ಪ್ರಪದ್ಯೇ ಯಂ ವೈ ಪ್ರಪದ್ಯ ಎಂಬ ವೇದವಾಕ್ಯದಲ್ಲಿಯೂ ಹೇಳಿಯದೆ. ಆದಕಾರಣ ಸಂಸಾರ ವೃಕ್ಷದ ಛೇದವೆಂದರೆ ವಿಮರ್ಶವೇ. ಸಂಸಾರವು ಹೀಗೆ ಶ್ರವಣ ಮನನಾದಿಗಳಿಂದ ವಿಚಾರಮಾಡುವವನನ್ನು ಬಂಧಿಸುವುದಿಲ್ಲ. ವಿಚಾರ ಮಾಡದಿರುವವನನ್ನು ಬಂಧಿಸುತ್ತದೆ. (ಕೆಡಹುತ್ತದೆ.) ೩

ಗೀ || ತತಃ ಪದಂ ತತ್ಪರಿಮಾರ್ಗಿತವ್ಯಂ
ಯಸ್ಮಿನ್ಗತಾ ನ ನಿವರ್ತಂತಿ ಭೂಯಃ |
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ || ೪ ||

ಅ || ತತಃ ಪದಂ= ಹೀಗೆ, ಪರಾಪರ ತತ್ತ್ವಗಳನ್ನು ತಿಳಿದುಕೊಂಡ ಮೇಲೆ, ಯಸ್ಮಿನ್‌ಗತಾಃ= ಯಾರ ಬಳಿಗೆ ಹೋಗಿ ಸೇರಿದ ಭಕ್ತರು, ಭೂಯಃ ನ ನಿವರ್ತಂತಿ= ಮರಳಿ ಮರಳಿ ಮರಣಾದಿರೂಪವಾದ ಸಂಸಾರಕ್ಕೆ ಹಿಂತಿರುಗಿ ಬರುವುದಿಲ್ಲವೋ, (ಗರ್ಭ ದುಃಖವನ್ನು ಹೊಂದುವುದಿಲ್ಲವೋ) ತತ್= ಅಂತಹ ಪರಮಾತ್ಮನ ಸ್ವರೂಪವನ್ನು, ಪರಿಮಾರ್ಗಿತವ್ಯಂ= ಶ್ರವಣ ಮನನಾದಿಗಳಿಂದ ಅವಶ್ಯವಾಗಿ ತಿಳಿದುಕೊಳ್ಳಬೇಕು ಪುರಾಣೀ= ಅನಾದಿಕಾಲದಿಂದ ಬಂದಿರುವ ಪ್ರವೃತ್ತಿಃ= ಸಂಸಾರ ಪ್ರವೃತ್ತಿಯು, ಯತಃ= ಯಾವ ಶ್ರೀಹರಿಯಿಂದಲೇ ಪ್ರಸೃತಾ= ವಿಸ್ತರಿಸಲ್ಪಟ್ಟಿರುತ್ತದೆಯೋ, ತಂ= ಆ, ಆದ್ಯಂ= ಸರ್ವರಿಗಿಂತಲೂ ಆದಿಯಲ್ಲಿರುವ, ಪುರುಷಮೇವ= ಸರ್ವ ಗುಣಪೂರ್ಣನಾದ ಶ್ರೀವಿಷ್ಣುವನ್ನೇ, (ಸಂಸಾರದಿಂದ ಬಿಡುಗಡೆ ಹೊಂದುವುದಕ್ಕಾಗಿ) ಪ್ರಪದ್ಯೇತ= ಮರೆಹೋಗಬೇಕು. (ಏವಂಚ ಶ್ರೀಪರಮಾತ್ಮನ ಅನುಗ್ರಹ ಸಹಿತವಾದ ಶ್ರವಣಾದಿಗಳು ಸಂಸಾರದಿಂದ ಬಿಡುಗಡೆ ಹೊಂದಲಿಕ್ಕೆ ಸಾಧನಗಳು) ೪

ಭಾ || (೧) ತದರ್ಥಂ ಚ ತಮೇವ ಪ್ರಪದ್ಯೇ ಪ್ರಪದ್ಯೇತ | ತಚ್ಚೋಕ್ತಂ ತತ್ರೈವ | ತಂ ವೈ ಪ್ರಪದ್ಯೇತ ಯಂ ವೈ ಪ್ರಪದ್ಯ ನ ಶೋಚತಿ ನ ಹೃಷ್ಯತಿ ನ ಜಾಯತೇ ನ ಮ್ರಿಯತೇ ತದ್ಬ್ರಹ್ಮಮೂಲಂ ತಚ್ಛ್ರುತಿರಿತಿ || (೨) ನಾರಾಯಣೇನ ದೃಷ್ಟಶ್ಚ ಪ್ರತಿಬುದ್ಧೋ ಭವೇತ್ಪುಮಾನಿತಿ ಮೋಕ್ಷಧರ್ಮೇ | ಛೇದನೋಪಾಯೋ ಹ್ಯತ್ರಾಕಾಂಕ್ಷಿತಃ | ನಚ ಭಗವತೋಽನ್ಯಃ ಶರಣ್ಯೋಽಸ್ತಿ || ೪ |

ಅ॥ (೧) ವಿಶ್ವವನ್ನು ವಿಮರ್ಶೆ ಮಾಡುವುದಕ್ಕಾಗಿ ಆ ಶ್ರೀಹರಿಯನ್ನೇ ಪ್ರಪದ್ಯೇ—ಹೊಂದಬೇಕು. (ಈ ವಿಷಯದಲ್ಲಿ ಶ್ರುತಿಸ್ಮೃತಿಗಳನ್ನು ಹೇಳುತ್ತಾರೆ—) ಆ ಪ್ರಮೇಯವು ಆ ವೇದದಲ್ಲಿಯೇ ಹೇಳಲ್ಪಟ್ಟಿದೆ. ...ಾರನ್ನು ಹೊಂದಿ ದುಃಖ ಪಡುವುದಿಲ್ಲವೋ, ಸಂತೋಷಗೊಳ್ಳುವುದಿಲ್ಲವೋ, ಹುಟ್ಟುವುದಿಲ್ಲವೋ, ...ಯುವುದಿಲ್ಲವೋ, ಆ ಬ್ರಹ್ಮನು ಜಗತ್ತಿಗೆ ಮೂಲಕಾರಣನು. ಸಂಸಾರವನ್ನು ಬಿಟ್ಟು ಮೋಕ್ಷವನ್ನು ಹೊಂದಲಿಚ್ಛಿಸುವವನು ಆ ಶ್ರೀಹರಿಯನ್ನೇ. ಹೊಂದಬೇಕು. (೨) ಶರಣಾಗತಿಯಿಂದ ಸಂತುಷ್ಟನಾದ ನಾರಾಯಣನ ಅನುಗ್ರಹಕ್ಕೆ ಪಾತ್ರನಾದ ಪುರುಷನು ಜಗತ್ತನ್ನು ವಿಮರ್ಶೆ ಮಾಡಲಿಕ್ಕೆ ಶಕ್ತನಾಗು...ನೆ, ಎಂದು ಮೋಕ್ಷಧರ್ಮದಲ್ಲಿದೆ. ಸಂಸಾರವೃಕ್ಷ ಪರಿಹಾರೋಪಾಯವೇ ಇಲ್ಲಿ ಅವಶ್ಯಕವಾದುದು. ...ಪರಮಾತ್ಮನು ಹೊರತು ಬೇರೆಯವರು ಶರಣುಹೊಂದಲು ಯೋಗ್ಯರು ರಕ್ಷಕರು ಇಲ್ಲ. (ಅದಕಾರಣ ...ಪರಮಾತ್ಮನನ್ನು ಶರಣುಹೊಂದಿ ಶ್ರೀಹರಿಯ ಪರಮಾನುಗ್ರಹದಿಂದಲೇ ಸಂಸಾರ ಸಮುದ್ರವನ್ನು ...ಟಿ ಮೋಕ್ಷವನ್ನು ಹೊಂದಬೇಕು.) ॥ ೪ ॥

ಶ॥ (೧) ಸ್ವಸಕ್ತಜ್ಞಾನಹೇತಿನಾ । ವಿಷ್ಣೋಃ ಸಮ್ಯಕ್ಪೃಥಗ್ದೃಷ್ಟಿನಾಮುಚ್ಛೇದನಭಾಕ್ ಸದಾ ॥ (೨) ಅವ್ಯಕ್ತಾದಿ ಸಮಸ್ತಂ ತು ನೇತಿನೇತ್ಯಾದಿವಾಕ್ಯತಃ । ಬೋಧೇನೈವ ಪೃಥಗ್ವಿಷ್ಣೋಃ ಕೃತ್ವಾ ಮೃಗ್ಯಃ ಸ ಕೇಶವಃ ॥ (೩) ತಮೇವಾದ್ಯಂ ಪ್ರಪದ್ಯೇತ ಯದಂಶಾಭಾಸಕೋ ಹ್ಯಯಂ । ಜೀವರಾಶಿಃ ಸಮಸ್ತೋಽಪಿ ಬ್ರಹ್ಮರುದ್ರೇಂದ್ರಪೂರ್ವಕಃ ॥ ೩,೪ ॥

ಅ॥ (೧) ವಿಷಯಗಳಲ್ಲಿ ಅತಿದೃಢವಾದ ವೈರಾಗ್ಯ ಸಹಿತವಾದ ಪರಮಾತ್ಮನ ಜ್ಞಾನವೆಂಬ ಖಡ್ಗ...ದ ಈ ಸಂಸಾರ ವೃಕ್ಷವು ವಿಷ್ಣುವಿನಿಂದ ಚೆನ್ನಾಗಿ ಪೃಥಕ್ ದೃಷ್ಟಿಯೆಂದು ಹೆಸರುಳ್ಳ ಭೇದವನ್ನು ಹೊಂದಿರುತ್ತದೆ. (ಅಂದರೆ—ವೈರಾಗ್ಯದಿಂದೊಡಗೂಡಿದ ಶಾಸ್ತ್ರವಿಚಾರದಿಂದುಂಟಾದ ಜ್ಞಾನವೆಂಬ ...ಸ್ತ್ರದಿಂದ ಜಗತ್ತು ವಿಷ್ಣುವಿನಿಂದ ಅತ್ಯಂತ ಭಿನ್ನವಾದುದು, ಎಂಬ ಫಲಭೂತವಾದ ಜ್ಞಾನವು ಹುಟ್ಟು...ದೆ. ಅದೇವೇ ಜಗದ್ವೃಕ್ಷಕ್ಕೆ ಭೇದವೆನಿಸುತ್ತದೆ. (೨) (ವಿಷ್ಣುವಿನಿಂದ ಜಗದ್ವೃಕ್ಷಕ್ಕೆ ಭೇದವಿದೆ ...ಬುವುದೇ ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ? ಭೇದಜ್ಞಾನದಿಂದ ಯಾವುದು ಸಾಧ್ಯವಾಗುತ್ತದೆ? ...ದರೆ—ಸ ಏಷ ನೇತಿ ನೇತ್ಯಾತ್ಮಾ ಎಂಬ ವಾಕ್ಯದಿಂದುಂಟಾದ ಜ್ಞಾನದಿಂದಲೇ ಅವ್ಯಕ್ತ ಮೊದಲಾದ ಸಮಸ್ತ ಜಗತ್ತೂ ವಿಶೇಷತಃ ಅತ್ಯಂತವಾಗಿ ವಿಷ್ಣುವಿನಿಂದ ಭಿನ್ನವೆಂದು ನಿರ್ಧರಿಸಿ ಶ್ರೀಹರಿಯನ್ನು ...ಡುಕಬೇಕು. (ಜಗತ್ತು ಶ್ರೀಹರಿಯಿಂದ ವಿಲಕ್ಷಣವು ಎಂದು ತಿಳಿದರೇನೇ ಭಗವತ್ಸ್ವರೂಪವನ್ನು ...ಕ್ಕಾಗಿ ತಿಳಿಯಲು ಶಕ್ಯವಾಗುತ್ತದೆ. ಇದರಿಂದ ಅಶ್ವತ್ಥಮೇನಂ ಎಂಬ ...ನೇ ಶ್ಲೋಕವು ವ್ಯಾಖ್ಯಾನವಾಯಿತು) (೩) (ಸಂಸಾರ ವೃಕ್ಷವನ್ನು ಭೇದಿಸುವ ಉಪಾಯವು ಯಾವುದೆಂದರೆ—) ಬ್ರಹ್ಮ ರುದ್ರ ...ದ್ರ ಮೊದಲಾದ ಎಲ್ಲಾ ಜೀವರಾಶಿಗಳೂ ಯಾವ ಶ್ರೀಹರಿಯ ಸ್ವರೂಪಾಂಶಭೂತರಾದ ...ಪ್ರತಿ... ಭಿನ್ನಾಂಶರೋ, (ಬ್ರಹ್ಮಾದಿಗಳು ಶ್ರೀಹರಿಯ ಸ್ವರೂಪಾಂಶಭೂತರಾದ ಮಾತ್ರ್ಯದಿಗಳಿಗೆ ಪ್ರತಿಬಿಂಬ...ಕರಾಮದರಿಂದ ಅಸಮರ್ಥರಾಗಿರುವ ಪ್ರಯುಕ್ತ ಸಂಸಾರವೃಕ್ಷವನ್ನು ಛೇದಿಸುವುದಕ್ಕಾಗಿ) ಆ ಶ್ರೀ...ಯನ್ನೇ ಶರಣುಹೊಂದಬೇಕು. (ಇದರಿಂದ ತಮೇವ ಚಾದ್ಯಂ ಎಂಬ ...ನೇ ಶ್ಲೋಕವು ವ್ಯಾಖ್ಯಾನವಾಯಿತು.) ॥ ೩, ೪ ॥

ಟೀ—ಶ್ರೀಹರಿಯನ್ನು ಹೊಂದಲಿಕ್ಕೆ ಬೇರೆ ಸಾಧನಗಳನ್ನು ಹೇಳುತ್ತಾರೆ—

ಗೀ ॥ ನಿರ್ಮಾನಮೋಹಾ ಜಿತಸಂಗದೋಷಾ
ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।
ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈಃ
ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥ ೫ ॥

ಅ ॥ ನಿರ್ಮಾನಮೋಹಾಃ=ಅಹಂಕಾರವೂ (ಹೆಮ್ಮೆ) ಮಿಥ್ಯಾಜ್ಞಾನವೂ ಇಲ್ಲದಿರುವ, ಜಿತಸಂಗದೋಷಾಃ=ಪುತ್ರ ಮಿತ್ರ ಕಳತ್ರಾದಿ ಸಕಲ ವಿಷಯಗಳ ಸಂಬಂಧದಿಂದುಂಟಾದ ದೋಷಗಳನ್ನು ಕಳೆದುಕೊಂಡ,. (ಅಂದರೆ—ವಿಷಯಗಳಲ್ಲಿ ಇಚ್ಛೆಯಿಲ್ಲದಿರುವ), ಅಧ್ಯಾತ್ಮನಿತ್ಯಾಃ=ಸರ್ವದಾ ಭಗವದ್ವಿಷಯಕ ಶಾಸ್ತ್ರ ಶ್ರವಣಾದಿಗಳಲ್ಲಿಯೇ ಆಸಕ್ತರಾದ (ಅಂದರೆ ನಿರಂತರದಲ್ಲಿಯೂ ಶ್ರವಣ ಮನನಾದಿಗಳನ್ನು ಮಾಡಿಕೊಂಡಿರುವ) ವಿನಿವೃತ್ತಕಾಮಾಃ=ವಿಶೇಷವಾಗಿ ಸರ್ವರೀತಿಯಿಂದಲೂ ಎಲ್ಲಾ ವಿಷಯಗಳ ಆಶೆಯನ್ನು ಕಳೆದುಕೊಂಡಿರುವ, ಸುಖದುಃಖಸಂಜ್ಞೈಃ ದ್ವಂದ್ವೈಃ=ಸುಖ, ದುಃಖ, ಲಾಭ ಅಲಾಭ, ಜಯ ಅಜಯ, ಮಾನ ಅಪಮಾನ. ರೂಪ ದ್ವಂದ್ವಗಳಿಂದ, ವಿಮುಕ್ತಾಃ=ಬಿಡುಗಡೆ ಹೊಂದಿದ, (ಅಂದರೆ-ಸುಖಲಾಭಾದಿಗಳು ಬಂದೊಡನೆ ಆಧಿಕ್ಯವನ್ನು ದುಃಖಾದಿಗಳು ಬಂದೊಡನೆ ವ್ಯಥಾದಿಗಳನ್ನು ಹೊಂದದಿರುವ) ಅಮೂಢಾಃ=ರಜೋಗುಣ ತಮೋಗುಣ ಸ್ವಭಾವವಿಲ್ಲದಿರುವ ಜ್ಞಾನಿಗಳು, ಅವ್ಯಯಂ=ನಾಶವಿಲ್ಲದಿರುವ, ಪದಂ=ಹೊಂದಲು ಯೋಗ್ಯನಾದ, ತತ್=ಆ ಭಗವಂತನನ್ನು, ಗಚ್ಛಂತಿ=ಹೊಂದುತ್ತಾರೆ ॥ ೫ ॥

ಭಾ ॥ ಸಾಧನಾಂತರಮಾಹ । ನಿರ್ಮಾನೇತಿ ॥ ೫ ॥

ಅ ॥ ನಿರ್ಮಾನ ಮೋಹಾಃ ಎಂಬ (ಐದನೇ) ಶ್ಲೋಕದಿಂದ ಶ್ರೀಪರಮಾತ್ಮನನ್ನು ತಿಳಿಯಲಿಕ್ಕೆ ಬೇರೆ ಸಾಧನವನ್ನು ಹೇಳುತ್ತಾರೆ. ॥ ೫ ॥

ಟೀ—ಪ್ರಾಪ್ಯವಾದ ಸ್ಥಾನವನ್ನು ಹೊಂದುತ್ತಾರೆ—

ಗೀ ॥ ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।
ಯದ್ಗತ್ವಾ ನ ನಿವರ್ತಂತೇ ತದ್ಧಾಮ ಪರಮಂ ಮಮ ॥ ೬ ॥

ಅ ॥ ಸೂರ್ಯಃ=ಸೂರ್ಯನು, ತತ್=ಶ್ರೀಹರಿಯ ಸ್ವರೂಪವನ್ನು, ನ ಭಾಸಯತೇ=ಪ್ರಕಾಶಪಡಿಸಲಾರನು. ಶಶಾಂಕಃ=ಚಂದ್ರನೂ, ನ=ಪ್ರಕಾಶಗೊಳಿಸಲಾರನು. ಪಾವಕಃ=ಅಗ್ನಿಯೂ, ನ=ಪ್ರಕಾಶಿಸುವಂತೆ ಮಾಡಲಾರನು (ಮಿಂಚು ಹುಳ ಮೊದಲಾದುವುಗಳಿಗೆ ದೀಪಾದಿಗಳನ್ನು ಪ್ರಕಾಶಪಡಿಸುವ ಶಕ್ತಿಯು ಹೇಗೆ ಇಲ್ಲವೋ, ಹಾಗೆಯೇ ಸೂರ್ಯಾದಿಗಳಿಗೆ ಸಾವಿರಾರು ಸೂರ್ಯರಿಗಿಂತಲೂ ಹೆಚ್ಚು ಪ್ರಕಾಶವುಳ್ಳ ಶ್ರೀಪರಮಾತ್ಮನನ್ನು ಪ್ರಕಾಶಪಡಿಸುವ ಶಕ್ತಿಯಿಲ್ಲ.) ಯತ್=ಯಾವ ಶ್ರೀಹರಿಯ ಬಳಿಗೆ ಗತ್ವಾ=ಹೋಗಿ, ನ ನಿವರ್ತಂತೇ=(ಜ್ಞಾನಿಗಳು ಸಂಸಾರಕ್ಕೆ) ಹಿಂತಿರುಗಿ ಬರುವುದಿಲ್ಲವೋ. ತತ್=ಅದು, ಮಮ=ನನ್ನ, ಪರಮಂ=ಉತ್ತಮವಾದ, ಧಾಮ=ಸ್ವರೂಪವು. ॥ ೬ ॥

ಟೀ—ಜಗತ್ತೆಂಬ ವೃಕ್ಷವನ್ನು ಛೇದಿಸಲಿಕ್ಕೆ ಬ್ರಹ್ಮಾದಿಗಳ ಜ್ಞಾನವೇ ಸಾಕಷ್ಟೆ. ಪರಮಾತ್ಮನ ಜ್ಞಾನವು ಏಕೆಂದರೆ—

ಗೀ॥ ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ ।
ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ ೭ ॥

ಅ॥ ಜೀವಲೋಕೇ=ಚತುರ್ಮುಖ ಬ್ರಹ್ಮನೇ ಮೊದಲಾದ ಜೀವರ ಶರೀರದಲ್ಲಿರುವ, ಸನಾತನಃ=ಅನಾದಿನಿತ್ಯನಾದ, ಜೀವಭೂತಃ=ಜೀವಸ್ವರೂಪನು, ಮಮ=ನನ್ನ, ಅಂಶ ಏವ=ಅಂಶ ಸದೃಶನೇ ಹೊರತು ಭಿನ್ನಾಂಶನೇ. (ಮತ್ಸ್ಯಾದಿಗಳಂತೆ ಸ್ವರೂಪಾಂಶನಲ್ಲ. ಪರಂತು ಆ ಜೀವನು ಜ್ಞಾನಾನಂದಾದಿ ಸ್ವರೂಪನೇ.) ಈಶ್ವರಃ=ಶ್ರೀಹರಿಯು, ಯತ್—ಯಾವಾಗ, ಶರೀರಂ=ಜೀವರ ಶರೀರವನ್ನು, ಅವಾಪ್ನೋತಿ=ಹೊಂದುತ್ತಾನೋ, (ಆವಾಗಲೇ ಜೀವನು ಈಶ್ವರನಿಂದ ಪ್ರೇರಿತನಾಗಿ) ಪ್ರಕೃತಿಸ್ಥಾನಿ=ಪ್ರಕೃತಿ ಕಾರ್ಯಗಳಾದ ಶರೀರಗಳಲ್ಲಿರತಕ್ಕ, ಮನಃಷಷ್ಠಾನೀಂದ್ರಿಯಾಣಿ=ಮನಸ್ಸು ಆರನೆಯದಾಗುಳ್ಳ ಚಕ್ಷುಃ ಶ್ರೋತ್ರ ಘ್ರಾಣ ರಸನ ತ್ವಕ್ ಎಂಬ ಐದು ಜ್ಞಾನೇಂದ್ರಿಯಗಳನ್ನು, ಕರ್ಷತಿ=ವಿಷಯಗಳ ಕಡೆಗೆ ಸೆಳೆಯುತ್ತಾನೆ. (ಈಶ್ವರನೇ ಸ್ವತಂತ್ರವಾಗಿ ಸರ್ವೇಂದ್ರಿಯಗಳಿಗೆ ಪ್ರೇರಕನು.) ॥ ೭ ॥

ಭಾ॥ ಸ್ವರೂಪಂ ಕಥಯತಿ । ನ ತದಿತ್ಯಾದಿನಾ ॥ ೬,೭ ॥

ಅ॥ ನ ತದ್ಭಾಸಯತೇ ಸೂರ್ಯಃ (ಶ್ಲೋ. ೬. ೭.) ಇತ್ಯಾದಿಗಳಿಂದ ಪರಬ್ರಹ್ಮಸ್ವರೂಪವನ್ನು ಹೇಳುತ್ತಾರೆ. ॥ ೬, ೭ ॥

ಟೀ—ಜೀವರ ಇಂದ್ರಿಯಾದಿಗಳ ಪ್ರವೃತ್ತಿಯೂ ಶ್ರೀಹರಿಯ ಅಧೀನವೇ ಎಂದು ಹೇಳುತ್ತಾರೆ--

ಗೀ॥ ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥ ೮ ॥

ಅ॥ ಅಪಿ=ಮತ್ತು, ಜೀವಃ=ಜೀವನು, ಯತ್=ಯಾವಾಗ, ಶರೀರಂ ಅವಾಪ್ನೋತಿ=ಶರೀರವನ್ನು ಹೊಂದುತ್ತಾನೋ, ಆಗ ಶ್ರೀಹರಿಯು ಇಂದ್ರಿಯಗಳಿಂದ ಕೂಡಿಕೊಂಡು ಶರೀರಕ್ಕೆ ಬರುತ್ತಾನೆ. ಈಶ್ವರಃ=ಶ್ರೀಹರಿಯು, ಯಚ್ಚ=ಯಾವ ಕಾಲದಲ್ಲಿ, ಉತ್ಕ್ರಾಮತಿ=(ಜೀವರ ಶರೀರವನ್ನು ಬಿಟ್ಟು ಜೀವನನ್ನು ಕರೆದುಕೊಂಡು) ಲೋಕಾಂತರಕ್ಕೆ ಹೊರಟು ಹೋಗುತ್ತಾನೋ. (ಆಗ) ಆಶಯಾತ್=ಪುಷ್ಪಾದಿಸ್ಥಾನದಿಂದ, ವಾಯುಃ=ಗಾಳಿಯು, ಗಂಧಾನಿವ=ಸುವಾಸನೆಯುಳ್ಳ ಪುಷ್ಪಾದ್ಯವಯವಗಳನ್ನು ತೆಗೆದುಕೊಂಡು ಹೋಗುವಂತೆ, (ಜೀವನು) ಏತಾನಿ=ಸೂಕ್ಷ್ಮಗಳಾದ ಇಂದ್ರಿಯಾಂಶಗಳನ್ನು, ಗೃಹೀತ್ವಾ=ಹಿಡಿದುಕೊಂಡು, ಇಂದ್ರಿಯಾಭಿಮಾನಿದೇವತೆಗಳಿಂದ ಕೂಡಿಕೊಂಡು, ಸಂಯಾತಿ=ಲೋಕಾಂತರಕ್ಕೆ ಹೋಗುತ್ತಾನೆ. ॥ ೮ ॥

ಭಾ॥ (೧) ಕರ್ಷತೀತ್ಯುಕ್ತೇ ಜೀವಸ್ಯ ಸ್ವಾತಂತ್ರ್ಯಂ ಪ್ರತೀತಂ ತನ್ನಿವಾರಯತಿ । ಶರೀರಮಿತ್ಯಾದಿನಾ ॥ (೨) ಯದ್ಯದಾ ಶರೀರಮವಾಪ್ನೋತಿ ಉತ್ಕ್ರಾಮತಿ ಚ ಜೀವಸ್ತದೇಶ್ವರಃ ಏತಾನಿ ಗೃಹೀತ್ವಾ ಸಂಯಾತಿ ॥ (೩) ಯತ್ರಯತ್ರೈವ ಸಂಯಾತಿ ಧಾತಾ ಗರ್ಭಂ ಪುನಃಪುನಃ । ತತ್ರತತ್ರೈವ ವಸತಿ ನ ಯತ್ರ ಸ್ವಯಮಿಚ್ಛತಿ ಇತಿ ಮೋಕ್ಷಧರ್ಮೇ ॥ ೮ ॥

ಅ ॥ (೧) (ಶರೀರಪ್ರಾಪ್ತಿರೂಪವಾದ ಉತ್ಕ್ರಾಂತಿಯಾಗುವ ಕಾಲದಲ್ಲಿ ಪೂರ್ವದಲ್ಲಿ ತನ್ನ ಮೂಲ ಕಾರಣದಲ್ಲಿರತಕ್ಕ ಇಂದ್ರಿಯಗಳನ್ನು ಮೂಲಕಾರಣದಿಂದ ಶರೀರಕ್ಕೂ ಹಾಗೆಯೇ ಮರಣಕಾಲದಲ್ಲಿ ತನ್ನ ಶರೀರದಲ್ಲಿರತಕ್ಕ ಇಂದ್ರಿಯಗಳನ್ನು ಶರೀರದಿಂದ ಮೂಲ ಕಾರಣಕ್ಕೂ, ಹಾಗೆಯೇ ಸ್ಥಿತಿ ಸಮಯದಲ್ಲಿ ತಮ್ಮ ತಮ್ಮ ಗೋಲಕದಲ್ಲಿರತಕ್ಕ ಇಂದ್ರಿಯಗಳನ್ನು ಗೋಲಕಗಳಿಂದ ವಿಷಯಗಳ ಕಡೆಗೂ, ಜೀವನು) ಸೆಳೆಯುತ್ತಾನೆಂದು ಮಮೈವಾಂಶಃ ಎಂಬ ೭ನೇ ಶ್ಲೋಕದಲ್ಲಿ ಹೇಳಿರುತ್ತಾರೆ. ಜೀವನಿಗೆ ಬೇರೆ ನಿಯಾಮಕರನ್ನು ಹೇಳದಿದ್ದ ಕಾರಣ ಇಂದ್ರಿಯಗಳನ್ನು ಸೆಳೆಯುವ ವಿಷಯದಲ್ಲಿ ಜೀವನಿಗೆ ಸ್ವಾತಂತ್ರ್ಯವು ತೋರುತ್ತದೆ. ಅದು ಅಯುಕ್ತವೆಂಬ ಅಭಿಪ್ರಾಯದಿಂದ ಈಶ್ವರನಿಗೇನೇ ಸ್ವಾತಂತ್ರ್ಯವನ್ನು ಹೇಳುತ್ತಾ ಜೀವನಿಗೆ ಸ್ವಾತಂತ್ರ್ಯವು ಸರ್ವಥಾ ಇಲ್ಲವೆಂದು ಶರೀರಂ (ಶ್ಲೋ. ೮) ಇತ್ಯಾದಿಗಳಿಂದ ಹೇಳುತ್ತಾರೆ. (೨) ಯಾವಾಗ ಜೀವನು ಶರೀರವನ್ನು ಹೊಂದುತ್ತಾನೋ, ಆಗ ಶ್ರೀಹರಿಯು ಇಂದ್ರಿಯಗಳನ್ನು ಹಿಡಿದು ಕೊಂಡು ಶರೀರಕ್ಕೆ ಬರುತ್ತಾನೆ. ಯಾವಾಗ ಹೊರಟುಹೋಗುತ್ತಾನೋ, ಆಗ ಶ್ರೀಹರಿಯು ಇಂದ್ರಿಯ ಸಮೇತ ಲೋಕಾಂತರಕ್ಕೆ ಹೋಗುತ್ತಾನೆ. (೩) (ಏತಕ್ಕೆ ಹೀಗೆ ಅರ್ಥ ಮಾಡಬೇಕೆಂದರೆ—ಈಶ್ವರನ ಇಚ್ಛೆಯಿಂದಲೇ ಜೀವನಿಗೆ ಶರೀರಪ್ರಾಪ್ತಿಯಾಗುವದೆಂಬಲ್ಲಿ ಪ್ರಮಾಣ ಹೇಳುತ್ತಾರೆ—) ಎಲ್ಲಿ ಎಲ್ಲಿ ಶ್ರೀಹರಿಯು ಅನಾದಿಕಾಲದಿಂದಲೂ ಜೀವನೊಟ್ಟಿಗೆ ಇರುತ್ತಾನೋ, ಅಥವಾ ಪ್ರೇರಕನಾಗಿರುತ್ತಾನೋ ಯಾವ ಯಾವ ಯೋನಿಯಲ್ಲಿ ಶ್ರೀಹರಿಯು ಗರ್ಭಧಾರಕನೋ, ಅಲ್ಲಿ ಅಲ್ಲಿಯೇ ಜೀವನು ಆವಾಸ ಮಾಡುತ್ತಾನೆ. ತಾನು ಎಲ್ಲಿ ಇಚ್ಛಿಸುತ್ತಾನೋ, ಅಲ್ಲಿ ಆವಾಸಮಾಡುವುದಿಲ್ಲ, ಎಂದು ಮೋಕ್ಷಧರ್ಮದಲ್ಲಿ ಜೀವನಿಗೆ ಪರಮಾತ್ಮನ ಅಧೀನತ್ವವನ್ನು ಎಲ್ಲಾ ವಿಷಯದಲ್ಲಿಯೂ ಹೇಳುತ್ತಾರೆ. ॥ ೧ ॥

ಹೀ—ಜೀವನು ಈಶ್ವರನ ಅಧೀನನಾಗಿಯೇ ಪ್ರವೃತ್ತಿಮಾಡುತ್ತಾನೆಂಬುವಲ್ಲಿಯೂ ಪ್ರಮಾಣವನ್ನು ಹೇಳುತ್ತಾರೆ—

ಭಾ ॥ (೧) ಭಾವಾಭಾವಾವಪಿ ಜಾನನ್ ಗರೀಯೋ ಜಾನಾಮಿ ಶ್ರೇಯೋ ನ ತು ತತ್ಕರೋಮಿ । ಆಶಾಸು ಹರ್ಮ್ಯಾಸು ಹೃದಾ ಸುಹೃದ್ವರ್ಣನ್ಯಥಾ ನಿಯುಕ್ತೋಽಸ್ಮಿ ತಥಾ ವಹಾಮೀತಿ ಚ ॥ (೨) ಹತ್ವಾ ಜಿತ್ವಾಽಪಿ ಮಘವನ್ಯಃ ಕಶ್ಚಿತ್ಪುರುಷಾಯತೇ । ಅಕರ್ತಾ ತ್ವೇವ ಭವತಿ ಕರ್ತಾ ತ್ವೇವ ಕರೋತಿ ತದಿತಿ ಚ ॥ (೩) ತದ್ಯಥಾಽನಃ ಸುಸಮಾಹಿತಮುತ್ಸರ್ಜದ್ಯಾಯಾದೇವಮೇವಾಯಂ ಶಾರೀರ ಆತ್ಮಾ ಪ್ರಾಜ್ಞೇನಾಽಽತ್ಮನಾಽನ್ವಾರೂಢ ಉತ್ಸರ್ಜದ್ಯಾತೀತಿ ಚ ಶ್ರುತಿಃ ॥ (೪) ವಾಙ್ಮನಸಿ ಸಂಪದ್ಯತೇ ಮನಃ ಪ್ರಾಣೇ ಪ್ರಾಣಸ್ತೇಜಸಿ ತೇಜಃ ಪರಸ್ಯಾಂ ದೇವತಾಯಾಮಿತಿ ಚ ॥ (೫) ಗಂಧಾನಿವ ಸೂತ್ರಾಣಿ । ಭೋಗೋಽಸ್ಯಾಪಿ ಸಾಧಿತಃ ಪುರಸ್ತಾತ್ ॥ ೨ ॥ ॥ ೮ ॥

ಅ ॥ (೧) ಯದ್ಯಪಿ ಲೌಕಿಕಗಳಾದ ಶುಭಾಶುಭಾದಿಗಳನ್ನು ತಿಳಿದವನಾಗಿರುತ್ತೇನೆ ಮೋಕ್ಷವನ್ನು ಶ್ರೇಷ್ಠವನ್ನಾಗಿ ತಿಳಿಯದಿರುತ್ತೇನೆ ಆದರೂ ಅದನ್ನು ಮಾಡುವುದಿಲ್ಲ. (ಅಂದರೆ ಮೋಕ್ಷವನ್ನು ಸಾಧಿಸಿಕೊಳ್ಳಲಿಕ್ಕೆ ಸ್ವತಂತ್ರನಲ್ಲ.) ಮತ್ತೆ ದಿಕ್ಕುಗಳಲ್ಲಿ (ಗಮನಾದಿ ಕ್ರಿಯೆಗಳನ್ನು) ಧನಿಕರು ಆವಾಸವಾದ ಪ್ರಾಸಾದಗಳಲ್ಲಿ (ರಮಣಾದಿ ಕ್ರಿಯೆಗಳನ್ನು) ಜಲಾಶಯಗಳಲ್ಲಿ ಪ್ಲವನ (ತೇಲುವಿಕೆ) ಮೊದಲಾದ ಆಯಾಯ ಕ್ರಿಯೆಗಳನ್ನು ಮಾಡುವವನಂತೆ ತೋರುವ ನಾನು ಶ್ರೀಹರಿಯಿಂದ ಹೇಗೆ ಪ್ರೇರೇಪಿಸಲ್ಪಡುತ್ತೇನೋ, ಹಾಗೆಯೇ ಆ ಕ್ರಿಯೆಯನ್ನು ಮಾಡುತ್ತೇನೆ. (ಅಂದರೆ—ಸಂಹಾರ ಮೊದಲಾದ ಕ್ರಿಯೆ

ಗಳನ್ನು ಮಾಡಿ ಒಬ್ಬನು ಶ್ರೀಹರಿಯಂತೆ ತಾನೂ ಸರ್ವಸ್ವತಂತ್ರನೆಂದೂ ತನ್ನನ್ನು ತಿಳಿದುಕೊಳ್ಳುತ್ತಾನೆ. ರವನೂ ಕರ್ತನಲ್ಲವೇ ಅಲ್ಲ. ಈಶ್ವರನೇ ಮುಖ್ಯ ಕರ್ತನು) (೨) ಎಲೋ ದೇವೇಂದ್ರನೇ ಯಾವ ನಾದರೊಬ್ಬ ಪುರುಷನು ಸಂಹರಿಸಿ, ಗೆದ್ದು ವಿಷ್ಣುವಿನಂತೆ ತಾನೂ ಸ್ವತಂತ್ರನೆಂದು ತಿಳಿದುಕೊಳ್ಳುತ್ತಾನೆ. ರವರೂ ಅಂತಹ ಜೀವನು ಅಕರ್ತನೇ ಆಗಿರುತ್ತಾನೆ. ಸರ್ವಕರ್ತನಾದ ಶ್ರೀಹರಿಯೇ ಅವೆಲ್ಲವನ್ನು ಮಾಡುತ್ತಾನೆ, ಎಂದು. (೩) (ಈಶ್ವರನ ಪ್ರೇರಣಾನುಸಾರವಾಗಿಯೇ ಜೀವನು ಶರೀರದಿಂದ ಹೊರಡು ವುದೆಂಬುವಲ್ಲಿಯೂ ಪ್ರಮಾಣ ಹೇಳುತ್ತಾರೆ—) ಪುರುಷನು ಕುಳಿತಿದ್ದ ಬಂಡಿಯು ಗ್ರಾಮಾದಿಗಳನ್ನು ಬಿಟ್ಟು ಹೇಗೆ ಹೋಗುತ್ತದೋ, ಹೀಗೆಯೇ ಈ ಶರೀರದಲ್ಲಿದ್ದ ಜೀವನೂ ಪ್ರಾಜ್ಞರೂಪಿಯಾದ ಶ್ರೀಪರಮಾ ತ್ಮನಿಂದ ನಿಯಮ್ಯನಾಗಿದ್ದೇ ಶರೀರವನ್ನು ಬಿಟ್ಟು ಹೋಗುತ್ತಾನೆ, ಎಂದು ವೇದ ಪ್ರಮಾಣವು. (೪) ವಾಗಿಂದ್ರಿಯಕ್ಕೆ ಅಭಿಮಾನಿನಿಯಾದ ಪಾರ್ವತೀದೇವಿಯು ಮನಸ್ಸಿಗೆ ಅಭಿಮಾನಿಯಾದ ರುದ್ರನಲ್ಲಿಯೂ ಅಂತಹ ರುದ್ರನು ಮುಖ್ಯಪ್ರಾಣನಲ್ಲಿಯೂ ಲಯ ಹೊಂದುತ್ತಾನೆ ಆ ಮುಖ್ಯಪ್ರಾಣನು ತೇಜಸ್ಸಿಗೆ ಅಭಿ ಮಾನಿನಿಯಾದ ಲಕ್ಷ್ಮೀದೇವಿಯನ್ನು ಹೊಂದುತ್ತಾನೆ. ಲಕ್ಷ್ಮೀದೇವಿಯು ಶ್ರೀಪರಮಾತ್ಮನಲ್ಲಿ ಸೇರು ತ್ತಾಳೆಂದು ವೇದ ಪ್ರಮಾಣವು (ಹೀಗೆ ಸಮಸ್ತ ದೇವತೆಗಳಿಗೆ ಶ್ರೀಪರಮಾತ್ಮನ ಅಧೀನತ್ವವೇ ಹೇಳಿದೆ.) (೮) (1) (ಜೀರ್ಣಗಳಾದ ತೃಣ ಪರ್ಣ ಮೊದಲಾದ ಅನೇಕ ವಸ್ತುಗಳು ಸೆಳೆಯಲ್ಪಡತಕ್ಕವುಗಳು ಇರು ವಾಗ ಗಂಧಾನಿವ ಎಂದು ಗಂಧವನ್ನು ದೃಷ್ಟಾಂತವಾಗಿ ಹೇಳಲಿಕ್ಕೆ ಕಾರಣವನ್ನು ಹೇಳುತ್ತಾರೆ.) ಸುಗಂಧ ವುಳ್ಳ ಪುಷ್ಪಾದಿಗಳ ಸೂಕ್ಷ್ಮ ಅವಯವಗಳನ್ನು ವಾಯುವು ತೆಗೆದುಕೊಂಡು ಹೋಗುವಂತೆ ಶ್ರೀಹರಿಯು ಸೂಕ್ಷ್ಮಗಳಾದ ಇಂದ್ರಿಯಾಂಶಗಳನ್ನು (ತೆಗೆದುಕೊಂಡು ಹೋಗುತ್ತಾನೆ.) (2) ಶ್ರೀಪರಮಾತ್ಮನಿಗೂ ಶುಭ ಭೋಗವಿದೆ ಎಂದು ೭ನೇ ಅಧ್ಯಾಯದಲ್ಲಿ ಹೇಳಿದೆ. ॥ ೮ ॥

ಟೀ—ಇಂದ್ರಿಯಗಳಲ್ಲಿ ಪ್ರವರ್ತಕನಾಗಿರತಕ್ಕ ಶ್ರೀಪರಮಾತ್ಮನಿಗೆ ಇಂದ್ರಿಯಗಳ ದ್ವಾರಾ ವಿಷಯ ಭೋಗವೆನ್ನುತ್ತಾರೆ—

ಗೀ ॥ ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ ೯ ॥

ಅ ॥ ಅಯಂ = ಸರ್ವೇಂದ್ರಿಯಗಳಿಗೆ ಪ್ರವರ್ತಕನಾದ ಶ್ರೀಪರಮಾತ್ಮನು, ಶ್ರೋತ್ರಂ=ಕಿವಿಯನ್ನು ಚಕ್ಷುಃ=ಕಣ್ಣನ್ನು, ಸ್ಪರ್ಶನಂ ಚ=ತ್ವಗಿಂದ್ರಿಯವನ್ನು, ರಸನಂ—ನಾಲಿಗೆಯನ್ನು, ಘ್ರಾಣಮೇವ ಚ=ಮೂಗನ್ನು. ಮನಶ್ಚ=ಮನಸ್ಸನ್ನು, ಅಧಿಷ್ಠಾಯೈವ ಚ=ಆ ಇಂದ್ರಿಯಗಳಲ್ಲಿ ಪ್ರೇರಕನಾಗಿಯೇ ಇದ್ದು, ವಿಷಯಾನ್=ಶಬ್ದ ಮೊದಲಾದ ಶುಭ ವಿಷಯಗಳನ್ನೇ, ಉಪಸೇವತೇ—ಅನುಭವಿಸುತ್ತಾನೆ ॥ ೯ ॥

ಟೀ—ಶ್ರೀಪರಮಾತ್ಮನಿಗೆ ಭೋಗವಿದೆ. ಪರಂತು ಜೀವೇಂದ್ರಿಯಗಳಿಂದ ಶ್ರೀಹರಿಗೆ ಭೋಗವಿಲ್ಲ. ತನ್ನ ಇಂದ್ರಿಯಗಳಿಂದಲೇ ಶ್ರೀಹರಿಗೆ ಭೋಗವು, ಎಂದರೆ—ಜೀವೇಂದ್ರಿಯಗಳಿಂದಲೂ ಶ್ರೀಹರಿಗೆ ಭೋಗವಿದೆ, ಎನ್ನುತ್ತಾರೆ—

ಭಾ ॥ (೧) ಇಂದ್ರಿಯದ್ವಾರಾ ಹಿ ಸೋಽಪಿ ಭುಂಕ್ತೇ ॥ (೨) ತದ್ಯ ಇಮೇ ವೀಣಾಯಾಂ
ಗಾಯಂತ್ಯೇತಂ ತೇ ಗಾಯಂತೀತಿ ಚ ಶ್ರುತಿಃ ॥ (೩) ಗುಣಾನ್ಸ್ವಿತಮೇವ ಭುಂಕ್ತೇ ।
ನ ಹ ವೈ ದೇವಾನ್ಪಾಪಂ ಗಚ್ಛತೀತಿ ಶ್ರುತಿಃ ॥ ೯ ॥

ಅ ॥ (೧) ಆ ಶ್ರೀಹರಿಯು ಜೀವರ ಇಂದ್ರಿಯಗಳ ದ್ವಾರಾ ಶುಭ ಫಲಗಳನ್ನೇ ಉಣ್ಣುತ್ತಾನೆ. (೨) ಅವರಲ್ಲಿ ಯಾವ ಗಾಯಕರು ಧನ ಮೊದಲಾದ ಫಲ ಪ್ರಾಪ್ತಿಗಾಗಿ ರಾಜಾದಿಗಳನ್ನುದ್ದೇಶಿಸಿ ಗಾಯನ ಮಾಡುತ್ತಾರೋ, ಅವರು ರಾಜಾದಿಗಳಲ್ಲಿ ಅಂತರ್ಗತನಾದ ಶ್ರೀಹರಿಯನ್ನೇ ಗಾಯನ ಮಾಡುತ್ತಾರೆ, ಎಂದು ವೇದ ಪ್ರಮಾಣವು. (ಇದರಿಂದ ಶ್ರೀಪರಮಾತ್ಮನಿಗೆ ರಾಜಾದಿಗಳ ಕಿವಿಯಿಂದ ಗಾನ ಭೋಗವಿದೆ, ಎಂದು ಸಿಗುತ್ತದೆ.) (೩) (ಹಾಗಾದರೆ ದುಷ್ಟ ವಸ್ತುವಿನ ಭೋಗವೂ ಶ್ರೀಪರಮಾತ್ಮನಿಗೆ ಬರಬೇಕಾಗುವುದೆಂದರೆ—) ಶ್ರೀಹರಿಯು ಶುಭ ಗುಣವನ್ನೇ ಉಣ್ಣುತ್ತಾನೆ. (ಅಶುಭ ಭೋಗವಿದೆ ಎಂದು ಏಕೆ ಹೇಳಬಾರದೆಂದರೆ-) ಪಾಪವು ದೇವತೆಗಳನ್ನು ಹೊಂದುವುದಿಲ್ಲ, ಎಂದು ವೇದ ಪ್ರಮಾಣವು. (ಅಂದರೆ—ನ ಹ ವೈ ದೇವಾನ್ ಎಂಬುವ ವೇದದಲ್ಲಿ ದೇವತೆಗಳಿಗೇನೇ ಅಶುಭ ಭೋಗಗಳಿಲ್ಲವೆಂದು ಹೇಳುವಾಗ ದೇವೋತ್ತಮನಾದ ಶ್ರೀಪರಮಾತ್ಮನಿಗೆ ಅಶುಭ ಭೋಗವಿಲ್ಲವೆಂಬುವುದು ಸುತರಾಂ ಸಿದ್ಧವಾಗುತ್ತದೆ.) ॥೯॥

ಪೀ—ಜೀವರ ಇಂದ್ರಿಯಗಳಿಂದ ಶ್ರೀಪರಮಾತ್ಮನಿಗೆ ಭೋಗವಿದೆ ಎಂದಾದರೆ—ಜೀವರಂತೆ ಅಶುಭ ಭೋಗವೂ ಇದೆಯೋ ಎಂದರೆ—ಶುಭಸಾರ ಭೋಗವು ಮಾತ್ರ, ಹಾಗಾದರೆ—ಅದು ಏಕೆ ತೋರುವುದಿಲ್ಲವೆಂದರೆ—

## ಗೀ ॥ ಉತ್ಕ್ರಾಮಂತಂ ಸ್ಥಿತಂ ವಾಽಪಿ ಭುಂಜಾನಂ ವಾ ಗುಣಾನ್ವಿತಂ । ವಿಮೂಢಾ ನಾನುಪಶ್ಯಂತಿ ಪಶ್ಯಂತಿ ಜ್ಞಾನಚಕ್ಷುಷಃ ॥ ೧೦ ॥

ಅ ॥ ವಿಮೂಢಾಃ=ಅಜ್ಞಾನಿಗಳೂ, ಉತ್ಕ್ರಾಮಂತಂ=ಜೀವರ ಶರೀರದಿಂದ ಹೊರಡುತ್ತಿರುವ, ಸ್ಥಿತಂ ವಾಪಿ=ಜೀವರ ಶರೀರದಲ್ಲಿರುವ, ವಾ=ಅಥವಾ, ಗುಣಾನ್ವಿತಂ ಭುಂಜಾನಂ=ಶುಭಗುಣಗಳನ್ನೇ ಉಣ್ಣುತ್ತಿರುವ ಶ್ರೀಹರಿಯನ್ನು, ನಾನುಪಶ್ಯಂತಿ=ತಿಳಿಯುವುದಿಲ್ಲ, ಜ್ಞಾನಚಕ್ಷುಷಃ=ಜ್ಞಾನವೆಂಬುವ ಕಣ್ಣು ಉಳ್ಳವರು, (ಅಂದರೆ ಜ್ಞಾನಿಗಳು ಮಾತ್ರ) ಪಶ್ಯಂತಿ=(ಶ್ರೀಪರಮಾತ್ಮನನ್ನು) ತಿಳಿಯುತ್ತಾರೆ (ಅಂದರೆ—ಶ್ರೀಪರಮಾತ್ಮನು ಜ್ಞಾನೈಕಗಮ್ಯನು.) ॥ ೧೦ ॥

ಭಾ ॥ ತರ್ಹಿ ಕಿಮಿತಿ ನ ದೃಶ್ಯತ ಇತ್ಯತ ಆಹ । ಉತ್ಕ್ರಾಮಂತಮಿತ್ಯಾದಿನಾ ॥ ೧೦ ॥

ಅ ॥ (ಜೀವರಿಗಿಂತ ವಿಲಕ್ಷಣನಾದ ಶ್ರೀಹರಿಯು ದೇಹದಲ್ಲಿ ನಿಯಾಮಕನಾಗಿ ಇದ್ದರೆ ಆ ಶ್ರೀಹರಿಯು) ಏಕೆ ಕಾಣಿಸಿಕೊಳ್ಳುವುದಿಲ್ಲ, ಎಂದರೆ—ಉತ್ಕ್ರಾಮಂತಂ ಇತ್ಯಾದಿಗಳಿಂದ ಉತ್ತರವನ್ನು ಹೇಳುತ್ತಾರೆ. ॥ ೧೦ ॥

ಪೀ —ಬ್ರಹ್ಮಾದಿ ಜೀವರು ಶ್ರೀಪರಮಾತ್ಮನ ಸ್ವರೂಪಾಂಶರೆಂದೇ ಏಕೆ ಹೇಳಬಾರದೆಂದರೆ ಶ್ರೀಹರಿಯಿಂದ ಭಿನ್ನರಾಗಿರುವುದರಿಂದ ಸ್ವರೂಪಾಂಶರೆಂದು ಹೇಳಲಾಗುವುದಿಲ್ಲ ಹಾಗಾದರೆ ಅಂಶರಂತೆ ತೋರುತ್ತಾರೆಂಬುವುದು ಹೇಗೆಂದರೆ—

ತಾ ॥ (೧) ಕಿಂಚಿತ್ಸಾದೃಶ್ಯಮಾತ್ರೇಣ ಭಿನ್ನೋಽಪ್ಯಂಶ ಇವೋಚ್ಯತೇ ॥ (೨) ಈಶ್ವರಸ್ತು ಯದಾ ತ್ವಸ್ಯ ಶರೀರಂ ವಿಶತಿ ಪ್ರಭುಃ । ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ । ಶಬ್ದಾದೀನ್ಸ್ವತಿ ॥ (೩) ಅಥ ಯದಾ ಜೀವಮಾದಾಯ ಯಾತಿ ತು । ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥ (೪) ಭುಂಕ್ತೇ ಹರಿ

**ಶುಭಾನ್ಭೋಗಾನಿಂದ್ರಿಯೇಷು ವ್ಯವಸ್ಥಿತಃ । ಪೂರ್ಣಾನಂದೋಽಪಿ ಭಗವಾನ್ಕ್ರೀ-ಡಯಾ ಭುಂಕ್ತ ಏವ ತು ॥ ೫—೧೦ ॥**

ಅ ॥ (೧) ಜೀವರು ಶ್ರೀಹರಿಯಿಂದ ಭಿನ್ನರಾದಾಗ್ಯೂ ಜ್ಞಾನ ಆನಂದಾದಿರೂಪವಾದ ಕಿಂಚಿತ್ಸಾದೃಶ್ಯ ಮಾತ್ರದಿಂದ ಶ್ರೀಹರಿಯ ಅಂಶರೆಂತ ಹೇಳಲ್ಪಡುತ್ತಾರೆ. (ಇದರಿಂದ ಮಮೈವಾಂಶಃ ಎಂಬುವ ೭ನೇ ಶ್ಲೋಕವು ವ್ಯಾಖ್ಯಾತವಾಯಿತು) (೨) (ಜೀವರಿಗೆ ವಿಷಯಗಳ ಕಡೆಗೆ ಇಂದ್ರಿಯಗಳ ಪ್ರವೃತ್ತಿಗಳೆಲ್ಲವೂ ಶ್ರೀಪರಮಾತ್ಮನ ಅಧೀನವಾದುದರಿಂದ ಶ್ರೀಹರಿಯನ್ನು ಶರಣು ಹೊಂದುವುದೇ ಸಂಸಾರ ನಿವೃತ್ತಿ ಭೇದನೋಪಾಯವು, ಎಂಬುವ ಅಭಿಪ್ರಾಯದಿಂದ ಶ್ರೀಪರಮಾತ್ಮನ ಮಹಿಮೆಯನ್ನು ಹೇಳುತ್ತಾರೆ-) ಸರ್ವಸಮರ್ಥನಾದ ಶ್ರೀಹರಿಯು ಯಾವಾಗ ಜೀವರ ಶರೀರವನ್ನು ಪ್ರವೇಶಿಸುತ್ತಾನೋ, ಆಗ ಶ್ರೀಹರಿಯು ಶರೀರದಲ್ಲಿರತಕ್ಕ ಮನಸ್ಸಿನಿಂದ ಕೂಡಿ ಚಕ್ಷುರಾದಿ ೬ ಇಂದ್ರಿಯಗಳನ್ನು ಶಬ್ದ ಮೊದಲಾದ ವಿಷಯಗಳ ಕಡೆಗೆ ಪ್ರವರ್ತಿಸುತ್ತಾನೆ, (ಇದರಿಂದ ಮನಃಷಷ್ಠಾನಿ ಎಂಬ ೭ನೇ ಶ್ಲೋಕಾರ್ಥವು ವ್ಯಕ್ತವಾಯಿತು.) (೩) ಯಾವಾಗ ಶ್ರೀಹರಿಯು ಜೀವನನ್ನು ಕರೆದುಕೊಂಡು ಶರೀರದಿಂದ ಹೊರಡುತ್ತಾನೋ, ಆಗ ಸೂಕ್ಷ್ಮ ಇಂದ್ರಿಯಾಂಶಗಳನ್ನು ಹಿಡಿದುಕೊಂಡು ವಾಯುವು ಪುಷ್ಪಾದಿಗಳ ಸ್ಥಾನದಿಂದ ಸುವಾಸನೆಯುಳ್ಳ ಪುಷ್ಪಾದ್ಯವಯವಗಳನ್ನು ಹಿಡಿದುಕೊಂಡು ಹೋಗುವಂತೆ ಲೋಕಾಂತರಕ್ಕೆ ಹೋಗುತ್ತಾನೆ. (ಅಥ ಯದಾ ಎಂಬುವುದರಿಂದ ಯಚ್ಚಾಪಿ ಎಂಬ ೮ನೇ ಶ್ಲೋಕವು ವ್ಯಾಖ್ಯಾತವಾಯಿತು.) (೪) ಶ್ರೀಹರಿಯು ಇಂದ್ರಿಯಗಳಲ್ಲಿ ನಿಯಾಮಕನಾಗಿದ್ದು ಶುಭ ಭೋಗಗಳನ್ನೇ ಉಣ್ಣುತ್ತಾನೆ. (ಇದರಿಂದ ಶ್ರೋತ್ರಂ ಚಕ್ಷುಃ ಎಂಬ ೯ನೇ ಶ್ಲೋಕವು ವ್ಯಾಖ್ಯಾತವಾಯಿತು.) (ಶ್ರೀಹರಿಗೆ ಪೂರ್ಣಾನಂದವಿದ್ದುದರಿಂದ ವಿಷಯಭೋಗವು ಏತಕ್ಕೆಂದರೆ—) ಶ್ರೀಹರಿಯು ಪೂರ್ಣಾನಂದವುಳ್ಳವನಾದರೂ ಕ್ರೀಡೆಯಿಂದ ವೈಷಯಿಕ ಶುಭಸಾರಗಳನ್ನುಣ್ಣುತ್ತಾನೆ. ಇದರಿಂದ ಉತ್ಕ್ರಾಮಂತಂ ಎಂಬ ೧೦ನೇ ಶ್ಲೋಕವು ವ್ಯಾಖ್ಯಾತವಾಯಿತು. ॥ ೫—೧೦ ॥

ಪೀ—ಪ್ರಯತ್ನ ಪಟ್ಟರೂ ಶ್ರೀಹರಿಯು ಏಕೆ ಕಾಣಿಸಿಕೊಳ್ಳುವುದಿಲ್ಲ ಎಂದರೆ—

**ಗೀ ॥ ಯತಂತೋ ಯೋಗಿನಶ್ಚೈನಂ ಪಶ್ಯಂತ್ಯಾತ್ಮನ್ಯವಸ್ಥಿತಂ ।**
**ಯತಂತೋಽಪ್ಯಕೃತಾತ್ಮಾನೋ ನೈನಂ ಪಶ್ಯಂತ್ಯಚೇತಸಃ ॥ ೧೧ ॥**

ಅ ॥ ಯೋಗಿನಃ=ಜ್ಞಾನೋಪಾಯವನ್ನು ಹೊಂದುತ್ತಿರುವವರು, ಯತಂತಃ=ಪ್ರಯತ್ನ ಮಾಡುವವರಾಗಿ (ಜ್ಞಾನವನ್ನು ಹೊಂದಿ), ಆತ್ಮನಿ=ತಮ್ಮಲ್ಲಿ, ಅವಸ್ಥಿತಂ=ಇರುವ, ಏನಂ=ಈ ಶ್ರೀಹರಿಯನ್ನು, ಪಶ್ಯಂತಿ=ನೋಡುತ್ತಾರೆ. ಅಕೃತಾತ್ಮಾನಃ=ಅಂತಃಕರಣ ಶುದ್ಧಿಯಿಲ್ಲದಿರುವ, ಅಚೇತಸಃ ಅವಿವೇಕಿಗಳು, ಯತಂತೋಽಪಿ=ಪ್ರಯತ್ನ ಮಾಡಿದರೂ, ಏನಂ=ಶ್ರೀಹರಿಯನ್ನು, ನ ಪಶ್ಯಂತಿ ನೋಡುವುದಿಲ್ಲ. ॥ ೧೧ ॥

ಪೀ—ಯತಂತೋ ಯೋಗಿನಃ ಎಂಬುದರಿಂದ ಕಾರಣಾಂತರವು ಹೇಳಲ್ಪಡುತ್ತದೆ. ಎಂಬುವ ಪ್ರತೀತಿಯನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ—

**ಭಾ ॥ ಯತಂತೋ ಜ್ಞಾನಂ ಪ್ರಾಪ್ಯ । ಅಕೃತಾತ್ಮಾನ ಅಶುದ್ಧಬುದ್ಧಯಃ ॥ ೧೧ ॥**

ಅ ॥ ಶ್ರವಣಾದಿರೂಪವಾದ ಪುರುಷ ಪ್ರಯತ್ನವನ್ನು ಮಾಡುವವರಾಗಿ ಜ್ಞಾನಚಕ್ಷುಷ್ಟ್ವವನ್ನು ಹೊಂದಿ (ಏವಂಚ ಶ್ರವಣಾದಿರೂಪವಾದ ಪುರುಷಪ್ರಯತ್ನದಿಂದ ಅಪರೋಕ್ಷಜ್ಞಾನವುಂಟಾಗುವುದು) ಅಕೃತಾತ್ಮನಃ=ಅಶುದ್ಧವಾದ ಬುದ್ಧಿಯುಳ್ಳವರು. ॥ ೧೧ ॥

ಟೀ—ಅಧಶ್ಚ ಮೂಲಾನಿ ಇತ್ಯಾದಿಗಳಿಂದ ಶ್ರೀಪರಮಾತ್ಮನಿಗೆ ಹೇಳಿದ ಸರ್ವಾಂತರ್ಯಾಮಿತ್ವವನ್ನೂ, ಊರ್ಧ್ವ ಶಬ್ದದಿಂದ ಹೇಳಿದ ಸರ್ವೋತ್ತಮತ್ವವನ್ನೂ ಇನ್ನು ಮುಂದಿನ ಶ್ಲೋಕಗಳಲ್ಲಿ ವಿವರಿಸುತ್ತಾರೆ—

**ಗೀ ॥ ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ ॥ ೧೨ ॥**

ಅ ॥ ಆದಿತ್ಯಗತಂ=ಸೂರ್ಯನಲ್ಲಿರುವ, ಯತ್=ಯಾವ, ತೇಜಃ=ಜಗತ್ತನ್ನು ಪ್ರಕಾಶಗೊಳಿಸುವ ತೇಜಸ್ಸೋ, ಅಖಿಲಂ ಜಗತ್=ಸಮಸ್ತ ಜಗತ್ತನ್ನೂ, ಭಾಸಯತೇ=ಪ್ರಕಾಶಪಡಿಸುತ್ತದೋ, ಯತ್=ಯಾವುದು. ಚಂದ್ರಮಸಿ=ಚಂದ್ರನಲ್ಲಿದೆಯೋ, ಯಚ್ಚ=ಯಾವುದು ತೇಜಸ್ಸು, ಅಗ್ನೌ=ಅಗ್ನಿಯಲ್ಲಿದೆಯೋ. ತತ್ತೇಜಃ=ಆ ತೇಜಸ್ಸನ್ನು, ಮಾಮಕಂ=ನನ್ನ ಅಧೀನವನ್ನಾಗಿ, ವಿದ್ಧಿ=ತಿಳಿ. ॥ ೧೨ ॥

ಟೀ—ನ ತದ್ಭಾಸಯತೇ ಇತ್ಯಾದಿಗಳಿಂದ ಭಗವತ್ಸ್ವರೂಪವನ್ನು ಹೇಳಿದ್ದರಿಂದ ಮೇಲಿನ ಶ್ಲೋಕವು ಏತಕ್ಕೆಂದರೆ—

**ಭಾ ॥ ಪೂರ್ವೋಕ್ತಮೇವ ಜ್ಞಾನಂ ಪ್ರಪಂಚಯತಿ । ಯದಾದಿತ್ಯಗತಮಿತ್ಯಾದಿನಾ ॥೧೨॥**

ಅ ॥ ಅಧಶ್ಚ ಮೂಲಾನ್ಯನುಸಂತತಾನಿ (ಶ್ಲೋ. ೨.) ಎಂಬುವುದರಿಂದ ಸರ್ವಾಂತರ್ಯಾಮಿತ್ವರೂಪವಾದ ಭಗವನ್ಮಹಿಮೆಯನ್ನು, ಊರ್ಧ್ವ ಶಬ್ದದಿಂದ ಸರ್ವೋತ್ತಮತ್ವವನ್ನು ಹೇಳಿದ್ದನ್ನು ಯದಾದಿತ್ಯಗತಂ ಇತ್ಯಾದಿಗಳಿಂದ ವಿವರಿಸುತ್ತಾರೆ. ॥ ೧೨ ॥

**ಗೀ ॥ ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಃ ಸರ್ವಾಃ ಸೋಮೋ ಭೂತ್ವಾ ರಸಾತ್ಮಕಃ ॥೧೩॥**

ಅ ॥ ಅಹಂ=ನಾನು, ಗಾಂ=ಭೂಮಿಯನ್ನು, ಆವಿಶ್ಯ ಚ=ಪ್ರವೇಶಮಾಡಿ, ಭೂತಾನಿ=ಎಲ್ಲಾ ಪ್ರಾಣಿಗಳನ್ನು, ಓಜಸಾ=ನನ್ನ ಶಕ್ತಿಯಿಂದ, ಧಾರಯಾಮಿ=ಧರಿಸುತ್ತೇನೆ. ಅಹಂ=ನಾನು, ರಸಾತ್ಮಕಃ=ಅಮೃತ ರಸರೂಪನಾದ. ಸೋಮಃ=ಸೋಮನಾಮಕನೂ, ಚಂದ್ರನಲ್ಲಿ ಅಂತರ್ಗತನೂ, ಭೂತ್ವಾ=ಆಗಿ ಸರ್ವಾಃ=ಎಲ್ಲಾ, ಓಷಧೀಃ=ಸಸ್ಯ ಮೊದಲಾದವುಗಳನ್ನು, ಪುಷ್ಣಾಮಿ ಚ=ಪುಷ್ಟಿ ಮಾಡುತ್ತೇನೆ.

**ಭಾ ॥ ಗಾಂ ಭೂಮಿಂ ॥** ॥ ೧೩ ॥

ಅ ॥ ಗಾಂ=ಭೂಮಿಯನ್ನು.

**ತಾ ॥ ಸೌಮ್ಯತ್ವಾತ್ಸೋಮನಾಮಾಽಸೌ ಸೋಮಮಂಡಲಗಃ ಸದಾ** ॥ ೧೩ ॥

ಅ॥ ಶ್ರೀಹರಿಯು ಸೌಮ್ಯಸ್ವರೂಪನಾದುದರಿಂದ ಸೋಮನೆಂದು ಹೆಸರುಳ್ಳವನು, ಸರ್ವದಾ ಚಂದ್ರಮಂಡಲದಲ್ಲಿ ನಿಯಾಮಕನಾಗಿರುವವನು. ॥೧೩॥

ಗೀ॥ ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥೧೪॥

ಅ॥ ಅಹಂ=ನಾನು, ವೈಶ್ವಾನರಃ=ವೈಶ್ವಾನರನೆಂದು ಹೆಸರುಳ್ಳವನು, ಜಠರದಲ್ಲಿದ್ದ ವೈಶ್ವಾನರಾಗ್ನಿಯಲ್ಲಿ ನಿಯಾಮಕನಾಗಿದ್ದವನು, ಭೂತ್ವಾ=ಆಗಿ, ಪ್ರಾಣಿನಾಂ=ಎಲ್ಲಾ ಪ್ರಾಣಿಗಳ, ದೇಹಂ=ಶರೀರವನ್ನು, ಆಶ್ರಿತಃ=ಆಶ್ರಯಿಸಿದವನಾಗಿ, ಪ್ರಾಣಾಪಾನಸಮಾಯುಕ್ತಃ=ಪ್ರಾಣ ಅಪಾನರೆಂಬ ಮುಖ್ಯಪ್ರಾಣರೂಪಗಳಿಂದ ಕೂಡಿದವನಾಗಿ, ಚತುರ್ವಿಧಂ=ಭಕ್ಷ್ಯ ಭೋಜ್ಯ ಲೇಹ್ಯ ಪೇಯ ಎಂದು ನಾಲ್ಕು ವಿಧವಾದ, ಅನ್ನಂ=ಅನ್ನವನ್ನು, ಪಚಾಮಿ=ಜೀರ್ಣಗೊಳಿಸುತ್ತೇನೆ. ॥೧೪॥

ಶಾ॥ ಸ ಏವಾಗ್ನಿಸ್ಥಿತೋ ವಿಷ್ಣುರ್ನಾಮ್ನಾ ವೈಶ್ವಾನರಃ ಸದಾ । ಸರ್ವೇಷಾಂ ಸ ನರಾಣಾಂ ಯದುಪಜೀವ್ಯಃ ಸದೈವ ಚ ॥೧೪॥

ಅ॥ ಆ ಶ್ರೀವಿಷ್ಣುವೇ ವೈಶ್ವಾನರನೆಂಬ ಹೆಸರಿನಿಂದ ಜಠರಾಗ್ನಿಯಲ್ಲಿದ್ದಾನೆ. ಆ ಶ್ರೀಹರಿಯೇ ಸರ್ವದಾ ಎಲ್ಲಾ ಮನುಷ್ಯರಿಗೂ ಉಪಜೀವ್ಯನಾಗಿರುತ್ತಾನೆ. (ಅಂದರೆ ಎಲ್ಲರೂ ಶ್ರೀಹರಿಯನ್ನೇ ಆಶ್ರಯಿಸಿರುತ್ತಾರೆ.) ॥೧೪॥

ಗೀ॥ ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ
ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।
ವೇದೈಶ್ಚ ಸರ್ವೈರಹಮೇವ ವೇದ್ಯೋ
ವೇದಾಂತಕೃದ್ವೇದವಿದೇವ ಚಾಹಂ ॥೧೫॥

ಅ॥ ಅಹಂ=ನಾನು, ಸರ್ವಸ್ಯ=ಎಲ್ಲಾ ಪ್ರಾಣಿಗಳ, ಹೃದಿ=ಹೃದಯದಲ್ಲಿ, ಸನ್ನಿವಿಷ್ಟಃ=ನಿಯಾಮಕನಾಗಿರುವವನು, ಮತ್ತಃ=ನನ್ನಿಂದಲೇ, (ಎಲ್ಲಾ ಪ್ರಾಣಿಗಳಿಗೂ) ಸ್ಮೃತಿಃ=ಸ್ಮರಣೆಯೂ, ಜ್ಞಾನಂ=ಅನುಭವವೂ, ಅಪೋಹನಂ ಚ=ಭ್ರಮೆಯೂ, (ಬರುತ್ತವೆ.) ಅಹಮೇವ=ನಾನೇ, ಸರ್ವೈಃ ವೇದೈಃ=ಎಲ್ಲಾ ವೇದಗಳಿಂದಲೂ, ವೇದ್ಯಃ=ಪರಮ ಮುಖ್ಯ ವೃತ್ತಿಯಿಂದ ತಿಳಿಸಿಕೊಳ್ಳಲ್ಪಡುವವನು, ವೇದಾಂತಕೃತ್=ವೇದವ್ಯಾಸ ರೂಪದಿಂದ, ಬ್ರಹ್ಮಸೂತ್ರಗಳನ್ನು ಮಾಡಿದವನು. ಅಹಂ=ನಾನೇ, ವೇದವಿತ್=ಎಲ್ಲಾ ವೇದಗಳನ್ನೂ ಅವುಗಳ ಅರ್ಥಗಳನ್ನೂ ಯಥಾರ್ಥವಾಗಿ ತಿಳಿದವನು. ॥೧೫॥

ಟೀ—ವೇದಾಂತಕೃತ್ ಎಂಬುವುದಕ್ಕೆ ಉಪನಿಷತ್ತುಗಳನ್ನು ಮಾಡಿದವನು ಎಂಬುವ ಅರ್ಥಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ಶಾ॥ (೧) ವೇದನಿರ್ಣಯಾತ್ಮಿಕಾ ಮೀಮಾಂಸಾ ವೇದಾಂತಃ ॥ (೨) ತಥಾ ಚ ಸಾಮವೇದೇ ಪ್ರಾಚೀನಶಾಲಶ್ರುತಿಃ । ಸ ವೇದಾಂತಕೃತ್ಸ ಕಾಲಕ ಇತಿ ಸ ಏವ ಯಃ ಸೂತ್ರಕೃತ್ಸ ಕಾಲಕ ಇತಿ ॥೧೫॥

ಅ ॥ (೧) ವೇದಗಳ ಅರ್ಥವನ್ನು ನಿರ್ಣಯಿಸುವ ಬ್ರಹ್ಮಮೀಮಾಂಸಾ ಶಾಸ್ತ್ರವನ್ನು ವೇದವ್ಯಾಸ ರೂಪದಿಂದ ಮಾಡಿದವನು. (೨) (ಹೀಗೆ ಏಕೆ ಅರ್ಥವನ್ನು ಇಟ್ಟುಕೊಳ್ಳಬೇಕೆಂದರೆ—) ಹಾಗೆಯೇ ಸಾಮವೇದದಲ್ಲಿ ಪ್ರಾಚೀನ ಶಾಲಾಶ್ರುತಿಯು. ಶ್ರೀಹರಿಯು ವೇದಾರ್ಥವನ್ನು ನಿರ್ಣಯಿಸುವ ಬ್ರಹ್ಮ ಮೀಮಾಂಸಾ ಶಾಸ್ತ್ರವನ್ನು ವ್ಯಾಸರೂಪದಿಂದ ಮಾಡಿದವನು. ಸರ್ವಜ್ಞನು. ಸರ್ವಾಭೀಷ್ಟಪ್ರದನು. ಆ ಶ್ರೀಹರಿಯೇ ವೇದಾರ್ಥವನ್ನು ನಿರ್ಣಯಿಸತಕ್ಕ ಯುಕ್ತಿಯನ್ನು ತಿಳಿಸುವ ಬ್ರಹ್ಮಸೂತ್ರವನ್ನು ಮಾಡಿದವನು. ಸರ್ವ ಸೃಷ್ಟಿಕರ್ತನು. ॥ ೧೫ ॥

ತಾ ॥ ಸ ಏವ ವ್ಯಾಸರೂಪೇಣ ವೇದಾಂತಕೃದುದಾಹೃತಃ ॥ ೧೫ ॥

ಅ ॥ ಆ ಶ್ರೀಹರಿಯೇ ವೇದವ್ಯಾಸರೂಪದಿಂದ ವೇದಗಳ ಅರ್ಥನಿರ್ಣಾಯಕವಾದ ಬ್ರಹ್ಮಮೀ ಮಾಂಸಾಶಾಸ್ತ್ರವನ್ನು ನಿರ್ಮಿಸಿದವನು. ॥ ೧೫ ॥

ಪೀ—ಸರ್ವಾಂತರ್ಯಾಮಿತ್ವವನ್ನು ವಿವರಿಸಿ ಈಗ ಸರ್ವೋತ್ತಮತ್ವವನ್ನು ವಿವರಿಸುತ್ತಾರೆ—

ಗೀ ॥ ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।
ಕ್ಷರಃ ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬ ॥

ಅ ॥ ಇಮೌ—ಪ್ರಮಾಣಪ್ರಸಿದ್ಧರಾದ, ಪುರುಷೌ=ಚೇತನರು, ಲೋಕೇ=ನಿಯಮ್ಯ ವರ್ಗದಲ್ಲಿ ಕ್ಷರಶ್ಚ ಅಕ್ಷರಶ್ಚ—ಕ್ಷರ ಅಕ್ಷರ ಎಂದು. ದ್ವಾವೇವ=ಇಬ್ಬರೇ, ಸರ್ವಾಣಿ ಭೂತಾನಿ=ಚತುರ್ಮುಖ ಮೊದಲಾದ ಸಮಸ್ತ ಜೀವರು, ದೇಹನಾಶವುಳ್ಳವರಾದುದರಿಂದ ಕ್ಷರಃ=ಕ್ಷರರೆಂದೂ, ಕೂಟಸ್ಥಃ=ಲಕ್ಷ್ಮೀದೇವಿಯು (ನಾಶವಿಲ್ಲದ ಶರೀರವುಳ್ಳವಳಾದುದರಿಂದ) ಅಕ್ಷರಃ=ಅಕ್ಷರಳೆಂದೂ, ಉಚ್ಯತೇ=ಹೇಳಲ್ಪಡುತ್ತಾಳೆ. ॥ ೧೬ ॥

ತಾ ॥ ಬ್ರಹ್ಮರುದ್ರಾದಯಃ ಸರ್ವೇ ಶರೀರಕ್ಷರಣಾತ್ ಕ್ಷರಾಃ । ಶ್ರೀರಕ್ಷರಾತ್ಮೇತ್ಯುದಿತಾ ನಿತ್ಯಾ ಚಿದ್ದೇಹಕಾ ಯತಃ । ಚೇತನಾಚೇತನಸ್ಯಾಸ್ಯ ರಾಶೇಃ ಸಂಸ್ಥಾಪಕತ್ವತಃ । ಕೂಟಸ್ಥ ಇತ್ಯಾ ಸಾ ಜ್ಞೇಯಾ ॥ ೧೬ ॥

ಅ ॥ ಬ್ರಹ್ಮರುದ್ರಾದಿ ಜೀವರಾಶಿಗಳೆಲ್ಲರೂ ಶರೀರನಾಶವಿರುವವರಾದುದರಿಂದ ಕ್ಷರಚೇತನರೆನಿಸುತ್ತಾರೆ. ಲಕ್ಷ್ಮೀದೇವಿಯು ನಿತ್ಯವಾದ ಚಿದಾತ್ಮಕವಾದ ಶರೀರವುಳ್ಳವಳಾದುದರಿಂದ ಅಕ್ಷರ ಎನಿಸುತ್ತಾಳೆ. ಚೇತನಾಚೇತನ ರಾಶಿಗಳಿಗೆ ನಿಯಾಮಕಳಾದುದರಿಂದ ಲಕ್ಷ್ಮೀದೇವಿಯು ಕೂಟಸ್ಥಳೆನಿಸುತ್ತಾಳೆ. ॥ ೧೬ ॥

ಗೀ ॥ ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।
ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೧೭

ಅ ॥ ಉತ್ತಮಃ ಪುರುಷಸ್ತು=ಸರ್ವೋತ್ತಮ ಪುರುಷನಾದ ಶ್ರೀಕೃಷ್ಣನು, ಅನ್ಯಃ=ಇವರಿಬ್ಬರಿಗಿಂತ ಭಿನ್ನನು. (ಸರ್ವಥಾ ಇವರಿಬ್ಬರಲ್ಲಿ ಒಬ್ಬನು ಪುರುಷೋತ್ತಮನಾಗಲಾರನು) ಪರಮಾತ್ಮೇತಿ=ಸರ್ವೋತ್ತಮ ಚೇತನನೆಂದು, ಉದಾಹೃತಃ=ವೇದ ಮೊದಲಾದವುಗಳಲ್ಲಿ ಹೇಳಲ್ಪಟ್ಟಿದ್ದೇನೆ (ಆದುದರಿಂದ ಜೀವನಿಗೆ ಆತ್ಮಾ ಎಂತಲೂ ಶ್ರೀಹರಿಗೆ ಪರಮಾತ್ಮಾ ಎಂತಲೂ ಲೋಕಪ್ರ

ಕಾರವು.) ಯಃ=ಯಾವಾತನು, ಲೋಕತ್ರಯಂ=ಭೂಃ ಭುವಃ ಸ್ವಃ ಎಂಬ ಮೂರು ಲೋಕಗಳನ್ನು, ಆವಿಶ್ಯ=ಪ್ರವೇಶಿಸಿ, ಬಿಭರ್ತಿ=ಧರಿಸುತ್ತಾನೋ, ರಕ್ಷಿಸುತ್ತಾನೋ, (ಆತನು,) ಈಶ್ವರಃ=ಅಚಿಂತ್ಯ ಶಕ್ತಿಯುಳ್ಳವನು, ಅವ್ಯಯಃ=ನಾಶವಿಲ್ಲದವನು, (ಶ್ರೀಹರಿಗೆ ಅಚಿಂತ್ಯ ಶಕ್ತಿಯಿದ್ದುದರಿಂದ ಸರ್ವ ಲೋಕಗಳಿಗೆ ನಾಶವು ಬಂದರೂ ಶ್ರೀಹರಿಗೆ ನಾಶವಿಲ್ಲ) ॥ ೧೭ ॥

ಪೀ—ಅಂತಹ ಸರ್ವೋತ್ತಮನಾದ ಪರಮಾತ್ಮನು ತಾನೇ ಎಂದು ಸಪ್ರಮಾಣವಾಗಿ ನಿರೂಪಿಸುವನು—

ಗೀ ॥ ಯಸ್ಮಾತ್ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।
ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥ ೧೮ ॥

ಅ ॥ ಅಹಂ=ನಾನು, ಯಸ್ಮಾತ್=ಯಾವ ಕಾರಣದಿಂದ, ಕ್ಷರಂ=ಚತುರ್ಮುಖ ಬ್ರಹ್ಮನೇ ಮೊದಲಾದ ಎಲ್ಲಾ ಪ್ರಾಣಿಗಳನ್ನು, ಅತೀತಃ=ಮೀರಿಕೊಂಡಿರುವವನೋ, ಅಕ್ಷರಾದಪಿ=ಲಕ್ಷ್ಮೀದೇವಿಗಿಂತಲೂ ಉತ್ತಮಃ=ಶ್ರೇಷ್ಠನೋ, ಅತಃ=ಆದಕಾರಣ, ಲೋಕೇ=ಭಾರತ ಮೊದಲಾದ ಪೌರುಷೇಯ ಗ್ರಂಥಗಳಲ್ಲಿಯೂ, ವೇದೇ ಚ=ಅಪೌರುಷೇಯ ಗ್ರಂಥಗಳಲ್ಲಿಯೂ, ಪುರುಷೋತ್ತಮಃ=ಪುರುಷೋತ್ತಮನೆಂದು, ಪ್ರಥಿತಃ=ಪ್ರಸಿದ್ಧನು, ಅಸ್ಮಿ=ಆಗಿರುತ್ತೇನೆ. ॥ ೧೮ ॥

ಪೀ—ಶ್ರೀಹರಿಯು ಸರ್ವೋತ್ತಮನೆಂಬುವ ಜ್ಞಾನವು ಅತ್ಯಾವಶ್ಯಕವೆಂಬುವ ಅಭಿಪ್ರಾಯದಿಂದ ಅಂತಹ ಜ್ಞಾನಿಗೆ ಫಲವನ್ನು ಹೇಳುತ್ತಾರೆ—

ಗೀ ॥ ಯೋ ಮಾಮೇವಮಸಮ್ಮೂಢೋ ಜಾನಾತಿ ಪುರುಷೋತ್ತಮಂ ।
ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ೧೯ ॥

ಅ ॥ ಭಾರತ=ಎಲೋ ಅರ್ಜುನನೇ, ಯಃ=ಯಾವಾತನು, ಅಸಮ್ಮೂಢಃ=ಶ್ರೀಹರಿಗೆ ಸರ್ವೋತ್ತಮತ್ವವು ಇಲ್ಲ ಇತ್ಯಾದಿ ಸ್ವಲ್ಪ ಮಿಥ್ಯಾಜ್ಞಾನವೂ ಸಂಶಯವೂ ಇಲ್ಲದವನಾಗಿ, ಮಾಂ=ನನ್ನನ್ನು, ಏವಂ=ಹಿಂದೆ ಹೇಳಿದ ಪ್ರಕಾರ, ಪುರುಷೋತ್ತಮಂ=ಕ್ಷರಾಕ್ಷರ ಪುರುಷರಿಗಿಂತ ಉತ್ತಮನನ್ನಾಗಿ, ಜಾನಾತಿ=ತಿಳಿಯುತ್ತಾನೋ, ಸಃ=ಆತನು, ಸರ್ವವಿತ್=ಸರ್ವ ಶಾಸ್ತ್ರಾರ್ಥವನ್ನು ತಿಳಿದವನಾಗಿ, ಸರ್ವಭಾವೇನ=ಸರ್ವ ಪ್ರಕಾರದಿಂದಲೂ ಶ್ರೀಹರಿಯೇ ರಕ್ಷಕನು ಇದು ಮೊದಲಾದ ರೀತಿಯಿಂದ, ಮಾಂ=ನನ್ನನ್ನು, ಭಜತಿ=ಭಜಿಸುತ್ತಾ ಹೊಂದುತ್ತಾನೆ. ॥ ೧೯ ॥

ಪೀ—ಇದನ್ನು ಸರ್ವ ಸಾಮಾನ್ಯವಾಗಿ ಎಲ್ಲರಿಗೆ ಹೇಳಕೂಡದೆನ್ನುತ್ತಾರೆ—

ಗೀ ॥ ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।
ಏತದ್ಬುದ್ಧ್ವಾ ಬುದ್ಧಿಮಾನ್ಸ್ಯಾತ್ಕೃತಕೃತ್ಯಶ್ಚ ಭಾರತ ॥ ೨೦ ॥

ಅ ॥ ಇತಿ=ಹಿಂದೆ ಹೇಳಿದ ಪ್ರಕಾರ, ಗುಹ್ಯತಮಂ=ಅತಿ ಗೋಪ್ಯವಾದ (ಅ[illegible] [illegible] [illegible]ನರ್ಹವಾದ) ಶಾಸ್ತ್ರಂ=ಉಪದೇಶ ಮಾಡಲಿಕ್ಕೆ ಯೋಗ್ಯವಾದ, ಇದಂ=[illegible] [illegible]

ನಿಯಾಮಕನು ಇದು ಮೊದಲಾದ ಹಿಂದೆ ಹೇಳಿದ ಉತ್ತಮ ಪ್ರಮೇಯವು, ಮಯಾ = ನನ್ನಿಂದ, ಅನಘ = ಪಾಪವಿಲ್ಲದಿರುವ, ಭಾರತ = ಅರ್ಜುನನೇ, ಉಕ್ತಂ = ನಿನಗೋಸ್ಕರ ಹೇಳಲ್ಪಟ್ಟಿತು ಏತತ್ = ಇದನ್ನು ಬುದ್ಧ್ವಾ = ತಿಳಿದುಕೊಂಡು (ಶ್ರವಣ ಮನನ ನಿದಿಧ್ಯಾಸನಗಳನ್ನು ಮಾಡಿ) ಬುದ್ಧಿಮಾನ್ = ಅಪರೋಕ್ಷ ಜ್ಞಾನಿಯೂ, ಕೃತಕೃತ್ಯಶ್ಚ = ಮುಕ್ತನೂ ಕೂಡ, ಸ್ಯಾತ್ = ಆಗುವನು. ॥ ೨೦ ॥

## ಗೀ ॥ ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಪುರಾಣಪುರುಷೋತ್ತಮಯೋಗೋ ನಾಮ ಪಂಚದಶೋಽಧ್ಯಾಯಃ ॥ ೧೫ ॥

ಅ ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಪುರಾಣಪುರುಷೋತ್ತಮಯೋಗವೆಂಬ ಹದಿನೈದನೇ ಅಧ್ಯಾಯವು ಮುಗಿಯಿತು. ॥ ೧೫ ॥

ಪೀ — ಕ್ಷರಾಕ್ಷರ ಶಬ್ದಗಳು ಜಡ ಜೀವಪರಗಳೆಂಬುವ ಅರ್ಥವು ಅಯುಕ್ತವೆನ್ನುತ್ತಾರೆ —

**ಭಾ ॥ (೧) ಕ್ಷರಭೂತಾನಿ ಬ್ರಹ್ಮಾದೀನಿ । ಕೂಟಸ್ಥಃ ಪ್ರಕೃತಿಃ ॥ (೨) ತಥಾ ಚ ಶಾರ್ಕರಾಕ್ಷಶ್ರುತಿಃ । ಪ್ರಜಾಪತಿಪ್ರಮುಖಾಃ ಸರ್ವಜೀವಾಃ ಕ್ಷರೋಽಕ್ಷರಃ ಪುರುಷೋ ವೈ ಪ್ರಧಾನಂ । ತದುತ್ತಮಂ ಚಾನ್ಯಮುದಾಹರಂತಿ ಜಾಲಾಜಾಲಂ ಮಾತರಿಶ್ವಾನಮೇಕಮಿತಿ ॥ ೧೬–೨೦ ॥**

ಅ ॥ (೧) ಬ್ರಹ್ಮರುದ್ರಾದಿ ಜೀವರು ಕ್ಷರಭೂತರು. ನಿರ್ವಿಕಾರಳಾದವಳು ಚೇತನ ಪ್ರಕೃತಿಯಾದ ಲಕ್ಷ್ಮೀದೇವಿಯು. (೨) ಹಾಗೆ ಶಾರ್ಕರಾಕ್ಷ ಶ್ರುತಿಯಿದೆ. ಚತುರ್ಮುಖನೇ ಮೊದಲಾದ ಎಲ್ಲಾ ಜೀವರು ಕ್ಷರರೆನಿಸುತ್ತಾರೆ. ಲಕ್ಷ್ಮೀದೇವಿಯು ಅಕ್ಷರಳೆನಿಸುವಳು. ಇವರಿಂದ ಭಿನ್ನನಾದ ಪರಮಾತ್ಮನನ್ನು ಕ್ಷರಾಕ್ಷರರಿಂದುತ್ತಮನನ್ನಾಗಿ ಹೇಳುತ್ತಾರೆ. ಮುಖ್ಯಪ್ರಾಣನೊಬ್ಬನನ್ನು ಸಂಸಾರಬಂಧವಿದ್ದವನೆಂದೂ ಇಲ್ಲದವನೆಂದೂ ಹೇಳುತ್ತಾರೆ.

ವಿ ॥ ಭೂತಶಬ್ದವು ಕೇವಲ ಜಡದಲ್ಲಿಯೇ ರೂಢವಲ್ಲ. ಮತ್ತೆ ಸರ್ವ ಜೀವರಲ್ಲಿಯೂ ರೂಢವಾಗಿದೆ (ಅಂದರೆ — ಕ್ಷರಶಬ್ದದಿಂದ ಜಡವನ್ನು ಇಟ್ಟುಕೊಂಡರೆ ರೂಢಿ ಬಾಧವು. ಜೀವರನ್ನು ಇಟ್ಟುಕೊಂಡರೆ ರೂಢಿಯನ್ನು ಅನುಸರಿಸಿದಂತೆ ಆಗುವುದು.) ಆದಕಾರಣ ಜೀವರನ್ನೇ ಇಟ್ಟುಕೊಳ್ಳಬೇಕೆಂಬ ಯುಕ್ತಿಯನ್ನು ಸೂಚಿಸುವುದಕ್ಕಾಗಿ ಭೂತಾನಿ ಎಂದು ಹೇಳಿದ್ದು. ಮತ್ತು ಜೀವರನ್ನು ತೆಗೆದುಕೊಂಡರೆ ಸಾರ್ಥವಾದ ಜಡಗಳನ್ನು ತೆಗೆದುಕೊಂಡರೆ ಬಾಧಕವಾದ ಪುರುಷ ಶಬ್ದವೂ ಇದೆ. (3) ಮುಖ್ಯಪ್ರಾಣನಿಗೆ ಲಿಂಗ ಶರೀರವಿದ್ದುದರಿಂದ ಸಂಸಾರಬಂಧವಿದ್ದ ಪ್ರಯುಕ್ತ ಆದಾಗ್ಯೂ ಹೇಗೆಂದರೆ — ಬ್ರಹ್ಮಾ ನಿರಧಿಮಾನಿತ್ವಾತ್ ಶರೀರ್ಯಪ್ಯಶರೀರವಾನ್ ಶರೀರವಿದ್ದರೂ ಅಭಿಮಾನವಿಲ್ಲದಿರುವುದರಿಂದ ಅಶರೀರಿ ಸಂಸಾರಬಂಧವಿಲ್ಲದವನೆನ್ನಿಸುತ್ತಾನೆ ಮುಖ್ಯಪ್ರಾಣನೂ ಭಾವಿಬ್ರಹ್ಮನು. ॥ ೧೬–೨೦ ॥

## ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ಪಂಚದಶೋಽಧ್ಯಾಯಃ ॥ ೧೫ ॥

ಅ || ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಶ್ರೀಭಗವದ್ಗೀತಾ ಭಾಷ್ಯದಲ್ಲಿ ಹದಿನೈದನೇ ಅಧ್ಯಾಯವು ಮುಗಿಯಿತು. || ೧೫ ||

ತಾ || ಪರಮಾತ್ಮಾ ಹರಿಃ ಸ್ವಯಂ | ಕ್ಷರಾಕ್ಷರಾತ್ಮನೋರ್ಯಸ್ಮಾದುತ್ತಮಃ ಸ ಸದಾऽನಯೋಃ | ಪುರುಷೋತ್ತಮನಾಮಾऽತಃ ಪ್ರಸಿದ್ಧೋ ಲೋಕವೇದಯೋರಿತಿ ನಾರಾಯಣಶ್ರುತಿಃ || ೧೯—೨೦ ||

ಅ || ಶ್ರೀಪರಮಾತ್ಮನು ಸದಾ ಕ್ಷರಾಕ್ಷರ ಪುರುಷರಿಂದುತ್ತಮನಾಗಿರುತ್ತಾನೆ. ಆದಕಾರಣ ಲೌಕಿಕ ವೈದಿಕ ಗ್ರಂಥಗಳಲ್ಲಿ ಪುರುಷೋತ್ತಮನೆಂದು ಪ್ರಸಿದ್ಧನು. ಎಂದು ನಾರಾಯಣ ಶ್ರುತಿಯು. || ೧೯-೨೦ ||

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾ ತಾತ್ಪರ್ಯನಿರ್ಣಯೇ ಪಂಚದಶೋऽಧ್ಯಾಯಃ || ೧೫ ||

ಅ || ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾ ತಾತ್ಪರ್ಯನಿರ್ಣಯದಲ್ಲಿ ಹದಿನೈದನೇ ಅಧ್ಯಾಯವು ಮುಗಿಯಿತು. || ೧೫ ||

|| ಶ್ರೀಕೃಷ್ಣಾರ್ಪಣಮಸ್ತು ||

॥ ಶ್ರೀಃ ॥

# ಹದಿನಾರನೇ ಅಧ್ಯಾಯವು.

---

ಪೀ—ನಿರ್ಮಾನಮೋಹಾಃ ಇತ್ಯಾದಿಗಳಿಂದ ಶ್ರೀಹರಿಯು ಎಲ್ಲಾ ಜಗತ್ತಿಗಿಂತಲೂ ಭಿನ್ನನು, ಸರ್ವಕರ್ತೃ ಕಾರಣನು, ಕ್ಷರಾಕ್ಷರ ಪುರುಷರಿಂದುತ್ತಮನು, ಎಂಬುವ ಜ್ಞಾನವೇ ಮೋಕ್ಷಸಾಧನವೆಂಬುವುದನ್ನು, ಯತಂತೋಽಪ್ಯಕೃತಾತ್ಮಾನಃ ಇತ್ಯಾದಿಗಳಿಂದ ಜಗತ್ತು ಮಿಥ್ಯೆಯೆಂದು ಹೇಳುವವರು ಅಧೋಗತಿಯನ್ನು ಹೊಂದುತ್ತಾರೆಂದು ಪುರುಷಾರ್ಥ ವಿರೋಧಿಯೆಂಬುವುದನ್ನೂ, ಸಂಕ್ಷೇಪವಾಗಿ, ಗತನೇ ಅಧ್ಯಾಯದಲ್ಲಿ ಹೇಳಿರುತ್ತಾರೆ. ಮೋಕ್ಷಸಾಧನವು ದೇವತೆಗಳಿಗೆ ಲಕ್ಷಣವು. ಆ ಲಕ್ಷಣ ವಿರುದ್ಧ ಧರ್ಮವು ಅಸುರರ ಲಕ್ಷಣವು. ಇವೆರಡನ್ನು ಈ ಅಧ್ಯಾಯದಲ್ಲಿ ವಿವರಿಸುತ್ತಾರೆ. ಅದರಲ್ಲಿ ಮೊದಲು ೩ ಶ್ಲೋಕಗಳಿಂದ ದೇವತೆಗಳ ಲಕ್ಷಣಗಳನ್ನು ಹೇಳುತ್ತಾರೆ--

ಗೀ ॥ ॥ ಶ್ರೀಭಗವಾನುವಾಚ ॥

ಓಂ ॥ ಅಭಯಂ ಸತ್ತ್ವಸಂಶುದ್ಧಿರ್ಜ್ಞಾನಯೋಗವ್ಯವಸ್ಥಿತಿಃ ।

ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಂ ॥ ೧ ॥

ಅ ॥ ಶ್ರೀಭಗವಾನ್ = ಶ್ರೀಕೃಷ್ಣನು, ಉವಾಚ = ಹೇಳುತ್ತಾನೆ. (1) ಅಭಯಂ = ತಾನು ಇತರರಿಗೆ ಭಯ ಮಾಡದಿರೋಣ, ಇತರರಿಂದ ತಾನೂ ಭಯ ಹೊಂದದಿರೋಣ, (2) ಸತ್ವಸಂಶುದ್ಧಿಃ = ಅಂತಃಕರಣ ಶುದ್ಧಿಯು, (ಮನೋ ನೈರ್ಮಲ್ಯವು.) (3) ಜ್ಞಾನಯೋಗವ್ಯವಸ್ಥಿತಿಃ = ತತ್ವ ಜ್ಞಾನವನ್ನು ಸಂಪಾದಿಸುವ ಶ್ರವಣಾದಿರೂಪವಾದ ಉಪಾಯದಲ್ಲಿ ಆಸಕ್ತಿಯು, (4) ದಾನಂ = ಸತ್ಪಾತ್ರದಲ್ಲಿ ದ್ರವ್ಯಾದಿಗಳನ್ನು ಕೊಡುವುದು, (5) ದಮಃ = ಇಂದ್ರಿಯಗಳನ್ನು ಜಯಿಸುವುದು, (6) ಯಜ್ಞಶ್ಚ = ಜ್ಯೋತಿಷ್ಟೋಮಾದಿ ಯಜ್ಞವೂ, ದೇವಯಜ್ಞ ಪಿತೃತರ್ಪಣ ಮೊದಲಾದುದು, (7) ಸ್ವಾಧ್ಯಾಯಃ = ವೇದಾಧ್ಯಯನವು (8) ತಪಃ = ತಪಸ್ಸು, (9) ಆರ್ಜವಂ = ಮನಸ್ಸು ವಚನ ಕರ್ಮಗಳಲ್ಲಿ ಒಂದೇ ರೀತಿ ಇರುವುದು. ॥ ೧ ॥

ಭಾ ॥ ಓಂ ॥ (೧) ಪುಮರ್ಥಸಾಧನವಿರೋಧೀನ್ಯನೇನಾಧ್ಯಾಯೇನ ದರ್ಶಯತಿ ॥ (೨)

ತಪೋ ಬ್ರಹ್ಮಚರ್ಯಾದಿ । ಬ್ರಹ್ಮಚರ್ಯಾದಿಕಂ ತಪ ಇತ್ಯಭಿಧಾನಂ ॥ ೧ ॥

ಅ ॥ (೧) ಈ ಅಧ್ಯಾಯದಿಂದ ಪುರುಷಾರ್ಥಗಳಾದ ಜ್ಞಾನ ಮೋಕ್ಷಗಳ ಸಾಧನಗಳನ್ನೂ ವಿರೋಧಿಗಳನ್ನೂ ತೋರಿಸುತ್ತಾರೆ. (೨) ಇಲ್ಲಿ ತಪಃ ಅಂದರೆ—ಬ್ರಹ್ಮಚರ್ಯ ಮೊದಲಾದುದು. (ಆ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಬ್ರಹ್ಮಚರ್ಯ ಉಪವಾಸ ಮೊದಲಾದುದು ತಪಃ ಎನ್ನಿಸುತ್ತದೆ. ಎಂದು ಶಬ್ದಶಕ್ತಿಗ್ರಾಹಕ ಪ್ರಮಾಣವು.

ವಿ ॥ (1) ಯದ್ಯಪಿ ಹಿಂದಿನ ಅಧ್ಯಾಯಗಳಿಗೆ ಪುರುಷಾರ್ಥ ಸಾಧನಗಳನ್ನು ಹೇಳುವುದರಲ್ಲಿಯೇ ತಾತ್ಪರ್ಯವು. ಆದರೂ ಅಲ್ಲಿ ಅವುಗಳನ್ನು ವಿವರಿಸಲಿಲ್ಲ. ಮತ್ತೆ ಬಂಧಸ್ವರೂಪವನ್ನು ಹೇಳಿರುತ್ತಾರೆ. ಪುರುಷಾರ್ಥವನ್ನು ಸಾಧಿಸಬೇಕೆಂಬುವವರು ಪುರುಷಾರ್ಥ ವಿರೋಧಿಗಳನ್ನು ಅವಶ್ಯವಾಗಿ ಬಿಡಬೇಕು, ಹಿಂದಿನ ಅಧ್ಯಾಯದಲ್ಲಿ ನಿರ್ಮಾನಮೋಹಾಃ ಇತ್ಯಾದಿಗಳಿಂದ ಪುರುಷಾರ್ಥಗಳಾದ ಜ್ಞಾನ

...ತ್ವಗಳ ಸಾಧನಗಳನ್ನು ಯತಂತೋಽಪ್ಯಕೃತಾತ್ಮನಃ ಇತ್ಯಾದಿಗಳಿಂದ ಪುರುಷಾರ್ಥ ವಿರೋಧಿ...ನ್ನು ಸಂಕ್ಷೇಪವಾಗಿ ಹೇಳಿರುವರು. ಅವೆರಡನ್ನು ಈ ಅಧ್ಯಾಯದಲ್ಲಿ ವಿವರಿಸುವರು. (೭) ಅಭಯಂ ...ತ್ವಸಂಶುದ್ಧಿಃ ಇತ್ಯಾದಿ ದೇವತೆಗಳ ಲಕ್ಷಣವು ಪುರುಷಾರ್ಥ ಸಾಧನವೂ ದಂಭ ಮೊದಲಾದ ಅಸುರ ...ಣಗಳು ಪುರುಷಾರ್ಥಕ್ಕೆ ವಿರೋಧಿಯೂ ಆದುದರಿಂದ ಈ ಅಧ್ಯಾಯದಲ್ಲಿ ದೇವಾಸುರ ಲಕ್ಷಣವೂ ಹೇಳಲ್ಪಡುತ್ತದೆ. ॥ ೧ ॥

**ಗೀ ॥ ಅಹಿಂಸಾ ಸತ್ಯಮಕ್ರೋಧಸ್ತ್ಯಾಗಃ ಶಾಂತಿರಪೈಶುನಂ ।**
**ದಯಾ ಭೂತೇಷ್ವಲೋಲುತ್ವಂ ಮಾರ್ದವಂ ಹ್ರೀರಚಾಪಲಂ ॥ ೨ ॥**

ಅ ॥ (10) ಅಹಿಂಸಾ=ಇತರರ ಪ್ರಾಣವನ್ನು ವಿಯೋಗ ಮಾಡದಿರುವುದು, (11) ಸತ್ಯಂ=ಅಪ್ರಿಯವಾದ ಮಾತನ್ನಾದರೆ ಯಥಾರ್ಥ ನುಡಿಯುವುದು, (12) ಅಕ್ರೋಧಃ=ಪರರಿಗೆ ಪೀಡೆಯನ್ನುಂಟುಮಾಡುವ ಚಿತ್ತವಿಕಾರ (ಕೋಪ) ವಿಲ್ಲದಿರುವುದು, (13) ತ್ಯಾಗಃ=ಔದಾರ್ಯವು, (14) ಶಾಂತಿಃ=ಪರಮಾತ್ಮನಲ್ಲಿಯೇ ಬುದ್ಧಿಯನ್ನು ಇಡುವಿಕೆ, (15) ಅಪೈಶುನಂ=ಇತರರಿಗೆ ಉಪದ್ರವವನ್ನುಂಟುಮಾಡುವ ದೋಷಾದಿಗಳನ್ನು ರಾಜಾದಿಗಳಲ್ಲಿ ಹೇಳದಿರೋಣವು. (ಅಂದರೆ ಚಾಡಿತನವಿಲ್ಲದಿರುವಿಕೆ.) (16) ಭೂತೇಷು=ಪ್ರಾಣಿಗಳಲ್ಲಿ, ದಯಾ=ಪರರಿಗೆ ಹಿತವಾಗಬೇಕೆಂಬುವ ಮನೋವ್ಯಾಪಾರವು, ಅಥವಾ ಇನ್ನೊಬ್ಬರ ದುಃಖವನ್ನು ನೋಡಿ ಸಹಿಸದಿರುವಿಕೆ. (17) ಅಲೋಲುತ್ವಂ=ಶಬ್ದಾದಿ ವಿಷಯಗಳಲ್ಲಿ ಸ್ನೇಹವಿಲ್ಲದಿರುವಿಕೆ, (18) ಮಾರ್ದವಂ=ತನ್ನನ್ನು ಹಿಂಸೆ ಮಾಡುವವರಿಗೂ ಕ್ರೋಧ ಮಾಡದಿರೋಣವು, ಅಥವಾ ಕ್ರೂರತನವಿಲ್ಲದಿರುವಿಕೆ. (19) ಹ್ರೀಃ=ಶಾಸ್ತ್ರ ವಿರುದ್ಧಗಳಾದ ಕೆಲಸಗಳನ್ನು ಮಾಡುವ ವಿಷಯದಲ್ಲಿ ನಾಚಿಗೆ. (20) ಅಚಾಪಲಂ=ಸತ್ಕರ್ಮಗಳನ್ನು ಮಾಡುವ ವಿಷಯದಲ್ಲಿ ಸ್ಥಿರವಾಗಿರುವಿಕೆ. ॥ ೨ ॥

**ಟೀ ॥ (೧) ಪೈಶುನಂ ಪರೋಪದ್ರವನಿಮಿತ್ತದೋಷಾಣಾಂ ರಾಜಾದೇಃ ಕಥನಂ । ಪರೋಪದ್ರವಹೇತೂನಾಂ ದೋಷಾಣಾಂ ಪೈಶುನಂ ವಚಃ । ರಾಜಾದೇಸ್ತು ॥ (೨) ಮದಾದ್ಭೀತೇರದೃಷ್ಟಿರ್ದರ್ಪ ಉಚ್ಯತ ಇತ್ಯಭಿಧಾನಂ ॥ (೩) ಲೌಲ್ಯಂ ರಾಗಃ । ರಾಗೋ ಲೌಲ್ಯಂ ತಥಾ ರಕ್ತಿರಿತ್ಯಭಿಧಾನಾತ್ । ಅಚಾಪಲಂ ಸ್ಥೈರ್ಯಂ । ಚಪಲಶ್ಚಂಚಲೋಽಸ್ಥಿರ ಇತ್ಯಭಿಧಾನಾತ್ ॥ ೨ ॥**

ಅ ॥ (೧) ಪೈಶುನಂ=ಬೇರೆಯವರಿಗೆ ಉಪದ್ರವಕ್ಕೆ ಕಾರಣಗಳಾದ ದೋಷಗಳನ್ನು ರಾಜಾದಿಗಳ ಬಳಿಗೆ ಹೋಗಿ ಚಾಡಿ ಹೇಳುವುದು. (ಇದನ್ನು ಪ್ರಮಾಣದಿಂದ ವಿವರಿಸುತ್ತಾರೆ—) ಇತರರಿಗೆ ಹಿಂಸೆಗೆ ಕಾರಣಗಳಾದ ದೋಷಗಳನ್ನು ರಾಜಾದಿಗಳಿಗೆ ಹೇಳುವುದು ಪೈಶುನವು. (೨) (ಮುಂದೆ [illegible] ದರ್ಪ ಶಬ್ದಾರ್ಥವನ್ನು ಹೇಳುತ್ತಾರೆ—) ಮದದ [illegible] ದಿಂದ ಭಯವು ಹುಟ್ಟದಿರುವುದು ಅಥವಾ [illegible] ದಿಂದ ಭಯಕಾರಣವನ್ನು ಭಯಕಾರಣವೆಂದು ತಿಳಿಯದಿರುವುದು ದರ್ಪ ಎನಿಸುತ್ತದೆ. ಎಂದು [illegible] ವು. (೩) (ಅಲೋಲುತ್ವ ಅಚಾಪಲಗಳಿಗೆ ಬೇರೆ ಬೇರೆ ಅರ್ಥ [illegible] ಪ್ರಮಾಣವನ್ನು [illegible] ತ್ತಾರೆ—) ಲೌಲ್ಯಂ=ವಿಷಯಗಳಲ್ಲಿ ಅನುರಾಗವು [illegible] ಲೌಲ್ಯಂ [illegible] ಎಂಬ [illegible] ಅರ್ಥದ ಶಬ್ದವು ಎಂದು ಅಭಿಧಾನ [illegible] [illegible] ಚಪಲ [illegible] ಈ ಮೂರು ಶಬ್ದಗಳು ಒಂದೇ ಅರ್ಥ [illegible] [illegible]

**ಗೀ ॥ ತೇಜಃ ಕ್ಷಮಾ ಧೃತಿಃ ಶೌಚಮದ್ರೋಹೋ ನಾತಿಮಾನಿತಾ ।**
**ಭವಂತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥ ೩ ॥**

ಅ ॥ (21) ತೇಜಃ= ಇನ್ನೊಬ್ಬರಿಂದ ತಿರಸ್ಕಾರವಾಗದಂತಹ ಕಾಂತಿಯು. ಅಥವಾ ಇನ್ನೊಬ್ಬರಿಂದ ಸೋಲದಿರೋಣ, (22) ಕ್ಷಮಾ= ಇತರರು ದೂಷಿಸಿದರೂ ಉಪದ್ರವಾದಿಗಳನ್ನು ಮಾಡಿದರೂ ಅಪಕಾರ ಮಾಡಿದವರಿಗೆ ಸಿಟ್ಟುಮಾಡದೆ ಪ್ರತ್ಯಪಕಾರ ಮಾಡದಿರುವಿಕೆ. (23) ಧೃತಿಃ= ಧೈರ್ಯವು, (ಯಾವುದಕ್ಕೂ ಹೆದರದಿರುವುದು) (24) ಶೌಚಂ= ಸ್ನಾನಾದಿಗಳಿಂದ ಬಾಹ್ಯ ದೇಹ ಶುದ್ಧಿಯು, ಮತ್ತು ಭಗವಂತನ ಸ್ಮರಣಾದಿಗಳಿಂದ ಅಂತಃಕರಣ ಶುದ್ಧಿಯು, (25) ಅದ್ರೋಹಃ= ಯಾರಿಗೂ ದ್ರೋಹಮಾಡದಿರುವಿಕೆ. (26) ನಾತಿಮಾನಿತಾ= ಅಹಂಕಾರವಿಲ್ಲದಿರುವಿಕೆ (ಹೆಮ್ಮೆ ಹೊಂದದಿರೋಣ) (ಈ ೨೬ ಗುಣಗಳು) ದೈವೀಂ ಸಂಪದಂ= ದೇವತೆಗಳಿಗೆ ಯೋಗ್ಯವಾದ ಸಾತ್ವಿಕ ಸ್ವಭಾವವನ್ನು, ಅಭಿಜಾತಸ್ಯ= ಹೊಂದಿರುವವನಿಗೆ, ಭವಂತಿ= ಇರುತ್ತವೆ. (ಅಂದರೆ ಅವು ಮುಂದೆ ಶ್ರೇಯಸ್ಸನ್ನು ಹೊಂದುವುದಕ್ಕೆ ಕಾರಣಗಳಾಗುತ್ತವೆ. ಆದಕಾರಣ ಮೋಕ್ಷವನ್ನು ಬಯಸುವವನು ಅವಶ್ಯವಾಗಿ ಈ ೨೬ ಗುಣಗಳನ್ನು ಸಂಪಾದಿಸಲೇ ಬೇಕು.) ॥ ೩ ॥

ಪೀ— ಅಸುರಸಂಪತ್ತನ್ನು ಹೊಂದಿರುವ ತಾಮಸರ ದೋಷಗಳನ್ನು ಅವಶ್ಯವಾಗಿ ಬಿಡಬೇಕೆಂಬುವ ಉದ್ದೇಶದಿಂದ ಅಸುರರ ಲಕ್ಷಣಗಳನ್ನು ಹೇಳುತ್ತಾರೆ—

**ಗೀ ॥ ದಂಭೋ ದರ್ಪೋಽಭಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಂ ॥ ೪ ॥**

ಅ ॥ ಪಾರ್ಥ= ಅರ್ಜುನನೇ. ದಂಭಃ= ತಾನು ಅಲ್ಪನೆಂದು ತಿಳಿದಿದ್ದರೂ ಶ್ರೇಷ್ಠನೆಂದು ನಟಿಸುವುದು. ದರ್ಪಃ=ಗರ್ವವು. ಅಥವಾ ಹೆದರಲಿಕ್ಕೆ ಬಹುಕಾರಣಗಳಿದ್ದರೂ ಮದದಿಂದ (ಹೆಮ್ಮೆಯಿಂದ) ತನಗೆ ಭಯವಿಲ್ಲವೆಂದು ತೋರಿಸುವುದು, ಅಭಿಮಾನಶ್ಚ= ತಾನು ದೊಡ್ಡವನೆಂಬುವ ಅಹಂಕಾರವು, ಕ್ರೋಧಃ= ಪರರಿಗೆ ಪೀಡೆಯನ್ನುಂಟುಮಾಡುವ ಮನೋವಿಕಾರವು ಕೋಪವು, ಪಾರುಷ್ಯಂ ಚ= ನಿಷ್ಠುರ ಮಾತನ್ನು ನುಡಿಯುವುದು, ಅಜ್ಞಾನಂ ಚ= ಸಾರಾಸಾರ ವಸ್ತುಗಳ ವಿವೇಕವಿಲ್ಲದಿರುವುದು, (ಈ ದೋಷಗಳೆಲ್ಲವೂ) ಆಸುರೀಂ ಸಂಪದಂ= ಅಸುರ ಸಂಬಂಧಿಯಾದ ಸಂಪತ್ತನ್ನು, ಅಭಿಜಾತಸ್ಯ= ಹೊಂದಿದ ತಾಮಸರಿಗೆ, ಭವಂತ್ಯೇವ ಚ= ನಿಶ್ಚಯವಾಗಿಯೂ ಆಗುತ್ತವೆ. (ಅಂದರೆ ಇಂತಹ ಗುಣಗಳುಳ್ಳವರು ತಾಮಸರು.) ॥ ೪ ॥

ಪೀ— ೩ನೇ ಶ್ಲೋಕದಲ್ಲಿದ್ದ ಕ್ಷಮಾ ಶಬ್ದಾರ್ಥವನ್ನು ಹೇಳುತ್ತಾರೆ—

**ಭಾ ॥ ಕ್ಷಮಾ ತು ಕ್ರೋಧಾಭಾವೇನ ಸದಾಪಕರ್ತುರನಪಕೃತಿಃ । ಅಕ್ರೋಧದೋಷ-**
**ಕೃದ್ಭ್ಯಃ ಕ್ರೋಃ ಕ್ಷಮಾವಾನ್ಸ ನಿಗದ್ಯತ ಇತ್ಯಭಿಧಾನಾತ್ ॥ ೩,೪ ॥**

ಅ ॥ (೧) (ಅಕ್ರೋಧಃ ಎಂದು ೨ನೇ ಶ್ಲೋಕದಲ್ಲಿ ಹೇಳಿದ ಕಾರಣ ಕ್ಷಮಾ ಎಂದು ಪುನರುಕ್ತಿ ವಾಯಿತೆಂದರೆ—) ಸಿಟ್ಟು ಇಲ್ಲದವನಾಗಿ ಅಪಕಾರವಾಡಿದವನಿಗೆ ಪ್ರತ್ಯಪಕಾರ ಮಾಡದಿರುವುದು ಕ್ಷಮಾ ಎನಿಸುತ್ತದೆ. (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ—) ಅಪಕಾರ ಮಾಡಿದ ಜನರಿಗೆ ಸಿಟ್ಟನ್ನು ಪ್ರತ್ಯಪಕಾರವನ್ನು ಮಾಡದಿರುವವರು ಕ್ಷಮಾವಳ್ಳವರೆನಿಸುತ್ತಾರೆ, ಎಂದು ಅಭಿಧಾನವು. ೨೪

ಟೀ—ಹಿಂದೆ ಹೇಳಿದ ದೇವಾಸುರ ಸ್ವಭಾವದ ಫಲವನ್ನು ತೋರಿಸುತ್ತಾ ಅರ್ಜುನನು ಅಸುರ ಸ್ವಭಾವದವನಲ್ಲವೆನ್ನುತ್ತಾರೆ—

ಶ್ಲೋ॥ ದೈವೀ ಸಂಪದ್ವಿಮೋಕ್ಷಾಯ ನಿಬಂಧಾಯಾಸುರೀ ಮತಾ।
ಮಾ ಶುಚಃ ಸಂಪದಂ ದೈವೀಮಭಿಜಾತೋಽಸಿ ಪಾಂಡವ ॥ ೫ ॥

ಅ॥ ಪಾಂಡವ=ಪಾಂಡುಪುತ್ರನೇ, ದೈವೀ ಸಂಪತ್=ಅಭಯಂ ಸತ್ವಸಂಶುದ್ಧಿಃ ಇತ್ಯಾದಿಗಳಿಂದ ಹಿಂದೆ ಹೇಳಿದ ದೇವತೆಗಳ ಸಂಬಂಧಿಯಾದ ಸಂಪತ್ತು, ವಿಮೋಕ್ಷಾಯ=ಸಾಲೋಕ್ಯಾದಿರೂಪವಾದ ನಾನಾವಿಧವಾದ ಮೋಕ್ಷಕ್ಕೂ, ಆಸುರೀ=ದಂಭೋದರ್ಪಃ ಇದುಮೊದಲಾದ ಅಸುರರ ಸಂಬಂಧಿಯಾದ ಸಂಪತ್ತು, ನಿಬಂಧಾಯ=ಅತ್ಯಂತ ನೀಚಸ್ಥಾನವಾದ ಅಂಧಂತಮಸ್ಸಿಗೂ, ಕಾರಣವೆಂದೂ, ಮತಾ=ಸಮ್ಮತವಾದುದು. ಅರ್ಜುನನೇ (ನೀನು) ದೈವೀಂ ಸಂಪದಂ=ದೇವತೆಗಳ ಸಂಬಂಧಿಯಾದ ಸಂಪತ್ತನ್ನು, ಅಭಿಜಾತಃ ಅಸಿ=ಹೊಂದಿದವನಾಗಿರುತ್ತಿ (ಅದಕಾರಣ) ಶುಚಃ=ದುಃಖವನ್ನು ಮಾ (ಕಾರ್ಷೀಃ=) ಮಾಡಬೇಡ.

ವಿ॥ ದೈವೀ ಸಂಪತ್ತನ್ನು ಹೊಂದಿದ ಸಾತ್ವಿಕನು ಸಚ್ಛಾಸ್ತ್ರಶ್ರವಣಾದಿ ಸಾಧನಗಳಿಂದ ತತ್ವಜ್ಞಾನವನ್ನು ಹೊಂದಿ ಮೋಕ್ಷವನ್ನೂ, ಅಸುರಸಂಪತ್ತನ್ನು ಹೊಂದಿದ ತಾಮಸನು ತತ್ವಜ್ಞಾನಶೂನ್ಯನಾಗಿ ವಿಪರೀತಜ್ಞಾನದಿಂದ ಅಂಧಂತಮಸ್ಸನ್ನೂ, ಹೊಂದುತ್ತಾನೆ. ಅರ್ಜುನನೇ ನಿನಗೆ ತತ್ವಜ್ಞಾನಕ್ಕೆ ಅಧಿಕಾರಿಯೋ ಅಲ್ಲವೋ ಎಂಬುವ ಸಂದೇಹವು ಬೇಡ ನೀನು ದೈವೀ ಸಂಪತ್ತನ್ನೇ ಹೊಂದಿದವನು. ಅದಕಾರಣ ನಿನಗೆ ಮೋಕ್ಷವೇ ಆಗುತ್ತದೆ ಸರ್ವಥಾ ದುಃಖಿಸಬೇಡ. ಸಂತೋಷಚಿತ್ತನಾಗಿರು. ॥ ೫ ॥

ಟೀ—ದೇವ, ಅಸುರ, ರಾಕ್ಷಸ, ಪೈಶಾಚ, ಮನುಷ್ಯ ಮೊದಲಾದ ನಾನಾವಿಧ ಸೃಷ್ಟಿಗಳು ಇದ್ದಾಗ್ಯೂ (1) ದೇವತೆಗಳು, (2) ಅಸುರರು, ಎಂದು ಇಬ್ಬರನ್ನೇ ಹೇಳಿದುದು, ಹೇಗೆಂದರೆ—ಬಹುವಿಧ ಸೃಷ್ಟಿಗಳು ಇದ್ದರೂ ಹೆಚ್ಚು ಶುಭ ಫಲವನ್ನುಳ್ಳವರು, ದೇವತೆಗಳು, ಹೆಚ್ಚು ಅಶುಭ ಫಲವನ್ನುಳ್ಳವರು ಅಸುರರಾಗಿರುವುದರಿಂದ ದೇವಾಸುರರಿಬ್ಬರನ್ನೇ ಹೇಳಿರುತ್ತಾರೆನ್ನುತ್ತಾರೆ—

ಶ್ಲೋ॥ ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ।
ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥ ೬ ॥

ಅ॥ ಅಸ್ಮಿನ್ ಲೋಕೇ=ಈ ಜಗತ್ತಿನಲ್ಲಿ, ಭೂತಸರ್ಗೌ=ಪ್ರಾಣಿಗಳ ಸೃಷ್ಟಿಗಳು, ಅಥವಾ ಪ್ರಾಣಿಗಳ ಸ್ವಭಾವಗಳು, ದೈವಃ=ದೇವತೆಗಳ ಸಂಬಂಧಿಯಾದುದು ಆಸುರಶ್ಚ=ಅಸುರರ ಸಂಬಂಧಿಯಾದುದೂ, ಇತಿ=ಹೀಗೆ ದ್ವಾವೇವ=ಎರಡು ಪ್ರಕಾರಗಳಾದವುಗಳೇ. ಪಾರ್ಥ=ಅರ್ಜುನನೇ, (ಅವುಗಳ ಮಧ್ಯದಲ್ಲಿ) ದೈವಃ=ದೇವತೆಗಳ ಸ್ವಭಾವವು. (ಸಾತ್ವಿಕ ಸ್ವಭಾವವು) ವಿಸ್ತರಶಃ=ವಿಸ್ತರವಾಗಿ, ಪ್ರೋಕ್ತಃ=(ಅಭಯಂ ಸತ್ವಸಂಶುದ್ಧಿಃ ಇವು ಮೊದಲಾದ ಶ್ಲೋಕಗಳಿಂದ) ಹೇಳಲ್ಪಟ್ಟಿದೆ. ಆಸುರಂ=ಅಸುರ ಸ್ವಭಾವವನ್ನು, ವಿಸ್ತರಶಃ=ವಿಸ್ತರವಾಗಿ (ನಾನು ಹೇಳುತ್ತೇನೆ) ಮೇ=ನನ್ನಿಂದ, ಶೃಣು=ಕೇಳು.

ವಿ॥ ೧೪ನೇ ಅಧ್ಯಾಯದಲ್ಲಿ ೧೮, ೧೯ನೇ ಶ್ಲೋಕಗಳಲ್ಲಿ ರಾಕ್ಷಸಪ್ರಕೃತಿ, ಅಸುರಪ್ರಕೃತಿ, ದೈವಪ್ರಕೃತಿ, ಎಂದು ಮೂರು ವಿಧವೆಂದು ಹೇಳಿದೆ ಇಲ್ಲಿ ಎರಡು ವಿಧವೆಂದು ಹೇಳಿದುದು ಹೇಗೆ ಎಂದರೆ

ತ್ತದೆಂದರೆ—) ರಾಕ್ಷಸರ ಸ್ವಭಾವವು ಸಾಮಾನ್ಯತಃ ಅಸುರರ ಸ್ವಭಾವದಂತೆ ಆಗಿರುವುದರಿಂದ ರಾಕ್ಷಸ ಸ್ವಭಾವವನ್ನು ಅಸುರ ಸ್ವಭಾವದಲ್ಲಿ ಸೇರಿಸಿ ಅಸುರ ಎಂದು ಇಲ್ಲಿ ಹೇಳಿದುದು. ಆದಕಾರಣ ಎರಡು ಎಂದು ಹೇಳಿದುದು ಯುಕ್ತವು. ॥ ೬ ॥

ಪೀ—ಈ ಶ್ಲೋಕದ ಮೊದಲುಗೊಂಡು ೧೮ ಶ್ಲೋಕದವರೆಗೆ ಅಸುರ ಸ್ವಭಾವವನ್ನೂ ಅವರಿಗೆ ಉಂಟಾಗುವ ಅನರ್ಥಗಳನ್ನೂ ಹೇಳುತ್ತಾರೆ—

**ಗೀ ॥ ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥ ೭ ॥**

ಅ ॥ ಅಸುರಾ ಜನಾಃ=ಅಸುರಸ್ವಭಾವದ ಜನರು, ಪ್ರವೃತ್ತಿಂ ಚ=ಶಾಸ್ತ್ರಗಳಲ್ಲಿ ಇಷ್ಟಸಾಧನಗಳೆಂದು ವಿಹಿತಗಳಾದ ಸತ್ಕರ್ಮಗಳಲ್ಲಿ ಪ್ರವೃತ್ತಿಯನ್ನೂ, ನಿವೃತ್ತಿಂ ಚ=ಶಾಸ್ತ್ರಗಳಲ್ಲಿ ನಿಷಿದ್ಧಗಳಾದ ಕರ್ಮಗಳ ಬಿಡುವಿಕೆಯನ್ನೂ, ನ ವಿದುಃ=ತಿಳಿಯಲಾರರು. ತೇಷು=ಆ ತಾಮಸರಲ್ಲಿ, ಶೌಚಂ=ವೈದಿಕಕರ್ಮಗಳನ್ನು ಮಾಡಲು ಯೋಗ್ಯಗಳಾದ, ಅಂತರಬಾಹ್ಯ ಶುದ್ಧಿಗಳು, ನ=ಇರುವುದಿಲ್ಲ. ಆಚಾರೋಽಪಿ=ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ಸದಾಚಾರವೂ ಕೂಡ, ನ=ಇರುವುದಿಲ್ಲ. ಸತ್ಯಂ ಚ=ಯಥಾರ್ಥವಾದ ಮಾತಿಯೂ ಕೂಡ, ನ ವಿದ್ಯತೇ=ಇರುವುದಿಲ್ಲ. ॥ ೭ ॥

ಪೀ—ಸಂಪದಂ ದೈವೀಂ ಅಭಿಜಾತಃ ಎಂಬುವಲ್ಲಿ ಅಭಿಜಾತಃ ಎಂಬುದಕ್ಕೆ ಉತ್ತಮಕುಲದಲ್ಲಿ ಹುಟ್ಟಿದವನು ಎಂದರ್ಥವು. ಅಭಿಜಾತಃ ಎಂಬುವಲ್ಲಿದ್ದ ಈ ಜನಿಧಾತುವು, ಅಕರ್ಮಕವಾಗಿರುವುದರಿಂದ ಸಂಪದಂ ಎಂದು ದ್ವಿತೀಯಾ ವಿಭಕ್ತಿಯು ಹೇಗೆಂದರೆ—ಅಭಿಲಕ್ಷ್ಯ=ಉದ್ದೇಶಿಸಿ, ಜಾತಃ=ಹುಟ್ಟಿದವನೆಂದು ಕೆಲವರು ಅರ್ಥವನ್ನು ಹೇಳುತ್ತಾರೆ. ಇದು ಅಯುಕ್ತವು. ಏಕೆಂದರೆ—ಅರ್ಜುನನು ಇಂದ್ರನ ಅವತಾರನಾಗಿರುವುದರಿಂದ ಮೊದಲೇ ದೇವತ್ವವು ನಿಶ್ಚಿತವಾಗಿರುವುದರಿಂದ ಮರಳಿ ದೇವತ್ವವನ್ನುದ್ದೇಶಿಸಿ ಹುಟ್ಟಿದ್ದಾನೆಂಬುವುದು ಕೂಡಲಾರದೆನ್ನುತ್ತಾರೆ--

**ಭಾ ॥ ದೈವೀಂ ಸಂಪದಮಭಿಜಾತಃ । ಪ್ರತಿಜಾತಃ ॥ ೫,೬,೭ ॥**

ಅ ॥ ದೇವತೆಗಳ ಸಂಬಂಧಿಯಾದ ಸಂಪತ್ತನ್ನು (ಸ್ವಭಾವವನ್ನು) ಹೊಂದಿದವನು (ಎಂದರ್ಥವು)

ವಿ ॥ (1) ಇಲ್ಲಿ ಅಭಿ ಎಂಬುದು ಉಪಸರ್ಗವಲ್ಲ. ಮತ್ತೆ ಪ್ರತಿ ಎಂಬುದರ ಅರ್ಥವುಳ್ಳ ಅಭಿ ಎಂಬುದಕ್ಕೆ ಕರ್ಮಪ್ರವಚನೀಯ ಎಂದು ಹೆಸರು. ಅದಕ್ಕೆ ದ್ವಿತೀಯಾವಿಭಕ್ತಿಯು ಬರುತ್ತದೆ ವೃಕ್ಷಮಭಿ ವೃಕ್ಷಂ ಪ್ರತಿವಿದ್ಯೋತತೇ, ಎಂಬಲ್ಲಿ ವೃಕ್ಷವು ಪ್ರಕಾಶಕ್ಕೆ ಲಕ್ಷಣವು, ಎಂದು ಹೇಗೆ ಅರ್ಥವೋ ಹಾಗೆಯೇ ಇಲ್ಲಿ ಹುಟ್ಟಿದ ನಿನಗೆ ಅಹಿಂಸಾದಿರೂಪವಾದ ದೇವತಾಸಂಬಂಧಿಯಾದ ಸಂಪತ್ತು ಮೊದಲೇ ಇದ್ದ ದೇವತ್ವವನ್ನು ಸ್ಪಷ್ಟೀಕರಿಸುತ್ತದೆ ಆದಕಾರಣ ದೇವತ್ವವನ್ನುದ್ದೇಶಿಸಿ ಎಂದರ್ಥವನ್ನು ಹೇಳಿದರೆ ಮೊದಲು ದೇವತ್ವವು ಅರ್ಜುನನಿಗೆ ಇಲ್ಲವೆಂದಾಗಬೇಕಾಗುವುದು. ಅದು ಸರ್ವಪ್ರಮಾಣ ವಿರುದ್ಧ ಆದುಕಾರಣ ಅರ್ಜುನನಿಗೆ ದೇವತ್ವವು ಮೊದಲೇ ಇದ್ದುದರಿಂದ ಪರರು ಹೇಳುವ ಅರ್ಥವು ಸರ್ವಥಾ ಯುಕ್ತವಲ್ಲ. ॥ ೫,೬,೭ ॥

**ಗೀ || ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ |**
**ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೈತುಕಂ || ೮ ||**

ಅ || ತೇ=ಅಸುರಸ್ವಭಾವವುಳ್ಳ ಜನರು, ಜಗತ್=ಜಗತ್ತನ್ನು, ಅಸತ್ಯಂ=ಸತ್ಯ ಎನಿಸಿಕೊಂಡ ಶ್ರೀವಿಷ್ಣುವು ಸಂಹರಿಸುವವನಲ್ಲವೆಂದೂ, ಅಪ್ರತಿಷ್ಠಂ=ಧಾರಣ ಪೋಷಣ ಮಾಡುವವನಲ್ಲವೆಂದೂ, ಅನೀಶ್ವರಂ=ನಿಯಮಿಸುವ ಸ್ವಾಮಿಯು ಇಲ್ಲವೆಂದೂ, ಆಹುಃ=ಹೇಳುತ್ತಾರೆ. (ಅಂದರೆ—ಅಸುರರು ಜಗತ್ತಿನ ಸೃಷ್ಟಿ ಸ್ಥಿತಿ ಸಂಹಾರ ಮೊದಲಾದವುಗಳನ್ನು ಶ್ರೀಪರಮಾತ್ಮನು ಮಾಡಿದವನೆಂದು ತಿಳಿಯುವುದಿಲ್ಲ.) ಅಥವಾ ಜಗತ್=ಜಗತ್ತು, ಅಸತ್ಯಂ=ಯಥಾರ್ಥವಲ್ಲ. ಮಿಥ್ಯೆಯು, ಅಪ್ರತಿಷ್ಠಂ=ಮುತ್ತಿನ ಚಿಪ್ಪಿನಂತೆ ಜ್ಞಾನ ಬಂದೊಡನೇ ಬಾಧ್ಯ (ನಷ್ಟ) ವಾಗುತ್ತದೆ. ಅನೀಶ್ವರಂ=ನಿಯಾಮಕನಿಲ್ಲದಿರುವುದು. ಅಪರಸ್ಪರಸಂಭೂತಂ=ಅನ್ನಾದ್ಭವಂತಿ ಭೂತಾನಿ ಎಂದು ಹೇಳಿದ ಪ್ರಕಾರ ಒಂದರಿಂದ ಒಂದು ಹುಟ್ಟಿದುದಲ್ಲ, ಕಿಂ=ಹಾಗಾದರೆ ಎಂತಹುದು ಎಂದರೆ—ಅನ್ಯತ್=ಸದಸದ್ವಿಲಕ್ಷಣವು, (ಅಂದರೆ—ಸತ್ಯವೆಂದೂ, ಸುಳ್ಳು ಎಂದೂ ಹುಟ್ಟಿದ್ದೆಂದೂ ಹುಟ್ಟದಿರುವುದೆಂದೂ, ಹೇಗೂ ಹೇಳಲಿಕ್ಕೆ ಬಾರದಿರುವುದು.) (ಇಂತಹ ಜಗತ್ತು ಯಾವುದರಿಂದ ಹುಟ್ಟುತ್ತದೆ ಎಂದರೆ) ಕಾಮಹೈತುಕಂ=ಕಾಮಕ್ಕೆ ಕಾರಣವಾದ ಅವಿದ್ಯೆಯ ಪರಿಣಾಮವು. (ಅಂದರೆ ಅವಿದ್ಯೆಯೇ ಕಾರಣವಾಗಿ ಉಳ್ಳದ್ದು. ಅವಿದ್ಯೆಯಿಂದ ಹುಟ್ಟತಕ್ಕದು. ಹೀಗೆ) ತೇ=ಅಸುರಸ್ವಭಾವವುಳ್ಳ ಜನರು, ಆಹುಃ=ಹೇಳುತ್ತಾರೆ. (ಇದರಿಂದ ಜಗತ್ತು ಅಸತ್ಯವು ಮಿಥ್ಯೆಯು ಎಂದು ಹೇಳುವವರೆಲ್ಲರೂ ಅಸುರರೆಂದು ಸಿದ್ಧವಾಯಿತು.) || ೮ ||

**ಗೀ || ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ |**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಹಿತಾಃ || ೯ ||**

ಅ || ಏತಾಂ ದೃಷ್ಟಿಂ=ಇಂತಹ ಮಿಥ್ಯಾಜ್ಞಾನವನ್ನು, ಅವಷ್ಟಭ್ಯ=ಆಶ್ರಯಿಸಿ, (ಹೊಂದಿ) ನಷ್ಟಾತ್ಮಾನಃ=ದುಷ್ಟವಾದ (ಮಲಿನವಾದ) ಮನಸ್ಸುಳ್ಳ, ಅಲ್ಪಬುದ್ಧಯಃ=ಈ ಶರೀರಗಳಲ್ಲಿ ಸ್ವೇಚ್ಛಾನುಸಾರವಾಗಿ ಬಹು ವಿಷಯಗಳನ್ನು ಭೋಗಿಸುವುದೇ ಪರಮ ಪುರುಷಾರ್ಥವು ಎಂದು ಅಲ್ಪಜ್ಞಾನವುಳ್ಳ, ಉಗ್ರಕರ್ಮಾಣಃ=ಹಿಂಸಾದಿರೂಪಗಳಾದ ಕ್ರೂರಕರ್ಮಗಳನ್ನೇ ಸರ್ವದಾ ಮಾಡುತ್ತಿರುವ, ಜಗತಃ=ಪ್ರಪಂಚಕ್ಕೆ, ಅಹಿತಾಃ=ಶತ್ರುಗಳಾದ ತಾಮಸರು, ಕ್ಷಯಾಯ=ಜಗತ್ತಿಗೆ ನಾಶ (ಅನಿಷ್ಟ) ವನ್ನು ಹೊಂದಿಸಿಕೊಡುವುದಕ್ಕಾಗಿ, ಪ್ರಭವಂತಿ=ಕಲಿಯುಗಾದಿಗಳಲ್ಲಿ ಹುಟ್ಟುತ್ತಿದ್ದಾರೆ. || ೯ ||

ಟೀ—ಅಸತ್ಯಮಪ್ರತಿಷ್ಠಂ ತೇ ಎಂಬುದರಿಂದ ಜಗತ್ತಿಗೆ ಮಿಥ್ಯಾತ್ವಾದಿಗಳನ್ನು ಹೇಳುವವರು ಮಾತ್ರ ಅಸುರರೆಂದು ಹೇಳುವುದಲ್ಲ. ಮತ್ತೆ ಯಾರು ಶ್ರೀವಿಷ್ಣುವು ಜಗಜ್ಜನ್ಮಾದಿಕಾರಣನೆಂದು ತಿಳಿಯುವುದಿಲ್ಲವೋ, ಅವರೆಲ್ಲರೂ ಅಸುರರೆಂದು ಹೇಳುತ್ತದೆಂದು ಹೇಳುತ್ತಾರೆ—

ಭಾ || (೧) ಜಗತಃ ಸತ್ಯಂ ಪ್ರತಿಷ್ಠಾ ಈಶ್ವರಶ್ಚ ವಿಷ್ಣುಸ್ತದ್ವ್ಯತಿರೇಕೇಣಾಹುಃ | ತಸ್ಯೋಪನಿಷತ್ಸತ್ಯಸ್ಯ ಸತ್ಯಮಿತಿ ಪ್ರಾಣಾ ವೈ ಸತ್ಯಂ ತೇಷಾಮೇಷ ಸತ್ಯಮಿತಿ ಚ ಶ್ರುತಿಃ ||
(೨) ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚಾಮೂರ್ತಂ ಚ ಸ್ಥಿತಂ ಚ ಸಚ್ಚ ಯಚ್ಚ ತ್ಯಚ್ಚೇತಿ || (೩) ತಸ್ಯೋಪನಿಷತ್ಸತ್ಯಸ್ಯ ಸತ್ಯಮಿತಿ | ಏಷ ಹ್ಯೇವೈತತ್ಸದ-

**ಯತಿ ಯಾಮಯತಿ ಚೇತತಿ ಪ್ರಾಚೀನಶಾಲಶ್ರುತಿಃ ॥ (೪) ಪರಸ್ಪರಸಂಭವತ್ವೋ ಹ್ಯುಕ್ತಿಃ ಅನ್ನಾದ್ಭವಂತೀತ್ಯಾದಿನಾ ॥ ೮,೯ ॥**

ಅ ॥ (೧) ಶ್ರೀವಿಷ್ಣುವು ಜಗತ್ತಿಗೆ ಸಂಹಾರಕನು, ಪ್ರೇರಕನು, ಜಗತ್ತನ್ನು ಧರಿಸುವವನು, ನಿಯಮಿಸುವವನು, ಅಂತಹುದನ್ನು ವಿಶರೀಶವಾಗಿ (ಅಂದರೆ ಆ ಜಗತ್ತಿಗೆ ಶ್ರೀವಿಷ್ಣುವು ಸಂಹಾರಕನಲ್ಲ, ಧಾರಕನಲ್ಲ, ನಿಯಾಮಕನಲ್ಲವೆಂದು ಅಸುರರು ಹೇಳುತ್ತಾರೆ. ಶ್ರೀವಿಷ್ಣುವಿಗೆ ಸತ್ಯಸ್ಯ ಸತ್ಯಂ ಸತ್ಯವಾದ ಜಗತ್ತಿಗೆ ಸತ್ಯತ್ವವನ್ನು ಕೊಡುವವನೆಂದು ರಹಸ್ಯವಾದ ನಾಮವು. ಹೇಗೆಂದರೆ - ಪ್ರಾಣಾಃ = ಮೂರ್ತ (ಕ್ರಿಯೆ ಉಳ್ಳದ್ದು) ಅಮೂರ್ತ (ಕ್ರಿಯೆಯಿಲ್ಲದ ಆಕಾಶಾದಿಗಳು) ಜಗತ್ತು, ಸತ್ಯವೆನಿಸುತ್ತದೆ. ಅಂತಹ ಜಗತ್ತಿಗೆ ಶ್ರೀವಿಷ್ಣುವು ಸತ್ಯತ್ವವನ್ನು ಕೊಡುವವನು, ಎಂದು ವೇದವು. (೨) (ಹೀಗಾದರೆ ಜಗತ್ತಿಗೆ ಮುಖ್ಯ ಸತ್ಯತ್ವ ಬರಲಾರದು. ಜಗತ್ತಿಗೆ ಮುಖ್ಯ ಸತ್ಯತ್ವವಿದ್ದರೆ - ಸತ್ಯಸ್ಯ ಸತ್ಯಂ ಎಂಬ ನಿರ್ಧಾರಣವು ಕೂಡಲಾರದು. ಇದರಿಂದ ಶ್ರೀಪರಮಾತ್ಮನಿಗೆ ಮುಖ್ಯ ಸತ್ಯತ್ವವು, ಜಗತ್ತಿಗೆ ಅಮುಖ್ಯ (ವ್ಯಾವಹಾರಿಕ) ಸತ್ಯತ್ವವು ಎಂದು ಸಿಗುತ್ತದೆ ಎಂದರೆ - ಮೂರ್ತಾಮೂರ್ತಾತ್ಮಕವಾದ ಜಗತ್ತಿಗೆ ಮುಖ್ಯ ಸತ್ಯತ್ವವಿದೆ, ಎಂದು ವೇದಪ್ರಮಾಣದಿಂದಲೇ ಹೇಳುತ್ತಾರೆ.) ಶ್ರೀಪರಮಾತ್ಮನಿಗೆ ಮೂರ್ತ ಅಮೂರ್ತ ಎಂದು ಎರಡು ಪ್ರತಿಮೆಗಳು. ಅವುಗಳಲ್ಲಿ ಮೂರ್ತವು (ಕ್ರಿಯೆಯುಳ್ಳದ್ದು) ಸ್ಥಿತಂ ಎಂದೂ ಸತ್ ಎಂದೂ ಹೇಳಲ್ಪಡುತ್ತದೆ. ಅಮೂರ್ತವು (ಕ್ರಿಯೆಯಿಲ್ಲದಿರುವುದು.) ಯತ್ ಎಂದೂ ತ್ಯತ್ ಎಂದೂ ಹೇಳಲ್ಪಡುತ್ತದೆ. (೩) (ಶ್ರೀವಿಷ್ಣುವು ಸತ್ಯವಾದ ಜಗತ್ತಿಗೆ ಸತ್ಯತ್ವವನ್ನು ಕೊಡುವವನೆಂಬುವುದನ್ನು ವೇದದಿಂದಲೇ ಹೇಳುತ್ತಾರೆ.) ಆ ಶ್ರೀಹರಿಗೆ ಸತ್ಯಸ್ಯ ಸತ್ಯಂ ಎಂದು ರಹಸ್ಯನಾಮವು. ಈ ಶ್ರೀವಿಷ್ಣುವೇ ಜಗತ್ತಿಗೆ ನಾಶಾದಿಗಳನ್ನು ಹೊಂದಿಸಿಕೊಡುವುದರಿಂದ ಸತ್ ಎಂದೂ ನಿಯಮಿಸುವುದರಿಂದ ಯತ್ ಎಂದೂ ಎವಂತ ಸಾದಯತಿ (ನಾಶಾದಿಗಳನ್ನು ಹೊಂದಿಸಿಕೊಡುತ್ತಾನೆ. ಯಾಮಯತಿ ಪ್ರೇರೇಪಿಸುತ್ತಾನೆ. ಎಂಬುವ ವ್ಯುತ್ಪತ್ತಿಯಿಂದ ಸಚ್ಚ ತತ್ ಯಚ್ಚ ಸತ್ಯಂ ಎನ್ನಿಸುತ್ತಾನೆಂದು ಪ್ರಾಚೀನ ಶಾಲ ಶ್ರುತಿಯು. ಪ್ರತಿಷ್ಠಾ, ಈಶ್ವರಃ ಎಂಬುವ ಶಬ್ದಗಳು (1) ಸನ್ಮೂಲಾಃ ಸೋಮ್ಯೇಮಾಃ ಸರ್ವಾಃ ಪ್ರಜಾಃ ಸದಾಯತನಾಃ ಸತ್ಪ್ರತಿಷ್ಠಾಃ (2) ಈಶಾನಃ ಸರ್ವವಿದ್ಯಾನಾಮೀಶ್ವರಃ ಸರ್ವಭೂತಾನಾಂ ಇದುಮೊದಲಾದ ವೇದಪ್ರಮಾಣಗಳಲ್ಲಿ ಶ್ರೀವಿಷ್ಣುವಿನಲ್ಲಿಯೇ ಪ್ರಸಿದ್ಧಗಳಾಗಿವೆ.) (೪) ಅಪರಸ್ಪರಸಂಭೂತಂ ಎಂಬುವುದಕ್ಕೆ ಅಪರಂ = ಮುಂದೆ ಉಂಟಾಗುವ ಕಾರ್ಯವು, ಪರಸ್ಮಾತ್ = ಪೂರ್ವಕಾಲದ ಕಾರಣದಿಂದ, ಸಂಭೂತಂ = ಹುಟ್ಟಿದ್ದೆಂದು ಪರರು ಅರ್ಥ ಹೇಳುವುದು ಯುಕ್ತವಲ್ಲ. ಅಸತ್ಯಮಪ್ರತಿಷ್ಠಂತೇ ಇತ್ಯಾದಿಗಳು ನಿಷೇಧ ಪ್ರಕರಣಗಳಾಗಿರುವುದರಿಂದ ಪರಸ್ಪರಸಂಭೂತಂ ನೈವ ಭವತಿ ಪರಸ್ಪರವಾಗಿ ಹುಟ್ಟಿದ್ದಲ್ಲ, ಎಂದು ಅರ್ಥವನ್ನು ಹೇಳುತ್ತಾರೆ) (ಪರಸ್ಪರವಾಗಿ ಹುಟ್ಟಿದ್ದೆಂಬುವ ಅರ್ಥವು ಶ್ರೀಕೃಷ್ಣನಿಗೆ ಇಷ್ಟವಾಗಿದ್ದರೆ ಪರರು ಹೇಳುವ ಅರ್ಥವು ಅಯುಕ್ತವಾಗಬಹುದಿತ್ತು. ಅದೇ ಹೇಗೆಂದರೆ) ಅನ್ನಾದ್ಭವತಿ ಭೂತಾನಿ ಸರ್ವರಿಗೆ ಉಪಜೀವ್ಯನೂ ಸರ್ವ ಸಂಹಾರಕನೂ ಆದ ಶ್ರೀಹರಿಯಿಂದ ಸಮಸ್ತಪ್ರಾಣಿಗಳೂ ಹುಟ್ಟುತ್ತಾರೆ, ಇದುಮೊದಲಾದ ಪ್ರಮಾಣಗಳಿಂದ ಪರಸ್ಪರವಾಗಿ ಉತ್ಪತ್ತಿಯು (ಒಂದರಿಂದ ಒಂದಕ್ಕೆ ಉತ್ಪತ್ತಿಯು) ಹೇಳಲ್ಪಟ್ಟಿದೆ. (ಹೀಗೆ ಶ್ರೀಹರಿಯಿಂದ ಜಗತ್ತಿಗೆ ಒಂದರಿಂದ ಇನ್ನೊಂದಕ್ಕೆ ಉತ್ಪತ್ತಿಯನ್ನು ಹೇಳಿದ ಕಾರಣ ಪರರು ಹೇಳುವ ಅರ್ಥವು ಸರ್ವಥಾ ಯುಕ್ತವಲ್ಲ.) ॥ ೮,೯ ॥

ಟೀ — ಅಸುರ ಸ್ವಭಾವದ ಕಾರ್ಯವನ್ನು ವಿವರಿಸುತ್ತಾರೆ —

ಗೀ॥ ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನಮದಾನ್ವಿತಾಃ ।
ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ಪ್ರವರ್ತಂತೇಽಶುಚಿವ್ರತಾಃ ॥ ೧೦ ॥

ಅ॥ (ಅಸುರರು) ದುಷ್ಪೂರಂ=ಏನೇನು ಲಭಿಸಿದರೂ ಮನೋರಥವನ್ನು ಪೂರೈಸಲಿಕ್ಕೆ ಶಕ್ಯವಿಲ್ಲದಿರುವ, ಕಾಮಂ=ನಾನಾ ವಿಧಗಳಾದ ದುರ್ವಿಷಯಗಳಲ್ಲಿ ಇಚ್ಛೆಯನ್ನು, ಆಶ್ರಿತ್ಯ=ಆಶ್ರಯಿಸಿಕೊಂಡು. ದಂಭಮಾನಮದಾನ್ವಿತಾಃ=ದಂಭ—ಪರರು ತನ್ನನ್ನು ಹೊಗಳಬೇಕೆಂಬುವ ಕಪಟಾಚಾರ, ಮಾನ—ದುರಭಿಮಾನದಿಂದೊಡಗೂಡಿದ ಅಹಂಕಾರ, ಮದ—ಗರ್ವ, ಇವುಗಳಿಂದ, ಅನ್ವಿತಾಃ=ಕೂಡಿದವರಾಗಿ, ಮೋಹಾತ್=ಮಿಥ್ಯಾಜ್ಞಾನ ಸ್ವಭಾವದಿಂದ (ಮೂಢತನದಿಂದ) ಅಸದ್ಗ್ರಾಹಾನ್=ದುಶ್ಶಾಸ್ತ್ರಗಳ ಅಭ್ಯಾಸದಿಂದುಂಟಾದ ವಿಪರೀತ ನಿಶ್ಚಯಗಳನ್ನು (ಭ್ರಾಂತಿಗಳನ್ನು) (ಮತ್ತು ಕ್ಷುದ್ರ ಫಲಗಳನ್ನು ಕೊಡುವ ದುರ್ದೈವಗಳನ್ನು ಪೂಜಿಸಿ ಯಥೇಷ್ಟ ದ್ರವ್ಯವನ್ನು ಸಂಪಾದಿಸುವೆವು, ಶತ್ರುಗಳನ್ನು ಸಂಹರಿಸುವೆವು, ಎಂಬೀ ದುರಾಗ್ರಹಗಳನ್ನು) ಗೃಹೀತ್ವಾ=ಮಾಡಿಕೊಂಡು, (ತಿಳಿದುಕೊಂಡು) ಅಶುಚಿವ್ರತಾಃ=ಹಿಂಸಾದಿಗಳನ್ನು ಮಾಡುತ್ತಾ ಮದ್ಯಪಾನ ಮಾಂಸಭಕ್ಷಣ ಮೊದಲಾದ ದುರಾಚಾರವುಳ್ಳವರಾಗಿ, ಪ್ರವರ್ತಂತೇ=(ಅಲ್ಪಭೋಗಗಳಿಗಾಗಿ) ಪ್ರವೃತ್ತಿ ಮಾಡುತ್ತಾರೆ. ॥ ೧೦ ॥

ಗೀ॥ ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮುಪಾಶ್ರಿತಾಃ ।
ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥ ೧೧ ॥
ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।
ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ॥ ೧೨ ॥

ಅ॥ (ಅಸುರರು) ಪ್ರಲಯಾಂತಾಂ=ಮರಣಪರ್ಯಂತವಾದ, ಮತ್ತು ಪುತ್ರ ಪೌತ್ರಾದಿಗಳೂ ಹೀಗೆಯೇ ದ್ರವ್ಯಾದಿಗಳನ್ನು ಸಂಪಾದಿಸುತ್ತ ಸುಖಿಗಳಾಗಿರಬೇಕೆಂದು ಆಲೋಚಿಸುತ್ತಾ ಮರಣಾನಂತರವೂ ಹೀಗೆಯೇ ಆಗಬೇಕೆಂದು ಆಲೋಚಿಸುತ್ತಿರುವ, ಅಪರಿಮೇಯಾಂ ಚ ಎಣಿಕೆಮಾಡಲಿಕ್ಕೆ ಸಹ ಶಕ್ಯವಲ್ಲದ ಅಶಕ್ಯವಾದ, ಚಿಂತಾಂ=ವ್ಯಥೆಯನ್ನು, ಉಪಾಶ್ರಿತಾಃ=ಚೆನ್ನಾಗಿ ಹೊಂದಿದವರಾಗಿ ಕಾಮೋಪಭೋಗಪರಮಾಃ=ಸ್ರಕ್ಚಂದನ ವನಿತಾದಿ ವಿಷಯಭೋಗಗಳಲ್ಲಿಯೇ ಮುಖ್ಯವಾಗಿ ಆಸಕ್ತರಾದವರಾಗಿ, (ವಿಷಯಗಳನ್ನು ಭೋಗಿಸುವುದೇ ಪರಮ ಪುರುಷಾರ್ಥ (ಮುಖ್ಯಫಲ)ವೆಂದು ತಿಳಿದುಕೊಂಡವರಾಗಿ,) ಏತಾವದಿತಿನಿಶ್ಚಿತಾಃ=ಐಹಿಕಸುಖವನ್ನು ಭೋಗಿಸುವುದೇ ಫಲವು ಬೇರೆ ಪಾರಲೌಕಿಕಫಲವು ಸರ್ವಥಾ ಇಲ್ಲವೆಂದು ನಿಶ್ಚಯ ಜ್ಞಾನವುಳ್ಳವರಾಗಿ, ಆಶಾಪಾಶಶತೈಃ=ನೂರಾರು ಆಶಾಪಾಶಗಳಿಂದ ಹಗ್ಗಗಳಿಂದ, ಬದ್ಧಾಃ ಕಟ್ಟಲ್ಪಟ್ಟವರಾಗಿ, (ಕೂಡಿದವರಾಗಿ) ಕಾಮಕ್ರೋಧಪರಾಯಣಾಃ ಕಾಮಕ್ರೋಧಗಳನ್ನೇ ಮುಖ್ಯವಾಗಿ ಆಶ್ರಯಿಸಿಕೊಂಡವರಾಗಿ, ಕಾಮಭೋಗಾರ್ಥಂ=ಸ್ವೇಚ್ಛಾನುಸಾರ ವಿಷಯಗಳನ್ನು ಭೋಗಿಸುವುದಕ್ಕಾಗಿ, ಅನ್ಯಾಯೇನ=ಕದಿಯುವುದು ಮೊದಲಾದ ಕೆಟ್ಟ ಕಾರ್ಯಗಳಿಂದ, ಅರ್ಥಸಂಚಯಾನ್ ದ್ರವ್ಯಗಳ ಸಮೂಹಗಳನ್ನು, ಈಹಂತೇ=ಸಂಪಾದಿಸಲಿಕ್ಕೆ ಬಯಸುತ್ತಾರೆ ॥ ೧೧-೧೨ ॥

ಟೀ— ಅಸುರರು ಚಿಂತಿಸುವ ಪ್ರಕಾರವನ್ನು ಮೂರು ಶ್ಲೋಕಗಳಿಂದ ಹೇಳುತ್ತಾರೆ

ಗೀ॥ ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಂ ।
ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಂ ॥ ೧೩ ॥

ಅ ॥ ಇದಂ= ಈ ಧನವು, ಅದ್ಯ= ಇಂದು, ಮಯಾ= ನನ್ನಿಂದ, ಲಬ್ಧಂ= ಹೊಂದಲ್ಪಟ್ಟಿದೆ. ಇಮಂ ಮನೋರಥಂ= ಇಂತಹ ಇಷ್ಟಾರ್ಥವನ್ನು (ಇಂತಹ ಕರ್ಮಗಳಿಂದ) ಪ್ರಾಪ್ಸ್ಯೇ= ಹೊಂದುವೆನು. ಇದಂ ಧನಂ= ಈ ಧನವು. ಮೇ= ನನಗೆ, ಅಸ್ತಿ= ಇರುತ್ತದೆ. ಇದಂ ಧನಮಪಿ= ಈ ಧನವೂ ಕೂಡ, ಮೇ= ನನಗೆ, ಪುನರ್ಭವಿಷ್ಯತಿ=ತಿರುಗಿ ಬರುವುದು, (ಇದಲ್ಲದೆ ಇನ್ನೂ ವಿಶೇಷವಾಗಿ ಲೋಕದಲ್ಲಿ ಖ್ಯಾತ್ಯಾದಿಗಳನ್ನು ಹೊಂದುವೆನು.) ॥ ೧೩ ॥

**ಗೀ ॥ ಅಸೌ ಮಯಾ ಹತಃ ಶತ್ರುರ್ಹನಿಷ್ಯೇ ಚಾಪರಾನಪಿ ।**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ಸುಖೀ ॥ ೧೪ ॥**

ಅ ॥ ಅಸೌ ಶತ್ರುಃ= ಈ ಬಲಿಷ್ಠನಾದ ಶತ್ರುವು, ಮಯಾ= ನನ್ನಿಂದ, ಹತಃ= ಸಂಹರಿಸಿಕೊಳ್ಳಲ್ಪಟ್ಟನು. ಅಹಂ= ನಾನು, ಅಪರಾನಪಿ=ಇನ್ನುಳಿದ ಶತ್ರುಗಳನ್ನು ಕೂಡ. ಹನಿಷ್ಯೇ ಹ=ಕೊಲ್ಲುವೆನು. ಅಹಂ= ನಾನು, ಈಶ್ವರಃ=(ಎಲ್ಲಾ ಶತ್ರುಗಳನ್ನು ನಾಶಗೊಳಿಸಿದ ಮೇಲೆ ಸರ್ವರಿಗೂ) ನಿಯಾಮಕನಾಗುವೆ. ಸರ್ವರಿಗೂ ಪ್ರಭುವು. ಅಹಂ ಭೋಗೀ= ನಾನೇ ಐಹಿಕ ಪಾರತ್ರಿಕ ಎಲ್ಲಾ ಭೋಗಗಳನ್ನು ಭೋಗಿಸುವವನು. ಅಹಂ= ನಾನು, ಸಿದ್ಧಃ= ಕೃತಕೃತ್ಯನು. ಬಲವಾನ್= ಹೆಚ್ಚು ಬಲವುಳ್ಳವನು. ಸುಖೀ= ಸರ್ವ ಸುಖವುಳ್ಳವನು. (ಆಗುವೆನು.) ॥ ೧೪ ॥

**ಗೀ ॥ ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನವಿಮೋಹಿತಾಃ ॥ ೧೫ ॥**

ಅ ॥ (ನಾನು) ಆಢ್ಯಃ= ಧನಾದಿಸಂಪನ್ನನು, ಅಭಿಜನವಾನ್= ಸತ್ಕುಲದಲ್ಲಿ ಹುಟ್ಟಿದವನು. ಅಸ್ಮಿ= ಆಗಿರುತ್ತೇನೆ, ಮಯಾ= ನನ್ನಿಂದ, ಸದೃಶಃ= ಸಮಾನನು, ಅನ್ಯಃ= ಬೇರೆಯೊಬ್ಬನು, ಕಃ= ಯಾವನು, ಅಸ್ತಿ= ಇರುತ್ತಾನೆ—(ಯಾವನೂ ಇರುವುದಿಲ್ಲ.) ಯಕ್ಷ್ಯೇ=(ಭಗವದನುಗ್ರಹಾದಿಗಳನ್ನು ಅಪೇಕ್ಷಿಸದೆ ನಾನೇ ಸ್ವತಂತ್ರವಾಗಿ) ಮುಂದೆ ಯಾಗಾದಿಗಳನ್ನು ಮಾಡುವೆನು. ದಾಸ್ಯಾಮಿ= ಬಹು ದಕ್ಷಿಣೆಗಳನ್ನು ಕೊಡುವೆನು. ಅನ್ನದಾನ ಮೊದಲಾಗ ಅನೇಕ ದಾನಗಳನ್ನು ಮಾಡುವೆನು. ಮೋದಿಷ್ಯೇ=(ಯಾಗಾದಿಗಳನ್ನು ಮಾಡಿ ಮಿಕ್ಕುಳಿದವರಿಗಿಂತ ನಾನು ಹೆಚ್ಚು ಪ್ರತಿಷ್ಠೆಯನ್ನು ಹೊಂದಿ) ಸಂತೋಷಗೊಳ್ಳುವೆನು. ಇತಿ= ಹೀಗೆ, ಅಜ್ಞಾನವಿಮೋಹಿತಾಃ= ಮಿಥ್ಯಾಜ್ಞಾನದಿಂದ ಮೋಹಿತರಾಗಿರುತ್ತಾರೆ. ॥ ೧೫ ॥

ಹೀ— ಕಾಮುಕರು ಚಿಂತಿಸುವ ಪ್ರಕಾರವನ್ನು ಹೇಳಿ ಅವರಿಗೆ ಆಗತಕ್ಕ ಫಲವನ್ನು ಹೇಳುತ್ತಾನೆ—

**ಗೀ ॥ ಅನೇಕಚಿತ್ತವಿಭ್ರಾಂತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತಂತಿ ನರಕೇಽಶುಚೌ ॥ ೧೬ ॥**

ಅ ॥ ಅನೇಕಚಿತ್ತವಿಭ್ರಾಂತಾಃ= ಸೌಂದರ್ಯವುಳ್ಳ ಸ್ತ್ರೀಯರು ಮೊದಲಾದ ಅನೇಕ ವಿಷಯಗಳಲ್ಲಿ ಚಿಂತಾಯುಕ್ತವಾದ ಮನಸ್ಸಿನಿಂದ ವಿಶೇಷವಾಗಿ ಭ್ರಮೆಗೊಂಡ ಕಾಮುಕರು, ಮೋಹಜಾಲಸಮಾವೃತಾಃ=(ನಾನೇ ಸಮಸ್ತ ಕಾರ್ಯಗಳನ್ನು ಮಾಡಲು ಶಕ್ತನೆಂಬ ಮನಸ್ಸಿನಿಂದ ಭಾರ್ಯಾ ಪುತ್ರ ಮಿತ್ರ ಕಳತ್ರಾದಿ ವಿಷಯಗಳಲ್ಲಿ) ಮೋಹವೆಂಬುವ ಬಲೆಯಿಂದ ಸುತ್ತು ಹಾಕಲ್ಪಟ್ಟವರಾಗಿ, ...

...ಗೇಷು = ವಿಷಯಭೋಗಗಳಲ್ಲಿ, ಪ್ರಸಕ್ತಾಃ = ಅತ್ಯಾಸಕ್ತರಾದವರಾಗಿ, ಅಶುಚೌ ನರಕೇ = ವೈತರಣೀ ...ವಾದ ಅನೇಕವಿಧ ನರಕಗಳಲ್ಲಿ, ಪತಂತಿ = ಬೀಳುತ್ತಾರೆ. ॥ ೧೬ ॥

ಪೀ—ಯಾಗದಾನಾದಿಗಳನ್ನು ಮಾಡುವವರಿಗೆ ನರಕಪ್ರಾಪ್ತಿಯಾಗುವುದು ಹೇಗೆಂದರೆ—

**ಗೀ ॥ ಆತ್ಮಸಂಭಾವಿತಾಃ ಸ್ತಬ್ಧಾ ಧನಮಾನಮದಾನ್ವಿತಾಃ ।**
**ಯಜಂತೇ ನಾಮ ಯಜ್ಞೈಸ್ತೇ ದಂಭೇನಾವಿಧಿಪೂರ್ವಕಂ ॥ ೧೭ ॥**

ಅ ॥ ಆತ್ಮಸಂಭಾವಿತಾಃ = ತಮ್ಮಿಂದಲೇ ತಾವು ಪೂಜಿಸಿಕೊಳ್ಳಲ್ಪಟ್ಟಿರುವ (ಅಂದರೆ—ತಾವೇ ಯಾಗಾದಿಗಳನ್ನು ಮಾಡುವವರೆಂದು ತಮ್ಮನ್ನು ತಾವೇ ಪೂಜ್ಯರೆಂದು ತಿಳಿದಿರುವ) ಸ್ತಬ್ಧಾಃ = (ಧನಾದಿ ...ಯುಕ್ತ ದುರಹಂಕಾರದಿಂದ) ವಿನಯವಿಲ್ಲದಿರುವ, ಧನಮಾನಮದಾನ್ವಿತಾಃ = ಸಂಪತ್ತಿನ ನಿಮಿತ್ತ ...ಗಿ ಗರ್ವ ದರ್ಪ ಇವುಗಳಿಂದ ಕೂಡಿರುವ, ತೇ = ಆ ತಾಮಸರು, ದಂಭೇನ = ಕಪಟದಿಂದ ತಮ್ಮ ...ಹಿಮೆಯನ್ನು ತೋರಿಸುತ್ತಾ ತಮಗೆ ಪೂಜ್ಯತ್ವವು ಬರುವುದಕ್ಕಾಗಿ, ಯಜ್ಞೈಃ = ಜ್ಯೋತಿಷ್ಟೋಮ ಮೊದಲಾದ ಯಾಗಗಳಿಂದ, ಅವಿಧಿಪೂರ್ವಕಂ = ಶಾಸ್ತ್ರಗಳಲ್ಲಿ ಹೇಳಿದ ವಿಧಿಗಳನ್ನೆಲ್ಲಾ ಬಿಟ್ಟು, ಶಾಸ್ತ್ರ ...ರುದ್ಧವಾಗಿ, ಯಜಂತೇ ನಾಮ = ಪೂಜಿಸುತ್ತಾರೆ. (ಕೃತಾರ್ಥರಾಗಬೇಕೆಂಬುವ ಬುದ್ಧಿಯಿಂದ ಪೂಜಿ ...ವುದಲ್ಲ. ಮತ್ತು ಅಹಂಕಾರಾದಿಗಳಿಂದ ಕೂಡಿರುವುದರಿಂದಲೇ ಸರ್ವಪ್ರೇರಕನಾದ ಶ್ರೀಪರಮಾತ್ಮನ ...ಪ್ರೀತಿಗಾಗಿ ಯಾಗ ಮಾಡುವುದಲ್ಲ. ಆದಕಾರಣ ತಾಮಸರಿಗೆ ನರಕಪ್ರಾಪ್ತಿಯಾಗುತ್ತದೆ. ॥ ೧೭ ॥

ಪೀ—ಕಾಮವು ಸರ್ವಪ್ರವೃತ್ತಿಗೂ ಕಾರಣವು ಎಂಬುವಲ್ಲಿ (ಶ್ಲೋ. ೧೦) ದುಷ್ಪೂರ ಎಂಬುದು ...ಳುವೆನ್ನುತ್ತಾರೆ—

**ಭಾ ॥ ದುಷ್ಪೂರೋ ಹಿ ಕಾಮಃ । ಪಾತಾಲ ಇವ ದುಷ್ಪೂರೋ ಮಾಂ ಹಿ ಕ್ಲೇಶಯಸೇ ಸದೇತಿ ಹಿ ಮೋಕ್ಷಧರ್ಮೇ ॥ ೧೦—೧೭ ॥**

ಅ ॥ ಇಚ್ಛೆಯನ್ನು ಪೂರ್ತಿಗೊಳಿಸಲು ಅಸಾಧ್ಯವು. (ಈ ವಿಷಯದಲ್ಲಿ ಪ್ರಮಾಣವನ್ನು ಹೇಳು ...ತ್ತಾರೆ—) ಪಾತಾಲ ಲೋಕವನ್ನು ತುಂಬಿಸಲು ಹೇಗೆ ಸಾಧ್ಯವಿಲ್ಲವೋ, ಹಾಗೆಯೇ ಕಾಮವು (ಇಚ್ಛೆಯು) ...ತುಂಬಿಸಲಸಾಧ್ಯವು. ಹೀಗೆ ತುಂಬಿಸಲಸಾಧ್ಯವಾದ ಕಾಮವು ಯಾವಾಗಲೂ ನನ್ನನ್ನು ಕ್ಲೇಶಪಡಿಸು ...ತ್ತದೆಂದು ಮೋಕ್ಷಧರ್ಮದಲ್ಲಿ ಹೇಳಿದೆ. ॥ ೧೦, ೧೧, ೧೨, ೧೩, ೧೪, ೧೫, ೧೬, ೧೭ ॥

ಪೀ—ಸಮಸ್ತ ಕರ್ಮಗಳನ್ನು ಮಾಡಿಸುವವನೂ, ಸರ್ವಾಂತರ್ಯಾಮಿಯೂ, ಸರ್ವಪ್ರೇರಕನೂ ...ದ ನಿನ್ನ (ಶ್ರೀಕೃಷ್ಣನ) ಪ್ರೀತಿಗಾಗಿ ಅವರು ಏಕೆ ಯಾಗ ಮಾಡುವುದಿಲ್ಲ ಎಂದರೆ—

**ಗೀ ॥ ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ॥ ೧೮ ॥**

ಅ ॥ ಅಹಂಕಾರಂ = ಇನ್ನೊಬ್ಬರ ಅಪೇಕ್ಷೆಯೇ ಇಲ್ಲದೆ ನಾನೇ ಸ್ವತಂತ್ರನಾಗಿ [illegible] ...ಮಾಡಲು ಶಕ್ತನಾಗಿದ್ದೇನೆಂಬುವ ಅಹಂಕಾರವನ್ನು (ಹೆಮ್ಮೆಯನ್ನು) [illegible] ...ಯುಕ್ತ ಕಾರ್ಯಗಳನ್ನು ಮಾಡಲಿಕ್ಕೆ ನನ್ನ ದೇಹ [illegible]

ಸದೃಶರಿಲ್ಲವೆಂಬೀ ಗರ್ವವನ್ನೂ, ಕಾಮಂ=ಕಾಮವನ್ನೂ, ಕ್ರೋಧಂ ಚ=ಸಿಟ್ಟನ್ನೂ ಕೂಡ, ಸಂಶ್ರಿತಾಃ ಆಶ್ರಯಿಸಿದವರಾಗಿ, ಆತ್ಮಪರದೇಹೇಷು=ತನ್ನ ಶರೀರದಲ್ಲಿಯೂ, ಇತರರ ಶರೀರಗಳಲ್ಲಿಯೂ ಸರ್ವತ್ರ ನಿಯಾಮಕನಾಗಿ ಇರತಕ್ಕ, ಮಾಂ=ನನ್ನನ್ನು, (ಶ್ರೀಕೃಷ್ಣನನ್ನು) ಪ್ರದ್ವಿಷಂತಃ=ದ್ವೇಷಿಸುತ್ತಾ, (ಅಂದರೆ– ಶ್ರೀಹರಿಯೇ ಸಮಸ್ತ ಕಾರ್ಯಗಳನ್ನು ಮಾಡಿಸುವುದಾದರೆ–ಕಾರ್ಯ ಮಾಡದಿರುವ ನನ್ನಿಂದ ಈಗ ಕಾರ್ಯ ವನ್ನು ಮಾಡಿಸಲಿ, ಅಲ್ಲದೆ ಕಾರ್ಯಗಳನ್ನು ಮಾಡುತ್ತಿರುವ ನನ್ನನ್ನು ಕಾರ್ಯ ಮಾಡದಿದ್ದಂತೆ ಮಾಡಲಿ. ಹೀಗೆ ಮಾಡಿಸತಕ್ಕವನು ಇಲ್ಲದಿರುವುದರಿಂದ ಭಗವಂತನೇ ಇಲ್ಲ, ಎಂದು ಶ್ರೀಪರಮಾತ್ಮನನ್ನೇ ಇಲ್ಲ ಗಳೆಯುವವರಾಗಿ) ಅಭ್ಯಸೂಯಕಾಃ=ಅಸೂಯೆ ಪಡತಕ್ಕವರಾಗಿ, (ಅಂದರೆ– ದೋಷಲೇಶ ರಹಿತ ನಾದ ನನ್ನಲ್ಲಿ ದೋಷಗಳಿವೆಯೆಂದೂ, ಸರ್ವಗುಣಪೂರ್ಣನಾದ ನನ್ನಲ್ಲಿ ಗುಣಗಳಿಲ್ಲವೆಂದೂ ಹೇಳುವವ ರಾಗಿ) (ಯಾಗಾದಿಗಳನ್ನೇ ಮಾಡುತ್ತಾರೆ.) ॥ ೧೮ ॥

ಪೀ— ಇಂತಹ ಅಜ್ಞಾನಿಗಳಾದ ಅಸುರರಿಗೆ ಹಿಂದೆ ಹೇಳಿದ ಪ್ರಕಾರ ಅನಿತ್ಯವಾದ ನರಕಪ್ರಾಪ್ತಿ ಮಾತ್ರ ಫಲವೆಂದಲ್ಲ. ಮತ್ತೆ ಕೆಲಕಾಲ ಜನನ ಮರಣಾದಿರೂಪವಾದ ಸಂಸಾರ ದುಃಖವನ್ನನುಭವಿಸು ವಂತೆ ಅವರನ್ನು ಸಂಸಾರದಲ್ಲಿ ಹಾಕಿ ಆ ಮೇಲೆ ಅವರನ್ನು ನಿತ್ಯ ನರಕದಲ್ಲೂ ನಾನೇ (ಶ್ರೀಕೃಷ್ಣನೇ) ಹಾಕುವೆನೆಂದು ಎರಡು ಶ್ಲೋಕಗಳಿಂದ ಹೇಳುತ್ತಾರೆ.

ಗೀ ॥ ತಾನಹಂ ದ್ವಿಷತಃ ಕ್ರೂರಾನ್ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ ಯೋನಿಷು ॥ ೧೯ ॥

ಅ ॥ ಅಹಂ=ನಾನು, ದ್ವಿಷತಃ=ನನ್ನನ್ನು ದ್ವೇಷಿಸುತ್ತಿರುವ, ಕ್ರೂರಾನ್=ಕ್ರೂರರಾದ, ಅಶುಭಾನ್=ಅಮಂಗಲ ಸ್ವರೂಪರಾದ, ನರಾಧಮಾನ್=ಮನುಷ್ಯರಲ್ಲಿ ಅಧಮರಾದ, ತಾನ್=ಆ ತಾಮ ಸರನ್ನು, ಸಂಸಾರೇಷು=ದುಃಖಮಯಗಳಾದ ಸಂಸಾರಗಳಲ್ಲಿ (ಅದರಲ್ಲಿಯೂ) (ಆಸುರೀಷು ಯೋನಿಷು= ಅಸುರ ಜಾತಿಗಳಲ್ಲಿಯೇ (ದುಷ್ಕರ್ಮಗಳನ್ನೇ ಮಾಡುವ ಯೋನಿಗಳಲ್ಲಿಯೇ) ಅಜಸ್ರಂ=ನಿರಂತರ ದಲ್ಲಿಯೂ, ಮರಳಿಮರಳಿ, ಕ್ಷಿಪಾಮಿ=ಹಾಕುತ್ತೇನೆ. ॥ ೧೯ ॥

ಗೀ ॥ ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿಜನ್ಮನಿ ।
ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಂ ॥ ೨೦ ॥

ಅ ॥ ತತೋ ಮೂಢಾಃ=ತಾಮಸ ಸ್ವಭಾವವುಳ್ಳ, ದುಷ್ಕರ್ಮಯುಕ್ತರಾದ ಅಸುರರು, ಜನ್ಮನಿ ಜನ್ಮನಿ=ಪ್ರತಿಜನ್ಮಗಳಲ್ಲಿಯೂ, ಆಸುರೀಂ ಯೋನಿಂ=ಅಸುರಸಂಬಂಧಿಯಾದ ಯೋನಿಯನ್ನು ಆಪನ್ನಾಃ ಹೊಂದಿದವರಾಗಿ, ನನ್ನ ಜ್ಞಾನಾದಿಗಳಿಂದ ವಿರಹಿತರಾಗಿ, ಮಾಂ=ನನ್ನನ್ನು (ಮೋಕ್ಷವನ್ನು) ಅಪ್ರಾಪ್ಯೈ ವ=ಹೊಂದದೇನೇ. ಅಧಮಾಂ ಗತಿಂ=ಕೇವಲ ದುಃಖಮಯವಾದ ನಿತ್ಯನರಕರೂಪವಾದ ಸ್ಥಾನವನ್ನು (ಅಂಧಂತಮಸ್ಸನ್ನು) ಯಾಂತಿ=ಹೊಂದುತ್ತಾರೆ. ॥ ೨೦ ॥

ಪೀ— ಹಿಂದೆ ಹೇಳಿದ ಪುರುಷಾರ್ಥಕ್ಕೆ ವಿರೋಧಿಗಳಾದ ಡಂಭ ಮೊದಲಾದ ದೋಷಗಳಲ್ಲಿ ಪ್ರಧಾನ ಗಳಾದ ಕಾಮ ಕ್ರೋಧ ಲೋಭ ಇವುಗಳನ್ನು ಸರ್ವಥಾ ಬಿಡಲೇಬೇಕೆನ್ನುತ್ತಾರೆ—

ಗೀ ॥ ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।
ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥ ೨೧ ॥

ಅ ॥ ಕಾಮಃ = ದುರ್ವಿಷಯ ಭೋಗೇಚ್ಛೆಯು, ಕ್ರೋಧಃ = ಸಿಟ್ಟು, ತಥಾ = ಹಾಗೆಯೇ, ಲೋಭಃ = ದುರಾಶೆಯು. ಇದಂ ತ್ರಿವಿಧಂ = ಈ ಮೂರು ದುರ್ಗುಣಗಳು, ನರಕಸ್ಯ = ನರಕಕ್ಕೆ, ದ್ವಾರಂ = ಮುಖ್ಯ ಸಾಧನವು. (ಕಾರಣವು) (ಆ ಮೂರು) ಆತ್ಮನಃ = ಜೀವನಿಗೆ, ನಾಶನಂ = ಅನರ್ಥವನ್ನು ಹೊಂದಿಸಿಕೊಡತಕ್ಕುದು. ತಸ್ಮಾತ್ = ಆದಕಾರಣ. ಏತತ್ತ್ರಯಂ = ಈ ಮೂರು ದುರ್ಗುಣಗಳನ್ನು, ತ್ಯಜೇತ್ = ಬಿಡಬೇಕು. ॥ ೨೧ ॥

ಟೀ — ಈ ದುರ್ಗುಣಗಳನ್ನು ಬಿಟ್ಟರೆ — ನರಕಾದ್ಯನರ್ಥಪ್ರಾಪ್ತಿಯಾಗದೆ ಪುರುಷಾರ್ಥ ಪ್ರಾಪ್ತಿಯಾಗುತ್ತದೆನ್ನುತ್ತಾರೆ —

ಗೀ ॥ ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।
ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಂ ॥ ೨೨ ॥

ಅ ॥ ಕೌಂತೇಯ = ಅರ್ಜುನನೇ, ತಮೋದ್ವಾರೈಃ = ತಮಸ್ಸಿಗೆ ಕಾರಣಗಳಾದ, ತ್ರಿಭಿಃ ಏತೈಃ = ಕಾಮ ಕ್ರೋಧ ಲೋಭಗಳೆಂಬ ಈ ಮೂರು ದುರ್ಗುಣಗಳಿಂದ, ವಿಮುಕ್ತಃ = ಬಿಡಲ್ಪಟ್ಟ (ಆ ಮೂರು ದುರ್ಗುಣಗಳಿಲ್ಲದ) ನರಃ = ಮನುಷ್ಯನು, ಆತ್ಮನಃ = ತನ್ನ, ಶ್ರೇಯಃ = ಪುರುಷಾರ್ಥಕ್ಕೆ ಸಾಧನವಾದ ಸತ್ಕರ್ಮವನ್ನು, ಆಚರತಿ = ಮಾಡುತ್ತಾನೆ. ತತಃ = ಶ್ರೇಯಸ್ಸಾಧನವನ್ನು ಮಾಡಿದ್ದರಿಂದ, ಪರಾಂ ಗತಿಂ = ಉತ್ತಮಸ್ಥಾನವನ್ನು (ಮೋಕ್ಷವನ್ನು) ಯಾತಿ = ಹೊಂದುತ್ತಾನೆ. ॥ ೨೨ ॥

ಟೀ — ಶ್ರೇಯಸ್ಸಾಧನವನ್ನು ಮಾಡಲಿಕ್ಕೆ ಕಾಮಾದಿಗಳನ್ನು ಬಿಟ್ಟರೆ ಮಾತ್ರ ಸಾಲದು. ಬೇರೆ ಸಾಧನವೂ ಆವಶ್ಯಕವೆನ್ನುತ್ತಾ ಅದನ್ನು ಮಾಡದಿದ್ದರೆ ಬಾಧಕವನ್ನು ಹೇಳುತ್ತಾರೆ

ಗೀ ॥ ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಮಾಂ ಗತಿಂ ॥ ೨೩ ॥

ಅ ॥ ಯಃ = ಯಾವನು, ಶಾಸ್ತ್ರವಿಧಿಂ = ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ವಿಧಾನವನ್ನು ಉತ್ಸೃಜ್ಯ = ಬಿಟ್ಟು, ಕಾಮಕಾರತಃ = ಸ್ವೇಚ್ಛಾನುಸಾರವಾಗಿಯೇ, ವರ್ತತೇ = ಇರುತ್ತಾನೋ, ಸಃ = ಅವನು, ಸಿದ್ಧಿಂ = ಪುರುಷಾರ್ಥೋಪಾಯವನ್ನು, ನಾವಾಪ್ನೋತಿ = ಹೊಂದುವುದೇ ಇಲ್ಲ ಸುಖಂ = ಐಹಿಕ ಸುಖವನ್ನು, ನಾವಾಪ್ನೋತಿ = ಹೊಂದುವುದೇ ಇಲ್ಲ ಪರಾಂ ಗತಿಂ = ಮೋಕ್ಷವನ್ನು ನಾವಾಪ್ನೋತಿ = ಹೊಂದುವುದೇ ಇಲ್ಲ. ॥ ೨೩ ॥

ಟೀ — ಶಾಸ್ತ್ರಗಳಲ್ಲಿ ಹೇಳಿದ ವಿಧಾನಗಳನ್ನು ಬಿಟ್ಟರೆ — ಸುಖ ಮೋಕ್ಷಾದಿಗಳು ಏಕೆ ಆಗುವುದಿಲ್ಲ ಎಂದರೆ — ಆ ಶಂಕೆಯನ್ನು ಪರಿಹರಿಸುತ್ತಾ ಅಂತರಂಗ ಕಾರಣಾಂತರಗಳನ್ನು ಹೇಳುತ್ತಾರೆ

ಗೀ ॥ ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥ ೨೪ ॥

ಅ ॥ (ಎಲೋ ಅರ್ಜುನನೇ) ಕಾರ್ಯಾಕಾರ್ಯವ್ಯವಸ್ಥಿತೌ [illegible] ವನ್ನು ಅವಶ್ಯವಾಗಿ ಮಾಡಬೇಕು. ಅಧರ್ಮಸಾಧನವಾದ [illegible] ಎಂಬುವ ವ್ಯವಸ್ಥೆಯಲ್ಲಿ. ತೇ = ವಿವೇಕಯುತನಾದ ನಿನಗೆ, ಶಾಸ್ತ್ರಂ = ವೇದವು [illegible]

ಪ್ರಮಾಣಂ = ಪ್ರಮಾಣವು, (ಶಾಸ್ತ್ರಗಳಲ್ಲಿ ಹೇಳಿದ ಕರ್ಮಗಳನ್ನು ಬಿಟ್ಟರೆ—ಅನರ್ಥವುಂಟಾಗುವುದು.) ತಸ್ಮಾತ್ = ಆದಕಾರಣ ಇಹ = ಈ ಲೋಕದಲ್ಲಿ, ಶಾಸ್ತ್ರವಿಧಾನೋಕ್ತಂ = ಸದಾಚಾರಗಳನ್ನು ವಿಧಿಸುವ ಶಾಸ್ತ್ರಗಳಲ್ಲಿ ಹೇಳಲ್ಪಟ್ಟ, ಕರ್ಮ = ವರ್ಣಾಶ್ರಮಗಳಿಗೆ ಯೋಗ್ಯವಾದ ಸತ್ಕರ್ಮವನ್ನು, ಜ್ಞಾತ್ವಾ = ತಿಳಿದುಕೊಂಡು, ಕರ್ತುಂ = ಮಾಡುವುದಕ್ಕೆ, ಅರ್ಹಸಿ = ಯೋಗ್ಯನಾಗಿರುತ್ತಿ. ॥ ೨೪ ॥

## ಗೀ ॥ ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ದೈವಾಸುರಸಂಪದ್ವಿಭಾಗಯೋಗೋನಾಮ ಷೋಡಶೋಽಧ್ಯಾಯಃ ॥ ೧೬ ॥

ಅ ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ದೈವಾಸುರಸಂಪದ್ವಿಭಾಗಯೋಗವೆಂಬ ಹದಿನಾರನೇ ಅಧ್ಯಾಯವು ಮುಗಿಯಿತು. ॥ ೧೬ ॥

ಪೀ—ಭಗವದ್ದ್ವೇಷವು ತನ್ನ ದೇಹ ಪರದೇಹಗಳಿಗೆ ಅಧಿಕರಣವು ಹೇಗೆಂದರೆ—

**ಭಾ ॥ (೧) ಮಾಮಾತ್ಮಪರದೇಹೇಷ್ವಿತಿ ನ ಕಸ್ಯಚಿದ್ವಿಷ್ಣುಃ ಕಾರಯಿತಾ ಯದಿ ಸ್ಯಾನ್ಮಾಮಪೀದಾನೀಂ ಕಾರಯತ್ವಿತ್ಯಾದಿ ॥ (೨) ಈಶ್ವರೋ ಯದಿ ಸರ್ವಸ್ಯ ಕಾರಕಃ ಕಾರಯಾತ ಮಾಂ । ಅದ್ಯೇತಿ ವಾದಿನಂ ಬ್ರೂಯಾತ್ಸದಾಽಧೋ ಯಾಸ್ಯಸೀತಿ ಹೇತಿ ಸಾಮವೇದೇ ಯಾಸ್ಕಶ್ರುತಿಃ ॥ ೧೮—೨೪ ॥**

ಅ ॥ (೧) (೧೮ನೇ ಶ್ಲೋಕದ) ಮಾಮಾತ್ಮಪರದೇಹೇಷು ಎಂಬುವುದಕ್ಕೆ ಶ್ರೀವಿಷ್ಣುವು ಯಾವುದನ್ನು ಮಾಡಿಸುವವನಲ್ಲ ಸರ್ವವನ್ನು ಅವನು ಮಾಡಿಸುವವನೆಂದಾದರೆ—ಈಗ ಕಾರ್ಯ ಮಾಡ ದಿರುವ ನನ್ನಿಂದ ಕಾರ್ಯ ಮಾಡಿಸಲಿ, ಮಾಡಿಸಕ್ಕೆ ನನ್ನನ್ನು ತಡೆಯಲಿ (ಇತ್ಯಾದಿ ಪ್ರಕಾರ) ತನ್ನ ದೇಹ ಪರರ ದೇಹಗಳಲ್ಲಿ ನಿಯಾಮಕನಾಗಿರುವ ಶ್ರೀಹರಿಯನ್ನು ಅಲ್ಲಗಳೆಯುವವರು. (ಎಂದರ್ಥವು.) (೨) ಸರ್ವೇಶ್ವರನಾದ ಶ್ರೀಹರಿಯು ಸರ್ವ ಕಾರ್ಯವನ್ನು ಮಾಡಿಸುವವನೆಂದಾದರೆ ಈಗ ನನ್ನಿಂದ ಕಾರ್ಯ ಮಾಡಿಸಲಿ ಎಂದು ಹೇಳುವವನಿಗೆ ನೀನು ನಿತ್ಯ ನರಕವನ್ನು ಹೊಂದುವಿ, ಎಂದು ಹೇಳಬೇಕು. ಎಂಬ ಸಾಮವೇದದಲ್ಲಿ ಯಾಸ್ಕಶ್ರುತಿಯು. ॥ ೧೮—೨೪ ॥

## ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ಷೋಡಶೋಽಧ್ಯಾಯಃ ॥ ೧೬ ॥

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಶ್ರೀಭಗವದ್ಗೀತಾ ಭಾಷ್ಯದಲ್ಲಿ ಹದಿನಾರನೇ ಅಧ್ಯಾಯವು ಮುಗಿಯಿತು. ॥ ೧೬ ॥

ಪೀ—ಈ ಅಧ್ಯಾಯದಲ್ಲಿ ಹೇಳಲ್ಪಡತಕ್ಕ ಅರ್ಥವನ್ನು ಹೇಳುತ್ತಾರೆ—

**ತಾ ॥ ಓಂ ॥ (೧) ದೇವಾಸುರಲಕ್ಷಣಂ ॥ (೨) ಯೋಽತಿಮಾನೇನ ಮನ್ಯಂತೇ ಪಂಡಿತೋಽಹಮಿತೀಕ್ಷಪಿ । ಮಿಥ್ಯಾ ಜಗದಿದಂ ಸರ್ವಂ ಧ್ರುವಂ ತತ್ಸ್ಯಾನ್ನ ತಿಷ್ಠತಿ ॥ (೩) ವಿ-**

ಖ್ಯಾತ್ಯಾನ್ನೇಶ್ವರೋಽಸ್ಮ್ಯಸ್ತಿ ಪರೇಭ್ಯೋಽಪಿ ನ (ನ ಚ) ಜಾಯತೇ । ಸ್ವಸ್ಮಿನ್ನಪಿ ಕಥಾನ್ಯಸ್ಮಿನ್ನಿಯಂತಾಽಸ್ಯ ಇತೀರಿತೇ । ಪ್ರದ್ವಿಷಂತ್ಯಸುರಾಸ್ತೇ ತು ಸರ್ವೇ ಯಾಂತ್ಯಧರಂ ತಮಃ ॥ (೪) ಅಯೋಗ್ಯೇಶತ್ವಕಾಮಾಚ್ಚ ಲೋಭಾಚ್ಚಾತ್ಮಸಮರ್ಪಣೇ । ತತ್ವವೇದಿಷು ಕೋಪಾಚ್ಚ ತಮಸ್ತೇಷಾಂ ನ ದುರ್ಲಭಂ ॥ (೫) ಅಸ್ಮಾಗಮಾನುಮಾ(ನುಮಾಗಮಾ)ನಾಂ ಚ ಸ್ವೋಕ್ತೇರಪಿ ವಿರೋಧಿನಃ । ಯಸ್ಮಾತ್ತೇಽತೋಽಸುರಾ ಜ್ಞೇಯಾ ಏವಮನ್ಯೇಽಪಿ ತಾದೃಶಾಃ ॥ ೪—೨೪ ॥

● । (೧) (ಮೋಕ್ಷಕ್ಕೆ ಕಾರಣಗಳಾದ ಅಭಯ ಮೊದಲಾದ ದೇವತಾಲಕ್ಷಣಗಳನ್ನು ಹೊಂದುವ -ಕ್ಕಾಗಿಯೂ, ದಂಭ ಮೊದಲಾದ ಅಸುರ ಲಕ್ಷಣಗಳನ್ನು ಬಿಡುವುದಕ್ಕಾಗಿಯೂ) ದೇವತೆಗಳ ಮತ್ತು -ಸುರರ ಲಕ್ಷಣಗಳನ್ನು (ಹೇಳುತ್ತಾರೆ) (೨) (1) (ಅಸುರರ ಲಕ್ಷಣವನ್ನು ಹೇಳುತ್ತಾರೆ.) ಯಾವ -ನರಿಗಳು ಆಯಾಯ ವಸ್ತುಗಳ ಪ್ರಮಾಣಪ್ರಮಿತವಾದ ನಿಜಸ್ವರೂಪವನ್ನು ತಿಳಿದುಕೊಳ್ಳದೆ ಬೇರೆ -ತಿಯಾಗಿ ಅಂದರೆ ಆಯಾಯ ವಸ್ತುಗಳನ್ನು ವಿಪರೀತವಾಗಿ ತಿಳಿದುಕೊಳ್ಳುತ್ತಾರೋ, (ಇದರಿಂದ -ಭಿಮಾನಕ್ಕೆ (ಶ್ಲೋ. ೪) ಎಂಬ ವಾಕ್ಯದಿಂದ ಭ್ರಮೆಗೊಂಡ ಎಲ್ಲಾ ದುರ್ವಾದಿಗಳನ್ನು ಇಟ್ಟುಕೊಳ್ಳ -ಹು. ಚಾರ್ವಾಕನು ಮಾತ್ರನಲ್ಲ, ಎಂದು ಸೂಚಿತವಾಯಿತು.) (2) ನಾನೇ ಸರ್ವೇಶ್ವರನು. ಎಂದು -ದು ತಿಳಿಯುತ್ತಾರೋ, (ಇದರಿಂದ ಈಶ್ವರೋಽಹಂ (ಶ್ಲೋ. ೧೪) ಎಂಬುವ ವಾಕ್ಯದಿಂದ ಜೀವ -ಶ್ವರಿಗೆ ಅತ್ಯಂತಾಭೇದವನ್ನು, ಭೇದಾಭೇದವನ್ನು ತಿಳಿಯುವ ಎಲ್ಲಾ ವಾದಿಗಳನ್ನು ಇಟ್ಟುಕೊಳ್ಳ -ಬೇಂದು ಸೂಚಿತವಾಯ್ತು.) (3) ಈ ಎಲ್ಲಾ ಜಗತ್ತು ಸುಳ್ಳು, ಭ್ರಾಂತಿಕಲ್ಪಿತವಾಗಿರುವುದರಿಂದ -ವುದೂ ಪಾರಮಾರ್ಥಿಕವಾಗಿ ಇಲ್ಲ. (ಇದರಿಂದ ಅಸತ್ಯಂ (ಶ್ಲೋ. ೮)ದಿಂದ ಅತೀಂದ್ರಿಯಗಳಾದ -ರ್ಥಗಳು ಮಾತ್ರ ಮಿಥ್ಯೆಯೆಂದಲ್ಲ. ಈ ಎಲ್ಲಾ ಜಗತ್ತು ಮಿಥ್ಯೆಯು, ಎಂದು ಹೇಳುವವರೆಲ್ಲರನ್ನೂ -ಟ್ಟುಕೊಳ್ಳಬೇಕೆಂದು ಸೂಚಿತವಾಯಿತು) (೩) (1) ಆರೋಪಿತವಾದ ಪ್ರಯುಕ್ತ ಭ್ರಾಂತಿ ಪರಿಕಲ್ಪಿತ -ವಾಗಿರುವುದರಿಂದ ಜಗತ್ತು ಸತ್ಯವಾಗಿರುವುದಿಲ್ಲ ಜಗತ್ತು ಮಿಥ್ಯೆಯಾದ ಪ್ರಯುಕ್ತವೇ ಜಗತ್ತಿಗೆ -ಪಾಮಕನಿಲ್ಲದಿರುವುದರಿಂದ ಜಗದೀಶ್ವರನಿಲ್ಲ. (2) ಭ್ರಮೆಯಿಂದ ಕಲ್ಪಿತವಾದ ಪ್ರಯುಕ್ತವೇ -ತ್ಮನ ಆಕಾಶಸ್ಸಂಭೂತಃ ಇತ್ಯಾದಿಗಳಲ್ಲಿ ಹೇಳಿದ ಪ್ರಕಾರ ಒಂದರಿಂದ ಒಂದು ಹುಟ್ಟುತ್ತದೆ, ಎಂದು -ಸ್ಪರಿರುವ ಎಲ್ಲಾ ವಾದಿಗಳನ್ನು ಅಸತ್ಯಮಪ್ರತಿಷ್ಠಂ ತೇ (ಶ್ಲೋ. ೮) ಇತ್ಯಾದಿ ವಾಕ್ಯದಿಂದ ಇಟ್ಟು -ಕೊಳ್ಳಬೇಕು. (3) ತನ್ನಲ್ಲಿ ಹೇಗೋ ಹಾಗೆಯೇ ಇನ್ನೊಬ್ಬನಲ್ಲಿಯೂ ನಿಯಾಮಕನಾದ ತದ್ವಿಲಕ್ಷಣನಾದ ಶ್ರೀಹರಿಯು ಇದ್ದಾನೆ, (ಎಂದು ಜ್ಞಾನಿಗಳು) ಹೇಳಿದಾಗ ಯಾವ ವಾದಿಗಳು ದ್ವೇಷಿಸುತ್ತಾರೋ. (ಶ್ರೀವಿಷ್ಣುವು ಯಾವುದನ್ನೂ ಮಾಡಿಸುವವನಲ್ಲ. ನಾನೇ ಮಾಡುವವನು, ಮಾಡಿಸುವವ -ವರೆ ನನ್ನಿಂದ ಈ ಕಾರ್ಯ ಮಾಡಿಸಲಿ ಇತ್ಯಾದಿ ರೂಪದಿಂದ ಅಲ್ಲಗಳೆಯುತ್ತಾರೋ.) ಆ ಎಲ್ಲಾ -ವಾದಿಗಳೂ ಅಂಧಂತಮಸ್ಸನ್ನು ಹೊಂದುತ್ತಾರೆ (ಇದರಿಂದ, ಮಾಮಾತ್ಮಪರದೇಹೇಷು (ಶ್ಲೋ. ೧೮) -ತ್ಯಾದಿ ವಾಕ್ಯದಿಂದ ಶ್ರೀಹರಿಯು ಸರ್ವನಿಯಾಮಕನೆಂದು [illegible] ಎಲ್ಲಾ ವಾದಿಗಳನ್ನು -ಟ್ಟುಕೊಳ್ಳಬೇಕೆಂದು ಸೂಚಿತವಾಯಿತು ) (೪) (1) ಸರ್ವ[illegible] ತವನೆ [illegible] -ದವನ್ನು ಇಚ್ಛಿಸಿದ ಪ್ರಯುಕ್ತವೂ, (ಸುಪಾತ್ರರಲ್ಲಿ ದಾನ ಮಾಡಲು [illegible] ಪ್ರಯುಕ್ತ) -ವಸ್ತು ಕರ್ಮಗಳನ್ನು ಶ್ರೀಹರಿಗೆ ಅರ್ಪಿಸುವುದರಲ್ಲಿ [illegible] -ತಿಕ (ವಿರೋಧ)ವಿದ ಪ್ರಯುಕ್ತವೂ ಅವರಿಗೆ [illegible] (ಇದರಿಂದ [illegible] -ನ್ನೇ ಹೊಂದುವರು) (ಇದರಿಂದ ತ್ರಿವಿಧಂ ನರಕಸ್ಯೇದಂ (ಶ್ಲೋ. [illegible]) [illegible]

ಮಾತ್ರ ಹೇಳತಕ್ಕದ್ದಲ್ಲ ಮತ್ತೆ ದೈವೀಸಂಪತ್ತಿಲ್ಲದ ಎಲ್ಲಾ ವಾದಿಗಳನ್ನು ಹೇಳುತ್ತದೆಂದು ಇಟ್ಟುಕೊಳ್ಳಬೇಕು.) (೫) ಎಲ್ಲಾ ವಸ್ತುಗಳೂ ಸತ್ಯವೇ ಎಂಬೀ ಪ್ರತ್ಯಕ್ಷವೂ ವಿಶ್ವಂ ಸತ್ಯಂ ಪ್ರಮಾಣದೃಷ್ಟತ್ವಾತ್ ಇದುಮೊದಲಾದ ಅನುಮಾನವೂ ವಿಶ್ವಂ ಸತ್ಯಂ ಮಘವಾನಾ ಇದುಮೊದಲಾದ ಆಗಮವೂ, ಇವೆಲ್ಲವೂ ಮಿಥ್ಯೆಯೆಂದು ಹೇಳುವುದಾದರೆ—ಎಲ್ಲವೂ ಸುಳ್ಳು ಎಂದು ಹೇಳುವ ಅದ್ವೈತಿಗಳ ಮಾತೂ ಸುಳ್ಳಾಗ ಎಲ್ಲಾ ವಸ್ತುಗಳಲ್ಲಿ ಸೇರಿದ ಕಾರಣ ಅವರ ಮಾತೂ ಸುಳ್ಳೇ ಆಗಬೇಕಾಗುವುದು. ಅವರ ಮಾತು ಸುಳ್ಳೆಂದಾದರೆ—ಎಲ್ಲಾ ವಸ್ತುಗಳು ಸತ್ಯಗಳಾಗಬೇಕಾಗುವುದು. ಅದುಕಾರಣ ಸರ್ವಂ ಮಿಥ್ಯಾ ಎಂಬುವ ಅವರ ಮಾತೂ ವಿರುದ್ಧವಾಯ್ತು. ಹೀಗೆಯೇ ಪ್ರತ್ಯಕ್ಷಾದಿ ಪ್ರಮಾಣಗಳಿಗೆ ವಿರುದ್ಧವಾದುದನ್ನು ಹೇಳುವವರೆಲ್ಲರೂ ಅಸುರರೆಂದು ತಿಳಿಯಬೇಕು. (ಇದರಿಂದ ಮೋಹಜಾಲಸಮಾವೃತಾಃ (ಶ್ಲೋ ೧೬) ಇತ್ಯಾದಿಗಳ ತಾತ್ಪರ್ಯವನ್ನು ಹೇಳಿದರೆಂದುಕ್ತವಾಯ್ತು.)

ವಿ ॥ (1) ದೇವತೆಗಳಿಗೂ ಅಸುರರಿಗೂ ಲಕ್ಷಣವನ್ನು ಹೇಳತಕ್ಕ ಈ ಅಧ್ಯಾಯದಲ್ಲಿ ದಂಭೋ ದರ್ಪೋಽಭಿಮಾನಶ್ಚ ಶ್ಲೋ. ೪) ಎಂಬುವ ವಾಕ್ಯದಲ್ಲಿ ಅಭಿಮಾನಃ ಎಂಬುವುದರಿಂದ ದೇಹವೇ ಆತ್ಮನೆಂಬುವ ಭ್ರಮೆಯೂ, ಈಶ್ವರೋಽಹಮಹಂ (ಶ್ಲೋ. ೧೪) ಎಂಬುವಲ್ಲಿ ನಾನು ಹೊರತು ಅತೀಂದ್ರಿಯನಾದ ಶ್ರೀಹರಿಯು ಇಲ್ಲ. ನಾನೇ ಸರ್ವೇಶ್ವರನು ಎಂದೂ, ಅಸತ್ಯಮಪ್ರತಿಷ್ಠಂ ತೇ (ಶ್ಲೋ. ೮) ಎಂಬುವಲ್ಲಿ ಅತೀಂದ್ರಿಯವಾದ ಜಗತ್ತು ಸುಳ್ಳು. ಜಗತ್ತಿಗೆ ನಿಯಾಮಕನಿಲ್ಲ, ಅತೀಂದ್ರಿಯ ವಸ್ತುವೇ ಇಲ್ಲದಿರುವುದರಿಂದ ಶ್ರೀಹರಿಯ ಪ್ರೇರಣಾನುಸಾರ. ಪ್ರಕೃತಿಯಿಂದ ಮಹತ್ತತ್ತ್ವ, ಅದರಿಂದ ಅಹಂಕಾರ ತತ್ತ್ವ, ಹೀಗೆ ಪರಸ್ಪರವಾಗಿ ಹುಟ್ಟಿದುದಲ್ಲ ಮತ್ತೆ ಹೇಗೆ ಹುಟ್ಟಿದುದು ಎಂದರೆ—ಕೇವಲ ಸ್ತ್ರೀಪುರುಷರ ಕಾಮದಿಂದಲೇ ಹುಟ್ಟಿದುದು ಎಂದೂ. ಮಾಮಾತ್ಮಪರದೇಹೇಷು (ಶ್ಲೋ. ೧೮—೨೦) ಪರ್ಯಂತ ತನ್ನ ದೇಹಕ್ಕೂ ಪರರ ದೇಹಕ್ಕೂ ನಿಯಾಮಕನಾದ ಅತೀಂದ್ರಿಯನಾದ ಶ್ರೀಹರಿಯು ಇಲ್ಲವೆಂದು ದ್ವೇಷಿಸುತ್ತಾ ಅತೀಂದ್ರಿಯನಾದ ಶ್ರೀಹರಿಯನ್ನು ಅಲ್ಲಗಳೆಯುವ ಪ್ರಯುಕ್ತ ಅಧಮಗತಿಯನ್ನು ಹೊಂದುತ್ತಾರೆಂದೂ. ತ್ರಿವಿಧಂ ನರಕಸ್ಯೇದಂ (ಶ್ಲೋ. ೨೧) ಅತೀಂದ್ರಿಯವಾದ ಪರಲೋಕವನ್ನು ಅಂಗೀಕರಿಸದೆ ವಿಷಯಕಾಮಾದಿಗಳನ್ನೇ ಹೇಳಿದುದರಿಂದಲೂ, ಕಾಮೋಪಭೋಗಪರಮಾಃ (ಶ್ಲೋ. ೧೧) ಇತ್ಯಾದಿಗಳಿಂದಲೂ, ಚಾರ್ವಾಕರ ಲಕ್ಷಣವು ಸ್ಫುಟವಾಗಿರುವುದರಿಂದ ಚಾರ್ವಾಕರಿಗೆ ಮಾತ್ರ ಅಸುರತ್ವವು ಹೇಳಲ್ಪಡುತ್ತದೆ. ಎಂಬೀ ಭ್ರಮೆಯನ್ನು ಹೋಗಲಾಡಿಸುವುದಕ್ಕಾಗಿ ಅವರು ಹೇಳಿರುವ ಈ ವಾಕ್ಯಗಳೆಲ್ಲವೂ ಚಾರ್ವಾಕರನ್ನು ಮಾತ್ರ ಹೇಳತಕ್ಕದ್ದಲ್ಲ ಪರಂತು ಅಸುರಸ್ವಭಾವವುಳ್ಳ ಎಲ್ಲಾ ವಾದಿಗಳನ್ನು ಹೇಳುತ್ತದೆ ಎಂದು ಯೋಽತಿಮಾನೇನ ಎಂಬುವ ಸ್ಮೃತಿಪ್ರಮಾಣದಿಂದ ಹೇಳಿದರು ॥ ೪—೨೪

ಟೀ—ದೇವತೆಗಳ ಲಕ್ಷಣವನ್ನು ಹೇಳುತ್ತಾರೆ

**ತಾ ॥ ಯೇ ತು ವಿಷ್ಣುಂ ಪರಂ ಜ್ಞಾತ್ವಾ ಯಜಂತೇ ನಾ(ಽನ)ನ್ಯದೇವತಾಃ । ಪ್ರತ್ಯಕ್ಷಾದ್ಯ-**
**ವಿಸಂವಾದಿಜ್ಞಾನಾದೇವ ವಿಮುಕ್ತಿಗಾ ಇತಿ ಬ್ರಹ್ಮವೈವರ್ತೇ ॥ ೧-೫ ॥**

ಅ ॥ ಯಾರು ವಿಷ್ಣುವೇ ಸರ್ವೋತ್ತಮನೆಂದು ತಿಳಿದು ಬೇರೆ ದೇವತೆಗಳನ್ನು ಸರ್ವೋತ್ತಮರೆಂದು ಪೂಜಿಸುವುದಿಲ್ಲವೋ. ಅಂತಹವರು ಪ್ರತ್ಯಕ್ಷಾದಿ ಪ್ರಮಾಣಾವಿರೋಧಿಯಾದ ತತ್ತ್ವಜ್ಞಾನವಿರುವುದರಿಂದಲೇ ಮೋಕ್ಷವನ್ನು ಹೊಂದುತ್ತಾರೆ. ಎಂದು ಬ್ರಹ್ಮವೈವರ್ತಪುರಾಣದಲ್ಲಿದೆ

ವಿ ॥ ವಿಷ್ಣುಂ ಪರಂ ಜ್ಞಾತ್ವಾ ಎಂಬುವುದರಿಂದ ಜ್ಞಾನಯೋಗವ್ಯವಸ್ಥಿತಿಃ (ಶ್ಲೋ. ೧) ಎಂಬುವುದರ ಮೋಕ್ಷೋಪಾಯವಾದ ಬ್ರಹ್ಮಜ್ಞಾನದಲ್ಲಿ ಆಸಕ್ತಿಯು, ಮತ್ತು ಜ್ಞಾನಕ್ಕೆ ಉಪಾಯಭೂತವಾದ ಸ್ವಧರ್ಮಗಳಲ್ಲಿ ಆಸಕ್ತಿಯು. ಎಂದು ಅರ್ಥವು ಉಕ್ತವಾಯ್ತು ॥ ೧ ॥

ಶಂ—ತತೋ ಯಾಂತ್ಯಧಮಾಂ ಗತಿಂ (ಶ್ಲೋ. ೨೦) ಇತ್ಯಾದಿಗಳಿಂದ ಅಸುರರ ಸಂಪತ್ತು ಅಂಧಂತಮಸ್ಸಿಗೆ ಕಾರಣವೆಂದು ಮುಂದೆ ಹೇಳುವುದರಿಂದ ನಿಬಂಧಾಯಾಸುರೀ ಮತಾ (ಶ್ಲೋ. ೫) ಎಂಬುದು ಸಂಸಾರಬಂಧಕ್ಕೆ ಕಾರಣವೆಂದು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ—

**ಉ ॥ (೧) ನಿಬಂಧಾಯ ನೀಚಸ್ಥಾನೇಽಂಧಂತಮಸಿ ಬಂಧಾಯ॥ (೨) ಸರ್ಗಾಣಾಂ ಬಹುತ್ವೇಽಪಿ ಶುಭಾಶುಭಫಲಾಧಿಕೌ । ದೇವಾಸುರಾಖ್ಯೌ ದ್ವಾವೇವ ॥ (೩) ಗಂಧರ್ವಾದ್ಯಾಸ್ತದಂತರಾಃ । ಮುಕ್ತಿಗಾ ಏವ ವಿಜ್ಞೇಯಾ ದೇವಾ ಏವ ವಿಮುಕ್ತಿಗಾ ಇತಿ ಚ ॥ (೪) ವಿಮೋಕ್ಷಾಯೇತ್ಯತ್ರ ವೀತ್ಯುಪಸರ್ಗಾದೇವ (೫) ಮೋಕ್ಷನಾನಾತ್ವಂ ಜ್ಞಾಯತೇ ॥ ೫, ೬ ॥**

ಅ ॥ (೧) (ಶ್ಲೋ. ೬) ನಿಬಂಧಾಯ—ಅತ್ಯಂತ ನೀಚಸ್ಥಾನವಾದ ಅಂಧಂತಮಸ್ಸಿನಲ್ಲಿ ಬೀಳುವುದಕ್ಕಾಗಿ (ನಿಬಂಧಾಯ ಎಂಬುವುದರಿಂದ ಇಲ್ಲಿ ಸಂಸಾರ ಕಾರಣತ್ವವು ಹೇಳಲ್ಪಡುವುದಿಲ್ಲ, ಮತ್ತೆ ಅತ್ಯಂತ ನಿಕೃಷ್ಟವಾದ ಅಂಧತಮಸ್ಸಾಧನತ್ವವೇ ಹೇಳಲ್ಪಡುತ್ತದೆ.) (೨) (ಭೂತಗಳ ಸೃಷ್ಟಿಗಳು ಅನೇಕ ವಿಧಗಳಾಗಿರುವುದರಿಂದ ದ್ವೌ ಭೂತಸರ್ಗೌ (ಶ್ಲೋ. ೬) ಎಂಬುವುದರಿಂದ ಎರಡೇ ಎಂದು ಹೇಳಲು ಕಾರಣವೇನು? ಎಂದರೆ) ಸೃಷ್ಟಿಗಳು ಬಹುವಿಧಗಳಾದಾಗ್ಯೂ ದೇವತೆಗಳು ಹೆಚ್ಚು ಶುಭಫಲವನ್ನು ಹೊಂದುವವರು, ಅಸುರರು ಹೆಚ್ಚು ಅಶುಭಫಲವನ್ನು ಹೊಂದುವವರು. ಈ ಅಭಿಪ್ರಾಯದಿಂದ ದೈವ ಅಸುರ ಎಂದು ಇಬ್ಬರು ಎಂದು ಹೇಳಿದ್ದು.) (೩) (ಗಂಧರ್ವಾದಿಗಳು ಹೆಚ್ಚು ಶುಭಫಲವುಳ್ಳ, ಮೋಕ್ಷವನ್ನು ಮನುಷ್ಯಾಧಮಾದಿಗಳು ಹೆಚ್ಚು ಅಶುಭಫಲವುಳ್ಳ, ತಮಸ್ಸನ್ನು ಹೊಂದತಕ್ಕವರಾದ ಕಾರಣ ದೇವಾಸುರರಿಗೇನೇ ಏನು ವಿಶೇಷವು? ಎಂದರೆ) ಗಂಧರ್ವಾದಿಗಳು ಸ್ವರ್ಗಾದಿಗಳಿಗಿಂತ ಹೆಚ್ಚು ಸುಖವುಳ್ಳ, ಮೋಕ್ಷವನ್ನು ಮನುಷ್ಯಾಧಮಾದಿಗಳು ನರಕಾದಿಗಳಿಗಿಂತ ಹೆಚ್ಚು ದುಃಖವುಳ್ಳ, ತಮಸ್ಸನ್ನು ಹೊಂದುವವರಾದರೂ) ಗಂಧರ್ವಾದಿಗಳೂ, ಮನುಷ್ಯಾಧಮಾದಿಗಳೂ ದೇವತೆಗಳೂ, ಅಸುರರೂ ಇವರಿಬ್ಬರ ನಡುವಿನ ಅವಾಂತರ ಫಲಗಳಿಗೆ ಯೋಗ್ಯರೇ ಆಗಿರುತ್ತಾರೆ. (ಅಂದರೆ— ಗಂಧರ್ವಾದಿಗಳು ದೇವತೆಗಳಿಗಿಂತ ಮೋಕ್ಷದಲ್ಲಿ ಕಡಿಮೆ ಆನಂದವನ್ನು ಮನುಷ್ಯಾಧಮಾದಿಗಳು ಅಸುರರಿಗಿಂತ ತಮಸ್ಸಿನಲ್ಲಿ ಕಡಿಮೆ ದುಃಖವನ್ನು ಹೊಂದುತ್ತಾರೆ) ಗಂಧರ್ವಾದಿಗಳು ಮೋಕ್ಷವನ್ನು ಹೊಂದುವವರೇ ಎಂದು (ಮನುಷ್ಯಾಧಮಾದಿಗಳು ತಮಸ್ಸನ್ನು ಹೊಂದುವವರೇ ಎಂದೂ) ತಿಳಿಯಬೇಕು ದೇವತೆಗಳೇ ವಿಶೇಷ ಮೋಕ್ಷವನ್ನು ಹೊಂದುತ್ತಾರೆ. (ಅಂದರೆ ಗಂಧರ್ವಾದಿಗಳಿಗಿಂತ ಮೋಕ್ಷದಲ್ಲಿ ಆನಂದಾತಿಶಯವನ್ನು ಹೊಂದುತ್ತಾರೆ.) (ಅಸುರರೇ ಅತಿದುಃಖವಿರುವ ಅಂಧಂತಮಸ್ಸನ್ನು ಹೊಂದುತ್ತಾರೆ.) (೪) ದೈವೀ ಸಂಪದ್ವಿಮೋಕ್ಷಾಯ ಎಂಬ (೫)ನೇ ಶ್ಲೋಕದಲ್ಲಿ ವಿ ಎಂಬ ಉಪಸರ್ಗವಿದ್ದ ಪ್ರಯುಕ್ತವೇ ಅನೇಕ ವಿಧ ಮೋಕ್ಷವಿದೆ. ಮೋಕ್ಷದಲ್ಲಿಯೂ ತಾರತಮ್ಯವಿದೆ ಎಂದೂ ತಿಳಿಯುತ್ತದೆ. (ಬ್ರಹ್ಮವೈವರ್ತದಲ್ಲಿ ಮಾತ್ರವಲ್ಲ, ಗೀತೆಯಲ್ಲಿಯೂ ಸ್ಪಷ್ಟವಾಗುತ್ತದೆ.) ॥ ೫, ೬ ॥

ಶಂ—ಸನಕಾದಿ ಋಷಿಗಳ ಶಾಪದಿಂದ ಜಯ ವಿಜಯರಿಗೆ ದೇವತ್ವವು ತಪ್ಪಿಹೋಗಿದೆ. ವ ಸ ಕ್ಕ ಳಿಗೆ ಹೆಚ್ಚು ಜ್ಞಾನವಿದ್ದರೆ ದೇವತ್ವವು ಬರುವುದು. ಅಸುರರಾದ ಬಲಿಚಕ್ರವರ್ತಿಗೇನೇ ಬಲ್ಯಾದ್ಯ ಅಸುರಾಃ ಪ್ರಾಪ್ತದೇವತಾಃ ಕರ್ಮದೇವತಾಃ ಎಂದು ಹೇಳಿದ ಪ್ರಕಾರ ದೇವತ್ವವು ಬಂದಿದೆ ... ಕಾರಣ ದ್ವೌ ಭೂತಸರ್ಗೌ ಎಂದು ಸ್ಪಷ್ಟವಾಗಿಯೇ ಹೇಳಿದ್ದು ಹೇಗೆ ದಿ

ತಾ ॥ (೧) ದೇವಾಸುರನರತ್ವಾದ್ಯಾ ಜೀವಾನಾಂ ತು ನಿಸರ್ಗತಃ । ನಿಸರ್ಗೋ ನಾನ್ಯಥಾ-
ತೇಷಾಂ ಕೇನಚಿತ್ಕ್ವಚಿದೇವ ವಾ ॥ (೨) ದೇವಾಃ ಶಾಪಬಲಾದೇವ ಪ್ರಹ್ಲಾದಾದಿ-
ತ್ವಮಾಗತಾಃ । ಅತಃ ಪುನಶ್ಚ ದೇವತ್ವಂ ತೇ ಯಾಂತಿ ನಿಜಮೇವ ತು ॥ (೩) ಹೇ-
ತುತಃ ಸೋಽನ್ಯಥಾಭಾವೋ ರಕ್ತತಾ ಸ್ಫಟಿಕೇ ಯಥಾ । ಅ(ತ)ತೋ ನಿತ್ಯಶ್ಚ ನಾ-
ಸ್ತ್ಯೇಷ ಸ್ವಭಾವವಿನಿವರ್ತಕಃ ॥ (೪) ಕಿಂ ತ್ವಾ(ಚಾ)ಕ್ರಮ್ಯೈವ ತಂ ತಿಷ್ಠೇದ್ದೇವಸ-
ರ್ಗಸ್ಥಿತೋ ಹಿ ಸಃ (ಯಃ) । ಅಶೋಚ್ಯ ಏವ ವಿಜ್ಞೇಯೋ ಮೋಕ್ಷಯೋಗ್ಯೋ
ಹರೇಃ ಪ್ರಿಯ ಇತಿ ಚ ॥ ೨ ॥ ॥ ೫—೬ ॥

ಅ ॥ (೧) ದೇವತ್ವ, ಅಸುರತ್ವ ನರತ್ವ ಮೊದಲಾದವುಗಳು ಜೀವರಿಗೆ ಸ್ವಭಾವಗಳೇ. ನಾಸುರಾಣಾಂ ದೈವಂ ರೂಪಂ ನ ದೇವಾನಾಮಾಸುರಂ ನ ಚೋಭಯಂ ಮನುಷ್ಯಾಣಾಂ ಯೋ ಯದ್ರೂಪಃ ಸ ತದ್ರೂಪಃ ನಿಸರ್ಗೋ ಹ್ಯೇಷ ಭವತಿ ಎಂಬುವ ವೇದಪ್ರಮಾಣದಿಂದ ಜೀವರಿಗೆ ದೇವತ್ವಾದಿಗಳು ಸ್ವಭಾವಗಳೇ ಆದುದರಿಂದ ಯಾವ ಕಾರಣದಿಂದಲೂ ಎಲ್ಲಿಯೂ ವ್ಯತ್ಯಾಸವಾಗುವುದಿಲ್ಲ. (೨) (ಪ್ರಹ್ಲಾದ ಮೊದಲಾದ ಅಸುರರಿಗೆ ದೇವತ್ವವು ಬಂದಿರುವುದರಿಂದ ವ್ಯತ್ಯಾಸವಾಗುವುದಿಲ್ಲವೆಂದು ಹೇಳಿದ್ದು ಹೇಗೆ ಕೂಡುತ್ತದೆ ಎಂದರೆ—) ದೇವತೆಗಳು ಶಾಪಬಲದಿಂದಲೇ ಪ್ರಹ್ಲಾದ ಮೊದಲಾದ ಭಾವವನ್ನು ಹೊಂದಿರುತ್ತಾರೆ. ಆದಕಾರಣ ಆ ದೇವತೆಗಳು ಸ್ವಾಭಾವಿಕವೇ ತಮ್ಮದೇ ಆದ ದೇವತ್ವವನ್ನು ತಿರುಗಿ ಹೊಂದುತ್ತಾರೆ. (ಅಂದರೆ—ಪ್ರಹ್ಲಾದಾದಿಗಳಿಗೆ ಅಸುರತ್ವವು ಸ್ವಭಾವವಲ್ಲ. ದೇವತ್ವವೇ ಸ್ವಭಾವವು ಶಾಪದಿಂದಲೇ ಅಸುರತ್ವವು ಬಂದದ್ದು. ಅಸುರತ್ವವು ಸ್ವಾಭಾವಿಕವಾಗದಿರುವುದರಿಂದ ಅದನ್ನು ಬಿಟ್ಟು ದೇವತ್ವವು ಬಂದದ್ದು ಯುಕ್ತವು.) (೩) ಸ್ಫಟಿಕಮಣಿಯು ಬಿಳಿದಾದರೂ ಕೆಂಪು ದಾಸಾಳಹೂವಿನ ಸಂಪರ್ಕದಿಂದ ಕೆಂಪಾಗಿ ಹೇಗೆ ತೋರುತ್ತದೋ, ಹಾಗೆಯೇ ಪ್ರಹ್ಲಾದಾದಿಗಳಿಗೆ ಸ್ವಾಭಾವಿಕವೇ ಆದ ದೇವತ್ವಕ್ಕೆ ವ್ಯತ್ಯಾಸವು. (ಅಸುರಭಾವವು ಬಂದದ್ದು) ಶಾಪರೂಪನಿಮಿತ್ತದಿಂದಲೇ ಆದಕಾರಣ ದೇವತ್ವವೇ ನಿತ್ಯವಾದದ್ದು. (ಅಸುರರಿಗೆ ದೇವತ್ವವು ಬಾರದಿದ್ದರೂ ದೇವತೆಗಳಿಗೆ ದೇವತ್ವವನ್ನು ಬಿಟ್ಟು ಅಸುರತ್ವವು ಬರುವುದೆಂದರೆ) ದಾಸಾಳ ಹೂವಿನ ಸಂಪರ್ಕದಿಂದ ಸ್ಫಟಿಕಮಣಿಯಲ್ಲಿ ಕೆಂಪು ಬಣ್ಣ ತೋರಿದರೂ ಅದು ಸ್ಫಟಿಕ ಮಣಿಯಲ್ಲಿದ್ದ ಬಿಳಿಪನ್ನು ಹೋಗಲಾಡಿಸುವುದಿಲ್ಲ ಹೇಗೋ ಹಾಗೆಯೇ ಪ್ರಹ್ಲಾದಾದಿಗಳಿಗೆ ಅಸುರಭಾವವು ಕಾರಣವಿಶೇಷದಿಂದ ಬಂದಿರುವುದರಿಂದ ದೇವತ್ವ ಸ್ವಭಾವವನ್ನು ಹೋಗಲಾಡಿಸುವುದಿಲ್ಲ (೪) (ಹಾಗಾದರೆ—ಶಾಪಾದಿಗಳು ವ್ಯರ್ಥಗಳೆಂದರೆ—) ಯಾವನು ಸ್ವಭಾವತಃ ದೇವತೆಗಳ ಸೃಷ್ಟಿಯಲ್ಲಿಯೇ ಸೇರಿದವನೋ, ಅವನಲ್ಲಿ ದೇವತ್ವವು ಮರೆಯಾಗಿ ಇರುತ್ತದೆ. ಆದಕಾರಣ ದೇವತೆಗಳಿಗೆ ಅಸುರತ್ವವು ಇಲ್ಲದಿರುವುದರಿಂದ ಅಂತಹವರು ಶೋಕಾರ್ಹರಲ್ಲವೇ ಅಲ್ಲ. (ಏಕೆಂದರೆ) ಅಂತಹವರು ಮೋಕ್ಷ ಹೊಂದಲು ಯೋಗ್ಯರು ಶ್ರೀಹರಿಗೆ ಪ್ರೀತಿಪಾತ್ರರು ಎಂದೂ ಉಕ್ತವಾಗಿದೆ ॥೫-೬

ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾ-
ತಾತ್ಪರ್ಯನಿರ್ಣಯೇ ಷೋಡಶೋಽಧ್ಯಾಯಃ ॥ ೧೬ ॥

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾತಾತ್ಪರ್ಯನಿರ್ಣಯದಲ್ಲಿ ಹದಿನಾರನೇ ಅಧ್ಯಾಯವು ಮುಗಿಯಿತು

॥ ಶ್ರೀಕೃಷ್ಣಾರ್ಪಣಮಸ್ತು ॥

|| ಶ್ರೀಃ ||

# ಹದಿನೇಳನೇ ಅಧ್ಯಾಯವು.

ಟೀ—ಹದಿನಾಲ್ಕನೇ ಅಧ್ಯಾಯದಲ್ಲಿ ನಾನ್ಯಂ ಗುಣೇಭ್ಯಃ ಕರ್ತಾರಂ (ಶ್ಲೋ. ೧೯) ಇತ್ಯಾದಿ ...ಲ್ಲಿ ಎಲ್ಲಾ ಪರಿಣಾಮ ಕಾರ್ಯವೂ ಸತ್ವಾದಿ ಗುಣತ್ರಯಯುಕ್ತವೆಂದು ಸಾಮಾನ್ಯವಾಗಿ ಹೇಳಿದೆ. ... ಅಧ್ಯಾಯದಲ್ಲಿ ಸತ್ವಾದಿಗುಣಗಳಿಂದ ಮಾಡಲ್ಪಟ್ಟ ಶ್ರದ್ಧಾ, ಆಹಾರ, ಯಜ್ಞ, ತಪಸ್ಸು ಮೊದಲಾದ ...ತಪೂರ್ವಕಗಳಾದ ಕರ್ಮಗಳಿಗೆ ಭೇದವನ್ನು ಹೇಳಿ ಅವುಗಳನ್ನು ವಿವರಿಸುತ್ತಾನೆ—

ಗೀ || || ಅರ್ಜುನ ಉವಾಚ ||

ಶ್ಲೋ || ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜಂತೇ ಶ್ರದ್ಧಯಾನ್ವಿತಾಃ |
ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ || ೧ ||

ಅ || ಅರ್ಜುನಃ=(ಹಿಂದಿನ ಅಧ್ಯಾಯದ ಅಂತ್ಯದಲ್ಲಿ ಸದಾಚಾರಗಳನ್ನು ವಿಧಿಸುವ ಶಾಸ್ತ್ರಗಳಲ್ಲಿ ...ಳಿದ ಸತ್ಕರ್ಮಗಳನ್ನು ಅವಶ್ಯವಾಗಿ ಮಾಡಬೇಕೆಂದು ಹೇಳೋಣ ಪ್ರಶ್ನಿಸಲು ಅವಕಾಶವನ್ನು ...ಂದಿದ) ಅರ್ಜುನನು, ಉವಾಚ=(ಶಾಸ್ತ್ರವಿಧಿಯನ್ನು ತಿಳಿಯದೆ ಕೇವಲ ಶ್ರದ್ಧೆಯಿಂದ ಯಾಗಾದಿ ...ನ್ನು ಮಾಡುವವರು ಹೇಗೆ ಇರುತ್ತಾರೆಂದು) ಪ್ರಶ್ನಿಸುತ್ತಾನೆ ಕೃಷ್ಣ=ಶ್ರೀಕೃಷ್ಣನೇ, ಯೇ=...ವ ಜನರು, ಶಾಸ್ತ್ರವಿಧಿಂ=ಸದಾಚಾರಗಳನ್ನು ವಿಧಿಸುವ ಶಾಸ್ತ್ರಗಳನ್ನು, ಉತ್ಸೃಜ್ಯ=ತಿಳಿಯದೆ, ...ದ್ಧಯಾ=ಶ್ರದ್ಧಾಮಾತ್ರದಿಂದ, ಅನ್ವಿತಾಃ=ಕೂಡಿದವರಾಗಿ, ಯಜಂತೇ=ದೇವತೆಗಳನ್ನು ಪೂಜಿಸು...ರೋ. ತೇಷಾಂ=ಅಂತಹ ಜನರ, ನಿಷ್ಠಾ ತು=ಸ್ಥಿತಿಯಾದರೂ. ಕಾ=ಎಂತಹುದು? ಸತ್ವಂ=ಅದು ...ತ್ವಿಕಸ್ಥಿತಿಯೋ, ರಜಃ=ರಾಜಸಸ್ಥಿತಿಯೋ, ತಮಃ=ತಾಮಸ ಸ್ಥಿತಿಯೋ. (ಅಂದರೆ ಅಂತಹವರು ...ತ್ವಿಕರೋ, ರಾಜಸರೋ, ತಾಮಸರೋ.) || ೧ ||

ಟೀ—ಈ ಅಧ್ಯಾಯದ ಅರ್ಥವನ್ನು ಹೇಳುತ್ತಾರೆ—

ಭಾ || ಓಂ || (೧) ಗುಣಭೇದಾನ್ತ್ರಪಂಚಯತ್ಯನೇನಾಧ್ಯಾಯೇನ || (೨) ಶಾಸ್ತ್ರವಿಧಿಮುತ್ಸೃಜ್ಯ ಅಜ್ಞಾತ್ವೈವ | ವೇದಃ ಕೃತ್ಸ್ನೋಽಧಿಗಂತವ್ಯಃ ಸರಹಸ್ಯೋ ದ್ವಿಜನ್ಮನೇತಿ ವಿಧಿರುತ್ಸೃಷ್ಟೋ ಹಿ ತೈಃ || (೩) ಯೇ ವೈ ವೇದಂ ನ ಪಠಂತೇ ನ ಚಾರ್ಥಂ ವೇದೋಕ್ತಾಂಸ್ತಾನ್ವಿದ್ಧಿ ಸಾನೂನಬುದ್ಧೀನಿತಿ ಮಾಧುಚ್ಛಂದಸಶ್ರುತಿಃ || (೪) ಅನ್ಯಥಾ ತಾಮಸಾ ಇತ್ಯೇವೋಚ್ಯೇತ | ನತು ವಿಭಜ್ಯ || (೫) ಯದಿ ಸಾತ್ತ್ವಿಕಾಸ್ತರ್ಹಿ ನೋತ್ಸೃಷ್ಟಶಾಸ್ತ್ರಾಃ || (೬) ನಹಿ ವೇದವಿರುದ್ಧೋ ಧರ್ಮಃ | ವೇದೋಽಖಿಲೋ ಧರ್ಮಮೂಲಂ ಸ್ಮೃತಿಶೀಲೇ ಚ ತದ್ವಿದಾಮಿತಿ ಹಿ ಸ್ಮೃತಿಃ | ವೇದಪ್ರಣಿಹಿತೋ ಧರ್ಮೋ ಹ್ಯಧರ್ಮಸ್ತದ್ವಿಪರ್ಯಯ ಇತಿ ಚ ಭಾಗವತೇ || ೧ ||

ಅ || (೧) (ಸಾತ್ವಿಕ ಶ್ರದ್ಧಾದಿಗಳು ಪುರುಷಾರ್ಥ ಸಾಧನಗಳಾಗಿರುವುದರಿಂದ [illegible] ...ಮಾಡಬೇಕು. ತಾಮಸ ರಾಜಸ ಶ್ರದ್ಧಾದಿಗಳು ಪುರುಷಾರ್ಥಗಳಿಗೆ [illegible]

ಗಳನ್ನು ಬಿಡಬೇಕು, ಎಂದು ತಿಳಿಸುವುದಕ್ಕಾಗಿ) ಗುಣನಿಮಿತ್ತಕಗಳಾದ ಶ್ರದ್ಧಾ ಮೊದಲಾದವುಗಳ ಭೇದವನ್ನು (ಸಾಮ್ಯಂ ಗುಣೇಭ್ಯಃ ಕರ್ತಾರಂ ಇತ್ಯಾದಿಗಳಲ್ಲಿ ಸಂಕ್ಷೇಪದಿಂದ ಹೇಳಿದ್ದರಿಂದ) ಈ ಅಧ್ಯಾಯದಿಂದ ವಿವರಿಸುತ್ತಾರೆ. (೨) (ಶಾಸ್ತ್ರವಿಧಿಮುತ್ಸೃಜ್ಯ ಎಂಬುವುದಕ್ಕೆ ವೇದಗಳು ಅಪ್ರಮಾಣವೆಂಬುವ ಬುದ್ಧಿಯಿಂದ ವೇದಗಳಲ್ಲಿ ವಿಹಿತವಾದುದನ್ನು ಬಿಟ್ಟು ಎಂಬುವ ಅಪಾತಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಹೇಳುತ್ತಾರೆ.) ಶಾಸ್ತ್ರವಿಧಿಮುತ್ಸೃಜ್ಯ ಎಂಬುವಲ್ಲಿದ್ದ ಉತ್ಸೃಜ್ಯ ಎಂಬುವುದಕ್ಕೆ ತಿಳಿಯದೆ ಎಂದೇ ಅರ್ಥವು. (ಅಪ್ರಮಾಣವೆಂಬುವ ಬುದ್ಧಿಯಿಂದ ಶಾಸ್ತ್ರವಿಧಿಯನ್ನು ಲಂಘಿಸಿ ಎಂದರ್ಥವಲ್ಲ. ಏಕೆ ಹೀಗೆ ಅರ್ಥ ಮಾಡಬೇಕೆಂದರೆ) ಬ್ರಾಹ್ಮಣ ಕ್ಷತ್ರಿಯ ವೈಶ್ಯರು ಅಂಗಗಳಿಂದ ಕೂಡಿದ ಸರ್ವ ವೇದಗಳನ್ನು ಅರ್ಥಜ್ಞಾನಕ್ಕಾಗಿ ಅಧ್ಯಯನ ಮಾಡಬೇಕೆಂಬುವ ವಿಧಿಯು ಬ್ರಾಹ್ಮಣ ಕ್ಷತ್ರಿಯ ವೈಶ್ಯ ಮೂವರಿಗೂ ಪ್ರಾಪ್ತವಾದುದಾಗ್ಯೂ ಆ ವಿಧಿಯನ್ನು ತಿಳಿಯದೆ ಇದ್ದವರೇ ಬಿಟ್ಟವರೆಂದೆನ್ನಿಸಿಕೊಳ್ಳುತ್ತಾರೆ. ಆದಕಾರಣ ಉತ್ಸೃಜ್ಯ—ತಿಳಿಯದೇ ಎಂದೇ ಅರ್ಥವು ಯುಕ್ತವು. (೩) (ಈ ವಿಷಯದಲ್ಲಿ ಶ್ರುತಿ ಸಮ್ಮತಿಯನ್ನು ಹೇಳುತ್ತಾರೆ.) ಯಾರು ವೇದವನ್ನು ಅಭ್ಯಾಸ ಮಾಡುವುದಿಲ್ಲವೋ, ಯಾರು ವೇದಾರ್ಥವನ್ನು ತಿಳಿಯುವುದಿಲ್ಲವೋ, ವೇದ ವೇದಾರ್ಥಗಳನ್ನು ತಿಳಿಯಲು ಯೋಗ್ಯವಾದ ಬುದ್ಧಿಯಿಂದ ಕೂಡಿದವರೂ ಕೂಡ ಯಾರು ವೇದವನ್ನು ಕಲಿಯುವುದಿಲ್ಲವೋ, ಅಂತಹವರನ್ನು ವೇದಗಳಿಂದ ವಿರಹಿತರನ್ನಾಗಿ ತಿಳಿ, ಎಂದು ಮಾಧ್ಯಂದಿನಶ್ರುತಿಯು. (೪) (ವೇದವು ಅಪ್ರಮಾಣವು ಎಂಬುವ ಬುದ್ಧಿಯಿಂದ ಬಿಟ್ಟು ಎಂದೇ ಅರ್ಥವು ಏಕೆ ಆಗಲಾರದೆಂದರೆ) ಇಲ್ಲಿ ವೇದ ವಿರೋಧಿಗಳಾದ ಬೌದ್ಧಾದಿಗಳು ಯಾವ ರೀತಿಯಾಗಿ ಇರುತ್ತಾರೆಂದು ಪ್ರಶ್ನೆ ಮಾಡಿದಾಗ ಆಗ ತಾಮಸರು ಎಂದೇ ಉತ್ತರ ಹೇಳಬೇಕಿತ್ತು. ಬೌದ್ಧಾದಿಗಳು ತಾಮಸರೆಂದು ನಿಶ್ಚಿತವೇ ಆಗಿದೆ.) (ಇಷ್ಟು ಮಾತ್ರವಲ್ಲದೆ) ತ್ರಿವಿಧಾ ಭವತಿ ಶ್ರದ್ಧಾ ಇತ್ಯಾದಿಗಳಿಂದ ಶ್ರದ್ಧೆಯನ್ನು ವಿಭಾಗ ಮಾಡಿ ಉತ್ತರವನ್ನು ಹೇಳದಿರಬೇಕಿತ್ತು. (ಮತ್ತು ವೇದಾಪ್ರಾಮಾಣ್ಯವಾದಿಗಳಾದ ಬೌದ್ಧರಿಗೂ ಸಾತ್ತ್ವಿಕ ಸಾತ್ತ್ವಿಕತ್ವವು ಬರಬೇಕಾಗುವುದು.) (೫) ಬೌದ್ಧರು ಸಾತ್ವಿಕರು ಎಂದಾದರೆ ವೇದಾದಿ ಶಾಸ್ತ್ರಗಳನ್ನು ಅಪ್ರಮಾಣವೆಂಬುವ ಬುದ್ಧಿಯಿಂದ ಬಿಡಲಾರರು. (ಸಾತ್ವಿಕತ್ವ, ವೇದವಿರೋಧಿತ್ವ ಇವುಗಳು ಸರ್ವಥಾ ಒಟ್ಟಿಗೆ ಇರಲಾರವು.) (೬) (ಒಟ್ಟಿಗೆ ಇರುವುದಿಲ್ಲ ಎಂಬುವುದನ್ನು ಹೇಗೆ ನಿಶ್ಚಯಿಸುವುದು? ಎಂದರೆ ಸತ್ತ್ವಾದ್ಧರ್ಮೋ ಭವೇದ್ವೃದ್ಧಾತ್ ಪುಂಸಾಂ ಎಂಬುವ ಪ್ರಮಾಣದಿಂದ ಸಾತ್ವಿಕರು ಧರ್ಮವನ್ನು ಮಾಡುತ್ತಾರೆ. ತಥಾ ಚ ವೇದವಿರೋಧಿಗಳು ಧರ್ಮಗಳನ್ನು ಮಾಡುವವರು, ಎಂದಾಗಬೇಕಾಗುವುದು. ಅದು ಸರ್ವಥಾ ಅಯುಕ್ತವೆನ್ನುತ್ತಾರೆ) ವೇದ ವಿರುದ್ಧವಾದುದು ಧರ್ಮವಾಗಲಾರದಷ್ಟೆ. (ಈ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ) ಎಲ್ಲಾ ವೇದವೂ ಧರ್ಮಜ್ಞಾನಕ್ಕೆ ಕಾರಣವು. ವೇದವನ್ನು ತಿಳಿದಿರುವ ಮನ್ವಾದಿಗಳು ಮಾಡಿದ ಗ್ರಂಥವು, ಅವರ ಮನೋವೃತ್ತಿಯು ತನ್ಮೂಲಕ ಆಚಾರವೂ ಕೂಡ ಧರ್ಮಜ್ಞಾನಕ್ಕೆ ಕಾರಣವು (ಧರ್ಮಸ್ವರೂಪವು ಚಿತ್ರವಾದ ಪ್ರಯುಕ್ತ ಯಾವುದು ಯಾವುದು ಶ್ರೀಹರಿಯ ಮನಸ್ಸಿನಲ್ಲಿರತಕ್ಕದ್ದೋ, ಅದನ್ನೇ ಧರ್ಮವೆಂದು ತಿಳಿಯಬೇಕು) ವೇದಗಳಲ್ಲಿ ಮಾಡಬೇಕೆಂದು ವಿಹಿತವಾದುದು ಧರ್ಮವು. ವೇದಗಳಲ್ಲಿ ನಿಷಿದ್ಧವಾದುದು ಅಧರ್ಮವು, ಎಂದು ಭಾಗವತದಲ್ಲಿದೆ ॥೧॥

ಟೀ—ಸಾತ್ವಿಕರು ರಾಜಸರು ತಾಮಸರು ಎಂದು ಮೂರು ವಿಧರೂ ಇರುತ್ತಾರೆಂಬುವ ಅಭಿಪ್ರಾಯದಿಂದ ಅವರ ಸಾತ್ವಿಕತ್ವಾದಿ ಸ್ವರೂಪವನ್ನು ೨ ಶ್ಲೋಕಗಳಿಂದ ಹೇಳುತ್ತಾರೆ—

ಗೀ ॥ ॥ ಶ್ರೀಭಗವಾನುವಾಚ ॥

ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।
ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨ ॥

ಅ ॥ ಶ್ರೀಭಗವಾನ್ = ಶ್ರೀಕೃಷ್ಣನು, ಉವಾಚ = ಉಪದೇಶಿಸುತ್ತಾನೆ. ಶ್ರದ್ಧಾ = ಆಸ್ತಿಕ್ಯಬುದ್ಧಿಯು, ದೇಹಿನಾಂ = ಮನುಷ್ಯರಿಗೆ, ಸ್ವಭಾವಜೈವ = ಆಯಾಯ ಜೀವರ ಸ್ವಭಾವ ಸಿದ್ಧವಾದುದೇ (ಮಧ್ಯದಲ್ಲಿ ಬಿಟ್ಟಿದ್ದಲ್ಲ) (ಅದನ್ನು ತಿಳಿಸುವುದಕ್ಕಾಗಿಯೇ ಸ್ವಭಾವಜಾ ಎಂದದ್ದು.) ಸಾ = ಆ ಶ್ರದ್ಧೆಯು, ಸಾತ್ತ್ವಿಕೀ = ಸಾತ್ವಿಕವು, ರಾಜಸೀ = ರಾಜಸವು, ತಾಮಸೀ ಚೇತಿ = ತಾಮಸವೂ ಎಂತೆಂದೂ, ತ್ರಿವಿಧಾ ಏವ ಚ = ಮೂರು ವಿಧವಾದುದೇ. ಭವತಿ = ಆಗಿರುತ್ತದೆ, ತಾಂ = ಆ ಮೂರು ವಿಧವಾದ ಆಸ್ತಿಕ್ಯ ಬುದ್ಧಿಯನ್ನು, ಶೃಣು = ಕೇಳಿ ಅದರಲ್ಲಿ ಆಸಕ್ತಿಯನ್ನು ಮಾಡು. ಅಂದರೆ ಆಯಾಯ ಸ್ವಭಾವವಿರುವವರು ಮಾಡುವ ಯಾಗಾದಿಗಳ ಕ್ರಮವನ್ನು ಕೇಳಿ ತಿಳಿದುಕೊಳ್ಳು. ॥ ೨ ॥

ಭಾ ॥ ಅತೋ ವಿಭಜ್ಯಾಹ । ತ್ರಿವಿಧೇತ್ಯಾದಿನಾ ॥ ೨ ॥

ಅ ॥ (ತೇಷಾಂ ನಿಷ್ಠಾ ತು ಕಾ ಕೃಷ್ಣ) ಎಂದು ಅರ್ಜುನನು ಪ್ರಶ್ನಿಸಿದ್ದಕ್ಕೆ ಸಾತ್ವಿಕತ್ವಾದಿಗಳನ್ನು ಹೇಳಬೇಕಿತ್ತು. ತ್ರಿವಿಧಾ ಇತ್ಯಾದಿಗಳನ್ನು ಏಕೆ ಹೇಳಿದೆಂದರೆ—ಯಾವ ಕಾರಣದಿಂದ ಅರ್ಜುನನು ವೇದವಿಧಿಯನ್ನು ತಿಳಿಯದವರ ಸ್ಥಿತಿಯನ್ನು ಪ್ರಶ್ನಿಸಿದ್ದಾನೋ, ಆದಕಾರಣ ಯಜ್ಞ ಮಾಡುವವರಲ್ಲಿ ವಿಶೇಷವಾಗಿ ಇದ್ದ ಶ್ರದ್ಧೆಯನ್ನು ಸಾತ್ವಿಕತ್ವಾದಿಗಳಿಂದ ವಿಭಾಗಮಾಡಿ ಸಾತ್ವಿಕಾದಿಗಳ ಸ್ವರೂಪವನ್ನು ತ್ರಿವಿಧಾ ಇತ್ಯಾದಿಗಳಿಂದ ಹೇಳುತ್ತಾರೆ. ॥ ೨ ॥

ಟೀ—ಶ್ರದ್ಧೆಯು ಮೂರು ವಿಧವಾದದ್ದಾಗಲಿ. ಅಂತಹ ಶ್ರದ್ಧೆಯಿರುವವರ ಗತಿಯೇನು, ಎಂಬುವ ಪ್ರಶ್ನೆಗೆ ಉತ್ತರವೇನೆಂದರೆ—

ಗೀ ॥ ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।
ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ ॥ ೩ ॥

ಅ ॥ ಭಾರತ = ಅರ್ಜುನನೇ, ಸರ್ವಸ್ಯ = ಎಲ್ಲಾ ಪ್ರಾಣಿಗಳ ಶ್ರದ್ಧಾ = ಆಸ್ತಿಕ್ಯಬುದ್ಧಿಯು. ಸತ್ತ್ವಾನುರೂಪಾ = ಆಯಾಯ ಜೀವರ ಸ್ವರೂಪಕ್ಕೆ ಸದೃಶವಾದುದು. ಭವತಿ = ಆಗುತ್ತದೆ ಅಯಂ ಪುರುಷಃ = ಈ ಪುರುಷನೂ, ಶ್ರದ್ಧಾಮಯಃ = ಶ್ರದ್ಧಾಸ್ವರೂಪನೇ (ಅಂದರೆ ಆಯಾಯ ಶ್ರದ್ಧಾನುಸಾರ ವಾದ ವಿಕಾರವನ್ನು ಹೊಂದುವವನು.) (ಅದು ಹೇಗೆಂದರೆ) ಯೋ ಯಚ್ಛ್ರದ್ಧಃ = ಯಾವ ಪುರುಷನು ಯಾವ ಶ್ರದ್ಧೆಯುಳ್ಳವನೋ, ಸಃ = ಆತನು, ಸ ಏವ = ಆ ಶ್ರದ್ಧೆಯುಳ್ಳವನೇ. (ಅಂದರೆ ಸಾತ್ವಿಕ ಶ್ರದ್ಧೆಯುಳ್ಳವನು ಸಾತ್ವಿಕನು, ರಾಜಸ ಶ್ರದ್ಧೆಯುಳ್ಳವನು ರಾಜಸನು ತಾಮಸ ಶ್ರದ್ಧೆಯುಳ್ಳವನು ತಾಮಸನು) ॥ ೩ ॥

ಟೀ—ಸಾತ್ವಿಕತ್ವಾದಿ ಪ್ರಭೇದದಿಂದ ಶ್ರದ್ಧೆಯು ಮೂರು ವಿಧವೆಂದು ಹೇಳಿದೆ. ಪುನಃ ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಎಂದು ಹೇಳಿದ್ದು ವ್ಯಾಹತವು ಎಂದರೆ—

ಭಾ ॥ ಸತ್ತ್ವಾನುರೂಪಾ ಚಿತ್ತಾನುರೂಪಾ । ಯೋ ಯಚ್ಛ್ರದ್ಧಃ ಸ ಏವ ಸಃ । ಸಾತ್ತ್ವಿಕಶ್ರದ್ಧಃ ಸಾತ್ತ್ವಿಕ ಇತ್ಯಾದಿ ॥ ೩ ॥

ಅ ॥ ಸತ್ತ್ವಾನುರೂಪಾ = ಚಿತ್ತಕ್ಕೆ (ಆಯಾಯ ಜೀವಸ್ವರೂಪಕ್ಕೆ) ಅನುಗುಣವಾದುದು. ಪುರುಷನು ಯಾವ ಶ್ರದ್ಧೆಯುಳ್ಳವನೋ ಆ ಪುರುಷನು ಅಂತಹವನೇ. ಅಂದರೆ ಸಾತ್ವಿಕ ಶ್ರದ್ಧೆಯುಳ್ಳವನು ಸಾತ್ವಿಕನೇ, ಇತ್ಯಾದಿ ಪ್ರಕಾರ ತಿಳಿಯಬೇಕು ॥ ೩ ॥

ಪೀ—ಸಾತ್ವಿಕ ಶ್ರದ್ಧಾದಿಗಳುಳ್ಳವರಿಗೆ ಯಾವ ಯಾವ ಕರ್ಮಗಳಿಂದರೆ ಅದನ್ನು ಹೇಳುತ್ತಾರೆ—

**ಗೀ ॥ ಯಜಂತೇ ಸಾತ್ತ್ವಿಕಾ ದೇವಾನ್ಯಕ್ಷರಕ್ಷಾಂಸಿ ರಾಜಸಾಃ**
**ಪ್ರೇತಾನ್ಭೂತಗಣಾಂಶ್ಚಾನ್ಯೇ ಯಜಂತೇ ತಾಮಸಾ ಜನಾಃ ॥ ೪ ॥**

ಅ ॥ ಸಾತ್ವಿಕಾಃ ಜನಾಃ=ಶಾಸ್ತ್ರವಿಧಾನವನ್ನು ತಿಳಿಯದವರಾದರೂ ಸಾತ್ವಿಕಶ್ರದ್ಧೆ ಮಾತ್ರ ಇರುವ ಜನರು, ದೇವಾನ್=ದೇವತೆಗಳನ್ನು, ಯಜಂತೇ=ಪೂಜಿಸುತ್ತಾರೆ. (ದೇವತೆಗಳನ್ನುದ್ದೇಶಿಸಿ ಯಾಗಾದಿಗಳನ್ನು ಮಾಡುತ್ತಾರೆ.) ರಾಜಸಾಃ=ಶಾಸ್ತ್ರವಿಧಾನವನ್ನು ತಿಳಿಯದ, ರಾಜಸ ಶ್ರದ್ಧೆಯುಳ್ಳವರು, ಯಕ್ಷರಕ್ಷಾಂಸಿ=ಯಕ್ಷರನ್ನೂ ರಾಕ್ಷಸರನ್ನೂ, ಯಜಂತೇ=ಪೂಜಿಸುತ್ತಾರೆ. ಅನ್ಯೇ=ಇತರರಾದ, ತಾಮಸಾ ಜನಾಃ=ಶಾಸ್ತ್ರವಿಧಾನವನ್ನು ತಿಳಿಯದ ತಾಮಸ ಶ್ರದ್ಧೆಯುಳ್ಳ ಜನರು, ಭೂತಾನ್=ಭೂತಗಳನ್ನೂ, ಪ್ರೇತಗಣಾಂಶ್ಚ=ಪ್ರೇತಗಳ ಸಮೂಹಗಳನ್ನೂ, ಯಜಂತೇ=ಪೂಜಿಸುತ್ತಾರೆ.

ವಿ ॥ ದೇವತೆಗಳನ್ನು ಪೂಜಿಸುವವರಿಗೆ ವಿಷ್ಣುಭಕ್ತ್ಯಾದಿಗಳು ಇದ್ದುದರಿಂದ ಮೋಕ್ಷವೇ ಫಲವು. ರಾಜಸರಿಗೆ ಪ್ರಸಿದ್ಧ ಸ್ವರ್ಗ ಪ್ರತಿನಿಧಿಯಾದ ಸಾಂಕಲ್ಪಿಕ ಸ್ವರ್ಗವೇ ಫಲವು. ತಾಮಸರಿಗಾದರೂ ಶಿವನ ಪರಿವಾರವಾದ ಭೂತಾದಿತ್ವ ಪ್ರಾಪ್ತಿಯು ಫಲವು. ॥ ೪ ॥

ಪೀ—ತಾಮಸರು ಭೂತಾದಿ ಸ್ವರೂಪವನ್ನು ಮಾತ್ರ ಹೊಂದುವುದಲ್ಲ, ಮತ್ತೆ ಅವರಿಗೆ ತಮಃಪ್ರಾಪ್ತಿಯೂ ಆಗುತ್ತದೆಂದು ೨ ಶ್ಲೋಕಗಳಿಂದ ಹೇಳುತ್ತಾರೆ—

**ಗೀ ॥ ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜನಾಃ ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ ೫ ॥**

ಅ ॥ ಯೇ ಜನಾಃ=ಯಾವ ಜನರು, ಅಶಾಸ್ತ್ರವಿಹಿತಂ=ಸಚ್ಛಾಸ್ತ್ರದಲ್ಲಿ ಹೇಳದೆ ಇದ್ದು ದುಶ್ಶಾಸ್ತ್ರಗಳಲ್ಲಿ ಹೇಳಲ್ಪಟ್ಟ, ಘೋರಂ=ಮಹಾಕಷ್ಟರೂಪವಾದ, ತಪಃ=ತಪಸ್ಸನ್ನು, ದಂಭಾಹಂಕಾರಸಂಯುಕ್ತಾಃ=ದಂಭ ಮತ್ತು ಅಹಂಕಾರ, ಇವುಗಳಿಂದ ಕೂಡಿದವರಾಗಿ, ಕಾಮರಾಗಬಲಾನ್ವಿತಾಃ=ಇಚ್ಛೆಯೂ, ಆಸಕ್ತಿಯೂ, ಆಗ್ರಹವೂ ಇವುಗಳಿಂದ ಕೂಡಿದವರಾಗಿ, ತಪ್ಯಂತೇ=ಮಾಡುತ್ತಾರೋ, (ಅಂತಹವರನ್ನು ಅಸುರರೆಂದು ತಿಳಿ.) ॥ ೫ ॥

ಭಾ ॥ ಕಃ ಸಾತ್ತ್ವಿಕಶ್ರದ್ಧ ಇತ್ಯಾದಿ ವಿಭಜ್ಯಾಹ । ಯಜಂತ ಇತ್ಯಾದಿನಾ ॥ ೪,೫ ॥

ಅ ॥ ಸಾತ್ವಿಕಶ್ರದ್ಧೆಯುಳ್ಳವನು ಯಾವನು? ಇತ್ಯಾದಿ ಪ್ರಕಾರ ವಿಚಾರ ಮಾಡಿದರೆ – ಯಜಂತೇ ಇತ್ಯಾದಿಗಳಿಂದ ಶ್ರದ್ಧಾಸ್ವರೂಪವನ್ನು ವಿಭಾಗಮಾಡಿ ಪ್ರತಿಜ್ಞಾತವಾದ ಶ್ರದ್ಧಾತ್ರೈವಿಧ್ಯವನ್ನೇ ಹೇಳುತ್ತಾರೆ. ॥ ೪,೫ ॥

**ಗೀ ॥ ಕರ್ಶಯಂತಃ ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾಂತಃಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್ ॥ ೬ ॥**

ಅ ॥ ಶರೀರಸ್ಥಂ=ದೇಹಗಳಲ್ಲಿ ನಿಯಾಮಕವಾಗಿರುವ, ಭೂತಗ್ರಾಮಂ=ಲಕ್ಷ್ಮ್ಯಾದಿ ದೇವತಾ ಸಮುದಾಯವನ್ನು, ಅಂತಃಶರೀರಸ್ಥಂ ಮಾಂ ಚೈವ=ಸರ್ವರ ಶರೀರದೊಳಗೆ ನಿಯಾಮಕನಾದ

...ನ್ನೂ ಕೂಡ, ಕರ್ಶಯಂತಃ=ಅಲ್ಪ ಗುಣಗಳುಳ್ಳವನೆಂದೂ ಅಥವಾ ನಿರ್ಗುಣನೆಂದೂ, ತಿಳಿ...ವವರು, ಅಚೇತಸಃ=ಅವಿವೇಕಿಗಳು, ತಾನ್=ಅಂತಹವರನ್ನು, ಆಸುರ ನಿಶ್ಚಯಾನ್ ಏವ=...ಯವಾಗಿಯೂ ಅಸುರರನ್ನಾಗಿಯೇ, ಅಸುರಸಂಬಂಧಿ ಶ್ರದ್ಧೆಯುಳ್ಳವರನ್ನಾಗಿಯೇ. ವಿದ್ಧಿ=ತಿಳಿ, ॥ ೬ ॥

ಟೀ—ಶ್ರದ್ಧಾಭೇದದಿಂದ ಸಾತ್ವಿಕಾದಿ ಭೇದವು ಅವರವರ ಸದಸತ್ಕರ್ಮಗಳ ಭೇದದಿಂದ ಸಾತ್ವಿಕಾದಿ ಸ್ವರೂಪಭೇದದಿಂದ ಯುಕ್ತವಾಗಿದೆಂದು ಹೇಳಿ ಈಗ ಆಹಾರಗಳ ಭೇದದಿಂದಲೂ ಆ ಸಾತ್ವಿಕಾದಿ ...ಕಾರ ಭೇದವನ್ನು ೭ ಶ್ಲೋಕಗಳಿಂದ ಹೇಳುತ್ತಾರೆ.

ಗೀ ॥ ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।
ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ ೭ ॥

ಅ ॥ ಸರ್ವಸ್ಯ=ಸಾತ್ವಿಕ, ರಾಜಸ ತಾಮಸ ಎಲ್ಲಾ ಜನರಿಗೂ, ಪ್ರಿಯಃ=ಪ್ರೀತಿವಿಷಯವಾದ, ಆಹಾರಸ್ತ್ವಪಿ=ಆಹಾರವೂ ಕೂಡ, ತ್ರಿವಿಧಃ=ಮೂರು ವಿಧವಾದುದು, ಭವತಿ=ಆಗುತ್ತದೆ. ತಥಾ=ಹಾಗೆಯೇ, ಯಜ್ಞಃ=ಯಾಗವೂ, ತಪಃ=ತಪಸ್ಸೂ, ದಾನಂ=ದಾನವೂ (ಮೂರು ವಿಧವು) ತೇಷಾಂ=ಆ ಆಹಾರಾದಿಗಳ, ಇಮಂ ಭೇದಂ=ಈ ಮುಂದೆ ಹೇಳುವ ಮೂರು ವಿಧ ಪ್ರಭೇದವನ್ನು, ಶೃಣು=ಕೇಳು,

ವಿ ॥ ಆಹಾರಭೇದವನ್ನು ಏಕೆ ಹೇಳುವುದೆಂದರೆ—ರಾಜಸ ಆಹಾರಗಳ ಸೇವನೆಯಿಂದ ಕೆಡುಕು ...ದೆ ಎಂದು ತಿಳಿದು ಅವುಗಳನ್ನು ಬಿಟ್ಟು ಸಾತ್ವಿಕ ಆಹಾರಗಳ ಸೇವನೆಯಿಂದ ಸತ್ವಗುಣವನ್ನು ವೃದ್ಧಿ ಮಾಡಿಕೊಂಡು ಜ್ಞಾನವೃದ್ಧಿಯನ್ನು ಮಾಡಿಕೊಳ್ಳಲಿ ಎಂಬುವುದಕ್ಕಾಗಿ ಆಹಾರಭೇದವನ್ನು ಹೇಳುವುದು. ॥ ೭ ॥

ಟೀ—ನಿರ್ವಿಕಾರನಾದ ಶ್ರೀಪರಮಾತ್ಮನಿಗೆ ಕೃಶತ್ವವು ಕೂಡುವುದು ಹೇಗೆಂದರೆ—

ಭಾ ॥ (೧) ಭಗವತ್ಕರ್ಶನಂ ನಾಮಾಲ್ಪತ್ವದೃಷ್ಟಿರೇವ ॥ (೨) ಯೋ ವೈ ಮಹಾಂತಂ ಪರಮಂ ಪುಮಾಂಸಂ ನೈವಂ ದ್ರಷ್ಟಾ ಕರ್ಶಕಃ ಸೋಽತಿಪಾಪೀತಿ ಹ್ಯನಘಮ್ಲಾನಶ್ರುತಿಃ ॥ (೩) ಆಸುರೋ ನಿಶ್ಚಯೋ ಯೇಷಾಂ ತ ಆಸುರನಿಶ್ಚಯಾಃ । ದೇವಾಸ್ತು ಸಾತ್ತ್ವಿಕಾಃ ಪ್ರೋಕ್ತಾ ದೈತ್ಯಾ ರಾಜಸತಾಮಸಾ ಇತಿ ಹ್ಯಾಗ್ನಿವೇಶ್ಯಶ್ರುತಿಃ ॥೬,೭॥

ಅ ॥ (೧) ಶ್ರೀಪರಮಾತ್ಮನನ್ನು ಕರ್ಶನ ಮಾಡುವುದೆಂದರೆ ಶ್ರೀಪರಮಾತ್ಮನು ಅಲ್ಪ ಗುಣಗಳುಳ್ಳವನು, ಗುಣಪರಿಪೂರ್ಣನಲ್ಲ, ಎಂದೂ ಮತ್ತು ಶ್ರೀಹರಿಯು ಜೀವರೂಪನು ಎಂದೂ ತಿಳಿದುಕೊಳ್ಳುವುದೇ. (೨) (ಹೀಗೆಯೇ ಅರ್ಥವನ್ನು ಮಾಡಬೇಕೆಂಬುವಲ್ಲಿ ಶ್ರುತಿಸಮ್ಮತಿಯನ್ನು ಹೇಳುತ್ತಾರೆ) ಯಾವನು ಬ್ರಹ್ಮಾದಿಗಳಿಂದುತ್ತಮನೂ ಲಕ್ಷ್ಮೀಪತಿಯೂ ಗುಣಪರಿಪೂರ್ಣನೂ ಆದ ಆ ಪುರುಷೋತ್ತಮನೆಂಬ ...ನಾದ ಶ್ರೀಪರಮಾತ್ಮನಿಗೆ ಉತ್ತಮತ್ವವಿಲ್ಲ ಗುಣಪರಿಪೂರ್ಣತ್ವವೂ ಇಲ್ಲವೆಂದು ಯಾವನು ತಿಳಿ... ...ನೋ ಅವನು ಶ್ರೀಪರಮಾತ್ಮನಿಗೆ ಅಲ್ಪ ಗುಣತ್ವವನ್ನು ಹೇಳುವುದರಿಂದ ಕರ್ಶಕನೆಂದೂ ... ...ಪಿಷ್ಠನು ಎಂದೂ ಅನಿಸಿಕೊಳ್ಳುತ್ತಾನೆಂದು ಅನಘಮ್ಲಾನ ಶ್ರುತಿಯು... (೩) ಅಸುರ ... ...ಯಾದ ಶ್ರದ್ಧೆಯು ಯಾರಿಗೆ ಇದೆಯೋ, ಅವರು ಅಸುರ ನಿಶ್ಚಯವುಳ್ಳವರು. (ಆಸುರ ನಿಶ್ಚಯಾನ್ ಎಂದು ಹೇಳಬೇಕಿತ್ತು. ಆಸುರನಿಶ್ಚಯಾನ್ ಏವ ... ಹೇಳಿದ್ದು ಹೇಗೆಂದರೆ) ...

ಗಳಿಂದ ಸಾತ್ವಿಕರೆಲ್ಲರೂ, ದೈತ್ಯಪರ್ಯಾಯ ಪದಗಳಿಂದ ರಾಜಸ ತಾಮಸರೂ ಹೇಳಲ್ಪಡುತ್ತಾರೆ, ಎಂದು ಅಗ್ನಿವೇಶ್ಯಶ್ರುತಿಯು. ॥ ೬, ೭ ॥

ಟೀ—ಈಗ ಮೂರು ಶ್ಲೋಕಗಳಿಂದ ಸಾತ್ವಿಕ, ರಾಜಸ, ತಾಮಸ ಆಹಾರಗಳ ಭೇದವನ್ನು ಹೇಳುತ್ತಾರೆ—

**ಗೀ ॥ ಆಯುಸ್ಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಃ ಸಾತ್ತ್ವಿಕಪ್ರಿಯಾಃ ॥ ೮ ॥**

ಅ ॥ ಆಯುಃ....ವಿವರ್ಧನಾಃ=ಆಯುಃ=(ಆಯುಷ್ಯವು) ಜೀವನವೂ, ಸತ್ತ್ವ=ಸಾತ್ವಿಕ ವಸ್ತುವಿನ ಸೇವನೆಯಿಂದ ಆಗುವ ಚಿತ್ತಶುದ್ಧಿಯಿಂದುಂಟಾಗುವ ಸಾಧುತನವೂ, ಬಲ=ಶಕ್ತಿಯೂ, ಆರೋಗ್ಯ=ರೋಗವಿಲ್ಲದಿರೋಣ, ಸುಖ=ಒಮ್ಮೆ ಸೇವಿಸಿದರೂ ಬಹುಕಾಲದವರೆಗೆ ಇರುವ ಸಂತೋಷವೂ. ಪ್ರೀತಿ=ಆ ವಸ್ತುವನ್ನು ಸೇವಿಸುವ ಕಾಲದಲ್ಲಿ ಮಾತ್ರ ಇರುವ ಸಂತೋಷವೂ, ಇವುಗಳನ್ನು ವಿವರ್ಧನಾಃ=ವಿಶೇಷವಾಗಿ ವೃದ್ಧಿಗೊಳಿಸುವ, ರಸ್ಯಾಃ=ರಸಯುಕ್ತಗಳಾದ, ಸ್ನಿಗ್ಧಾಃ=ಸ್ನೇಹವಿರುವ, ಸ್ಥಿರಾಃ=ಸೇವಿಸಿದ್ದರಿಂದ ಬಹುಕಾಲದವರೆಗೂ ಗುಣಗಳನ್ನು ಕೊಡುವ, ಆಜ್ಯ ಮೊದಲಾದವುಗಳು, ಹೃದ್ಯಾಃ=ಒಮ್ಮೆ ಸೇವಿಸಿದೊಡನೆ ಇನ್ನೂ ಇನ್ನೂ ಸೇವಿಸೋಣ ಎಂತ, ಮನೋರಂಜಕಗಳಾದ, ಆಹಾರಾಃ=ಇಂತಹ ಆಹಾರಗಳೆಲ್ಲವೂ, ಸಾತ್ವಿಕಪ್ರಿಯಾಃ=ಸತ್ವಗುಣವಿರುವವರಿಗೆ ಪ್ರೀತಿವಿಷಯಗಳು. ॥ ೮ ॥

**ಗೀ ॥ ಕಟ್ವಮ್ಲಲವಣಾತ್ಯುಷ್ಣತೀಕ್ಷ್ಣರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ ೯ ॥**

ಅ ॥ ಕಟ್ವಮ್ಲ....ವಿದಾಹಿನಃ=ಕಟು=ಅತಿಖಾರವಾದ ಮೆಣಸು ಮೊದಲಾದುದು, ಅಮ್ಲ=ಅತ್ಯಂತ ಹುಳಿಯಾದ ಜಂಬೀರ ರಸ ಮೊದಲಾದುದು, ಲವಣ=ಉಪ್ಪು, ಅತ್ಯುಷ್ಣ=ಬಹಳ ಸುಡುವ, ತೀಕ್ಷ್ಣ=ಅತಿ ತೀಕ್ಷ್ಣವಾದ ಸಾಸುವೆ ಮೊದಲಾದುದು, ರೂಕ್ಷ=ಸ್ವತಃ ಯಾವ ರಸವೂ ಇಲ್ಲದಿರುವುದು, ವಿದಾಹಿನಃ=ವಿಶೇಷತಃ ಸಂತಾಪವನ್ನುಂಟುಮಾಡುವ, ಸಾಸುವೆ, ಹಿಂಗು, ಶುಂಠಿ ಮೊದಲಾದ, ಆಹಾರಾಃ=ಈ ಆಹಾರ ಪದಾರ್ಥಗಳು, ದುಃಖಶೋಕಾಮಯಪ್ರದಾಃ=ಉಣ್ಣುವ ಕಾಲದಲ್ಲಿ ದುಃಖವನ್ನೂ, ಆ ಮೇಲೆ ಮನಸ್ಸಿನಲ್ಲಿ ಖೇದವನ್ನೂ, ರೋಗವನ್ನೂ, ಕೊಡುವುದಾದರೆ, ರಾಜಸಸ್ಯ=ರಾಜಸ ಸ್ವಭಾವವುಳ್ಳ ಪುರುಷನಿಗೆ, ಇಷ್ಟಾಃ=ಪ್ರೀತಿ ವಿಷಯಗಳಾದವುಗಳು. (ಕಟ್ವಾದಿ ಆಹಾರಗಳೂ ದುಃಖ ರೋಗಾದಿಗಳನ್ನು ಕೊಡದೆ ಆರೋಗ್ಯವನ್ನುಂಟು ಮಾಡಿದರೆ ಸಾತ್ವಿಕಗಳೆಂದೇ ತಿಳಿಯಬೇಕು.) ॥ ೯ ॥

**ಗೀ ॥ ಯಾತಯಾಮಂ ಗತರಸಂ ಪೂತಿಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಂ ॥ ೧೦ ॥**

ಅ ॥ ಯತ್ ಭೋಜನಂ=ಯಾವ ಭೋಜ್ಯವಾದ ವಸ್ತುವು, ಯಾತಯಾಮಂ=ಅಡಿಗೆ ಮಾಡಿದ ಮೇಲೆ ಒಂದು ಜಾಮ ವಿಾರಿದ್ದು, ಗತರಸಂ=ಮೊದಲು ಒಳ್ಳೇ ರಸವಿದ್ದುದಾಗಿ ಆ ಮೇಲೆ ಕೆಟ್ಟು ಹೋಗಿಯದೊ, (ಸ್ವಾದುತ್ವಾದಿಗಳು ಇಲ್ಲದಿದ್ದರು) ಪೂತಿ=ಹಳಸು ಮೊದಲಾದ ದುರ್ಗಂಧವ [illegible]

[illegible]ರ್ಯುಷಿತಂ ಚ=ಹಿಂದಿನ ದಿನದಲ್ಲಿ ಪಾಕಮಾಡಿದ್ದರಿಂದ ತಂಗಳಾದುದೋ, ಅಪಿ=ಮತ್ತು, ಉಚ್ಛಿಷ್ಟಂ=[illegible]ತ್ರೊಬ್ಬನು ಉಂಡು ಉಳಿದಿದು ಎಂಜಲಾದುದು, ಅಮೇಧ್ಯಂ=ಕ್ರಿಮಿ ಕೀಟಾದಿಗಳಿಂದ ಅಶುಚಿಯಾ[illegible]ದೋ, (ಅಂತಹ ಅಪವಿತ್ರವಾದ ಭೋಜ್ಯವಸ್ತುವು) ತಾಮಸಪ್ರಿಯಂ=ತಾಮಸ ಸ್ವಭಾವವುಳ್ಳ ಜನ[illegible] ಪ್ರಿಯವಾದುದು. ॥ ೧೦ ॥

ಟೀ—ಯಜ್ಞವು ಮೂರು ವಿಧವಾಗಿರುವುದರಿಂದ ಸಾತ್ವಿಕಾದಿಗಳ ಭೇದವನ್ನು ಹೇಳುತ್ತಾರೆ—

ಮೂ ॥ ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।
ಯಷ್ಟವ್ಯಮೇವೇತಿ ಮನಃ ಸಮಾಧಾಯ ಸ ಸಾತ್ತ್ವಿಕಃ ॥ ೧೧ ॥

ಟೀ ॥ ಅಫಲಾಕಾಂಕ್ಷಿಭಿಃ=ಯಾವದೊಂದು ಫಲವನ್ನು ಅಪೇಕ್ಷಿಸದಿರುವವರಿಂದ, ಯಃ ಯಜ್ಞಃ=[illegible]ವ ಯಜ್ಞವು, ವಿಧಿದೃಷ್ಟಃ=ವಿಧಾಯಕ ಶಾಸ್ತ್ರಜ್ಞಾನ ಪೂರ್ವಕವಾಗಿ, (ಮಂತ್ರ ಕ್ರಿಯಾದಿಗಳ ಲೋಪ[illegible]ದೆ) ಯಷ್ಟವ್ಯಮೇವೇತಿ=ಶಾಸ್ತ್ರಗಳಲ್ಲಿ ಅವಶ್ಯವಾಗಿ ಕರ್ತವ್ಯವೇ ಎಂದು ಹೇಳಿದುದರಿಂದ ಅವಶ್ಯ[illegible] ಮಾಡತಕ್ಕುದೇ ಎಂದು, ಮನಃ=ಮನಸ್ಸನ್ನು, ಸಮಾಧಾಯ=ಏಕಾಗ್ರತೆಯನ್ನು ಮಾಡಿ[illegible]ಜ್ಯತೇ=(ಸತ್ವ್ಯಾದಿಗಳಿಂದ ಇದು ಶ್ರೀಪರಮಾತ್ಮನ ಆರಾಧನವೇ ಎಂದು ತಿಳಿದು) ಮಾಡಲ್ಪಡು[illegible]ದೋ, ಸಃ=ಶಮದಮಾದಿಗುಣಗಳಿಂದ ಸಂಪನ್ನನಾಗಿ ಮಾಡುವ ಆ ಯಜ್ಞವು, ಸಾತ್ವಿಕಃ=ಸಾತ್ವಿಕ[illegible]ಜ್ಞವು. (ಎಂದು ಅನಿಸಿಕೊಳ್ಳುತ್ತದೆ.) ॥ ೧೧ ॥

ಮೂ ॥ ಅಭಿಸಂಧಾಯ ತು ಫಲಂ ದಂಭಾರ್ಥಮಪಿ ಚೈವ ಯತ್ ।
ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಂ ॥ ೧೨ ॥

ಟೀ ॥ ಭರತಶ್ರೇಷ್ಠ=ಅರ್ಜುನನೇ, ಫಲಂ=ಫಲವನ್ನು, ಅಭಿಸಂಧಾಯ ತು ಏವ=ಇಚ್ಛಿಸಿಕೊಂಡೇ [illegible]ದರೆ ನನಗೆ ಮಹಾಫಲವು ಸಿಗಲಿ, ಎಂದು ಇಚ್ಛಿಸುವವನಾಗಿಯೇ) ದಂಭಾರ್ಥಮಪಿ=ಲೋಕದಲ್ಲಿ [illegible]ನು ಮಹಾ ಪ್ರಖ್ಯಾತಿಯನ್ನು ಪಡೆಯುವೆನೆಂದು ತನಗೆ ಮಹತ್ತ್ವವನ್ನು ತೋರಿಸುವುದಕ್ಕಾಗಿಯೇ [illegible] ಇಜ್ಯತೇ=ಯಾವ ಯಜ್ಞವು ಮಾಡಲ್ಪಡುತ್ತದೋ, ತಂ ಯಜ್ಞಂ=[illegible] ಯಜ್ಞವನ್ನು, ರಾಜಸಂ=[illegible]ಜಸ ಯಜ್ಞವನ್ನಾಗಿ, ವಿದ್ಧಿ=ತಿಳಿದುಕೊಳ್ಳು. ॥ ೧೨ ॥

ಮೂ ॥ ವಿಧಿಹೀನಮಸೃಷ್ಟಾನ್ನಂ ಮಂತ್ರಹೀನಮದಕ್ಷಿಣಂ ।
ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ ೧೩ ॥

ಟೀ ॥ ವಿಧಿಹೀನಂ=ಶಾಸ್ತ್ರಗಳಲ್ಲಿ ಹೇಳಿದ ಪ್ರಕಾರ ಮಾಡದೆ ವಿರುದ್ಧವಾಗಿ ಮಾಡತಕ್ಕ [illegible] [illegible]ಬ್ರಾಹ್ಮಣಸಂತರ್ಪಣಾದಿರೂಪವಾದ ಅನ್ನದಾನವಿಲ್ಲದ, ಮಂತ್ರಹೀನ[illegible] ಯಾವ ಯಾವ ದೇವ[illegible] [illegible]ಗೆ ಯಾವ ಯಾವ ಮಂತ್ರಗಳಿಂದ ಹೋಮಾದಿಗಳನ್ನು ಮಾಡಬೇಕೆ[illegible] [illegible] [illegible]ಕ್ಷಿಣಂ=ದಾನದಕ್ಷಿಣಾದಿಗಳಿಲ್ಲದಿರುವ, ಶ್ರದ್ಧಾವಿರಹಿತಂ=[illegible] [illegible], ಯಜ್ಞಂ=ಯಜ್ಞವನ್ನು, ತಾಮಸಂ=[illegible] [illegible] ॥ ೧೩ ॥
[illegible]ತ್ತಾರೆ

ಟೀ — ಹಿಂದೆ ಪ್ರತಿಜ್ಞಾ ಮಾಡಿದ ತಪಸ್ಸಿನ ಪ್ರಭೇದದಿಂದ ಸಾತ್ವಿಕಾದಿ ಭೇದವನ್ನು ತಿಳಿಸುವುದಕ್ಕಾಗಿ ಶರೀರ, ವಾಕ್, ಮನಸ್ಸು ಈ ಮೂರು ಪ್ರಭೇದದಿಂದ ತಪಸ್ಸು ಮೂರು ವಿಧವೆಂದು ಹೇಳುತ್ತಾ ಪ್ರಥಮತಃ ಶಾರೀರಕ ತಪಸ್ಸನ್ನು ಹೇಳುತ್ತಾರೆ—

ಗೀ ॥ ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಂ ।
ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ ೧೪ ॥

ಅ ॥ ದೇವದ್ವಿಜಗುರುಪ್ರಾಜ್ಞಪೂಜನಂ — ದೇವತೆಗಳು, ಬ್ರಾಹ್ಮಣರು, ಗುರುಗಳು, ತತ್ವಜ್ಞರುಗಳು, ಇವರನ್ನು ಯಥಾಯೋಗ್ಯವಾಗಿ ಪೂಜಿಸುವುದು, ಶೌಚಂ — ಬಾಹ್ಯಾಭ್ಯಂತರ ಶುದ್ಧಿಯು, ಅಂದರೆ ಸ್ನಾನಾದಿರೂಪವಾದ ಬಾಹ್ಯಶುದ್ಧಿಯೂ, ಮನೋನೈರ್ಮಲ್ಯರೂಪ ಅಂತರಶುದ್ಧಿಯೂ, ಆರ್ಜವಂ = ಮನೋವಾಕ್ಕಾಯ ಕರ್ಮಗಳಲ್ಲಿ ವ್ಯತ್ಯಾಸವಿಲ್ಲದೆ ಒಂದೇ ರೀತಿಯಾಗಿರುವಿಕೆ, ಬ್ರಹ್ಮಚರ್ಯಂ = ಊರ್ಧ್ವರೇತಸ್ಕನಾಗಿ ಇರುವುದು, ಅಹಿಂಸಾ ಚ — ಪರರಿಗೆ ಹಿಂಸೆಯನ್ನುಂಟುಮಾಡದಿರುವುದು, (ಇವೆಲ್ಲವೂ) ಶಾರೀರಂ ತಪಃ = ಶರೀರ ಪ್ರಯಾಸದಿಂದ ಮಾಡಲ್ಪಡುವುದರಿಂದ ಶರೀರಸಂಬಂಧಿಯಾದ ತಪಸ್ಸೆಂದೂ, ಉಚ್ಯತೇ — ಹೇಳಲ್ಪಡುತ್ತದೆ ॥ ೧೪ ॥

ಟೀ — ವಾಚನಿಕ ತಪಸ್ಸನ್ನು ಹೇಳುತ್ತಾರೆ—

ಗೀ ॥ ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।
ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ ೧೫ ॥

ಅ ॥ ಅನುದ್ವೇಗಕರಂ — ಇತರರಿಗೆ ಕ್ರೋಧವನ್ನೂ ಭಯವನ್ನೂ ದುಃಖವನ್ನೂ ಹುಟ್ಟಿಸದಂತ, ಸತ್ಯಂ — ಯಥಾರ್ಥವಾದ, ಪ್ರಿಯಹಿತಂ ಚ = ಪ್ರಿಯ — ಕೇಳುವ ಕಾಲದಲ್ಲಿ ಮತ್ತು ಮತ್ತು ಕೇಳಬೇಕೆಂಬ ಇಚ್ಛೆಯನ್ನುಂಟುಮಾಡುವ, ಹಿತಂ ಚ = ಕೇಳಿದ ಮೇಲೆ ಕಡೆಗೂ ಬಹುಕಾಲಿಕ ಸುಖವನ್ನೇ ಉಂಟು ಮಾಡುತ್ತಿರುವುದೂ, ಯತ್ ವಾಕ್ಯಂ — ಇಂತಹುದು ಯಾವುದು ವಾಕ್ಯವಿದೆಯೋ, ಸ್ವಾಧ್ಯಾಯಾಭ್ಯಸನಂ ಚ — ಮತ್ತು ಮತ್ತು ವೇದಪಾರಾಯಣಾದಿಗಳು ಯಾವುವು ಇವೆಯೋ, (ಅವು ಕೂಡ) ವಾಙ್ಮಯಂ ತಪ ಎವ — ವಾಗಾತ್ಮಕವಾದ ತಪಸ್ಸು ಎಂದೇ, ಉಚ್ಯತೇ — ಹೇಳಲ್ಪಡುತ್ತದೆ ॥ ೧೫ ॥

ಟೀ — ಅನೇಕ ಶ್ಲೋಕದಲ್ಲಿದ್ದ ಪ್ರೀತಿ, ಹೃದ್ಯಾಃ ಈ ಶಬ್ದಗಳ ಅರ್ಥವನ್ನು ಹೇಳುತ್ತಾರೆ —

ಭಾ ॥ (೧) ಪ್ರೀತಿರಾನಂತರಿಕಾ । ಹೃದ್ಯತ್ವಂ ದರ್ಶನೇ ॥ (೨) ಸ್ಥಿರಾಶ್ಚ ನ ತದೈವ ಸರ್ವಾ ಭವಂತಿ । ತಥಾ ಹ್ಯಾಜ್ಯಾದಯಃ ॥ ೮ — ೧೫ ॥

ಅ ॥ (೧) ಪ್ರೀತಿಃ — ಉಪಭೋಗಿಸಿದ ತರುವಾಯ ಉಂಟಾಗುವ ಸುಖವು, ಹೃದ್ಯಾಃ — [illegible]ಸುವ ಕಾಲದಲ್ಲಿಯೂ ಕಾಲಾಂತರದಲ್ಲಿಯೂ ಮನೋರಂಜಕಗಳಾದ ವಸ್ತುಗಳು (೨) ([illegible] ಗಳೇ ಇಲ್ಲದಿರುವುದರಿಂದ ಸ್ಥಿರಾಃ ಎಂದು ವಿಶೇಷಣವು ಏತಕ್ಕೆ? ಎಂದರೆ —) ಯಾವ [illegible] ಸುವಕಾಲದಲ್ಲಿಯೇ ಸತ್ವಗಳಾಗದೆ ಆ ಮೇಲೆಯೂ ಬಹುಕಾಲದಲ್ಲಿ [illegible] [illegible] ತನ್ನವುಗಳೋ, ಅಂತಹ [illegible] [illegible] [illegible] [illegible]

ಟೀ—ಮಾನಸಿಕ ತಪಸ್ಸನ್ನು ಹೇಳುತ್ತಾರೆ—

ಗೀ ॥ ಮನಃಪ್ರಸಾದಃ ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।
ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ ೧೬ ॥

ಅ ॥ ಮನಃಪ್ರಸಾದಃ = ಪ್ರಯತ್ನ ಪಡದೇನೇ ಸ್ವತಏವ ವಿಷಯಗಳ ಕಡೆಗೆ ಮನಸ್ಸು ಹೋಗದಿರುವುದು (ಅಥವಾ ಕ್ರೋಧಾದಿಗಳಿಂದ ಕಲುಷಿತವಾಗದ ಮನಸ್ಸು,) ಸೌಮ್ಯತ್ವಂ = ಕಾರ್ಯವಿಲ್ಲದಿರುವುದು, ಮೌನಂ = ಸರ್ವಥಾ ಭಗವದ್ವಿಷಯಕ ಧ್ಯಾನವನ್ನು ಮಾಡುತ್ತಿರುವುದು, ಅಥವಾ ಸರ್ವದಾ ಶಾಸ್ತ್ರಾರ್ಥ ವಿಚಾರವು, ಆತ್ಮ ವಿನಿಗ್ರಹಃ = ಶ್ರೀಪರಮಾತ್ಮನಲ್ಲಿಯೇ ಸರ್ವದಾ ಮನಸ್ಸನ್ನು ವಿಶೇಷತಃ ಇರಿಸೋಣ, ಭಾವಸಂಶುದ್ಧಿಃ = ಅಂತಃಕರಣಶುದ್ಧಿಯು, (ಅನೇಕ ವಿಷಯಗಳಲ್ಲಿ ನಾನಾವಿಧವಾದ ಇಚ್ಛೆಯಿಲ್ಲದಿರುವುದು) ಇತ್ಯೇತತ್ = ಇವೆಲ್ಲವೂ, ಮಾನಸಂ ತಪಃ = ಮಾನಸ ತಪಸ್ಸೆಂದು, ಉಚ್ಯತೇ = ಹೇಳಲ್ಪಡುತ್ತದೆ. ॥ ೧೬ ॥

ಟೀ—ಸಾತ್ವಿಕ ಮೊದಲಾದ ತಪಸ್ಸುಗಳ ಭೇದದಿಂದ ಸಾತ್ವಿಕ ಮೊದಲಾದ ಜೀವರ ಭೇದವನ್ನು ೩ ಶ್ಲೋಕಗಳಿಂದ ಹೇಳುತ್ತಾರೆ—

ಗೀ ॥ ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।
ಅಫಲಾಕಾಂಕ್ಷಿಭಿರ್ಯುಕ್ತೈಃ ಸಾತ್ತ್ವಿಕಂ ಪರಿಚಕ್ಷತೇ ॥ ೧೭ ॥

ಅ ॥ ನರೈಃ = ಮನುಷ್ಯರಿಂದ, ತಪ್ತಂ = ಮಾಡಲ್ಪಟ್ಟ. ತಪಃ = ತಪಸ್ಸು, (ಯಾವುದಿದೆಯೋ.) ತತ್ = ಅದು, ತ್ರಿವಿಧಂ = ಸಾತ್ವಿಕ, ರಾಜಸ ತಾಮಸ ಎಂದು ಮೂರು ವಿಧವು. ಅಫಲಾಕಾಂಕ್ಷಿಭಿಃ = ಭಗವಂತನ ಪ್ರೀತಿವ್ಯತಿರಿಕ್ತವಾದ ಫಲೇಚ್ಛೆಯನ್ನು ತೋರಿದಿರುವ. ಯುಕ್ತೈಃ = ಭಗವಂತನಲ್ಲಿ ಅರ್ಪಣಾದಿ ರೂಪವಾದ ಯೋಗದಿಂದೊಡಗೂಡಿದ ಜನರಿಂದ. ಪರಯಾ = ಅತ್ಯುತ್ಕೃಷ್ಟವಾದ, ಶ್ರದ್ಧಯಾ = ಆಸ್ತಿಕ್ಯ ಬುದ್ಧಿಯಿಂದ, ತಪ್ತಂ = ಮಾಡಲ್ಪಟ್ಟ, ತಪಃ = ತಪಸ್ಸನ್ನು, ಸಾತ್ವಿಕಂ = ಸಾತ್ವಿಕವನ್ನಾಗಿ, ಪರಿಚಕ್ಷತೇ = ಹೇಳುತ್ತಾರೆ, (ಹಾಗೆ ತಪಸ್ಸು ಮಾಡುವವನು ಸಾತ್ವಿಕನು) ॥ ೧೭ ॥

ಗೀ ॥ ಸತ್ಕಾರಮಾನಪೂಜಾರ್ಥಂ ತಪೋ ದಂಭೇನ ಚೈವ ಯತ್ ।
ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಮ್ ॥ ೧೮ ॥

ಅ ॥ ಸತ್ಕಾರಮಾನ ಪೂಜಾರ್ಥಂ = ಮನಸ್ಸಿನಿಂದ ಮಾಡತಕ್ಕ ಆದರವೂ, ಮಾತುಗಳಿಂದ ಹೊಗಳುವದೂ. ಶರೀರದಿಂದ ನಮಸ್ಕಾರಾದಿಗಳಿಂದ ಪೂಜಿಸುವುದೂ ಇವುಗಳಿಗಾಗಿ, ದಂಭೇನ ಚ = ತನಗೆ ಮಹತ್ವವನ್ನು ತೋರಿಸುವ ನಿಮಿತ್ತವಾಗಿಯೇ, ಯತ್ ತಪಃ = ಯಾವ ತಪಸ್ಸು, ಇಹ ಈ ಲೋಕದಲ್ಲಿ, ಕ್ರಿಯತೇ = ಮಾಡಲ್ಪಡುತ್ತದೋ, ತತ್ = ಆ ತಪಸ್ಸು, ರಾಜಸಂ ರಾಜಸ ತಪಸ್ಸೆಂದೂ, ಪ್ರೋಕ್ತಂ = ಹೇಳಲ್ಪಡುತ್ತದೆ ತತ್ = ಆ ತಪಸ್ಸು (ನಿತ್ಯ ಸುಖವನ್ನು ಕೊಡತಕ್ಕದ್ದಲ್ಲ, ಮುಕ್ತಿ) ಚಲಂ ಅಲ್ಪಕಾಲಿಕ ಸುಖವನ್ನು ಕೊಡತಕ್ಕದ್ದು. ಅಧ್ರುವಂ = ನಾಶಹೊಂದತಕ್ಕದ್ದು (ಅಂತಹ ತಪಸ್ವಿಯು ರಾಜಸನು)

ಟೀ—ತಾಮಸ ತಪಸ್ಸನ್ನು ಹೇಳುತ್ತಾನೆ—

**ಗೀ ॥ ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಂ ॥ ೧೯ ॥**

ಅ ॥ ಮೂಢಗ್ರಾಹೇಣ = ಅವಿವೇಕದಿಂದುಂಟಾದ ದುರಾಗ್ರಹದಿಂದ, ಆತ್ಮನಃ = ತನ್ನ ದೇಹಕ್ಕೆ, ಪೀಡಯಾ = ದುಃಖಾದಿರೂಪವಾದ ಪೀಡೆಯನ್ನುಂಟುಮಾಡಿಕೊಂಡು, ವಾ = ಅಥವಾ, ಪರಸ್ಯ = ಶತ್ರುವನ್ನ, ಉತ್ಸಾದನಾರ್ಥಂ = ನಾಶಗೊಳಿಸುವುದಕ್ಕಾಗಿ, ಯತ್ತಪಃ = ಯಾವ ತಪಸ್ಸು, ಕ್ರಿಯತೇ = ಮಾಡಲ್ಪಡುತ್ತದೋ, ತತ್ = ಆ ತಪಸ್ಸು, ತಾಮಸಂ = ತಾಮಸ ತಪಸ್ಸೆಂದು, ಉದಾಹೃತಂ = ಹೇಳಲ್ಪಡುತ್ತದೆ. (ಹಾಗೆ ತಪಸ್ಸು ಮಾಡುವವನು ತಾಮಸ ತಪಸ್ವಿಯು.) ॥ ೧೯ ॥

ಟೀ—ಹಿಂದೆ ಪ್ರತಿಜ್ಞಾ ಮಾಡಿದ ಪ್ರಕಾರ ದಾನವು ಮೂರು ವಿಧವೆಂದು ಹೇಳಿ ಆ ದಾನಭೇದದಿಂದ ಸಾತ್ವಿಕಾದಿಗಳ ಭೇದವನ್ನು ಮೂರು ಶ್ಲೋಕಗಳಿಂದ ಹೇಳುವರು—

**ಗೀ ॥ ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಂ ॥ ೨೦ ॥**

ಅ ॥ ದಾತವ್ಯಮಿತಿ ಯದ್ದಾನಂ = ಅವಶ್ಯವಾಗಿ ಸತ್ಪಾತ್ರದಲ್ಲಿ ದಾನಮಾಡತಕ್ಕದೆಂಬುವ ಆಸ್ತಿಕ ಬುದ್ಧಿಯಿಂದ ಕೊಡಲ್ಪಡತಕ್ಕ ಯಾವ ವಸ್ತುವು, ದೇಶೇ = ಪುಣ್ಯಕ್ಷೇತ್ರದಲ್ಲಿ, ಕಾಲೇ = ಪುಣ್ಯಕಾಲದಲ್ಲಿ ಅನುಪಕಾರಿಣೇ = ತನಗೆ ಉಪಕಾರವನ್ನು ಮಾಡದಿರುವ (ಅಂದರೆ ಉಪಕಾರವನ್ನು ಮಾಡಿದವನೆಂದಾಗಲೀ ಮುಂದೆ ಮಾಡಿಯಾನೆಂದಾಗಲೀ ಇಚ್ಛೆ ಮಾಡದೇನೇ) ಪಾತ್ರೇ = ಸದಾಚಾರ ವಿದ್ಯಾದಿಗಳಿಂದ ಕೂಡಿರುವ ಯೋಗ್ಯ ಬ್ರಾಹ್ಮಣನಿಗೋಸ್ಕರ. ದೀಯತೇ = ಕೊಡಲ್ಪಡುತ್ತದೋ, ತದ್ದಾನಂ = ಆ ದಾನವು ಸಾತ್ವಿಕಂ ಸ್ಮೃತಂ = ಸಾತ್ವಿಕ ದಾನವು ಎಂದು ಹೇಳಲ್ಪಡುತ್ತದೆ. (ಹಾಗೆ ದಾನ ಮಾಡುವವನು ಸಾತ್ವಿಕನು) ॥ ೨೦ ॥

**ಗೀ ॥ ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ರಾಜಸಮುದಾಹೃತಂ ॥ ೨೧ ॥**

ಅ ॥ ಯತ್ತು = ಯಾವದಾನವು, ಪ್ರತ್ಯುಪಕಾರಾರ್ಥಂ = ನಾನು ಇವನಿಗೆ ದಾನಮಾಡಿದರೆ ಇವನು ನನಗೆ ಪ್ರತ್ಯುಪಕಾರವನ್ನು ಮಾಡಿಯಾನು ಎಂದು ಮನಸ್ಸಿನಲ್ಲಿ ಇಟ್ಟುಕೊಂಡು, ಪುನಃ = ಮತ್ತು, ಫಲಂ ಉದ್ದಿಶ್ಯ ವಾ = ಇತರ ಫಲವನ್ನು ಉದ್ದೇಶಮಾಡಿಕೊಂಡೇ, ಪರಿಕ್ಲಿಷ್ಟಂ = ಅನ್ಯಾಯಾರ್ಜಿತವಾದ ದ್ರವ್ಯದಿ, ದೀಯತೇ ಚ = ಕೊಡಲ್ಪಡುತ್ತದೋ, ತದ್ದಾನಂ = ಆ ದಾನವು, ರಾಜಸಂ ಸ್ಮೃತಂ = ರಾಜಸದಾನವೆಂದು ಹೇಳಲ್ಪಡುತ್ತದೆ (ಹಾಗೆ ದಾನಮಾಡುವವನು ರಾಜಸನು.) ॥ ೨೧ ॥

**ಗೀ ॥ ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಂ ॥ ೨೨ ॥**

ಅ॥ ಅದೇಶಕಾಲೇ=ಶಾಸ್ತ್ರದಲ್ಲಿ ನಿಷಿದ್ಧಗಳಾದ ದೇಶ ಕಾಲಗಳಲ್ಲಿ, ಅಪಾತ್ರೇಭ್ಯಶ್ಚ=ಸದ್ಗುಣಗಳು ಇಲ್ಲದೆ ದುರ್ಗುಣಗಳೇ ಇರುವವರಿಗೆ, ಅಸತ್ಕೃತಂ=ಕಾಯಿಕ ವಾಚನಿಕ ಮಾನಸಿಕ ನಮಸ್ಕಾರ ಮೊದಲಾದ ಸತ್ಕಾರಗಳಿಲ್ಲದ, ಅವಜ್ಞಾತಂ=ಅವಮಾನ ತಿರಸ್ಕಾರಗಳಿಂದ ಕೂಡಿದ, ಯದ್ದಾನಂ=ಯಾವ ದ್ರವ್ಯದಾನವೂ, ದೀಯತೇ=ಕೊಡಲ್ಪಡುತ್ತದೋ, ತತ್=ಆ ದಾನವು, ತಾಮಸಮಿತಿ=ತಾಮಸ ದಾನವೆಂದು, ಉದಾಹೃತಂ=ಹೇಳಲ್ಪಟ್ಟಿದೆ. (ಹಾಗೆ ದಾನಮಾಡುವವನು ತಾಮಸನು.) ॥ ೨೨ ॥

ಟೀ—ಸೌಮ್ಯತ್ವವೆಂದರೆ—ಸರ್ವಾಂಗ ಸೌಷ್ಠವವು, ಅಂದರೆ ಅಂಗಗಳು ಸರಿಯಾಗಿ ಇರುವುದು. ಇದನ್ನು ಮಾನಸ ತಪಸ್ಸೆಂದು ಹೇಳಿದ್ದು ಹೇಗೆ ಎಂದರೆ—

ಭಾ ॥ (೧) ಸೌಮ್ಯತ್ವಮಕ್ರೌರ್ಯಂ । ಅಕ್ರೂರಃ ಸೌಮ್ಯ ಉಚ್ಯತ ಇತ್ಯಭಿಧಾನಂ ॥ (೨) ಮೌನಂ ಮನನಶೀಲತ್ವಂ । ಬಾಲ್ಯಂ ಚ ಪಾಂಡಿತ್ಯಂ ಚ ನಿರ್ವಿದ್ಯಾಥ ಮುನಿರಿತಿ ಹಿ ಶ್ರುತಿಃ ॥ (೩) ಏತೇನ ಹೀದಂ ಸರ್ವಂ ಮತಂ ಯದನೇನ ಹೀದಂ ಸರ್ವಂ ಮತಂ ತಸ್ಮಾನ್ಮುನಿಸ್ತಸ್ಮಾನ್ಮುನಿರಿತ್ಯಾಚಕ್ಷತ ಇತಿ ಭಾಲ್ಲವೇಯಶ್ರುತಿಃ । ಕಥಂ ಚಾನ್ಯಥಾ ಮಾನಸಂ ತಪಃ ಸ್ಯಾತ್ ॥ ೧೬—೨೨ ॥

ಅ॥ (೧) ಸೌಮ್ಯತ್ವವೆಂದರೆ—ಅಕ್ರೌರ್ಯವು. ಕ್ರೂರನಾಗದಿದ್ದವನು ಸೌಮ್ಯನೆನಿಸುತ್ತಾನೆ, ಎಂದು ಅಭಿಧಾನವು. (೨) (ಮೌನವೆಂದರೆ—ಮಾತನಾಡದೆ ಇರುವುದು, ಎಂಬುವ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುತ್ತಾರೆ.) ಸರ್ವದಾ ಭಗವದ್ವಿಷಯಕ ಶಾಸ್ತ್ರಾದಿಗಳ ಯುಕ್ತ್ಯನುಸಂಧಾನ ಪೂರ್ವಕವಾದ ಮನನಶೀಲತ್ವವು. (ಈ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ.) ಯುಕ್ತಿಸಹಿತ ಜ್ಞಾನವನ್ನೂ ಆಗಮಜನ್ಯ ಜ್ಞಾನವನ್ನೂ ಹೊಂದಿ ಆ ಮೇಲೆ ಧ್ಯಾನಮಾಡುವ ಸ್ವಭಾವವುಳ್ಳವನಾಗುತ್ತಾನೆ. (ಆದಕಾರಣ ಆತನನ್ನು ಮುನಿ ಎಂದು ಹೇಳುತ್ತಾರೆ.) ಎಂದು ವೇದಪ್ರಮಾಣವು. (೩) ಈ ಜ್ಞಾನಿಯಿಂದ ಇವೆಲ್ಲವೂ ಮನನ ಮಾಡಲ್ಪಟ್ಟಿದೆ. ಯಾವ ಕಾರಣದಿಂದ ಜ್ಞಾನಿಯಿಂದ ಎಲ್ಲವೂ ಮನನ ಮಾಡಲ್ಪಟ್ಟಿದೋ, ಆದಕಾರಣ ಮುನಿ ಎಂದು ಹೇಳುತ್ತಾರೆ, ಎಂದು ಭಾಲ್ಲವೇಯ ಶ್ರುತಿಯು. (ಹಿಂದೆ ಹೇಳಿದ ಅರ್ಥವನ್ನು ಅಂಗೀಕರಿಸದಿದ್ದರೆ ಬಾಧಕವನ್ನು ಹೇಳುತ್ತಾರೆ.) ವಾಙ್ನಿಯಮವೇ ಮೌನ ಶಬ್ದಾರ್ಥವಾದರೆ ಮೌನವು ಮಾನಸ ತಪಸ್ಸು ಎಂದು ಹೇಳಿದ್ದು ಕೂಡದೆ ಹೋಗುವುದು. ॥ ೧೬—೨೨ ॥

ಟೀ—ಅಫಲಾಕಾಂಕ್ಷಿಭಿಃ (ಶ್ಲೋ. ೧೭) ಇದು ಮೊದಲಾದ ಶ್ಲೋಕಗಳಿಂದ ಯಜ್ಞ ತಪಸ್ಸು ದಾನಗಳಿಗೆ ಇವುಗಳಿಂದ ಸಾತ್ವಿಕತ್ವ ರಾಜಸತ್ವ ತಾಮಸತ್ವಗಳನ್ನುದ್ದೇಶಿಸಿ ಅವುಗಳಿಗೆ ಹೇತುಗಳಾದ ಕೆಲವು ಅಸಾಧಾರಣ ಧರ್ಮಗಳನ್ನು ಹೇಳಿರುತ್ತಾರೆ. ಈಗ ಯಜ್ಞ ದಾನ ತಪಸ್ಸುಗಳ ಸಾಧಾರಣ ಧರ್ಮಗಳನ್ನು ಹೇಳುವ ಉದ್ದೇಶ್ಯ ಪೂರ್ವಕರ ಅನೇಕ ಚರಿತ್ರೆಗಳನ್ನು ಅನುವಾದ ಮಾಡುತ್ತಾರೆ—

ಗೀ ॥ ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।
ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ ೨೩ ॥

ಅ॥ ಬ್ರಹ್ಮಣಃ=ಪರಬ್ರಹ್ಮನಿಗೆ, ಓಂ=ಬ್ರಹ್ಮಾದಿ ಸಮಸ್ತ ಜಗತ್ತು ಶ್ರೀಪರಮಾತ್ಮನನ್ನು ಆಶ್ರಯಿಸಿಕೊಂಡಿರುವುದರಿಂದ, ಅಥವಾ ಶ್ರೀಪರಮಾತ್ಮನು ಜಗತ್ತಿಗೆ ನಿಯಾಮಕನಾಗಿ ಪ್ರವೇಶಿಸಿಕೊಂಡಿ

ರುವುದರಿಂದ ಓಂ ಎಂದೂ, ತತ್=ಸರ್ವರಿಗೆ ಗೋಚರನಾಗದಿರುವುದರಿಂದ ಅಂದರೆ ವೇದಗಳಿಂದ ಮಾತ್ರ ತಿಳಿಯಲು ಶಕ್ಯನಾಗಿರುವುದರಿಂದ ತತ್ ಎಂದೂ, ಸದಿತಿ=ದೋಷಲೇಶರಹಿತನಾಗಿ ಸರ್ವ ಶ್ರೇಷ್ಠ ಗುಣಗಳಿಂದ ಪರಿಪೂರ್ಣನಾಗಿರುವುದರಿಂದ ಸತ್ ಎಂದೂ ಹೀಗೆ, ತ್ರಿವಿಧಃ=ಮೂರು ವಿಧವಾದ ನಿರ್ದೇಶಃ=ಹೆಸರು, ಸ್ಮೃತಃ=ಸ್ಮೃತ್ಯಾದಿಗಳಲ್ಲಿ ಪ್ರಸಿದ್ಧವಾಗಿದೆ. ತೇನ=ಆ ಪರಬ್ರಹ್ಮನಿಂದ (ತನ್ನ ಪೂಜಾದಿಗಳಿಂದ ಫಲಪ್ರಾಪ್ತಿಗಾಗಿ) ಪುರಾ=ಸೃಷ್ಟಿಯ ಆದಿಕಾಲದಲ್ಲಿ, ಬ್ರಾಹ್ಮಣಾಃ=ಬ್ರಾಹ್ಮಣರೂ, ವಿಹಿತಾಃ=ಸೃಷ್ಟಿಸಲ್ಪಟ್ಟಿರುವರು, ವೇದಾಶ್ಚ=ಋಗಾದಿ ವೇದಗಳು, ವಿಹಿತಾಃ=ಅಭಿವ್ಯಕ್ತಗೊಳಿಸಲ್ಪಟ್ಟವು, ಯಜ್ಞಾಶ್ಚ=ಯಾಗ ಮೊದಲಾದವುಗಳೂ, ವಿಹಿತಾಃ=ಸೃಷ್ಟಿಸಲ್ಪಟ್ಟವು. ॥ ೨೩ ॥

ಗೀ ॥ ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃಕ್ರಿಯಾಃ ।
ಪ್ರವರ್ತಂತೇ ವಿಧಾನೋಕ್ತಾಃ ಸತತಂ ಬ್ರಹ್ಮವಾದಿನಾಂ ॥ ೨೪ ॥

ಅ ॥ ತಸ್ಮಾತ್=ಓಂ ಎಂಬುದು ಭಗವಂತನ ನಾಮಧೇಯವಾದ ಕಾರಣ ಓಮಿತಿ ಉದಾಹೃತ್ಯ=ಓಂ ಎಂದು ಪ್ರಥಮತಃ ಉಚ್ಚಾರಣ ಮಾಡಿಕೊಂಡೇ, ಬ್ರಹ್ಮವಾದಿನಾಂ=ಪರಬ್ರಹ್ಮನೇ ಸರ್ವೋತ್ತಮನೆಂದು ಹೇಳುವ ಜ್ಞಾನಿಗಳ, ವಿಧಾನೋಕ್ತಾಃ=ಋಗಾದಿ ಶಾಸ್ತ್ರಗಳಲ್ಲಿ ಹೇಳಿರುವ, ಯಜ್ಞದಾನತಪಃಕ್ರಿಯಾಃ=ಯಜ್ಞದಾನ ತಪಸ್ಸುಗಳೆಂಬ ಕ್ರಿಯೆಗಳು, ಸತತಂ=ಯಾವಾಗಲೂ, ಪ್ರವರ್ತಂತೇ=ನಡೆಯುವವು.

ವಿ ॥ ಇದರಿಂದ ಓಂ ಎಂಬುದರ ಅರ್ಥವನ್ನು ತಿಳಿದುಕೊಂಡು ಓಂ ಎಂದು ಹೇಳಿ ಶಾಸ್ತ್ರಗಳಲ್ಲಿ ಹೇಳಿದ ಪ್ರಕಾರ ಬ್ರಾಹ್ಮಣರಿಂದ ಕೂಡಿಕೊಂಡು ಯಾಗಾದಿಗಳನ್ನು ಮಾಡುವುದು ಸಾತ್ವಿಕತ್ವಕ್ಕೆ ಹೇತುವು ಎಂದು ಹೇಳಿದಂತೆ ಆಯಿತು. ॥ ೨೪ ॥

ಭಾ ॥ (೧) ಪುನಶ್ಚ ಕರ್ಮಾದೀತಿಕರ್ತವ್ಯತಾವಿಧಾನಾರ್ಥಮರ್ಥವಾದಮಾಹ । ಓಂ ತತ್ಸದಿತ್ಯಾದಿನಾ ॥ (೨) ಪರಸ್ಯ ಬ್ರಹ್ಮಣೋ ಹ್ಯೇತಾನಿ ನಾಮಾನಿ । ಓತಂ ಜಗದ್ಯತ್ರ ಸ್ವಯಂ ಚ ಪೂರ್ಣೋ ವೇದೋಕ್ತರೂಪೋಽನುಪಚಾರತಶ್ಚ । ಸದ್ವೈ ಗುಣೈರ್ಮುಖ್ಯತಮೈಶ್ಚ ಯುಕ್ತೋ ನ ಚಾನ್ಯ್ಯತೋಽಂ ತತ್ಸದಿತ್ಯೇನಮತೋ ವದಂತೀತಿ ಹ್ಯೃಗ್ವೇದಖಿಲೇಷು । ದ್ವಿತೀಯಪಾದಸ್ತತ್ಪಬ್ದಾರ್ಥಃ ॥ (೩) ಸದೇವ ಸೋಮ್ಯೇದಮಗ್ರ ಆಸೀದಿತಿ ಚ ಓಮಿತಿ ಬ್ರಹ್ಮೇತಿ ಚ ॥ (೪) ತೇನ ಬ್ರಹ್ಮಣಾ । ಆತ್ಮಪೂಜಾರ್ಥಂ । ವೇದವಿಧ್ಯರ್ಥಂಜನಂ । ಮಾ ತೂಕ್ತಾ ಪುರಸ್ತಾತ್ ॥ ೨೩, ೨೪ ।

ಅ ॥ (೧) ಅಫಲಾಕಾಂಕ್ಷಿಭಿಃ ಇತ್ಯಾದಿಗಳಿಂದ ಯಜ್ಞ ದಾನ ತಪಸ್ಸುಗಳು ಸಾತ್ವಿಕ ರಾಜಸ ತಾಮಸಗಳಾಗಲಿಕ್ಕೆ ಹೇತುಗಳಾದ ಅಸಾಧಾರಣ ಧರ್ಮಗಳನ್ನು ಹೇಳಿದ್ದರೂ ತಿರುಗಿ ಸಾಧಾರಣ ಧರ್ಮಗಳನ್ನು ಹೇಳುವ ಉದ್ದಿಶ್ಯ ಯಜ್ಞ ತಪಸ್ಸು ದಾನ ಇವುಗಳನ್ನು ಹೀಗೆಯೇ ಮಾಡಬೇಕೆಂದು ಪ್ರತಿಪಾದಿಸುವುದಕ್ಕಾಗಿ ಓಂದಿಷವರೂ ಹೀಗೆ ಮಾಡಿದ್ದಾರೆ ಎಂಬುವ ಪುರಾಕಲ್ಪರೂಪ, ಮತ್ತು ಇನ್ನೊಬ್ಬರ ಕೃತಿ ಪುರಃಸರವೂ ಈ ಕರ್ಮ ಮಾಡಿದ್ದಾನೆಂದು ಹೇಳುವ ಪರಕೃತಿರೂಪ ಅರ್ಥವಾದವನ್ನು ಓಂ ತತ್ಸತ್ ಇತ್ಯಾದಿಗಳಿಂದ ಹೇಳುತ್ತಾರೆ (೨) (ಬ್ರಹ್ಮಶಬ್ದಕ್ಕೆ ಚತುರ್ಮುಖಾದಿರೂಪವಾದ ಅರ್ಥವು ... ಶಬ್ದಕ್ಕೆ ... ಉಚ್ಚಾರಣವು ಎಂಬುವ ಅರ್ಥವು, ಎಂಬುವುದು ಅಯುಕ್ತವೆಂದು ತೋರಿಸುವುದಕ್ಕೆ

…ಯೂದ ಅರ್ಥವನ್ನು ಹೇಳುತ್ತಾರೆ) ಓಂ ತತ್ ಸತ್ ಇವುಗಳು ಪರಬ್ರಹ್ಮನ ನಾಮಧೇಯಗಳೆಂದು ಪ್ರಸಿದ್ಧವೇ ಆಗಿದೆ. (ಪ್ರಸಿದ್ಧಿಯನ್ನು ತೋರಿಸುತ್ತಾರೆ.) ಯಾವ ಶ್ರೀಪರಮಾತ್ಮನಲ್ಲಿ ಸಮಸ್ತ ಜಗತ್ತು ಪ್ರವಿಷ್ಟವಾಗಿದೆಯೋ, ಆಶ್ರಿತವಾಗಿದೆಯೋ, ಶ್ರೀಹರಿಯು ತಾನೂ ಕೂಡ ಜಗತ್ತಿನಲ್ಲಿ ನಿಯಾಮಕನಾಗಿ ಪ್ರವಿಷ್ಟನಾಗಿದ್ದಾನೋ, (ಆದಕಾರಣ ಓಂ ಎಂದೂ) ಸರ್ವಗುಣಪರಿಪೂರ್ಣನೋ. (ಆದುದರಿಂದ ಸತ್ ಎಂದೂ) ಮುಖ್ಯ ವೃತ್ತಿಯಿಂದ ವೇದಗಳಲ್ಲಿ ಹೇಳಿದ ಜ್ಞಾನಾನಂದಾದಿ ಸ್ವರೂಪಪೂರ್ಣನೋ, ಎಲ್ಲಾ ಸದ್ಧರ್ಮಗಳಿಂದೊಡಗೂಡಿದವನೋ, ಅಶುಭಧರ್ಮವಿರಹಿತನೋ, (ಆದುದರಿಂದ ತತ್ ಎಂದೂ) ಆದುದರಿಂದ ಈ ಶ್ರೀಪರಮಾತ್ಮನು ಓಂ ತತ್ ಸತ್ ಎಂದು ಹೇಳುತ್ತಾರೆ. ಎಂದು ಋಗ್ವೇದಖಿಲಗಳಲ್ಲಿ ಹೇಳಿದೆ. ವೇದೋಕ್ತರೂಪಃ ಅನುಪಚಾರತಃ ಎಂಬೀ ೨ನೇ ಪಾದವು ತತ್ ಎಂಬುವ ಪದದ ವ್ಯಾಖ್ಯಾನರೂಪವು. ಅಂದರೆ—ಶ್ರೀಪರಮಾತ್ಮನು ಕೇವಲ ವೇದಗಳಿಂದಲೇ ತಿಳಿಯಲ್ಪಡತಕ್ಕವನು. ಶ್ರೀಹರಿಯು ದೃಗ್ಗೋಚರನಲ್ಲ. ನಿತ್ಯ ಪರೋಕ್ಷನು. ಇದು ತತ್ ಶಬ್ದದ ಅರ್ಥವು ಪರಬ್ರಹ್ಮಸ್ವರೂಪವನ್ನು ಊಹಿಸಲು ಶಕ್ಯವಲ್ಲ. ಆದಕಾರಣ ವೇದಗಳಿಂದಲೇ ವೇದ್ಯನಾಗಿರುವುದರಿಂದ ತತ್ ಎನಿಸುತ್ತಾನೆ.) (೩) (ಸತ್ ಓಂ ಎಂಬೀ ಎರಡು ಶಬ್ದಗಳು ಪರಬ್ರಹ್ಮನ ನಾಮಗಳು ಎಂಬುವಲ್ಲಿ ಶ್ರುತ್ಯಂತರವನ್ನು ಹೇಳುತ್ತಾರೆ.) ಸೋಮಪಾನಾರ್ಹನೇ ಪ್ರಲಯಕಾಲದಲ್ಲಿ ಸತ್ ಶಬ್ದವಾಚ್ಯನಾದ ಪರಬ್ರಹ್ಮನೇ ಇದ್ದನು. ಓಂ ಎಂಬುವ ಪದದಿಂದ ಪರಬ್ರಹ್ಮನು ಹೇಳಲ್ಪಡುತ್ತಾನೆ. (೪) ತೇನ=ನಾಮಧೇಯದಿಂದ ಎಂದು ಅರ್ಥ ಹೇಳಿದ್ದು ಅಯುಕ್ತವೆನ್ನುತ್ತಾರೆ) ತೇನ=ಪರಬ್ರಹ್ಮನಿಂದ ಬ್ರಾಹ್ಮಣಾದಿಗಳು ತನ್ನನ್ನು (ಶ್ರೀಪರಮಾತ್ಮನನ್ನು) ಪೂಜಿಸಿ ಸುಖವನ್ನು ಹೊಂದಲಿ, ಎಂದು ಶ್ರೀಪರಮಾತ್ಮನ ಪೂಜೆಯಿಂದ ಪ್ರಾಣಿಗಳಿಗೆ ಸುಖವುಂಟಾಗುವುದಕ್ಕಾಗಿ ಬ್ರಾಹ್ಮಣಾದಿಗಳನ್ನು ಸೃಷ್ಟಿಸಿರುವನು. (ಬ್ರಾಹ್ಮಣಾದಿಗಳಂತೆ ವೇದಗಳ ವಿಧಾನವೆಂದರೆ—ನಿರ್ಮಾಣವೇ ಎಂಬುವ ಪ್ರತೀತಿಯನ್ನು ಹೋಗಲಾಡಿಸುತ್ತಾರೆ.) ವೇದಗಳ ವಿಧಾನವೆಂದರೆ—ಇದ್ದ ವೇದಗಳನ್ನೇ ಅಭಿವ್ಯಕ್ತೀಕರಿಸುವುದು. (ಪ್ರಕಟೀಕರಿಸುವುದು.) ವೇದಗಳನ್ನು ಹುಟ್ಟಿಸುವುದಲ್ಲ. ವಿಹಿತಾಃ ಎಂಬುವ ಒಂದು ಶಬ್ದಕ್ಕೆ ಎರಡು ರೀತಿಯಾಗಿ ಅರ್ಥವನ್ನು ಹೇಳಿದ್ದು ಹೇಗೆಂದರೆ) ವೇದಗಳು ಅಪೌರುಷೇಯಗಳು. ಯಾರೂ ವೇದಗಳನ್ನು ಮಾಡಿಲ್ಲ. ಅನಾದಿನಿತ್ಯಗಳು, ಎಂಬುವಲ್ಲಿ ಪ್ರಮಾಣವು ಮೊದಲೇ ಹೇಳಲ್ಪಟ್ಟಿವೆ. (ಆದಕಾರಣ ವೇದಗಳು ಶ್ರೀಪರಮಾತ್ಮನಿಂದ ಅಭಿವ್ಯಕ್ತಗಳಾದವು ಎಂದು ಅರ್ಥವನ್ನು ಹೇಳಬೇಕು.) ॥ ೨೩, ೨೪ ॥

ಟೀ—ಯಜ್ಞಾದಿಗಳಿಗೆ ಸಾತ್ವಿಕತ್ವಾದಿಗಳು ಬರಲಿಕ್ಕೆ ಕಾರಣವನ್ನು ಹೇಳುತ್ತಾರೆ.

ಗೀ ॥ ತದಿತ್ಯನಭಿಸಂಧಾಯ ಫಲಂ ಯಜ್ಞತಪಃಕ್ರಿಯಾಃ ।
ದಾನಕ್ರಿಯಾಶ್ಚ ವಿವಿಧಾಃ ಕ್ರಿಯಂತೇ ಮೋಕ್ಷಕಾಂಕ್ಷಿಭಿಃ ॥ ೨೫ ॥

ಪ ॥ ತತ್ಫಲಂ=ಪರೋಕ್ಷವಾದ ವೇದೋಕ್ತವಾದ ನಶ್ವರ ಸ್ವರ್ಗಾದಿರೂಪ ಫಲವನ್ನು (ಸ್ವರ್ಗಾದಿಗಳು ತನಗೆ ಸಿಗಲಿ ಎಂದು) ಅನಭಿಸಂಧಾಯ=ಇಚ್ಛಿಸದೆ, ತದಿತಿ ಅಭಿಸಂಧಾಯ=ವೇದೈಕಗಮ್ಯನಾದ ಶ್ರೀಪರಮಾತ್ಮನನ್ನುದ್ದೇಶಿಸಿ ಶ್ರೀಹರಿಗೆ ಪ್ರೀತಿಯಾಗಬೇಕೆಂದು ಆತನನ್ನು ಸರ್ವದಾ ಸ್ಮರಿಸುತ್ತಾ, ಯಜ್ಞತಪಃಕ್ರಿಯಾಃ=ಜ್ಯೋತಿಷ್ಟೋಮಾದಿ ಯಜ್ಞ, ತಪೋರೂಪಕರ್ಮಗಳೂ. ವಿವಿಧಾಃ=ಭೂದಾನ ಮೊದಲಾದ ನಾನಾ ವಿಧಗಳಾದ, ದಾನಕ್ರಿಯಾಶ್ಚ=ದಾನರೂಪ ಕ್ರಿಯೆಗಳೂ ಕೂಡ, ಮೋಕ್ಷಕಾಂಕ್ಷಿಭಿಃ=ಮೋಕ್ಷೇಚ್ಛುಗಳಿಂದ, ಕ್ರಿಯಂತೇ=ಮಾಡಲ್ಪಡುತ್ತವೆ.

ತಾ ॥ ಇದರಿಂದ ತತ್ ಎಂಬುವ ಪದದಿಂದ ವಾಚ್ಯನಾದ ಪರಮಾತ್ಮನ ಪ್ರೀತಿಯನ್ನುದ್ದೇಶಿಸಿ, ಪರಮಾತ್ಮನ ಪ್ರೀತಿಯಿಂದ ಬೇರೆಯಾದ ಸ್ವರ್ಗಾದಿರೂಪ ಫಲದಲ್ಲಿ ಕಾಮನಾರಹಿತನಾಗಿ ಮಾಡುವ ಯಜ್ಞಾದಿರೂಪ ಧರ್ಮವೂ ಯಜ್ಞಾದಿಗಳೂ ಸಾತ್ವಿಕವಾಗಲಿಕ್ಕೆ ಕಾರಣವೆಂದೂ ಹೇಳಿದಂತೆಯೇ ಆಯಿತು.
॥ ೨೫ ॥

ಭಾ ॥ (೧) ತತ್ಫಲಂ ಮೇ ಸ್ಯಾದಿತ್ಯನಭಿಸಂಧಾಯ ॥ ೨೫ ॥

ಅ ॥ ವೇದಗಳಲ್ಲಿ ಹೇಳಿದ ಸ್ವರ್ಗಾದಿರೂಪ ನಶ್ವರ ಫಲವು ನನಗೆ ಆಗಲಿ, ಎಂದು ಇಚ್ಛಿಸದೆ (ಉದ್ದೇಶ ಮಾಡದೆ) ॥ ೨೫ ॥

ಪೀ—ಶ್ರೀಪರಮಾತ್ಮನು ಸಾಧುಗುಣಗಳಿಂದ ಯುಕ್ತನಾಗಿರುವುದರಿಂದ ಸತ್ ಶಬ್ದವಾಚ್ಯನು ಎಂಬೀ ಜ್ಞಾನಪೂರ್ವಕವಾಗಿ ಕರ್ಮಾನುಷ್ಠಾನವೂ ಕೂಡ ಯಜ್ಞಾದಿಗಳು ಸಾತ್ವಿಕವಾಗಲಿಕ್ಕೆ ಕಾರಣವೆಂಬುವ ಅಭಿಪ್ರಾಯದಿಂದ ಸತ್ ಶಬ್ದದ ಅರ್ಥವನ್ನು ಹೇಳುತ್ತಾರೆ—

ಗೀ ॥ ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।
ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ ೨೬ ॥

ಅ ॥ ಪಾರ್ಥ—ಅರ್ಜುನನೇ, ಏತತ್ ಸದಿತಿ—ಪರಬ್ರಹ್ಮನನ್ನು ಬೋಧಿಸುವ ಸತ್ ಎಂಬುವ ಶಬ್ದವು, ಸದ್ಭಾವೇ—ಮೊದಲು ಇಲ್ಲದಿರುವುದನ್ನು ಸೃಷ್ಟಿಸುವುದೆಂಬುವ ಅರ್ಥದಲ್ಲಿಯೂ, ಸಾಧುಭಾವೇ ಚ—ಸಾಧುತ್ವದಲ್ಲಿ (ಅಂದರೆ ಸಾಧುವಾದ ಗುಣವೆಂಬುವ ಅರ್ಥದಲ್ಲಿಯೂ,) ಪ್ರಯುಜ್ಯತೇ—ಪ್ರಯೋಗಿಸಲ್ಪಡುತ್ತದೆ. ತಥಾ—ಹಾಗೆಯೇ, ಸಚ್ಛಬ್ದಃ—ಸತ್ ಎಂಬುವ ಶಬ್ದವು. ಪ್ರಶಸ್ತೇ ಕರ್ಮಣಿ—ಯಾಗ ಮೊದಲಾದ ಶುಭಕರ್ಮದಲ್ಲಿಯೂ ಕೂಡ, ಯುಜ್ಯತೇ—ಪ್ರಯೋಗಿಸಲ್ಪಡುತ್ತದೆ. (ಏವಂಚ ಪರಬ್ರಹ್ಮ ವಿಷಯಕ ಜ್ಞಾನಭಕ್ತಿಪೂರ್ವಕವಾಗಿ ಆತನಲ್ಲಿಯೇ ಭಕ್ತಿಯಿಟ್ಟು ಫಲಾನುಸಂಧಾನವನ್ನು ತೊರೆದು ಶ್ರದ್ಧಾಪೂರ್ವಕವಾಗಿ ಮಾಡುವ ಯಾಗಾದಿಗಳು ಸಾತ್ವಿಕಗಳೆಂದೂ ಬೇರೆ ಎಲ್ಲವೂ ರಾಜಸ ತಾಮಸಗಳೆಂದೂ ಹೇಳಿದಂತೆ ಆಯಿತು. ॥ ೨೬ ॥

ಪೀ—ನಾನು ಸತ್ಕರ್ಮಗಳನ್ನು ಮಾಡಿ ಶ್ರೀಪರಮಾತ್ಮನಲ್ಲಿ ಸಮರ್ಪಿಸಿದರೆ ಶ್ರೀಹರಿಯು ಇಷ್ಟ ಫಲವನ್ನು ಕೊಡುತ್ತಾನೆ, ಎಂಬೀ ಆಸ್ತಿಕ್ಯ ಬುದ್ಧಿಯು ಸಾತ್ವಿಕತ್ವಕ್ಕೆ ಕಾರಣವು, ಎಂಬುವ ಅಭಿಪ್ರಾಯದಿಂದ ಆಸ್ತಿಕ್ಯಬುದ್ಧಿಯೂ ಸತ್ ಶಬ್ದಾರ್ಥವೆನ್ನುತ್ತಾರೆ—

ಗೀ ॥ ಯಜ್ಞೇ ತಪಸಿ ದಾನೇ ಚ ಸ್ಥಿತಿಃ ಸದಿತಿ ಚೋಚ್ಯತೇ ।
ಕರ್ಮ ಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ ೨೭ ॥

ಅ ॥ ಯಜ್ಞೇ—ಜ್ಯೋತಿಷ್ಟೋಮಾದಿ ಯಾಗದಲ್ಲಿಯೂ, ತಪಸಿ—ಕೃಚ್ಛ್ರ ಚಾಂದ್ರಾಯಣಾದಿ ತಪಸ್ಸಿನಲ್ಲಿಯೂ, ದಾನೇ ಚ—ಭೂಸುವರ್ಣದಾನದಲ್ಲಿಯೂ, ಸ್ಥಿತಿಃ—ಇರುವುದು, (ಅಂದರೆ—ಶ್ರೀಪರಮಾತ್ಮನು ನಾನು ಮಾಡಿದ ಈ ಕರ್ಮಗಳಿಂದ ಅವಶ್ಯವಾಗಿ ಫಲವನ್ನು ಕೊಡುತ್ತಾನೆಂಬುವ ಬುದ್ಧಿಯು) ಸದಿತಿ ಚ—ಸತ್ ಎಂಬುವ ಪದದಿಂದ, ಉಚ್ಯತೇ—ಹೇಳಲ್ಪಡುತ್ತದೆ ಚ—ಮತ್ತು, ತದರ್ಥೀಯಂ ಓಂ ತತ್ ಸತ್ ಎಂಬುವ ಪದಗಳಿಂದ ವಾಚ್ಯನಾದ ಪರಬ್ರಹ್ಮನಿಗೆ ಪ್ರೀತಿಕರವಾದ, ಕರ್ಮ ಚೈವ—ಕರ್ಮವೂ ಕೂಡ ಸದಿತ್ಯೇವ—ಸತ್ ಎಂದೇ ಅಭಿಧೀಯತೇ—ಹೇಳಲ್ಪಡುತ್ತದೆ. ॥ ೨೭ ॥

॥ ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।
ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥ ೨೮ ॥

ಅ॥ ಪಾರ್ಥ = ಅರ್ಜುನನೇ, ಅಶ್ರದ್ಧಯಾ = ಸರ್ವನಿಯಾಮಕ ಶ್ರೀಪರಮಾತ್ಮನು ಇದ್ದಾನೆ ...ದರೂಪವಾದ ಆಸ್ತಿಕ್ಯ ಬುದ್ಧಿಯಿಲ್ಲದೆ, ಯತ್ = ಯಾವುದು. ಹುತಂ = ಹೋಮಿಸಲ್ಪಡುತ್ತದೋ, ...ಂ = ದಾನ ಮಾಡಲ್ಪಡುತ್ತದೋ, ತಪಸ್ತಪ್ತಂ = ತಪಸ್ಸು ಮಾಡಲ್ಪಡುತ್ತದೋ, ಕೃತಂ ಚ = ಬೇರೆ ...ವುದು ಕರ್ಮವು ಮಾಡಲ್ಪಡುತ್ತದೋ, (ಅಂದರೆ — ಆಸ್ತಿಕ್ಯ ಬುದ್ಧಿಯಿಲ್ಲದೆ ಶಾಸ್ತ್ರಾನುಸಾರವಾಗಿ ...ಮಾದಿಗಳನ್ನು ಮಾಡಿದರೂ) (ಆ ಹೋಮ ಮೊದಲಾದುದೆಲ್ಲವೂ) ಅಸದಿತಿ = ಅಸತ್ ಎಂದೇ, ...ಚ್ಯತೇ = ಹೇಳಲ್ಪಡುತ್ತದೆ. ತತ್ = ಶ್ರದ್ಧೆಯಿಲ್ಲದೆ ಮಾಡಿದ ಹೋಮ ಮೊದಲಾದುದೆಲ್ಲವೂ, ಪ್ರೇತ್ಯ ...ಚ = ಮರಣಾನಂತರದಲ್ಲಿ ಸಿಗತಕ್ಕ ಸ್ವರ್ಗಾದಿರೂಪವಾದ ಪುರುಷಾರ್ಥವನ್ನು ಕೊಡತಕ್ಕುದಲ್ಲ. ಇಹ ನೋ = ಈ ಲೋಕದಲ್ಲಿಯೂ ಫಲವನ್ನು ಕೊಡತಕ್ಕುದಲ್ಲ. (ಅಂದರೆ ಇಂತಹುದು ಐಹಿಕ ಆಮು...ಕ ಪುರುಷಾರ್ಥಗಳಿಗೆ ಕಾರಣಗಳಾಗುವುದಿಲ್ಲ.)

ವಿ॥ (1) ಆದುದರಿಂದ ಭಗವದ್ವಿಷಯಕ ಆಸ್ತಿಕ್ಯಬುದ್ಧಿ ಭಕ್ತಿ ಇದೇ ಮೊದಲಾದ ಅಂಗಗಳಿಂದ ...ತ ಮಾಡಿದ ಹೋಮಾದಿಗಳೇ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಪುರುಷಾರ್ಥಗಳನ್ನು ...ತಕ್ಕವುಗಳು. ಆದಕಾರಣ ಶ್ರದ್ಧೆಯೇ ಫಲಪ್ರಾಪ್ತಿಯಲ್ಲಿ ಪ್ರಯೋಜಕವಾದುದರಿಂದ ತ್ರಿವಿಧಾ ...ವತಿ ಶ್ರದ್ಧಾ ಎಂದು ಪ್ರಧಾನವಾಗಿ ಹೇಳಿದ್ದಾರೆ. (2) ವಸ್ತುತಸ್ತು ಶ್ರದ್ಧೆಯಿಲ್ಲವಾದರೆ — ಶಾಸ್ತ್ರಾನು...ತ್ಪವೇ ಕೂಡಲಾರದು. ॥ ೨೮ ॥

॥ ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗ
ಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಶ್ರದ್ಧಾತ್ರಯವಿಭಾಗ
ಯೋಗೋನಾಮ ಸಪ್ತದಶೋಽಧ್ಯಾಯಃ ॥ ೧೭ ॥

ಅ॥ ಹೀಗೆ ಶ್ರೀಮದ್ಭಗವದ್ಗೀತೆಯಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಶ್ರದ್ಧಾತ್ರಯವಿಭಾಗಯೋಗವೆಂಬ ಹದಿನೇಳನೇ ಅಧ್ಯಾಯವು ಮುಗಿಯಿತು. ॥ ೧೭ ॥

ಪಾ॥ (೧) ಸದ್ಭಾವಶಬ್ದೇನ ಪ್ರಜನನಂ ಸೂಚಿತಂ ॥ (೨) ಓಮಿತ್ಯುಕ್ತ್ವಾಽನಭಿಸಂಧಾಯ ಫಲಂ ಯಜ್ಞದಾನತಪಆದಿಕೃತಾಮುತ್ರಿಕೇರ್ನಾಮ ಸಾಮ್ಯಾದ್ಬ್ರಹ್ಮೈವ ನಿಷ್ಪಾದಿತಂ ಭವತೀತ್ಯಾಶಯಃ ॥ (೩) ತಥಾಚ ಋಗ್ವೇದಖಿಲೇಷು । ಓಂ ಯಜ್ಞಾದ್ಯಾ ನಿಷ್ಫಲಂ ಕರ್ಮ ತಸ್ಮಾತ್ಸದ್ಭ್ಯ ತದರ್ಥಂ ಕರ್ಮ ವದಂತಿ ವೇದಾಃ । ತಚ್ಛಬ್ದಾನಾಂ ಸನ್ನಿಧೇಬ್ರಹ್ಮಶ್ರೀಕೇಸ್ತದ್ರೂಪಸತ್ವಾಜ್ಞನಿತಂ ಬ್ರಹ್ಮ ತಸ್ಯೇತಿ ॥೨೬,೨೭,೨೮॥

ಅ॥ (೧) ಸದ್ಭಾವ ಶಬ್ದದಿಂದ ಮೊದಲು ಇಲ್ಲದಿದ್ದುದಕ್ಕೆ ಸತ್ತೆ (ಇರುವಿಕೆ) ಯನ್ನು ಹೊಂದಿಸುವುದೆಂಬುವ ಅರ್ಥವು ಸೂಚಿತವಾಯಿತು. (ಪರಬ್ರಹ್ಮನು ಜಗದುತ್ಪಾದಕನೆಂಬುವ ಅರ್ಥವು ...ಕ್ಷಿತವಾದ ಪ್ರಯುಕ್ತ ಸತ್ತಾ ವಿಶೇಷರೂಪವಾದ ಉತ್ಪತ್ತಿಯನ್ನು ಇಲ್ಲಿ ಇಟ್ಟುಕೊಳ್ಳಬೇಕೆಂದು ತಿಳಿ...ತ್ತದೆ.) (೨) (ಯಜ್ಞಾದಿಗಳಿಗೆ ಸಾತ್ವಿಕತ್ವ ಫಲಪ್ರದಾನಾದಿಗಳಲ್ಲಿ ಸಹಕಾರಿ ಯಾವುದೆಂದರೆ —)

ಹಿಂದೆ ಹೇಳಿದ ಪ್ರಕಾರ ಓಂಕಾರಾರ್ಥವನ್ನು ತಿಳಿದುಕೊಂಡು ಓಂ ಎಂದು ಹೇಳಿಕೊಂಡು ಕರ್ಮಫಲದ ಇಚ್ಛೆಯನ್ನು ತೊರೆದು ಪರಬ್ರಹ್ಮನನ್ನು ಸರ್ವದಾ ಧ್ಯಾನಿಸಿಕೊಂಡು ಪರಬ್ರಹ್ಮವಿಷಯಕ ಜ್ಞಾನಭಕ್ತಿಪೂರ್ವಕವಾಗಿ ಪರಬ್ರಹ್ಮನಲ್ಲಿಯೇ ಆಸಕ್ತವಾದ ಬುದ್ಧಿಯಿಂದ ವೇದಾದಿ ಶಾಸ್ತ್ರಗಳಲ್ಲಿ ಹೇಳಿದ ಪ್ರಕಾರ ಸತ್ ವೈಷ್ಣವ ಬ್ರಾಹ್ಮಣರಿಂದ ಕೂಡಿಕೊಂಡು ಯೋಗ್ಯ ಅಧಿಕಾರಿಯಿಂದ ಮಾಡಲ್ಪಟ್ಟ ಯಜ್ಞದಾನ ತಪಸ್ಸು ಜಪ ಪೂಜಾದಿಗಳು ಶ್ರೀಪರಮಾತ್ಮನಿಗೆ ಅತಿ ಪ್ರೀತಿಕರಗಳಾಗಿರುವುದರಿಂದಲೂ ಯಜ್ಞಾದಿಗಳಿಗೆ ಪರಬ್ರಹ್ಮವಾಚಕವಾದ ಓಂ ತತ್ ಸತ್ ಎಂಬೀ ನಾಮಸಾಮ್ಯವು ಇರುವುದರಿಂದಲೂ ಇಂತಹ ಪರಬ್ರಹ್ಮನ ಪ್ರತಿಮಾ ಸ್ಥಾನೀಯವಾದ ಯಜ್ಞಾದಿಗಳನ್ನು ಮಾಡುವುದರಿಂದ ಶ್ರೀ ಪರಮಾತ್ಮನೇ ಯಜ್ಞಾದಿಗಳಲ್ಲಿ ಪ್ರತಿಷ್ಠಿಸಲ್ಪಡುತ್ತಾನೆಂದಭಿಪ್ರಾಯವು. (ಅಂದರೆ—ಇಂತಹ ಯಜ್ಞಾದಿಗಳೇ ಶ್ರೀಪರಮಾತ್ಮನಿಗೆ ಪ್ರೀತಿಕರಗಳೂ ಫಲಪ್ರದಗಳೂ ಆಗುವುವೆಂದು ತಾತ್ಪರ್ಯವು) (೩) (ಈ ವಿಷಯದಲ್ಲಿ ಶ್ರುತಿಸಮ್ಮತಿಯನ್ನು ಹೇಳುತ್ತಾರೆ.) ಓಂಕಾರವನ್ನುಚ್ಚರಿಸಿಕೊಂಡು ಇತರ ಫಲೋದ್ದೇಶವಿಲ್ಲದಿರುವುದರಿಂದ ಓಂಕಾರಪ್ರತಿಪಾದ್ಯನಾದ ಶ್ರೀಪರಮಾತ್ಮನ ಪ್ರೀತಿಗಾಗಿ ಮಾಡುವ ವೇದಪ್ರತಿಪಾದ್ಯ ಯಜ್ಞ ಮೊದಲಾದ ಕರ್ಮಗಳನ್ನು ಓಂ ತತ್ ಸತ್ ಎಂದು ಹೇಳುತ್ತಾರೆ. ಇವುಗಳನ್ನು ದೇವತೆಗಳು ಸಾತ್ವಿಕ ಕರ್ಮಗಳೆಂದು ಹೇಳುತ್ತಾರೆ. ಪರಬ್ರಹ್ಮ ಪ್ರತಿಪಾದಕಗಳಾದ ಓಮಾದಿಶಬ್ದಗಳು ಯಜ್ಞಾದಿಗಳನ್ನು ಹೇಳತಕ್ಕವುಗಳಾದುದರಿಂದ ಯಜ್ಞಾದಿಗಳಲ್ಲಿ ಭಗವತ್ಸನ್ನಿಧಾನವಿದ್ದುದರಿಂದ ಅವಗತವಾದ ಭಗವತ್ಪ್ರತಿಮಾತ್ವವು ಯಜ್ಞಾದಿಗಳಿಗೆ ಇರುವುದರಿಂದ ಪರಬ್ರಹ್ಮನಿಗೆ ಪ್ರೀತಿಯು ಯಜ್ಞಾದಿಗಳಿಂದ ಹುಟ್ಟುವುದರಿಂದ ಹಿಂದೆ ಹೇಳಿದಪ್ರಕಾರ ಯಜ್ಞಾದಿಗಳನ್ನು ಮಾಡುವವನಿಂದ ಪರಬ್ರಹ್ಮನು ಅಭಿವ್ಯಕ್ತನಾಗುತ್ತಾನೆ. ॥ ೨೬. ೨೭. ೨೮ ॥

ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ಸಪ್ತದಶೋಽಧ್ಯಾಯಃ ॥ ೧೭ ॥

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾಭಾಷ್ಯದಲ್ಲಿ ಹದಿನೇಳನೇ ಅಧ್ಯಾಯವು ಮುಗಿಯಿತು. ॥ ೧೭ ॥

ಪೀ— ಈ ಅಧ್ಯಾಯದಲ್ಲಿ ಹೇಳತಕ್ಕ ಅರ್ಥವನ್ನು ತೋರಿಸುತ್ತಾರೆ—

ತಾ ॥ ಓಂ ॥ (೧) ಸದಸತ್ಕರ್ಮವಿವೇಕಃ ॥ (೨) ಸತ್ತ್ವಾನುರೂಪಾ ಜೀವಾನುರೂಪಾ ।
ಅತೋ ಯೇ ಸಾತ್ವಿಕಶ್ರದ್ಧಾಸ್ತೇ ಸಾತ್ವಿಕಾ ಇತಿ ಜ್ಞೇಯಾ(ಜ್ಞಾಯಂತೇ) ಅನ್ಯೇಽನ್ಯ
ಇತಿ । ಶ್ರದ್ಧಾಮಯಃ ಶ್ರದ್ಧಾಸ್ವರೂಪಃ ॥ (೩) ಶ್ರದ್ಧಾಸ್ವರೂಪಂ ಜೀವಸ್ಯ ತಸ್ಮಾಚ್ಛ್ರ-
ದ್ಧಾವಿಭೇದತಃ । ಉತ್ತಮಾಧಮಮಧ್ಯಾಸ್ತು ಜೀವಾ ಜ್ಞೇಯಾಃ ಪೃಥಕ್ಪೃಥಕ್ ॥
(೪) ಸ್ವರೂಪಭೂತಾ ಶ್ರದ್ಧೈವ ತಮೋಗಾನಾಂ ವಿ(ಚ) ಮೋಕ್ಷಿಣಾಂ । ತ್ರಿಸೃತಿಃ
ಸಂಸೃತಿಸ್ಥಾನಾಂ ಶ್ರದ್ಧಾರೂಪಂ ಮನೋ ಪರಂ ॥ (೫) ತತ್ರ ಸ್ವರೂಪಶ್ರದ್ಧೈವ
ವ್ಯಜ್ಯತೇ ಪ್ರಾಯಶಃ ಕ್ವಚಿತ್ । ಸಾತ್ವಿಕಸ್ಯ ತಮೋರೂಪಾ ಶ್ರದ್ಧಾಂತಃಕರಣಾತ್ಮಿಕಾ ।
ಸಾತ್ವಿಕೇ ತಾಮಸಸ್ಯಾಪಿ ಭೂಯಸ್ತ್ವಾತ್ತದ್ವಿವಿಚ್ಯತೇ ॥ ೧ ॥

ಅ ॥ (೧) (ಸತ್ಕರ್ಮದಿಂದಲೇ ಮೋಕ್ಷವು ಸಿಗುವುದರಿಂದ ಅದನ್ನೇ ಅವಶ್ಯವಾಗಿ ಮಾಡಬೇಕು. ಅಸತ್ಕರ್ಮವು ಪುರುಷಾರ್ಥಕ್ಕೆ ವಿರೋಧಿಯಾಗಿರುವುದರಿಂದ ಅದನ್ನು ಮಾಡಬಾರದು. ಸದಸತ್ಕ

ಗಳನ್ನು ಸ್ಪಷ್ಟವಾಗಿ ತಿಳಿಯದೆ ಇದ್ದರೆ ಅವುಗಳ ಅನುಷ್ಠಾನ ತ್ಯಾಗಗಳು ಕೂಡದಿರುವುದರಿಂದ ಈ ಅಧ್ಯಾಯದಲ್ಲಿ) ಸತ್ಕರ್ಮ, ಅಸತ್ಕರ್ಮಗಳನ್ನು ವಿವರಿಸಿ ಹೇಳುತ್ತಾರೆ. (೨) (ಯೇ ಶಾಸ್ತ್ರವಿಧಿಮುತ್ಸೃಜ್ಯ (ಶ್ಲೋ. ೧) ಎಂಬುವಲ್ಲಿ ಸಾತ್ವಿಕರೋ, ರಾಜಸರೋ, ತಾಮಸರೋ ಎಂಬುವ ಪ್ರಶ್ನೆಗೆ ತ್ರಿವಿಧಾ ಭವತಿ (ಶ್ಲೋ. ೨) ಎಂಬುವುದರಿಂದ ಉತ್ತರವನ್ನು ಹೇಳುತ್ತಾರೆ. ಅದರಲ್ಲಿ ಶಾಸ್ತ್ರಗಳನ್ನು ತಿಳಿಯದೆ ಶಾಸ್ತ್ರವಿಧಿಯನ್ನು ಬಿಟ್ಟು ಯಜ್ಞ ಮಾಡುವುದು ಸಾತ್ವಿಕತ್ವಾದಿಗಳಿಗೆ ಜ್ಞಾಪಕವಲ್ಲ, ಮತ್ತೆ ಸಾತ್ವಿಕತ್ವಾದಿ ಭೇದದಿಂದ ಶ್ರದ್ಧೆಯು ಮೂರು ವಿಧವಾಗುತ್ತದೆ. ಅದರಲ್ಲಿ ಯಾವ ಯಜಮಾನನಿಗೆ ಶಾಸ್ತ್ರವಿಧಿಯ ಪರಿಜ್ಞಾನವಿಲ್ಲದಿದ್ದರೂ ಸಾತ್ವಿಕಶ್ರದ್ಧೆಯುಂಟೋ, ಆತನು ಸಾತ್ವಿಕನು. ರಾಜಸ ಶ್ರದ್ಧೆಯುಳ್ಳವನು ರಾಜಸನು, ತಾಮಸ ಶ್ರದ್ಧೆಯುಳ್ಳವನು ತಾಮಸನು. ಹೀಗೆ ಶ್ರದ್ಧಾವಿಭಾಗದಿಂದಲೇ ಸಾತ್ವಿಕತ್ವಾದಿಗಳನ್ನು ತಿಳಿಯಬೇಕೆಂದು ಹೇಳಿದ್ದನ್ನು ಪಪಾದಿಸುತ್ತಾರೆ.) ಸತ್ವಾನುರೂಪಾ—ಜೀವಸ್ವರೂಪಕ್ಕೆ ಅನುಗುಣವಾದುದು. ಆದಕಾರಣ ಯಾರು ಸಾತ್ವಿಕ ಶ್ರದ್ಧೆಯುಳ್ಳವರೋ, ಅವರು ಸಾತ್ವಿಕರೆಂದು ತಿಳಿಯತಕ್ಕದ್ದು. ರಾಜಸ ತಾಮಸ ಶ್ರದ್ಧೆಯುಳ್ಳವರು ರಾಜಸ ತಾಮಸರೆಂದು ತಿಳಿಯಬೇಕು. (೩) (ಅದರಲ್ಲಿ ಅಂತಃಕರಣದಲ್ಲಿರುವ ಶ್ರದ್ಧೆಯೂ ಇರುವುದರಿಂದ ಸ್ವರೂಪಭೂತವಾದ ಶ್ರದ್ಧೆಯನ್ನು ಬಿಡಿಸಿ ಹೇಳಲಿಕ್ಕೆ ಅಶಕ್ಯವಾಗಿರುವುದರಿಂದ ಆ ಸ್ವರೂಪಭೂತ ಶ್ರದ್ಧೆಯಿಂದ ಜೀವಸ್ವರೂಪ ಜ್ಞಾನವು ಹೇಗೆ ಬರುವುದು? ಮತ್ತು ಎಲ್ಲರೂ ದೇವತೆಗಳನ್ನುದ್ದೇಶಿಸಿ ಯಜ್ಞ ಮಾಡತಕ್ಕವರಾದುದರಿಂದ ಯಕ್ಷರಕ್ಷಾಂಸಿ ಎಂದದ್ದು ಹೇಗೆ? ಮತ್ತು ಸದಾ ಕೃಶನಾಗದೇನೇ ಇರುವ ಶ್ರೀಪರಮಾತ್ಮನನ್ನು ತಾಮಸರು ಕ್ಲೇಶಗೊಳಿಸುವುದು ಹೇಗೆ? ಇತ್ಯಾದಿ ಶಂಕೆಗಳನ್ನು ಪರಿಹರಿಸುವುದಕ್ಕಾಗಿ ಸತ್ವಾನುರೂಪಾ ಇತ್ಯಾದಿಗಳ ಅರ್ಥವನ್ನು ಪ್ರಮಾಣವಾಕ್ಯದಿಂದಲೇ ಹೇಳುತ್ತಾರೆ.) ಜೀವನಿಗೆ ಶ್ರದ್ಧೆಯು ಸ್ವರೂಪಭೂತವಾದುದು ಆದಕಾರಣ ಶ್ರದ್ಧೆಯ ವಿಭೇದದಿಂದ ಉತ್ತಮರು, ಮಧ್ಯಮರು, ಅಧಮರು ಎಂದು ಜೀವರನ್ನು ಪ್ರತ್ಯೇಕ ಪ್ರತ್ಯೇಕ ತಿಳಿಯಬೇಕು. (ಅಂದರೆ—ಸಾಂಸಾರಿಕ ಸತ್ವಾದಿ ಗುಣಕಾರ್ಯವಾದ ಶ್ರದ್ಧೆಯ ಭೇದದಿಂದ ಸ್ವರೂಪಶ್ರದ್ಧೆಯು ಅಭಿವ್ಯಕ್ತವಾಗುವುದರಿಂದ ಅವುಗಳಿಗೆ ಸಾತ್ವಿಕಾದಿತ್ವವನ್ನು ಹೇಳಿದ್ದು. ಆದ್ದರಿಂದಲೇ ಗುಣಗಳಿಗೆ ಭೇದವನ್ನು ಹೇಳುವ ಅಧ್ಯಾಯದಲ್ಲಿ ಸ್ವರೂಪಶ್ರದ್ಧೆಯ ಭೇದವನ್ನೂ, ಅದರಿಂದ ಉತ್ತಮ ಮಧ್ಯಮ ಅಧಮ ಜೀವರ ಸ್ವರೂಪಜ್ಞಾನವನ್ನೂ ಹೇಳಿದ್ದು ಯುಕ್ತವು.) (೪) (ಶ್ರದ್ಧೆಯು ಸ್ವರೂಪಭೂತವಾದುದು ಮಾತ್ರ ಇರುವುದೋ, ಬೇರೆಯೂ ಇದೆಯೋ ಎಂದರೆ) ತಮಸ್ಸಿನಲ್ಲಿರುವವರಿಗೂ ಮೋಕ್ಷದಲ್ಲಿರುವವರಿಗೂ ಸ್ವರೂಪಭೂತವಾದ ಶ್ರದ್ಧೆಯೇ ಉಳಿಯುತ್ತದೆ ಸಂಸಾರದಲ್ಲಿರುವ ಸಾತ್ವಿಕ ರಾಜಸ ತಾಮಸ ಜೀವರಿಗೆ ಸ್ವರೂಪದಿಂದ ಬೇರೆಯಾದ ಶ್ರದ್ಧೆಯನ್ನು ಹುಟ್ಟಿಸುವ ಮನಸ್ಸು ಇದೆ. (೫) (ಹಾಗಾದರೆ—ಸ್ವರೂಪಭೂತ ಶ್ರದ್ಧೆಯನ್ನೇ ತಿಳಿಯಲು ಅಶಕ್ಯವಾಗಿರುವುದರಿಂದ ಸ್ವರೂಪ ಶ್ರದ್ಧೆಯಿಂದ ಜೀವಸ್ವರೂಪವನ್ನು ತಿಳಿಯಲು ಸಾಧ್ಯವಿಲ್ಲ ಎಂದರೆ) ಸ್ವರೂಪ ಅಸ್ವರೂಪ ಶ್ರದ್ಧೆಗಳ ಮಧ್ಯದಲ್ಲಿ ಸ್ವರೂಪಭೂತವಾದ ಶ್ರದ್ಧೆಯೇ ಸ್ವರೂಪಭೂತವಾದ ಅಂತಃಕರಣದಲ್ಲಿ ಬಹುಕಾಲದಲ್ಲಿ ಅಭಿವ್ಯಕ್ತವಾಗುತ್ತದೆ. (ಅದನ್ನು ಪ್ರಕಟಿಸುವ ಅಂತಃಕರಣಾತ್ಮಕವಾದ ಶ್ರದ್ಧೆಯೂ ಪ್ರಾಯಶಃ ಉಂಟಾಗುತ್ತದೆ.) ಕೆಲವು ಕಡೆ ಸಾತ್ವಿಕನಿಗೆ ಅಂತಃಕರಣಪರಿಣಾಮರೂಪವಾದ, ಅತಏವ ಅಂತಃಕರಣವು ಸತ್ವರಜಸ್ತಮೋಗುಣಾತ್ಮಕವಾಗಿರುವುದರಿಂದ ತಮೋಗುಣದ ಕಾರ್ಯರೂಪವಾದ ಶ್ರದ್ಧೆಯುಂಟಾಗುತ್ತದೆ ಕ್ವಚಿತ್ ತಾಮಸನಿಗೂ ಕೂಡ ಅಂತಃಕರಣ ಪರಿಣಾಮರೂಪವಾದ ಸಾತ್ವಿಕ ಶ್ರದ್ಧೆಯುಂಟಾಗುತ್ತದೆ. ಹೀಗೆ ಸ್ವರೂಪ ಶ್ರದ್ಧೆಗೇನೆ ಆಧಿಕ್ಯದಿಂದ ಅಭಿವ್ಯಕ್ತಿಯಾಗುತ್ತದೆಂದು ತಿಳಿಯಲು ಶಕ್ಯವಾಗಿರುವುದರಿಂದ ಅಧಿಕವಾದ ಸ್ವರೂಪ ಶ್ರದ್ಧೆಯಿಂದ ಜೀವಸ್ವರೂಪವು ಪ್ರತ್ಯೇಕವಾಗಿ ತಿಳಿಯಲ್ಪಡುತ್ತದೆ. ॥ ೧ ॥

ಹೀ—ಶ್ರದ್ಧೆಯಿಂದ ಜೀವಸ್ವರೂಪವನ್ನು ತಿಳಿದುಕೊಳ್ಳುವುದು ಹೇಗೆಂದರೆ—

ತಾ ॥ (೧) ಶ್ರದ್ಧೇತ್ಯಾಸ್ತಿಕ್ಯನಿಷ್ಠೋಕ್ತಾ ಸಾ ಯೇಷಾಂ ದೇವತೋತ್ತಮೇ । ವಿಷ್ಣೌ ತದ್ಭ-
ಕ್ತಬುದ್ಧ್ಯೈವ ರಮಾಬ್ರಹ್ಮಾದಿಕೇಷು ಚ (ತು) । ತೇ ಸಾತ್ತ್ವಿಕಾ ಇತಿ ಜ್ಞೇಯಾಃ ॥
(೨) ತೈರಿಷ್ಟಂ ವಿಷ್ಣುರೇವ ತು । ಶ್ರೀಶ್ಚ ಸಾಽಧ್ಯಕ್ಷವಿದ್ಯಾಖ್ಯಾ ॥ (೩) ಬ್ರಹ್ಮೇಂದ್ರಾ-
ದ್ಯಾಶ್ಚ ದೇವತಾಃ । ವಿಬುಧತ್ವಾತ್ತು ಮನ್ವಾಖ್ಯಾ ಭುಂಜತೇ ಪ್ರೀತಿಪೂರ್ವಕಂ ॥
೪ ವ್ಯಾಮಿಶ್ರಯಾಜಿನೋ ಯೇ ತು ವಿಷ್ಣ್ವಾಧಿಕ್ಯೇ ಸಸಂಶಯಾಃ । ಸ್ವರೂಪ-
ಮಾತ್ರೇ ದೇವಾನಾಂ ಶ್ರದ್ಧಾಯುಕ್ತಾಶ್ಚ ಸರ್ವದಾ । ರಾಜಸಾಸ್ತೇ ತು ವಿಜ್ಞೇಯಾ-
ಸ್ತೈರಿಷ್ಟಂ ಯಕ್ಷರಾಕ್ಷಸಾಃ । ದೀನತ್ವಾದ್ದೇವನಾಮಾನೋ ಬ್ರಹ್ಮೇಂದ್ರಾದಿಸನಾ-
ಮಕಾಃ । ಗೃಹ್ಣಂತಿ ॥ (೫) ಯೋ ಹರಿಂ ತ್ವನ್ಯದೇವಾದಿಸಮಮೇವ ತು । ನೀಚಂ
ಬ್ರಹ್ಮಾದ್ಯನನ್ಯಂ ವಾ ಮನ್ಯಂತೇ ನೇತಿ ಚಾಖಿಲಂ । ತತ್ತಚ್ಛ್ರದ್ಧಾಯುತಾಸ್ತೇ ತು
ತಾಮಸಾಃ ಪರಿಕೀರ್ತಿತಾಃ । ಭೂತಪ್ರೇತಾಸ್ತು ತೈರಿಷ್ಟಂ ಶಿವಸ್ಕಂದಾದಿನಾಮಕಾಃ ।
ಸಾಕ್ಷಾಚ್ಛಿವಪರೀವಾರಾ ಭುಂಜತೇ ಹ್ಯತಿತಾಮಸಾಃ ॥ ೩ ॥

ಅ ॥ ಶ್ರದ್ಧಾ ಅಂದರೆ ಆಸ್ತಿಕ್ಯಬುದ್ಧಿಯು. ಅಂತಹ ಬುದ್ಧಿಯು ಯಾರಿಗೆ ಸರ್ವದೇವೋತ್ತಮನಾದ ಶ್ರೀವಿಷ್ಣುವಿನಲ್ಲಿಯೂ, ಶ್ರೀಪರಮಾತ್ಮನ ಭಕ್ತರೆಂಬುವ ಬುದ್ಧಿಯಿಂದಲೇ ರಮಾ ಬ್ರಹ್ಮಾದಿ ದೇವತೆಗಳಲ್ಲಿಯೂ ತಾರತಮ್ಯಾನುಸಾರವಾಗಿ ಇದೆಯೋ, ಅವರು ಸಾತ್ವಿಕರೆಂದು ತಿಳಿಯಬೇಕು. (೨) ಅಂತಹ ಸಾತ್ವಿಕರು ಶ್ರೀಪರಮಾತ್ಮನೇ ಸರ್ವ ಸ್ವತಂತ್ರನು, ಎಂಬೀ ಬುದ್ಧಿಪೂರ್ವಕವಾಗಿ ಹೋಮಿಸಿದ್ದನ್ನು ಶ್ರೀಪರಮಾತ್ಮನೇ ವಿಶೇಷಾಕಾರವಾಗಿ ಸಮಸ್ತ ವಿದ್ಯೆಗಳಿಗೆ ಅಧಿಪತಿಯಾಗಿರುವುದರಿಂದ ಸರ್ವರಿಗಿಂತ ಪ್ರಧಾನವಾಗಿ ಪ್ರೀತಿಪೂರ್ವಕವಾಗಿ ಸ್ವೀಕರಿಸುತ್ತಾನೆ. ಹಾಗೆಯೇ ಎಲ್ಲಾ ವಿದ್ಯೆಗಳನ್ನು ಪ್ರತ್ಯಕ್ಷೀಕರಿಸಿ ಕೊಂಡದ್ದರಿಂದ ಅಧ್ಯಕ್ಷವಿದ್ಯಾ ಎನಿಸಿಕೊಂಡ ಲಕ್ಷ್ಮೀದೇವಿಯೂ ಕೂಡ ಬ್ರಹ್ಮಾದಿಗಳಿಗಿಂತ ವಿಶೇಷವಾಗಿ ಅನುಭವಿಸುತ್ತಾಳೆ. (ಇದರಿಂದ ಯಜಂತೇ ಸಾತ್ವಿಕಾಃ (ಶ್ಲೋ. ೪) ಇತ್ಯಾದಿಗಳ ಅರ್ಥವು ಉಕ್ತವಾಯಿತು.) (೩) ವಿಶೇಷವಾಗಿ ತಿಳಿದವರಾದುದರಿಂದಲೇ ಮನು ಎಂದು ಹೆಸರುಳ್ಳ, ಬ್ರಹ್ಮೇಂದ್ರ ಮೊದಲಾದ ದೇವತೆಗಳು ಸಾತ್ವಿಕರು ಮಾಡಿದ ಯಜ್ಞಾದಿಗಳನ್ನು ಪ್ರೀತಿಪೂರ್ವಕವಾಗಿ, ಭೋಗಿಸುತ್ತಾರೆ. (೪) ಯಾರು ತಾರತಮ್ಯ ಕ್ರಮವನ್ನು ತಿಳಿದುಕೊಳ್ಳದೇನೇ ಯಜ್ಞ ಮಾಡುವವರೋ, ಶ್ರೀಹರಿಯು ಸರ್ವೋತ್ತಮನೆಂಬುವಲ್ಲಿ ಸಂಶಯಗ್ರಸ್ತರೋ, ಸರ್ವದಾ ದೇವತೆಗಳ ತಾರತಮ್ಯದಲ್ಲಿ ಶ್ರದ್ಧೆಯಿಲ್ಲದೆ ದೇವತೆಗಳ ಸ್ವರೂಪಮಾತ್ರದಲ್ಲಿ ಶ್ರದ್ಧೆಯುಳ್ಳವರೋ, ಅವರನ್ನು ರಾಜಸರೆಂದು ತಿಳಿಯಬೇಕು. ಅವರು ಹೋಮಿಸಿದ್ದನ್ನು ದುಃಖಯುಕ್ತರಾಗಿರುವುದರಿಂದ ದೇವ ಎಂದು ಹೆಸರುಳ್ಳ ಬ್ರಹ್ಮ ಇಂದ್ರ ಮೊದಲಾದ ಸಮಾನ ಹೆಸರುಳ್ಳ, ಯಕ್ಷರೂ ರಾಕ್ಷಸರೂ ಸ್ವೀಕರಿಸುತ್ತಾರೆ. (೫) ಯಾರು ಶ್ರೀಪರಮಾತ್ಮನು ಇತರ ದೇವಾದಿಗಳಿಗೆ ಸಮಾನನು, ಅವರಿಗಿಂತ ನೀಚನು ಬ್ರಹ್ಮಾದಿಗಳಿಗಿಂತ ಭಿನ್ನನಲ್ಲ, ಮತ್ತು ಜಗತ್ತು ಸದಸದ್ವಿಲಕ್ಷಣವು ಎಂದು ತಿಳಿಯುತ್ತಾರೋ, ಆಯಾಯ ಶ್ರದ್ಧೆಗಳಿಂದ ಕೂಡಿದ ಅಂತಹವರು ತಾಮಸರೆಂದು ಹೇಳಲ್ಪಡುತ್ತಾರೆ. ಅವರು ಹೋಮಿಸಿದ್ದನ್ನು ಸಾಕ್ಷಾತ್ ಶಿವನ ಪರಿವಾರ ಭೂತರಾದ ಶಿವ ಸ್ಕಂದ ಮೊದಲಾದ ಹೆಸರುಳ್ಳ ಭೂತ ಪ್ರೇತಗಳು ಭೋಗಿಸುತ್ತಾವೆ. ಅವರು ಅತಿ ತಾಮಸರು. ೩

ಟೀ - ಸಾತ್ವಿಕ ರಾಜಸ ತಾಮಸರು ಮಾಡಿದ ಯಜ್ಞಗಳಿಗೆ ಫಲವನ್ನು ಹೇಳುತ್ತಾರೆ—

ತಾ ॥ (೧) ಮೋಕ್ಷಃ ಸಾಂಕಲ್ಪಿಕಃ ಸ್ವರ್ಗೋ ಭೂತಾದಿತ್ವಂ ಫಲಂ ಕ್ರಮಾತ್ ॥ (೨) ಶಕ್ತ್ಯಾಽಪಿ ಶಾಸ್ತ್ರವಿಹಿತಂ ಮಿಥ್ಯಾಜ್ಞಾನವಿವರ್ಜಿತಾಃ । ಭಕ್ತ್ಯಾ ವಿಷ್ಣುಂ ಯಜಂತೋ ಯೇ ನಿಷಿದ್ಧಾಚರಣೋಜ್ಝಿತಾಃ । ತೇಽಪಿ ಯಾಂತಿ ಹರಿಂ ಶಾಸ್ತ್ರವಿಧಾನಜ್ಞಾಃ ಕುತಃ ಪುನಃ ॥ (೩) ಅಶಾಸ್ತ್ರವಿಹಿತಂ ಘೋರಂ ತಪ್ಯಂತೇ ಯೇ ತಪೋ ಜ(ಧ)ನಾಃ। ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ । ಅಶ್ರಾನಪಿ ಲಕ್ಷ್ಮ್ಯಾದೀನ್ದೇವಾನ್ವಿಷ್ಣುಪರಾಯಣಾನ್ । ವಿಷ್ಣುಂ ಚ ಸರ್ವದೇಹಸ್ಥಂ ಕೃಶತ್ವೇನ ವಿಜಾನತೇ । ತೇಷಾಮಲ್ಪಗುಣತ್ವೇನ ಕಲ್ಪನಾತ್ತೇ ತಮೋ ಧ್ರುವಂ । ಯಾಂತಿ ॥ (೪) ಜ್ಞೇಯಾಶ್ಚ ತೇ ದೈತ್ಯಾಃ ಪಿಶಾಚಾ ವಾಽಥ ರಾಕ್ಷಸಾಃ । ಅನ್ಯೈಶ್ಚಿಹ್ನೈರಥ ಯಜ್ಞಾದ್ಯೈಃ ಪ್ರಾಯೋ ಜ್ಞೇಯಾ ಇಮೇ ನರಾಃ ॥ ೩ ॥

ಅ ॥ (೧) ಸಾತ್ವಿಕರಿಗೆ ಮೋಕ್ಷವು, ರಾಜಸರಿಗೆ ಸ್ವರ್ಗಪ್ರತಿನಿಧಿಯಾಗಿ ಕಲ್ಪಿತವಾದ ಸಾಂಕಲ್ಪಿಕ ಸ್ವರ್ಗವು, ತಾಮಸರಿಗೆ ಭೂತಾದಿತ್ವಪ್ರಾಪ್ತಿಯು, ಹೀಗೆ ಕ್ರಮದಿಂದ ಫಲವುಂಟಾಗುವುದು. (೨) (ಹಿಂದೆ ಹೇಳಿದ ಪ್ರಕಾರ ಸಾತ್ವಿಕರು ಶಾಸ್ತ್ರವಿಧಿಯನ್ನು ತಿಳಿದಿದ್ದರೂ ತಿಳಿಯದಿದ್ದರೂ ಅಂತಹವರಿಗೆ ಮೋಕ್ಷವೇ ಲಭಿಸುತ್ತದೆ, ಎನ್ನುತ್ತಾರೆ.) ಯಾರು ಶಾಸ್ತ್ರದಲ್ಲಿ ವಿಹಿತವಾದುದನ್ನು ತಿಳಿಯದಿದ್ದರೂ ಮಿಥ್ಯಾಜ್ಞಾನರಹಿತರಾಗಿ ನಿಷಿದ್ಧ ಕರ್ಮಗಳನ್ನು ಮಾಡದೆ ಇದ್ದು ಭಕ್ತಿಯಿಂದ ಶ್ರೀವಿಷ್ಣುವನ್ನು ಪೂಜಿಸುತ್ತಾರೋ, ಅಂತಹವರೂ ಕೂಡ ಮೋಕ್ಷವನ್ನು ಹೊಂದುತ್ತಾರೆ. ಹೀಗಿರಲು ಶಾಸ್ತ್ರವಿಧಿಯನ್ನು ತಿಳಿದು ಶ್ರೀವಿಷ್ಣುವನ್ನು ಪೂಜಿಸುವವರು ಮೋಕ್ಷವನ್ನು ಹೊಂದುತ್ತಾರೆಂಬುವುದು ಸುತರಾಂ ಸಿದ್ಧವು. (೩) (ತಾಮಸರಿಗೆ ಭೂತಾದಿತ್ವಪ್ರಾಪ್ತಿಯು ಅವಾಂತರ ಫಲವೇ ಮುಖ್ಯವಾಗಿ ತಮಸ್ಸೇ ಫಲವು ಎಂಬುವುದನ್ನು ಉಪಪಾದಿಸುತ್ತಾರೆ) ಯಾವ ತಪೋಧನರು ದಂಭ ಅಹಂಕಾರಗಳಿಂದ ಕೂಡಿದವರಾಗಿ ಕಾಮ ರಾಗ ಬಲಗಳಿಂದ ಕೂಡಿದವರಾಗಿ ಶಾಸ್ತ್ರಗಳಲ್ಲಿ ವಿಹಿತವಾಗದಿರುವ ಭಯಂಕರ ತಪಸ್ಸನ್ನು ಮಾಡುತ್ತಾರೋ, ಶ್ರೀವಿಷ್ಣುವಿನಲ್ಲಿಯೇ ಆಸಕ್ತರಾದ ವಸ್ತುತಃ ಕೃಶರಾಗದೆ ಇದ್ದ ಲಕ್ಷ್ಮ್ಯಾದಿಗಳನ್ನು ಸಮಸ್ತಜೀವರ ದೇಹದಲ್ಲಿ ನಿಯಾಮಕನಾಗಿರುವ ಶ್ರೀವಿಷ್ಣುವನ್ನು (ನೀಚ) ಕೃಶರನ್ನಾಗಿ ತಿಳಿಯುತ್ತಾರೋ, ಅಂತಹವರು ಆ ಲಕ್ಷ್ಮ್ಯಾದಿ ದೇವತೆಗಳನ್ನು ಅಲ್ಪಗುಣಗಳುಳ್ಳವರೆಂದು ಹೇಳಿದ್ದರಿಂದ ನಿಶ್ಚಯವಾಗಿಯೂ ತಮಸನ್ನು ಹೊಂದುತ್ತಾರೆ. (೪) ಅಸುರಸ್ವಭಾವ ಶ್ರದ್ಧೆಯುಳ್ಳವರು ಅಂದರೆ ದೈತ್ಯರು ರಾಕ್ಷಸರು ಪಿಶಾಚರು ಮುಖ್ಯಾರ್ಥವು, ಹೀಗೆ ಬಾಲ್ಯರೂ ತಮೋಯೋಗ್ಯರು ತಿನ್ನುವ ಸಾತ್ವಿಕಾದ್ಯಾಹಾರ, ಸಾತ್ವಿಕಾದಿಯಜ್ಞ, ತಪಸ್ಸು ದಾನ, ಇವುಗಳಿಂದ ಈ ಜೀವರು ಸಾತ್ವಿಕರು, ಇತರರು ರಾಜಸರು, ತಾಮಸರು, ಎಂದು ತಿಳಿಯಬೇಕು.

ವಿ ॥ (1) ಜ್ಞೇಯಾಶ್ಚ ಎಂಬುವುದರಿಂದ ತಾನ್ವಿದ್ಧ್ಯಾಸುರನಿಶ್ಚಯಾನ್ (ಶ್ಲೋ. ೬.) ಎಂಬುವದರ ಅರ್ಥವೂ (2) ಅನ್ಯೈಶ್ಚಿಹ್ನೈ ಎಂಬುವುದರಿಂದ ಆಹಾರಸ್ತ್ವಪಿ (ಶ್ಲೋ. ೭)ರ ಅರ್ಥವು ಉಕ್ತವಾಯಿತು. ॥ ೩ ॥

ಟೀ ॥ ಶ್ರದ್ಧೆಯು ಜೀವರ ಸ್ವರೂಪವಾಗಿರುವುದರಿಂದ ಅದರಿಂದ ಸಾತ್ವಿಕಾದಿ ಜೀವರ ಸ್ವರೂಪಜ್ಞಾನವು ಕೂಡಬಹುದು. ಆಹಾರಾದಿಗಳಿಂದ ಜೀವಸ್ವರೂಪಜ್ಞಾನವು ಹೇಗೆ ಬರುವುದು? ಎಂದರೆ —

ತಾ ॥ (೧) ಸಾತ್ವಿಕಾಃ ಸಾತ್ವಿಕಾನ್ಯಾರ್ಯರ್ಯಸ್ಮಾದನ್ಯೇ ತಥೇತರಾನ್ ॥ (೨) ಓಂ ತತ್ಸದಿತಿ ಯದ್ವಿಷ್ಣೋರ್ನಾಮತ್ರಯಮುದಾಹೃತಂ । ಪ್ರಸಿದ್ಧಂ ವೈದಿಕಂ ॥ (೩)

**ತಸ್ಮಾತ್ಕರ್ಮ ತ(ಸ)ದ್ವಿಷಯಂ ಹಿ ಸತ್ ॥ (೪) ತತ್ರಾಶ್ರದ್ಧಾಕೃತಂ ತಸ್ಮಾದಸದಿತ್ಯೇವ ಕೀರ್ತ್ಯತೇ ॥ (೫) ವಿಪ್ರಾ ವೇದಾಶ್ಚ ಯಜ್ಞಾಶ್ಚ ಯಸ್ಮಾದೋಂತಾಃ ಪರಸ್ಪರಂ ।**
**ವಿಹಿತಾ ವಿಷ್ಣುನಾ ತೇನ ವಿಷ್ಣುರೋಮಿತಿ ಕೀರ್ತಿತಃ ॥ (೬) ಓತಮ(ತಂ ತ)ಸ್ಮಿನ್ನಿದಂ ಸರ್ವಮಿತಿ ಚೋಕ್ತಃ ಸ ಓಮಿತಿ । ತಸ್ಮಾದೋಮಿತಿ ಯಜ್ಞಾದೀನ್ಪ್ರವರ್ತಂತೇ ಹಿ ವೈದಿಕಾಃ ॥ ೯ ॥**

ಅ ॥ (೧) ಸಾತ್ವಿಕ ಜೀವರು ಸಾತ್ವಿಕ ಆಹಾರಾದಿಗಳನ್ನೂ ಹಾಗೆಯೇ ರಾಜಸರೂ ತಾಮಸರೂ ರಾಜಸ ತಾಮಸ ಆಹಾರಾದಿಗಳನ್ನೂ ಸ್ವೀಕರಿಸುವರು. (ಆದಕಾರಣ ಸಾತ್ವಿಕ ಅನ್ನಾದ್ಯಾಹಾರಗಳಿಂದಲೂ ಸಾತ್ವಿಕತ್ವಾ (ಉತ್ತಮತ್ವಾ)ದಿಗಳು ತಿಳಿಯಬಹುದು ಏವಂಚ ಅನ್ನಾದಿಗಳು ಜೀವರ ಸ್ವರೂಪಗಳಾಗಿದ್ದರೂ ಅನ್ನಾದಿಗಳ ಭೋಗಶಕ್ತಿಯೂ ಯಜ್ಞದಾನ ತಪೋರೂಪ ಪ್ರವೃತ್ತಿ ಶಕ್ತಿಯೂ ಜೀವರ ಸ್ವರೂಪಗಳಾಗಿರುವುದರಿಂದ ಸಾತ್ವಿಕಾದ್ಯನ್ನಾದ್ಯಾಹಾರಗಳಿಂದಲೂ, ಸಾತ್ವಿಕಾದಿ ಜೀವಸ್ವರೂಪಜ್ಞಾನವು ಬರಬಹುದು.) (೨) (ಯಜ್ಞ ದಾನ ತಪಸ್ಸುಗಳಿಗೆ ಸಾತ್ವಿಕತ್ವವು ಬರಲಿಕ್ಕೆ ಸಹ ಕಾರ್ಯಾಂತರವನ್ನು ತಿಳಿಸುವುದಕ್ಕಾಗಿ ಪುರಾಕಲ್ಪಾದಿರೂಪವಾದ ಅರ್ಥವಾದವನ್ನು ಹೇಳುತ್ತಾರೆ.) ಶ್ರೀವಿಷ್ಣುವಿಗೆ "**ಓಂ ತತ್ಸತ್ ಇತ್ಯೇನಮುಖೋ ವದಂತಿ**" ಎಂಬುವ ಋಗ್ವೇದಖಿಲದಲ್ಲಿ ಹೇಳಲ್ಪಟ್ಟ ಯಾವ ಓಂ **ತತ್ ಸತ್** ಎಂಬೀ ನಾಮತ್ರಯವು ಪ್ರಸಿದ್ಧವಾಗಿದೆಯೋ, ಅಂತಹ ನಾಮತ್ರಯವು (ಯಜ್ಞದಾನ ತಪಸ್ಸು ವೇದ ಬ್ರಾಹ್ಮಣಗಳಲ್ಲಿಯೂ) ಹೇಳಲ್ಪಟ್ಟಿದೆ (ಅಂದರೆ ಆ ನಾಮತ್ರಯವು ಯಜ್ಞಾದಿಗಳನ್ನೂ ಹೇಳುತ್ತದೆ.) (೩) (ಶ್ರೀವಿಷ್ಣುವಿಗೆ **ಸತ್** ಎಂಬುವ ಹೆಸರು ಹೇಗೆ? ಯಜ್ಞಾದಿಗಳಿಗೂ **ಸತ್** ಎಂಬುವ ಹೆಸರು ಹೇಗೆ? ಎಂದರೆ—) (**ಸತ್** ಶಬ್ದವಾಚ್ಯವಾದ ಆಸ್ತಿಕ್ಯಬುದ್ಧಿಪೂರ್ವಕವಾಗಿರುವುದರಿಂದಲೂ **ಸತ್** ಶಬ್ದದಿಂದ ಯಜ್ಞ ಮೊದಲಾದ ಕರ್ಮವು ಹೇಳಲ್ಪಡುತ್ತದೆ. ಮತ್ತು ಪರಮಾತ್ಮನನ್ನು ತೃಪ್ತಿಗೊಳಿಸುವುದಕ್ಕಾಗಿ ಮಾಡಿದ ಕರ್ಮವೂ ಕೂಡ **ಸತ್** ಎನಿಸುತ್ತದೆ. ಏವಂಚ ಯಾವ ಕಾರಣದಿಂದ ಶ್ರೀವಿಷ್ಣುವಿಗೆ **ಸತ್** ಎಂಬುವ ನಾಮಧೇಯವಿದೆಯೋ) ಆದುದರಿಂದ ಭಗವಚ್ಛ್ರದ್ಧಾಪೂರ್ವಕವಾಗಿ ಬ್ರಾಹ್ಮಣರಿಂದ ಮಾಡಲ್ಪಟ್ಟ ವೇದೋಕ್ತವಾದ **ಸತ್** ಎಂದು ಹೆಸರುಳ್ಳ ಭಗವದ್ವಿಷಯಕವೇ ಆದ ಕರ್ಮವೂ ಕೂಡ **ಸತ್** ಎಂದು ಹೇಳಲ್ಪಡುತ್ತದೆ. (೪) ಶ್ರೀವಿಷ್ಣುವಿನಲ್ಲಿ ಶ್ರದ್ಧೆಯಿಲ್ಲದೆ ಮಾಡಿದ ಹೋಮವೂ, ತಪಸ್ಸೂ ಜಪ ಮೊದಲಾದ ಕರ್ಮವೂ, ಎಲ್ಲವೂ **ಸತ್** ಎನಿಸಿದ ಭಗವಂತನಿಗೆ ಅಪ್ರಿಯವಾಗಿರುವುದರಿಂದಲೇ **ಅಸತ್** ಎಂದು ಹೇಳಲ್ಪಡುತ್ತದೆ (ಇದರಿಂದ **ಓಂ ತತ್ಸತ್** (ಶ್ಲೋ. ೨೩)ಕರ್ಮ ಚೈವ (ಶ್ಲೋ. ೨೮) ಇತ್ಯಾದಿ ಶ್ಲೋಕವು ವ್ಯಾಖ್ಯಾತವಾಯಿತು.) (೫) (ಶ್ರೀವಿಷ್ಣುವಿಗೂ, ಯಜ್ಞದಾನ ತಪಸ್ಸುಗಳಿಗೂ, ಅವುಗಳನ್ನು ಮಾಡುವ ಬ್ರಾಹ್ಮಣರಿಗೂ, ಅವುಗಳನ್ನು ವಿಧಿಸುವ ವೇದಗಳಿಗೂ **ಓಂ** ಎಂಬುವ ಹೆಸರು ಬರಲು ಕಾರಣವೇನ? ಎಂದರೆ) ಯಾವ ಕಾರಣದಿಂದ ಬ್ರಾಹ್ಮಣರೂ, ವೇದಗಳೂ, ಯಜ್ಞಗಳೂ ಪರಸ್ಪರವಾಗಿ ಶ್ರೀವಿಷ್ಣುವಿನಿಂದ ಸಂಬದ್ಧಗಳಾಗಿವೆಯೋ, ಆದುದರಿಂದ ಶ್ರೀವಿಷ್ಣುವು **ಓಂ** ಎಂದು ಹೇಳಲ್ಪಡುತ್ತಾನೆ. (ಅಂದರೆ—(1) ಬ್ರಾಹ್ಮಣರು (ವೇದಗಳನ್ನು ಅಧ್ಯಯನ ಮಾಡುವವರು. ಕರ್ಮಗಳನ್ನು ಮಾಡುವವರು.) (2) ವೇದಗಳು (ಅಧ್ಯಯನ ಮಾಡಲ್ಪಡತಕ್ಕವುಗಳು. ಕರ್ಮಗಳನ್ನು ಹೇಳುವವುಗಳು.) (3) ಕರ್ಮಗಳು (ವೇದೋಕ್ತಗಳು ಬ್ರಾಹ್ಮಣರಿಂದ ಮಾಡಲ್ಪಡತಕ್ಕವುಗಳು.) ಮತ್ತು ಆ ಬ್ರಾಹ್ಮಣಾದಿಗಳು ಯಾವ ಕಾರಣದಿಂದ ಶ್ರೀವಿಷ್ಣುವಿನಿಂದ ತನ್ನ ಪೂಜೆಗಾಗಿ ಸೃಷ್ಟರಾಗಿದ್ದಾರೋ ಆದುದರಿಂದ ಶ್ರೀಪರಮಾತ್ಮನಿಂದ ಸೃಷ್ಟಿಸಲ್ಪಟ್ಟವರಾದುದರಿಂದ ತನ್ನ ಪ್ರತಿಮಾರೂಪರಾದ ಬ್ರಾಹ್ಮಣಾದಿಗಳಲ್ಲಿ ಶ್ರೀವಿಷ್ಣುವು ಪ್ರವಿಷ್ಟನಾಗಿರುವ ಕಾರಣ **ಓಂ** ಎಂದು ಹೇಳಲ್ಪಡುತ್ತಾನೆ (೬) ಮತ್ತು ಸರ್ವ ಜಗತ್ತು ಶ್ರೀಪರಮಾತ್ಮನಲ್ಲಿ ಪ್ರವಿಷ್ಟವಾಗಿರುವುದರಿಂದ

ಶ್ರೀವಿಷ್ಣುವು ಓಂ ಎಂದು ಹೇಳಲ್ಪಡುತ್ತಾನೆ. ಹಿಗೆಯೇ ಬ್ರಾಹ್ಮಣಾದಿಗಳೂ ಹಿಂದೆ ಹೇಳಿದ ಪ್ರಕಾರ ತತ್ಪರವಾಗಿ ಶ್ರೀವಿಷ್ಣುವಿನಿಂದ ಆವಿಷ್ಕೃತರಾಗಿರುವುದರಿಂದಲೂ ಶ್ರೀವಿಷ್ಣುವಿಗೆ ಪ್ರತಿಮಾಸ್ಥಾನೀಯರಾಗಿರುವುದರಿಂದಲೂ ಅಮುಖ್ಯವಾಗಿ ಓಂ ಎಂದು ಹೇಳಲ್ಪಡುತ್ತಾರೆ. ಓಂಕಾರವು ಶ್ರೀಪರಮಾತ್ಮನ ನಾಮವಾಗಿರುವುದರಿಂದಲೂ, ಯಜ್ಞಾದಿಗಳ ನಾಮವಾಗಿರುವುದರಿಂದಲೂ ಯಜ್ಞಾದಿಗಳನ್ನು ಪ್ರಾರಂಭಿಸುವ ಕಾಲದಲ್ಲಿ ಓಂ ಎಂದು ಉಚ್ಚಾರಣಮಾಡಿ ಓಂಕಾರ ಪ್ರವೃತ್ತಿನಿಮಿತ್ತಗಳಾದ ಗುಣಗಳನ್ನು ಸ್ಮರಣಮಾಡುತ್ತಾ ಶ್ರೀಪರಮಾತ್ಮನ ನಾಮಭೂತವಾದ ಮತ್ತು ಬ್ರಾಹ್ಮಣ ವೇದ ದಾನ ತಪಸ್ಸುಗಳಿಗೂ ನಾಮಭೂತವಾದ ಓಂಕಾರವನ್ನುಚ್ಚಾರಣಮಾಡಿ ಓಂಕಾರದ ಅರ್ಥಭೂತನಾದ ಶ್ರೀಪರಮಾತ್ಮನ ಪ್ರೇರಣೆಯಿಂದ ಶ್ರೀಪರಮಾತ್ಮನ ಪ್ರೀತಿಗಾಗಿ ವೇದಗಳಲ್ಲಿ ಹೇಳಿದ ಪ್ರಕಾರ ಬ್ರಾಹ್ಮಣರಿಂದ ಕೂಡಿ ಭಗವಂತನಿಗೆ ಪ್ರತಿಮಾರೂಪವಾದ ಯಜ್ಞಾದಿಗಳನ್ನು ಕರಿಷ್ಯೇ=ಮಾಡುವೆನೆಂದು ಸಂಕಲ್ಪಮಾಡಿ ವೈದಿಕರು ಯಜ್ಞಾದಿಗಳನ್ನು ಪ್ರವರ್ತಿಸುತ್ತಾರೆ. (ಇದರಿಂದ ಬ್ರಾಹ್ಮಣಾಸ್ತೇನ ವೇದಾಶ್ಚ (ಶ್ಲೋ. ೨೩) ಯಜ್ಞಾದಿಗಳ ಅರ್ಥವು ಉಕ್ತವಾಯಿತು.) ॥ ೪ ॥

ಟೀ—ಭಗವನ್ನಾಮಗಳು ಬೇರೆಯೂ ಇದ್ದ ಪ್ರಯುಕ್ತ ಈ ಓಂಕಾರಾದಿಗಳನ್ನೇ ನಿಯಮೇನ ಸ್ಮರಿಸಬೇಕೆಂಬುವುದು ಹೇಗೆ ಎಂದರೆ—

**ಶ ॥ (೧) ಅನೋಂಕೃತಂ ಹ್ಯಾಸುರಂ ಸ್ಯಾದ್ಯತ್ರಸ್ಯಾದೋಂಕೃತಂ ತ್ವಪಿ । ಓಂಕಾರಾರ್ಥ-ಹರೇಃ ಸಮ್ಯಗಜ್ಞಾನಾದಾಸುರಂ ಭವೇತ್ ॥ (೨) ಫಲಂ ತ್ವನಭಿಸಂಧಾಯ ತದ್ಬ್ರಹ್ಮಸ್ಯಾನ್ಮಮಾಸ್ಪದಂ । ಇತಿ ಯತ್ಕ್ರಿಯತೇ ಕರ್ಮ ತನ್ನಾಮಾತೋ ಜನಾರ್ದನಃ । ಅಭಿಸಂಧಿತಂ ಹಿ ತತ್ಪ್ರೋಕ್ತಂ ತತಂ ವಾ ಸ್ವಗುಣೈಃ ಸದೇಶಾದಿ ಚ ॥ (೩) ಮಾಯಃ ಪ್ರಧಾನಮುದ್ದಿಷ್ಟಂ ಸ್ವರೂಪಂ ಕಾರ್ಯಮೇವ ಚೇತಿ ಶಬ್ದನಿರ್ಣಯೇ ॥ ೫ ॥**

ಅ ॥ (೧) ಯಾವ ಕಾರಣದಿಂದ ಆದಿಯಲ್ಲಿ ಓಂಕಾರೋಚ್ಚಾರಣವಿಲ್ಲದೆ ಮಾಡಿದ ಕರ್ಮವು ಅಸುರಭೋಗ್ಯವಾಗುವದೋ, ಮತ್ತು ಓಂಕಾರದ ಅರ್ಥಭೂತನು ಶ್ರೀಹರಿಯು, ಎಂದು ಚೆನ್ನಾಗಿ ತಿಳಿಯದೆ ಓಂಕಾರವನ್ನುಚ್ಚಾರಣ ಮಾಡಿಕೊಂಡು ಮಾಡಿದ ಕರ್ಮವೂ ಅಸುರಭೋಗ್ಯವೇ ಆಗುವದೋ, ಆದಕಾರಣ ಅರ್ಥಜ್ಞಾನಪೂರ್ವಕವಾಗಿ ಓಂ ಎಂದು ಉಚ್ಚಾರಣ ಮಾಡಿಕೊಂಡು (ವೈದಿಕರು ಯಜ್ಞಾದಿಗಳನ್ನು ಮಾಡುತ್ತಾರೆ.) (೨) (ಶ್ರೀವಿಷ್ಣುವಿಗೂ ಯಜ್ಞಾದಿಗಳಿಗೂ ತತ್ ಎಂಬುವ ನಾಮವು ಹೇಗೆ ಎಂದರೆ) ವೇದದಿಂದ ಹೇಳಲ್ಪಟ್ಟ ಯಜ್ಞಾದಿಗಳಿಂದ ಸ್ವರ್ಗಾದಿರೂಪವಾದ ಅಸಾರಫಲವು ವೇದದಲ್ಲಿ ಹೇಳಲ್ಪಟ್ಟ ಪರಬ್ರಹ್ಮನನ್ನು ತಿಳಿದುಕೊಳ್ಳುವ ಯೋಗ್ಯತೆಯಿರುವ ನನಗೆ ಆಗಲಿ ಎಂದು ಆಲೋಚಿಸದೆ, ಆ ಪರಬ್ರಹ್ಮನು ನನಗೆ ಮುಕ್ತಿಪ್ರದನಾಗಲಿ ಎಂದು ಪ್ರಾರ್ಥಿಸುತ್ತಾ (ಮೋಕ್ಷಾಪೇಕ್ಷೆಗಳಾದ ಬ್ರಾಹ್ಮಣರಿಂದ ಯಜ್ಞವು ಮಾಡಲ್ಪಡುತ್ತದೋ, ಆದಕಾರಣ ಮಂತ್ರಸಹಿತವಾಗಿ ಅಧಿಕಾರಸಹಿತವಾಗಿ ಸ್ವರ್ಗಾದಿ ಫಲವನ್ನು ದ್ವೇಶಿಸದೆ ಕೇವಲ ಮೋಕ್ಷವನ್ನು ದ್ವೇಶಿಸಿಕೊಂಡಿರತಕ್ಕ ಕರ್ಮವು. ಆದಕಾರಣ ಜನಾರ್ದನನಾದರೂ ಮುಖ್ಯವಾಗಿ ತತ್ ಎಂದು ನಾಮವುಳ್ಳವನು. ಮತ್ತು ಯಾವ ಕಾರಣದಿಂದ ಬುದ್ಧಿಯಲ್ಲಿ ಆರೂಢವಾದುದು ತತ್ ಎನ್ನುವುದರಿಂದ ಹೇಳಲ್ಪಟ್ಟದೋ, ಪರಬ್ರಹ್ಮನು ಸಂಸಾರಮೋಚಕನಾದುದರಿಂದ ಭಗವತ್ಪ್ರಸಾದವನ್ನು ಅಪೇಕ್ಷಿಸುವವರಿಂದ ನಿತ್ಯದಲ್ಲಿಯೂ ಪ್ರಾರ್ಥಿತನಾಗುತ್ತಾನೋ, ಸರ್ವದೇಶಗಳಲ್ಲಿ ವ್ಯಾಪ್ತನೋ, ಸರ್ವ ಕಾಲಗಳಲ್ಲಿಯೂ ಇರುವವನೋ, ಸರ್ವಗುಣಪರಿಪೂರ್ಣನೋ ಆದಕಾರಣ ಜನಾರ್ದನನು ತತ್ ಎಂದು ಹೆಸರುಳ್ಳವನು. (೩) (ಮಾಯಾಶಬ್ದಪ್ರಯುಕ್ತ

ವಿಕಾರವೆಂಬುವ ಒಂದೇ ಅರ್ಥವಿರುವುದರಿಂದ ಶ್ರದ್ಧಾಮಯಃ ಎಂಬುವುದಕ್ಕೆ ಶ್ರದ್ಧಾಸ್ವರೂಪನು ಎಂಬುವ ವ್ಯಾಖ್ಯಾನವು ಹೇಗೆ ಎಂದರೆ) ಮಯವೆಂದರೆ—ಪ್ರಧಾನವು, ಸ್ವರೂಪವು, ಕಾರ್ಯವು ಎಂಬೀ ಮೂರು ಅರ್ಥವು, ಎಂದು ಶಬ್ದನಿರ್ಣಯದಲ್ಲಿದೆ. ॥ ೫ ॥

ಟೀ—ಶ್ರದ್ಧೆಯೇ ಸಾತ್ವಿಕತ್ವ ಅಸಾತ್ವಿಕತ್ವಗಳಿಗೆ ಕಾರಣವು. ಶಾಸ್ತ್ರ ವಿಧಿಯನ್ನನುಸರಿಸುವುದು, ಅನುಸರಿಸದಿರುವುದು ಕಾರಣವಲ್ಲವೆಂದು ಏಕೆ ಹೇಳಬೇಕು ಎಂದರೆ—

**ತಾ ॥ (೧) ಶಾಸ್ತ್ರವಿಹಿತಮಪಿ ಭಗವಚ್ಛ್ರದ್ಧಾವಿಹೀನಮಸದೇವೇತಿ ವಕ್ಷ್ಯತಿ । ಅಶ್ರದ್ಧಯಾ ಹುತಮಿತಿ ॥ (೨) ಭಗವಚ್ಛ್ರದ್ಧಾವಿರಹಿತತ್ವಾದೇವ ಚಾಶಾಸ್ತ್ರವಿಹಿತಂ ಭವತಿ । ವಿಷ್ಣುಭಕ್ತಿವಿಧಾನಾರ್ಥಂ ಸರ್ವಂ ಶಾಸ್ತ್ರಂ ಪ್ರವರ್ತಕ ಇತಿ ಪೈಂಗಿಶ್ರುತಿಃ ॥ (೩) ಸ್ಥಿರಾಃ ಸ್ಥಿರಗುಣಘೃತಾದಯಃ । (೪) ಕಟ್ವಾದೀನಾಮಪ್ಯಾರೋಗ್ಯರಸಾದ್ಯರ್ಥತ್ವೇನ ಸಾತ್ವಿಕತ್ವಮೇವ ॥ (೫) ರಸ್ಯಾದೀನಾಮಪಿ ರಾಜಸತ್ವಮನಾರೋಗ್ಯಾದಿಹೇತುತ್ವೇ । ದುಃಖಶೋಕಾಮಯಪ್ರದಾ ಇತ್ಯುಕ್ತೇಃ ॥ ೬ ॥**

ಅ ॥ (೧) ಶಾಸ್ತ್ರಗಳಲ್ಲಿ ವಿಹಿತವಾದುದಾಗ್ಯೂ ಶ್ರೀಹರಿಯಲ್ಲಿ ಶ್ರದ್ಧೆಯು ಇಲ್ಲವಾದರೆ ಅಸತ್ತು ಆಗುವುದೆಂದು **ಅಶ್ರದ್ಧಯಾ ಹುತಂ** (ಶ್ಲೋ. ೨೮) ಎಂದು ಹೇಳುವರು. (ಅಂದರೆ ಶ್ರೀಕೃಷ್ಣನೇ ಶ್ರದ್ಧೆಯಿಲ್ಲವಾದರೆ ಶಾಸ್ತ್ರವಿಧಿಯನ್ನನುಸರಿಸಿಕೊಂಡಿದ್ದರೂ ಆ ಯಜ್ಞವು ಅಸತ್ತೇ ಆಗುವುದೆಂದು ಹೇಳುವುದರಿಂದ ಶ್ರದ್ಧೆಯೇ ಪ್ರಯೋಜಕವು) (೨) (ಮತ್ತು ಶ್ರೀಹರಿಯಲ್ಲಿ ಶ್ರದ್ಧೆಯಿಲ್ಲವಾದರೆ ಶಾಸ್ತ್ರವಿಧಿಯನ್ನು ಅನುಸರಿಸಿಕೊಂಡಿತೆ. ಎಂಬುದು ಕೂಡುವುದಿಲ್ಲ. ಆದುದರಿಂದಲೂ ಶ್ರದ್ಧೆಯೇ ಕಾರಣವೆನ್ನಬೇಕು—) ಭಗವಂತನಲ್ಲಿ ಶ್ರದ್ಧೆಯು ಇಲ್ಲದಿರುವುದರಿಂದಲೇ ಶಾಸ್ತ್ರದಲ್ಲಿ ವಿಹಿತವಾದುದೂ ಆಗುವುದಿಲ್ಲ. (ಏಕೆಂದರೆ) ಶ್ರೀವಿಷ್ಣುವಿನಲ್ಲಿ ಭಕ್ತಿಯನ್ನು ಅವಶ್ಯವಾಗಿ ಮಾಡಲೇಬೇಕೆಂಬುವುದನ್ನು ವಿಧಿಸುವುದಕ್ಕಾಗಿಯೇ ಎಲ್ಲಾ ಶಾಸ್ತ್ರಗಳೂ ಪ್ರವೃತ್ತಗಳಾಗಿವೆ (ಭಕ್ತಿಯು ಇಲ್ಲವಾದರೆ ಶಾಸ್ತ್ರವಿಧಿಯನ್ನನುಸರಿಸಿಕೊಂಡಿದೆ, ಎಂಬುವುದೂ ಕೂಡುವುದಿಲ್ಲ.) ಎಂದು ಪೈಂಗಿಶ್ರುತಿಯು. (೩) (ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾಃ ಎಂಬೀ ೮ನೇ ಶ್ಲೋಕದಲ್ಲಿ ಸ್ಥಿರಗಳಾದ ಆಹಾರಗಳೆಂದೂ ಹೇಳಿದೆ. ಅಲ್ಲಿ ಸ್ಥಿರತ್ವವೆಂದರೆ ಎಂತಹುದೆಂದರೆ) ಸ್ಥಿರಾಃ=ಸ್ಥಿರ ಗುಣಗಳುಳ್ಳ (ಅಂದರೆ ಬಹುಕಾಲದವರೆಗೂ ಗುಣಗಳನ್ನು ಕೊಡುವ,) ಘೃತ ಮೊದಲಾದವುಗಳು. (೪) ಕಟ್ವಮ್ಲಲವಣ (ಶ್ಲೋ. ೯) ಎಂಬುವಲ್ಲಿ ಕಟು ಮೊದಲಾದವುಗಳಿಗೆ ರಾಜಸತ್ವವು ಹೇಳಿದ್ದಾಗ್ಯೂ ಅದು ನಿಯತವಲ್ಲ. ಏಕೆಂದರೆ ಕದಾಚಿತ್) ಆ ಕಟ್ವಾದಿಗಳೂ ಆರೋಗ್ಯಕರವಾದ ರಸಾಯನಾದಿಗಳಿಗೆ ಉಪಯುಕ್ತವಾಗುವುದರಿಂದ ಅವುಗಳಿಗೆ ಸಾತ್ವಿಕತ್ವವೂ ಬರುವುದು. (೫) ಹೀಗೆಯೇ ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾಃ (ಶ್ಲೋ. ೮) ಎಂಬುವಲ್ಲಿ ಸಾತ್ವಿಕಗಳೆಂದು ಹೇಳಿದ ರಸ್ಯಾದಿಗಳಿಗೂ (ಸಾತ್ವಿಕತ್ವವು ನಿಯತವಲ್ಲ. ಮತ್ತೆ ಅವುಗಳೇ) ಅನಾರೋಗ್ಯಾದಿಗಳಿಗೆ ಹೇತುಗಳಾದರೆ ಅವುಗಳಿಗೆ ರಾಜಸತ್ವವೂ ಇದೆ (ಕಟ್ವಾದಿಗಳಿಗೆ ನಿಯಮೇನ ರಾಜಸತ್ವವೇ ಎಂದು ಏಕೆ ಆಗಲಾರದು ಕದಾಚಿತ್ ಸಾತ್ವಿಕತ್ವವಿದೆ ಎಂದು ಏಕೆ ಹೇಳಬೇಕು ಎಂದರೆ) ದುಃಖ ಶೋಕ ರೋಗಗಳನ್ನು ಕೊಡುವುವಾದರೆ—ರಾಜಸಗಳೆಂದು ಹೇಳಿದ್ದರಿಂದ (ಕಟ್ವಾದಿಗಳು ಆರೋಗ್ಯಾದಿಗಳಿಗೆ ಹೇತುಗಳಾದರೆ ಸಾತ್ವಿಕಗಳೆಂದು ತಿಳಿದುಬರುವುದರಿಂದ ರಾಜಸತ್ವವೇ ಎಂಬುವ ನಿಯಮವಿಲ್ಲ.) ಹಾಗೆಯೇ ಉಪಯುಕ್ತ ಆಹಾರಾದಿಗಳೂ ಆಯುಃ ಸತ್ವ ಬಲ ಆರೋಗ್ಯಾದಿಗಳಿಗೆ ವರ್ಧಕಗಳಾದರೆ ಸಾತ್ವಿಕಗಳೆಂದು ಹೇಳಿದ್ದರಿಂದ ಸದಾ ಸಾತ್ವಿಕಗಳೇ ಎಂಬುವ ನಿಯಮವಿಲ್ಲ. ಎಂದುಕ್ತವಾಯಿತು. ॥ ೬ ॥

ಟೀ – ಆಯುಸ್ಸತ್ತ್ವ ಎಂಬುವಲ್ಲಿದ್ದ ಸತ್ತ್ವಶಬ್ದಾರ್ಥವನ್ನು ಹೇಳುತ್ತಾರೆ–

॥ (೧) ಸತ್ತ್ವಂ ಸಾಧುಭಾವಃ । ಭವತಿ ಹಿ ಸೋಽಪಿ ಶುಚ್ಯನ್ನಾತ್ । ಹೃದ್ಯಂ ಪಶ್ಚಾನ್ಮನೋಹಾರಿ ಪ್ರಿಯಂ ತತ್ಕಾಲಸೌಖ್ಯದಂ । ಸುಖಂ ತು (ಸುಖದಂ) ದೀರ್ಘಸುಖದಂ ರಸ್ಯ(ಮ್ಯ)ಮಭ್ಯಾಸಸೌಖ್ಯದಮಿತಿ ಶಬ್ದನಿರ್ಣಯೇ ॥ (೨) ರೂಕ್ಷಂ ನೀರಸಂ ತೀಕ್ಷ್ಣಂ ಸರ್ಷಪಾದಿ । ಯಾಮಾಂತರಿತಪಾಕಂ ತು ಯಾತಯಾಮ ಇತೀ(ಮುದೀ)ರ್ಯತೇ । ಕ್ವಚಿಚ್ಚ ಗತಸಾರಂ ಸ್ಯಾನ್ನಿಯಮ್ಯಂ ಯಾತಮಸ್ಯ ಯದಿತಿ ಚ । ಪೂರ್ವಂ ಸ್ವಾದು ಪಶ್ಚಾದನ್ಯಥಾಜಾತಂ ಗತರಸಂ ॥ (೩) ಶುದ್ಧಭಾಗವತಾನಾಂ ತು ಸ್ವಭಾವಾಪೇಕ್ಷಯೈವ ತು । ಸ್ವಾದುತ್ವಾದಿ ವಿಜಾನೀಯಾತ್ಪದಾರ್ಥಾನಾಂ ನ ಚಾನ್ಯಥೇತಿ ಸೂದಶಾಸ್ತ್ರೇ ॥ ೭ ॥

ಅ॥ ಸತ್ತ್ವಂ = ಸಾಧುಭಾವವು. ಆ ಸಾಧುತನವೂ ಕೂಡ ಶುದ್ಧವಾದ ಅನ್ನದಿಮುಂಟಾಗುತ್ತದೆ. ಹೃದ್ಯ ಮೊದಲಾದ ಶಬ್ದಗಳ ಅರ್ಥವನ್ನು ಹೇಳುತ್ತಾರೆ) ಯಾವ ವಸ್ತುವು ಉಪಭೋಗಿಸಿದ ಮೇಲೆಯೂ ಇನ್ನೂ ನನಗೆ ಸಿಗಲಿ ಎಂದು ಮನಸ್ಸನ್ನು ಅಪಹರಿಸುತ್ತದೋ ಆ ವಸ್ತುವು ಹೃದ್ಯವು. ಉಪಭೋಗಿಸುವ ಕಾಲದಲ್ಲಿಯೇ ಸೌಖ್ಯವನ್ನು ಕೊಡತಕ್ಕದು ಪ್ರಿಯವು. ಒಂದುಸಲ ಉಪಭೋಗಿಸಿದ್ದು ಬಹುಕಾಲ ಸುಖವನ್ನು ಕೊಡತಕ್ಕದು ಸುಖವೆನಿಸುತ್ತದೆ. ಪದೇಪದೇ ಉಪಭೋಗಿಸಿದರೇನೇ ಸೌಖ್ಯವನ್ನು ಕೊಡತಕ್ಕದು ರಸ್ಯವು ಎಂದು ಶಬ್ದನಿರ್ಣಯದಲ್ಲಿದೆ (೨) (ರೂಕ್ಷ ಶಬ್ದಕ್ಕೆ ಅನೇಕಾರ್ಥಗಳಿದ್ದುದರಿಂದ ಇಲ್ಲಿ ಬೇಕಾದ ಅರ್ಥವನ್ನು ಹೇಳುತ್ತಾರೆ) ರೂಕ್ಷಂ = ನೀರಸವಾದುದು. ತೀಕ್ಷ್ಣಂ = ಸಾಸಿವೆ ಮೊದಲಾದುದು. ಪಂಕ್ತಿಪಾವನರಾದ ಪುರುಷರ ಶಿಷ್ಟಾನ್ನವು ಸಾತ್ತ್ವಿಕವೆಂದು ಪ್ರಸಿದ್ಧಿಯಿದ್ದುದರಿಂದ ಯಾತಯಾಮವಾದುದು ತಾಮಸವು ಹೇಗೆ ಆಗುವುದೆಂದರೆ) ಪಾಕಮಾಡಿ ಒಂದು ಜಾಮ ಕಳೆದುಹೋದ ವಸ್ತುವು ಯಾತಯಾಮವೆನಿಸುತ್ತದೆ. ಮತ್ತು ಈ ವಸ್ತುವಿನ, ಯಾಮವು (ನಿಯಮ್ಯವು.) ಹೋಗಿದ್ದರೂ ಎಂದರೆ—ಇದೇ ನನಗೆ ಸಿಗಲಿ, ಎಂದು ಅಪೇಕ್ಷಿತವಾದ ಅಂಶವಾದ ಸಾರಭಾಗವೇ ಹೋಗಿದ್ದರೂ ಅಂತೂ ಸಾರವಿರಹಿತವಾಗಿದ್ದರೂ ಯಾತಯಾಮವೆನಿಸುತ್ತದೆ ಮೊದಲು ಸ್ವಾದು(ರುಚಿಕರ)ವಾಗಿದ್ದು ಆ ಮೇಲೆ ಅನ್ಯಾಸವಾದರೆ ಗತರಸವೆನಿಸುತ್ತದೆ.) (ಅಂದರೆ ಯಾವ ಪದಾರ್ಥ ಧರ್ಮಭೂತವಾದ ಸಾರವೇ ಹೋಗಿರುತ್ತದೋ, ಅದು ಯಾತಯಾಮವೆನಿಸುತ್ತದೆ. ಸಾರವಿದ್ದರೂ ಅದರಲ್ಲಿರತಕ್ಕ ಸ್ವಾದುತ್ವವು ಹೊದರೆ ಗತರಸವೆನಿಸುತ್ತದೆ. (೩) (ಒಂದೇ ವಸ್ತುವಿಗೆ ಪುರುಷಭೇದದಿಂದ ಸ್ವಾದುತ್ವ ಅಸ್ವಾದುತ್ವಗಳು ತೋರುವುದರಿಂದ ಇದು ಸ್ವಾದು, ಇದು ಅಸ್ವಾದು ಇತ್ಯಾದಿಗಳು ನಿಶ್ಚಯವಾಗಲಾರವು. ಎಂದರೆ-) ಮುಖ್ಯವಾಗಿ ಭಗವದ್ಭಕ್ತರು ಅಪರೋಕ್ಷಜ್ಞಾನಿಗಳೂ ಪರಾಪರತತ್ತ್ವನಿಶ್ಚಯವುಳ್ಳವರೂ ಆದವರಿಗೇನೇ, ನಿತ್ಯ ಪ್ರಾಯಃ ಅಭಿವ್ಯಕ್ತವಾದ ಸ್ವಭಾವವನ್ನಪೇಕ್ಷಿಸಿಯೇ ಪದಾರ್ಥಗಳ ಸ್ವಾದುತ್ವಾದಿಗಳನ್ನು ತಿಳಿಯಬೇಕು. ಯಾವುದೇ ಒಂದು ವಸ್ತುವಿಗೆ ಯಾರಾದರೂ ಒಬ್ಬನಿಗೆ ಸ್ವಾದು ಇನ್ನೊಬ್ಬನಿಗೆ ಅಸ್ವಾದು ಎಂದು ವಿವೇಕ ಮಾಡಿಕೊಂಡು ತಿಳಿಯಬಾರದು ಹೀಗೆ ಸೂದಶಾಸ್ತ್ರದಲ್ಲಿ ಹೇಳಿದೆ. ॥ ೭ ॥

ಟೀ – ರಾಜಸ ಯಾಗದಿಂದ ಸಾಂಕಲ್ಪಿಕ ಸ್ವರ್ಗವೇ ಎಂದು ಹೇಳಿದ್ದು ಕೂಡುವುದಿಲ್ಲ. ಏಕೆಂದರೆ–ಮುಖ್ಯ ಸ್ವರ್ಗೋದ್ದೇಶದಿಂದಲೇ ಯಾಗ ಮಾಡಿದ್ದು. ರಾಜಸ ಯಾಗದಿಂದ ಇಂದ್ರಾದಿ ದೇವತೆಗಳ ಲೋಕವಾದ ಸ್ವರ್ಗವು ಸಿಗುತ್ತದೆ, ಎಂದು ಪ್ರಮಾಣವೂ ಇದೆ, ಎಂಬೀ ಆಶಂಕೆಯನ್ನು ಸ್ಮೃತ್ಯಂತರದಿಂದ ಪರಿಹರಿಸುತ್ತಾರೆ—

ಶಾ ॥ (೧) ಯಾಗಾತ್ತು ರಾಜಸಾತ್ಸ್ವರ್ಗಃ ಸಾಂಕಲ್ಪಿಕ ಉದಾಹೃತಃ । ಲೋಕಸ್ಥ ದೀನ್ನ-ದೇವಾನಾಂ ಸಮಾಮ್ನಾಂ ವಾಸವಾದಿಭಿಃ । ವಿಷ್ಣಾವಶ್ರದ್ಧಯಾಽಯೋಗ್ಯಕಾಮ್ಯಾ-ಚ್ಚೈಷಾಂ ಪುನರ್ಭವೇತ್ । ನರಕಂ ಚ ॥ (೨) ವಿನಾ ಯಜ್ಞಂ ರಾಜಸಂ ನರಲೋ-ಕಗಾಃ । ನಿಷಿದ್ಧಕರ್ಮ ಕುರ್ಯುಶ್ಚೇದೀಯುಸ್ತೇ(ಷ್ಟೇ) ನರಕಂ ಧ್ರುವಂ ॥ ೮ ॥

ಅ ॥ (೧) ರಾಜಸ ಯಾಗದಿಂದ ಸಾಂಕಲ್ಪಿಕ ಸ್ವರ್ಗವೇ. ಮುಖ್ಯ ಸ್ವರ್ಗವಲ್ಲ. ಇಂದ್ರಾದಿ ದೇವತೆಗಳ ಸಮಾನ ಕಾಮವುಳ್ಳ, ದುಃಖಯುಕ್ತರಾದ ಅಪಭ್ರಷ್ಟ ದೇವತೆಗಳಿಗೆ ಶ್ರೀವಿಷ್ಣುವಿನಲ್ಲಿ ಶ್ರದ್ಧೆಯಿಲ್ಲದಿರೋಣದರಿಂದಲೂ ತಮಗೆ ಅಯೋಗ್ಯವಾದುದನ್ನು ಇಚ್ಛಿಸುವುದರಿಂದಲೂ ಸಾಂಕಲ್ಪಿಕ ಸ್ವರ್ಗವೇ, ಮುಖ್ಯ ಸ್ವರ್ಗವಲ್ಲ. ಮತ್ತು ಶ್ರೀವಿಷ್ಣುವಿನಲ್ಲಿ ಶ್ರದ್ಧೆಯಿಲ್ಲದಿದ್ದು ಸ್ವರ್ಗಾಯೋಗ್ಯರಿಗೆ ಸ್ವರ್ಗಕಾಮನೆಯು ಅಯೋಗ್ಯವಾಗಿರುವುದರಿಂದ ಅಯೋಗ್ಯ ಸ್ವರ್ಗ ಕಾಮನೆಯಿಂದ ಅರ್ಥನಾಶವೂ ಅನರ್ಥಫಲವೂ ಉಂಟಾಗುತ್ತದೆ. ಆದಕಾರಣ ಅವರಿಗೆ ನರಕವೇ. ಸ್ವರ್ಗವಲ್ಲ. (೨) (ರಾಜಸರಿಗೆ ಸಕಾಮ ಯಜ್ಞವಿಲ್ಲದಿದ್ದರೂ ನರಕವು ಆಗುವುದರಿಂದ ಅಯೋಗ್ಯ ಕಾಮನಾದಿಗಳು ನರಕಕ್ಕೆ ಕಾರಣವು ಹೇಗೆ ಆಗುವುದು. ಎಂದರೆ—) ಯಜ್ಞ ಹೊರತು ಭೂಲೋಕದಲ್ಲಿದ್ದ ಮಧ್ಯಮ ರಾಜಸರು ನಿಷಿದ್ಧ ಕರ್ಮವನ್ನು ಮಾಡಿದರೆ—ಅವರು ನಿಶ್ಚಯವಾಗಿಯೂ ನರಕವನ್ನು ಹೊಂದುವರು.

ವಿ ॥ (1) ಸಾತ್ವಿಕರು ರಾಜಸರು ತಾಮಸರೆಂದು ಜೀವರು ತ್ರಿವಿಧರು. ಅದರಲ್ಲಿ ರಾಜಸರೂ, ರಾಜಸ ಸಾತ್ವಿಕ, ರಾಜಸ ರಾಜಸ, ರಾಜಸ ತಾಮಸ, ಎಂದು ಮೂರು ವಿಧರು. ರಾಜಸ ತಾಮಸರೂ, ಭೂಪ್ರಚುರ ನಿರಯಪ್ರಚುರ, ಎಂದು ಎರಡು ವಿಧರು. ಅದರಲ್ಲಿ ರಾಜಸ ಸಾತ್ವಿಕರು ಮುಕ್ತಿಯೋಗ್ಯರು ರಾಜಸ ರಾಜಸರು ರಾಜಸ ತಾಮಸರೂ ಕೂಡ ನಿತ್ಯ ಸಂಸಾರಿಗಳು. ಆ ರಾಜಸರೂ ಉತ್ತಮ ಮಧ್ಯಮ ಅಧಮ ಎಂದು ತ್ರಿವಿಧರು. ರಾಜಸರಲ್ಲಿ ಉತ್ತಮರಾದ ನಿಷ್ಕೃತ್ಯವಿದ್ಯರಿಗೆ ಮುಖ್ಯ ಸ್ವರ್ಗವೇ. ಅಧಮರಿಗೆ ನಿರಯವೇ. ಕಲ್ಪಿತ ಸ್ವರ್ಗವೂ ಇಲ್ಲ. ಆದಕಾರಣ ಇಲ್ಲಿ ರಾಜಸ ಪದದಿಂದ ಮಧ್ಯಮ ರಾಜಸರನ್ನು ಇಟ್ಟುಕೊಳ್ಳಬೇಕು. ॥ ೮ ॥

ಟೀ—ರಾಜಸ ಕರ್ಮದಿಂದ ನರಕವೂ ಸಾಂಕಲ್ಪಿಕ ಸ್ವರ್ಗವೂ ಆಗುವುದಾದರೆ—ಸಾತ್ವಿಕರಿಗೂ ರಾಜಸಕರ್ಮಾಚರಣವು ಕೂಡುವುದರಿಂದ ಅವರಿಗೂ ನರಕವೂ ಸಾಂಕಲ್ಪಿಕ ಸ್ವರ್ಗವೂ ಆಗಬೇಕಾಗುವುದು. ಹಾಗೆಯೇ ತಾಮಸ ಕರ್ಮದಿಂದ ಭೂತಾದಿತ್ವವೂ ತಮಸ್ಸೂ ಆಗುವುದಾದರೆ—ಸಾತ್ವಿಕರಿಗೂ ರಾಜಸರಿಗೂ ತಾಮಸ ಕರ್ಮವು ಕೂಡುವುದರಿಂದ ಭೂತಾದಿಭಾವವೂ ತಮಸ್ಸೂ ಆಗಬೇಕಾಗುವುದು. ಹಾಗೆಯೇ ಸಾತ್ವಿಕ ಕರ್ಮದಿಂದ ಜ್ಞಾನದ್ವಾರಾ ಮೋಕ್ಷವಾಗುವುದಾದರೆ—ರಾಜಸ ತಾಮಸರಿಗೂ ಸಾತ್ವಿಕಕರ್ಮವು ಕೂಡುವುದರಿಂದ ಮೋಕ್ಷವಾಗುವುದು, ಎಂದರೆ—

ಶಾ ॥ (೧) ಕದಾಚಿತ್ಸಾತ್ವಿಕಾಃ ಕುರ್ಯುಃ ಕರ್ಮ ರಾಜಸತಾಮಸಂ । ಅನ್ಯೇಽಪ್ಯೇವಂ ತಥಾಽಪ್ಯೇಷಾಂ ಸ್ಥಿತಿಃ ಸ್ವಾಭಾವಿಕೀ(ಕೀ) ಪುನಃ ॥ (೨) ಸ್ವಂ ಸ್ವಂ ಕರ್ಮ ತು ಸರ್ವೇಷಾಂ ಸದೈವ ಸ್ಯಾನ್ಮಹತ್ಫಲಂ । ಅನ್ಯದಲ್ಪಫಲಂ ಚೈವ ಬಾಹುಲ್ಯಂ ತೇಷು ಲಕ್ಷಣಮಿತಿ ಪಾದ್ಮೇ ॥ (೩) ಮೌನಂ ಮನನಂ । ಯುಕ್ತ್ಯಾ ಭಗವದರ್ಪಣಾದಿ ಯೋಗಯುಕ್ತ್ಯಾ । ಯುಕ್ತ್ಯೇತಿ ದಾನಾದಿಷು ಸರ್ವತ್ರ ಸಮಂ ॥ (೪) ಸತ್ವಾದಿ-ಭಿಸ್ತ್ವಾದೇವ ಕರ್ಮಾಣಿ ಸತ್ । ಓಂ ತತ್ಸದಿತಿ ನಾಮ್ನಾಂ ವಿಷ್ಣೌ ಪ್ರಸಿದ್ಧತ್ವಾತ್ ।

(೫) ಪ್ರವಕ್ತನೋಂಕೃತಂ ಬ್ರಹ್ಮ ಪರಸ್ತಾಚ್ಚ ವಿಶೀರ್ಯತೇ। ಅನೋಂಕೃತಮಾಸುರಮಿತಿ(ರಂ ಕರ್ಮೇತ್ಯಾದಿ)ಶ್ರುತೇರನೋಂಕೃತಸ್ಯಾಸುರತ್ವಪ್ರಸಿದ್ಧೇಃ ॥ (೬) ಅನರ್ಥಜ್ಞೋದಿತೋ ಮಂತ್ರೋ ನಿರರ್ಥಸ್ತ್ರಾತಿ ಮಾನವಃ । ಯನ್ಮಂತ್ರಸ್ತೇನ ಕಥಿತೋ ಮಂತ್ರಾರ್ಥೋ ಜ್ಞೇಯ ಏವ ತದಿತಿ ಪೈಂಗಿಶ್ರುತೇಶ್ಚ ॥ (೭) ತದರ್ಥತ್ವೇನ ಫಲಾನಭಿಸಂಧಿ ಪೂರ್ವಕಕರ್ಮಣ ಏವ ಸಾತ್ವಿಕತ್ವಾಚ್ಚ । ತದ್ಭಕ್ತ್ಯಾ ತತ್ಸ್ಮರಣಪೂರ್ವಕಮೇವ ಕರ್ಮ ಸದನ್ಯದಸದೇವೇತಿ ಭಾವಃ ॥ (೮) ರಾಜಸಸ್ಯಾಪ್ಯಸದಂತರ್ಭಾವ ಏವ । ವಿಷ್ಣುಶ್ರದ್ಧಾರಹಿತತ್ವಾತ್ । ಸಾತ್ವಿಕಂ ಮೋಕ್ಷದಂ ಕರ್ಮ ರಾಜಸಂ ಸ್ವೃತಿದುಃಖದಂ । ತಾಮಸಂ ಪಾತದಂ ಜ್ಞೇಯಂ ತತ್ಕಾರ್ಯಾತ್ಕರ್ಮ ವೈಷ್ಣವಮಿತ್ಯಾಗ್ನೇಯೇ ॥ ೯ ॥ ॥ ೧—೨೮ ॥

ಅ ॥ (೧) ಯದ್ಯಪಿ ಸಾತ್ವಿಕರು ರಾಜಸ ತಾಮಸ ಕರ್ಮಗಳನ್ನೂ, ರಾಜಸರು ಸಾತ್ವಿಕ ತಾಮಸ ಕರ್ಮಗಳನ್ನೂ, ತಾಮಸರು ಸಾತ್ವಿಕ ರಾಜಸ ಕರ್ಮಗಳನ್ನೂ ಮಾಡುತ್ತಾರೆ. ಆದರೂ ಅದು ಕೆಲವು ವೇಳೆಯೇ ಸರಿ. ಆದರೂ ಇವರೆಲ್ಲರೂ ತಮ್ಮ ತಮ್ಮ ಸ್ವಾಭಾವಿಕ ಕರ್ಮದಲ್ಲಿಯೇ ಮುಖ್ಯವಾಗಿ ಇರುವರು. (೨) (ಸ್ವಾಭಾವಿಕಕ್ಕೆ ಮಹಾಫಲವು. ಅಸ್ವಾಭಾವಿಕಕ್ಕೆ ಅಲ್ಪಫಲವು. ಆದರಿಂದಲೂ ಸ್ವಾಭಾವಿಕ ಕರ್ಮದಿಂದ ಅಸ್ವಾಭಾವಿಕ ಕರ್ಮವು ತಿರಸ್ಕೃತವಾಗುವುದರಿಂದಲೂ ಎಲ್ಲಾ ಫಲವು ಒಂದೇ ವಿಧವಾಗಬೇಕಾಗುವುದು ಎಂಬುವ ದೋಷವಿಲ್ಲವೆನ್ನುತ್ತಾರೆ.) ಸರ್ವರಿಗೂ ಸರ್ವದಾ ಸ್ವಾಭಾವಿಕವಾದ ತಮ್ಮ ಕರ್ಮವೇ ಮಹಾಫಲಪ್ರದಾಯಕವಾಗುವುದು. ಅಸ್ವಾಭಾವಿಕವಾದ ತಮ್ಮ ಕರ್ಮವು ಅಲ್ಪಫಲದಾಯಕವು. (ಸಾತ್ವಿಕಾದಿಗಳೂ ಸ್ವಾಭಾವಿಕ ಅಸ್ವಾಭಾವಿಕ ಕರ್ಮಗಳನ್ನು ಮಾಡುವುದಾದರೆ—ಇದು ಸ್ವಾಭಾವಿಕ, ಸ್ವಾಭಾವಿಕವಲ್ಲ ಎಂದು ತಿಳಿಯುವುದು ಹೇಗೆಂದರೆ) ಆ ಕರ್ಮಗಳಲ್ಲಿ ಸ್ವಾಭಾವಿಕ ಸಾತ್ವಿಕತ್ವಾದಿಗಳು ಹೆಚ್ಚು ಇದ್ದರೆ ಸ್ವಾಭಾವಿಕಾದಿಗಳೆಂದು ಅಲ್ಪವಾದುದು ಅಸ್ವಾಭಾವಿಕವೆಂದೂ ಹೀಗೆ ಬಾಹುಲ್ಯಾದಿಗಳು ಜ್ಞಾಪಕವಾಗಿವೆ ಎಂದು ಭಾಷ್ಯದಲ್ಲಿ ಇದೆ. (೩) (ಮನಃ ಪ್ರಸಾದಃ ಸೌಮ್ಯತ್ವಂ ಎಂಬೀ ೧೬ನೇ ಶ್ಲೋಕದಲ್ಲಿದ್ದ ಮೌನ ಶಬ್ದಾರ್ಥವನ್ನು ಹೇಳುತ್ತಾರೆ.) ಮೌನಂ=ಯುಕ್ತ್ಯನುಸಂಧಾನರೂಪವಾದ ಮನನವು. (ಅಫಲಾಕಾಂಕ್ಷಿಭಿರ್ಯುಕ್ತೈಃ (ಶ್ಲೋ.೧೭) ಎಂಬುವಲ್ಲಿದ್ದ ಯುಕ್ತೈಃ ಎಂಬುದರ ಅರ್ಥವನ್ನು ಹೇಳುತ್ತಾರೆ.) ಭಗವದರ್ಪಣ ಮೊದಲಾದ ಯೋಗದಿಂದ ಯುಕ್ತರಾದವರು. ಸಾತ್ವಿಕ ಯಜ್ಞ ದಾನಗಳಲ್ಲಿ ಭಗವದರ್ಪಣವನ್ನು ಹೇಳದೆ ತಪಸ್ಸಿನಲ್ಲಿ ಮಾತ್ರ ಏಕೆ ಹೇಳಿದ್ದೆಂದರೆ) ಭಗವದರ್ಪಣವು ತಪಸ್ಸಿನಲ್ಲಿ ಮಾತ್ರವಲ್ಲ. ಮತ್ತೆ ಯಜ್ಞ ದಾನ ತಪಸ್ಸುಗಳಲ್ಲಿಯೂ ಭಗವದರ್ಪಣವು ಆವಶ್ಯಕವೇ. (೪) (ಓಂ ತತ್ಸದಿತಿ ನಿರ್ದೇಶಃ (ಶ್ಲೋ. ೨೩) ಎಂಬುವುದು ಓಂ ತತ್ಸದಿತಿ ಯದ್ವಿಷ್ಣೋರ್ನಾಮತ್ರಯಮುದಾಹೃತಂ । ಎಂಬುವ ವಾಕ್ಯಾಂತರದಿಂದ ಅನ್ವಿತವಾಗಿದೆ. ಈಗ ಆ ಸ್ಮೃತಿವಾಕ್ಯವನ್ನು ವಿವರಿಸುತ್ತಾ ಈ ಗೀತಾವಾಕ್ಯವನ್ನು ವಿವರಿಸುತ್ತಾರೆ.) ಕರ್ಮಾದಿಗಳು ವಿಷ್ಣುವಿಷಯಕಗಳಾಗಿರುವುದರಿಂದಲೇ ಸತ್ ಎನಿಸುತ್ತವೆ. ಸತ್ ಎನಿಸುವವನು ಮುಖ್ಯತಃ ಪರಬ್ರಹ್ಮನೇ. ಓಂ ತತ್ ಸತ್ ಎಂಬುವ ನಾಮಗಳು ಶ್ರೀವಿಷ್ಣುವಿನಲ್ಲಿ ಪ್ರಸಿದ್ಧಗಳಾಗಿವೆ. ಆದಕಾರಣ ವಿಷ್ಣುವಿಷಯಕ ಕರ್ಮಾದಿಗಳೇ ಸತ್ ಎನ್ನಿಸುತ್ತದೆ) (೫) ಮಂತ್ರ ವೇದ ಮೊದಲಾದವುಗಳ ಆದಿಯಲ್ಲಿ ಓಂಕಾರವನ್ನು ಚ್ಚರಿಸದಿದ್ದರೆ—ಅದು ತೂತು ಇದ್ದ ಮಡಿಕೆಯಲ್ಲಿ ನೀರು ಸುರಿದು ಹೋದಂತೆ ಫಲಕಾರಿಯಾಗುವುದಿಲ್ಲ. ಅಂತ್ಯದಲ್ಲಿ ಓಂಕಾರವನ್ನು ಚ್ಚರಿಸದಿದ್ದರೆ- ಫಲವು ಹುಟ್ಟಿದ್ದರೂ ನಷ್ಟವಾಗುತ್ತದೆ. ಓಂಕಾರವನ್ನುಚ್ಚರಿಸದಿದ್ದರೆ ಅದು ಅಸುರರ ಕರ್ಮವಾಗುವುದು. ಇತ್ಯಾದಿ ಶ್ರುತಿ

ಗಳಿಂದ ಓಂಕಾರವನ್ನುಚ್ಚರಿಸದಿದ್ದರೆ—ಅದರಿಂದ ಅಸುರರಿಗೆ ಪ್ರೀತಿಯೆಂದು ಪ್ರಸಿದ್ಧಿಯು. (೬) (ಓಂಕಾರವನ್ನು ಮೊದಲು ಉಚ್ಚರಿಸದೇಕೆಂಬುವಲ್ಲಿ ವೇದಪ್ರಮಾಣವನ್ನು ಹೇಳುತ್ತಾರೆ.) ಅರ್ಥವನ್ನು ತಿಳಿಯದವನಿಂದ ಹೇಳಲ್ಪಟ್ಟ ಮಂತ್ರವು ನಿಷ್ಪ್ರಯೋಜನವು. ಏಕೆಂದರೆ—ಮಂತ್ರವು ಅರ್ಥಜ್ಞಾನವಿದ್ದವನನ್ನೇ ರಕ್ಷಿಸುತ್ತದೆ. ಅದರಿಂದಲೇ ಮಂತ್ರವೆಂದು ಹೇಳಲ್ಪಟ್ಟಿದೆ. ಆದುದರಿಂದ ಮಂತ್ರಾರ್ಥವನ್ನು ತಿಳಿಯಲೇಬೇಕು, ಎಂದು ಪೈಂಗಿಶ್ರುತಿಯು. (೭) (ಈ ಅಧ್ಯಾಯದಲ್ಲಿ ಸದಸತ್ಕರ್ಮಗಳನ್ನು ಹೇಳಬೇಕಿತ್ತು. ಅದನ್ನು ಬಿಟ್ಟು ಓಂ ತತ್ಸತ್ ಇತ್ಯಾದಿಗಳನ್ನು ಏಕೆ ಹೇಳುವುದೆಂದರೆ) ಇಲ್ಲಿ ಓಂಕಾರಾರ್ಥವನ್ನು ಸ್ಮರಣೆಮಾಡಿಕೊಂಡು ಓಂಕಾರವನ್ನುಚ್ಚಾರಣಮಾಡಿಕೊಂಡು ಭಗವದ್ಭಕ್ತಿಯಿಂದ ಭಗವಂತನ ಪ್ರೀತಿಗಾಗಿ ನಿಷ್ಕಾಮನೆಯಿಂದ ಮಾಡಿದ ಕರ್ಮವೇ ಸಾತ್ವಿಕವು (ಇತರವಾವುದು ರಾಜಸಾದಿಗಳು.) ಅಂತೂ ಇಂತಹುದೇ ಸತ್ಕರ್ಮವು. ಬೇರೆ ಅಸತ್ಕರ್ಮವು. (ಹೀಗೆ ಸದಸತ್ಕರ್ಮವು ವಿವಿಚ್ಯ ಉಕ್ತವಾಯಿತು.) (೮) (ಕರ್ಮ ಚೈವ ತದರ್ಥೀಯಂ (ಶ್ಲೋ ೨೭) ಎಂದು ಸಾತ್ವಿಕ ಕರ್ಮವನ್ನು ಹೇಳಿ ರಾಜಸ ಕರ್ಮವನ್ನು ಹೇಳದೆ. ಅಶ್ರದ್ಧಯಾ ಹುತಂ (೨೮) ಎಂದು ತಾಮಸ ಕರ್ಮವನ್ನು ಏಕೆ ಹೇಳುವುದೆಂದರೆ) ರಾಜಸ ಕರ್ಮವೂ ಅಸತ್ಕರ್ಮದಲ್ಲಿ ಸೇರುತ್ತದೆ (ಇಲ್ಲಿ ತಾಮಸ ಕರ್ಮವನ್ನು ಮಾತ್ರ ಅಸತ್ ಕರ್ಮದಿಂದ ಹೇಳುವುದಲ್ಲ. ರಾಜಸವೂ ಹೇಳಲ್ಪಡುತ್ತದೆ. (ಏಕೆಂದರೆ) ಎರಡನ್ನೂ ಎವಲ್ಲಿ ಶ್ರದ್ಧೆಯಿಲ್ಲದೆ ಮಾಡಿರುವುದರಿಂದ. (೯) (ನ ಚ ತತ್ಪ್ರೇತ್ಯ ನೋ ಇಹ (ಶ್ಲೋ. ೨೮) ಎಂದು ರಾಜಸ ತಾಮಸ ಕರ್ಮಗಳಿಗೆ ಹೇಳಿದ ಫಲವನ್ನು ವಿವಿಚ್ಯ ಸ್ಮೃತಿಪ್ರಮಾಣದಿಂದ ಹೇಳುತ್ತಾರೆ) ಸಾತ್ವಿಕಕರ್ಮವು ಮೋಕ್ಷವನ್ನು ಕೊಡತಕ್ಕುದು. ರಾಜಸಕರ್ಮವು ಸಂಸಾರದುಃಖವನ್ನೇ ಕೊಡತಕ್ಕುದು. ತಾಮಸಕರ್ಮವು ನರಕಾದ್ಯನರ್ಥವನ್ನು ಕೊಡತಕ್ಕುದು. ಆದಕಾರಣ ವೈಷ್ಣವ ಕರ್ಮವನ್ನೇ ಮಾಡಬೇಕು ಎಂದು ಆಗ್ನೇಯ ಪುರಾಣದಲ್ಲಿ ಹೇಳಿದೆ. ॥ ೧-೨೮ ॥

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾ ತಾತ್ಪರ್ಯನಿರ್ಣಯೇ ಸಪ್ತದಶೋಽಧ್ಯಾಯಃ ॥ ೧೭ ॥**

॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾ ತಾತ್ಪರ್ಯನಿರ್ಣಯದಲ್ಲಿ ಹದಿನೇಳನೇ ಅಧ್ಯಾಯವು ಮುಗಿಯಿತು. ॥ ೧೭ ॥

॥ ಶ್ರೀಕೃಷ್ಣಾರ್ಪಣಮಸ್ತು ॥

॥ ಶ್ರೀಃ ॥

# ಹದಿನೆಂಟನೇ ಅಧ್ಯಾಯವು.

ಟೀ—ಹಿಂದಿನ ಅಧ್ಯಾಯಗಳಲ್ಲಿ ತ್ರೈಗುಣ್ಯವಿಷಯಾ ವೇದಾಃ ಇತ್ಯಾದಿಗಳಿಂದ ಪುರುಷಾರ್ಥಕ್ಕೆ ಸಾಧನವಾದ ಜ್ಞಾನಸಾಧನವನ್ನು ಅಲ್ಲಲ್ಲಿ ಬಿಕ್ಕಿಹೇಳಿದ್ದನ್ನು, ಅಜ್ಞಜನರು ಸುಲಭದಿಂದ ತಿಳಿದುಕೊಳ್ಳ ಬೇಕೆಂಬುವ ಉದ್ದೇಶದಿಂದ ಶ್ರೀಕೃಷ್ಣನು ಈ ಅಧ್ಯಾಯದಲ್ಲಿ ಸಂಕ್ಷೇಪದಿಂದ ಹೇಳುತ್ತಾನೆ. ಹಾಗೆಯೇ ೫ನೇ ಅಧ್ಯಾಯದಲ್ಲಿ ಹೇಳಿದ ತ್ರಿಗುಣಕಾರ್ಯವನ್ನು ಹೇಳುತ್ತಾನೆ. ೫ನೇ ಅಧ್ಯಾಯದಲ್ಲಿ ಸನ್ಯಾಸ ಕ್ಸೈವ ಯೋಗಶ್ಚ ಇತ್ಯಾದಿಗಳಿಂದ ಸನ್ಯಾಸವನ್ನು ೧೨ನೇ ಅಧ್ಯಾಯದಲ್ಲಿ ತ್ಯಾಗಾಚ್ಛಾಂತಿರನಂತರಂ ಎಂದು ತ್ಯಾಗವನ್ನೂ ಪುರುಷಾರ್ಥ ಸಾಧನವೆಂದು ಹೇಳಿದ್ದಾನೆ. ಈ ಸನ್ಯಾಸಶಬ್ದ ತ್ಯಾಗಶಬ್ದಗಳಿಗೆ ಒಂದೇ ಅರ್ಥವೋ, ಬೇರೆ ಬೇರೆ ಅರ್ಥವೋ, ಎಂದು ಅವುಗಳ ಸ್ವರೂಪವನ್ನು ತಿಳಿದುಕೊಳ್ಳುವುದಕ್ಕಾಗಿ—

ಗೀ ॥ ॥ ಅರ್ಜುನ ಉವಾಚ ॥

ಓಂ ॥ ಸನ್ನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಂ ।
ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥ ೧ ॥

ಅ ॥ ಅರ್ಜುನಃ=ಅರ್ಜುನನು, ಉವಾಚ=ಪ್ರಶ್ನಿಸುತ್ತಾನೆ. ಮಹಾಬಾಹೋ=ಅಜಾನು ಪರಿಮಿತ ವಾದ ತೋಳುಗಳುಳ್ಳ, ಕೇಶಿನಿಷೂದನ=ಕೇಶಿ ಎಂಬ ಅಸುರನನ್ನು ಸಂಹರಿಸಿದ, ಹೃಷೀಕೇಶ= ಎಲ್ಲಾ ಇಂದ್ರಿಯಗಳಿಗೂ ಪ್ರೇರಕನಾದ ಶ್ರೀಕೃಷ್ಣನೇ, (ಸನ್ಯಾಸ ಶಬ್ದಕ್ಕೂ ತ್ಯಾಗಶಬ್ದಕ್ಕೂ ಅಪಾತತಃ ಒಂದೇ ಅರ್ಥವು ತೋರುವುದರಿಂದ) ಸನ್ಯಾಸಸ್ಯ=ಸನ್ಯಾಸದ, ಚ=ಮತ್ತು, ತ್ಯಾಗಸ್ಯ=ತ್ಯಾಗದ, ತತ್ತ್ವಂ=ಸ್ವರೂಪವನ್ನು, ಪೃಥಕ್=ಪ್ರತ್ಯೇಕವಾಗಿ, ವೇದಿತುಂ=ತಿಳಿದುಕೊಳ್ಳುವುದಕ್ಕೆ, ಇಚ್ಛಾಮಿ= ಅಪೇಕ್ಷಿಸುತ್ತೇನೆ. ॥ ೧ ॥

ಟೀ—ಈ ಅಧ್ಯಾಯದಲ್ಲಿ ಹೇಳಲ್ಪಡತಕ್ಕ ಅರ್ಥವನ್ನು ಹೇಳುತ್ತಾರೆ—

ಭಾ ॥ ಓಂ ॥ ಪೂರ್ವೋಕ್ತಂ ಸಾಧನಂ ಸರ್ವಂ ಸಂಕ್ಷಿಪ್ಯೋಪಸಂಹರತ್ಯನೇನಾಧ್ಯಾಯೇನ ॥ ೧ ॥

ಅ ॥ ಹಿಂದೆ ಹೇಳಿರುವ ಜ್ಞಾನಸಾಧನವೆಲ್ಲವನ್ನೂ ಸಂಗ್ರಹಿಸಿ ಈ ಅಧ್ಯಾಯದಿಂದ ಹೇಳುತ್ತಾರೆ. ಮತ್ತು ಹೇಳದಿರುವ ತ್ರೈಗುಣ್ಯವನ್ನೂ ಹೇಳುತ್ತಾರೆ) ॥ ೧ ॥

ಗೀ ॥ ॥ ಶ್ರೀಭಗವಾನುವಾಚ ॥

ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸನ್ನ್ಯಾಸಂ ಕವಯೋ ವಿದುಃ ।
ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ ೨ ॥

ಅ ॥ ಶ್ರೀಭಗವಾನ್=ಶ್ರೀಕೃಷ್ಣನು, ಉವಾಚ=(ಸನ್ಯಾಸಶಬ್ದಕ್ಕೂ ತ್ಯಾಗಶಬ್ದಕ್ಕೂ ವಿವಕ್ಷಾ ಭೇದದಿಂದ ಅರ್ಥಭೇದವಿದೆ ಎಂಬುವ ಅಭಿಪ್ರಾಯದಿಂದ ಸಮಾಧಾನವನ್ನು) ಹೇಳುತ್ತಾನೆ. ಕವಯಃ...

ಜ್ಞಾನಿಗಳು, ಕಾಮ್ಯಾನಾಂ=ಕಾಮ್ಯಗಳಾದ, ಕರ್ಮಣಾಂ=ಜ್ಯೋತಿಷ್ಟೋಮ ಮೊದಲಾದ ಕರ್ಮಗಳ, ನ್ಯಾಸಂ=ಬಿಡುವಿಕೆಯನ್ನು, ಸನ್ನ್ಯಾಸಂ=ಸನ್ನ್ಯಾಸಶಬ್ದಾರ್ಥವನ್ನಾಗಿ, ವಿದುಃ=ತಿಳಿಯುತ್ತಾರೆ. ವಿಚಕ್ಷಣಾಃ=ಕುಶಲರಾದವರು, ಸರ್ವಕರ್ಮಫಲತ್ಯಾಗಂ=ಎಲ್ಲಾ ಕರ್ಮಗಳಿಗೂ ಭಗವತ್ಪ್ರೀತಿಯಿಂದ ಇತರವಾದ ಫಲದ ತ್ಯಾಗವನ್ನು, ತ್ಯಾಗಂ=ತ್ಯಾಗಶಬ್ದಾರ್ಥವನ್ನಾಗಿ, ಆಹುಃ=ಹೇಳುತ್ತಾರೆ.

ವಿ—(1) ಸ್ವರ್ಗಾದಿರೂಪ ಪುರುಷಾರ್ಥವನ್ನು ಇಚ್ಛಿಸಿ ಜ್ಯೋತಿಷ್ಟೋಮಾದಿಗಳನ್ನು ಮಾಡಿದರೆ ಅವುಗಳು ಕಾಮ್ಯಗಳು. ಸ್ವರ್ಗಾದಿಗಳನ್ನು ಇಚ್ಛಿಸದೆ ಕೇವಲ ಭಗವತ್ಪ್ರೀತಿಯನ್ನುದ್ದೇಶಿಸಿಕೊಂಡು ಅವುಗಳನ್ನು ಮಾಡಿದರೆ ಅವು ಅಕಾಮ್ಯಗಳು. ಹೀಗೆ ಜ್ಯೋತಿಷ್ಟೋಮಾದಿಗಳು ಕಾಮ್ಯ ಅಕಾಮ್ಯಗಳು ಆಗುತ್ತವೆ. ಕಾರೀರ್ಯಾದಿ ಯಾಗಗಳು ವೃಷ್ಟ್ಯಾದಿರೂಪ ಫಲವನ್ನುದ್ದೇಶಿಸಿಕೊಂಡೇ ಮಾಡತಕ್ಕುದಾದುದರಿಂದ ಅವು ನಿಯತ ಕಾಮ್ಯಗಳೇ, ಇವುಗಳಲ್ಲಿ ಜ್ಯೋತಿಷ್ಟೋಮಾದಿಗಳನ್ನು ಸ್ವರ್ಗಾದಿಗಳ ಅಭಿಲಾಷೆಯಿಂದ ಮಾಡದಿರೋಣ, ಕಾರೀರ್ಯಾದಿಗಳನ್ನು ಸರ್ವಥಾ ಮಾಡದಿರೋಣ ಇಂತಹ ತ್ಯಾಗವನ್ನು ಸನ್ನ್ಯಾಸವೆಂದೂ, ಸಮಸ್ತ ಕರ್ಮಗಳನ್ನು ಭಗವತ್ಪ್ರೀತಿಗಾಗಿಯೇ ಮಾಡುವುದೂ, ಭಗವತ್ಪ್ರೀತಿಗಿಂತ ಬೇರೆ ಫಲದ ಪರಿತ್ಯಾಗವನ್ನೂ ತ್ಯಾಗವೆಂದೂ ಹೇಳುತ್ತಾರೆ. ॥ ೨ ॥

ಟೀ—ಅಶ್ವಮೇಧ ಮೊದಲಾದ ಕಾಮ್ಯಕರ್ಮಗಳನ್ನು ಸರ್ವಥಾ ಮಾಡದಿರೋಣವು ಸನ್ನ್ಯಾಸವು, ಸಂಧ್ಯಾವಂದನ ಮೊದಲಾದ ನಿತ್ಯಕರ್ಮ, ಪಿತೃಶ್ರಾದ್ಧ ಮೊದಲಾದ ನೈಮಿತ್ತಿಕಕರ್ಮ ಇದುಮೊದಲಾದ ಸಮಸ್ತಕರ್ಮಗಳ ಫಲತ್ಯಾಗವು ತ್ಯಾಗವು, ಎಂದು ಕಾಮ್ಯಾನಾಂ ಕರ್ಮಣಾಂ ಎಂಬುವ ಶ್ಲೋಕಕ್ಕೆ ಕೆಲವರು ಅರ್ಥಹೇಳುತ್ತಾರೆ. ಅದು ಅಯುಕ್ತವೆಂಬುವ ಅಭಿಪ್ರಾಯದಿಂದ ಹೇಳುತ್ತಾರೆ—

**ಭಾ ॥ (೧) ಫಲಾನಿಚ್ಛಯಾಃಕರಣೇನ ವಾ ಕಾಮ್ಯಕರ್ಮನ್ಯಾಸಃ ಸನ್ನ್ಯಾಸಃ ॥ (೨)**
**ತ್ಯಾಗಸ್ತು ಫಲತ್ಯಾಗ ಏವ ॥ (೩) ತಥಾ ಹಿ ಪ್ರಾಚೀನಶಾಲಶ್ರುತಿಃ । ಅನಿಚ್ಛಯಾಃ**
**ಕರ್ಮಣಾ ವಾಃಪಿ ಕಾಮ್ಯನ್ಯಾಸೋ ನ್ಯಾಸಃ ಫಲತ್ಯಾಗಸ್ತು ತ್ಯಾಗ ಇತಿ ॥೨॥**

ಅ ॥ (೧) (ಕಾಮ್ಯಾಕಾಮ್ಯಗಳಾದ ಜ್ಯೋತಿಷ್ಟೋಮಾದಿಗಳಿಗೆ) ಸ್ವರ್ಗಾದಿ ಫಲವನ್ನು ಇಚ್ಛಿಸದೆ ತ್ಯಾಗವೂ (ಅಂದರೆ ಸ್ವರ್ಗಾದಿರೂಪ ಫಲಕಾಮನೆಯಿಂದ ಮಾಡದಿರೋಣ) ನಿಯಮೇನ ಕಾಮ್ಯಗಳೇ ಆದ ಕಾರೀರ್ಯಾದಿಗಳನ್ನು ಸರ್ವಥಾ ಮಾಡದಿರೋಣವು ಇದು ಸನ್ನ್ಯಾಸವೆನ್ನಿಸುತ್ತದೆ. (೨) ಕಾಮ್ಯಕರ್ಮಗಳಿಗೇನೇ ಸರ್ವಥಾ ಫಲತ್ಯಾಗವು ತ್ಯಾಗವೆನಿಸುತ್ತದೆ. (ಏವಂಚ ಜ್ಯೋತಿಷ್ಟೋಮಾದಿ ಕರ್ಮಗಳನ್ನು ಮಾಡಿಯೇ ಅದರ ಸ್ವರ್ಗ ಮೊದಲಾದ ನಶ್ವರವಾದ ಫಲದ ತ್ಯಾಗವು ಸನ್ನ್ಯಾಸವು. ನಶ್ವರವಾದ ಫಲತ್ಯಾಗ ಮಾತ್ರವು ತ್ಯಾಗವು) (೩) (ಏಕೆ ಹೀಗೆ ಅರ್ಥವನ್ನು ಮಾಡಬೇಕೆಂದರೆ—) ಸ್ವರ್ಗಫಲವನ್ನು ಇಚ್ಛಿಸದಿರೋಣದರಿಂದ ಅಥವಾ ಕರ್ಮವನ್ನು ಮಾಡದಿರೋಣದರಿಂದ ಕಾಮ್ಯಕರ್ಮಗಳನ್ನು ಮಾಡದಿರೋಣವು ಸನ್ನ್ಯಾಸವು. ಸ್ವರ್ಗಾದಿರೂಪ ಫಲವನ್ನು ಇಚ್ಛಿಸದಿರುವುದು ತ್ಯಾಗವೆನಿಸುತ್ತದೆ, ಎಂದು ಪ್ರಾಚೀನಶಾಲ ಶ್ರುತಿಯು.

ವಿ ॥ (1) ಜನಕ, ಅಶ್ವಪತಿ ಮೊದಲಾದ ಮುಮುಕ್ಷುಗಳೂ ಪ್ರಯೋಜನವನ್ನು ಅಪೇಕ್ಷಿಸದೆ ಅಶ್ವಮೇಧಾದಿಗಳನ್ನು ಮಾಡಿರುವುದರಿಂದ ಕಾಮ್ಯಕರ್ಮಗಳನ್ನು ಸರ್ವಥಾ ಮಾಡದಿರುವಿಕೆಯೇ ಸನ್ನ್ಯಾಸವೆಂಬುವುದೂ, ನಿತ್ಯನೈಮಿತ್ತಿಕ ಕರ್ಮಗಳ ಫಲವಾದ ಅಂತಃಕರಣಶುದ್ಧಿಯು ಸರ್ವಾಪೇಕ್ಷಿತವಾದ ಪ್ರಯುಕ್ತ ಅವುಗಳನ್ನು ಬಿಡುವುದು ಸರ್ವಥಾ ಯುಕ್ತವಲ್ಲವಾದಕಾರಣ ಸರ್ವಕರ್ಮಫಲತ್ಯಾಗವು ತ್ಯಾಗವೆಂಬುವುದೂ ಸರ್ವಥಾ ಯುಕ್ತವಲ್ಲ. ಆದಕಾರಣ ಸ್ವರ್ಗ ಮೊದಲಾದ ಕ್ಷುದ್ರಫಲಾಪೇಕ್ಷೆಯಿಂದ ಮಾಡದಿರೋಣ ಮಾತ್ರ ಸನ್ನ್ಯಾಸಶಬ್ದಾರ್ಥವೆಂದು ಹೇಳಬೇಕು. ॥೨॥

ಟೀ—ಈ ಅಧ್ಯಾಯದಲ್ಲಿ ಪ್ರತಿಪಾದ್ಯವಾದ ಅರ್ಥವನ್ನು ಹೇಳುತ್ತಾರೆ—

ಟ॥ ಓಂ ॥ ಸರ್ವಾಧ್ಯಾಯೋಕ್ತಧರ್ಮಸ್ಯ ಸಮಾಸತೋ ನಿರ್ಣಯಾತ್ಮಕೋಽನುಕ್ತ-
ತ್ರೈಗುಣ್ಯಾವಾದೀ ಚಾಯಂ ॥ ೧,೨ ॥

ಅ॥ ಹಿಂದಿನ ಎಲ್ಲಾ ಅಧ್ಯಾಯಗಳಲ್ಲಿ ಬಿಕ್ಕಿ ಅಲ್ಲಲ್ಲಿ ಹೇಳಿದ ಪುರುಷಾರ್ಥಸಾಧನವಾದ ಜ್ಞಾನ ಧನವನ್ನು ಅಜ್ಞಜನರಿಗೆ ಬುದ್ಧಿಯಲ್ಲಿ ದೃಢವಾಗಿ ನಿಲ್ಲುವುದಕ್ಕಾಗಿ ನಿರ್ಣಯಿಸಿ ಸಂಕ್ಷೇಪದಿಂದ ಈ ಅಧ್ಯಾಯದಲ್ಲಿ ಹೇಳುತ್ತಾರೆ. ಮತ್ತು ೧೪ನೇ ಅಧ್ಯಾಯ ಮೊದಲಾದವುಗಳಲ್ಲಿ ಹೇಳದಿದ್ದ ತ್ರೈಗುಣ್ಯ ವನ್ನು ಹೇಳುತ್ತಾರೆ. ॥ ೧, ೨ ॥

ಟೀ—ಶ್ರೀಕೃಷ್ಣನು ಸರ್ವಕರ್ಮಫಲತ್ಯಾಗಂ ಇತ್ಯಾದಿಗಳಿಂದ ತಾನು ಹೇಳಿದ ತ್ಯಾಗಶಬ್ದಾರ್ಥ ವನ್ನು ಅರ್ಜುನನಿಗೆ ನಿಶ್ಚಯಮಾಡಿಸುವ ಬಗ್ಗೆ ಅವಾತತಃ ಇರುವ ವಿದ್ವಾಂಸರ ವಿವಾದವನ್ನು ತಿಳಿಸು ತ್ತಾನೆ—

ಗೀ॥ ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।
ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥ ೩ ॥

ಅ॥ ಏಕೇ ಮನೀಷಿಣಃ=ಕೆಲವು ಜ್ಞಾನಿಗಳು, ದೋಷವತ್=ಬಂಧಕತ್ವರೂಪ ದೋಷದಿಂದ ಕೂಡಿದ, ಕರ್ಮ=ಕಾಮ್ಯಕರ್ಮವನ್ನು, ತ್ಯಾಜ್ಯಮಿತಿ=ಮಾಡಬಾರದೆಂದು, ಆಹುಃ=ಹೇಳುತ್ತಾರೆ. (ಅಂದರೆ ರಾಗಾದಿದೋಷಗಳನ್ನು ಹೇಗೆ ಬಿಡಬೇಕೋ ಹಾಗೆಯೇ ಬಂಧಕವಾದ್ದರಿಂದ ಕಾಮ್ಯಕರ್ಮ ವನ್ನು ಸರ್ವಥಾ ಬಿಡಬೇಕೆಂದು ಹೇಳುತ್ತಾರೆ) ಅಪರೇ ಚ=ಇತರ ಕೆಲವು ಜ್ಞಾನಿಗಳು, ಯಜ್ಞದಾನ ತಪಃಕರ್ಮ=ಜ್ಯೋತಿಷ್ಟೋಮಾದಿ ಯಜ್ಞ, ಭೂದಾನ ಮೊದಲಾದ ದಾನ, ಕೃಚ್ಛ್ರ ಚಾಂದ್ರಾಯಣ ಮೊದಲಾದ ತಪಸ್ಸು. ಯಜ್ಞಕ್ಕೆ ಅಂಗಭೂತಗಳಾದ ಕರ್ಮಕಲಾಪಗಳು, ಅಥವಾ ನಿತ್ಯನೈಮಿತ್ತಿಕ ಕರ್ಮ ಸಮೂಹಗಳು ಇವುಗಳನ್ನೆಲ್ಲಾ, ನ ತ್ಯಾಜ್ಯಮಿತಿ=ಬಿಡಕೂಡದೆಂದು, ಪ್ರಾಹುಃ=ಹೇಳುತ್ತಾರೆ.

ವಿ॥ ಹಿಂದಿನ ಕಲ್ಪದಲ್ಲೂ ಮನೀಷಿಣಃ ಎಂದು ಹೇಳಿದ್ದರಿಂದ ಸ್ವರ್ಗಾದಿ ಫಲತ್ಯಾಗವನ್ನು ಮಾತ್ರ ಒಪ್ಪಿಕೊಳ್ಳಬೇಕಲ್ಲದೆ ಸಂಪೂರ್ಣ ಕರ್ಮಪರಿತ್ಯಾಗವೆಂದರ್ಥವಲ್ಲ. ಆದಕಾರಣ ಎರಡು ಪಕ್ಷಗಳಿಗೆ ಆಪಾತತಃ ವಿರೋಧವು ತೋರಿದರೂ ಫಲತಃ ವಿರೋಧವಿಲ್ಲ. ॥ ೩ ॥

ಟೀ—ತ್ಯಾಜ್ಯಂ ದೋಷವತ್ ಎಂಬುವುದರಿಂದ ಹೇಳಿದ ಸಾಂಖ್ಯರ ಪಕ್ಷವನ್ನು ಹೇಳಿದ್ದರಿಂದ ಅವರು ಹೇಳುವುದು ಅಯುಕ್ತವೆನ್ನುತ್ತಾರೆ—

ಟ॥ (೧) ಮನೀಷಿಣ ಇತಿ ವಿಶೇಷಣಾತ್ಪೂರ್ವಪಕ್ಷೋಽಪಿ ಗ್ರಾಹ್ಯ ಏವ । ಫಲತ್ಯಾ-
ಗೇನ ತ್ಯಾಗೋ ವಿವಕ್ಷಿತಃ ॥ (೨) ಯಜ್ಞಾದೇಸ್ತತ್ಪಕ್ಷೇ ॥ (೩) ಯಸ್ತು ಕರ್ಮಫ-
ಲತ್ಯಾಗೀತಿ ಚ ವಕ್ಷ್ಯತಿ । ಅತ ಏವ ವಿವಾದಃ ಪಕ್ಷಃ ॥ ೩ ॥

ಅ॥ (೧) ಮನೀಷಿಣಃ ಎಂದು ಹೇಳಿದ್ದರಿಂದ ಪೂರ್ವಪಕ್ಷವೂ ಸಹ ಗ್ರಾಹ್ಯ ವೆಂದು ತಿಳಿಯಬೇಕು
ಸ್ವೀಕಾರ್ಯವೇ ಆಗಿದೆ (೨) (ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ಎಂದು

ಭಗವನ್ಮತವಿರುದ್ಧವಾದ ಈ ಪಕ್ಷವನ್ನು ಹೇಗೆ ತೆಗೆದುಕೊಳ್ಳುವುದೆಂದರೆ—) ಸ್ವರ್ಗಾದಿ ರೂಪವಾದ ಫಲವನ್ನು ಬಿಡೋಣ ಎಂಬುವ ಅಭಿಪ್ರಾಯದಿಂದ ಯಜ್ಞಾದಿಗಳ ತ್ಯಾಗವು ವಿವಕ್ಷಿತವಾಗಿದೆ. ಆ ಪಕ್ಷದಲ್ಲಿ ಸಂಪೂರ್ಣ ಯಜ್ಞಾದಿಗಳ ತ್ಯಾಗವೆಂದಲ್ಲ. (ಆದಕಾರಣ ಭಗವನ್ಮತಕ್ಕೆ ಇದು ವಿರುದ್ಧವಾದುದಲ್ಲ.) (೩) (ಕರ್ಮತ್ಯಾಗ ಶಬ್ದಕ್ಕೆ ಫಲತ್ಯಾಗವೆಂದು ಹೇಗೆ ಅರ್ಥವೆಂದರೆ—) ಯಾವನು ಕರ್ಮಫಲವನ್ನು ಬಿಡುವವನೋ, ಎಂದು ಮುಂದಕ್ಕೆ ಹೇಳುವರು. ಆದಕಾರಣ ಜ್ಞಾನಿಗಳ ಪಕ್ಷವಾಗಿರುವುದರಿಂದ ಪೂರ್ವಾರ್ಧದಲ್ಲಿಯೂ ಉತ್ತರಾರ್ಧದಲ್ಲಿಯೂ ಹೇಳಿದ ಪಕ್ಷಗಳೆರಡೂ ವಿರುದ್ಧಗಳಲ್ಲ. (ಮತ್ತೆ ಆಪಾತ ಪ್ರತೀತಿಯಿಂದ ಮಾತ್ರ ಎರಡು ಪಕ್ಷಗಳಿಗೂ ವಿರೋಧವು ತೋರುವುದು ಹೊರತು ವಸ್ತುತಃ ವಿರೋಧವಿಲ್ಲ.) ॥ ೩ ॥

ಟೀ—ವಿರೋಧವಿಲ್ಲದಿರುವ ಪ್ರಕಾರವನ್ನು ಶ್ರೀಕೃಷ್ಣನು ಪ್ರತಿಜ್ಞಾಪೂರ್ವಕವಾಗಿ ಹೇಳುತ್ತಾನೆ—

ಗೀ ॥ ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।
ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ ಸಂಪ್ರಕೀರ್ತಿತಃ ॥ ೪ ॥

ಅ ॥ ಪುರುಷವ್ಯಾಘ್ರ—ಪುರುಷಶ್ರೇಷ್ಠನಾದ. ಭರತಸತ್ತಮ—ಭರತಕುಲದಲ್ಲಿ ಶ್ರೇಷ್ಠನಾದ ಅರ್ಜುನನೇ, ತತ್ರ ತ್ಯಾಗೇ—ವಿವಾದಗ್ರಸ್ತವಾದ ತ್ಯಾಗವಿಷಯದಲ್ಲಿ ನಿಶ್ಚಯಂ—ನಿಶ್ಚಿತವಾದ ಮತವನ್ನು, ಮೇ—ನನ್ನಿಂದ, ಶೃಣು—ಕೇಳಿ ಆಸಕ್ತಿಯನ್ನು ಮಾಡು. ತ್ಯಾಗೋ ಹಿ—ತ್ಯಾಗವಾದರೂ, ತ್ರಿವಿಧಃ—(1. ಫಲತ್ಯಾಗ, 2. ಕರ್ಮದಲ್ಲಿ ನನ್ನದೇ ಎಂಬುವ ಅಭಿಮಾನತ್ಯಾಗ, 3. ಶ್ರೀಪರಮಾತ್ಮನೇ ಸರ್ವಕರ್ತನೆಂದು ಅನುಸಂಧಾನಮಾಡಿಕೊಂಡು ತಾನು ಕರ್ತನೆಂದು ಅಭಿಮಾನವನ್ನು ಬಿಡೋಣ ಹೀಗೆ) ಮೂರು ವಿಧವೆಂದು, ಸಂಪ್ರಕೀರ್ತಿತಃ—ಹೇಳಲ್ಪಟ್ಟಿರುತ್ತದೆ. ॥ ೪ ॥

ಟೀ—ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ಎಂಬುವ ಭಗವನ್ಮತಕ್ಕೆ ವಿರುದ್ಧವಾಗಿರುವುದರಿಂದ ತ್ಯಾಜ್ಯಂ ದೋಷವತ್ ಎಂದು ಕರ್ಮತ್ಯಾಗಮಾಡಬೇಕೆಂದು ಹೇಳುವವರು ನಿಂದ್ಯರು ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ತಾ ॥ (೧) ಮನೀಷಿಣ ಇತ್ಯುಕ್ತತ್ವಾತ್ತೇಽಪ್ಯನಿಂದ್ಯಾಃ ॥ (೨) ಅತಸ್ತ್ಯಾಜ್ಯಂ ದೋಷವದಿತ್ಯಸ್ಯಾರ್ಥಃ ಸಂಗಂ ತ್ಯಕ್ತ್ವಾ ಫಲಂ ಚೇತಿ ॥ ೩,೪ ॥

ಅ ॥ (೧) ಮನೀಷಿಣಃ ಎಂದು ಹೇಳಿದ್ದರಿಂದ ತ್ಯಾಗಮಾಡಬೇಕೆಂದು ಹೇಳುವವರೂ ನಿಂದ್ಯರಲ್ಲ. (೨) (ಆ ಮತವು ಭಗವನ್ಮತಕ್ಕೆ ವಿರುದ್ಧವಾಗಿರುವುದರಿಂದ ಏಕೆ ನಿಂದ್ಯರಲ್ಲವೆಂದರೆ—) (ಕಾರ್ಯಮಿತ್ಯೇವ ಯತ್ಕರ್ಮ ಎಂಬುವಲ್ಲಿ ಹೇಗೆ ಕರ್ಮದಲ್ಲಿ ಸಂಗವನ್ನು ಫಲವನ್ನು ಬಿಡೋಣವೇ ಕರ್ಮತ್ಯಾಗವು ಎಂದು ಹೇಳುತ್ತದೋ, ಕರ್ಮಸ್ವರೂಪತ್ಯಾಗವೆಂದು ಹೇಳುವುದಲ್ಲವೋ) ಹಾಗೆಯೇ ತ್ಯಾಜ್ಯಂ ದೋಷವತ್ ಎಂಬುವುದಕ್ಕೂ ಕರ್ಮದಲ್ಲಿ ಸಂಗವನ್ನೂ ಫಲವನ್ನೂ ಬಿಟ್ಟು ಎಂದು ಅರ್ಥವನ್ನು ಹೇಳಬೇಕಲ್ಲದೆ ಕರ್ಮಸ್ವರೂಪತ್ಯಾಗವೆಂದು ಇಟ್ಟುಕೊಳ್ಳಕೂಡದು. (ಇದು ಭಗವನ್ಮತಕ್ಕೆ ವಿರುದ್ಧವಲ್ಲ.) ॥ ೩, ೪ ॥

ಟೀ—ನಿಶ್ಚಯಂ ಶೃಣು ಎಂದು ಪ್ರತಿಜ್ಞಾತವಾದ ನಿಶ್ಚಿತಮತವನ್ನು ಶ್ರೀಕೃಷ್ಣನು ಅರ್ಜುನನಿಗೆ ತಿಳಿಸುತ್ತಾನೆ—

ಗೀ ॥ ಯಜ್ಞದಾನತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।
ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್ ॥ ೫ ॥

ಅ ॥ ಯಜ್ಞದಾನತಪಃಕರ್ಮ=ದ್ರವ್ಯಯಜ್ಞ ಜ್ಞಾನಯಜ್ಞ ವಿಷ್ಣುನಾಮಾಧ್ಯಯನ ಮೊದಲಾದ ಯಜ್ಞ, ವಿದ್ಯಾದಾನ ಅಭಯದಾನ ಅನ್ನದಾನ ಮೊದಲಾದ ದಾನ, ಸತ್ಯವಚನ ಉಪವಾಸ ಮೊದಲಾದ ತಪಸ್ಸು ಇದು ಮೊದಲಾದ ಅವರವರಿಗೆ ಉಚಿತವಾದ ಕರ್ಮವು, ನ ತ್ಯಾಜ್ಯಂ=ಬಿಡತಕ್ಕದ್ದು. ತತ್= ಯಜ್ಞದಾನತಪೋರೂಪವಾದ ಕರ್ಮವು, ಕಾರ್ಯಮೇವ=ಮಾಡತಕ್ಕದ್ದೇ, (ಏಕೆಂದರೆ) ಯಜ್ಞಃ= ಹಿಂದೆ ಹೇಳಿದ ಯಜ್ಞವೂ, ದಾನಂ=ದಾನವು, ತಪಶ್ಚೈವ=ತಪಸ್ಸೂ ಕೂಡ, ಮನೀಷಿಣಾಂ=ಮನನ ಶೀಲರಾದ ಜ್ಞಾನಿಗಳಿಗೆ, ಪಾವನಾನಿ=ಪಾವಿತ್ರ್ಯವನ್ನುಂಟುಮಾಡುವವುಗಳು. (ಬಂಧಕಗಳಲ್ಲ) ಅಥವಾ ಅಪರೋಕ್ಷಜ್ಞಾನಿಗಳಿಗೆ ಮೋಕ್ಷದಲ್ಲಿ ಆನಂದಾತಿಶಯವನ್ನುಂಟುಮಾಡುವವುಗಳು. (ಆದಕಾರಣ ಸರ್ವರೂ ಯೋಗ್ಯವಾದ ವರ್ಣಾಶ್ರಮಗಳಿಗೆ ಉಚಿತಗಳಾದ ಕರ್ಮಗಳನ್ನು ಮಾಡಲೇಬೇಕು.)

ವಿ ॥ ಯಜ್ಞ ದಾನ ತಪಸ್ಸುಗಳನ್ನು ಎಲ್ಲರೂ ಮಾಡಲೇಬೇಕು. ಅದು ಹೇಗೆ ಕೂಡುತ್ತದೆಂದರೆ ಯತಿಗಳಿಗೆ ಜ್ಞಾನಯಜ್ಞ ಮೊದಲಾದ ಯಜ್ಞವು. ಅಭಯದಾನ ಮೊದಲಾದ ದಾನ, ಬ್ರಹ್ಮಚರ್ಯಾದಿ ರೂಪವಾದ ತಪಸ್ಸು. ಸ್ತ್ರೀ-ಶೂದ್ರಾದಿಗಳಿಗೂ ಭಗವನ್ನಾಮಸ್ಮರಣಾದಿರೂಪವಾದ ಯಜ್ಞ, ಅನ್ನಾದಿ ದಾನ, ಸತ್ಯವಚನ, ಉಪವಾಸಾದಿರೂಪ ತಪಸ್ಸು ಇದೆ. ॥ ೫ ॥

ಪೀ—ಯಜ್ಞಾದಿ ಕರ್ಮಗಳನ್ನು ಮಾಡಲೇಬೇಕು. ಬಿಡತಕ್ಕದೆಂದಾದರೆ ತ್ಯಾಜ್ಯಂ ದೋಷ ವತ್ ಎಂದು ಬಿಡಬೇಕೆಂದು ಹೇಳಿದ್ದು ಹೇಗೆ ಕೂಡುತ್ತದೆಂದರೆ—

ಗೀ ॥ ಏತಾನ್ಯಪಿ ತು ಕರ್ಮಾಣಿ ಸಂಗಂ ತ್ಯಕ್ತ್ವಾ ಫಲಾನಿ ಚ ।
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಂ ॥ ೬ ॥

ಅ ॥ ಏತಾನ್ಯಪಿ ಕರ್ಮಾಣಿ=ಹಿಂದೆ ಹೇಳಿದ ಯಜ್ಞಮೊದಲಾದ ಕರ್ಮಗಳು, ಸಂಗಂ=ನನ್ನ ದೆಂಬುವ ಅಭಿಮಾನರೂಪ ಸ್ನೇಹವನ್ನು ಫಲಾನಿ ಚ=ಸ್ವರ್ಗಮೊದಲಾದ ನಶ್ವರ ಫಲಗಳನ್ನೂ, ತ್ಯಕ್ತ್ವಾ= ಬಿಟ್ಟು, ಕರ್ತವ್ಯಾನಿ=ಮಾಡಲ್ಪಡಬೇಕು, ಇತಿ=ಹೀಗೆ, ನಿಶ್ಚಿತಂ=ನಿಶ್ಚಯಿಸಲ್ಪಟ್ಟ, ಮೇ=ನನ್ನ, ಉತ್ತಮಂ ಮತಂ=ಉತ್ತಮವಾದ ಮತವು.

ವಿ ॥ ಕರ್ಮಗಳಲ್ಲಿ ಮಮತಾಭಿಮಾನಪರಿತ್ಯಾಗ, ಫಲತ್ಯಾಗ ಹೊರತು, ಯಜ್ಞಾದಿ ಕರ್ಮಗಳನ್ನೇ ಮಾಡದಿರೋಣವೆಂದು ಶ್ರೀಕೃಷ್ಣನ ಸಿದ್ಧಾಂತವಲ್ಲ. ಮತ್ತೆ ಶ್ರೀಭಗವಂತನ ಪ್ರೀತಿಗಾಗಿ ಯಜ್ಞಾದಿಕರ್ಮ ಗಳನ್ನು ಮಾಡಲೇಬೇಕು. ॥ ೬ ॥

ಪೀ—ನಿಶ್ಚಯಂಶೃಣು (ಶ್ಲೋ. ೪) ಎಂದು ಪ್ರತಿಜ್ಞಾತವಾದುದನ್ನು ಯಜ್ಞದಾನತಪಃಕರ್ಮ (ಶ್ಲೋ. ೫)ಎಂಬುವುದರಿಂದ ಹೇಳುತ್ತಾರೆ—ಅದರಲ್ಲಿ ಜ್ಯೋತಿಷ್ಟೋಮಾದಿ ಯಜ್ಞ ಹಿರಣ್ಯಾದಿದಾನಗಳಲ್ಲಿ ಯತಿಗಳಿಗೂ ಶೂದ್ರಾದಿಗಳಿಗೂ ಊರ್ಧ್ವರೇತಸ್ತ್ವ ಮೊದಲಾದ ತಪಸ್ಸುಗಳಲ್ಲಿ ಗೃಹಸ್ಥಾದಿಗಳಿಗೂ ಅಧಿಕಾರ ಇಲ್ಲದಿರುವುದರಿಂದ ಸರ್ವರಿಗೂ ಯಜ್ಞಾದಿಗಳು ಕರ್ತವ್ಯವೆಂದು ಹೇಳಿದುದು ಹೇಗೆ ಕೂಡುತ್ತದೆ ಎಂದರೆ -

ಟಾ ॥ (೧) ದ್ರವ್ಯಯಜ್ಞಾದೀನಾಂ ಮಧ್ಯೇ ಸ್ವೋಚಿತೋ ಯಜ್ಞೋ ವಿದ್ಯಾದಾನಾದಿಷು ಸ್ವೋಚಿತಂ ದಾನಂ ಸ್ವೋಚಿತಂ ತಪಶ್ಚ ಸರ್ವೈರ್ವರ್ಣಾಶ್ರಮಿಭಿರನ್ಯೈಶ್ಚ ಕಾರ್ಯ- ಮೇವೇತ್ಯರ್ಥಃ ॥ (೨) ವಿಷ್ಣುನಾಮಸ್ವಾಧ್ಯಾಯೋಽಂತ್ಯಾನಾಂ ಸತ್ಯೋ(ನಾಮಃ)ಪ- ವಾಸಾದಿತಪಶ್ಚ ॥ ೫,೬ ॥

ಅ ॥ (೧) ದ್ರವ್ಯಯಜ್ಞಾದಿಗಳ ಮಧ್ಯದಲ್ಲಿ ಅವರವರಿಗೆ ಯೋಗ್ಯವಾದ ಯಜ್ಞವೂ, ವಿದ್ಯಾದಾನ ಮೊದಲಾದ ದಾನಗಳಲ್ಲಿ ಅವರವರಿಗೆ ಯೋಗ್ಯವಾದ ದಾನವೂ, ಅವರವರಿಗೆ ಯೋಗ್ಯವಾದ ತಪಸ್ಸೂ ಕೂಡ ಎಲ್ಲಾ ವರ್ಣಾಶ್ರಮಿಗಳಿಂದಲೂ ಇತರರಿಂದಲೂ ಮಾಡಲ್ಪಡತಕ್ಕದ್ದೇ, ಎಂದಭಿಪ್ರಾಯವು. (ಅಂದರೆ ಇಲ್ಲಿ ಸರ್ವರಿಗೂ ಜ್ಯೋತಿಷ್ಟೋಮ ಮೊದಲಾದ ಯಜ್ಞಗಳೂ, ಹಿರಣ್ಯಾದಿದಾನಗಳೂ, ಊರ್ಧ್ವರೇತಸ್ತ್ವ ಮೊದಲಾದ ತಪಸ್ಸುಗಳೂ ಇವುಗಳನ್ನು ವಿಧಿಸಲಿಲ್ಲ. ಮತ್ತೆ ದ್ರವ್ಯಯಜ್ಞ ಮೊದಲಾದ ಯಜ್ಞಗಳೂ, ವಿದ್ಯಾದಾನ ಅನ್ನ ದಾನ ಅಭಯದಾನ ಮೊದಲಾದ ದಾನಗಳೂ, ಸತ್ಯವಚನ ಮೊದಲಾದ ತಪಸ್ಸುಗಳೂ ಇವುಗಳನ್ನು ವರ್ಣಾಶ್ರಮೋಚಿತವಾಗಿಯೇ ಅವರವರಿಗೆ ವಿಧಿಸಿರುತ್ತಾರೆ. ಇವುಗಳಲ್ಲಿ ಜ್ಞಾನ ಯಜ್ಞಾದಿಗಳು ಯತಿಮೊದಲಾದವರಿಗೂ ಯೋಗ್ಯಗಳಾಗಿರುವುದರಿಂದ ಎಲ್ಲರಿಗೂ ಯಜ್ಞಾದಿಗಳನ್ನು ವಿಧಿಸಿರುತ್ತಾರೆ.) (೨) (ಹಾಗಾದರೆ ನಾಗ್ನಿರ್ನ ಯಜ್ಞಃ ಶೂದ್ರಸ್ಯ ಇತ್ಯಾದಿಗಳಲ್ಲಿ ತ್ರಿವರ್ಣೇತರರಿಗೆ ಯಾವ ಯಜ್ಞದಲ್ಲಿಯೂ ಅಧಿಕಾರವಿಲ್ಲವೆಂದು ಹೇಳಿದ್ದರಿಂದ ಇದು ಹೇಗೆ ಕೂಡುತ್ತದೆಂದರೆ—) (ಶೂದ್ರಾದಿಗಳಿಗೆ ದ್ರವ್ಯಾದಿಯಜ್ಞದಲ್ಲಿ ಅಧಿಕಾರವಿಲ್ಲದಿದ್ದರೂ) ಭಗವನ್ನಾಮಸ್ಮರಣ ರೂಪವಾದ ಸ್ವಾಧ್ಯಾಯ ಯಜ್ಞದಲ್ಲಿಯೂ, ಯಥಾರ್ಥನುಡಿ ಏಕಾದಶ್ಯುಪವಾಸ ಮೊದಲಾದ ತಪಸ್ಸಿನಲ್ಲಿಯೂ ಅಧಿಕಾರವಿದೆ. ॥ ೬ ॥

ಪೀ—ತ್ಯಾಗವು ಮೂರು ವಿಧವೆಂದು ಹೇಳಿದ್ದನ್ನು ವಿವರವಾಗಿ ಹೇಳುತ್ತಾರೆ—

ಗೀ ॥ ನಿಯತಸ್ಯ ತು ಸನ್ನ್ಯಾಸಃ ಕರ್ಮಣೋ ನೋಪಪದ್ಯತೇ ।
ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ ॥ ೭ ॥

ಅ ॥ ನಿಯತಸ್ಯ—ತಂತಮ್ಮ ವರ್ಣಾಶ್ರಮಗಳಿಗೆ ಉಚಿತವಾದ, ಕರ್ಮಣಃ—ಕರ್ಮದ, ಸನ್ನ್ಯಾಸಸ್ತು—ಬಿಡೋಣವು, ನೋಪಪದ್ಯತೇ—ಯುಕ್ತವಲ್ಲ. (ಅಂದರೆ ಶಾಸ್ತ್ರಗಳಲ್ಲಿ ತಮಗೆ ವಿಹಿತಗಳಾದ ಯಜ್ಞಾದಿಗಳನ್ನು ಬಿಟ್ಟರೆ ನರಕಾದ್ಯನರ್ಥಗಳುಂಟಾಗುವವು.) ಮೋಹಾತ್—ಯಜ್ಞಾದಿಗಳನ್ನು ಬಿಡುವುದೇ ತ್ಯಾಗಶಬ್ದಾರ್ಥವು, ಸಂಗಫಲಗಳ ಬಿಡೋಣವು ತ್ಯಾಗಶಬ್ದಾರ್ಥವಲ್ಲವೆಂಬೀ ಭ್ರಮೆಯಿಂದ ತಸ್ಯ—ವಿಹಿತವಾದ ಯಜ್ಞಾದಿಕರ್ಮದ, ಪರಿತ್ಯಾಗಃ—ಬಿಡೋಣವು, ತಾಮಸಃ—ತಾಮಸತ್ಯಾಗವೆಂದು, ಪರಿಕೀರ್ತಿತಃ—ಹೇಳಲ್ಪಟ್ಟಿರುತ್ತದೆ. ॥ ೭ ॥

ಪೀ—ತಾಮಸತ್ಯಾಗವನ್ನು ಹೇಳಿ ರಾಜಸತ್ಯಾಗವನ್ನು ಹೇಳುತ್ತಾರೆ—

ಗೀ ॥ ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ ।
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ ॥ ೮ ॥

ಅ ॥ ಕರ್ಮ—ತಂತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ಯಜ್ಞ ಮೊದಲಾದ ಕರ್ಮವು, ದುಃಖಮಿತ್ಯೇವ—ದುಃಖಕ್ಕೆ ಕಾರಣವೆಂದೇ, ಕಾಯಕ್ಲೇಶಭಯಾತ್—ದೇಹಕ್ಕೆ ಕಷ್ಟವಾಗುತ್ತದೆಂಬ ಭಯದಿಂದ, ತ್ಯಜೇದಿತಿ ಯತ್—ಬಿಡುವುದೆಂಬುವುದು ಯಾವುದೋ, ಸಃ—ದೇಹಾಯಾಸಭಯದಿಂದ ಬಿಟ್ಟ ಈ ಕರ್ಮತ್ಯಾಗವು, (ರಾಜಸತ್ಯಾಗವೆನಿಸುತ್ತದೆ) ರಾಜಸಂ ತ್ಯಾಗಂ—ಆ ರಾಜಸತ್ಯಾಗವನ್ನು, ಕೃತ್ವಾ—ಮಾಡಿ, ತ್ಯಾಗಫಲಂ—ತ್ಯಾಗನಿಮಿತ್ತವಾದ ಭಗವತ್ಪ್ರೀತಿರೂಪವಾದ ಫಲವನ್ನು, ನೈವ ಲಭೇತ್—ಸರ್ವಥಾ ಎಂದಿಗೂ ಹೊಂದುವುದೇ ಇಲ್ಲ. ॥ ೮ ॥

ಟೀ—ಸಾತ್ತ್ವಿಕತ್ಯಾಗವನ್ನು ಹೇಳುತ್ತಾರೆ—

೯॥ ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।
ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ ಸಾತ್ತ್ವಿಕೋ ಮತಃ ॥ ೯ ॥

ಅ॥ ಅರ್ಜುನ=ಅರ್ಜುನನೇ, ನಿಯತಂ ಕರ್ಮ=ಆಯಾಯ ವರ್ಣಾಶ್ರಮಗಳಿಗೆ ವಿಹಿತವಾದ ಭಗವತ್ಪ್ರೀತಿಕರವಾದ ಯಜ್ಞಾದಿರೂಪ ಕರ್ಮವು, ಕಾರ್ಯಮಿತ್ಯೇವ=ಅವಶ್ಯವಾಗಿ ಕರ್ತವ್ಯವೇ ಇಲ್ಲವಾದರೆ ಪಾಪವು ಬರುವುದೆಂದು ತಿಳಿದುಕೊಂಡು, ಸಂಗಂ=ನಾನೇ ಸ್ವತಂತ್ರಕರ್ತನೆಂಬುವ ಅಭಿಮಾನವನ್ನು, ಫಲಂ ಚ=ಸ್ವರ್ಗಾದಿರೂಪ ಫಲೇಚ್ಛೆಯನ್ನು, ತ್ಯಕ್ತ್ವಾ=ಬಿಟ್ಟು. ನಿಯತಂ=ಸ್ವವರ್ಣಕ್ಕೆ ಚೋದಿತವಾದ ಕರ್ಮ=ಯಜ್ಞಾದಿರೂಪ ಕರ್ಮವು, ಯತ್ಕ್ರಿಯತೇ=ಯಾವುದು ಮಾಡಲ್ಪಡುತ್ತದೋ, ಸ ತ್ಯಾಗಃ=ಕರ್ಮಾನುಷ್ಠಾನಸಹಿತವಾದ ಆ ಫಲತ್ಯಾಗವು, ಸಾತ್ತ್ವಿಕಃ=ಸಾತ್ತ್ವಿಕ ತ್ಯಾಗವೆಂದು, ಮತಃ=ಸಮ್ಮತವಾದುದು. ॥ ೯ ॥

ಟೀ— ನ ದ್ವೇಷ್ಟ್ಯಕುಶಲಂ ಕರ್ಮ (ಶ್ಲೋ. ೧೦) ಇತ್ಯಾದಿಗಳಲ್ಲಿ ಕರ್ಮತ್ಯಾಗವನ್ನು ತಾನೇ ಸ್ತುತಿಸುವುದರಿಂದ ಕರ್ಮತ್ಯಾಗಕ್ಕೆ ಮೋಹವು ನಿಮಿತ್ತವೆಂಬುವುದು ಹೇಗೆ? ಎಂದರೆ—

ತಾ॥ (೧) ಸಂಗಫಲತ್ಯಾಗಮ್ಯತೇ ಸ್ವರೂಪತ್ಯಾಗಃ ಕಾರ್ಯ ಇತಿ ಮಿಥ್ಯಾಜ್ಞಾನಾಖ್ಯಮೋಹಾತ್ ॥ (೨) ಸ್ವಯಜ್ಞಾದೀನ್ಪರಿತ್ಯಜ್ಯ ನಿರಯಂ ಯಾತ್ಯಸಂಶಯಮಿತಿ ಪಾದ್ಮೇ ॥ (೩) ಮೋಹಂ ವಿನಾ ದೃಷ್ಟದುಃಖಮಿತ್ಯೇವ ॥ (೪) ದುಃಖಶಬ್ದೇನ ಕೇವಲಮಾನಸಂ । ಕಾಯಕ್ಲೇಶಸ್ಯ ಪೃಥಗುಕ್ತೇಃ ॥ (೫) ದುಃಖಂ ತು ಮಾನಸಂ ಜ್ಞೇಯಮಾಯಾಸೋ ಬಾಹ್ಯ ಉಚ್ಯತೇ । ವಿಶೇಷಸ್ಯ ವಿವಕ್ಷಾಯಾಮನ್ಯಥಾ ಸರ್ವಮೇವ ತ್ವಿತಿ ಶಬ್ದನಿರ್ಣಯೇ(ತತ್ತ್ವ) ॥ ೭,೮,೯ ॥

ಅ॥ (೧) ಅಭಿಮಾನತ್ಯಾಗ ಫಲತ್ಯಾಗ ಹೊರತು ಯಜ್ಞಾದಿಗಳನ್ನೇ ಬಿಡಬೇಕೆಂಬುವ ಮಿಥ್ಯಾಜ್ಞಾನವೆಂಬುವ ಮೋಹದಿಂದ (೨) (ಯಜ್ಞಾದಿಗಳ ಪರಿತ್ಯಾಗಕ್ಕೆ ಮೋಹವು ನಿಮಿತ್ತವೆಂಬುವುದು ಹೇಗೆ ಎಂದರೆ—) ತಮಗೆ ವಿಹಿತಗಳಾದ ಯಜ್ಞಾದಿಗಳನ್ನು ಬಿಟ್ಟರೆ ನಿಸ್ಸಂಶಯವಾಗಿ ನರಕವನ್ನು ಹೊಂದುತ್ತಾನೆಂದು ಪಾದ್ಮಪುರಾಣದಲ್ಲಿದೆ. (೩) (ಪುರುಷಾರ್ಥ ಸಾಧನವಾದ ಕರ್ಮದಲ್ಲಿ ಇದು ದುಃಖಸಾಧನವೆಂಬುವ ಮಿಥ್ಯಾಜ್ಞಾನದಿಂದ ಯಜ್ಞಾದಿ ಕರ್ಮತ್ಯಾಗವು ರಾಜಸವೆಂದು ಹೇಳಿದ್ದರಿಂದ ತಾಮಸವು ಹೇಗೆ ಎಂದರೆ) ಕರ್ಮಮಾಡಿದರೆ ಪರಲೋಕದಲ್ಲಿ ದುಃಖವುಂಟಾಗುವುದೆಂದು ಮಿಥ್ಯಾಜ್ಞಾನವು ತಾಮಸತ್ಯಾಗಕ್ಕೆ ಕಾರಣವು. ರಾಜಸತ್ಯಾಗಕ್ಕೆ ಮಿಥ್ಯಾಜ್ಞಾನವು ಕಾರಣವಲ್ಲ. ಮತ್ತೆ ಕರ್ಮಮಾಡುವ ಕಾಲದಲ್ಲಿಯೇ ಈ ಕರ್ಮದಿಂದ ದುಃಖ ಉಂಟಾಗುವುದು. ಆದಕಾರಣ ತಾತ್ಕಾಲಿಕ ದುಃಖಕ್ಕೆ ಸಾಧನವಾಗಿರುವುದರಿಂದ ಇದನ್ನು ಮಾಡಬಾರದು. ಹೀಗೆ ರಾಜಸತ್ಯಾಗಕ್ಕೆ ತಾತ್ಕಾಲಿಕ ದುಃಖಸಾಧನತ್ವಾನುಸಂಧಾನವು ಕಾರಣವು ಹೀಗೆ ಭೇದವು (೪) (ದುಃಖಶಬ್ದದಿಂದ ಶರೀರಾಯಾಸವನ್ನು ಇಟ್ಟುಕೊಳ್ಳಬೇಕೆಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—) ಶರೀರಾಯಾಸವನ್ನು ಪ್ರತ್ಯೇಕ ಹೇಳಿದ್ದರಿಂದ ದುಃಖಶಬ್ದದಿಂದ ಕೇವಲ ಮಾನಸದುಃಖವನ್ನು ಹೇಳಬೇಕು. (೫) (ದುಃಖಶಬ್ದದಿಂದ ಮಾನಸ ದುಃಖವನ್ನು ಇಟ್ಟುಕೊಳ್ಳಬೇಕೆಂಬ ವಿಷಯದಲ್ಲಿ ಪ್ರಮಾಣ ಹೇಳುತ್ತಾರೆ-) ದುಃಖಶಬ್ದಾರ್ಥವೂ ಆಯಾಸಶಬ್ದಾರ್ಥವೂ ಒಂದೇ ಎಂದು

ಹೇಳಿದರೆ ಪುನರುಕ್ತ್ಯಾದಿ ದೋಷಗಳು ಬರುವುದರಿಂದ ಅರ್ಥವಿಶೇಷವನ್ನೂ ಇಟ್ಟುಕೊಳ್ಳುವಾಗಲೇ ದುಃಖ ಶಬ್ದದಿಂದ ಮಾನಸ ದುಃಖವನ್ನು ಆಯಾಸಶಬ್ದದಿಂದ ಬಾಹ್ಯವಾದ ಶರೀರಾಯಾಸವನ್ನೂ ಇಟ್ಟುಕೊಳ್ಳಬೇಕು. ಅರ್ಥವಿಶೇಷವನ್ನು ವಿವಕ್ಷಾಮಾಡದೆ ಇದ್ದಾಗ ಸರ್ವವೂ ದುಃಖವೆಂದೇ ಎನಿಸಿಕೊಳ್ಳುತ್ತದೆ. (ಅಂದರೆ—ಮಾನಸ ದುಃಖ, ಶರೀರಾಯಾಸ ಇವೆರಡೂ ದುಃಖಂ, ಆಯಾಸಃ. ಈ ಎರಡು ಪದಗಳಿಂದಲೂ ಹೇಳಲ್ಪಡುತ್ತದೆ. ಎರಡು ಪದಗಳೂ ಎರಡು ಅರ್ಥಗಳನ್ನೂ ಹೇಳುತ್ತದೆ.) ಎಂದು ಶಬ್ದನಿರ್ಣಯ (ಶಬ್ದ ಶಾಸ್ತ್ರದಲ್ಲಿ ಇದೆ. ॥ ೭. ೮, ೯, ೧

ಪೀ— ಸಾತ್ವಿಕತ್ಯಾಗಿಯ ಲಕ್ಷಣವನ್ನು ವಿವರಿಸುತ್ತಾರೆ—

## ಗೀ ॥ ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।
## ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥ ೧೦ ॥

ಅ ॥ (ಯಾವನು) ಅಕುಶಲಂ=ಕಾಲದಲ್ಲಿ ಸುಖವನ್ನುಂಟುಮಾಡದೇನೇ ಶರೀರಕ್ಕೆ ಕ್ಲೇಶ (ದುಃಖ)ವನ್ನುಂಟುಮಾಡುವ, ಕರ್ಮ ಅನಿಷ್ಟಕರ್ಮವನ್ನು, ನ ದ್ವೇಷ್ಟಿ=ದ್ವೇಷಿಸುವುದೂ ಇಲ್ಲವೋ, ಕುಶಲೇ=ತತ್ಕಾಲದಲ್ಲಿ ಸುಖವನ್ನುಂಟುಮಾಡುವಸ್ವರ್ಗಾದಿಗಳನ್ನು ಕೊಡುವ ಪೂರ್ವಾರ್ಜಿತ ಪುಣ್ಯ ಫಲದಲ್ಲಿ, ನಾನುಷಜ್ಜತೇ= ಸ್ನೇಹವಾಡುವುದಿಲ್ಲವೋ, ಸತ್ತ್ವಸಮಾವಿಷ್ಟಃ=ಸತ್ತ್ವಗುಣದಿಂದ ಕೂಡಿದವನೋ, ಮೇಧಾವೀ=ಭಗವದ್ವಿಷಯಕ ತತ್ತ್ವಜ್ಞಾನವುಳ್ಳವನೋ, ಛಿನ್ನಸಂಶಯಃ=ಪರಾಪರ ತತ್ತ್ವವಿಷಯದಲ್ಲೂ ಭಗವದ್ಧರ್ಮಗಳನ್ನು ಮಾಡುವ ವಿಷಯದಲ್ಲೂ ಸಂಶಯವಿಲ್ಲದವನೋ, (ಅಂತಹ ಮಾನವನು ಫಲಕಾಮನೆಗಳನ್ನು ತೊರೆದು ಶ್ರೀ ಪರಮಾತ್ಮನಲ್ಲಿ ಸಮಸ್ತ ಕರ್ಮಗಳನ್ನು ಸಮರ್ಪಿಸಿದವನು) ತ್ಯಾಗೀ= ಸಾತ್ವಿಕ ತ್ಯಾಗಿಯು ಎನಿಸುತ್ತಾನೆ. ೧೦

ಭಾ ॥ (೧) ತತ್ಪ್ರಕಾರಂ ಚಾಹ । ನಿಶ್ಚಯಮಿತ್ಯಾದಿನಾ ॥ (೨) ಯಜ್ಞಭೇದ ಉಕ್ತೇ ದ್ರವ್ಯಯಜ್ಞಾ ಇತ್ಯಾದಿನಾ । ದಾನೇ ತ್ವಭಯದಾನಮಂತರ್ಭವತಿ । ಏತೇಷಾಂ ಮಧ್ಯೇ ಯತ್ಕಿಂಚಿದ್ಯಜ್ಞಾದಿಕಂ ಕರ್ತವ್ಯಮೇವೇತ್ಯರ್ಥಃ ॥ (೩) ಅನ್ಯಥಾ । ಬ್ರಹ್ಮಚಾರೀ ಗೃಹಸ್ಥೋ ವಾ ವಾನಪ್ರಸ್ಥೋ ಯತಿಸ್ತಥಾ । ಯದೀಚ್ಛೇನ್ಮೋಕ್ಷಮಾಸ್ಥಾತುಮುತ್ತಮಾಶ್ರಮಮಾಶ್ರಯೇದಿತ್ಯಾದಿವ್ಯಾಸಸ್ಮೃತಿವಿರೋಧಃ ॥ (೪) ಜ್ಞಾನಯಜ್ಞವಿದ್ಯಾಭಯದಾನಬ್ರಹ್ಮಚರ್ಯಾದಿತಪಸೋ ಹಿ ತೇ ॥(೫)ಅತೋ ಯದ್ವಚೋಽನ್ಯಥಾ ಪ್ರತೀಯತೇ ಅಧಿಕಾರಿಭೇದೇನ ತದ್ಯೋಜ್ಯಂ ॥ (೬) ಅನ್ಯಥೇತರೇಷಾಂ ಗತ್ಯಭಾವಾತ್ ॥ ೯—೧೦ ॥

ಅ ॥ (೧) (ಮನೀಷಿಣಃ ಎಂಬುವ ವಿಶೇಷಣ ಇರುವ ಮಾತ್ರದಿಂದ ಆ ಮತಗಳಿಗೆ ವಿರೋಧವಿಲ್ಲವೆಂದಲ್ಲ. ಮತ್ತೆ) ನಿಶ್ಚಯಂ ಶೃಣು (ಶ್ಲೋ. ೪) ಆರಂಭಿಸಿ ಮೇಧಾವೀ ಛಿನ್ನಸಂಶಯಃ (ಶ್ಲೋ. ೧೦) ಪರ್ಯಂತ ಅವಿರೋಧಪ್ರಕಾರವನ್ನು ಹೇಳುತ್ತಾರೆ. (೨) (ಪರಮಹಂಸರಿಗೆ ಯಜ್ಞ, ದಾನಗಳು ಇಲ್ಲದಿರುವುದರಿಂದ ನ ತ್ಯಾಜ್ಯಂ ಕಾರ್ಯಮೇವ ತತ್ (ಶ್ಲೋ. ೫) ಎಂದದ್ದು ಹೇಗೆ? ಎಂದರೆ ) ದ್ರವ್ಯಯಜ್ಞಾಸ್ತಪೋಯಜ್ಞಾಃ (ಅ ೪-ಶ್ಲೋ.೨೮) ಇತ್ಯಾದಿಗಳಿಂದ ಯಜ್ಞಗಳ ಭೇದವು ಹೇಳಲ್ಪಟ್ಟಿದೆ

...ನಲ್ಲಾದರೂ ಅಭಯದಾನವೂ ಸೇರುತ್ತದೆ. ಬಹುಪ್ರಕಾರಗಳಾದ ಯಜ್ಞಾದಿಗಳ ಮಧ್ಯದಲ್ಲಿ ಅವರ ...ಗೆ ಏಹಿಕಗಳಾದ ಕೆಲವು ಯಜ್ಞಾದಿಗಳನ್ನು ಮಾಡಲೇಬೇಕು. (೨) (ಜ್ಯೋತಿಷ್ಟೋಮಾದಿಗಳೇ ...ಜ್ಞವು, ಧನದಾನಾದಿಗಳೇ ದಾನವು, ಎಂದು ಇಟ್ಟುಕೊಂಡು ಪರಮಹಂಸರಲ್ಲಿ ಯಜ್ಞದಾನಗಳು ...ಲ್ಲದಿರುವುದರಿಂದ ಸನ್ನ್ಯಾಸಾಶ್ರಮಸ್ವೀಕಾರವೇ ಅಯುಕ್ತವೆಂದು ಏಕೆ ಹೇಳಬಾರದೆಂದರೆ—) ...ರಮಹಂಸ್ಯವನ್ನು ಸ್ವೀಕರಿಸಕೂಡದೆಂದು ಇಟ್ಟುಕೊಂಡರೆ ಬ್ರಹ್ಮಚಾರಿಯಾಗಲೀ, ಗೃಹಸ್ಥಾ... ...ಮಿಯಾಗಲೀ, ವಾನಪ್ರಸ್ಥನಾಗಲೀ, ಹಂಸ-ಪರಮಹಂಸ ಮೊದಲಾದವರಾಗಲೀ ಮೋಕ್ಷವನ್ನು ...ಂದಲಿಕ್ಕೆ ಇಚ್ಛಿಸಿದರೆ ಎಲ್ಲಾ ಆಶ್ರಮಗಳಿಗಿಂತ ಉತ್ತಮವಾದ ಸನ್ನ್ಯಾಸಾಶ್ರಮವನ್ನು ...ಕರಿಸಬೇಕು, ಇದು ಮೊದಲಾದ ಸನ್ನ್ಯಾಸಾಶ್ರಮವನ್ನು ಸ್ವೀಕರಿಸಬೇಕೆಂದು, ಹೇಳುವ ...ತಿಯಿಂದ ವಿರೋಧವು ಬರುವುದು. (೪) (ಹೀಗೆ ವ್ಯಾಖ್ಯಾನ ಮಾಡಿದರೂ ಪರಮಹಂಸರಿಗೆ ...ಜ್ಞಾದಿಗಳು ಇವೆ ಎಂಬುವುದು ಹೇಗೆ ಸಿದ್ಧವಾಗುತ್ತವೆ? ಎಂದರೆ—) ಪರಮಹಂಸರೂ ಕೂಡ ...ಜ್ಞಾನಾಖ್ಯಯಜ್ಞ, ವಿದ್ಯಾ-ಅಭಯವಿಷಯಕ ದಾನ, ಬ್ರಹ್ಮಚರ್ಯ-ಮೊದಲಾದ ತಪಸ್ಸು—ಇವುಗಳುಳ್ಳ ...ರೇ. (೫) (ಹಾಗಾದರೆ ಪ್ರಿಯವ್ರತರಾಜನು ಸನ್ನ್ಯಾಸಾಶ್ರಮಸ್ವೀಕಾರಕ್ಕೆ ಪ್ರವೃತ್ತಿಮಾಡಿದಾಗ ಚತು...ರ್ಮುಖನು ಸನ್ನ್ಯಾಸಾಶ್ರಮವನ್ನು ಸ್ವೀಕರಿಸಬಾರದೆಂದು ಹೇಳಿದನೆಂದು ಪುರಾಣಗಳಲ್ಲಿ ಹೇಳಿರುವುದ...ರಿಂದ ಸನ್ನ್ಯಾಸಾಶ್ರಮವನ್ನು ಸ್ವೀಕರಿಸಬೇಕೆಂಬುವುದು ಹೇಗೆ ಕೂಡುತ್ತದೆ? ಎಂದರೆ—) ಅದುದರಿಂದ ...ವಚನವು ವ್ಯರ್ಥವಾಗಿ ತೋರುತ್ತದೋ, ಅದನ್ನು ಅಧಿಕಾರಿಭೇದದಿಂದ ಕೂಡಿಸಬೇಕು. ...ಂದರೆ ಪ್ರಿಯವ್ರತನು ಕರ್ಮಯೋಗಿಯಾಗಿರುವುದರಿಂದ ಸನ್ನ್ಯಾಸಾಶ್ರಮಸ್ವೀಕಾರಕ್ಕೆ ಅಧಿಕಾರಿಯಲ್ಲ ...ಬುವ ಅಭಿಪ್ರಾಯದಿಂದ ಚತುರ್ಮುಖನು ತಡೆದನೆಂದು ತಿಳಿಯಬೇಕು.) (೬) (ಅಧಿಕಾರಿಭೇದದಿಂದ ...ರಾಣಗಳನ್ನು ಕೂಡಿಸದಿದ್ದರೆ ಬ್ರಹ್ಮಚಾರೀ ಗೃಹಸ್ಥೋ ವಾ ಇತ್ಯಾದಿ ವಾಕ್ಯಗಳಿಗೆ ಬೇರೆ ಅರ್ಥ ...ಳಲು ಸಾಧ್ಯವೇ ಇಲ್ಲದಿರುವುದರಿಂದ ಆ ವಾಕ್ಯಗಳು ಅಪ್ರಮಾಣಗಳೇ ಆಗಬೇಕಾಗುವುದು. ॥೪-೧೦॥

ಹೀ—ಕರ್ತವ್ಯಾನೀತಿ ಮೇ ಪಾರ್ಥ (ಶ್ಲೋ. ೬) ಎಂಬುವಲ್ಲಿ ಸಂಗ-ಫಲಗಳ ತ್ಯಾಗವೇ ತ್ಯಾಗ ...ಬ್ದಾರ್ಥವೆಂದು ತನ್ನ ಸಿದ್ಧಾಂತವನ್ನು ಹೇಳಿರುವಾಗ ನಹಿ ದೇಹಭೃತಾ ಶಕ್ಯಂ ಎಂಬುವ ಶ್ಲೋಕವನ್ನು ...ಳಿದ್ದು ಏತಕ್ಕೆಂದರೆ—ತ್ಯಾಜ್ಯಂ ದೋಷವತ್ (ಶ್ಲೋ. ೩) ಎಂಬುವಲ್ಲಿ ಹೇಳಿದ ತ್ಯಾಗವು ಸರ್ವಥಾ ...ಕರ್ಮಪರಿತ್ಯಾಗರೂಪವಾಗಲೀ, ಏಹಿಕಕರ್ಮತ್ಯಾಗವಾಗಲೀ ತ್ಯಾಗಶಬ್ದಾರ್ಥವಲ್ಲವೆಂದು ದೃಢಪಡಿ...ಸುವ ಉದ್ದಿಶ್ಯ ಈ ಶ್ಲೋಕವು. ಎನ್ನುತ್ತಾರೆ—

## ಗೀ ॥ ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।
## ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ ೧೧ ॥

ಅ ॥ ಅಶೇಷತಃ ಕರ್ಮಾಣಿ=ಎಲ್ಲಾ ಕರ್ಮಗಳನ್ನು, ತ್ಯಕ್ತುಂ=ಬಿಡಲಿಕ್ಕೆ, ದೇಹಭೃತಾ=ದೇಹ...ವುಳ್ಳ ಯಾವನೊಬ್ಬ ಪುರುಷನಿಂದಲೂ, ನಹಿ ಶಕ್ಯಂ=ಸರ್ವಥಾ ಶಕ್ಯವೇ ಅಲ್ಲ. ಹಿ=ಅದಕಾರಣ, ...ಸ್ತು=ಯಾವನು, ಕರ್ಮಫಲತ್ಯಾಗೀ=ಕರ್ಮಫಲವನ್ನು ತ್ಯಾಗಮಾಡಿದವನೋ, ಸಃ=ಅತನೇ.(ಮುಮುಕ್ಷು...ಗಳನ್ನು ಬಿಟ್ಟವನೇ,) ತ್ಯಾಗೀತಿ=ತ್ಯಾಗಿಯೆಂದು, ಅಭಿಧೀಯತೇ=ಅನ್ನಿಸಿಕೊಳ್ಳುತ್ತಾನೆ. (ಅದಕಾರಣ ತ್ಯಾಜ್ಯಂ ದೋಷವತ್ ಎಂಬುವಲ್ಲಿ ಸಂಗ-ಫಲಗಳತ್ಯಾಗವೇ ತ್ಯಾಗಶಬ್ದಾರ್ಥವೆಂದು ವಿವಕ್ಷಿತವು )॥ ೧೧ ॥

ಹೀ—ಕರ್ತವ್ಯಾನೀತಿ ಮೇ ಪಾರ್ಥ (ಶ್ಲೋ. ೬) ಎಂದು ಶ್ರೀಕೃಷ್ಣನು ತನ್ನ ಸಿದ್ಧಾಂತವನ್ನು ಹೇಳಿದನು. ಅದಕಾರಣ ನಹಿ ದೇಹಭೃತಾ ಎಂಬುವುದು ಏಕೆ? ಎಂದರೆ—

ಭಾ ॥ ಅನ್ಯಸ್ತ್ಯಾಗಾರ್ಥೋ ನ ಯುಕ್ತ ಇತ್ಯಾಹ । ನ ಹೀತಿ ॥ ೧೧ ॥

ಅ ॥ ಸರ್ವಕರ್ಮಪರಿತ್ಯಾಗವು ತ್ಯಾಗಶಬ್ದಾರ್ಥವು ಎಂಬುವುದು ಯುಕ್ತವಲ್ಲವೆಂದು ನ ಹಿ ದೇಹಭೃತಾ ಎಂಬುವುದರಿಂದ ಹೇಳುತ್ತಾರೆ. ॥ ೧೧ ॥

ಟೀ—ಸಾತ್ವಿಕತ್ಯಾಗಿಯನ್ನು ಪುನಃ ನ ದ್ವೇಷ್ಟಿ (ಶ್ಲೋ. ೧೦) ಎಂಬುವ ಶ್ಲೋಕದಿಂದ ವಿವರಿಸುತ್ತಾರೆ. ಅದರಲ್ಲಿ ಸಾತ್ವಿಕತ್ಯಾಗಿಗೆ ಅಕುಶಲಕರ್ಮದಲ್ಲಿ ಅದ್ವೇಷವೂ ಕುಶಲಕರ್ಮದಲ್ಲಿ ಅಸಂಗವೂ ಹೇಗೆ ಹೇಳುವುದು? ಕಾರ್ಯಮಿತ್ಯೇವ (ಶ್ಲೋ ೯) ಎಂಬೀವಚನ ವಿರೋಧವು ಬರುವುದು ಎಂದರೆ ಅದನ್ನೇ ಪ್ರಮಾಣಾಂತರದಿಂದ ವ್ಯಾಖ್ಯಾನಮಾಡುತ್ತಾರೆ.—

ತಾ ॥ (೧) ನ ದ್ವೇಷ್ಟ್ಯಕುಶಲಂ ಕರ್ಮ ಕೇವಲಂ ದೃಷ್ಟದುಃಖದಂ । ಜನ್ಮಾಂತರಕೃತೇ ಪುಣ್ಯೇ ನ ಸಜ್ಜೇತ್ಸಾತ್ವಿಕಸ್ತ್ವಲೇ ॥ (೨) ಯಃ ಸಮ್ಯಕ್ತ್ಯಕ್ತವಿದ್ವಿಷ್ಣೋಸ್ತದರ್ಪಣಧಿಯೈವ ತು । ಫಲೇಚ್ಛಾವರ್ಜಿತಸ್ತಸ್ಯ ಕರ್ಮಬಂಧಾಯ ನೋ ಭವೇತ್ ॥ (೩) ಬಹುಲಂ ಚೇದಲ್ಪದೋಷಂ ಯಾವದೇವಾಪರೋಕ್ಷದೃಗಿತಿ ಚ ॥ ೧೦,೧೧ ॥

ಅ ॥ (೧) ತತ್ಕಾಲದಲ್ಲಿ ಸುಖದಾಯಕವಾಗದೆ ಕೇವಲ ದುಃಖವನ್ನೇ ಕೊಡುವ ಅನಿಷ್ಟಕರ್ಮವನ್ನು ದ್ವೇಷಿಸುವುದೂ ಇಲ್ಲ. ಸಾತ್ವಿಕನು ಪೂರ್ವಜನ್ಮಾರ್ಜಿತವಾದ ನಶ್ವರವಾದ ಸ್ವರ್ಗಾದಿ ವಿಷಯಕವಾದ ಪುಣ್ಯಫಲದಲ್ಲಿ ಸ್ನೇಹವನ್ನು ಮಾಡಬಾರದು. (೨) (ಸಾತ್ವಿಕತ್ಯಾಗಿಯನ್ನೇ ವಿವರಿಸುತ್ತಾರೆ—) ಯಾವನು ಶ್ರೀವಿಷ್ಣುವಿನ ತತ್ವವನ್ನು ಚೆನ್ನಾಗಿ ತಿಳಿದವನೋ, ಶ್ರೀಪರಮಾತ್ಮನಿಗೆ ಅರ್ಪಿತವಾಗಲಿ, ಎಂಬುವ ಬುದ್ಧಿಯಿಂದಲೇ ಫಲದಲ್ಲಿ ಇಚ್ಛೆಯಿಲ್ಲದವನಾಗಿ ತತ್ಕಾಲದಲ್ಲಿಯೇ ಕ್ಲೇಶದಾಯಕವಾದುದರಿಂದಲೇ ಅಕುಶಲವಾದ ನಿವೃತ್ತಕರ್ಮವನ್ನು ದ್ವೇಷಿಸುವುದಿಲ್ಲವೋ, (ಪ್ರಕೃತ ಮಹಾಫಲಕ್ಕೆ ಕಾರಣವಾಗಿರುವುದರಿಂದ ಮಾಡುತ್ತಾನೋ, ಫಲೇಚ್ಛೆಯನ್ನು ತೊರೆದವನಾದುದರಿಂದಲೇ) ಕುಶಲವಾದ ಪೂರ್ವಜನ್ಮಾರ್ಜಿತ ಪುಣ್ಯಫಲದಲ್ಲಿ ಸ್ನೇಹಮಾಡುವುದಿಲ್ಲವೋ, ಅವನು ಸಾತ್ವಿಕನು ಅಂತಹ ತ್ಯಾಗಿಗೆ, ಪಾಪ ಪುಣ್ಯ, ಮಿಶ್ರ ಎಂಬೀ ಮೂರು ವಿಧ ಕರ್ಮವು, ಅನಿಷ್ಟ, ಇಷ್ಟ, ಮಿಶ್ರ ಫಲಸಂಬಂಧಕ್ಕಾಗಿ ಆಗಲಾರದು. (೩) (ತ್ಯಾಗಿಗೆ ಸರ್ವಥಾ ಬಂಧಕವಾದ ಕರ್ಮವು ಅನಿಷ್ಟ, ಇಷ್ಟ, ಮಿಶ್ರ ಫಲಸಂಬಂಧಕ್ಕಾಗಿ ಆಗುವುದಿಲ್ಲವೋ? ಎಂದರೆ-) ಅಪರೋಕ್ಷಜ್ಞಾನವು ಆಗುವ ಪರ್ಯಂತ ಸಂಖ್ಯೆಯಿಂದಲೂ ಜಾತಿಯಿಂದಲೂ ಪ್ರಬಲವಾದರೆ ಸರ್ವತ್ಯಾಗಿಗಳಿಗೂ ಕರ್ಮವು ಅಲ್ಪದೋಷವನ್ನುಂಟುಮಾಡುತ್ತದೆ (ಅಂದರೆ—ಅಪರೋಕ್ಷಜ್ಞಾನವುಂಟಾದರೆ ಅಪರೋಕ್ಷಜ್ಞಾನದಿಂದ ಮೊದಲಿನದಾದ ಬಹಳ ಅಪ್ರಾರಬ್ಧಕರ್ಮವೂ ವಿನಾಶವಾಗಿ ಅಲ್ಪದೋಷಕ್ಕೂ ಕಾರಣವಾಗುವುದಿಲ್ಲ.

ವಿ ॥ (1) ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಲಂ । ತಥಾಪಿ ಮತ್ಕೃತಾ ಪೂಜಾ ತತ್ಪ್ರಸಾದೇನ ನಾನ್ಯಥಾ ॥ ತದ್ಭಕ್ತಿಸ್ತತ್ಫಲಂ ಮಹ್ಯಂ ತತ್ಪ್ರಸಾದಃ ಪುನಃ ಪುನಃ ॥ ಎಂದು ಅರ್ಪಣಾಪ್ರಕಾರವನ್ನು ಹೇಳಿ ಕರ್ಮನ್ಯಾಸೋಽಹಂ ದೇವ ಎಂದು ಭಗವಂತನಲ್ಲಿ ಅರ್ಪಿಸುವುದನ್ನು ತ್ಯಾಗಶಬ್ದಾರ್ಥವೆಂದು ಹೇಳಿದ್ದಾರೆ. (2) ಯನ್ನಿರ್ಕ್ಷಿತಂ ಪರತ್ವಂ ತು ವಿಷ್ಣೋಃ ಪ್ರಾಯೋ ನ ಯಾತನಾ । ಬ್ರಹ್ಮಹತ್ಯಾದಿಭಿರಪಿ ಯಾಂತ್ಯಾಧಿಕ್ಯೇ ಚಿರಂ ನ ತು ॥ ಎಂಬುವ ಪ್ರಮಾಣದಿಂದ ಪಾಪವು ಜಾಸ್ತಿ ಇದ್ದರೂ ಅಲ್ಪವೇ ಅನಿಷ್ಟವುಂಟಾಗುತ್ತದೆ ॥ ೧೧ ॥

ಟೀ—ತಾನು ಹೇಳಿದ ಅರ್ಥವನ್ನು ದೃಢೀಕರಿಸುವುದಕ್ಕಾಗಿ ಅತ್ಯಾಗಿಯನ್ನು ನಿಂದಾ ಮಾಡುತ್ತಾ ತ್ಯಾಗಿಯನ್ನು ಸ್ತುತಿಸುತ್ತಾರೆ—

ಗೀ ॥ ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಂ ।
ಭವತ್ಯತ್ಯಾಗಿನಾಂ ಪ್ರೇತ್ಯ ನತು ಸನ್ನ್ಯಾಸಿನಾಂ ಕ್ವಚಿತ್ ॥ ೧೨ ॥

ಅ ॥ ಪ್ರೇತ್ಯ = ಮರಣ ಹೊಂದಿರುವ, ಅತ್ಯಾಗಿನಾಂ = ಮಮತಾಪೂರ್ವಕ ಫಲಾದಿಗಳ ಕಾಮನೆಯನ್ನು ಬಿಡದಿರುವವರಿಗೆ, ಕರ್ಮಣಃ = ಕರ್ಮಗಳ, ಅನಿಷ್ಟಂ = ನರಕಾದಿರೂಪವಾದ, ಇಷ್ಟಂ = ಕಾಮ್ಯಕರ್ಮಗಳಿಗೆ ಇಚ್ಛಾವಿಷಯ ಸ್ವರ್ಗಾದಿರೂಪವಾದ, ಮಿಶ್ರಂ ಚ = ಇಷ್ಟಾನಿಷ್ಟ ಮೇಲನ ರೂಪ ಮನುಷ್ಯತ್ವಾದಿರೂಪವಾದ, (ಹೀಗೆ) ತ್ರಿವಿಧಂ = ಮೂರು ವಿಧವಾದ, ಫಲಂ = ಫಲವು, ಭವತಿ = ಆಗುತ್ತದೆ. ಸನ್ನ್ಯಾಸಿನಾಂ ತು = ನಶ್ವರವಾದ ಸ್ವರ್ಗಾದಿಗಳನ್ನು ಹೊಂದಿಸಿಕೊಡುವ ಕಾಮ್ಯಕರ್ಮವನ್ನು ಮಾಡದೆ ಭಗವಂತನಿಗೆ ಪ್ರೀತಿಯಾಗಬೇಕೆಂಬುವ ಉದ್ದೇಶದಿಂದಲೇ ಕರ್ಮಮಾಡುವ ಜನರಿಗಾದರೂ ನಿಯತಕಾಮ್ಯಗಳಾದ ಕಾರೀರ್ಯಾದಿಗಳನ್ನು ಮಾಡದಿರುವ ಫಲತ್ಯಾಗಿಗಳಿಗೆ, ಅಥವಾ ಕಾಮ್ಯಕರ್ಮವನ್ನೇ ಮಾಡದಿರುವವರಿಗೆ, ಕ್ವಚಿತ್ = ಎಲ್ಲಿಯೂ, ಈ ಲೋಕದಲ್ಲಿಯಾಗಲೀ ಪರಲೋಕದಲ್ಲಿ ಆಗಲೀ, ಕರ್ಮಣಃ = ಕರ್ಮಗಳ, ಫಲಂ = ಇಷ್ಟಾನಿಷ್ಟಾದಿರೂಪವಾದ ಮೂರು ವಿಧ ಫಲವು, ನ ತು = ಆಗುವುದೇ ಇಲ್ಲ.

ವಿ ॥ (1) ಪೂರ್ವದಲ್ಲಿ ಪ್ರಸಕ್ತವಾದ ತ್ಯಾಗಿನಾಂ = ಎಂಬುವ ಶಬ್ದವನ್ನು ಹೇಳದೆ ಸನ್ನ್ಯಾಸಿನಾಂ ಎಂದು ಹೇಳಿದ್ದು ಏಕೆ ಎಂದರೆ ತ್ಯಾಗಿಗಳು, ಕಾರೀರೀ ಮೊದಲಾದ ಕೇವಲ ಕಾಮ್ಯಕರ್ಮವನ್ನು ಪರರಿಗೆ ಉಪಕಾರವಾಗುವುದಕ್ಕಾಗಿ ಮಾಡುತ್ತಾರೆ. ಸನ್ನ್ಯಾಸಿಗಳಾದರೂ ನಿಯಮೇನ ಕಾಮ್ಯವೇ ಆದ ಕಾರೀರೀ ಮೊದಲಾದ ಕರ್ಮವನ್ನು ಪರರಿಗೋಸ್ಕರವೂ ಮಾಡುವುದಿಲ್ಲ, ಎಂದು ತ್ಯಾಗಿಗಳಿಗಿಂತ ಸನ್ನ್ಯಾಸಿಗಳಿಗೆ ವಿಶೇಷವನ್ನು ಸೂಚಿಸುವುದಕ್ಕಾಗಿ ಅದೇ ಅರ್ಥದಲ್ಲಿ ಸನ್ನ್ಯಾಸಿನಾಂ ಎಂದು ಹೇಳಿದ್ದು. ಸನ್ನ್ಯಾಸಿಗಳಿಗೆ ಫಲೇಚ್ಛೆಯಿಲ್ಲದಿರುವುದರಿಂದ ಅವರು ತ್ಯಾಗಿಗಳೂ ಆಗುತ್ತಾರೆ. (2) ನ ತು ಸನ್ನ್ಯಾಸಿನಾಂ ಎಂಬುವಲ್ಲಿದ್ದ ತು ಶಬ್ದದಿಂದ ತ್ಯಾಗಿಗಳಿಗೆ ಜ್ಞಾನ ಭಕ್ತ್ಯಾದಿದ್ವಾರಾ ಅಪರೋಕ್ಷವಾಗಿ ಮುಕ್ತಿಯಲ್ಲಿ ಆನಂದಾತಿಶಯರೂಪ ಫಲವು ಆಗುತ್ತದೆಂದು ಸೂಚಿತವಾಯ್ತು. ॥ ೧೨ ॥

ಟೀ—ನರಕ ಸ್ವರ್ಗ ಮನುಷ್ಯಯೋನಿಪ್ರಾಪ್ತಿರೂಪ ಅನಿಷ್ಟ ಇಷ್ಟ ಮಿಶ್ರರೂಪ ಕರ್ಮಫಲವೆಂದರೆ ಸಂಸಾರವು ನಿವೃತ್ತವಾಯಿತೆಂದೇ ಆಗುವುದು. ಅದನ್ನು ತ್ಯಾಗಫಲವೆಂದದ್ದು ಹೇಗೆ? ಎಂದರೆ—

ಭಾ ॥ ತ್ಯಾಗಂ ಸ್ತೌತಿ । ಅನಿಷ್ಟಮಿತಿ ॥ ೧೨ ॥

ಅ ॥ ಅನಿಷ್ಟಮಿಷ್ಟಂ ಎಂಬುವ ಶ್ಲೋಕದಿಂದ ತ್ಯಾಗವನ್ನು ಸ್ತುತಿಸುತ್ತಾರೆ.

ವಿ ॥ ಈ ಪ್ರಮೇಯವು ತ್ಯಾಗಾಚ್ಛಾಂತಿಃ ಎಂಬುವಲ್ಲಿ ೧೨ನೇ ಅಧ್ಯಾಯದಲ್ಲಿ ಹೇಳಲ್ಪಟ್ಟಿದೆ. ॥ ೧೨ ॥

ಟೀ—ಅನಿಷ್ಟಮಿಷ್ಟಂ ಮಿಶ್ರಂ ಚ ಎಂಬುವಲ್ಲಿ ಬಂಧಕವಾದ ಕರ್ಮಫಲವು ತ್ಯಾಗಿಗೆ ಇಷ್ಟವೆಂಬುವ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಹೇಳುತ್ತಾರೆ—

ತಾ ॥ (೧) ಅನ್ಯೇಷಾಮಿಷ್ಟಂ । ಅಸ್ಯ ತು ತ್ಯಾಗಿತ್ವಾದೇವ ನೇಷ್ಟಂ ॥ (೨) ಜ್ಞಾನಾದೇ-
ರ್ಮೋಕ್ಷಭೋಗ್ಯಾಚ್ಚ ನಾನ್ಯತ್ಸ್ಯಾತ್ಕರ್ಮಣಃ ಫಲಂ । ತ್ಯಾಗಿನಸ್ತತ್ರ ಸಂಪೇತ್ಸ್ಯ-

ರನ್ಯೇಷಾಂ ತದೃತೇ ಫಲಮಿತಿ ಚ ॥ (೩) ಕೇವಲಕಾಮ್ಯಕರ್ಮಣಾಂ ಪರಾಪೇಕ್ಷ-
ಯಾಪ್ಯಕರಣಮಿತ್ಯೇತಾವಾಂಸ್ತ್ಯಾಗಾತ್ಸನ್ನ್ಯಾಸಸ್ಯ ವಿಶೇಷ ಇತ್ಯತ್ಯಾಗಿನಾಂ ಪ್ರತಿ-
ಯೋಗಿತ್ವೇನ ಸ್ನ್ಯಾಸಿನ ಉಕ್ತಾಃ ॥ (೪) ತ್ಯಾಗಿತ್ವಂ ತೇಷಾಮಪಿ ಹ್ಯಸ್ತಿ ॥ (೫)
ಪರೇಚ್ಛಯಾಪಿ ಯೋ ಕಾಮ್ಯಂ ಕರ್ಮ ಕುರ್ಯಾರ್ನ ತು ಕ್ವಚಿತ್ । ಸ್ನ್ಯಾಸಿನೋ
ನಾಮ ತೇಽನ್ಯೇ(ನೇ)ಭ್ಯಃ ಫಲತ್ಯಾಗಿಭ್ಯ ಉತ್ತಮಾ ಇತಿ ಚ ॥ ೧೨ ॥

ಅ ॥ (೧) ಕಾಮ್ಯಕರ್ಮಗಳಿಗೆ ಇಷ್ಟಾವಿಷಯಾಭೂತವಾದ ಸ್ವರ್ಗ ಮೊದಲಾದುದು. (ತ್ಯಾಗಿಗಳಿಗೇನೇ ಇಷ್ಟವು ಏಕೆ ಆಗಲಾರದೆಂದರೆ—) ತ್ಯಾಗಿಗಾದರೂ ತ್ಯಾಗಿಯಾದುದರಿಂದಲೇ ಸ್ವರ್ಗ ಮೊದಲಾದುದು ಇಷ್ಟವಾಗುವುದಿಲ್ಲ. (ಅಂದರೆ ತ್ಯಾಗಿಗೆ ಬಂಧಕವಾದ ಕರ್ಮಫಲವು ಇಷ್ಟವಾಗುವುದಿಲ್ಲ. ಯಸ್ತು ಕರ್ಮಫಲತ್ಯಾಗೀ ಎಂದು ಕರ್ಮಫಲೇಚ್ಛೆಯನ್ನು ಬಿಟ್ಟವನೇ ತ್ಯಾಗಿಯೆಂದು ಹೇಳಲ್ಪಟ್ಟಿರುತ್ತಾನೆ (೨) (ಅನಿಷ್ಟಮಿಷ್ಟಂ ಮಿಶ್ರಂ ಚ ಎಂಬುವಲ್ಲಿ ಅಬಂಧಕ ಕರ್ಮಫಲವನ್ನು ಇಟ್ಟುಕೊಂಡರೆ ಬಾಧಕವಿಲ್ಲದಿರುವುದರಿಂದ ಬಂಧಕ ಕರ್ಮಫಲವನ್ನು ಇಟ್ಟುಕೊಳ್ಳುವುದಿಲ್ಲ ಎಂದರೆ—ತ್ಯಾಗಿಗೆ ಬಂಧಕ ಕರ್ಮಫಲವೇ ಇಲ್ಲವೆಂಬುವಲ್ಲಿಯೂ ಅತ್ಯಾಗಿಗೆ ಬಂಧಕ ಕರ್ಮಫಲವಿದೆ. ಎಂಬುವಲ್ಲಿಯೂ ಪ್ರಮಾಣವನ್ನು ಹೇಳುತ್ತಾರೆ-)ಅಪರೋಕ್ಷಜ್ಞಾನವಿಲ್ಲದಿರುವ ತ್ಯಾಗಿಗೆ ಜ್ಞಾನಭಕ್ತ್ಯಾದಿಗಳಿಗಿಂತ ಬೇರೆಯಾದುದು ಕರ್ಮದ ಫಲವಾಗಲಾರದು. ಅಪರೋಕ್ಷವಾಗಿ ತತ್ತ್ವವನ್ನು ತಿಳಿದಿರುವ ಅತ್ಯಾಗಿಗೇನೇ ಮೋಕ್ಷದಲ್ಲಿ ಭೋಗ್ಯವಾದ ಆನಂದಾತಿಶಯ ಹೊರತು ಬೇರೆ ಫಲವಾಗಲಾರದು. (೩)(ಭವತ್ಯತ್ಯಾಗಿನಾಂ ಪ್ರೇತ್ಯ ನ ತು ತ್ಯಾಗಿನಾಂ ಎಂದು ಅತ್ಯಾಗಿಗಳಿಗೆ ವಿರೋಧಿಯಾಗಿ ತ್ಯಾಗಿಗಳನ್ನೇ ಹೇಳಬೇಕಿತ್ತು. ಸನ್ನ್ಯಾಸಿನಾಂ ಎಂದು ಸನ್ನ್ಯಾಸಿಗಳನ್ನು ಏಕೆ ಹೇಳಿದ್ದೆಂದರೆ-) ಇತರ ಉದ್ದೇಶದಿಂದಲೂ ಕೇವಲ ಕಾಮ್ಯಕರ್ಮಗಳನ್ನು ಮಾಡದಿರುವುದು ಇತ್ಯತ್ಯಾಗಕ್ಕಿಂತ ಸನ್ನ್ಯಾಸಕ್ಕೆ ವಿಶೇಷವು. ಆದಕಾರಣ ಅತ್ಯಾಗಿಗಳಿಗೆ ವಿರೋಧಿಯಾಗಿ ಸನ್ನ್ಯಾಸಿಗಳನ್ನು ಹೇಳಿರುವರು. (ಅಂದರೆ ಅತ್ಯಾಗಿಗಳಿಗೆ ವಿರೋಧಿಯಾಗಿ ಸನ್ನ್ಯಾಸಿಗಳನ್ನು ಹೇಳಿದ್ದು ಅಯುಕ್ತವಲ್ಲ. ಸ್ವಾರ್ಥತ್ಯಾಗಿ ಫಲೇಚ್ಛೆಯಿಲ್ಲದಿದ್ದರೂ ಪರೋಪಕಾರಕ್ಕಾಗಿ ಗಾಂಗೇಯ ಮೊದಲಾದ ಕೇವಲ ಕಾಮ್ಯಕರ್ಮಗಳನ್ನು ತ್ಯಾಗಿಗಳು ಮಾಡುತ್ತಾರೆ ಅಂತಹ ಕಾಮ್ಯಕರ್ಮವೂ ಸನ್ನ್ಯಾಸಿಗಳಿಗೆ ಇಲ್ಲ, ಇಷ್ಟುಮಾತ್ರ ವಿಶೇಷವಿದ್ದ ಪ್ರಯುಕ್ತ ತ್ಯಾಗಿಗಳಿಗಿಂತ ಸನ್ನ್ಯಾಸಿಗಳಿಗೆ ವಿಶೇಷವು (೪) (ಇಷ್ಟುಮಾತ್ರ ವಿಶೇಷವಾದರೆ-ತ್ಯಾಗಿ ಸನ್ನ್ಯಾಸಿಗಳಿಗೆ ಸಾಮ್ಯವೋ, ಏಕೆ ತ್ಯಾಗಿನಾಂ ಎಂದು ಹೇಳುವುದನ್ನು ಬಿಟ್ಟು ಸನ್ನ್ಯಾಸಿನಾಂ ಎಂದು ಹೇಳಿದ್ದು ಎಂದರೆ—) ಸನ್ನ್ಯಾಸಿಗಳಿಗೂ ತ್ಯಾಗಿತ್ವವು ಇದೆ. (ಅಂದರೆ ಕರ್ಮಫಲದಲ್ಲಿ ಇಚ್ಛೆಯಿಲ್ಲದಿರುವುದು ತ್ಯಾಗಿ ಸನ್ನ್ಯಾಸಿಗಳಿಬ್ಬರಿಗೂ ಸಮವೇ.) (೫) (ತ್ಯಾಗಿಗಳಿಗಿಂತ ಸನ್ನ್ಯಾಸಿಗಳಿಗೆ ವಿಶೇಷವು ಉಕ್ತವಾಗಿದೆ, ಎಂಬುವುದು ಹೇಗೆ ಎಂದರೆ-) ಯಾವ ತ್ಯಾಗಿಗಳು ಪರೋಪಕಾರ ಇಚ್ಛೆಯಿಂದಲೂ ನಿಯತ ಕಾಮ್ಯಕರ್ಮವನ್ನು ಮಾಡುವರೋ. ಸನ್ನ್ಯಾಸಿಗಳಾದರೋ ಎಲ್ಲಿಯೂ ನಿಯತ ಕಾಮ್ಯವನ್ನು ಮಾಡುವುದಿಲ್ಲವೋ ಆ ಸನ್ನ್ಯಾಸಿಗಳು ಪರೋಪಕಾರಕ್ಕಾಗಿ ನಿಯಮೇನ ಕಾಮ್ಯಕರ್ಮಗಳನ್ನೇ ಮಾಡುವ ಫಲತ್ಯಾಗಿಗಳಿಗಿಂತ ಉತ್ತಮರು. ॥ ೧೨ ॥

ಟೀ—ಕಾಮ್ಯಾನಾಂ ಎಂಬುವಲ್ಲಿ ಹೇಳಿದ ಪ್ರಕಾರವೇ ಕಾಮ್ಯಾಕಾಮ್ಯಗಳಾದ ಜ್ಯೋತಿಷ್ಟೋಮಾದಿಗಳ ಫಲತ್ಯಾಗಮಾತ್ರವು. ಕೇವಲ ಕಾಮ್ಯಗಳೇ ಆದ ಕಾರೀರ್ಯಾದಿಗಳನ್ನು ಸರ್ವಥಾ ಮಾಡದಿರೋಣವು ಅಂದರೆ ಪರಪ್ರಯೋಜನಕ್ಕಾಗಿಯೂ ಕೂಡ ಮಾಡದಿರುವುದು. ಇವಿಷ್ಟು ಮಾತ್ರ ಸನ್ನ್ಯಾಸ ಶಬ್ದಾರ್ಥವಲ್ಲ. ಮತ್ತೆ ಕರ್ಮದಲ್ಲಿ ಕರ್ತೃತ್ವಾಭಿಮಾನ ತ್ಯಾಗವೂ ಸನ್ನ್ಯಾಸಶಬ್ದಾರ್ಥವೆಂದು ಹೇಳುವುದಕ್ಕಾಗಿ ಕರ್ಮಕಾರಣಗಳನ್ನು ೩ ಶ್ಲೋಕಗಳಿಂದ ಹೇಳುತ್ತಾರೆ—

೧೩ || ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧ ಮೇ |
ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಂ||೧೩||

ಅ || ಮಹಾಬಾಹೋ = ಅರ್ಜುನನೇ, ಸಾಂಖ್ಯೇ = ಕಪಿಲನಾಮಕ ಶ್ರೀಪರಮಾತ್ಮನಿಂದ ಮಾಡಲ್ಪಟ್ಟ ಸಾಂಖ್ಯವೆಂದು ಹೆಸರುಳ್ಳ, ಕೃತಾಂತೇ = ಸಿದ್ಧಾಂತದಲ್ಲಿ, ಸರ್ವಕರ್ಮಣಾಂ = ಸಮಸ್ತಕರ್ಮಗಳ, ಸಿದ್ಧಯೇ = ಸಿದ್ಧಿಗೋಸ್ಕರ, ಪ್ರೋಕ್ತಾನಿ = ಹೇಳಲ್ಪಟ್ಟ, ಏತಾನಿ = ನಾನು ಮುಂದೆ ಹೇಳುವ, ಪಂಚ = ಐದು, ಕಾರಣಾನಿ = ಕರ್ಮಕಾರಣಗಳನ್ನು, ಮೇ = ನನ್ನಿಂದ, ನಿಬೋಧ = ತಿಳಿದುಕೊ. (ಶ್ರೋತೃಗಳಿಗೆ ವಿಶೇಷ ವಿಶ್ವಾಸ ಹುಟ್ಟುವುದಕ್ಕಾಗಿ ಸಾಂಖ್ಯೇ ಕೃತಾಂತೇ ಎಂದು ಹೇಳಿದ್ದು.) || ೧೩ ||

ಭಾ || (೧) ಪುನಃ ಸನ್ಯಾಸಂ ಪ್ರಪಂಚಯಿತುಂ ಕರ್ಮಕಾರಣಾನ್ಯಾಹ | ಪಂಚೇತ್ಯಾದಿನಾ || (೨) ಸಾಂಖ್ಯೇ ಕೃತಾಂತೇ ಜ್ಞಾನಸಿದ್ಧಾಂತೇ || ೧೩ ||

ಅ || (೧) (ಕೇವಲ ಕಾಮ್ಯಕರ್ಮಗಳ ಪರಿತ್ಯಾಗವು ಸನ್ಯಾಸಶಬ್ದಾರ್ಥವೆಂದಲ್ಲ. ಮತ್ತೆ ಕರ್ಮಗಳಲ್ಲಿ ಕರ್ತೃತ್ವಾಭಿಮಾನತ್ಯಾಗವೂ ಸನ್ಯಾಸಶಬ್ದಾರ್ಥವು, ಹೀಗೆ ಹಿಂದೆ ಹೇಳಿದ) ಸನ್ಯಾಸವನ್ನು ಪುನಃ ವಿವರಿಸುವುದಕ್ಕಾಗಿ (ಜೀವನಿಗೆ ಕರ್ತೃತ್ವವಿಲ್ಲವಾದರೆ ಕ್ರಿಯೆಯೇ ಇಲ್ಲವೆಂದಾಗಬೇಕಾಗುವುದು, ಆದಕಾರಣ ಕರ್ತೃತ್ವವನ್ನಂಗೀಕರಿಸಲೇಬೇಕು. ಅಂತೂ ಕರ್ತೃತ್ವಾಭಿಮಾನತ್ಯಾಗವು ಸನ್ಯಾಸವೆಂಬುವುದು ಹೇಗೆ ಕೂಡುವುದು? ಎಂಬುವ ಆಶಂಕೆಯನ್ನು ಪರಿಹರಿಸುವುದಕ್ಕಾಗಿ ಜೀವನಿಂದ ಭಿನ್ನಗಳೇ ಆದ) ಕರ್ಮಕಾರಣಗಳನ್ನು ಪಂಚ ಇತ್ಯಾದಿಗಳಿಂದ ಹೇಳುತ್ತಾರೆ. (೨) (ಸಾಂಖ್ಯಶಬ್ದವು ಕಪಿಲಋಷಿ ಮಾಡಿದ ತಂತ್ರದಲ್ಲಿ ರೂಢವಾಗಿದೆ. ಯಾವ ಉಪನಿಷತ್ತುಗಳಲ್ಲಿ ಕರ್ಮದ ನಿವೃತ್ತಿಯು ಹೇಳಲ್ಪಡುತ್ತದೋ, ಆ ಉಪನಿಷತ್ತು ಕೃತಾಂತವು. ಹೀಗೆ ಸಾಂಖ್ಯಶಬ್ದಕ್ಕೂ ಕೃತಾಂತಶಬ್ದಕ್ಕೂ ಅರ್ಥ ಹೇಳಿದ್ದು ಅಯುಕ್ತವೆನ್ನುತ್ತಾರೆ—) ಕಪಿಲರೂಪಿ ಶ್ರೀಪರಮಾತ್ಮನಿಂದ ಹೇಳಲ್ಪಟ್ಟ ಸಾಂಖ್ಯವೆನಿಸಿದ, ತತ್ವಜ್ಞಾನೋಪಯುಕ್ತ ಶಾಸ್ತ್ರದಲ್ಲಿ. (ಎಂದರ್ಥವು ಕಪಿಲಋಷಿ ಮಾಡಿದ ಶಾಸ್ತ್ರವು ಸಾಂಖ್ಯಂ ಯೋಗಃ ಪಾಶುಪತಂ ಇತ್ಯಾದಿ ಭಾರತದಲ್ಲಿ ನಿಂದಿತವಾಗಿದೆ ಉಪನಿಷತ್ತುಗಳಲ್ಲಿಯೂ ಕರ್ಮತ್ಯಾಗವನ್ನು ಹೇಳಿಲ್ಲ. ಆದಕಾರಣ ಪರರು ಹೇಳಿದ ಅರ್ಥವು ಅಯುಕ್ತವು ) || ೧೩ ||

ಹೀ—ಪ್ರತಿಜ್ಞೆಮಾಡಿದ ಕರ್ಮಕಾರಣಗಳನ್ನು ಹೇಳುತ್ತಾನೆ—

೧೪ || ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ |
ವಿವಿಧಾ ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಂ || ೧೪ ||

ಅ || (1) ಅಧಿಷ್ಠಾನಂ = ದೇಹ ಭೂಮಿ ಮೊದಲಾದ ಅಧಿಕರಣವು, ತಥಾ = ಹಾಗೆ, (2) ಕರ್ತಾ = ಮುಖ್ಯಕರ್ತನಾದ ಶ್ರೀವಿಷ್ಣುವು, ಅಥವಾ ಪರಾಧೀನಕರ್ತನಾದ ಜೀವನು. (3) ಪೃಥಗ್ವಿಧಂ ಕರಣಂ = ನಾನಾವಿಧವಾದ ಕರಣವು. (ಇಂದ್ರಿಯ ಸ್ರುಕ್ ಸ್ರುವ ಮೊದಲಾದ ಸಾಧನಗಳು) (4) ವಿವಿಧಾ = ನಾನಾಪ್ರಕಾರವಾದ, ಪೃಥಕ್ = ಪರಸ್ಪರಭಿನ್ನವಾದ, ಚೇಷ್ಟಾ = ಹಸ್ತಾದಿಕ್ರಿಯೆಯೂ, ಧ್ಯಾನಾದಿರೂಪವಾದ ಮಾನಸಕ್ರಿಯೆಯೂ, ಪ್ರಧಾನರೂಪವಾದ ಕ್ರಿಯೆಗಳಿಗೆ ಅಂಗವಾದ ಕಾರಣಾಶ್ರಿತವಾದ ಅವಾಂತರ ಕ್ರಿಯೆಯೂ, (5) ದೈವಂ = ಅದೃಷ್ಟವು. ಅಥವಾ ವಿಷ್ಣುವು, ಅತ್ರ = ಕರ್ಮಕಾರಣಗಳ ಮಧ್ಯದಲ್ಲಿ, ಪಂಚಮಂ = ಐದನೆ ಕಾರಣವು.

ಟೀ—ಇವುಗಳು ಯಾವುದಕ್ಕೆ ಕಾರಣಗಳೆಂದರೆ—

ಗೀ ॥ ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।
ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥ ೧೫ ॥

ಅ ॥ ನರಃ=ಮನುಷ್ಯನು. ಶರೀರವಾಙ್ಮನೋಭಿಃ=ಶರೀರ ವಚನ ಮನಸ್ಸುಗಳಿಂದ, ನ್ಯಾಯ್ಯಂ ವಾ=ಶಾಸ್ತ್ರದಲ್ಲಿ ವಿಹಿತವಾದುದಾಗಲೀ, ವಿಪರೀತಂ ವಾ=ಶಾಸ್ತ್ರನಿಷಿದ್ಧವಾದುದೇ ಆಗಲೀ ಯತ್ಕರ್ಮ=ಯಾವ ಕರ್ಮವನ್ನು, ಪ್ರಾರಭತೇ=ಪ್ರಾರಂಭಿಸುತ್ತಾನೋ ತಸ್ಯ=ಆ ಕರ್ಮಕ್ಕೆ, ಏತೇ ಪಂಚ=ಹಿಂದೆ ಹೇಳಿದ ಅಧಿಷ್ಠಾನ ಮೊದಲಾದ ಐದು, ಹೇತವಃ=ಕಾರಣಗಳು. ॥ ೧೫ ॥

ಟೀ—ಅಧಿಷ್ಠಾನಾದಿಗಳು ಕರಣದಲ್ಲಿಯೇ ಅಂತರ್ಭೂತಗಳಾಗುತ್ತವೆಂದು ಮುಂದೆ ಹೇಳುವುದನ್ನು ತಿಳಿಸಿಕೊಡುವುದಕ್ಕಾಗಿ ಅಧಿಷ್ಠಾನವನ್ನು ಹೇಳುತ್ತಾರೆ—

ಭಾ ॥ (೧) ಅಧಿಷ್ಠಾನಂ ದೇಹಾದಿಃ । ಕರ್ತಾ ವಿಷ್ಣುಃ । ಸ ಹಿ ಸರ್ವಕರ್ತೇತ್ಯುಕ್ತಂ ॥ (೨) ಜೀವಸ್ಯ ಚಾಕರ್ತೃತ್ವೇ ಪ್ರಮಾಣಮುಕ್ತಂ । ಕರಣಮಿಂದ್ರಿಯಾಣಿ ॥ (೩) ಚೇಷ್ಟಾಃ ಕ್ರಿಯಾಃ । ಹಸ್ತಾದಿಕ್ರಿಯಾಭಿರ್ಹಿ ಹೋಮಾದಿಕರ್ಮಾಣಿ ಜಾಯಂತೇ ॥ (೪) ಧ್ಯಾನಾದೇರಪಿ ಮಾನಸೀ ಚೇಷ್ಟಾ ಕಾರಣಂ ॥ (೫) ಪೂರ್ವತನೀ ಚೇಷ್ಟಾಽಪಿ ಸಂಸ್ಕಾರಕಾರಣತ್ವೇನ ಭವತಿ ॥ (೬) ದೈವಮದೃಷ್ಟಂ । ತಥಾ ಚಾಯಾಸ್ಯಶ್ರುತಿಃ । ದೇಹೋ ಬ್ರಹ್ಮಾಽಥೇಂದ್ರಿಯಾದ್ಯಾಃ ಕ್ರಿಯಾಶ್ಚ ತಥಾಽದೃಷ್ಟಂ ಪಂಚಮಂ ಕರ್ಮಹೇತುರಿತಿ ॥ ॥ ೧೪,೧೫ ॥

ಅ ॥ (೧) ಅಧಿಷ್ಠಾನಂ=ದೇಹ ಭೂಮಿ ಮೊದಲಾದುದು. (ಕರ್ತಾ=ಜೀವನೆಂಬುವ ವ್ಯಾಖ್ಯಾನವು ಅಯುಕ್ತವೆನ್ನುತ್ತಾರೆ—) ಕರ್ತಾ=ಸರ್ವಕರ್ತನು ಶ್ರೀವಿಷ್ಣುವು. "ಶ್ರೀಪರಮಾತ್ಮನೇ ಜಗಜ್ಜನ್ಮಾದಿಕರ್ತನೆಂದು ಶ್ರುತಿಯಲ್ಲಿ ಹೇಳಿದೆ." (೨) (ಆದರೂ ಜೀವನೇ ಕರ್ತನೆಂದು ಏಕೆ ಆಗಲಾರದೆಂದರೆ—) ಜೀವನಿಗೆ ಸ್ವತಂತ್ರಕರ್ತೃತ್ವವಿಲ್ಲವೆಂಬುವಲ್ಲಿ ಪ್ರಮಾಣವು ಹೇಳಲ್ಪಟ್ಟಿದೆ. (ಅಂದರೆ ಪರಾಧೀನ ಕರ್ತೃತ್ವವಿದೆ ಸ್ವಾತಂತ್ರ್ಯದ ಕರ್ತೃತ್ವವಿಲ್ಲ ಎಂದು ಭಾವವು.) ಕರಣಂ=ಇಂದ್ರಿಯ ಸ್ರುಕ್ ಸ್ರುವ ಮೊದಲಾದುದು (೩) ಚೇಷ್ಟಾಃ=ಹಸ್ತಾದಿಕ್ರಿಯೆಗಳು. ಅವುಗಳಿಂದ ಹೋಮಾದಿ ಕರ್ಮಗಳು ಉಂಟಾಗುತ್ತವೆ. (೪) (ಜ್ಞಾತವಾದ ಅರ್ಥದಲ್ಲಿಯೇ ಧ್ಯಾನವುಂಟಾಗುತ್ತದೆ ಜ್ಞಾನವು ಅಕ್ಷೇಂದ್ರಿಯಸನ್ನಿಕೃಷ್ಟವಾದ ಮನಸ್ಸಿನಿಂದಲೇ ಹುಟ್ಟುತ್ತದೆ. ಸನ್ನಿಕರ್ಷವು ಮಾನಸ ಚೇಷ್ಟೆಯಿಂದ ಹುಟ್ಟುತ್ತದೆ. ಆದಕಾರಣ) ಧ್ಯಾನಸ್ಮರಣಗಳಿಗೂ ಮನಸ್ಸಂಬಂಧಿಯಾದ ಚೇಷ್ಟೆಯು ಕಾರಣವಾಗುತ್ತದೆ. (೫) ಬಹುಪ್ರಾಚೀನವಾದ ಮಾನಸಕ್ರಿಯೆಯೂ ಸನ್ನಿಕರ್ಷದ್ವಾರಾ ಧ್ಯಾನಸ್ಮರಣಗಳಿಗೆ ಕಾರಣವಾದ ಸಂಸ್ಕಾರಕ್ಕೆ ಕಾರಣವಾಗುತ್ತದೆ. (ಧ್ಯಾನಾದಿಗಳಿಗೆ ಕಾರಣವಾದ ಸಂಸ್ಕಾರವು ಸ್ಥಾಯಿಯಾಗಿದೆ) (೬) (ದೈವಂ=ಅಂತರ್ಯಾಮಿ ವ್ಯಾಪಾರವು ಎಂದು ಕೆಲವರು, ಚಕ್ಷುರಾದಿಗಳಿಗೆ ಅನುಗ್ರಾಹಕರಾದ ಸೂರ್ಯಾದಿಗಳು ಎಂದು ಇತರರು. ಇವೆರಡೂ ಅಯುಕ್ತವೆನ್ನುತ್ತಾರೆ.) ದೈವಂ=ಅದೃಷ್ಟವು. (ಹಿಂದೆ ಹೇಳಿದ ಅರ್ಥದಲ್ಲಿ ವೇದಪ್ರಮಾಣವನ್ನು ಹೇಳುತ್ತಾರೆ—) ದೇಹಭೂಮಿ ಮೊದಲಾದುದು, ಪರಬ್ರಹ್ಮನು, ಇಂದ್ರಿಯ ಮೊದಲಾದವುಗಳೂ, ನಾನಾವಿಧ ಕ್ರಿಯೆಗಳೂ, ಹಾಗೆಯೇ ಐದನೆಯದಾದ ಅದೃಷ್ಟವು ಇವು ಕರ್ಮಕ್ಕೆ ಕಾರಣಗಳು ಎಂದು ಆಯಾಸ್ಯಶ್ರುತಿಯು. ॥ ೧೪,೧೫ ॥

ಟೀ—ಕರ್ಮಕಾರಣಗಳು ಅಧಿಷ್ಠಾನ ಮೊದಲಾದವುಗಳು ಐದೇ ಅಗಲಿ. ಮುಂದೇನು ಎಂದರೆ—

೧೬ || ತತ್ರೈವಂಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ |
ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ || ೧೬ ||

ಅ || ಯಃ=ಯಾವ ಮನುಷ್ಯನು, ತತ್ರ ಏವಂಸತಿ=ಈಶ್ವರ ಮೊದಲಾದವರು ಐದೇ ಕರ್ಮಗಳಿಗೆ ಕಾರಣಗಳಾಗುತ್ತಿರಲು, ಜೀವರಿಗೆ ಸ್ವಾತಂತ್ರ್ಯವಿಲ್ಲದಿರುವುದರಿಂದ, ಕೇವಲಂ=ಪರಪ್ರೇರಣೆಯಿಲ್ಲದೆ ಸ್ವತಂತ್ರವಾಗಿ ಕ್ರಿಯೆಯಿಲ್ಲದಿರುವ, ಆತ್ಮಾನಂ=ಜೀವಾತ್ಮನನ್ನು, ಕರ್ತಾರಂ=ಸ್ವತಂತ್ರವಾಗಿ ಕರ್ಮಕರ್ತನನ್ನಾಗಿ, ಪಶ್ಯತಿ=ತಿಳಿಯುತ್ತಾನೋ, ಸಃ=ಆತನು, ಅಕೃತಬುದ್ಧಿತ್ವಾತ್=ಶಾಸ್ತ್ರಶ್ರವಣಾದಿಗಳಿಂದ ಪರಿಶುದ್ಧವಾಗದ ಬುದ್ಧಿಯುಳ್ಳವನಾದುದರಿಂದ, ದುರ್ಮತಿಃ=ದುಷ್ಟಬುದ್ಧಿಯುಳ್ಳವನಾಗಿ, ನ ಪಶ್ಯತಿ=ತತ್ತ್ವವನ್ನು ತಿಳಿದುಕೊಳ್ಳುವವನಾಗುವುದಿಲ್ಲ. || ೧೬ ||

ಭಾ || ಕೇವಲಂ ನಿಷ್ಕ್ರಿಯಂ | ಏನಂ ಕೇವಲಮಾತ್ಮಾನಂ ನಿಷ್ಕ್ರಿಯತ್ವಾದ್ವದಂತಿ ಹೀತಿ ತತ್ರೈವ || ೧೬ ||

ಅ || ಕೇವಲಂ=ಸ್ವತಃ ಕ್ರಿಯೆಯಿಲ್ಲದಿರುವ ಈ ಜೀವನನ್ನು ನಿಷ್ಕ್ರಿಯನಾದುದರಿಂದ ಕೇವಲನನ್ನಾಗಿ ಹೇಳುತ್ತಾರೆ, ಎಂದು ಆಯಾಸ್ಯಶ್ರುತಿಯಲ್ಲಿಯೇ ಹೇಳಿದೆ. || ೧೬ ||

ಟೀ—(1) ಕರ್ಮದಲ್ಲಿ ಅಭಿಮಾನತ್ಯಾಗವೂ ಸನ್ಯಾಸವು ಎಂಬುವ ಅಭಿಪ್ರಾಯದಿಂದ ಪಂಚೈತಾನಿ (ಶ್ಲೋ. ೧೩) ಎಂಬುವ ಶ್ಲೋಕದಿಂದ ಕರ್ಮಕಾರಣಗಳು ಹೇಳಲ್ಪಡುತ್ತವೆ ಅಲ್ಲಿರತಕ್ಕ ಸಾಂಖ್ಯೇಕೃತಾಂತ ಶಬ್ದದಿಂದ ಪರಮ ಸಾಂಖ್ಯಸಿದ್ಧಾಂತವೇ ಹೇಳಲ್ಪಡುತ್ತದೆ. ಋಷಿ ಮಾಡಿದ ನಿರೀಶ್ವರ ಸಾಂಖ್ಯಶಾಸ್ತ್ರವಲ್ಲ (2) ೧೪ನೇ ಶ್ಲೋಕದಲ್ಲಿದ್ದ ದೈವ ಶಬ್ದದಿಂದ ಶ್ರೀಪರಮಾತ್ಮನನ್ನು ತೆಗೆದುಕೊಂಡದರಿಂದ ಪರಮ ಸಾಂಖ್ಯಶಾಸ್ತ್ರವು ಶ್ರೀಪರಮಾತ್ಮನನ್ನು ಹೇಳುತ್ತದೆ. ಪ್ರಸಿದ್ಧ ಸಾಂಖ್ಯಶಾಸ್ತ್ರವು ಈಶ್ವರನಿಲ್ಲವೆಂದು ಹೇಳುತ್ತದೆ. ಮತ್ತು ಪರಮ ಸಾಂಖ್ಯಶಾಸ್ತ್ರವು ವೇದೋಕ್ತವಾದ ಅರ್ಥವನ್ನು ಹೇಳುವುದರಿಂದ ಅದನ್ನೇ ತೆಗೆದುಕೊಳ್ಳಬೇಕು. ಪ್ರಸಿದ್ಧ ಸಾಂಖ್ಯಶಾಸ್ತ್ರವು ವೇದವಿರುದ್ಧವಾದ ಅರ್ಥವನ್ನು ಹೇಳುವಕಾರಣ ಅದನ್ನು ತೆಗೆದುಕೊಳ್ಳಕೂಡದೆಂಬುವ ಅಭಿಪ್ರಾಯದಿಂದ ಪರಮ ಸಾಂಖ್ಯಶಾಸ್ತ್ರವು ಶ್ರೀಪರಮಾತ್ಮನನ್ನು ಹೇಳುತ್ತದೆಂಬುವಲ್ಲಿಯೂ, ಪ್ರಸಿದ್ಧ ಕಾಪಿಲ ಶಾಸ್ತ್ರವು ಪರಮಾತ್ಮನು ಇಲ್ಲವೆಂದು ಹೇಳುತ್ತದೆ ಎಂಬುವಲ್ಲಿಯೂ ಪ್ರಮಾಣವನ್ನು ಹೇಳುತ್ತಾರೆ—

ಭಾ || ಕಥಿತಂ ಪರಮಂ ಸಾಂಖ್ಯಂ ಕಪಿಲಾಖ್ಯೇನ ವಿಷ್ಣುನಾ | ಸೇಶ್ವರಂ ದ್ವೈವಿ(ವೈದಿ)ಕಂ
ಸಾಕ್ಷಾಚ್ಛ್ರೇಯಮನ್ಯದವೈದಿಕಮಿತಿ ಚ | ಅಧಿಷ್ಠಾನಂ ಶರೀರಾದಿ || ೧೩—೧೬ ||

ಅ || ಕಪಿಲರೂಪಿ ಶ್ರೀಪರಮಾತ್ಮನಿಂದ ಪರಮ ಸಾಂಖ್ಯಶಾಸ್ತ್ರವು ಹೇಳಲ್ಪಟ್ಟಿದೆ ಆ ಶಾಸ್ತ್ರವು ಶ್ರೀಪರಬ್ರಹ್ಮಪ್ರತಿಪಾದಕವು. ವೇದದಲ್ಲಿ ಹೇಳಿದ ಅರ್ಥವನ್ನೇ ಹೇಳುತ್ತದೆಂದೂ ತಿಳಿಯಬೇಕು. ಪ್ರಸಿದ್ಧ ಸಾಂಖ್ಯಶಾಸ್ತ್ರವು ವೇದವಿರುದ್ಧಾರ್ಥವನ್ನು ಶ್ರೀಪರಮಾತ್ಮನು ಇಲ್ಲವೆಂದು ಹೇಳುತ್ತದೆಂದೂ ತಿಳಿಯಬೇಕು. ಅಧಿಷ್ಠಾನಂ=ಶರೀರ ಮೊದಲಾದುದು. || ೧೬ ||

ಟೀ - ತಾನೇ ಸ್ವತಂತ್ರಕರ್ತನೆಂದು ಅಭಿಮಾನವಿದ್ದವನನ್ನು ನಿಂದಿಸಿ ತಾನೇ ಸ್ವತಂತ್ರಕರ್ತನೆಂದು ಅಭಿಮಾನವಿಲ್ಲದ ಸನ್ಮತಿಯನ್ನು ಸ್ತುತಿಸುತ್ತಾರೆ—

**೧೭ ॥ ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಽಪಿ ಸ ಇಮಾನ್ಲೋಕಾನ್ನ ಹಂತಿ ನ ನಿಬಧ್ಯತೇ ॥ ೧೭ ॥**

ಅ ॥ ಯಸ್ಯ = ಯಾವ ಮನುಷ್ಯನಿಗೆ, ಅಹಂಕೃತಃ ಭಾವಃ = ಈ ಅರ್ಥವನ್ನು ನಾನು ಮಾಡಿದ್ದೇನೆಂದು ಸ್ವಾತಂತ್ರ್ಯಾಭಿಮಾನವು, ನ = ಇಲ್ಲವೋ, ಯಸ್ಯ = ಯಾವಾತನ, ಬುದ್ಧಿಃ = ಬುದ್ಧಿಯು, ನ ಲಿಪ್ಯತೇ = ಫಲೇಚ್ಛೆಗಳಿಂದ ಸಂಬದ್ಧವಾಗುವುದಿಲ್ಲವೋ. ಸಃ = ಸ್ವಾತಂತ್ರ್ಯಜ್ಞಾನವಿಲ್ಲದಿರುವ ಅಂತಹ ಮನುಷ್ಯನು, ಇಮಾನ್ಲೋಕಾನ್ = ಈ ಸಮಸ್ತ ಜನರನ್ನು. ಹತ್ವಾಽಪಿ = ಕೊಂದರೂ, ನ ಲಿಪ್ಯತೇ = ಸಂಹರಿಸಿದ ದೋಷವುಳ್ಳವನಾಗುವುದಿಲ್ಲ. ಏಕೆಂದರೆ ನ ಹಂತಿ = ತಾನು ಸಂಹರಿಸಿದವನೆಂದು ಸ್ವಾತಂತ್ರ್ಯಾಭಿಮಾನವುಳ್ಳವನಾಗುವುದಿಲ್ಲ, ನ ನಿಬಧ್ಯತೇ = ಯಾವ ಫಲಸಂಬಂಧವುಳ್ಳವನೂ ಆಗುವುದಿಲ್ಲ.

ವಿ ॥ (1) ಶ್ರೀಪರಮಾತ್ಮನೂ ಸರ್ವಜ್ಞನು, ಸರ್ವಸ್ವತಂತ್ರನು ಎಂದು ತಿಳಿದಿರುವ, ಜಗತ್ತನ್ನು ಸಂಹರಿಸುವುದಕ್ಕಾಗಿಯೇ ಹುಟ್ಟಿರುವ. ರುದ್ರ, ಅಥವಾ ಯಮ, ಇವರು ಜಗತ್ತನ್ನು ಸಂಹರಿಸಿದರೂ ಇವರಿಗೆ ಹನನ ದೋಷವಿಲ್ಲವೆಂದು ಈ ಶ್ಲೋಕದ ತಾತ್ಪರ್ಯವು. (2) ರುದ್ರ ಯಮರಿಗಿಂತ ಇತರರು ಅಪರೋಕ್ಷಜ್ಞಾನಿಗಳಾದಾಗ್ಯೂ ಅವರಿಗೆ ಲೋಕ ಸಂಹಾರದಿಂದ ದೋಷವೇ ಉಂಟಾಗುವುದು. ಉದಾ— ವೃತ್ರಾಸುರನ ಸಂಹಾರಾದಿಗಳಿಂದ ಇಂದ್ರಾದಿಗಳಿಗೂ ಕಿಂಚಿದ್ದುಃಖವೂ ಅತ್ಯಲ್ಪಾಹಂಕಾರ ಪ್ರಯುಕ್ತವೇ. (3) ಹೀಗೆ ಯಾರಿಗೆ ತಾನೇ ಕರ್ತನೆಂದು ಅಭಿಮಾನವಿದೆಯೋ, ಅತನ ನಿಂದೆಯನ್ನೂ, ಯಾರಿಗೆ ತಾನೇ ಕರ್ತನೆಂದು ಅಭಿಮಾನವಿಲ್ಲವೋ, ಅತಂ ಸ್ತುತಿಯನ್ನೂ, ಮಾಡಿ ಕರ್ಮದಲ್ಲಿ ಕರ್ತೃತ್ವಾಭಿಮಾನ ತ್ಯಾಗವು ಸನ್ನ್ಯಾಸಶಬ್ದಾರ್ಥವೆನಿಸುತ್ತದೆ, ಎಂದುಕ್ತವಾಯ್ತು. ॥ ೧೭ ॥

**ಭಾ ॥ (೧) ತಜ್ಜ್ಞಾನಂ ಸ್ತೌತಿ । ಯಸ್ಯೇತಿ ॥ (೨) ಯಸ್ತ್ವೀಷದ್ಬಧ್ಯತೇ ಸ ಈಷದಹಂಕಾರೀ ಚ ॥ ೧೭ ॥**

ಅ ॥ (೧) ಜೀವರಿಗೆ ಸ್ವಾತಂತ್ರ್ಯೇಣ ಕ್ರಿಯೆಯಿಲ್ಲವೆಂಬುವ ಜ್ಞಾನವನ್ನು ಯಸ್ಯ ಎಂಬುವ ಶ್ಲೋಕದಿಂದ ಸ್ತುತಿಸುತ್ತಾರೆ. (೨) (ಹಾಗಾದರೆ—ನಿರಹಂಕಾರಿಗಳಾದ ಇಂದ್ರಾದಿಗಳಿಗೂ ವೃತ್ರಾಸುರನೇ ಮೊದಲಾದವರ ವಧಾದಿಗಳಿಂದ ದುಃಖಾದಿರೂಪವಾದ ಬಂಧವೂ ಕಾಣಲ್ಪಡುವುದರಿಂದ ನಿರಹಂಕಾರಿಗಳಿಗೆ ಕರ್ಮಫಲ ಲೇಪವಿಲ್ಲವೆಂಬುವುದು ಹೇಗೆ ಕೂಡುತ್ತದೆ ಎಂದರೆ) ಯಾವನು ಸ್ವಲ್ಪ ದುಃಖಾದಿರೂಪವಾದ ಬಂಧವಿದ್ದವನೋ, ಅತನು ಸ್ವಲ್ಪ ಅಹಂಕಾರವುಳ್ಳವನೂ ಆಗುತ್ತಾನೆ. ಗೀತೆಯಲ್ಲಿ ಹೇಳಿದ ಪ್ರಕಾರ ಇಂದ್ರನಿಗೂ ಸ್ವಲ್ಪ ಅಹಂಕಾರವಿತ್ತೆಂದು ಕಲ್ಪಿಸಬೇಕು. ॥ ೧೭ ॥

ಟೀ—ನ ಹಂತಿ ನ ನಿಬಧ್ಯತೇ ಎಂದು ಮಾತಕ್ಕೆ ಸ್ತೋತ್ರವು ಅಹಂಕಾರಾದಿಗಳಿಲ್ಲದಿರುವವರಿಗೆಲ್ಲರಿಗೂ ಸಮವೇ. ಎಂಬೀ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಈ ಶ್ಲೋಕವನ್ನು ಪ್ರಮಾಣಾಂತರದಿಂದಲೇ ವ್ಯಾಖ್ಯಾನ ಮಾಡುತ್ತಾರೆ

**ಪ್ರಾ ॥ (೧) ಸ್ವಾತಂತ್ರ್ಯಮಾತ್ಮನೋ ವೇತ್ತಿ ನೈವಾತ್ಮನಿ ಕದಾಚನ । ಈಶ್ವರಾಧೀನಮೇವಾತ್ಮಾ ಸ್ವಾತಂತ್ರ್ಯಂ ತು ಜಡಾತ್ಮತಿ । ತಾರತಮ್ಯೇನ ॥ (೨) ಲಕ್ಷ್ಮ್ಯಾದೇರ್ದೇವಾನಾಂ ಪ್ರತಿ ಚ ಸರ್ವಶಃ । ಯಸ್ತದರ್ಥಂ ಸಮುತ್ಪನ್ನೋ ಯಥಾ ರುದ್ರೋ ಯಥಾ**

**ಯಮಃ । ಹತ್ವಾಽಪಿ ಸ ಇಮಾನ್ಲೋಕಾನ್ನ ಹಂತಿ ನ ನಿಬಧ್ಯತೇ ॥ (೩) ಅಜ್ಞಸ್ತ-ದರ್ಥಂ ಜಾತೋಽಪಿ ಬಧ್ಯತೇ ದೈತ್ಯವದ್ಧ್ರುವಂ ॥ (೪) ಅಪರೋಕ್ಷದೃಜ್ಞ ಜಾ-ತೋ ಯಸ್ತದರ್ಥಂ ಮುಕ್ತಿಗಂ ಸುಖಂ। ಹ್ರಸೇತ್ತಸ್ಯ ಪರೋಕ್ಷಜ್ಞಃ ॥ (೫) ಕಿಂಚಿ-ದ್ದೋಷೇಣ ಲಿಪ್ಯತ ಇತಿ ಚ ॥ ೧ ॥**

ಅ॥ (೧) ಯಾವ ಭೀಮಾರ್ಜುನಾದಿಗಳು ಶ್ರೀ ಪರಮಾತ್ಮನಲ್ಲಿಯೇ ಸ್ವಾತಂತ್ರ್ಯವನ್ನು ತಿಳಿಯು ತ್ತಾರೋ, ಯಾವಾಗಲೂ ಜೀವರಲ್ಲಿ ಸ್ವಾತಂತ್ರ್ಯವನ್ನು ತಿಳಿಯುವುದಿಲ್ಲವೋ, ಜೀವರಿಗೆ ಜಡಗಳನ್ನು ಕುರಿತು ಶ್ರೀ ಪರಮಾತ್ಮನ ಅಧೀನವಾದ ಸ್ವಾತಂತ್ರ್ಯವನ್ನೇ ತಿಳಿಯುತ್ತಾರೋ. (೨) ಲಕ್ಷ್ಮೀ ಮೊದ ಲಾದವರಿಗೆ ತರತಮಭಾವದಿಂದ ಎಲ್ಲಾ ಜೀವರನ್ನು—ಜಡಗಳನ್ನು ಕುರಿತು ಸ್ವಾತಂತ್ರ್ಯವನ್ನು ತಿಳಿಯು ತ್ತಾರೋ, ರುದ್ರ ಯಮರಂತೆ ಜಗತ್ತಿನ ಸಂಹಾರಕ್ಕಾಗಿ ಹುಟ್ಟಿರುವ ಭೀಮಾರ್ಜುನಾದಿಗಳು ಈ ಲೋಕ ವನ್ನು ಸಂಹರಿಸಿದರೂ ತಾವೇ ಸ್ವತಂತ್ರವಾಗಿ ಕೊಲ್ಲುವೆವೆಂಬ ಬುದ್ಧಿಯಿಲ್ಲದಿರುವುದರಿಂದ ದೋಷಿಗಳಾ ಗುವದಿಲ್ಲ (ಅಂದರೆ ಅದರ ಫಲವನ್ನು ಹೊಂದುವುದೂ ಇಲ್ಲ.) (೩) (ಸಂಹಾರಕ್ಕಾಗಿ ಹುಟ್ಟಿದ್ದರಿಂದಲೇ ಕ್ಲೇಶವಿಲ್ಲವೆಂದು ಹೇಳಬಹುದು ಶ್ರೀ ಪರಮಾತ್ಮನು ಸರ್ವಸ್ವತಂತ್ರನು. ಇತ್ಯಾದಿ ಜ್ಞಾನವು ಏಕೆಂದರೆ—) ಅಜ್ಞರಾದ ದುರ್ಯೋಧನಾದಿಗಳು ಲೋಕಸಂಹಾರಕ್ಕಾಗಿ ಹುಟ್ಟಿದರೂ ಜನರನ್ನು ಸಂಹ ರಿಸಿದರೆ ನಿಶ್ಚಯವಾಗಿಯೂ ಪ್ರಲಯಕಾಲದಲ್ಲಿ ಜಗತ್ಸಂಹಾರಕ್ಕಾಗಿ ಹುಟ್ಟಿರುವ ಕ್ರೋಧವಶಾದಿದೈತ್ಯರಂತೆ ಪರಮಾತ್ಮನಲ್ಲಿ ಸ್ವಾತಂತ್ರ್ಯಜ್ಞಾನವಿಲ್ಲದಿರುವುದರಿಂದ ಕರ್ಮಲೇಪವುಳ್ಳವರೇ ಆಗುತ್ತಾರೆ. (೪) (ಹಾಗಾದರೆ ಸ್ವಾತಂತ್ರ್ಯಜ್ಞಾನವೇ ಸಾಕು. ಸಂಹಾರಕ್ಕಾಗಿ ಹುಟ್ಟಬೇಕು ಎಂಬುವುದು ಏತಕ್ಕೆಂದರೆ ಪರೋಕ್ಷ ಅಪ ರೋಕ್ಷಜ್ಞಾನಿಗಳೂ ಜಗತ್ಸಂಹಾರಕ್ಕಾಗಿ ಹುಟ್ಟಿದಿದ್ದು ಜಗತ್ತನ್ನು ಸಂಹರಿಸಿದರೆ ಬಾಧಕಹೇಳುತ್ತಾರೆ—) ಸಂಹಾರಕ್ಕಾಗಿ ಹುಟ್ಟದಿದ್ದು ಅಪರೋಕ್ಷಜ್ಞಾನಿಯಾದವನೂ ಜಗತ್ತನ್ನು ಸಂಹರಿಸಿದರೆ ಆತನಿಗೆ ಮೋಕ್ಷದಲ್ಲಿ ಉಂಟಾಗುವ ಸುಖವು ಹ್ರಾಸವಾಗುವುದು. (೫) ಜಗತ್ಸಂಹಾರಕ್ಕಾಗಿ ಹುಟ್ಟದಿದ್ದು ಪರೋಕ್ಷ ಜ್ಞಾನಿಯು ಲೋಕಗಳನ್ನು ಸಂಹರಿಸಿದರೆ ಯತ್ಕಿಂಚಿದ್ದೋಷದಿಂದ ಕರ್ಮಲೇಪವುಳ್ಳವನೇ ಆಗುತ್ತಾನೆ॥೧॥

ಪೀ—ಸರ್ವರೂ ಅಸ್ವತಂತ್ರರಾದುದರಿಂದ ಕೊಲ್ಲುವವರಿಗದೇನೇ ಇರುವುದರಿಂದ ಸ್ವಾತಂತ್ರ್ಯ ಜ್ಞಾನವಿದ್ದವನಿಗೇನೇ ನ ಹಂತಿ ಎಂದು ವಿಶಿಷ್ಯ ಏಕೆ ಹೇಳಿದ್ದು ಎಂದರೆ—

**ಚ॥ (೧) ಅಸ್ವಾತಂತ್ರ್ಯಜ್ಞಾನಾದ್ವಸ್ಮೀತಿ ಭಾವೋಽಸ್ಯಸ್ಯ ನಾಸ್ತೀತಿ ನ ಹಂತಿ । ಅನ್ಯಸ್ಯ ಭಾವೋಽಸ್ತೀತಿ ವಿಶೇಷಃ ॥ (೨) ಬುದ್ಧಿರ್ಯಸ್ಯ ನ ಲಿಪ್ಯತ ಇತಿ । ರಾಗಾನ್ನ ಹಂತಿ ಕಿಂತು ಧರ್ಮಬುದ್ಧ್ಯಾ ॥ (೩) ಸ್ವಾತಂತ್ರ್ಯಂ ಮನ್ಯಮಾನಸ್ಯ ರಾಗಾದ್ಧರ್ಮಂ ಚ ಕುರ್ವತಃ । ತನ್ನಿಮಿತ್ತಸ್ತು ದೋಷಃ ಸ್ಯಾದ್ಗುಣಸ್ತು(ಸ್ತ್ವ) ಸ್ಯಾತ್ಸ್ವ(ತ್ಸ್ವ)ಕರ್ಮಜಃ॥ ಇತಿ ಚ ॥ ೨ ॥ ॥ ೧೭ ॥**

ಅ॥ (೧) ತಾನು ಅಸ್ವತಂತ್ರನೆಂಬುವ ಜ್ಞಾನದಿಂದ ತಾನೇ ಕೊಲ್ಲುತ್ತೇನೆಂಬುವ ಸ್ವಾತಂತ್ರ್ಯ[illegible] [illegible]ಜ್ಞಾನವು ಶ್ರೀಪರಮಾತ್ಮನೇ ಸರ್ವಸ್ವತಂತ್ರನು ಎಂದು ಜ್ಞಾನವಿದ್ದವನಿಗೆ [illegible] ಶ್ರೀ[illegible]ಯು [illegible]ನೆಂದು ಜ್ಞಾನವಿಲ್ಲದವರಿಗೆ ತಾನೇ ಸ್ವತಂತ್ರನೆಂದು ಕರ್ತೃತ್ವಾಭಿಮಾನ[illegible] ಇದೆ, ಎಂಬು [illegible]ದಿಂದ ನ ಹಂತಿ ಎಂದು ವಿಶಿಷ್ಯ ಹೇಳಿದ್ದು [illegible] (೨) (ಮನೋ ಬುದ್ಧಿರಹಂಕಾರ [illegible] ಹೇಳಿದ ಅಂತಃಕರಣವಿಶೇಷವಾದ ಬುದ್ಧಿಗೂ ನಿಶ್ಚಯಾತ್ಮಕ [illegible] [illegible]

ತ್ರ್ಯಾಭಿಮಾನಪರಿತ್ಯಾಗವು. ಆದುಕಾರಣ ಯಸ್ಯ ನಾಹಂಕೃತೋ ಭಾವ ಎಂಬುವ್ರುದರಿಂದ ಪ್ರಸಕ್ತಿ ಯೆಂದರೆ—) ಯಾವಾತನ ಬುದ್ಧಿಯು ಫಲೇಚ್ಛೆಯಿಂದ ಸಂಬದ್ಧವಾಗುವುದಿಲ್ಲವೋ ಆತನು ಈ ಲೋಕ ಗಳನ್ನು ಕೊಂದರೂ ಹನನದೋಷವುಳ್ಳವನಾಗುವುದಿಲ್ಲ. ಮತ್ತೆ ಶ್ರೀ ಪರಮಾತ್ಮನ ಆಜ್ಞಾನುಸಾರ ತನಗೆ ಧರ್ಮವೇ ಎಂಬುವ ಬುದ್ಧಿಯಿಂದ ಕೊಲ್ಲುತ್ತಾನೆ. (೩) (ಸ್ವಾತಂತ್ರ್ಯಾಭಿಮಾನ, ಫಲೇಚ್ಛೆ, ಇವೆರಡೂ ಸಂಸಾರಬಂಧಕಗಳಾದರೆ ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ಎಂಬುವವು ಗಳಿಗೆ ಅರ್ಥಭೇದವು ಕೂಡಬಹುದಿತ್ತು. ಅದು ಹೇಗೆಂದರೆ—) ಧರ್ಮ ಮಾಡಲಿಕ್ಕೆ ತನಗೆ ಸ್ವಾತಂತ್ರ್ಯ ವನ್ನು ತಿಳಿದು ಫಲಾಭಿಲಾಷೆಯಿಂದ ಧರ್ಮವನ್ನು ಮಾಡುವವರಿಗೆ ಸ್ವಾತಂತ್ರ್ಯಾಭಿಮಾನ ಫಲೇಚ್ಛೆಗಳಿಂದ ದೋಷವು ಬರುವುದು. ಸ್ವಾತಂತ್ರ್ಯಾಭಿಮಾನದಿಂದ ನರಕಾದ್ಯನರ್ಥಗಳೂ, ಫಲೇಚ್ಛೆಯಿಂದ ಗಮನಾ ಗಮನಾದಿ ದೋಷವೂ ಗತಾಗತಂ ಕಾಮಕಾಮಾ ಲಭಂತೇ ಎಂಬುವ ಪ್ರಮಾಣವಿದ್ದುದರಿಂದ ಬರು ವುದು. ಸ್ವಾತಂತ್ರ್ಯವನ್ನು ತಿಳಿದವನಿಗೆ ತಮ್ಮ ತಮ್ಮ ವರ್ಣಾಶ್ರಮಗಳಿಗೆ ವಿಹಿತಗಳಾದ ಕರ್ಮಗಳಿಂದ ಸ್ವರ್ಗಾದಿಗಳೂ ಲಭಿಸುವವು. ॥ ೨ ॥ ॥ ೧೭ ॥

ಟೀ—ಜಡಗಳಾಗಲೀ ಶ್ರೀ ಪರಮಾತ್ಮನಾಗಲೀ ಮುಕ್ತರಾಗಲೀ ವಿಧಿಗೆ ವಿಷಯರಾಗದಿರುವುದರಿಂದ ಜೀವರಿಗೂ ಸ್ವತಃ ಕರ್ತೃತ್ವವಿಲ್ಲವಾದರೆ ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ ಇತ್ಯಾದಿ ಮೊದಲಾದ ವಿಧಿವಾಕ್ಯಗಳು ವ್ಯರ್ಥಗಳಾಗದೇ ಆಗುವವು, ಎಂದರೆ—

## ಗೀ ॥ ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।
## ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥ ೧೮ ॥

ಅ ॥ ಕರ್ಮಚೋದನಾ=ಯಜ್ಞ ಮೊದಲಾದ ಕರ್ಮಗಳಲ್ಲಿ ಪ್ರೇರಣೆಯು, ಜ್ಞಾನಂ=ವಿಧಿವಿಷಯಕ ಜ್ಞಾನವು. ಜ್ಞೇಯಂ—ಇಚ್ಛಾಪ್ರಯತ್ನರೂಪಪ್ರವೃತ್ತಿ ರೂಪವಾದುದು, ಪುರುಷಾರ್ಥರೂಪವಾದುದು, ಪರಿಜ್ಞಾತಾ—ಅಧಿಷ್ಠಾನರೂಪವಾದುದು. (ಅಂದರೆ ಸರ್ವಜ್ಞನೂ ಸರ್ವಪ್ರೇರಕನೂ ಆದ ಶ್ರೀ ಪರಮಾತ್ಮ ನಲ್ಲಿ ಆಶ್ರಯಿಸಿಕೊಂಡಿರುವ ಜೀವರಾಶಿಯು) (ಅಂತೂ ಜ್ಞಾನ ನಿಮಿತ್ತಕ, ಜ್ಞಾನವಿಷಯವಸ್ತುನಿಮಿ ತ್ತಕ, ಜೀವನಿಮಿತ್ತಕವೆಂದು,) ತ್ರಿವಿಧಂ—ಮೂರು ವಿಧವಾದುದಾಗಿ (ಪ್ರವರ್ತಿಸುತ್ತದೆ.) ಅಥವಾ ಜೀವ ರಿಗೆ ಕರ್ಮಗಳಲ್ಲಿ ಶ್ರೀ ಪರಮಾತ್ಮನ ಪ್ರೇರಣೆಯು ಜ್ಞಾನ, ಜ್ಞೇಯ, ಪರಿಜ್ಞಾತಾ ಎಂದು ಮೂರು ವಿಧ ಭಗವದ್ರೂಪವು. ಕರಣಂ—ಇಂದ್ರಿಯಗಳು, ಸ್ರುಕ್-ಸ್ರುವ ಮೊದಲಾದ ವಸ್ತುಗಳು, ಶರೀರ ಮೊದ ಲಾದವುಗಳು ಅನ್ನವೂ ಕರ್ಮ ಹಸ್ತಾದಿಗಳ ಚೇಷ್ಟೆಯು. ಕರ್ತಾ=ಜೀವನು ಮತ್ತು ಶ್ರೀ ಪರಮಾತ್ಮನು ಹೀಗೆ ತ್ರಿವಿಧಃ—ಮೂರು ವಿಧವಾದ, ಕರ್ಮಸಂಗ್ರಹಃ—ವಿಮ ಕಾರಣಗಳ ಸಂಕ್ಷೇಪವು.

ವಿ ॥ (1) ಜೀವರಲ್ಲಿ ಸನ್ನಿಹಿತನಾದ ಶ್ರೀ ಪರಮಾತ್ಮನ ಪ್ರೇರಣೆಯಿಂದ ಪುರುಷಾರ್ಥವನ್ನು ದೇಹ ಕರ್ಮದಲ್ಲಿ ಇಚ್ಛಾಪ್ರಯತ್ನರೂಪ ಪ್ರವೃತ್ತಿಯು ಜೀವರಿಗೆ ಉಂಟಾಗುತ್ತದೆ. ವಿಧಿಜ್ಞಾನಾದಿಗಳಿಂದ ಕರ್ಮದಲ್ಲಿ ಪ್ರವೃತ್ತಿಯುಂಟಾಗುವುದರಿಂದ ನಿಮಿತ್ತ ನಿಮಿತ್ತೀಭಾವವನ್ನು ತಿಳಿದುಕೊಳ್ಳಬೇಕು. ಪರಾ ಧೀನಕರ್ತನಾದ ಜೀವನಿಗೆ ಸ್ವತಃ ಕರ್ತೃತ್ವವಿಲ್ಲದಿರುವುದರಿಂದ ವಿವಿಧ ಜ್ಞಾನವಾಕ್ಯ ಪ್ರವೃತ್ತ್ಯಾದಿಗಳಿ ಗಾಗಿ ವಿಧಿವಿಷಯತ್ವವು ಹೇಗೆ ಎಂದು ಶಂಕಿಸಕೂಡದು. ವಿಧಿವಿಷಯತ್ವವಲ್ಲಿ ಅಪರಾಧೀನ ಕರ್ತೃತ್ವ ಪ್ರಯೋಜಕತ್ವವು ಎಲ್ಲಿಯೂ ಕಾಣದಿರುವುದರಿಂದ ಪರಾಧೀನಕರ್ತೃತ್ವಯುಳ್ಳ ಜೀವನೇ ವಿಧಿವಿಷಯ ನೆಂದು ಅವಶ್ಯವಾಗಿ ಹೇಳಬೇಕು. ಮತ್ತು ಜಡ ಈಶ್ವರ ಮುಕ್ತರು ವಿಧಿಗೆ ವಿಷಯರಾಗದಿರುವುದರಿಂದ ಪ್ರಮಾಣಾಭಾವ ವಿಧಿಗೆ ವೈಯರ್ಥ್ಯವು ಕೂಡಲಾರದು. ಅಲ್ಲದೆ ಪರಿಶೇಷ ಪ್ರಮಾಣದಿಂದಲೂ ಜೀವನಿಗೆ

ಶ್ವಾಧೀನನಾದ ಜೀವನೇ ವಿಧಿವಿಷಯನೆಂದು ಅವಶ್ಯವಾಗಿ ಹೇಳಬೇಕು. ಅದಕಾರಣ ಜೀವನಲ್ಲಿ ವಿಧಿಜ್ಞಾನವೂ, ವಿಧಿಜ್ಞಾನದನ್ಯವಾದ ಫಲ, ಫಲ, ಸಾಧನ ಇಚ್ಛೆಯೂ, ಸಾಧನ ವಿಷಯವಾದ ಪ್ರಯತ್ನವೂ ಅನುಭವಸಿದ್ಧವಾಗಿದೆ. ನ ಋತೇ ತ್ವತ್ಕ್ರಿಯತೇ ಇತ್ಯಾದಿ ಶ್ರುತಿಗಳಿಂದ ಜೀವರ ಜ್ಞಾನ ಅಜ್ಞಾನ ಮೊದಲಾದವುಗಳು ಶ್ರೀಹರಿಯ ಅಧೀನಗಳಾದಾಗ್ಯೂ ಕೇವಲ ಅಸ್ವಂತಂತ್ರ ಕರ್ತೃತ್ವವಿದ್ದ ಪ್ರಯುಕ್ತ ವಿಧಿವಿಷಯತ್ವವೂ ಕರ್ಮಫಲಾನುಭವಿತೃತ್ವವೂ ಕೂಡುತ್ತದೆ. ॥ ೧೮ ॥

ಭಾ ॥ (೧) ಏವಂ ತರ್ಹಿ ನ ಪುರುಷಮಪೇಕ್ಷ್ಯ ವಿಧಿಃ । ಅಕರ್ತೃತ್ವಾದಿತ್ಯತ ಆಹ । ಜ್ಞಾನಮಿತಿ ॥ (೨) ತ್ರಿವಿಧಾ ಕರ್ಮಚೋದನಾ । ಏತತ್ತ್ರಿವಿಧಮಪೇಕ್ಷ್ಯ ಕರ್ಮವಿಧಿರಿತಿ ತ್ರಿವಿಧೇತ್ಯುಚ್ಯತೇ ॥ (೩) ಕಾರಣಾನಿ ಸಂಕ್ಷಿಪ್ಯಾऽऽಹ । ಕರಣಮಿತಿ । ಕರ್ಮಸಂಗ್ರಹಃ ಕರ್ಮಕಾರಣಸಂಕ್ಷೇಪಃ । ಅಧಿಷ್ಠಾನಾದಿ ಕರಣ ಏವಾಂತರ್ಭೂತಂ ॥ (೪) ತಥಾ ಹ್ಯೃಗ್ವೇದಖಿಲೇಷು । ಜ್ಞಾನಂ ಜ್ಞೇಯಂ ಜ್ಞಾನಿನಂ ಚಾಪ್ಯಪೇಕ್ಷ್ಯ ವಿಧಿರುತ್ಥಿತಃ । ಕರಣಂ ಚೈವ ಕರ್ತಾ ಚ ಕರ್ಮಕಾರಣಸಂಗ್ರಹ ಇತಿ ॥ ೧ ॥

ಅ ॥ (೧) ಜೀವನು ಕರ್ಮಗಳಿಗೆ ಕಾರಣನಲ್ಲವೆಂದಾದರೆ—ಅಂದರೆ ಜೀವನಿಗೆ (ಸಾಧಿಕೆಯಂತೆ) ಕರ್ತೃತ್ವವೇ ಇಲ್ಲವಾದರೆ ಜೀವನನ್ನು ಅಪೇಕ್ಷಿಸಿ ವೇದಗಳಲ್ಲಿಯೂ ಸ್ಮೃತಿಗಳಲ್ಲಿಯೂ ಹೇಳಿದ ವಿಧಿಯೂ ವ್ಯರ್ಥವೇ ಹೋಗುವುದು (ಅಂತೂ ವಿಧಿಯು ವ್ಯರ್ಥವಾಗುವುದು.) ಎಂದರೆ—ಜ್ಞಾನಂ ಎಂಬುವ ಶ್ಲೋಕದಿಂದ ಸಮಾಧಾನ ಹೇಳುತ್ತಾರೆ. (೨) ತ್ರಿವಿಧಾ ಕರ್ಮಚೋದನಾ ಎಂಬುವಲ್ಲಿ ಈ ಜ್ಞಾನ ಮೊದಲಾದ ಮೂರನ್ನು ಅಪೇಕ್ಷಿಸಿ ಜೀವರನ್ನು ಕುರಿತು ಕರ್ಮವಿಧಿಯು ಪ್ರವೃತ್ತನಾಗುತ್ತದೆ. ಅದಕಾರಣ ಕರ್ಮವಿಧಿಯು ತ್ರಿವಿಧಾ ಎಂದು ಹೇಳಲ್ಪಡುತ್ತದೆ. (೩) (ಕರ್ಮಕಾರಣಗಳನ್ನು ಹೇಳಿದಿಂದ ಕರಣಂ ಕರ್ಮ ಕರ್ತಾ ಎಂದು ಪುನಃ ಏಕೆ ಹೇಳಿದ್ದು ಎಂದರೆ-ಕರಣಂ ಎಂಬುವುದರಿಂದ ಕಾರಣಗಳನ್ನು ಸಂಕ್ಷೇಪದಿಂದ ಹೇಳುತ್ತಾರೆ (ಹಾಗಾದರೆ ಕಾರಣಸಂಗ್ರಹಃ ಎಂದು ಹೇಳಬೇಕಿತ್ತು. ಕರ್ಮಸಂಗ್ರಹಃ ಎಂದದ್ದು ಏಕೆ? ಎಂದರೆ--) ಕರ್ಮಸಂಗ್ರಹಃ=ಕರ್ಮಕಾರಣಗಳ ಸಂಗ್ರಹವು. (ಐದು ಕಾರಣಗಳಿಗೂ ಇದು ಸಂಗ್ರಹವೆಂದಾದರೆ ಯಾವುದು ಎಲ್ಲಿ ಸೇರುತ್ತದೆ? ಎಂದರೆ—) ಅಧಿಷ್ಠಾನ ಅವ್ಯಕ್ತಗಳು ಕಾರಣದಲ್ಲಿಯೇ ಸೇರುತ್ತವೆ (೪) (ಶ್ಲೋಕಾರ್ಥದಲ್ಲಿ ಶ್ರುತಿಸಮ್ಮತಿಯನ್ನು ಹೇಳುತ್ತಾರೆ.) ವಿಧಿವಿಷಯವಾದ ಜ್ಞಾನ, ಜ್ಞೇಯ, ಜ್ಞಾನಿಯಾದ ಜೀವ, ಇವರನ್ನಪೇಕ್ಷಿಸಿ ವಿಧಿಯು ಪ್ರವೃತ್ತವಾಗುತ್ತದೆ ಇಂದ್ರಿಯಾದಿರೂಪ ಕರಣವೂ, ಜೀವೇಶ್ವರರೂ, ಹೀಗೆ ಇತ್ಯಾದಿ ಇವುಗಳು ಕರ್ಮಕಾರಣಗಳ ಸಂಗ್ರಹವು ಎಂದು ಋಗ್ವೇದಖಿಲಗಳಲ್ಲಿ ಹೇಳಿದೆ. ॥ ೧ ॥

ಟೀ - ಜ್ಞಾನಂ ಜ್ಞೇಯಂ ಎಂಬುವುದರಿಂದ ಜೀವನಿಗೆ ಸ್ವತಂತ್ರ ಕರ್ತೃತ್ವವಿಲ್ಲದಿದ್ದರೆ ವಿಧಿಯು ವ್ಯರ್ಥವಾಗುವುದೆಂಬುವ ಶಂಕಾಪರಿಹಾರವು ಹೇಗೆಂದರೆ—

ಟೀ ॥ (೧) ಅಕರ್ತೃತ್ವೇऽಪಿ ವಿಧಿದ್ವಾರೇಶ್ವರಪ್ರಸಾದಾದಿಚೋದಿತತ್ವಾತ್ ಕಾರಣ್ಯಃ ಕರ್ಮದ್ವಾರಾ ಪುರುಷಾರ್ಥೋ ಭವತೀತಿ ॥ (೨) ಈಶ್ವರಾಧೀನತೇऽಪಿ ವಿಧಿದ್ವಾರಾ ನಿಯತತ್ವೇನೈವ ॥ (೩) ಯದಿ ಚೇಚ್ಛಾದಿಜನಯತೇ ತರ್ಹಿ ಕಾರಿತಮೇವೇಶ್ವರೇಣ । ಫಲಂ ಚ ನಿಯತಂ ॥ (೪) ವಸ್ತುತೋ ಕರ್ತೃತ್ವೇऽಪ್ಯಭಿಮಾನಿಕಂ ಕರ್ತೃತ್ವಂ ತಸ್ಯೈವ ॥ (೫) ಸ್ವಾತಂತ್ರ್ಯಂ ಚ ಜಡಮಪೇಕ್ಷ್ಯೇತಿ ನ ಪ್ರವೃತ್ತಿನಿವೃತ್ತ್ಯೋರ್ವ್ಯರ್ಥಃ ॥

(೬) ಸರ್ವಂ ಚೈತದನುಭವೋಕ್ತಪ್ರಮಾಣಸಿದ್ಧಮಿತಿ ನ ಪೃಥಕ್ಪ್ರಮಾಣಮುಚ್ಯತೇ ॥ ೨ ॥ ॥ ೧೮ ॥

ಅ ॥ (೧) ಜೀವರಿಗೆ ಸ್ವತಂತ್ರಕರ್ತೃತ್ವವಿಲ್ಲದಿದ್ದರೂ ಜೀವರನ್ನು ಕುರಿತು ವಿಧಿಯು ವ್ಯರ್ಥವಾಗುವುದಿಲ್ಲ. ಏಕೆಂದರೆ ವಿಧಿವಾಕ್ಯಜ್ಞಾನವುಂಟಾಗಿ ಪರಮಾತ್ಮನ ಪ್ರಸಾದದಿಂದ ಇಚ್ಛೆಯೂ ಪ್ರಯತ್ನವೂ ಉಂಟಾಗಿ ಅಧಿಷ್ಠಾನ ಮೊದಲಾದ ಕಾರಣಗಳಿಂದ ಕರ್ಮದ್ವಾರಾ ಜೀವರಿಗೆ ಪುರುಷಾರ್ಥವುಂಟಾಗುತ್ತದೆ. (ಅಂದರೆ ಜ್ಞಾನವು ವಿಧಿವಿಷಯಕವು. ಜ್ಞೇಯವು ಇಚ್ಛಾಪ್ರಯತ್ನರೂಪವು. ಅಧಿಷ್ಠಾನರೂಪವು. ಮತ್ತು ಪುರುಷಾರ್ಥರೂಪವು. ಪರಿಜ್ಞಾತಾ ಸರ್ವಜ್ಞನಾದ ಶ್ರೀ ಪರಮಾತ್ಮನು ಸರ್ವರಿಗೂ ಪ್ರೇರಕನಾಗಿ ಜೀವರಲ್ಲಿ ಸನ್ನಿಹಿತನಾಗಿರುತ್ತಾನೆ ಆದಕಾರಣ ಜೀವರನ್ನು ಕುರಿತು ಕರ್ಮವಿಧಿಯು ಎಂದರ್ಥವು ಸೂಚಿತವಾಯಿತು. ಏವಂ ಚ ವಿಧಿವಿಷಯನಾಗದೇ ಕಾದರೆ ಸ್ವತಂತ್ರ ಕರ್ತೃತ್ವವೇ ಪ್ರಯೋಜಕವೆಂದು ಹೇಳಿದರೆ ಶ್ರೀಪರಮಾತ್ಮನಿಗೂ ವಿಧಿವಿಷಯತ್ವವು ಬರಬೇಕಾಗುವುದು ಆದಕಾರಣ ಪ್ರಮಾಣಾನುಸಾರ ಪರಾಧೀನಕರ್ತನಾದ ಜೀವನೇ ವಿಧಿವಿಷಯನೆಂದು ಹೇಳಬೇಕು ಅಂದರೆ ಯಾರಿಗೆ ತನಗೆ ಸಂಬಂಧಪಟ್ಟದ್ದಾಗಿ ವಿಧಿಜ್ಞಾನವೂ, ಕರ್ಮ. ಅದರ ಫಲವನ್ನುದ್ದೇಶಿಸಿ ಇಚ್ಛೆಗೆ ಅನುಗುಣವಾದ ಪ್ರಯತ್ನವೂ ಅಧಿಷ್ಠಾನಾದಿ ಸನ್ನಿಧಾನವೂ, ಕರ್ಮಸಂಬಂಧವೂ, ಫಲಸಂಬಂಧವೂ ಇದೆಯೋ, ಅವನಿಗೆ ಕರ್ಮವಿಧಿಗಳು ಪ್ರವೃತ್ತಗಳಾಗುತ್ತವೆ. ಇವೆಲ್ಲವೂ ಶ್ರೀ ಪರಮಾತ್ಮನ ಪ್ರಸಾದದಿಂದ ಜೀವರಲ್ಲಿವೆ. ಆದಕಾರಣ ಜೀವರಿಗೆ ಕರ್ಮವಿಧಿಗಳು ಕೂಡುತ್ತವೆ. ಆದಕಾರಣ ವಿಧಿವಾಕ್ಯಕ್ಕೆ ವೈಯರ್ಥ್ಯವಿಲ್ಲ. (೨) (ಶ್ರೀಪರಮಾತ್ಮನು ಪ್ರೇರಕನಾಗಿ ಜೀವರ ಶರೀರದಲ್ಲಿದ್ದರೆ ಶ್ರೀಹರಿಯ ಪ್ರಸಾದದಿಂದಲೇ ಇಚ್ಛಾಪ್ರಯತ್ನಗಳು ಹುಟ್ಟುವುದರಿಂದ ವಿಧಿಜ್ಞಾನವು ಏಕೆ ಎಂದರೆ–) ಶ್ರೀ ಪರಮಾತ್ಮನ ಅಧೀನತ್ವವಿದ್ದರೂ ವಿಧಿದ್ವಾರಾ ಶ್ರೀ ಪರಮಾತ್ಮನಿಂದಲೇ ಪ್ರೇರೇಪಿಸಲ್ಪಟ್ಟವನಾಗಿ ಇಚ್ಛಿಸುತ್ತಾನೆ. ಮತ್ತು ಪ್ರಯತ್ನ ಮಾಡುತ್ತಾನೆ. (೩) (ಅಧಿಷ್ಠಾನ ಮೊದಲಾದ ಕಾರಣಗಳಿಂದ ಕರ್ಮವು ಆಗುತ್ತದೆಂದು ಹೇಳಿದ್ದರಿಂದ ಅಧಿಷ್ಠಾನಾದಿಗಳಿಗೆ ಕರ್ಮೋತ್ಪತ್ತಿರೂಪವಾದ ವ್ಯಾಪಾರದಲ್ಲಿ ಸ್ವಾತಂತ್ರ್ಯವು ಪ್ರಾಪ್ತವಾಯ್ತು. ಅದನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾರೆ–) ಇಚ್ಛಾಪ್ರಯತ್ನಗಳು ಹುಟ್ಟಿದರೆ ಶ್ರೀ ಪರಮಾತ್ಮನಿಂದಲೇ ಅಧಿಷ್ಠಾನಾದಿಗಳನ್ನು ನಿಮಿತ್ತಮಾತ್ರಗಳನ್ನಾಗಿ ಮಾಡಿ ಜೀವರಿಂದ ಕರ್ಮವು ಮಾಡಿಸಲ್ಪಡುತ್ತದೆ (ಕರ್ಮದ್ವಾರಾ ಪುರುಷಾರ್ಥವಾಗುತ್ತದೆ ಎಂದು ಹೇಳುವಾಗ ಪುರುಷಾರ್ಥವನ್ನು ಸಾಧಿಸುವುದರಲ್ಲಿ ಕರ್ಮಗಳಿಗೆ ಪ್ರಾಧಾನ್ಯವು ಪ್ರಾಪ್ತವಾಯಿತೆಂದರೆ–) ಫಲವೂ ಶ್ರೀ ಪರಮಾತ್ಮನಿಂದಲೇ ಪ್ರೇರಿತವಾಗಿ ಇರುತ್ತದೆ. (ಈ ಫಲವೂ ವಿಧಿಗೆ ವಿಷಯವಾಗದಿದ್ದ ಶ್ರೀ ಪರಮಾತ್ಮ ಮುಕ್ತ ಜಡಗಳಲ್ಲಿ ಇಲ್ಲ. ಮತ್ತೆ ಸಂಸಾರಿಗಳಲ್ಲಿಯೇ ಇರುವುದು (೪) (ಹೀಗೆ ಗೀತೆಯಲ್ಲಿ ಹೇಳಿದ ಒಂದು ಕಾರಣವನ್ನು ಹೇಳಿ ಭಾಷ್ಯಕಾರರು ಕಾರಣಾಂತರವನ್ನು ಹೇಳುತ್ತಾರೆ–) ಜೀವರಿಗೆ ಸ್ವತಂತ್ರ ಕರ್ತೃತ್ವವಿಲ್ಲದಿದ್ದರೂ ಅಹಂಕಾರನಿಮಿತ್ತವಾಗಿ ಭ್ರಾಂತಿಯಿಂದ ಕರ್ತೃತ್ವವು ಜೀವರಿಗೇನೆ ತೋರುತ್ತದೆ. (ಅಭಿಮಾನಿಕ ಕರ್ತೃತ್ವವೇ ಜೀವರಿಗೆ ವಿಧಿಪ್ರವೃತ್ತಿಯಲ್ಲಿ ಪ್ರಯೋಜಕವು. ಅಂದರೆ ಸರ್ವಸ್ವಾತಂತ್ರ್ಯದಿಂದ ಶ್ರೀ ಪರಮಾತ್ಮನೇ ಮಾಡತಕ್ಕ ಕ್ರಿಯೆಗಳಲ್ಲಿ ತಾನೇ (ಜೀವನೇ) ಸ್ವತಂತ್ರ ಕರ್ತನೆಂದು ತಿಳಿದಿರುವ ಅಪರಾಧಿಯಾದ ಜೀವನಿಗೆ ವಿಧಿಬಂಧರೂಪವಾದ ದಂಡವು.) (೫) (ಪ್ರಕಾರಾಂತರದಿಂದ ಸಮಾಧಾನ ಹೇಳುತ್ತಾರೆ–) (ಜೀವನಿಗೆ ಕ್ರಿಯಾಸ್ವಾತಂತ್ರ್ಯರೂಪ ಕರ್ತೃತ್ವವು ಸರ್ವಥಾ ಇಲ್ಲವಾದರೆ–ವಿಧಿಪ್ರವೃತ್ತಿಗೆ ವೈಯರ್ಥ್ಯವು ಬರುತ್ತದೆ. ಹೀಗೆ ಅಲ್ಲ.) ಶ್ರೀಪರಮಾತ್ಮನ ಅಧೀನವಾದ ಕ್ರಿಯಾಸ್ವಾತಂತ್ರ್ಯರೂಪವಾದ ಕರ್ತೃತ್ವವು ಇದೆ (ಅಪರಾಧೀನವಾದ (ಸ್ವತಂತ್ರ) ಕರ್ತೃತ್ವವಿಲ್ಲವೆಂಬುವ ಅಭಿಪ್ರಾಯದಿಂದ ಕರ್ತೃತ್ವವಿಲ್ಲವೆಂದು ಹೇಳಿದೆ (ಹೀಗಾದರೆ ಜಡವಸ್ತುಗಳಿಗೂ ಇಂತಹ ಕರ್ತೃತ್ವವಿದೆ ಪ್ರಯುಕ್ತ ಚೇತನರಿಗೂ ಜಡವಸ್ತುಗಳ ಸಾಮ್ಯವೇ ಬರುವುದೆಂದರೆ –) ಜಡವಸ್ತುಗಳನ್ನು ಅಪೇಕ್ಷಿಸಿಯೇ, (ಅಂದರೆ – ಜಡವಸ್ತುಗಳಿಗಿಂತ ಅಧಿಕವಾದ

ಸ್ವಾತಂತ್ರ್ಯರೂಪ ಕರ್ತೃತ್ವವಿದೆ) ಆದಕಾರಣ ವಿಧಿಪ್ರವೃತ್ತಿಗೆ ವೈಯರ್ಥ್ಯವಿಲ್ಲ (ಅಂದರೆ ಜಡವಸ್ತುಗಳಲ್ಲಿ–ಜೀವರು ಮಾಡಿದ ನೋದನಾ (ಕಟ್ಟಾ ಜನಕ ಸಂಯೋಗಾ)ದಿಗಳಿಂದ ಕ್ರಿಯೆಯು ಹುಟ್ಟುತ್ತದೆ. ಆಗಂತುಕ ಕಾರಣವಿಲ್ಲದೆ ಸ್ವೇಚ್ಛೆಯಿಂದ ಕ್ರಿಯೆಯುಂಟಾಗಲಾರದು. ಜೀವರು ಅನಾದಿಸಿದ್ಧವಾದ ಪರಮಾತ್ಮನ ಪ್ರಸಾದಾಧೀನವಾದ ಕ್ರಿಯಾಶಕ್ತಿಯಿಂದ ಕರ್ತನೆನಿಸುತ್ತಾನೆ. ಆದಕಾರಣ ಜೀವರಿಗೆ ಕರ್ಮವಿಧಿಯು ಯುಕ್ತವು) (೬) (ಇವೆಲ್ಲವನ್ನೂ ಯಾವ ಪ್ರಮಾಣದಿಂದ ತಿಳಿಯಬೇಕೆಂದರೆ) ವಿಧಿಜ್ಞಾನವು ಬಂದೊಡನೆ ಇಚ್ಛೆಯು ಹುಟ್ಟುತ್ತದೆ, ಇದು ಮೊದಲಾದ ಅನುಭವದಿಂದಲೂ, ಯಥಾ ನಿಯುಕ್ತೋಽಸ್ಮಿ ಇದು ಮೊದಲಾದ ಆಗಮಗಳಿಂದಲೂ ಇದೆಲ್ಲವೂ ಸಿದ್ಧವಾಗಿದೆ. ಪುನಃ ಪ್ರತ್ಯೇಕ ಪ್ರಮಾಣವು ಹೇಳಲ್ಪಡುವುದಿಲ್ಲ.
೨ ॥ ॥ ೧೮ ॥

ಟೀ—ದೈವಂ ಚೈವಾತ್ರ ಪಂಚಮಂ (ಶ್ಲೋ. ೧೪) ಎಂಬುವಲ್ಲಿ ಶ್ರೀ ಪರಮಾತ್ಮನು ಕರ್ಮಗಳಿಗೆ ಪ್ರೇರಕನೆಂದು ಹೇಳಿದೆ. ಅಂತಹಪ್ರೇರಣಾ ಸ್ವರೂಪವನ್ನು ಜ್ಞಾನಂ ಜ್ಞೇಯಂ (ಶ್ಲೋ. ೧೮) ಎಂಬುವುದರಿಂದ ಹೇಳುತ್ತಾರೆ. ಅದನ್ನು ಸ್ಮೃತಿಯಿಂದ ಸಮರ್ಥಿಸುತ್ತಾರೆ—

ಶಾ ॥ (೧) ಸಂಪ್ರೇರಯಿತುರೀಶಸ್ಯ ಕರ್ಮಸ್ವಖಿಲಚೇತನಾನ್ । ಜ್ಞಾತೃಜ್ಞೇಯಜ್ಞಾನರೂಪಾ ಪ್ರೇರಣಾ ಸಾ ಸ ಏವ ಯತ್ ॥ (೨) ಸ್ವರೂಪೇಣೈವ ನಿತ್ಯಾ ಸಾ ವಿಶೇಷಾತ್ಮತಯಾ ಭವೇತ್ ॥ (೩) ವಿಶೇಷೋಽಪಿ ಸ್ವರೂಪೇಣ ನಿತ್ಯಶ್ಚ ಸ್ಯಾದ್ವಿಶೇಷತಃ ॥ (೪) ಸ್ವನಿರ್ವಾಹಕತಾ ಯಸ್ಮಾನ್ನಾನವಸ್ಥಾ ವಿಶಿಷ್ಟವತ್ । ವಿಶೇಷ್ಯ(ಷ)ಸ್ಯ ವಿಶಿಷ್ಟಸ್ಯಾಪ್ಯಭೇದೋಽಪ್ಯವಿವಾದಿನಿ । ವಿಶೇಷೋಽಸ್ತ್ಯೇ(ಸ್ತ್ಯೇ)ವ ನಾತ್ರಾಸ್ತಿ ಹ್ಯನವಸ್ಥಾ ಕದಾಚನ ॥ ೧ ॥

ಅ ॥ (೧) ಯಾವ ಕಾರಣದಿಂದ ಶ್ರೀಹರಿಯ ಪ್ರೇರಣೆಯು ಜ್ಞಾತ್ರಾದಿಸ್ವರೂಪನಾದ ಪ್ರೇರಕನಾದ ಶ್ರೀ ಭಗವದಭಿನ್ನವೋ, ಆದಕಾರಣ ಕರ್ಮಗಳಲ್ಲಿ ಎಲ್ಲಾ ಬ್ರಹ್ಮಾದಿಚೇತನರನ್ನು ಪ್ರೇರೇಪಿಸುವ ಸರ್ವನಿಯಾಮಕ ಶ್ರೀ ಪರಮಾತ್ಮನ ಪ್ರೇರಣೆಯು ಜ್ಞಾತೃಜ್ಞೇಯಜ್ಞಾನಸ್ವರೂಪವು. (ಪ್ರೇರಣೆಯು ಜ್ಞಾನಾದಿರೂಪನಾದ ಶ್ರೀ ಪರಮಾತ್ಮನ ಸ್ವರೂಪವಾದುದರಿಂದ ಜ್ಞಾತೃಜ್ಞೇಯ ಜ್ಞಾನರೂಪಾ ಎಂದದ್ದು ಕೂಡುತ್ತದೆ) (೨) (ಪ್ರೇರಣೆಯು ಮಧ್ಯೇ ಮಧ್ಯೇ ಉಂಟಾಗುವುದರಿಂದ ಅದು ಭಗವತ್ಸ್ವರೂಪವು ಹೇಗೆ ಆಗುವುದು? ಎಂದರೆ–) ಭಗವಂತನ ಪ್ರೇರಣೆಯು ಮಧ್ಯೇ ಮಧ್ಯೇ ಹುಟ್ಟುವುದಿಲ್ಲ. ಮತ್ತೆ ಭಗವತ್ಸ್ವರೂಪವಾದ ಶಕ್ತಿರೂಪದಿಂದ ಸದಾ ಇದ್ದುದಾಗಿಯೇ ವ್ಯಕ್ತಿರೂಪದಿಂದ ಅಭಿವ್ಯಕ್ತವಾಗುತ್ತದೆ. ಆದಕಾರಣ ಭಗವತ್ಸ್ವರೂಪವೆಂದು ಹೇಳಿದ್ದು ಯುಕ್ತವು (೩) ಅಭಿವ್ಯಕ್ತಿರೂಪ ವಿಶೇಷವೂ ಕೂಡ ನಿತ್ಯ ಪ್ರೇರಣಾರೂಪ ಸ್ವರೂಪದಿಂದ ನಿತ್ಯವೇ ಆದುದಾಗಿ ಅಭಿವ್ಯಕ್ತಿರೂಪ ವಿಶೇಷದಿಂದ ವ್ಯಕ್ತವಾಗುತ್ತದೆ (ಅಂದರೆ ಭಗವತ್ಪ್ರೇರಣೆಗೆ ಅಭಿವ್ಯಕ್ತಿರೂಪವಾದ ಯಾವ ವಿಶೇಷವಿದೆಯೋ, ಅದೂ ಅನಿತ್ಯವೆಂದು ಶಂಕಿಸಕೂಡದು ಏಕೆಂದರೆ ಭಗವತ್ಪ್ರೇರಣೆಯ ಅಭಿವ್ಯಕ್ತಿರೂಪ ವಿಶೇಷವೂ ನಿತ್ಯಪ್ರೇರಣಾರೂಪವಾದುದರಿಂದ ಸದಾ ಇದ್ದುದೇ ವಿಶೇಷತಃ ಅಭಿವ್ಯಕ್ತಿರೂಪ ವಿಶೇಷದಿಂದ ವ್ಯಕ್ತವಾಗುತ್ತದೆ. ಏವಂಚ ಇಲ್ಲಿ [illegible] ಸತ್ತಾಸಂಬಂಧರೂಪ ಉತ್ಪತ್ತಿಯಿಲ್ಲವಾದರೂ ಅಭಿವ್ಯಕ್ತಿರೂಪ ವಿಶೇಷವಿದೆ.) (೪) (ಹೀಗೆ ವಿಶೇಷಕ್ಕೂ ವಿಶೇಷವು, ಅದಕ್ಕೂ ವಿಶೇಷವು, ಹೀಗೆ ಅನವಸ್ಥಾದೋಷವು ಬರುವುದು ಎಂದರೆ–) ಯಾವ ಕಾರಣದಿಂದ [illegible] ತಾನೇ ನಿರ್ವಾಹಕವಾಗಿರುವುದೋ, ಆದಕಾರಣ ಅನವಸ್ಥಾದೋಷವು ಇಲ್ಲ. (ಅಂದರೆ ಪ್ರೇರಣಾ [illegible] ವ್ಯಕ್ತಿರೂಪ ವಿಶೇಷವು ಭಿನ್ನವು [illegible] ವ್ಯಕ್ತಿರೂಪ ವಿಶೇಷಕ್ಕೂ ವ್ಯಕ್ತಿರೂಪ ವಿಶೇಷವು ಭಿನ್ನವು [illegible]

ಅಂಗೀಕರಿಸಿದರೆ ಅನವಸ್ಥಾದೋಷವು ಬರುತ್ತಿತ್ತು. ಹೀಗೆ ಇಲ್ಲ. ಆ ಪ್ರೇರಣೆಯು ಭಗವತ್ಸ್ವರೂಪವೇ. ಅದಕ್ಕೇನೆ ತನ್ನನ್ನು ವಿಶೇಷ ಶಕ್ತಿಯಿಂದ ನಿರ್ವಾಹ್ಯತ್ವವೂ ನಿರ್ವಾಹಕತ್ವವೂ ಕೂಡುತ್ತದೆ. ಆ ವಿಶೇಷವೂ ಹೀಗೆಯೇ, ಹೀಗೆ ಅಂಗೀಕರಿಸುತ್ತೇವೆ.) ವಿಶಿಷ್ಟದಂತೆಯೇ (ಅದನ್ನೇ ವಿವರಿಸುತ್ತಾರೆ—) ವಿಶೇಷ್ಯಕ್ಕೂ ವಿಶಿಷ್ಟಕ್ಕೂ ಭೇದವೋ, ಅಭೇದವೋ ಎಂದು ವಿವಾದವಿಲ್ಲದಿರುವ, ಅಭೇದವೇ ಎಂದು ಸಮ್ಮತವಾಗಿದ್ದರೂ, ಭೇದವ್ಯವಹಾರವೂ ಭೇದ ಘಟಕವಾದ ವಿಶೇಷವೂ ಇದೆ. ಮತ್ತು ವಿಶೇಷ ವಿಶೇಷಿಗಳಿಗೆ ಅಭೇದವಿದ್ದರೂ, ವಿಶೇಷವು, ವಿಶೇಷಿಯು, ಎಂದು ಭೇದವ್ಯವಹಾರ ಪ್ರಯುಕ್ತವಾದ ವಿಶೇಷವೂ ಇದೆ ಸ್ವನಿರ್ವಾಹಕವಾದುದರಿಂದ ವಿಶೇಷಪರಂಪರೆಯಿಂದ ಅನವಸ್ಥಾದೋಷವೂ ಹೇಗೂ ಸರ್ವಥಾ ಇಲ್ಲ (ಅಂದರೆ ವಿಶೇಷ್ಯಕ್ಕೂ ವಿಶಿಷ್ಟಕ್ಕೂ ಅಭೇದವು ನಿಶ್ಚಿತವೇ. ಧರ್ಮಧರ್ಮಿಗಳಿಗೆ ಭೇದವನ್ನು ಅಂಗೀಕರಿಸುವವನೂ ಕೂಡ ವಿಶೇಷ್ಯ ವಿಶಿಷ್ಟಗಳಿಗೆ ಅಭೇದವನ್ನು ಅಂಗೀಕರಿಸಿರುವನು. ವಿಶೇಷ್ಯಕ್ಕೂ ವಿಶಿಷ್ಟಕ್ಕೂ ನಿರ್ವಿಶೇಷಾಭೇದವಿಲ್ಲ. ನಿರ್ವಿಶೇಷಾಭೇದವೆಂದಾದರೆ—ದ್ಯಾಕೃದೇವದತ್ತ ಶಬ್ದಗಳಿಗೆ ಪರ್ಯಾಯತ್ವವು ಬರಬೇಕಾಗುವುದು. ವಿಶೇಷದಲ್ಲಿಯೂ ವಿಶೇಷವಿಲ್ಲವೆಂದು ಹೇಳಕೂಡದು ನಿರ್ವಿಶೇಷವೆಂದಾದರೆ ವಿಶೇಷ ವಿಶೇಷಿ ಶಬ್ದಗಳಿಗೆ ಪರ್ಯಾಯತ್ವವು ಬರಬೇಕಾಗುವುದು. ಹೀಗಾದರೆ ವಿಶೇಷದಲ್ಲಿಯೂ ವಿಶೇಷವನ್ನಂಗೀಕರಿಸಿರುವುದರಿಂದ ಅನವಸ್ಥೆಯೆಂದು ಹೇಳಕೂಡದು ವಿಶೇಷ್ಯವಸ್ತುವಿಗೂ ಆ ವಿಶೇಷ್ಯ ವಸ್ತುವಿನ ವಿಶೇಷಗಳಿಗೂ ಸ್ವನಿರ್ವಾಹಕತ್ವವಿದೆ. ಇದೇ ಪ್ರಕಾರ ಶ್ರೀಹರಿಯ ಪ್ರೇರಣೆಯಲ್ಲಿ ವಿಶೇಷವಿದೆ. ಆ ವಿಶೇಷಕ್ಕೂ ವಿಶೇಷವಿದೆ, ಎಂದು ಒಡಂಬಟ್ಟರೆ ಯಾವುದೊಂದು ದೋಷವೂ ಇಲ್ಲ.)—

ಹೀ—ವಿಶೇಷ್ಯಕ್ಕೂ ವಿಶಿಷ್ಟಕ್ಕೂ ಅಭೇದವು ಸಿದ್ಧವಾಗಿದ್ದರೆ—ಇವೆಲ್ಲಾ ಕೂಡಬಹುದಿತ್ತು. ಅದು ಹೇಗೆಂದರೆ—

ಕಾ ॥ (೧) ಜ್ಞಾತುರನ್ಯೋಽಹಮಿತಿ ತು ಕಸ್ಯಾಪ್ಯನುಭವೋ ನ ಹಿ । ಅಸ್ಮಿ ಜ್ಞಾತೈವಾಹಮಿತಿ ಭೇದಸ್ತಸ್ಮಾತ್ತಯೋಃ ಕುತಃ ॥ (೨) ಪಶ್ಯಾಮೀತಿ ವಿಶೇಷೋಽಯಮಿದಾನೀಂ ಮೇ ಸಮುತ್ಥಿತಃ । ಇತ್ಯಾದ್ಯನುಭವಾದ್ಭೇದೋ ನ ವಿಶೇಷ್ಯವಿಶಿಷ್ಟಯೋಃ ॥ (೩) ವಿಶೇಷಣಂ ತು ದ್ವಿವಿಧಂ ವಿಶೇಷಾಖ್ಯಂ ತಥೇತರತ್ । ವಿಶೇಷಮಣಯೇದೇಷ ಪ್ರೋಕ್ತಂ ತೇನ ವಿಶೇಷಣಂ । ವಿಶೇಷೋಽಪಿ ವಿಶೇಷಸ್ಯ ಸ್ವಸ್ಯೈವ ಗಮಕೋ ಭವೇದಿತ್ಯಾದಿ ತತ್ತ್ವವಿವೇಕೇ ॥ (೪) ಸಂಗ್ರಹಃ ಪಂಚಕಾರಣಾನಾಂ ಸಂಕ್ಷೇಪಃ । ಅಧಿಷ್ಠಾನಸ್ಯ ಕರಣೇಽಂತರ್ಭಾವಾತ್ ॥ (೫) ದೈವಶಬ್ದೋದಿತೇಶ್ವರಸ್ಯೈವ ಮುಖ್ಯಕರ್ತೃತ್ವಾತ್ ಸ್ವತಂತ್ರಾಸ್ವತಂತ್ರಕರ್ತ್ರೋಃ ಕರ್ತೃಶಬ್ದೇನೈವೋಕ್ತೇಸ್ತ್ರೈವಿಧ್ಯಂ । ಕರ್ಮ ಚೇಷ್ಟಾ ॥
॥ ೨ ॥ ॥ ೧೮ ॥

ಅ ॥ (೧) ನಾನು ತಿಳಿಯುವ, ನನ್ನಿಂದ ಭಿನ್ನನು, ಎಂದು ಯಾರಿಗೂ ಅನುಭವವು ಇಲ್ಲವು; ನಾನು ತಿಳಿವವನೇ ಆಗಿರುತ್ತೇನೆ, ಎಂದೇ ಅನುಭವವು. ಆದಕಾರಣ ವಿಶೇಷ್ಯ ವಿಶಿಷ್ಟಗಳಿಗೆ ಭೇದವು ಹೇಗೆ? (ಎಂತಹ ವಿಶೇಷ್ಯ ವಿಶಿಷ್ಟಗಳಿಗೆ ಭೇದಾನುಭವವು ಇಲ್ಲದಿರುವುದರಿಂದಲೂ, ಅಭೇದವೇ ಎಂದು ಅನುಭವವಿದ್ದುದರಿಂದಲೂ ಭೇದವಿಲ್ಲ.) ಅಂದರೆ ಯಾವದ್ದ್ರವ್ಯಭಾವಿಯಾದ ವಿಶಿಷ್ಟಕ್ಕೆ ವಿಶೇಷ್ಯದಿಂದ ಭೇದವಿಲ್ಲ. (೨)(ವಿಶೇಷ್ಯವಿಶಿಷ್ಟಗಳಿಗೆ ಅಭೇದವಿದೆ, ಎಂಬುವಲ್ಲಿ ಬೇರೆ ಅನುಭವವನ್ನು ತೋರಿಸುತ್ತಾರೆ—) ನಾನು ಈಗ ನೋಡುತ್ತೇನೆ, ಎಂಬೀ ವಿಶೇಷವು ನನಗೆ ಉಂಟಾಯಿತು, ಇವುಮೊದಲಾದ ಅನುಭವದಿಂದ ವಿಶೇಷ್ಯ ವಿಶಿಷ್ಟಗಳಿಗೆ ಭೇದವಿಲ್ಲ (ಇಲ್ಲಿ ಮೇ ಎಂಬುವುದರಿಂದ ವಿಶೇಷ್ಯವು. ವಿಶೇಷಸ್ಸಮುತ್ಥಿತಃ ಎಂದು ವಿಶೇಷ್ಯಕ್ಕೇನೇ ವಿಶಿಷ್ಟತ್ವವು.) (೩) (ವಿಶೇಷಣದಿಂದ ಯುಕ್ತವಾದುದು ವಿಶಿಷ್ಟವು. ಆ ವಿಶೇ-

ನವನ್ನು ಹೇಳುತ್ತಾರೆ—) (1) ವಿಶೇಷರೂಪವು, ಹಾಗೆಯೇ (2) ಬೇರೊಂದು ಹೀಗೆ ವಿಶೇಷಣವು ಎರಡು ಬಗೆ. (ಉದಾ:-(1) ವಸ್ತುವಿಗೆ ಅಸ್ತಿತ್ವವು ಫಲಕ್ಕೆ ನೀಲತ್ವವು ಇದು ವಿಶೇಷರೂಪವು. (2) ಬೇರೊಂದು ಬಗೆಯಾದುದು ದಂಡ ಮೊದಲಾದುದು. ಇದು ಅತ್ಯಂತ ಭಿನ್ನವು. ಅವೆರಡೂ ವಿಶೇಷಣವೆಂದು ಹೇಗೆ ಹೇಳುವುದೆಂದರೆ—) ಯಾವುದರಿಂದ ವಿಶೇಷವನ್ನು ಹೊಂದಿಸಿಕೊಡುತ್ತದೋ, ಅದರಿಂದ ವಿಶೇಷಣ ವಾಗುತ್ತದೆ. (ದಂಡಮೊದಲಾದ ವಿಶೇಷಣವು ವಸ್ತುವಿನಲ್ಲಿ ದಂಡಿತ್ವಮೊದಲಾದ ವಿಶೇಷವನ್ನು ಹೊಂದಿಸಿ ಕೊಡುತ್ತದೆ. ವಿಶೇಷವು ಯಾವುದನ್ನು ಹೊಂದಿಸಿಕೊಡುವುದು? ಎಂದರೆ—) ವಿಶೇಷವೂ ಕೂಡ ಸ್ವರೂಪವಾದ ವಿಶೇಷವನ್ನೇ ಹೊಂದಿಸಿಕೊಡುವುದು. ಇತ್ಯಾದಿ ಪ್ರಮೇಯವು ತತ್ತ್ವವಿವೇಕದಲ್ಲಿದೆ. (೪) (ಹಿಂದೆ ಹೇಳಿದ ಕರ್ಮ ಕಾರಣಗಳನ್ನು ಸಂಕ್ಷೇಪವಾಗಿ ಇಲ್ಲಿ ಹೇಳುತ್ತಾರೆ—) ಸಂಗ್ರಹಃ=ಐದು ಕಾರಣಗಳ ಸಂಕ್ಷೇಪವು. ಅಧಿಷ್ಠಾನವು ಕರಣದಲ್ಲಿ ಸೇರುತ್ತದೆ. (೫) ದೈವಶಬ್ದದಿಂದ ಹೇಳಲ್ಪಟ್ಟ ಶ್ರೀ ಪರಮಾತ್ಮನೇ ಮುಖ್ಯ ಕರ್ತನಾದ ಪ್ರಯುಕ್ತ ಸ್ವತಂತ್ರಾಸ್ವತಂತ್ರ ಕರ್ತೃಗಳನ್ನು ಕರ್ತೃಶಬ್ದದಿಂದಲೇ ಹೇಳಿದ್ದರಿಂದ ತ್ರೈವಿಧ್ಯವು. ಕರ್ಮ=ಹಸ್ತಾದಿಗಳ ಚೇಷ್ಟೆಯು. ॥ ೨ ॥ ॥ ೧೮ ॥

ಟೀ—ಸಾತ್ವಿಕ ಜ್ಞಾನ ಕರ್ಮಗಳು ಮೋಕ್ಷಕ್ಕೆ ಕಾರಣಗಳಾಗಿರುವುದರಿಂದ ಅವುಗಳನ್ನು ಅನುಷ್ಠಾನ ಮಾಡುವುದಕ್ಕಾಗಿ ಸತ್ತ್ವಾದಿಗುಣನಿಮಿತ್ತಕಗಳಾದ ಜ್ಞಾನಾದಿಗಳ ಭೇದವನ್ನು ಹೇಳುತ್ತಾರೆ—

## ಗೀ ॥ ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।
## ಪ್ರೋಚ್ಯತೇ ಗುಣಸಂಖ್ಯಾನೇ ಯಥಾವಚ್ಛೃಣು ತಾನ್ಯಪಿ ॥ ೧೯ ॥

ಅ ॥ ಗುಣಭೇದತಃ=ಸತ್ತ್ವಮೊದಲಾದ ಗುಣಗಳ ಭೇದದಿಂದ, ಜ್ಞಾನಂ=ಜ್ಞಾನವು, ಕರ್ಮ ಚ=ಕರ್ಮವೂ, ಕರ್ತಾ ಚ=ಕರ್ತೃಗಳಾದ ಜೀವಾದಿಗಳೂ, ತ್ರಿವಿಧಂ=ಒಂದೊಂದೂ ಮೂರು ವಿಧಗಳಾಗಿವೆ ಎಂದೇ, ಗುಣಸಂಖ್ಯಾನೇ=ಗುಣಗಳನ್ನು ಹೇಳುವ ವೈದಿಕ ಕಪಿಲ(ಸಾಂಖ್ಯ)ಶಾಸ್ತ್ರದಲ್ಲಿ, (ಗುಣಗಳನ್ನು ಹೇಳುವ ಪ್ರಕರಣದಲ್ಲಿ) ಪ್ರೋಚ್ಯತೇ=ಹೇಳಲ್ಪಡುತ್ತದೆ. ತಾನ್ಯಪಿ=ಆ ಭೇದಗಳನ್ನೂ ಕೂಡ, ಯಥಾವತ್=ಇದ್ದ ಹಾಗೆಯೇ, ಶೃಣು=ಕೇಳು. ॥ ೧೯ ॥

ಭಾ ॥ (೧) ಪುನಃ ಸಾಧನಪ್ರಥನಾಯ ಗುಣಭೇದಾನಾಹ । ಜ್ಞಾನಮಿತ್ಯಾದಿನಾ ॥ (೨) ಗುಣಸಂಖ್ಯಾನೇ ಗುಣಗಣನಪ್ರಕರಣೇ ॥ ೧೯ ॥

ಅ ॥ (೧) ಪುನಃ ಸಾಧನಗಳನ್ನು ಪ್ರಸಿದ್ಧಿಗೊಳಿಸುವುದಕ್ಕಾಗಿ ಜ್ಞಾನಂ ಇತ್ಯಾದಿಗಳಿಂದ ಗುಣಭೇದಗಳನ್ನು ಹೇಳುತ್ತಾರೆ. (೨) ಗುಣಸಂಖ್ಯಾನೇ=ಗುಣಗಳನ್ನು ಹೇಳುವ ಪ್ರಕರಣದಲ್ಲಿ. ॥ ೧೯ ॥

ಟೀ—ಗುಣಗಳು ಇಲ್ಲಿ ಹೇಳಲ್ಪಡುತ್ತವೆ, ಎಂಬುವ ವ್ಯುತ್ಪತ್ತಿಯಿಂದ ಗುಣಸಂಖ್ಯಾನ ಪದದಿಂದ ಪ್ರಸಿದ್ಧ ನಿರೀಶ್ವರ ಸಾಂಖ್ಯಶಾಸ್ತ್ರವು ಹೇಳಲ್ಪಡುತ್ತದೆ, ಎಂಬೀ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವದಕ್ಕಾಗಿ ಹೇಳುತ್ತಾರೆ—

ತಾ ॥ ಏವಂ ಗುಣಸಂಖ್ಯಾನೇ ಪರಮಸಾಂಖ್ಯಶಾಸ್ತ್ರೇ ॥ ೧೯ ॥

ಅ ॥ ಹಿಂದೆ ಹೇಳಿದ ಪ್ರಕಾರ ಸರ್ವಗತನಾದ ಸರ್ವೇಶ್ವರನಾದ ಶ್ರೀ ಪರಮಾತ್ಮನಿಗೆ ಸರ್ವಶಕ್ತ್ಯಾದಿಗಳು ಇವೆ, ಎಂದು ಹೇಳುವ ಜ್ಞಾನವು ಸಾತ್ವಿಕವು, ಇದು ಮೊದಲಾದ ಗುಣಗಳನ್ನು ಹೇಳುವ

ಶಾಸ್ತ್ರದಲ್ಲಿ ಹೇಳಲ್ಪಡುತ್ತದೆ. ಎಂದು ಇಲ್ಲಿ ಹೇಳಲ್ಪಡುತ್ತದೆ. ಅದು ಪರಮ ಸಾಂಖ್ಯಶಾಸ್ತ್ರವನ್ನು ತೆಗೆದುಕೊಂಡರೇನೇ ಕೂಡುತ್ತದೆ. ನಿರೀಶ್ವರ ಸಾಂಖ್ಯವನ್ನು ತೆಗೆದುಕೊಂಡರೆ ಕೂಡಲಾರದು. ॥ ೧೯ ॥

ಪೀ— ಪ್ರತಿಜ್ಞಾ ಮಾಡಿದ ಜ್ಞಾನತ್ರೈವಿಧ್ಯವನ್ನು ಮುಂದಿನ ಮೂರು ಶ್ಲೋಕಗಳಿಂದ ಹೇಳುವನು—

**ಗೀ ॥ ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಂ ॥ ೨೦ ॥**

ಟೀ ॥ ವಿಭಕ್ತೇಷು=ಪರಸ್ಪರ ಭಿನ್ನಗಳೂ ನೀಚೋಚ್ಚಭಾವವುಳ್ಳವುಗಳೂ ಆದ, ಸರ್ವಭೂತೇಷು=ಜೀವಜಡಾತ್ಮಕ ಸಮಸ್ತಪ್ರಾಣಿಗಳಲ್ಲಿ, ಭಾವಂ=ಅವುಗಳಿಗೆ ಆಧಾರವಾಗಿಯೂ, ಭಿನ್ನವಾಗಿಯೂ, ಯಾವಾಗಲೂ ಇರುವ, ಶ್ರೀವಿಷ್ಣುವನ್ನು, ಏಕಂ=ಸರ್ವೋತ್ತಮನನ್ನಾಗಿಯೂ, ಅವಿಭಕ್ತಂ=ಎಲ್ಲಾ ವಸ್ತುಗಳಲ್ಲಿದ್ದರೂ ಅಧಿಷ್ಠಾನಭೇದನಿಮಿತ್ತಕ ಭೇದವಿಲ್ಲದಿರುವವನನ್ನಾಗಿಯೂ (ಅಂದರೆ ಸರ್ವತ್ರ ನಿರ್ದೋಷ ಅಶೇಷಸದ್ಗುಣಪೂರ್ಣನಾಗಿ ಒಂದೇ ರೀತಿಯಾಗಿರುವವನನ್ನಾಗಿಯೂ) ಅವ್ಯಯಂ=ಸ್ಥಾನನಾಶ ಬಂದರೂ ನಾಶರಹಿತವನ್ನಾಗಿಯೂ. ಯೇನ=ಯಾವಜ್ಞಾನದಿಂದ, ಈಕ್ಷತೇ=ನೋಡುತ್ತಾನೋ, ತತ್=ಆ, ಜ್ಞಾನಂ=ಜ್ಞಾನವನ್ನು, ಸಾತ್ತ್ವಿಕಂ=ಸಾತ್ತ್ವಿಕವನ್ನಾಗಿ, ವಿದ್ಧಿ=ತಿಳಿದುಕೋ. ॥ ೨೦ ॥

ಪೀ—ರಾಜಸ ಜ್ಞಾನವನ್ನು ಹೇಳುತ್ತಾರೆ—

**ಗೀ ॥ ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಂ ॥ ೨೧ ॥**

ಟೀ ॥ ಯಜ್ಜ್ಞಾನಂ=ಯಾವ ಜ್ಞಾನವು, ಸರ್ವೇಷು ಭೂತೇಷು=ಜೀವಜಡಾತ್ಮಕ ಸಮಸ್ತ ಪ್ರಾಣಿಗಳಲ್ಲೂ, ಪೃಥಕ್ತ್ವೇನ ವೇತ್ತಿ=ಸಮಸ್ತ ಜೀವಜಡಗಳೊಳಗೆ ಭೇದವುಂಟೆಂದೂ, ನಾನಾಭಾವಾನ್ ಪೃಥಗ್ವಿಧಾನ್=ನಾನಾಪ್ರಕಾರಭೂತಗಳಾದ ಜೀವಜಡರೂಪ ಪದಾರ್ಥಗಳನ್ನು ಪರಸ್ಪರ ಭಿನ್ನಗಳನ್ನಾಗಿಯೂ ನೀಚೋಚ್ಚವಾಗಿ ಇರುವವುಗಳನ್ನಾಗಿಯೂ, ತು=ಭಗವತ್ಸ್ವರೂಪವಿಷಯದಲ್ಲಿ ಸಂದಿಗ್ಧವಾಗಿಯೂ ವಿಷಯೀಕರಿಸುತ್ತದೋ, ಅಂತಹ ಜ್ಞಾನವನ್ನು, ರಾಜಸಂ=ರಾಜಸವನ್ನಾಗಿ, ವಿದ್ಧಿ=ತಿಳಿದುಕೋ. ॥ ೨೧ ॥

ಪೀ—ತಾಮಸ ಜ್ಞಾನವನ್ನು ಹೇಳುತ್ತಾರೆ—

**ಗೀ ॥ ಯತ್ತು ಕೃತ್ಸ್ನವದೇಕಸ್ಮಿನ್ಕಾರ್ಯೇ ಸಕ್ತಮಹೈತುಕಂ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಂ ॥ ೨೨ ॥**

ಟೀ ॥ ಏಕಸ್ಮಿನ್ ಕಾರ್ಯೇ=ಸಂಸಾರಿ ಜೀವನನ್ನೇ ಮುಖ್ಯನನ್ನಾಗಿ ಮಾಡುವುದರಿಂದ [illegible] ಒಬ್ಬ ಜೀವನಲ್ಲಿ, ಕೃತ್ಸ್ನವತ್=ಸರ್ವಗುಣಪೂರ್ಣನಾದ ಬ್ರಹ್ಮನಂತೆ, ಯತ್ ಜ್ಞಾನಂ=ಯಾವ ಜ್ಞಾನವು [illegible] ಸಕ್ತಂ=ವಿಷಯೀಕರಿಸುತ್ತದೋ, (ಅಂದರೆ [illegible] ತನ್ನನ್ನು ಬ್ರಹ್ಮನೆಂದು ಹೇಗೆ ವಿಷಯೀ[illegible]

ತ್ತನೋ, ಹಾಗೆಯೇ ಜೀವನನ್ನು ಪರಬ್ರಹ್ಮನೆಂದು ಯಾವ ಜ್ಞಾನವು ವಿಷಯೀಕರಿಸುತ್ತದೋ-ಅದು. ಅಂತೂ ಜೀವನೇ ಪರಬ್ರಹ್ಮನೆಂದು ವಿಷಯೀಕರಿಸುವ ಜ್ಞಾನವು) ತಾಮಸವು. ಹಾಗೆಯೇ ಜೀವನಲ್ಲಿ, ಕೃತ್ಸ್ನ ವತ್ — ಜಗತ್ತಿನಂತೆ, ವಿಷಯೀಕರಿಸುವ ಜ್ಞಾನವು. (ಅಂದರೆ ಜೀವನೇ ಜಗತ್ತೆಂಬುವ ಜ್ಞಾನವು. ಅಂತೂ ಜೀವಜಗತ್ತುಗಳಿಗೆ ಅಭೇದಜ್ಞಾನವು) ತಾಮಸವು. ಮತ್ತು ಒಬ್ಬ ಜೀವನನ್ನು ಸಂಪೂರ್ಣ ಜಗದ್ರೂಪವಾಗಿ ವಿಷಯೀಕರಿಸುವ ಜ್ಞಾನವು (ಅಂದರೆ ಜಗತ್ತು ಒಬ್ಬ ಜೀವನ ಅಜ್ಞಾನಪರಿಕಲ್ಪಿತವು ಎಂದು ವಿಷಯೀಕರಿಸುವ ಜ್ಞಾನವು) ತಾಮಸವು. ಅಹೈತುಕಂ = ಯುಕ್ತಿಶೂನ್ಯವು. ಅತತ್ತ್ವಾರ್ಥವತ್ = ಇಲ್ಲದಿದ್ದುದನ್ನು ಇದೆಯೆಂದು ವಿಷಯೀಕರಿಸುತ್ತದೆ (ಅಂದರೆ ಜಗತ್ತು ಸದಸದ್ವಿಲಕ್ಷಣವು, ಇವುಮೊದಲಾದ ಅವಿದ್ಯಮಾನ ಆಕಾರಗಳ ಕಲ್ಪನೆಯಿಂದ ಯುಕ್ತವು.) ಅಲ್ಪಂ ಚ = ಹೆಚ್ಚು ಅಜ್ಞಾನ ಸ್ವಲ್ಪ ಜ್ಞಾನವಿದ್ದುದು ತತ್ — ಆ ಜ್ಞಾನವು ತಾಮಸಂ = ತಾಮಸವೆಂದು, ಉದಾಹೃತಂ = ಹೇಳಲ್ಪಡುತ್ತದೆ. ॥ ೨೨ ॥

ಟೀ — ಪ್ರತಿಜ್ಞಾತವಾದ ಜ್ಞಾನತ್ರೈವಿಧ್ಯವನ್ನು ಸರ್ವಭೂತೇಷು ಎಂಬುದರಿಂದ ಹೇಳುತ್ತಾರೆ. ಇದರ ಅರ್ಥವು ಸ್ಪಷ್ಟವಾಗದಿರುವುದರಿಂದ ಸ್ಮೃತಿಪ್ರಮಾಣದಿಂದಲೇ ಅರ್ಥವನ್ನು ಹೇಳುತ್ತಾರೆ--

ಶ್ಲೋ ॥ (೧) ಅಸ್ತಿತ್ವಾದ್ಭೂತನಾಮಭ್ಯಃ ಸರ್ವಜೀವೇಭ್ಯ ಏವ ಚ (ಯತ್) । ಮುಕ್ತೇಭ್ಯೋಽಪಿ ಪೃಥಕ್ತ್ವೇನ ವಿಷ್ಣೋಃ ಸರ್ವತ್ರಗಸ್ಯ ಚ । ಐಕ್ಯೇನ ಚ ಸ್ವರೂಪಾಣಾಂ ಪ್ರಾದುರ್ಭಾವಾದಿಕಾತ್ಮನಾಂ ॥ (೨) ತಾರತಮ್ಯೇನ ಜೀವಾನಾಂ ಭೇದೇನೈವ ಪರಸ್ಪರಂ । ಜಡೇಭ್ಯಶ್ಚೈವ ಜೀವಾನಾಂ ಜಡಾನಾಂ ಚ ಪರಸ್ಪರಂ ॥ (೩) ತೇಭ್ಯೋ ವಿಷ್ಣೋಶ್ಚ ಸಮ್ಯಕ್ತಲ್ಲಕ್ಷಣಜ್ಞಾನಪೂರ್ವಕಂ । ಜ್ಞಾನಂ ಸಾತ್ತ್ವಿಕಮುದ್ದಿಷ್ಟಂ ಯತ್ ಸಾಕ್ಷಾನ್ಮೋಕ್ಷ(ಮುಕ್ತಿ)ಕಾರಣಂ ॥ (೪) ವಿಷ್ಣೋರನ್ಯಸ್ಯ ಯಾಥಾರ್ಥ್ಯಂ ಜ್ಞಾನಂ ರಾಜಸಮುಚ್ಯತೇ ॥ (೫) ಯದಿ ವಿಷ್ಣುಂ ನ ಜಾನಾತಿ ಯದಿ ವಾ ಮಿಶ್ರತತ್ತ್ವವಿತ್ ॥ ೧ ॥

ಅ ॥ (೧) ಸರ್ವದಾ ಇರುವುದರಿಂದ ಭೂತ ಎಂದು ಹೆಸರುಳ್ಳ, ಎಲ್ಲಾ ಸಂಸಾರಿಜೀವರಿಂದಲೂ, ಮುಕ್ತರಿಂದಲೂ ಶ್ರೀವಿಷ್ಣುವು ಭಿನ್ನನೇ, ಎಂಬೀ ಯಾವ ಜ್ಞಾನವಿದೆಯೋ ಎಲ್ಲಾ ಭಿನ್ನ ಭಿನ್ನ ಸ್ಥಾನಗಳಲ್ಲಿರತಕ್ಕ ಶ್ರೀವಿಷ್ಣುವಿಗೆ ಪ್ರಾದುರ್ಭಾವರೂಪದಿಂದಲೂ, ಅವೇಶರೂಪದಿಂದಲೂ ಅಂತರ್ಯಾಮಿರೂಪದಿಂದಲೂ, ಬಹುವ್ಯಾಪಕರೂಪದಿಂದಲೂ ಇರತಕ್ಕ ಭಗವಂತನ ಸ್ವರೂಪಗಳಿಗೆ ಐಕ್ಯವು ಎಂಬೀ ಯಾವ ಜ್ಞಾನವಿದೆಯೋ. (೨) ಜೀವರಿಗೆ ಪರಸ್ಪರವಾಗಿ ತಾರತಮ್ಯದಿಂದಲೇ (ಸಾಮ್ಯದಿಂದ ಅಲ್ಲ.) ಭೇದದಿಂದಲೇ (ಭೇದಾಭೇದದಿಂದ ಅಲ್ಲ) ಎಂದು ಯಾವ ಜ್ಞಾನವುಂಟಾಗುತ್ತದೋ. ಮತ್ತು ಸರ್ವದಾ ಇರುವುದರಿಂದ ಭೂತ ಎನಿಸಿದ ಜಡಗಳಿಂದಲೂ ಭೂತ ಎನಿಸಿದ ಜೀವರಿಗೆ ಭೇದವಿದೆ, ಎಂಬೀ ಯಾವ ಜ್ಞಾನವಿದೆಯೋ. ಭೂತ ಎನಿಸಿದ ಜಡಗಳಿಗೆ ಪರಸ್ಪರವಾಗಿ ಭೇದವಿದೆ, ಎಂಬೀ ಯಾವ ಜ್ಞಾನವಿದೆಯೋ. (೩) ಅವುಗಳಿಂದ ಶ್ರೀವಿಷ್ಣುವಿಗೆ ಭೇದವಿದೆ. ಅಂದರೆ ವಿಷ್ಣುವು ಸರ್ವೋತ್ತಮನು ಜೀವರು ಶ್ರೀಹರಿಯ ಅಧೀನವಾದ ಜ್ಞಾನಾದಿಗಳುಳ್ಳವರು, ಜಡಕ್ಕೆ ಅಂತಹ ಜ್ಞಾನವಿಲ್ಲ. ಇಂತಹ ಜ್ಞಾನಪೂರ್ವಕವಾಗಿ ಯಾವ ಜ್ಞಾನವಿದೆಯೋ, ಅದು ಸಾತ್ತ್ವಿಕವೆಂದು ಹೇಳಲ್ಪಟ್ಟಿದೆ. (೧) ವಿಷ್ಣೋಸ್ಸರ್ವತ್ರಗಸ್ಯ ಚ ಇತ್ಯಾದಿಗಳಿಂದ ಅವಿಭಕ್ತಂ (ಶ್ಲೋ ೨೦) ಇತ್ಯಾದಿಗಳ ಅರ್ಥವು ಉಕ್ತವಾಯಿತು. (೨) ತಾರತಮ್ಯೇನ ಎಂಬುವುದರಿಂದ ವಿಭಕ್ತೇಷು ಇತ್ಯಾದಿಗಳು ವ್ಯಾಖ್ಯಾತಗಳಾದವು.) ಅಂತಹ ಸಾತ್ತ್ವಿಕಜ್ಞಾನವು ಮುಕ್ತಿಗೆ ಸಾಕ್ಷಾತ್ ಕಾರಣವು. (೪) ಶ್ರೀವಿಷ್ಣುವಿನಿಂದ ಇತರಗಳಾದ ಜೀವ ಜಡ ವಿಷಯಗಳಲ್ಲಿ ಇದ್ದುದನ್ನು ಇದ್ದ ಹಾಗೆ ವಿಷಯೀಕರಿಸುವ ಜ್ಞಾನವು ರಾಜಸಜ್ಞಾನವೆನಿಸುತ್ತದೆ. (ಇದರಿಂದ ಪೃಥಕ್ತ್ವೇನ (ಶ್ಲೋ. ೨೧) ಇತ್ಯಾದಿಗಳ

ತಾತ್ಪರ್ಯವು ಉಕ್ತವಾಯಿತು.) (೫) (ಸಾತ್ವಿಕಜ್ಞಾನವೂ ಶ್ರೀವಿಷ್ಣುವಿನಿಂದ ಇತರ ಕಡೆ ಯಥಾರ್ಥವೆಂದೇ ಹೇಳಿದ್ದರಿಂದ ಇದು ರಾಜಸಜ್ಞಾನವಾಗುವುದು ಹೇಗೆ? ಎಂದರೆ—) ಶ್ರೀವಿಷ್ಣುವನ್ನು ಸರಿಯಾಗಿ ತಿಳಿಯುವುದಿಲ್ಲವೋ, (ಅಂದರೆ ಶ್ರೀವಿಷ್ಣುವಿನಲ್ಲಿ ದ್ವೇಷವೂ ಇಲ್ಲದವನಾಗಿ ಸರ್ವತ್ರ ವ್ಯಾಪ್ತನಾದ ಶ್ರೀಪರಮಾತ್ಮನನ್ನು ಪರಸ್ಪರ ಭಗವದ್ರೂಪಗಳಿಗೆ ಅಭೇದವಿದೆ ಎಂದೂ ಶ್ರೀಹರಿಯು ಸರ್ವೋತ್ತಮನೆಂದೂ ತಿಳಿಯುವುದಿಲ್ಲ) ಸಂದಿಗ್ಧವಾಗಿಯೇ ಭಗವತ್ಸ್ವರೂಪವನ್ನು ವಿಷಯೀಕರಿಸುವ ಕಾರಣ ಆ ಜ್ಞಾನವು ರಾಜಸಜ್ಞಾನವು ||೧||

ಟೀ—ಯತ್ತು ಕೃತ್ಸ್ನವತ್ (ಶ್ಲೋ. ೨೨) ಎಂಬುದರ ತಾತ್ಪರ್ಯವನ್ನು ಹೇಳುತ್ತಾರೆ—

ತಾ || (೧) ಅನ್ಯಥಾ ಕರಣೀಯತ್ವಾತ್ಕಾರ್ಯಾಖ್ಯಂ ಜೀವಮೇವ ಯಃ । ಅಕಾರ್ಯಂ ಬ್ರಹ್ಮ ಜಾನಾತಿ ಸ ಏವಾಖಿಲಮಿತ್ಯಪಿ । ಏಕಜೀವಪರಿಜ್ಞಾನಾತ್ಕೃತ್ಸ್ನಜ್ಞೋಽಸ್ಮೀತಿ ಮನ್ಯತೇ ॥ (೨) ಯುಕ್ತಿವಿಜ್ಞಾ(ಭಿಜ್ಞಾ)ನರಾಹಿತ್ಯಾತ್ಸ್ವಪಕ್ಷಸ್ಯಾಪ್ಯಯುಕ್ತ(ಲ್ಪಯುಕ್ತಿ)ತಃ । ಅಯುಕ್ತತಾಮೇವ ಗುಣಂ ಮನ್ಯತೇ ಚಾಲ್ಪದರ್ಶನಃ ॥ (೩) ಅತತ್ತ್ವಾರ್ಥಂ ಜಗದ್ಬ್ರೂತೇ ತತ್ತ್ವಾರ್ಥಜ್ಞಾನವರ್ಜನಾತ್ । ಸ ಮುಖ್ಯತಾಮಸಜ್ಞಾನೀತ್ಯೇ(ಷ್ಯೇ)ಕೈಕೇನಾಪಿ ಕಿಂ ಪುನಃ । ಸರ್ವೈರೇತೈರ್ವಿಶೇಷೈಶ್ಚ ಯುಕ್ತಃ ಪಾಪತಮೋಧಿಕ ಇತಿ ಪಾದ್ಮೇ ॥ (೪) ಪೃಥಕ್ತ್ವೇನ ತು ಯಜ್ಜ್ಞಾನಮಿತ್ಯಸ್ಯ ವ್ಯಾಖ್ಯಾ ನಾನಾಭಾವಾನಿತ್ಯಾದಿ ॥ (೫) ಸರ್ವಗತಮೇಕಮೀಶ್ವರಂ ನ ಜಾನಾತೀತ್ಯೇತಾವತ್ಯೇವ ರಾಜಸತ್ವಂ ॥ ೨ ॥

ಅ || (೧) (1) ಸಂಸಾರಿ ಜೀವನನ್ನೇ ಮುಕ್ತನನ್ನಾಗಿ ಮಾಡುವುದರಿಂದ ಕಾರ್ಯ ಎನಿಸಿದ ಜೀವನನ್ನೇ ಅಕಾರ್ಯನಾದ ಬ್ರಹ್ಮವನ್ನಾಗಿ ಯಾವನು ತಿಳಿಯುತ್ತಾನೋ, (ಜೀವನೇ ಬ್ರಹ್ಮನೆಂಬುವ ಜ್ಞಾನ) (2) ಆ ಜೀವನೇ ಅಖಿಲ ಜಗತ್ತು (ಅಂದರೆ ಜೀವರಿಗೂ ಜಡಜಗತ್ತಿಗೂ ಭೇದವಿಲ್ಲವೆಂಬೀ ಜ್ಞಾನವು) (3) ಜಗತ್ತು ಕಲ್ಪಕನಾದ ಒಬ್ಬ ಜೀವನ ಅಜ್ಞಾನದಿಂದ ಕಲ್ಪಿತವಾದುದರಿಂದ ಕಲ್ಪಕನಾದ ಒಬ್ಬ ಜೀವನನ್ನು ತಿಳಿದರೆ ಸಂಪೂರ್ಣ ತಿಳಿದವನಾಗಿರುತ್ತೇನೆ. ಎಂಬುವ ಜ್ಞಾನವು (ಎಂಬೀ ಏಕಜೀವವಾದಿ ಮತವು) ಈ ಮೂರು ಜ್ಞಾನವೂ ತಾಮಸವು. (೨) ಅಜ್ಞಾನವು ಹೆಚ್ಚು, ಸ್ವಲ್ಪ ಜ್ಞಾನವುಳ್ಳ ಪುರುಷನು ತನ್ನ ಪಕ್ಷವನ್ನು ಸಾಧಿಸಲಿಕ್ಕೆ ಯುಕ್ತಿಜ್ಞಾನವಿಲ್ಲದಿರುವುದರಿಂದಲೂ, ತಾನು ತಿಳಿದುಕೊಂಡ ಅರ್ಥದಲ್ಲಿ ಯುಕ್ತಿ ಇಲ್ಲದಿರುವುದರಿಂದಲೂ, ತನಗೆ ಯುಕ್ತಿ ಜ್ಞಾನವಿಲ್ಲ, ಜ್ಞೇಯಾರ್ಥಕ್ಕೂ ಘಟಕ ಯುಕ್ತಿಯಿಲ್ಲ ಆದುದರಿಂದ ಅಯುಕ್ತತ್ವವನ್ನು ಗುಣವೆಂದು ತಿಳಿಯುತ್ತಾನೆ. (೩) ಜಗತ್ತು ಹೇಗೆ ಇದೆಯೋ ಅಂತಹ ಯಥಾರ್ಥವಾದ ತತ್ತ್ವಜ್ಞಾನವು ಇಲ್ಲದಿರುವುದರಿಂದ ಸತ್ಯ ಜಗತ್ತನ್ನು ಸದಸದ್ವಿಲಕ್ಷಣವನ್ನಾಗಿ (ಅಂದರೆ ಸತ್ಯತ್ವಾದಿ ರೂಪದಿಂದ ಇರತಕ್ಕ ಅರ್ಥವು ತತ್ತ್ವಾರ್ಥವು. ಅದಕ್ಕೆ ವಿರುದ್ಧವಾದ ಅರ್ಥವು ಅತತ್ತ್ವಾರ್ಥವು.) ಯಾವನು ಹೇಳುತ್ತಾನೋ ಇವನು ಮುಖ್ಯ ತಾಮಸ ಜ್ಞಾನಿಯೆನಿಸುತ್ತಾನೆ. ಅಹೈತುಕ ಮೊದಲಾದ ಮೂರು ವಿಶೇಷಣಗಳಲ್ಲಿ ಒಂದೊಂದು ವಿಶೇಷಣವಿದ್ದರೂ ಮುಖ್ಯ ತಾಮಸ ಜ್ಞಾನಿಯು ಈ ಎಲ್ಲಾ ವಿಶೇಷಣಗಳಿಂದಲೂ ಮಿಥ್ಯಾಜ್ಞಾನರೂಪವಾದ ವಿಶೇಷಣದಿಂದಲೂ ಯುಕ್ತನಾದರೆ ಮಹಾ ಪಾಪಿಷ್ಠರಲ್ಲಿಯೂ ಅತ್ಯಧಿಕನೆಂದು ಏನು ಹೇಳಬೇಕು. ಎಂದು ಪಾದ್ಮ ಪುರಾಣದಲ್ಲಿದೆ. (೪) (೨೧ನೇ ಶ್ಲೋಕದಲ್ಲಿ ಸರ್ವೇಷು ಭೂತೇಷು ಪೃಥಕ್ತ್ವೇನ ಯಜ್ಜ್ಞಾನಂ ಎಂಬುವುದಕ್ಕೂ ನಾನಾಭಾವಾನ್ ಪೃಥಗ್ವಿಧಾನ್ ಎಂಬುವುದಕ್ಕೂ ಒಂದೇ ಪ್ರಕಾರ ಅರ್ಥವಿರುವುದರಿಂದ ಪುನರುಕ್ತಿದೋಷವೆಂದರೆ—) ನಾನಾಭಾವಾನ್ ಪೃಥ

ಪೃಥಾನ್ ಇತ್ಯಾದಿಗಳು ಪೃಥಕ್ತ್ವೇನ ತು ಯಜ್ಜ್ಞಾನಂ ಎಂಬುವುದಕ್ಕೆ ವ್ಯಾಖ್ಯಾನವು. (ಆದಕಾರಣ ಪುನರುಕ್ತಿದೋಷವಿಲ್ಲ) (೫) (ಸಮಸ್ತ ಪ್ರಾಣಿಗಳಲ್ಲಿರುವ ಶ್ರೀಹರಿಯು ಭಿನ್ನನೆಂಬುವ ಜ್ಞಾನವು ಸಾತ್ತ್ವಿಕವೆಂದು ಹೇಳಿದ್ದರಿಂದ ರಾಜಸವೆಂದು ಹೇಳಿದ್ದು ಹೇಗೆ? ಎಂದರೆ–) ಶ್ರೀ ಪರಮಾತ್ಮನು ಸರ್ವತ್ರ ವ್ಯಾಪ್ತನು ಸರ್ವೋತ್ತಮನೆಂದು ವಿಷಯೀಕರಿಸದಿರುವುದರಿಂದಲೇ ರಾಜಸವೆಂದು ಹೇಳಿದ್ದು. (ಅಂದರೆ ಶ್ರೀಹರಿಯು ಸಮಸ್ತ ಪ್ರಾಣಿಗಳಲ್ಲಿ ಭಿನ್ನನಾಗಿದ್ದಾನೆಂದು ವಿಷಯೀಕರಿಸಿದರೆ ಮಾತ್ರ ಸಾಲದು ಮತ್ತೆ ಸರ್ವತ್ರ ಇರತಕ್ಕ ಭಗವದ್ರೂಪಗಳಿಗೆ ಭೇದವಿಲ್ಲವೆಂದೂ, ಶ್ರೀಹರಿಯು ಸರ್ವೋತ್ತಮನೆಂದೂ ವಿಷಯೀಕರಿಸಬೇಕು. ಹಾಗೆ ವಿಷಯೀಕರಿಸದಿರುವುದರಿಂದ ರಾಜಸವೆಂದು ಹೇಳಿದ್ದು ಯುಕ್ತವು.) ॥ ೨ ॥

ಟೀ—ಯತ್ತು ಕೃತ್ಸ್ನವದೇಕಸ್ಮಿನ್ ಎಂಬುವದರ ಅರ್ಥವನ್ನು ಹಿಂದೆ ಹೇಳಿದ್ದರೂ ಮರಳಿ ವಿವರಿಸುತ್ತಾರೆ—

ತಾ ॥ (೧) ಏಕಸ್ಯ ಕೃತ್ಸ್ನವಜ್ಜ್ಞಾನಮೇವ ತಾಮಸಂ । ಮುಕ್ತತ್ವಾದಿರೂಪೇಣಾನ್ಯಥಾ (೨) ಕರಣೇಯತ್ವಾತ್ಪರಾಧೀನತ್ವೇನಾಲ್ಪಸ್ಯ ಜೀವಸ್ಯ ಸ್ವಾತಂತ್ರ್ಯಾದಿಗುಣಪೂರ್ಣತ್ವಾತ್ಪೃಥಕ್ತ್ವೇನ ಬ್ರಹ್ಮೈಕ್ಯಜ್ಞಾನಂ ಚ ಮಹಾತಾಮಸಂ ॥ (೩) ಕಿಂ ಪುನಸ್ತಾವನ್ಮಾತ್ರಂ ಸರ್ವಮಿತಿ ಜ್ಞಾನಂ । ಕಿಂ ಪುನಸ್ತತ್ರಾಪ್ಯೇಕಜೀವಾದನ್ಯತ್ಕಿಮಪಿ ನಾಸ್ತೀತ್ಯಹೈತುಕಂ ಜ್ಞಾನಂ ಸರ್ವಮಪಿ ತಾಮಸಂ । ಕಿಮು ತದೇವೋಕ್ತಲಕ್ಷಣಂ ॥ (೪) ಅತತ್ತ್ವಾರ್ಥವತ್ಸದಸದ್ವೈಲಕ್ಷಣ್ಯಾದ್ಯನ್ಯಥಾರ್ಥಕಲ್ಪನಾಯುಕ್ತಮೇವ ತಾಮಸಂ । ಕಿಮು ತದೇವೋಕ್ತವಿಶೇಷಣೈರ್ಯುಕ್ತಂ ॥ (೫) ಪ್ರಾಯೋಽಲ್ಪಜ್ಞಾನಮಪಿ ತಾಮಸಂ । ಅಜ್ಞಾನಬಹುಲತ್ವಾತ್ಕಿಮು ತದೇವೋಕ್ತಮಿಥ್ಯಾಜ್ಞಾನಬಹುಲಮಿತ್ಯಪುನರುಕ್ತಿಃ ॥ (೬) ಏಕಸ್ಮಿನ್ಸರ್ವಜ್ಞಾ(ರ್ವವಜ್ಜ್ಞಾ)ನಂ ಕಾರ್ಯೇ ಜೀವೇ ಪೂರ್ಣಂ ಬ್ರಹ್ಮೇತಿ ಸಕ್ತಂ ಜ್ಞಾನಂ ನಿರ್ಯುಕ್ತಿಕಂ ಚ । ಅತತ್ತ್ವಾರ್ಥಕಲ್ಪನಾಯುಕ್ತಂ ಅಲ್ಪಜ್ಞಾನಂ ಚ ಪೃಥಕ್ಪೃಥಕ್ತ್ವಾ(ಗಪಿತಾ)ಮಸಾನೀತಿ ನಾ । ಮಾಯಾವಾದೇ ತ್ವೇತಾನಿ ಸಮಸ್ತಾನಿ । ಅನ್ಯತ್ರಾಪಿ ತ್ವಹೈತುಕತ್ವಾದಿಕಂ ವಿರುದ್ಧವಾದೇಷು ಸಮಂ ಸರ್ವೇಷು ॥ ೩ ॥ ॥ ೨೦,೨೧,೨೨ ॥

ಅ॥ (೧) ಜೀವನಲ್ಲಿ ಸಮಸ್ತ ಜಗದ ಭೇದಜ್ಞಾನವೇ ತಾಮಸವು. ಹೀಗೆ ಇರುವಾಗ ಜೀವನನ್ನು ಪ್ರಕಾರದಿಂದ ಮುಕ್ತನನ್ನಾಗಿಯೂ ಸಂಚೋಟ್ಟಭಾವವಿರುವವನನ್ನಾಗಿಯೂ ಇತ್ಯಾದಿ ರೂಪದಿಂದ ತಿಳಿದುಕೊಳ್ಳಲಿಕ್ಕೆ ಯೋಗ್ಯನಾಗಿರುವುದರಿಂದ ಪರಾಧೀನನಾದ ಅಲ್ಪನಾದ ಜೀವನು ಸ್ವಾತಂತ್ರ್ಯಾದಿಗಳಾದ ಸರ್ವ ಗುಣಗಳಿಂದ ಪೂರ್ಣನಾದ ಪರಬ್ರಹ್ಮನಿಂದ ಅಭಿನ್ನನೆಂಬುವ ಜ್ಞಾನವೇ ಮಹಾತಾಮಸವು. ಹೀಗೆ ಇರಲು ಬ್ರಹ್ಮ ಜಗದಾದಿ ಸಮಸ್ತ ವಸ್ತುವೂ ಜೀವಸ್ವರೂಪವೇ, ಎಂಬುವ ಜ್ಞಾನವು ತಾಮಸವೆಂದು ಏನು ಹೇಳಬೇಕು? (೨) ಮತ್ತು ಜೀವರಲ್ಲಿಯೂ [illegible] ಜೀವನೇ ಕಲ್ಪಿತನು, [illegible] ಬೇರೆ ಎಲ್ಲಾ ಜೀವರೂ ಬೇರೆ ವಸ್ತುಗಳೂ ಯಾವುದೂ [illegible], ಎಂಬ ಅಹೈತುಕವಾದ ಸರ್ವಜ್ಞಾನವೂ ತಾಮಸವು. ಹೀಗೆ ಇರಲು ಅಂತಹ ಜ್ಞಾನವೇ [illegible] ಲಕ್ಷಣಗಳುಳ್ಳದ್ದಾದರೆ ತಾಮಸವೆಂದು ಏನು ಹೇಳಬೇಕು? (೪) [illegible] [illegible] [illegible] ಲಕ್ಷಣ್ಯಾದಿರೂಪವಾದ ವಿಪರೀತವಾದ ಅರ್ಥ [illegible]

ಇರಲು ಅದೇ ಹಿಂದೆ ಹೇಳಿದ ಲಕ್ಷಣಗಳಿಂದ ಕೂಡಿದ್ದರೆ ಮಹಾತಾಮಸವೆಂದು ಏನು ಹೇಳಬೇಕು? (೪) ಪ್ರಾಯಶಃ ಅಲ್ಪ ಜ್ಞಾನವೂ ತಾಮಸವು. ಅಜ್ಞಾನವು ಹೆಚ್ಚು ಇದ್ದ ಪ್ರಯುಕ್ತ ಅದೇ ಹಿಂದೆ ಹೇಳಿದ ಮಿಥ್ಯಾಜ್ಞಾನವು ಜಾಸ್ತಿ ಇದ್ದರೆ ತಾಮಸವಾಗುತ್ತದೆಂದು ಹೇಳಿದುದರಿಂದ ಪುನರುಕ್ತಿಯಿಲ್ಲ. (೫) ಜೀವನಲ್ಲಿ ಜಗದಭೇದಜ್ಞಾನವು ಮತ್ತು ಒಬ್ಬ ಜೀವನಲ್ಲಿ ಸರ್ವಗುಣಪೂರ್ಣನಾದ ಬ್ರಹ್ಮನೆಂಬುವ ಜ್ಞಾನವು ಯುಕ್ತಿಶೂನ್ಯವು. ಮಿಥ್ಯಾಭೂತವಾದ ಅರ್ಥಕಲ್ಪನೆಯಿಂದ ಯುಕ್ತವಾದ ಜ್ಞಾನವೂ ಅಲ್ಪ ಜ್ಞಾನವೂ ಕೂಡ ಅದು ಪ್ರತ್ಯೇಕಪ್ರತ್ಯೇಕ ತಾಮಸಗಳು. ಮಾಯಿಮತದಲ್ಲಿ ಎಲ್ಲಾ ಜ್ಞಾನವೂ ಇಂತಹುದೇ ಆದುದರಿಂದ ಎಲ್ಲವೂ ತಾಮಸಜ್ಞಾನಗಳೇ ಪ್ರಮಾಣವಿರುದ್ಧಗಳಾದ ಇತರ ಮತಗಳಲ್ಲಿಯೂ ಕೂಡ ಅಹೈತುಕತ್ವಾದಿಗಳು ಸರ್ವ ವಿಷಯದಲ್ಲಿಯೂ ಸಮಾನಗಳಾಗಿವೆ. ॥ ೨೦, ೨೧, ೨೨ ॥

ಪೀ — ಪೂರ್ವದಲ್ಲಿ ಪ್ರತಿಜ್ಞಾತವಾದ ಕರ್ಮತ್ರೈವಿಧ್ಯವನ್ನು ಹೇಳುತ್ತಾನೆ—

**ಗೀ ॥ ನಿಯತಂ ಸಂಗರಹಿತಮರಾಗದ್ವೇಷತಃ ಕೃತಂ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ವಿಕಮುಚ್ಯತೇ ॥ ೨೩ ॥**

ಅ ॥ ಯತ್ ಕರ್ಮ=ಯಾವ ಕರ್ಮವು, ನಿಯತಂ=ಶ್ರೀಹರಿಯು ಸರ್ವೋತ್ತಮನೆಂದು ತಿಳಿದು ಭಕ್ತಿಪೂರ್ವಕವಾಗಿ ನಾನು ಮಾಡಿದ ಸತ್ಕರ್ಮವು ಶ್ರೀಹರಿಗೆ ಅರ್ಪಿತವಾಗಲಿ! ಎಂಬುವ ಬುದ್ಧಿಯಿಂದ ಆಯಾಯ ವರ್ಣಾಶ್ರಮಗಳಿಗೆ ಉಚಿತವಾಗಿ ವಿಹಿತವಾಗಿದೆಯೋ, ಸಂಗರಹಿತಂ=ಅಭಿಮಾನ ವಿರಹಿತವಾಗಿದೆಯೋ, ಅರಾಗದ್ವೇಷತಃ ಕೃತಂ=ಕೀರ್ತಿಯೇ ಮೊದಲಾದವುಗಳಲ್ಲಿ ಅಭಿಮಾನಾದಿಗಳೂ, ಅಪಕೀರ್ತಿ ಮೊದಲಾದವುಗಳಲ್ಲಿ ದ್ವೇಷವೂ. ಇವುಗಳನ್ನು ಬಿಟ್ಟು, ಅಫಲಪ್ರೇಪ್ಸುನಾ=ಫಲೇಚ್ಛೆಯನ್ನು ತೊರೆದಿರುವ ಮನುಷ್ಯನಿಂದ, ಕೃತಂ=ಮಾಡಲ್ಪಟ್ಟಿದೆಯೋ, ತತ್=ಆ ಕರ್ಮವು. ಸಾತ್ವಿಕಂ=ಸಾತ್ವಿಕ ಕರ್ಮವೆಂದು, ಉಚ್ಯತೇ=ಹೇಳಲ್ಪಡುತ್ತದೆ. ॥ ೨೩ ॥

**ಗೀ ॥ ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಂ ॥ ೨೪ ॥**

ಅ ॥ ಯತ್ತು ಕರ್ಮ=ಯಾವ ಕರ್ಮವು, ಕಾಮೇಪ್ಸುನಾ=ಫಲವನ್ನು ಇಚ್ಛಿಸುವ ಪುರುಷನಿಂದಲಾಗಲೀ, ಸಾಹಂಕಾರೇಣ ವಾ=ನಾನೇ ಕರ್ತನು ಎಂದು ಕರ್ತೃತ್ವಾಭಿಮಾನದಿಂದ ಕೂಡಿದ ಮನುಷ್ಯನಿಂದಲಾಗಲೀ, ಬಹುಲಾಯಾಸಂ ಪುನಃ=ಹೆಚ್ಚು ಆಯಾಸ ಕಷ್ಟಗಳಿಂದ ಕೂಡಿಯೋ, ಕ್ರಿಯತೇ=ಮಾಡಲ್ಪಡುತ್ತದೋ, ತತ್=ಆ ಕರ್ಮವು, ರಾಜಸಂ=ರಾಜಸ ಕರ್ಮವೆಂದು, ಉದಾಹೃತಂ=ಹೇಳಲ್ಪಟ್ಟಿದೆ. ॥ ೨೪ ॥

**ಗೀ ॥ ಅನುಬಂಧಂ ಕ್ಷಯಂ ಹಿಂಸಾಮನಪೇಕ್ಷ್ಯ ಚ ಪೌರುಷಂ ।**
**ಮೋಹಾದಾರಭ್ಯತೇ ಕರ್ಮ ತತ್ತಾಮಸಮುದಾಹೃತಂ ॥ ೨೫ ॥**

ಅ ॥ ಯತ್ ಕರ್ಮ=ಯಾವ ಕರ್ಮವು, ಅನುಬಂಧಂ=ಈ ಕರ್ಮದಿಂದ ಮುಂದೆ [illegible] ಅನರ್ಥವು (ದುಃಖವು) ಉಂಟಾಗಬಹುದೆಂಬುವ ವಿಚಾರವನ್ನು, ಕ್ಷಯಂ=ಕರ್ಮಗಳಿಂದ [illegible] ದ್ರವ್ಯಾದಿಗಳ ನಾಶವನ್ನೂ, ಹಿಂಸಾಂ=ಪ್ರಾಣಿಗಳ ಪೀಡೆಯನ್ನು, ಪೌರುಷಂ ಚ=ತಾನು ಪ್ರಾರಂಭಿಸಿದ ಕರ್ಮಗಳನ್ನು ತನಗೆ ಸಮಾಪಿಸುವ ಶಕ್ತಿಯನ್ನೂ ಕೂಡಾ, ಅನಪೇಕ್ಷ್ಯ=ವಿಚಾರಮಾಡದೆ, [illegible]

ಷಮ್=ಸರ್ವಸ್ವಾತಂತ್ರ್ಯವೂ ಶ್ರೀ ಪರಮಾತ್ಮನಲ್ಲಿಯೇ ಇರತಕ್ಕದೆಂದು ತಿಳಿಯದೆ, ಆರಭ್ಯತೇ=ಪ್ರಾರಂಭಿಸಲ್ಪಡುತ್ತದೋ, ತತ್=ಆ ಕರ್ಮವು, ತಾಮಸಂ=ತಾಮಸ ಕರ್ಮವೆಂದು, ಉಚ್ಯತೇ=ಹೇಳಲ್ಪಡುತ್ತದೆ. ॥ ೨೫ ॥

ಟೀ—ಗುಣಭೇದಪ್ರಯುಕ್ತ ಕರ್ಮತ್ರೈವಿಧ್ಯವನ್ನು ನಿಯತಂ (ಶ್ಲೋ. ೨೩) ಎಂಬುವ ಶ್ಲೋಕದಿಂದ ಹೇಳುತ್ತಾರೆ. ಅಲ್ಲಿ ನಿಯತ ಪದದಿಂದ ತಂತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ಕರ್ಮಮಾತ್ರವು ಹೇಳಲ್ಪಡುತ್ತದೆಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

**ಟೀ ॥ (೧) ಮಯಿ ಸರ್ವಾಣಿ ಕರ್ಮಾಣಿ ಸನ್ನ್ಯಸ್ಯಾಧ್ಯಾತ್ಮಚೇತಸೇತ್ಯುಕ್ತತ್ವಾತ್(ತ್ವಾತ್) । ಯೇ ಮೇ ಮತಂ । ಯೇ ತ್ವೇತದಿತಿ ಚ । ತಸ್ಯ ಮೋಕ್ಷಸಾಧನ(ತ್ವ)ಸ್ಯಾಕರಣೇ ಪ್ರತ್ಯವಾಯಸ್ಯ ಚೋಕ್ತೇರ್ಭಗವದರ್ಪಿತತ್ವೇನ ಸರ್ವಕರ್ಮಕರಣಂ ತಸ್ಯ ವಿಷ್ಣೋಃ ಸರ್ವಪರಮತ್ವಜ್ಞಾನಂ ಚ ನಿಯತಮೇವೇತಿ ಜ್ಞಾಯತೇ ॥ (೨) ಅಧ್ಯಾತ್ಮಚೇತಸೇತ್ಯುಕ್ತತ್ವಾತ್ತತ್ಸ್ವರೂಪಯಾಥಾರ್ಥ್ಯಜ್ಞಾನಾದಿ ॥ (೩) ಯೇ ತು ಸರ್ವಾಣಿ ಕರ್ಮಾಣೀತ್ಯೇತ(ತ್ಯ)ಸ್ಮಿನ್ ಶ್ಲೋಕೇಽಧ್ಯಾತ್ಮಚೇತಸ್ತ್ವಸ್ಯ ಮತ್ಪರಾಃ ಅನನ್ಯೇನೈವ ಯೋಗೇನ (ಮಾಂ) ಧ್ಯಾಯಂತ ಇತಿ ವ್ಯಾಖ್ಯಾತತ್ವಾತ್ । ಏವಂ ಸರ್ವಮಪಿ ಭಗವದ್ಭಕ್ತಿಯುಕ್ತಮೇವ ಸಾತ್ತ್ವಿಕಂ ॥ ೨೩,೨೪,೨೫ ॥**

ಅ ॥ (೧) (ಶ್ರೀ ವಿಷ್ಣುವೇ ಸರ್ವೋತ್ತಮನು, ಎಂಬುವ ಜ್ಞಾನಪೂರ್ವಕವಾಗಿ ಶ್ರೀ ವಿಷ್ಣುವಿನಲ್ಲಿ ಭಕ್ತಿಯಿಂದ ಶ್ರೀ ವಿಷ್ಣುವಿಗೆ ಅರ್ಪಿತವಾಗಲಿ ಎಂಬುವ ಬುದ್ಧಿಯಿಂದ ಮಾಡಲ್ಪಡತಕ್ಕ ಕರ್ಮವೇ ನಿಯತವೆಂದು ಇಲ್ಲಿ ಹೇಳಲ್ಪಡುತ್ತದೆ. ತಂತಮ್ಮ ವರ್ಣಾಶ್ರಮಗಳಿಗೆ ಉಚಿತವಾದುದು ಮಾತ್ರವಲ್ಲ. ಏಕೆಂದರೆ–) **ಮಯಿ ಸರ್ವಾಣಿ ಕರ್ಮಾಣಿ** (ಅಧ್ಯಾ ೩ ಶ್ಲೋ ೩೦) ಎಂದು ಹರಿಸರ್ವೋತ್ತಮತ್ವಜ್ಞಾನ ಭಕ್ತಿಪೂರ್ವಕವಾಗಿ ಶ್ರೀಹರಿಗೆ ಅರ್ಪಿತವಾಗಲಿ ಎಂಬುವ ಬುದ್ಧಿಯಿಂದ ಕರ್ಮಮಾಡಬೇಕೆಂದು ಹೇಳಿ **ಯೇ ಮೇ ಮತಂ** (ಅಧ್ಯಾ ೩ ಶ್ಲೋ. ೩೧) ಎಂಬುವುದರಿಂದ ಕರ್ಮಕ್ಕೆ ಮೋಕ್ಷಸಾಧನತ್ವವನ್ನು **ಯೇ ತ್ವೇತತ್** (ಅಧ್ಯಾ ೩ ಶ್ಲೋ. ೩೨) ಎಂಬುವುದರಿಂದ ಕರ್ಮವನ್ನು ಮಾಡದಿದ್ದಾಗ ಪ್ರತ್ಯವಾಯವನ್ನು ಹೇಳಿದ್ದಾರೆ. ಆದಕಾರಣ ಶ್ರೀಪರಮಾತ್ಮನಿಗೆ ಅರ್ಪಿತವಾಗಲಿ ಎಂಬುವ ಬುದ್ಧಿಯಿಂದ ಸಮಸ್ತ ಕರ್ಮಗಳನ್ನು ಮಾಡಬೇಕೆಂಬುವುದೂ. ಶ್ರೀಪರಮಾತ್ಮನು ಸರ್ವೋತ್ತಮನೆಂಬುವ ಜ್ಞಾನವೂ ನಿಯತವೆಂದು ತಿಳಿಯತಕ್ಕದ್ದು. (೨) (ಶ್ರೀ ಪರಮಾತ್ಮನಿಗೆ ಅರ್ಪಿತವಾಗಲಿ, ಎಂಬುವ ಬುದ್ಧಿಯಿಂದ ಮಾಡತಕ್ಕ ಕರ್ಮವು ನಿಯತಂ ಎಂದಾಗಲಿ. ಮಯಿ ಸರ್ವಾಣಿ **ಕರ್ಮಾಣಿ** ಎಂಬುವಲ್ಲಿ ಹೇಳದೆ ಇರುವುದರಿಂದ ಅದಕ್ಕೆ ಭಗವಂತನು ಸರ್ವೋತ್ತಮನು ಇತ್ಯಾದಿ ಜ್ಞಾನಗಳು ಬೇಕೆಂಬುವುದು ಹೇಗೆ? ಎಂದರೆ–) **ಅಧ್ಯಾತ್ಮಚೇತಸಾ** ಸರ್ವೋತ್ತಮನಾದ ಶ್ರೀ ಪರಮಾತ್ಮನ ವಿಷಯದಲ್ಲಿರುವ ಜ್ಞಾನದಿಂದ ಎಂದು ಹೇಳಿದ್ದರಿಂದ ಭಗವತ್ಸ್ವರೂಪದಲ್ಲಿ ಯಥಾರ್ಥಜ್ಞಾನ ಭಕ್ತ್ಯಾದಿಗಳು ಅವಶ್ಯಕವೆಂದು ತಿಳಿಯುತ್ತದೆ. (೩)(**ಅಧ್ಯಾತ್ಮಚೇತಸಾ** ಎಂಬುವುದಕ್ಕೆ ಶ್ರೀ ಪರಮಾತ್ಮನು ಸರ್ವೋತ್ತಮನೆಂಬುವ ಜ್ಞಾನದಿಂದ ಎಂಬುವ ಅರ್ಥವು ಹೇಗೆ ಸಿಗುವುದೆಂದರೆ–) **ಯೇ ತು ಸರ್ವಾಣಿ ಕರ್ಮಾಣಿ** ಎಂಬುವ ಶ್ಲೋಕದಲ್ಲಿ ಅಧ್ಯಾತ್ಮಚೇತಸ್ಸನ್ನು **ಮತ್ಪರಾಃ** (ನಾನೇ ಸರ್ವೋತ್ತಮನೆಂದು ತಿಳಿದವರು) **ಅನನ್ಯೇನೈವ ಯೋಗೇನ ಮಾಂ ಧ್ಯಾಯಂತಃ** ಎಂಬುವುಗಳಿಂದ ವ್ಯಾಖ್ಯಾನಮಾಡಿದ್ದಾರೆ. (೪) ಹೀಗೆಯೇ ಭಗವದರ್ಪಣ ಮೊದಲಾದುದೆಲ್ಲವೂ ಶ್ರೀಹರಿಯ ಭಕ್ತಿಯಿಂದ ಕೂಡಿದರೇನೇ ಸಾತ್ತ್ವಿಕವೆನಿಸುತ್ತದೆ. ॥ ೨೩,೨೪,೨೫ ॥

ಪೀ— ಪೂರ್ವದಲ್ಲಿ ಪ್ರತಿಜ್ಞಾಮಾಡಿದ ಸತ್ವಾದಿಗುಣಗಳಿಂದ ಮಾಡಲ್ಪಟ್ಟ ಕರ್ತೃತ್ರೈವಿಧ್ಯವನ್ನು ಮೂರು ಶ್ಲೋಕಗಳಿಂದ ಹೇಳುತ್ತಾನೆ—

ಗೀ ॥ ಮುಕ್ತಸಂಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।
ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥ ೨೬ ॥

ಅ ॥ ಮುಕ್ತಸಂಗಃ=ಫಲದಲ್ಲಿ ಸ್ನೇಹವಿಲ್ಲದಿರುವ, ಅನಹಂವಾದೀ=ಸರ್ವವೂ ಭಗವದಧೀನವೇ ಎಂಬೀ ನಿಶ್ಚಯವಿದ್ದುದರಿಂದಲೇ, ನಾನೇ ಸ್ವತಂತ್ರ ಕರ್ತನೆಂದು ಅಹಂಕಾರ ಅಭಿಮಾನವಿಲ್ಲದಿರುವ, ಧೃತ್ಯುತ್ಸಾಹಸಮನ್ವಿತಃ=ಸತ್ಕರ್ಮಮಾಡುವಾಗ ಉಂಟಾಗುವ ಅವರ್ಜನೀಯ ದುಃಖವನ್ನು ಸಹಿಸಿಕೊಳ್ಳುವಿಕೆ, ಕರ್ಮಮಾಡುವ ವಿಷಯದಲ್ಲಿ ಉತ್ಸಾಹ ಇವುಗಳಿಂದ ಕೂಡಿರುವ, ಸಿದ್ಧ್ಯಸಿದ್ಧ್ಯೋಃ ನಿರ್ವಿಕಾರಃ=ಕರ್ಮಫಲವು ಸಿದ್ಧವಾದರೂ ಕರ್ಮಫಲವಾಗದಿದ್ದರೂ ತಪ್ಪಯುಕ್ತ ಮಹಾಹರ್ಷವೂ ಮಹಾದುಃಖವೂ ಇಲ್ಲದಿರುವ, ಕರ್ತಾ=ಕರ್ತನು, ಸಾತ್ವಿಕಃ=ಸಾತ್ವಿಕನೆಂದು, ಉಚ್ಯತೇ=ಹೇಳಲ್ಪಡುತ್ತಾನೆ ॥ ೨೬ ॥

ಗೀ ॥ ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।
ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ ೨೭ ॥

ಅ ॥ ರಾಗೀ=ಕೀರ್ತಿಯೇ ಮೊದಲಾದವುಗಳನ್ನ ಪೇಕ್ಷಿಸುವ, ಕರ್ಮಫಲಪ್ರೇಪ್ಸುಃ=ಕರ್ಮಫಲವನ್ನು ಹೊಂದಬೇಕೆಂದು ಇಚ್ಛಿಸುವ, ಲುಬ್ಧಃ=ಕರ್ಮಗಳಿಗೆ ಅತ್ಯಾವಶ್ಯಕವಾದ ದ್ರವ್ಯವನ್ನು ಸತ್ಪಾತ್ರದಲ್ಲಿ ದಾನಾದಿರೂಪ ವ್ಯಯ ಮಾಡದಿರುವ, ಹಿಂಸಾತ್ಮಕಃ=ಇತರರಿಗೆ ಕಷ್ಟವನ್ನುಂಟುಮಾಡಿ ಪರರನ್ನು ಹಿಂಸಾ ಮಾಡುವ ಸ್ವಭಾವವುಳ್ಳ, ಅಶುಚಿಃ=ಬಾಹ್ಯಾಭ್ಯಂತರಶುದ್ಧಿ, ದ್ರವ್ಯಾದಿಶುದ್ಧಿಗಳಿಲ್ಲದಿರುವ, ಹರ್ಷಶೋಕಾನ್ವಿತಃ=ಫಲವು ಲಭಿಸಿದಾಗ ಸಂತೋಷವೂ, ಸಿಗದಿರುವಾಗ ದುಃಖವೂ ಇವುಗಳಿಂದ ಕೂಡಿರುವ, ಕರ್ತಾ=ಕರ್ತನು, ರಾಜಸಃ=ರಾಜಸ ಕರ್ತನೆಂದು, ಪರಿಕೀರ್ತಿತಃ=ಹೇಳಲ್ಪಟ್ಟಿರುತ್ತಾನೆ. ॥ ೨೭ ॥

ಭಾ ॥ ಏಕಂ ಭಾವಂ ವಿಷ್ಣುಂ ॥ ೨೦-೨೭ ॥

ಅ ॥ ೨೦ನೇ ಶ್ಲೋಕದಲ್ಲಿದ್ದ ಏಕಂ ಭಾವಂ ಎಂದರೆ ಸರ್ವೋತ್ತಮನೂ ಸದಾ ಇರತಕ್ಕವನೂ ಆದ ಶ್ರೀ ವಿಷ್ಣುವನ್ನು (ಎಂದರ್ಥವು.) ॥ ೨೦, ೨೭ ॥

ಪೀ—ಗುಣಭೇದದಿಂದ ಕರ್ತೃತ್ರೈವಿಧ್ಯವನ್ನು ಮುಕ್ತಸಂಗಃ (ಶ್ಲೋ. ೨೬) ಎಂಬುವುದರಿಂದ ಹೇಳುತ್ತಾರೆ. ಜೀವನು ಕರ್ತನೆಂದು ಅಂಗೀಕರಿಸುವುದಾದರೆ ಆ ಶ್ಲೋಕದಲ್ಲಿ ಅನಹಂವಾದೀ ಎಂಬುವ ಪದವು ಹೇಗೆ ಕೂಡುತ್ತದೆ? ಕರ್ತೃವಿಗೆ ಅಹಂ ಕರ್ತಾ ಎಂಬುವ ಅನುಭವವು ಇದ್ದುದರಿಂದ ಅಹಂವಾದಿತ್ವವು ತಪ್ಪಿದ್ದಲ್ಲ ಎಂದರೆ—

ತಾ ॥ ಸರ್ವಸ್ಯ ಭಗವದಧೀನತ್ವಜ್ಞಾನಾದೇವಾನಹಂವಾದೀ ॥ ೨೬,೨೭ ॥

ಅ ॥ ಪರಾಧೀನವಾದ ಕರ್ತೃತ್ವವಿದ್ದರೂ ನಾನೇ ಸ್ವತಂತ್ರನಾಗಿ ಮಾಡಿದವನೆಂದು ಸಾತ್ವಿಕನು ಹೇಳುವುದಿಲ್ಲ ತನ್ನ ಕರ್ತೃತ್ವಾದಿಗಳೆಲ್ಲವೂ ಶ್ರೀಭಗವಂತನ ಅಧೀನವೇ ಎಂದು ನಿಶ್ಚಯವಿದ್ದುದರಿಂದಲೇ ಅನಹಂವಾದೀ ಎನಿಸುತ್ತಾನೆ ॥ ೨೬ ॥

ಗೀ ॥ ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಷ್ಕೃ(ಕೃ)ತಿಕೋಽಲಸಃ ।
ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ ೨೮ ॥

ಅ ॥ ಅಯುಕ್ತಃ = ತಾನು ಮಾಡಿದ ಕರ್ಮಾದಿಗಳನ್ನು ಶ್ರೀಹರಿಯಾತ್ಮನಿಗೆ ಅರ್ಪಿಸಬೇಕೆಂಬುವ ಬುದ್ಧಿಯಿಲ್ಲದ, ಪ್ರಾಕೃತಃ = ಉತ್ಕೃಷ್ಟನಾಗಿ ಮಾಡಲ್ಪಡದಿರುವ, ವಿದ್ಯಾವಿವೇಕಾದಿಗಳಿಲ್ಲದ, ಸ್ತಬ್ಧಃ = ತಾನೇ ಉತ್ತಮನೆಂಬೀ ದುರಭಿಮಾನದಿಂದ ಯಾರಿಗೂ ನಮ್ರನಾಗದಿರುವ, ಶಠಃ = ಗೂಢ ವೈರಿಯಾಗಿ ಕೆಲಸ ನಡಿಸುವ, ನೈಷ್ಕೃ(ಕೃ)ತಿಕಃ = ನೀಚಕರ್ಮಗಳನ್ನು ಮಾಡುವ, ಅಲಸಃ = ಕರ್ಮಗಳನ್ನು ಮಾಡುವ ಕಾಲವು ಬಂದಾಗ್ಯೂ ಆಲಸ್ಯದಿಂದ ಕರ್ಮಗಳನ್ನು ಮಾಡದಿರುವ, ವಿಷಾದೀ = ಸರ್ವ ವ್ಯಾಪಾರಗಳನ್ನು ಮಾಡದಿರಲು ಕಾರಣವಾದ ಮನೋದೌರ್ಬಲ್ಯವುಳ್ಳ, ದೀರ್ಘಸೂತ್ರೀ ಚ = ಕರ್ಮಕಾಲವು ಪ್ರಾಪ್ತವಾದುದಾಗ್ಯೂ ಮುಂದೆ ಮಾಡುವೆನೆಂದು ತಿಳಿಯುತ್ತಿರುವ, ಅಥವಾ ಎಷ್ಟೋ ಹಿಂದಿನ ಕಾಲದಲ್ಲಿ ಇತರರು ಮಾಡಿದ ದೋಷಗಳನ್ನು ಇತರರಿಗೆ ಪೀಡೆ ಕೊಡುವುದಕ್ಕಾಗಿ ಸಮಯ ನೋಡಿ ಅನುಚಿತವಾದುದನ್ನು ಸೂಚನೆಮಾಡುವ, ಕರ್ತಾ = ಕರ್ತನು, ತಾಮಸಃ = ತಾಮಸನೆಂದು, ಉಚ್ಯತೇ = ಹೇಳಲ್ಪಡುತ್ತಾನೆ. ॥ ೨೮ ॥

ಪೀ — ಹೀಗೆ ಜ್ಞಾನ ಕರ್ಮ ಕರ್ತೃಗಳಲ್ಲಿ ಸತ್ತ್ವಾದಿಗುಣಕೃತ ತ್ರೈವಿಧ್ಯವನ್ನು ಹೇಳಿ ಈಗ ಬುದ್ಧಿ ಧೃತಿಗಳ ಗುಣಕೃತ ತ್ರೈವಿಧ್ಯವನ್ನು ೭ ಶ್ಲೋಕಗಳಿಂದ ಹೇಳುತ್ತಾನೆ. ಅದರಲ್ಲಿ ೩ ಶ್ಲೋಕಗಳಿಂದ ಬುದ್ಧಿಯ ತ್ರೈವಿಧ್ಯವನ್ನು ಹೇಳುತ್ತಾನೆ—

ಗೀ ॥ ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।
ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥ ೨೯ ॥

ಅ ॥ ಧನಂಜಯ = ಅರ್ಜುನನೇ, ಗುಣತಃ = ಸತ್ತ್ವರಜಸ್ತಮೋಗುಣಗಳ ಭೇದದಿಂದ, ತ್ರಿವಿಧಂ = ಮೂರು ವಿಧವಾಗಿಯೇ ಇರುವ, ಬುದ್ಧೇಃ = ವಿವೇಕಯುಕ್ತವಾದ ನಿಶ್ಚಯಾತ್ಮಕಜ್ಞಾನದ ಧೃತೇಶ್ಚ = ಪ್ರಾರಂಭಿಸಿದ ಕರ್ಮಗಳನ್ನು ಎಷ್ಟು ವಿಘ್ನಗಳುಬಂದರೂ ಅವುಗಳನ್ನೆಲ್ಲಾ ಸಹಿಸಿಕೊಂಡು ಸಮಾಪಿಸುವುದೆಂಬ ಧೈರ್ಯದ, ಭೇದಂ = ಭೇದವನ್ನು, ಪೃಥಕ್ತ್ವೇನ = ಪ್ರತ್ಯೇಕವಾಗಿ, ಪ್ರೋಚ್ಯಮಾನಂ = ಹೇಳಲ್ಪಡುವುದನ್ನು, ಅಶೇಷೇಣ = ಸಂಪೂರ್ಣವಾಗಿ, ಶೃಣು — ಕೇಳಿ ಆಸಕ್ತಿಮಾಡು ॥ ೨೯ ॥

ಪೀ — ಸಾತ್ವಿಕನಿಗೂ ಪ್ರಕೃತಿಬದ್ಧತ್ವಾದಿರೂಪವಾದ ಪ್ರಾಕೃತತ್ವವೂ, ಕದಾಚಿತ್ ದೀರ್ಘಸೂತ್ರಿ ಕವೀಕವತ್ವರೂಪ ದೀರ್ಘಸೂತ್ರತ್ವವೂ ಇದ್ದುದರಿಂದ ಇವುಗಳು ತಾಮಸನಿಗೇ ಎಂದು ಹೇಳಿದ್ದು ಹೇಗೆ? ಎಂದರೆ ಅವುಗಳಿಗೆ ಅರ್ಥಾಂತರವನ್ನು ಹೇಳುತ್ತಾರೆ—

ಕಾ ॥ (೧) ಭಗವದ್ಭಕ್ತಿಸಾಮರ್ಥ್ಯಾತ್ಸ್ವಕೃಷ್ಟೋ ನ ಕೃತೋ ಹಿ ಯಃ । ಸ ಪ್ರಾಕೃತೋ ದೀರ್ಘಸೂತ್ರೀ ಕಾರ್ಯಾಣಾಂ ಪಶ್ಚಾದಿತಿ ಸ್ಮರನ್ನಿತಿ ಶಬ್ದತತ್ತ್ವೇ । ಪ್ರಾಪ್ತಕಾಲಸ್ಯ ಕರ್ಮಣೋ ದೀರ್ಘಕಾಲೇನೈವ ಕೃತಿಂ ಸೂಚಯನ್ದೀರ್ಘಸೂತ್ರೀತ್ಯರ್ಥಃ ॥ (೨) ಅಲಸೋ ದೀರ್ಘಸೂತ್ರೀ ಚ ಸತ್ತ್ವಯುಕ್ತಾಮಸೋ ಮತಃ । ಅಯುಕ್ತೋ ರಾಜಸಃ ಸ್ತಬ್ಧಃ ಪ್ರಾಕೃತೋ ನೈಕೃತಿಕಃ (ನಿಕೃತಿಃ) ಶಠಃ । ಏಕೈಕೇನೈವ ದೋಷೇಣ

ಪ್ರೋಕ್ತಸ್ತಾಮಸತಾಮಸಃ ॥ (೪) ದುರ್ನರತ್ವಂ ಚ ತಿರ್ಯಕ್ತ್ವಂ ತಮಶ್ಚೈತತ್ಫಲಂ ಕ್ರಮಾದಿತಿ ಚ ॥ ೨೮,೨೯ ॥

ಅ ॥ (೧) ಶ್ರೀ ಪರಮಾತ್ಮನ ಭಕ್ತಿಯ ಸಾಮರ್ಥ್ಯದಿಂದ ಯಾವಾತನು ಉತ್ಕೃಷ್ಟನಾಗಿ ಮಾಡಿ ಕೊಳ್ಳಲ್ಪಡುವುದಿಲ್ಲವೋ, ಆತನು ಪ್ರಾಕೃತನು. ಕಾರ್ಯವನ್ನು ಮುಂದೆ ಮಾಡುವೆನೆಂದು ಚಿಂತಿಸುವವನು ದೀರ್ಘಸೂತ್ರೀ ಎನಿಸುತ್ತಾನೆಂದು ಶಬ್ದತತ್ತ್ವದಲ್ಲಿದೆ. ಕರ್ಮ ಮಾಡುವ ಕಾಲವು ಪ್ರಾಪ್ತವಾದುದಾಗ್ಯೂ ಅದನ್ನು ಮುಂದೆ ಮಾಡುವೆನೆಂದು ಚಿಂತಿಸುವವನು ದೀರ್ಘಸೂತ್ರೀ ಎನಿಸುತ್ತಾನೆ (೨)(ಸ್ತಬ್ಧಾದಿಗಳು ದೀರ್ಘಸೂತ್ರಿಯಿಂದ ಉತ್ಕೃಷ್ಟರಾದುದರಿಂದ ಸ್ತಬ್ಧಾದಿಗಳನ್ನು ತಾಮಸರೆಂದು ಗಣನೆಮಾಡಿದ್ದು ಹೇಗೆಂದರೆ—) ಅಲಸನೂ, ದೀರ್ಘಸೂತ್ರಿಯೂ ಅಲ್ಪಸತ್ತ್ವಗುಣಗಳುಳ್ಳವರಾದರೂ ತಾಮಸರೆಂದು ಸಮ್ಮತರು. ಅಯುಕ್ತನು, ರಾಜಸನು, ಸ್ತಬ್ಧನು, ಪ್ರಾಕೃತನು, ನೈಷ್ಕೃತಿಕನು, ಶಠನು ಇವರು ಒಂದೊಂದೇ ದೋಷದಿಂದ ತಾಮಸತಾಮಸನು ಎಂದು ಹೇಳಲ್ಪಡುತ್ತಾನೆ. (೩) (ಅಯುಕ್ತಃ=ಭಗವದರ್ಪಣಾದಿ ಯೋಗವಿಲ್ಲದವನು. ಸ್ತಬ್ಧಃ=ಯಾರಿಗೂ ಬಗ್ಗದಿರುವವನು, ನೈಷ್ಕೃತಿಕಃ=ನೀಚಕರ್ಮವುಳ್ಳವನು. ಶಠಃ=ಗೂಢದ್ವೇಷಿಯು. ತ್ರಿವಿಧತಾಮಸರಿಗೆ ಫಲವನ್ನು ಹೇಳುತ್ತಾರೆ—) ದುಷ್ಟನರತ್ವವೂ ತಿರ್ಯಕ್ತ್ವವೂ ತಮಸ್ಸೂ ಇವು ಕ್ರಮವಾಗಿ ತ್ರಿವಿಧ ತಾಮಸರಿಗೆ ಫಲವು. ॥ ೨೮ ೨೯ ॥

ಟೀ—ಬುದ್ಧಿಯ ಭೇದವನ್ನು ೩ ಶ್ಲೋಕಗಳಿಂದ ಹೇಳುತ್ತಾರೆ—

ಗೀ ॥ ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।
ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಃ ಸಾ ಪಾರ್ಥ ಸಾತ್ತ್ವಿಕೀ ॥
॥ ೩೦ ॥

ಅ ॥ ಪಾರ್ಥ=ಅರ್ಜುನನೇ, ಪ್ರವೃತ್ತಿಂ ಚ=ಸಂಸಾರಕಾರಣವಾದ ಧರ್ಮವನ್ನೂ, ನಿವೃತ್ತಿಂ ಚ=ಸಂಸಾರ ನಿವೃತ್ತಿರೂಪವಾದ ಮೋಕ್ಷಕ್ಕೆ ಕಾರಣವಾದ ಧರ್ಮವನ್ನು, ಕಾರ್ಯಾಕಾರ್ಯೇ=ದೇಶ ಕಾಲಾದಿಗಳನ್ನು ವಿಚಾರಮಾಡುತ್ತಾ ಈ ಕರ್ಮವು ಕರ್ತವ್ಯವು, ಇದು ಅಕರ್ತವ್ಯವು, ಎಂಬೀ ಎರಡನ್ನೂ, ಭಯಾಭಯೇ=ಶಾಸ್ತ್ರವಿರುದ್ಧಾಚರಣದಿಂದುಂಟಾಗುವ ಭಯವನ್ನೂ ಶಾಸ್ತ್ರಗಳಲ್ಲಿ ವಿಹಿತಗಳಾದ ಸದಾಚಾರಗಳ ಅನುಷ್ಠಾನದಿಂದ ಅಭಯವನ್ನೂ, ಬಂಧಂ=ಸಂಸಾರ ಬಂಧವನ್ನೂ, ಮೋಕ್ಷಂ ಚ=ಸಂಸಾರ ವಿಮೋಚನರೂಪವಾದ ಮೋಕ್ಷವನ್ನೂ, ಯಾ ಬುದ್ಧಿಃ=ಯಾವ ಅಂತಃಕರಣವು ವೇತ್ತಿ=ಯಥಾರ್ಥವಾಗಿ ತಿಳಿಯುತ್ತದೋ, ಸಾ=ಆ ಬುದ್ಧಿಯು, ಸಾತ್ತ್ವಿಕೀ=ಸಾತ್ತ್ವಿಕ ಬುದ್ಧಿಯು (ಎಂದು ತಿಳಿಯಬೇಕು.) (ಯಾವ ಬುದ್ಧಿಯಿಂದ ತಿಳಿಯುತ್ತಾನೋ, ಪುರುಷನು, ಆ ಬುದ್ಧಿಯು ಸಾತ್ತ್ವಿಕಬುದ್ಧಿಯು) ॥ ೩೦ ॥

ಟೀ—ದೀರ್ಘಸೂತ್ರಿತ್ವವು ತಾಮಸತ್ವದಲ್ಲಿ ಕಾರಣವು ಹೇಗೆಂದರೆ—

ಭಾ ॥ (೧) ಪರಕೃತಂ ದೋಷಂ ದೀರ್ಘಕಾಲಕೃತಮಪ್ಯನುಚಿತಂ ಯಃ ಸೂಚಯತಿ ಸ ದೀರ್ಘಸೂತ್ರೀ ॥ (೨) ಪರೇಣ ಯಃ ಕೃತೋ ದೋಷೋ ದೀರ್ಘಕಾಲಕೃತೋಽಪಿ ವಾ । ಯಸ್ತಸ್ಯ ಸೂಚಕೋ ದೋಷಾದ್ದೀರ್ಘಸೂತ್ರೀ ಸ ಉಚ್ಯತ ಇತ್ಯಭಿಧಾನಾತ್ ॥ ೨೮,೨೯,೩೦ ॥

ಅ ॥ (೧) ಪರರು ಮಾಡಿರುವ ದೋಷವು ಬಹು ಹಿಂದಿನ ಕಾಲದಿಂದ ಮಾಡಲ್ಪಟ್ಟಾಗ್ಯೂ ಅದನ್ನು ಹೇಳಲನುಚಿತವಾದುದನ್ನು ಅಂದರೆ-ಪರರ ಉಪದ್ರವಕ್ಕೆ ಕಾರಣವಾಗಿರುವುದರಿಂದ ಹೇಳಲಯೋಗ್ಯವಾದುದನ್ನು ಯಾವನು ಸೂಚಿಸುತ್ತಾನೋ, ಆತನು ದೀರ್ಘಸೂತ್ರೀ ಎನಿಸುತ್ತಾನೆ. (೨) (ಆ ವಿಷಯದಲ್ಲಿ ಪ್ರಮಾಣವನ್ನು ಹೇಳುತ್ತಾರೆ-) ಪರರಿಂದ ಯಾವ ದೋಷವು ಮಾಡಲ್ಪಡುತ್ತದೋ ಯಾವ ದೋಷವು ಬಹು ಹಿಂದಿನ ಕಾಲದಿಂದ ಮಾಡಲ್ಪಟ್ಟಿದೆಯೋ, ಯಾವನು ಆ ದೋಷವನ್ನು ಮಾತ್ಸರ್ಯಾದಿ ದೋಷದಿಂದ ಇತರರಿಗೆ ಸೂಚಿಸುತ್ತಾನೋ, ಆತನು ದೀರ್ಘಸೂತ್ರೀ ಎನಿಸುತ್ತಾನೆ, ಎಂದು ಅಭಿಧಾನವು.
॥ ೨೮, ೨೯, ೩೦ ॥

ಪೀ—ರಾಜಸ ಬುದ್ಧಿಯನ್ನು ಹೇಳುತ್ತಾನೆ—

ಗೀ ॥ ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।
ಅಯಥಾವತ್ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ ॥ ೩೧ ॥

ಅ ॥ ಪಾರ್ಥ=ಅರ್ಜುನನೇ, ಯಯಾ=ಯಾವ ಬುದ್ಧಿಯಿಂದ, ಧರ್ಮಂ=ಧರ್ಮವನ್ನು, ಅಧರ್ಮಂ ಚ=ಅಧರ್ಮವನು, ಕಾರ್ಯಂ ಚ=ಕರ್ತವ್ಯ ಕರ್ಮವನ್ನು, ಅಕಾರ್ಯಮೇವ ಚ=ಅಕರ್ತವ್ಯವನ್ನು, ಅಯಥಾವತ್=ಕೆಲವನ್ನು ಯಥಾರ್ಥವನ್ನಾಗಿಯೂ ಕೆಲವನ್ನು ಅಯಥಾರ್ಥವನ್ನಾಗಿಯೂ, ಪ್ರಜಾನಾತಿ=ತಿಳಿದುಕೊಳ್ಳುತ್ತಾನೆಯೋ. ಸಾ ಬುದ್ಧಿಃ=ಯಥಾರ್ಥ್ಯನಿಯಮವಿಲ್ಲದಿರುವ, ಅಂತಹ ಬುದ್ಧಿಯು, ರಾಜಸೀ=ರಾಜಸೀ ಬುದ್ಧಿಯೆಂದು ಹೇಳಲ್ಪಡುತ್ತದೆ.

ಪೀ—ತಾಮಸ ಬುದ್ಧಿಯನ್ನು ಹೇಳುತ್ತಾನೆ—

ಗೀ ॥ ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾವೃತಾ ।
ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಃ ಸಾ ಪಾರ್ಥ ತಾಮಸೀ ॥ ೩೨ ॥

ಅ ॥ ಪಾರ್ಥ=ಅರ್ಜುನನೇ, ಯಾ=ಯಾವ ಬುದ್ಧಿಯು, ಅಧರ್ಮಂ ವಸ್ತುತಃ ಅಧರ್ಮವಾದುವನ್ನು, ಧರ್ಮಮಿತಿ=ಧರ್ಮವೆಂತೆಂದು, ಮನ್ಯತೇ=ತಿಳಿದುಕೊಳ್ಳುತ್ತದೋ (ಇಷ್ಟು ಮಾತ್ರವಲ್ಲದೆ) ತಮಸಾ=ಅಜ್ಞಾನದಿಂದ, ಆವೃತಾ ಸತೀ=ಕೂಡಿದುದಾಗಿ, ಸರ್ವಾರ್ಥಾನ್=ಎಲ್ಲಾ ಪದಾರ್ಥಗಳನ್ನು, ವಿಪರೀತಾಂಶ್ಚ=ವಸ್ತುತಃ ಇದ್ದ ರೀತಿಯಿಂದ ಬೇರೆ ರೀತಿಯಾರುವವುಗಳನ್ನಾಗಿ, (ಅಂದರೆ ಸತ್ಯವಾದುದನ್ನು ಮಿಥ್ಯ ಎಂತಲೂ, ಸ್ವೇಶ್ವರವಾದ ಜಗತ್ತನ್ನು ನಿಯಾಮಕನಾದ ಈಶ್ವರನು ಇಲ್ಲದಿರುವದನ್ನಾಗಿಯೂ, ಭಗವದಧೀನವಾದ ಜಗತ್ತನ್ನು ಅಪರಾಧೀನವಾದುದನ್ನಾಗಿಯೂ, ಸ್ಥಾಯಿಯಾದ ಜಗತ್ತನ್ನು ಕ್ಷಣಿಕವಾದುದನ್ನಾಗಿಯೂ ಇತ್ಯಾದಿಪ್ರಕಾರ) ಮನ್ಯತೇ=ತಿಳಿಯುತ್ತದೋ, ಸಾ=ಆ ಬುದ್ಧಿಯು, ತಾಮಸೀ=ತಾಮಸಬುದ್ಧಿಯು ॥ ೩೨ ॥

ಪೀ—ಪೂರ್ವದಲ್ಲಿ ಪ್ರತಿಜ್ಞಾತವಾದ ಧೃತಿಯು ಮೂರು ವಿಧನೆಂದು ಮೂರು ಶ್ಲೋಕಗಳಿಂದ ಹೇಳುತ್ತಾನೆ—

ಗೀ ॥ ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ ।
ಯೋಗೇನಾವ್ಯಭಿಚಾರಿಣ್ಯಾ ಧೃತಿಃ ಸಾ ಪಾರ್ಥ ಸಾತ್ತ್ವಿಕೀ ॥ ೩೩ ॥

ಅ ॥ ಯೋಗೇನ=ಮೋಕ್ಷಸಾಧನವಾದ ಭಗವದ್ಭಕ್ತಿರೂಪವಾದ ಧ್ಯಾನದಿಂದ ಕೂಡಿದ, ಅವ್ಯಭಿಚಾರಿಣ್ಯಾ=ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ವಸ್ತುಗಳನ್ನು ವಿಷಯೀಕರಿಸುವ. ಯಯಾ ಧೃತ್ಯಾ=ಯಾವ ಧೈರ್ಯದಿಂದ, ಮನಃಪ್ರಾಣೇಂದ್ರಿಯಕ್ರಿಯಾಃ=ಮನಸ್ಸು, ಪ್ರಾಣವೂ, ಇಂದ್ರಿಯವೂ ಇವುಗಳ ಕ್ರಿಯೆಗಳನ್ನು ಧಾರಯತೇ=ಧರಿಸುತ್ತಾನೆಯೋ, ಸಾ ಧೃತಿಃ=ಆ ಧೈರ್ಯವು; ಸಾತ್ತ್ವಿಕೀ=ಸಾತ್ತ್ವಿಕವಾದುದು. ॥ ೩೩ ॥

ಗೀ ॥ ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।
ಪ್ರಸಂಗೇನ ಫಲಾಕಾಂಕ್ಷೀ ಧೃತಿಃ ಸಾ ಪಾರ್ಥ ರಾಜಸೀ ॥ ೩೪ ॥

ಅ ॥ ಅರ್ಜುನ=ಅರ್ಜುನನೇ, ಯಯಾ ಧೃತ್ಯಾ=ಯಾವ ಧೈರ್ಯದಿಂದ ಧರ್ಮಕಾಮಾರ್ಥಾನ್=ಧರ್ಮವು, ಕಾಮವು, ಅರ್ಥವೂ ಇವುಗಳನ್ನು ಧಾರಯತೇ=ಧರಿಸುತ್ತಾನೆಯೋ, ಪ್ರಸಂಗೇನ=ಇದು ನನ್ನದು ಎಂದು ಕರ್ಮದಲ್ಲಿ ಪ್ರಕೃಷ್ಟವಾದ ಅಭಿಮಾನ ವಿಶೇಷದಿಂದ ಫಲಾಕಾಂಕ್ಷೀ=ಫಲವನ್ನು ಅಪೇಕ್ಷಿಸುತ್ತಾನೆಯೋ, ಸಾ ಧೃತಿಃ=ಆ ಧೈರ್ಯವು, ರಾಜಸೀ=ರಾಜಸವಾದುದು. ॥ ೩೪ ॥

ಗೀ ॥ ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವ ಚ ।
ನ ವಿಮುಂಚತಿ ದುರ್ಮೇಧಾ ಧೃತಿಃ ಸಾ ಪಾರ್ಥ ತಾಮಸೀ ॥ ೩೫ ॥

ಅ ॥ ದುರ್ಮೇಧಾಃ=ದುರ್ಬುದ್ಧಿಯುಳ್ಳ ಮನುಷ್ಯನು, ಯಯಾ=ಯಾವ ಧೃತಿಯಿಂದ, ಸ್ವಪ್ನಂ=ಅತ್ಯಂತ ನಿದ್ರೆಯನ್ನು, ಭಯಂ=ಭಯವನ್ನು, ಶೋಕಂ=ದುಃಖವನ್ನು, ವಿಷಾದಂ=ಮನಸ್ಸಿನ ದೌರ್ಬಲ್ಯವನ್ನು, ಮದಮೇವ ಚ=ಗರ್ವವನ್ನೂ (ಅಂದರೆ ಸ್ವಪ್ನ ಮೊದಲಾದ ನಿಷಿದ್ಧವಾದುದೆಲ್ಲವನ್ನು ಭಗವದ್ದ್ವೇಷಾದಿಗಳನ್ನು) ನ ವಿಮುಂಚತಿ=ಬಿಡುವುದಿಲ್ಲವೋ, ಸಾ ಧೃತಿಃ=ಆ ಧೈರ್ಯವು, ತಾಮಸೀ=ತಾಮಸ ಧೃತಿಯೇ. ॥ ೩೫ ॥

ಟೀ—ಇಲ್ಲಿಯವರೆಗೆ ಸುಖಕ್ಕಾಗಿ ಜ್ಞಾನಕರ್ಮಾದಿಗಳು ಹೇಳಲ್ಪಟ್ಟವೆ. ಈಗ ಸುಖವು ಗುಣತ್ರಯಯುಕ್ತವಾಗಿ ಮೂರು ವಿಧವೆನ್ನುತ್ತಾರೆ—

ಗೀ ॥ ಸುಖಂ ತ್ವಿದಾನೀಂ ತ್ರಿವಿಧಂ ಶೃಣು ಮೇ ಭರತರ್ಷಭ ।
ಅಭ್ಯಾಸಾದ್ರಮತೇ ಯತ್ರ ದುಃಖಾಂತಂ ಚ ನಿಗಚ್ಛತಿ ॥ ೩೬ ॥

ಅ ॥ ಭರತರ್ಷಭ=ಅರ್ಜುನನೇ, ಯತ್ರ=ಯಾವ ಸುಖದಲ್ಲಿ, ಅಭ್ಯಾಸಾತ್=ಬಹುಕಾಲದ ಅಭ್ಯಾಸದಿಂದ, ರಮತೇ=(ಪುರುಷನು) ಪುನಃಪುನಃ ಕ್ರೀಡಿಸುತ್ತಾನೆಯೋ, ದುಃಖಾಂತಂ=ದುಃಖನಾಶವನ್ನು ನಿಗಚ್ಛತಿ=ಅತ್ಯಂತ ಹೊಂದುತ್ತಾನೆಯೋ, ತತ್ಸುಖಂ ತು=ಅಂತಹ ಸುಖವನ್ನಾದರೂ, ತ್ರಿವಿಧಂ=ಮೂರು ವಿಧವಾದುದನ್ನಾಗಿಯೇ, ಇದಾನೀಂ=ಈಗ, ಮೇ=ನನ್ನಿಂದ, ಶೃಣು=ಕೇಳು. ॥ ೩೬ ॥

ಟೀ—ಪ್ರವೃತ್ತಿಂ (ಶ್ಲೋ ೩೦) ಇತ್ಯಾದಿ ಶ್ಲೋಕಗಳಿಂದ ಬುದ್ಧಿಯ ಭೇದವನ್ನು ಹೇಳುತ್ತಾರೆ. ಅದರಲ್ಲಿ ಯಯಾ ಧರ್ಮಮಧರ್ಮಂ (ಶ್ಲೋ. ೩೧) ಎಂದು ಹೇಳಿದ ಬುದ್ಧಿಗಳು ಒಂದೇ ಪ್ರಕಾರವಾಗಿರುವುದರಿಂದ ಆ ಬುದ್ಧಿಗಳಿಗೆ ರಾಜಸತ್ವ ತಾಮಸತ್ವಗಳು ಹೇಗೆ? ಎಂದರೆ—

ಶಾ ॥ (೧) ಕಿಂಚಿದ್ಧರ್ಮಾಧರ್ಮಾದೀನಯಥಾವಚ್ಚ ಪಶ್ಯತಿ । ಯಯಾ ಬುದ್ಧ್ಯಾ ರಾಜಸೀ ಸಾ ಮಿಥ್ಯಾದೃಕ್ತ್ವೇವ ತಾಮಸೀತಿ ಚ ॥ (೨) ವೈಷ್ಣವೋ ಭಕ್ತಿಯೋಗೋ ಯಸ್ತದ್ಯುಕ್ತಾ ಸಾತ್ವಿಕೀ ಧೃತಿರಿತಿ ಚ ॥ (೩) ವಿಹಿತವಿಷಯೈವೇತ್ಯವ್ಯಭಿಚಾರಿಣೀ । ಸ್ವಪ್ನಂ ಭಯಮಿತ್ಯಾದಿ ಸರ್ವನಿಷಿದ್ಧೋಪಲಕ್ಷಣಂ ॥ (೪) ತತ್ರತ್ಸಾತ್ವಿಕಮೇವ ಸ್ಯಾದ್ಯದ್ಯದ್ವೃದ್ಧಾಃ ಪ್ರಚಕ್ಷತೇ । ನಿಂದಂತಿ ತಾಮಸಂ ತತ್ರದ್ರಾಜಸಂ ತದುಪೇಕ್ಷಿತಮಿತಿ ಭಾಗವತೇ । ಮಹಾತ್ಮಾನಸ್ತು ಮಾಂ ಪಾರ್ಥ । ಅಭಯಂ ಸತ್ತ್ವಸಂಶುದ್ಧಿರಿತ್ಯಾದಿನಾ ವೃದ್ಧಾಃ ಶ್ಚೋಕ್ತಾಃ ॥ ೩೦–೩೬ ॥

ಅ ॥ (೧) ಧರ್ಮ ಅಧರ್ಮಾದಿಗಳನ್ನು ಸ್ವಲ್ಪ ಯಥಾರ್ಥಗಳನ್ನಾಗಿಯೂ, ಸ್ವಲ್ಪ ಅಯಥಾರ್ಥಗಳನ್ನಾಗಿಯೂ ಯಾವ ಬುದ್ಧಿಯಿಂದ ತಿಳಿಯುತ್ತಾನೋ ಆ ಬುದ್ಧಿಯು ರಾಜಸಬುದ್ಧಿಯು. ಧರ್ಮಾದಿಗಳನ್ನು ಮಿಥ್ಯಾ ಭೂತಗಳನ್ನಾಗಿ ತಿಳಿದರೆ ಆ ಬುದ್ಧಿಯು ತಾಮಸಬುದ್ಧಿಯು. (೨) (ಯೋಗೇನ ಶ್ಲೋ. ೩೩ ಎಂಬುದಕ್ಕೆ ಉಪಾಯಬಲದಿಂದ ಎಂದು ಅಲ್ಪಾರ್ಥತ್ವಪ್ರತೀತಿಯನ್ನು ಹೋಗಲಾಡಿಸುತ್ತಾರೆ-) ವಿಷ್ಣುವಿಷಯಕವಾದ ಭಕ್ತಿಯೋಗವು ಯೋಗವೆನಿಸುತ್ತದೆ ಅಂತಹ ಯೋಗದಿಂದೊಡಗೂಡಿದ ಧೃತಿಯು ಸಾತ್ವಿಕಧೃತಿಯು (೩ ಸಾತ್ವಿಕಧೃತಿಯೇ ಶಾಸ್ತ್ರಗಳಲ್ಲಿ ವಿಹಿತಗಳಾದ ಸದಾಚಾರ ವಿಷಯಕವಾದರೆ ಅವ್ಯಭಿಚಾರಿಣಿಯಾಗುತ್ತದೆ ಸ್ವಪ್ನಂ ಭಯಂ (೩೫ನೇ ಶ್ಲೋಕದಲ್ಲಿದ್ದ) ಇತ್ಯಾದಿ ಶಬ್ದಗಳಿಂದ ಶಾಸ್ತ್ರನಿಷಿದ್ಧಗಳಾದ ಭಗವದ್ದ್ವೇಷವೊದಲಾದವುಗಳನ್ನು ಎಲ್ಲಾ ಇಟ್ಟುಕೊಳ್ಳಬೇಕು (೪) ಜ್ಞಾನವೃದ್ಧರು ಯಾವುದು ಯಾವುದನ್ನು ಯೋಗ್ಯವೆಂದು ಹೇಳುತ್ತಾರೋ ಅದದು ಸಾತ್ವಿಕವೇ ಆಗುವದು. ವೃದ್ಧರು ಯಾವುದನ್ನು ನಿಂದಿಸುತ್ತಾರೋ, ಅದು ತಾಮಸವು ವೃದ್ಧರು ಉದಾಸೀನಭಾವದಿಂದ ಉಪೇಕ್ಷಿಸಿದ್ದು ರಾಜಸವೆನಿಸತ್ತದೆ, ಎಂದು ಭಾಗವತದಲ್ಲಿದೆ ಮಹಾತ್ಮಾನಸ್ತು ಮಾಂ ಪಾರ್ಥ, ಅಭಯಂ ಸತ್ವಸಂಶುದ್ಧಿಃ ಇತ್ಯಾದಿಗಳಲ್ಲಿ ಹೇಳಿದ ಗುಣಗಳು ಇದ್ದು ಶ್ರೀಪರಮಾತ್ಮನನ್ನು ಭಜಿಸುವವರೇ ವೃದ್ಧರೆಂದು ಹೇಳಲ್ಪಟ್ಟಿರುತ್ತಾರೆ. ॥ ೩೦-೩೬ ॥

ಪೀ — ಸಾತ್ವಿಕ ಸುಖವನ್ನು ಹೇಳುತ್ತಾನೆ

ಗೀ ॥ ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಂ ।
ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಂ ॥ ೩೭ ॥

ಅ ॥ ಯತ್ ಸುಖಂ=ಯಾವ ಪ್ರಸಿದ್ಧವಾದ ಧ್ಯಾನಾದಿಜನ್ಯ ಸುಖವು, ಅಗ್ರೇ=ಮೊದಲು, ವಿಷಮಿವ=ಅಭ್ಯಾಸವಿಲ್ಲದೆ ದುಃಖರೂಪವಾಗಿ ವಿಷದಂತೆ ಇರುತ್ತದೋ, ಪರಿಣಾಮೇ=ಕೊನೆಗೆ ಅಮೃತೋಪಮಂ ಕ್ರಮದಿಂದ ಸುಖರೂಪವಾಗಿ ಅಮೃತಕ್ಕೆ ಸದೃಶವಾದುದೋ, ಆತ್ಮಬುದ್ಧಿಪ್ರಸಾದಜಂ=ಶ್ರೀವಿಷ್ಣುವಿನ ಅನುಗ್ರಹದಿಂದುಂಟಾದ ಮತ್ತು ಬುದ್ಧಿಯ ಪ್ರಸಾದದಿಂದ (ಅಂದರೆ ಬುದ್ಧಿಯು ಸ್ವತಃ ಅಯೋಗ್ಯ ವಿಷಯಗಳಲ್ಲಿ ಹೋಗದಿರುವುದರಿಂದ) ಉಂಟಾದುದೋ, ತತ್ಸುಖಂ=ಅಂತಹ ಸುಖವು, ಸಾತ್ವಿಕಂ ಪ್ರೋಕ್ತಂ ಸಾತ್ವಿಕ ಸುಖವೆಂದು ಹೇಳಲ್ಪಟ್ಟಿರುತ್ತದೆ. ॥ ೩೭ ॥

ಪೀ — ರಾಜಸ ಸುಖವನ್ನು ಹೇಳುತ್ತಾನೆ —

ಗೀ ॥ ವಿಷಯೇಂದ್ರಿಯಸಂಯೋಗಾದ್ಯತ್ತದಗ್ರೇಽಮೃತೋಪಮಂ ।
ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಂ ॥ ೩೮ ॥

ಅ ॥ ವಿಷಯೇಂದ್ರಿಯಸಂಯೋಗಾತ್=ಶಬ್ದ ಸ್ಪರ್ಶ ಮೊದಲಾದ ವಿಷಯಗಳಿಗೆ ಶ್ರೋತ್ರ ಮೊದಲಾದ ಇಂದ್ರಿಯಗಳ ಸಂಬಂಧದಿಂದ ಹುಟ್ಟಿದ, ವಿಷಯಾನುಭವದಿಂದ ಹುಟ್ಟಿದ, ತದ್ಯತ್=ಪ್ರಸಿದ್ಧವಾದ ಯಾವ ಸುಖವು, ಅಗ್ರೇ=ಪ್ರಥಮದಲ್ಲಿ, ಅಮೃತೋಪಮಂ=ಅಮೃತಕ್ಕೆ ಸದೃಶವೋ, ಪರಿಣಾಮೇ=ಕೊನೆಗೆ, ವಿಷಮಿವ=ದುಃಖವನ್ನುಂಟುಮಾಡುವುದರಿಂದ ವಿಷಕ್ಕೆ ಸದೃಶವಾಗಿಯದೋ, ತತ್ಸುಖಂ=ಆ ಸುಖವು, ರಾಜಸಂ=ರಾಜಸವೆಂದು, ಸ್ಮೃತಂ=ಹೇಳಲ್ಪಟ್ಟಿದೆ ॥ ೩೮ ॥

ಪೀ—ತಾಮಸ ಸುಖವನ್ನು ಹೇಳುತ್ತಾನೆ—

ಗೀ ॥ ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।
ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಮ್ ॥ ೩೯ ॥

ಅ ॥ ಯತ್ ಸುಖಂ=ಯಾವ ಸುಖವು, ಅಗ್ರೇ ಚ=ಆರಂಭದಲ್ಲಿಯೂ, ಅನುಬಂಧೇ ಚ=ಅಂತ್ಯದಲ್ಲಿಯೂ, ಆತ್ಮನಃ=ತನಗೆ, ಮೋಹನಂ=ಮೋಹಕವಾದುದೋ, ತನಗೆ ಪರಾಧೀನತ್ವವನ್ನು ತಂದುಕೊಡುತ್ತದೋ, ಮತ್ತು ನಿದ್ರಾಲಸ್ಯಪ್ರಮಾದೋತ್ಥಂ=ನಿದ್ರಾ=ಗಾಢ ನಿದ್ರೆಯೂ ಆಲಸ್ಯ=ಇಂದ್ರಿಯ ವ್ಯಾಪಾರ, ಶರೀರ ಮಾಂದ್ಯ, ಪ್ರಮಾದ=ಅಧರ್ಮ ಬುದ್ಧಿ, ಇವುಗಳಿಂದ, ಉತ್ಥಂ=ಹುಟ್ಟಿದುದೋ, ತತ್=ಅಂತಹ ಸುಖವು, ತಾಮಸಂ=ತಾಮಸವೆಂದು, ಉದಾಹೃತಂ=ಹೇಳಲ್ಪಟ್ಟಿದೆ. ॥ ೩೯ ॥

ಪೀ—ಆತ್ಮಬುದ್ಧಿಪ್ರಸಾದಜಂ(ಶ್ಲೋ ೩೭)ಎಂಬುವುದಕ್ಕೆ ತನ್ನ ಮನಸ್ಸಿನ ಪ್ರಸಾದದಿಂದ ಹುಟ್ಟಿದ್ದು ಎಂಬೀ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಸ್ಮೃತಿಪ್ರಮಾಣದಿಂದಲೇ ಅರ್ಥವನ್ನು ಹೇಳುತ್ತಾರೆ—

ತಾ ॥ ವಿಷ್ಣೋಃ ಪ್ರಸಾದಾತ್ಸ್ವಮನಃಪ್ರಸಾದಾತ್ಸಾತ್ತ್ವಿಕಂ ಸುಖಮಿತಿ ಪಾದ್ಮೇ॥೩೭-೩೯॥

ಅ ॥ ಶ್ರೀವಿಷ್ಣುವಿನ ಅನುಗ್ರಹದಿಂದ ಹುಟ್ಟಿದ ಮತ್ತು ತನ್ನ ಮನಸ್ಸಿನ ಪ್ರಸಾದದಿಂದಲೇ ಹುಟ್ಟಿದ ಸಾತ್ವಿಕ ಸುಖವೆನ್ನಿಸುತ್ತದೆ ಎಂದು ಪಾದ್ಮದಲ್ಲಿದೆ. ಮನಃಪ್ರಸಾದವೆಂದರೆ ತನ್ನ ಪ್ರಯತ್ನವಿಲ್ಲದಿದ್ದರೂ ವಿಷಯಗಳ ಕಡೆಗೆ ಮನಸ್ಸು ಹೋಗದಿರುವುದು. ॥ ೩೭, ೩೮, ೩೯ ॥

ಪೀ—ಸಮಸ್ತ ಜೀವರೂ ಸತ್ವರಜಸ್ತಮೋಗುಣಗಳಿಂದ ಬದ್ಧರಾಗಿರುವುದರಿಂದ ಮೂರು ವಿಧರಾಗಿರುತ್ತಾರೆನ್ನುತ್ತಾರೆ—

ಗೀ ॥ ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।
ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಃ ಸ್ಯಾತ್ತ್ರಿಭಿರ್ಗುಣೈಃ ॥ ೪೦ ॥

ಅ ॥ ಯತ್ಸತ್ವಂ=ಯಾವ ಜೀವರ ಸಮುದಾಯವು, ಪ್ರಕೃತಿಜೈಃ=ಪ್ರಕೃತಿತತ್ವದಿಂದ ಹುಟ್ಟಿರುವ ಏಭಿಃ ತ್ರಿಭಿಃ ಗುಣೈಃ=ಈ ಸತ್ವರಜಸ್ತಮೋ ಮೂರು ಗುಣಗಳಿಂದ, ಮುಕ್ತಂ=ಬಿಡಲ್ಪಟ್ಟಿದ್ದು, ಸ್ಯಾತ್ ಆಗುವುದೋ, ತತ್=ಅಂತಹ ಜೀವರ ಸಮುದಾಯವು, ಪೃಥಿವ್ಯಾಂ=ಭೂಲೋಕದಲ್ಲಿದ್ದ ಮನುಷ್ಯರಲ್ಲೇ ಆಗಲೀ, ದಿವಿ=ಸ್ವರ್ಗಲೋಕದಲ್ಲಿರುವ, ದೇವೇಷು ವಾ=ದೇವತೆಗಳಲ್ಲಿ ಆಗಲೀ,(ದೈತ್ಯಾದಿಗಳಲ್ಲಿ ಆಗಲೀ) ನ ಪುನಃ ಅಸ್ತಿ=ಇಲ್ಲವೇ ಇಲ್ಲ (ಅಂತಹ ಸತ್ವರಜಸ್ತಮೋಗುಣಗಳಿಂದ ಮುಕ್ತರಾದವರು ಯಾರೂ ಇಲ್ಲವೇ ಇಲ್ಲ)

ವಿ ॥ (1) ಜೀವರು ಸಾತ್ತ್ವಿಕ, ರಾಜಸ, ತಾಮಸರೆಂದು ಮೂರು ವಿಧರು. ಆ ಸಾತ್ತ್ವಿಕಾದಿಗಳೂ ಪ್ರತಿಯೊಬ್ಬರೂ ಮೂರುಮೂರು ವಿಧರು. ಅವರಲ್ಲಿ ಪಿತೃ ಗಂಧರ್ವ ಮೊದಲಾದವರು ಸಾತ್ತ್ವಿಕತಾಮಸರು. ಋಷಿಗಳು ಸಾತ್ತ್ವಿಕರಾಜಸರು. ದೇವತೆಗಳು ಸಾತ್ತ್ವಿಕಸಾತ್ತ್ವಿಕರು. ಸಾತ್ತ್ವಿಕಸಾತ್ತ್ವಿಕರಲ್ಲಿಯೂ ಬೃಹಸ್ಪತ್ಯಾದಿಗಳು ಸಾತ್ತ್ವಿಕಸಾತ್ತ್ವಿಕ ತಾಮಸರು. ಇಂದ್ರನು ಸಾತ್ತ್ವಿಕ-ಸಾತ್ತ್ವಿಕ ರಾಜಸನು, ಚತುರ್ಮುಖನನ್ನಾರಂಭಿಸಿ ಇಷ್ಟ ಪರ್ಯಂತರಾದವರು ಸಾತ್ತ್ವಿಕ-ಸಾತ್ತ್ವಿಕ ಸಾತ್ತ್ವಿಕರು. ಅವರಲ್ಲಿ ರುದ್ರನು ಸಾತ್ತ್ವಿಕ ಸಾತ್ತ್ವಿಕ ಸಾತ್ತ್ವಿಕ ತಾಮಸನು. ಸರಸ್ವತೀ ಭಾರತೀಯರು ಸಾತ್ತ್ವಿಕಸಾತ್ತ್ವಿಕಸಾತ್ತ್ವಿಕ ರಾಜಸರು. ಬ್ರಹ್ಮ ವಾಯುಗಳು ಸಾತ್ತ್ವಿಕಸಾತ್ತ್ವಿಕ ಸಾತ್ತ್ವಿಕ ಸಾತ್ತ್ವಿಕರು. (2) ಮಧ್ಯಮೋತ್ತಮ ಮನುಷ್ಯರೂ ರಾಜಸರು. ಅವರೂ ಪ್ರತ್ಯೇಕ ತ್ರಿವಿಧರು. ಅವರಲ್ಲಿ ಬ್ರಾಹ್ಮಣರನ್ನಾರಂಭಿಸಿ ಶೂದ್ರರ ಪರ್ಯಂತರಾದ ಭಗವದ್ಭಕ್ತರೆಲ್ಲರೂ ರಾಜಸ ಸಾತ್ತ್ವಿಕರು. ರಾಜಸ ಸಾತ್ತ್ವಿಕರಲ್ಲಿಯೂ ಬ್ರಾಹ್ಮಣರು ರಾಜಸ ಸಾತ್ತ್ವಿಕ ಸಾತ್ತ್ವಿಕರು. ಕ್ಷತ್ರಿಯರು ಸ್ವಲ್ಪ ರಜೋಗುಣದಿಂದ ಯುಕ್ತರಾದುದರಿಂದ ರಾಜಸರಾಜಸ ಸಾತ್ತ್ವಿಕರು. ವೈಶ್ಯರು ಸಮಗಳಾದ ಸತ್ತ್ವ ರಜೋಗುಣಗಳಿಂದ ಕೂಡಿರುವುದರಿಂದ ರಾಜಸರಾಜಸ ಸಾತ್ತ್ವಿಕರು. ಶೂದ್ರರು ಅಲ್ಪತಮೋಗುಣದಿಂದಲೂ ಹೆಚ್ಚು ರಜೋಗುಣದಿಂದಲೂ ಕೂಡಿರುವುದರಿಂದ ತಾಮಸ ರಾಜಸ ಸಾತ್ತ್ವಿಕರು. (3) ರಾಜಸ ಸಾತ್ತ್ವಿಕಸಾತ್ತ್ವಿಕ ಬ್ರಾಹ್ಮಣರಲ್ಲಿಯೂ (೧) ಶುದ್ಧ ಸತ್ತ್ವಗುಣ ಇರುವವರು ಪರಮಹಂಸರು ಅಂದರೆ ಶಿಖಾ ಯಜ್ಞೋಪವೀತಗಳಿಲ್ಲದೆ ಒಂದು ದಂಡವುಳ್ಳವರು. (೨) ಅಲ್ಪ ರಜೋಗುಣದಿಂದ ಕೂಡಿದ ಸತ್ತ್ವಗುಣವುಳ್ಳವರು ಹಂಸರು. ಅಂದರೆ ಯಜ್ಞೋಪವೀತವುಳ್ಳವರು ಒಂದು ದಂಡವುಳ್ಳವರು ಶಿಖಾವಿರಹಿತರು. (೩) ಅವರಿಗಿಂತ ಹೆಚ್ಚು ರಜೋಗುಣದಿಂದ ಕೂಡಿದ ಸತ್ತ್ವಗುಣವುಳ್ಳವರು. ಮೂರು ದಂಡವುಳ್ಳವರು. ಶಿಖಾಯಜ್ಞೋಪವೀತವಿರುವವರು. ಒಂದು ಗ್ರಾಮದಲ್ಲಿ ಒಂದು ದಿನಮಾತ್ರ ಇರುವವರು. ಇಂತಹವರು ಬಹೂದಕರೆನಿಸುತ್ತಾರೆ. (೪) ಅವರಿಗಿಂತಲೂ ಹೆಚ್ಚು ರಜೋಗುಣದಿಂದ ಕೂಡಿದ ಸತ್ತ್ವಗುಣವುಳ್ಳವರು. ಮೂರುದಂಡವುಳ್ಳವರು. ಶಿಖಾಯಜ್ಞೋಪವೀತವುಳ್ಳವರು. ಜೀವಿಸಿಕೊಂಡಿರುವ ಪರ್ಯಂತವೂ ಮಕ್ಕಳು ಕೊಟ್ಟಿದ್ದನ್ನೇ ಉಣ್ಣುತ್ತಿರುವವರು. ಇಂತಹವರು ಕುಟೀಚಕರು. (೫) ತಾಮಸರೂ ಕೂಡಾ ಸಾತ್ತ್ವಿಕಾದಿ ಭೇದದಿಂದ ಮೂರುವಿಧರು. ಅದರಲ್ಲಿ ಮನುಷ್ಯಾಧಮರು ಸಾತ್ತ್ವಿಕತಾಮಸರು. ದೈತ್ಯರಾಕ್ಷಸರು ರಾಜಸ ತಾಮಸರು. ಮಹಾದೈತ್ಯರು ತಾಮಸತಾಮಸರು. ॥ ೪೦ ॥

ಟೀ—ಜೀವರೆಲ್ಲರೂ ಹಿಂದೆ ಹೇಳಿದ ಪ್ರಕಾರ ಸತ್ತ್ವರಜಸ್ತಮೋಗುಣಬದ್ಧರೇ ಆಗಿರುತ್ತಾರೆ. ಆದರೆ ಸಂಸಾರ ಬಂಧಕವಾದ ಕರ್ಮವನ್ನು ಮಾಡುತ್ತಿರುವುದರಿಂದ ಮೋಕ್ಷವು ಹೇಗಾಗುವುದೆಂದರೆ—ಮೋಕ್ಷಸಾಧಕವಾದ ಕರ್ಮಗಳು ಜಾತ್ಯಾದಿಭೇದದಿಂದ ಬೇರೆಬೇರೆಯೇ ಆಗಿವೆ. ಅವರವರಿಗೆ ವಿಹಿತಗಳಾದ ಕರ್ಮಗಳಿಂದ ಜ್ಞಾನದ್ವಾರಾ ಮೋಕ್ಷವು ಆಗುವುದೆಂದು ಹೇಳುವುದಕ್ಕಾಗಿ ಬ್ರಾಹ್ಮಣಾದ್ಯಧಿಕಾರಿಗಳ ಗುಣಕೃತ ಕರ್ಮಗಳು ಭಿನ್ನಭಿನ್ನಗಳಾಗಿವೆ. ಎಂದು ಹೇಳುತ್ತಾರೆ—

ಮೂ ॥ ಬ್ರಾಹ್ಮಣಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।
ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವಪ್ರಭವೈರ್ಗುಣೈಃ ॥ ೪೧ ॥

ಅ ॥ ಪರಂತಪ—ಅರ್ಜುನನೇ, ಬ್ರಾಹ್ಮಣಕ್ಷತ್ರಿಯವಿಶಾಂ—ಬ್ರಾಹ್ಮಣರು ಕ್ಷತ್ರಿಯರು ವೈಶ್ಯರು, ಇವರ, ಮತ್ತು ಶೂದ್ರಾಣಾಂ ಚ—ಶೂದ್ರರ, ಕರ್ಮಾಣಿ—ಶಾಸ್ತ್ರವಿಹಿತಗಳಾದ ಕರ್ಮಗಳು, ಸ್ವಭಾವಪ್ರಭವೈಃ—ಬ್ರಾಹ್ಮಣಾದಿ ತತ್ತತ್ಸ್ವಭಾವವನ್ನು ಅನುಸರಿಸುವ, ಗುಣೈಃ—ಸತ್ತ್ವಾದಿಗುಣಗಳಿಂದ, ಪ್ರವಿಭಕ್ತಾನಿ—ಭಿನ್ನಭಿನ್ನಗಳಾಗಿರುತ್ತವೆ (ಅವುಗಳನ್ನು ನಾನು ಹೇಳುತ್ತೇನೆ, ಕೇಳು) ॥ ೪೧ ॥

ಟೀ— ನ ತದಸ್ತಿ (ಶ್ಲೋ. ೪೦) ಎಂಬುವ ಶ್ಲೋಕದಿಂದ ಸಮಸ್ತಜೀವರಿಗೂ ಗುಣತಃ ತ್ರೈವಿಧ್ಯವನ್ನು ಹೇಳುತ್ತಾರೆ. ಅವರಲ್ಲಿ ಸತ್ವವು ಗುಣವಿಶೇಷವಾದುದರಿಂದ ಅದಕ್ಕೆ ಗುಣಬದ್ಧತ್ವವನ್ನು ಹೇಗೆ ಹೇಳುವುದೆಂದರೆ—

ತಾ ॥ (೧) ಸತ್ವಂ ಜೀವಜಾತಂ ॥ (೨) ಮುಕ್ತಾನಾಂ ಗುಣಾತೀತತ್ವಾತ್ಪೃಥಿವ್ಯಾಂ ದಿವಿ ದೇವೇಷು ಚೇ(ವೇ)ತಿ ವಿಶೇಷಃ ॥ (೩) ಯಥೇಷ್ಟಂ ಸಂಚರಂತೋಽಪಿ ಮುಕ್ತಾ ಭೂಮ್ಯಾದಿಗಾ ನ ತು । ಗ್ರಾಮಸ್ಥಾ ಅಪಿ ನ ಗ್ರಾಮ್ಯಾ ವೈಲಕ್ಷಣ್ಯಾದ್ಧಿ ಸಜ್ಜನಾಃ ॥ (೪) ನರಾಧಮಾಸ್ತಾಮಸೇಷು ಸಾತ್ವಿಕಾಸ್ತತ್ರ ರಾಜಸಾಃ । ದೈತ್ಯಭೃತ್ಯಾ ಮಹಾದೈತ್ಯಾ ಮುಖ್ಯತಾಮಸತಾಮಸಾಃ ॥ (೫) ರಾಜಸಾಸ್ತು ನರಾಸ್ತತ್ರ ವಿಪ್ರಾ ರಾಜಸ(ರಜಸಿ)ಸಾತ್ವಿಕಾಃ ॥ ೧ ॥

ಅ ॥ (೧) ಸತ್ವಂ— ಜೀವರ ಸಮುದಾಯವು. (೨) (ಗುಣಾತೀತವಾದ ಸತ್ವವು ಇಲ್ಲವೆಂಬುದರಿಂದಲೇ ಪೂರ್ಣವಾಗಿರುವುದರಿಂದ ಪೃಥಿವ್ಯಾಂ ದಿವಿ ಎಂದು ವಿಶೇಷೋಕ್ತಿಯು ಏಕೆ ಎಂದರೆ-) ಮುಕ್ತರು ಗುಣಬದ್ಧರಾಗದಿರುವುದರಿಂದ ಗುಣಾತೀತವಾದ ಸತ್ವವಿಲ್ಲ ಎಂದು ಹೇಳಿದರೆ ಮುಕ್ತರಿಗೂ ಗುಣಬದ್ಧತ್ವವು ಬರಬೇಕಾಗಿರುವುದರಿಂದ ಮುಕ್ತರಿಗೆ ಗುಣಬದ್ಧತ್ವವು ಇಲ್ಲವೆಂದು ತೋರಿಸುವುದಕ್ಕಾಗಿ ಪೃಥಿವ್ಯಾಂ ದಿವಿ ಇತ್ಯಾದಿ ವಿಶೇಷೋಕ್ತಿಯು ಕೂಡುತ್ತದೆ. (೩) (ಇಮಾಂಲ್ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್ ಇತ್ಯಾದಿ ಪ್ರಮಾಣಗಳಿಂದ ಮುಕ್ತರೂ ಭೂಮಿ ಮೊದಲಾದವುಗಳಲ್ಲಿ ಸಂಚರಿಸುವುದರಿಂದ ಮುಕ್ತರಿಗೆ ಗುಣಬದ್ಧತ್ವವಿದೆ ಎಂಬುವುದು ಹೇಗೆ? ಎಂದರೆ-) ಮುಕ್ತರು ಯಥೇಷ್ಟವಾಗಿ ಭೂಮಿಯನ್ನು ಸಂಚರಿಸುತ್ತಾ ಇದ್ದರೂ (ಭೂಮಿಯಲ್ಲಿದ್ದ ದೋಷಸಂಬಂಧವಿಲ್ಲದಿರುವುದರಿಂದ) ಭೂಮ್ಯಾದಿಗಳಲ್ಲಿ ಇರುವವರು ಎಂದೆನ್ನಿಸಿಕೊಳ್ಳುವುದಿಲ್ಲ ಹೇಗೆಂದರೆ ಸಜ್ಜನರು ಗ್ರಾಮದಲ್ಲಿರತಕ್ಕವರಾದಾಗ್ಯೂ ದುರ್ಜನರಿಗಿಂತ ವಿಲಕ್ಷಣರಾಗಿರುವುದರಿಂದ ಗ್ರಾಮ್ಯರೆಂದನ್ನಿಸಿಕೊಳ್ಳುವುದಿಲ್ಲ. (ಎವಂಚ ಭೂಮ್ಯಾದಿಗಳಲ್ಲಿರುವವರೇ ಗುಣಬದ್ಧರು. ಮುಕ್ತರಲ್ಲ. (೪) (ಅಮುಕ್ತರು ಗುಣಬದ್ಧರು ಹೇಗೆಂದರೆ) (ಸಾತ್ವಿಕ, ರಾಜಸ, ತಾಮಸರು ಎಂದು ಜೀವರು ಮೂರು ವಿಧರು ಆ ಜೀವರಲ್ಲಿ ತಾಮಸರು ಮೂರು ವಿಧರು ಎನ್ನುತ್ತಾರೆ-) ತಾಮಸರಲ್ಲಿ ನರಾಧಮರು ಸಾತ್ವಿಕರು. ಆ ತಾಮಸರಲ್ಲಿ ರಾಜಸರು ದೈತ್ಯಭೃತ್ಯರು ಮಹಾದೈತ್ಯರು ಮುಖ್ಯತಾಮಸತಾಮಸರು (೫) (ರಾಜಸರನ್ನು ಸಾಮಾನ್ಯವಾಗಿ ಹೇಳುತ್ತಾರೆ—) ಆ ರಾಜಸ ಮನುಷ್ಯರೂ, ಉತ್ತಮರು ಮಧ್ಯಮ ಅಧಮರೆಂದು ಮೂರು ವಿಧರು (ಅಂದರೆ ರಾಜಸ ಸಾತ್ವಿಕರು ರಾಜಸ ರಾಜಸರು, ರಾಜಸ ತಾಮಸರೆಂದು ಮೂರು ವಿಧರು.) ಆ ರಾಜಸಸಾತ್ವಿಕರಲ್ಲಿಯೂ ಬ್ರಾಹ್ಮಣರು ರಾಜಸಸಾತ್ವಿಕ ಸಾತ್ವಿಕರು. (ಅಂದರೆ ರಾಜಸ ಸಾತ್ವಿಕರೂ (1) ರಾಜಸ ಸಾತ್ವಿಕಸಾತ್ವಿಕರು. (2) ರಾಜಸ ಸಾತ್ವಿಕರಾಜಸರು, (3) ರಾಜಸ ಸಾತ್ವಿಕತಾಮಸರು ಹೀಗೆ ಮೂರು ವಿಧರು. ಅದರಲ್ಲಿ ಬ್ರಾಹ್ಮಣರು ರಾಜಸ ಸಾತ್ವಿಕ ಸಾತ್ವಿಕರು.)

ಟೀ—ರಾಜಸಸಾತ್ವಿಕ ಸಾತ್ವಿಕ ಬ್ರಾಹ್ಮಣರಲ್ಲಿಯೂ, ಆಶ್ರಮಭೇದದಿಂದ ಅನೇಕ ವಿಧವೆನ್ನುತ್ತಾರೆ—

ತಾ ॥ (೧) ತತ್ರಸ್ವಶುದ್ಧಸತ್ವಾಸ್ತು ಪರಹಂಸಾಃ ಪ್ರಕೀರ್ತಿತಾಃ । ಹಂಸೋ ಬಹೂದಃ ಕುಟೀಚೋ ವನಸ್ಥೋ ನೈಷ್ಠಿಕೋ ಗೃಹೀ । ಕ್ರಮಾದ್ರಜೋಧಿಕಾ ಬಾಹ್ಯಂ ಕನ್ಯ-

ಷಾಮಧಿಕಂ ಯತಃ ॥ (೨) ಧರ್ಮಾಃ ಪರಮಹಂಸಾನಾಂ ಬ್ರಾಹ್ಮಾ ಏವ ಶಮಾದಿಕಾಃ ॥ (೩) ದೇವಾದೇಃ ಕರ್ಮಬಾಹುಲ್ಯಂ ನ ಲಿಂಗಂ ರಜಸಃ ಕ್ವಚಿತ್ । ನ ಹಿ ವಿಷ್ಣೋಶ್ಚಲೇತ್ತೇಷಾಂ ಮನಃ ಕರ್ಮಕೃತಾಮಪಿ ॥ (೪) ಅನ್ಯೇಷಾಂ ಚಲಚಿತ್ತತ್ವಾತ್ ಪ್ರಾಯಃ ಸ್ಯಾತ್ಕರ್ಮ ರಾಜಸಂ ॥ (೫) ಯದಿ ತತ್ಸ್ಮಾರಕಂ ವಿಷ್ಣೋರ್ವಿದ್ಯಾತ್ಸಾತ್ವಿಕಮೇವ ತು ॥ ೨ ॥

ಅ ॥ (೧) ರಾಜಸ ಸಾತ್ವಿಕಸಾತ್ವಿಕರಲ್ಲಿ ಶುದ್ಧ ಸಾತ್ವಿಕರು ‡ಪರಮಹಂಸರೆಂದು ಹೇಳಲ್ಪಡುತ್ತಾರೆ. ಹಂಸ, ಬಹೂದಕ ಕುಟೀಚಕ, ವಾನಪ್ರಸ್ಥಾಶ್ರಮಿ, ನೈಷ್ಠಿಕಬ್ರಹ್ಮಚಾರಿ, ಗೃಹಸ್ಥಾಶ್ರಮಿ, ಇವರಿಗೆ ಬಾಹ್ಯ ಕರ್ಮವು ಹೆಚ್ಚು ಇದ್ದುದರಿಂದ ಹೆಚ್ಚು ರಜೋಗುಣ ಉಳ್ಳವರು (೨) (ಆ ಬಾಹ್ಯ ಕರ್ಮವು ಪರಮಹಂಸರಿಗೂ ಸಮಾನವಾಗಿದ್ದರೆ-ಪರಮಹಂಸರೂ ರಾಜಸರಾಗುವರೆ? ಎಂದರೆ—) ಪರಮಹಂಸರಿಗೆ ಶಮೋ ದಮಃ ಇತ್ಯಾದಿಗಳಲ್ಲಿ ಬ್ರಾಹ್ಮಣಕರ್ಮಗಳೆಂದು ಹೇಳಲ್ಪಟ್ಟ ಶಮಾದಿಗಳೇ ಧರ್ಮಗಳು. (೩) (ಕರ್ಮಗಳು ಹೆಚ್ಚು ಇದ್ದ ಪ್ರಯುಕ್ತ ಹಂಸಾದಿಗಳು ರಾಜಸರೆಂದಾದರೆ ದೇವಾದಿಗಳಿಗೂ ಕರ್ಮಬಾಹುಲ್ಯವಿದ್ದ ಪ್ರಯುಕ್ತ ರಾಜಸತ್ವವು ಬರಬೇಕಾಗುವುದೆಂದರೆ —) ದೇವಾದಿಗಳಿಗೆ ಕರ್ಮಗಳು ಹೆಚ್ಚು ಇರುವುದು, ಎಲ್ಲಿಯೂ ರಜೋಗುಣಕ್ಕೆ ಜ್ಞಾಪಕವಾಗಲಾರದು. (ಏಕೆಂದರೆ ದೇವಾದಿಗಳು ಬಹು ಕರ್ಮಗಳನ್ನು ಮಾಡುವವರಾದರೂ ಅವರ ಮನಸ್ಸು ವಿಷ್ಣುವಿಗಿಂತ ಇತರ ವಿಷಯಕವಾಗುವುದಿಲ್ಲ. (ಅಂದರೆ ವಿಷ್ಣುವಿನಲ್ಲಿಯೇ ಇರುತ್ತದೆ) (೪) ಬೇರೆಯವರು ಚಂಚಲ ಮನಸ್ಸುಳ್ಳವರಾದ್ದರಿಂದ ಅವರ ಕರ್ಮವು ಪ್ರಾಯಶಃ ರಾಜಸವಾಗುವುದು. (ಅಂದರೆ—ಹಂಸ ಮೊದಲಾದವರಲ್ಲಿಯೂ ಕರ್ಮವು ಸ್ವರೂಪದಿಂದಲೇ ರಜೋಗುಣಕ್ಕೆ ಅನುಮಾಪಕವಲ್ಲ. ಮತ್ತು ಮನಶ್ಚಾಂಚಲ್ಯಕ್ಕೆ ಕಾರಣವಾಗಿರುವುದರಿಂದಲೇ ರಜೋಗುಣಕ್ಕೆ ಜ್ಞಾಪಕವು. ದೇವಾದಿಗಳ ಕರ್ಮವು ಮನಶ್ಚಾಂಚಲ್ಯಕ್ಕೆ ಕಾರಣವಾಗದಿರುವುದರಿಂದ ರಾಜಸತ್ವಕ್ಕೆ ಜ್ಞಾಪಕವಲ್ಲ.) (೫) ಆ ಕರ್ಮವು ವಿಷ್ಣುವಿನ ಸ್ಮರಣೆಯನ್ನುಂಟುಮಾಡುವುದಾದರೆ ಆ ಕರ್ಮವನ್ನು ಸಾತ್ವಿಕವನ್ನಾಗಿಯೇ ತಿಳಿಯಬೇಕು. (ಅಂದರೆ—ಶ್ರೀಹರಿಯ ಸ್ಮೃತಿಗೆ ಕಾರಣವಾದ ಕರ್ಮವು ಸತ್ವಗುಣಕ್ಕೆ ಜ್ಞಾಪಕವೆಂದು ಕಂಡದ್ದರಿಂದ ಕರ್ಮವು ಸ್ವರೂಪದಿಂದಲೇ ರಾಜಸತ್ವಕ್ಕೆ ಜ್ಞಾಪಕವಲ್ಲ.) ॥ ೨ ॥

ಟೀ—ಪರಮಹಂಸರನ್ನಾರಂಭಿಸಿ ಗೃಹಸ್ಥಪರ್ಯಂತರಾದವರಿಗೆ ಕ್ರಮವಾಗಿ ಹೇಳಿದ ಕರ್ಮಬಾಹುಳ್ಯವನ್ನು ಲೇಶತಃ ವಿಭಾಗಮಾಡಿ ತೋರಿಸುತ್ತಾರೆ—

ತಾ ॥ ಧರ್ಮಾರ್ಥಹಿಂಸನಾಗ್ನಿಶ್ಚ ವಿಶೇಷೋ ಬ್ರಹ್ಮಚಾರಿಣಃ । ಪೈತ್ರ್ಯಕಂ ಚಾಪಿ ಯತಿತೋ ದಾರಾಸ್ತು ಗೃಹಿಣಸ್ತತಃ । ಅಸಂಗೋ(ಸರ್ಗೋ) ಗ್ರಾಮ್ಯಸಂತ್ಯಾಗಃ ಸತ್ಯಹಿಂಸಾ ಗೃಹಸ್ಥತಃ । ವನಸ್ಥಸ್ಯ ವಿಶೇಷೋಽಯಂ ಸರ್ವೇಷಾಮಿತರತ್ಸಮಮಿತಿ ಚ ॥ ೩ ॥

ಅ ॥ (೧) ನಾಲ್ಕುವಿಧ ಸನ್ಯಾಸಿಗಳಿಗಿಂತ ನೈಷ್ಠಿಕ ಬ್ರಹ್ಮಚಾರಿಗೆ ಸಮಿಧಾದಿಗಳ ಛೇದನವು, ಅಗ್ನಿಪೂಜೆಯು, ಶ್ರಾದ್ಧಕರಣವು, ಇಷ್ಟು ವಿಶೇಷವು ಬ್ರಹ್ಮಚಾರಿಗಿಂತ ಗೃಹಸ್ಥನಿಗೆ ವಿವಾಹವು ವಿಶೇಷವು.

‡ ಶಿಖಾಯಜ್ಞೋಪವೀತಗಳಿಲ್ಲದೆ ಒಂದು ದಂಡವುಳ್ಳವರು ಪರಮಹಂಸರು ಯಜ್ಞೋಪವೀತಗಳಿಗಿ ಒಂದು ದಂಡವುಳ್ಳವರಾಗಿ ಶಿಖೆಯಿಲ್ಲದವರು ಹಂಸರು ಮೂರು ದಂಡವುಳ್ಳವರಾಗಿ ಶಿಖಾಯಜ್ಞೋಪವೀತಗಳಿದ್ದು ಒಂದು ಗ್ರಾಮದಲ್ಲಿ ಒಂದು ರಾತ್ರಿಮಾತ್ರ ಅವಾಸಮಾಡುವವರು ಬಹೂದಕರು ಮೂರು ದಂಡಗಳುಳ್ಳವರಾಗಿ ಶಿಖಾಯಜ್ಞೋಪವೀತ [illegible]

ವೃತ್ತ್ಯೋತ್ಪಾದನ ಮಾಡದಿರುವುದು, ಗ್ರಾಮದಲ್ಲಿ ಹುಟ್ಟಿರುವ ವಸ್ತುಗಳನ್ನು ಸೇವಿಸದಿರುವುದು, ಪಶುಗಳನ್ನು ಹಿಂಸಿಸದಿರುವುದು, ಇವು ಗೃಹಸ್ಥನಿಗಿಂತ ವಾನಪ್ರಸ್ಥಾಶ್ರಮಿಗೆ ವಿಶೇಷವು. ಇತರರಿಗೆ ಅವರವರಿಗೆ ಉಚಿತವಾದ ಯಜ್ಞಾದಿಗಳು ಸಮಗಳು. ॥ ೩ ॥

ಟೀ—ವರ್ಣಭೇದದಿಂದ ಅನೇಕ ಪ್ರಕಾರರಾದ ರಾಜಸ ಸಾತ್ವಿಕರಾದ ಭಗವದ್ಭಕ್ತರಲ್ಲಿ ಬ್ರಾಹ್ಮಣ ಸ್ವರೂಪವನು ಹೇಳಿದರು. ಈಗ ಕ್ಷತ್ರಿಯಾದಿಗಳ ಸ್ವರೂಪವನ್ನು ರಾಜಸರಾಜಸಾದಿಗಳ ಸ್ವರೂಪವನ್ನು ವಾಕ್ಯಾಂತರದಿಂದ ತೋರಿಸುತ್ತಾರೆ—

ತಾ ॥ (೧) ಸಾತ್ವಿಕಾಃ ಸ್ವಲ್ಪರಜಸಃ ಕ್ಷತ್ರಿಯಾಃ ಸತ್ವರಾಜಸಾಃ । ವೈಶ್ಯಾಃ ಶೂದ್ರಾ ಅತಿಸ್ವಲ್ಪಸತ್ವಾಧಿಕ್ಯೇನ ತಾಮಸಾಃ ॥ (೨) ಯೇ ತು ಭಾಗವತಾ ವರ್ಣಾಸ್ತೇಷಾಂ ಭೇದೋಽಯಮೀರಿತಃ । ಸತ್ವಾಧಿಕಃ ಪುಲ್ಕಸೋಽಪಿ ಯಸ್ತು ಭಾಗವತಃ ಸದಾ ॥ (೩) ತ್ರ್ಯವಿದ್ಯಮಾತ್ರಾ ವಿಷ್ಣೋರ್ಯೇ ಸರ್ವಾಧಿಕ್ಯೇ ಸಸಂಶಯಾಃ । ಅನ್ಯಾಧಿಕ್ಯಂ ನ ಮನ್ಯಂತೇ ಶ್ರೀಶಾದ್ರಾಜಸತಾಮಸಾಃ(ರಾಜಸಾಃ) । ಅಜ್ಞಾ ವಿಷ್ಣೌ ದ್ವೇಷಹೀನಾಃ ಸರ್ವೇ ರಾಜಸತಾಮಸಾಃ ॥ (೪) ಪಿತೃಗಂಧರ್ವಪೂರ್ವಾಶ್ಚ ಮುನಯೋ ದೇವತಾ ಇತಿ । ಸಾತ್ವಿಕಾಸ್ತ್ರಿವಿಧಾಸ್ತತ್ರ ಶ್ರೇಷ್ಠಾ ಏವೋತ್ತರೋತ್ತರಾಃ ॥ (೫) ದೇವಾ ಇಂದ್ರೋ ವಿರಿಂಚಾದ್ಯಾ ಇತಿ ತ್ರೇಧೈವ ದೇವತಾಃ । ಕ್ರಮೋತ್ತರಾಃ ಶಿವೋ ವಾಣೀ ಬ್ರಹ್ಮಾ ಚೈವೋತ್ತರೋತ್ತರಾಃ ॥ (೬) ಸತ್ತ್ವಸತ್ತ್ವಮಹಾಸತ್ತ್ವಸೂಕ್ಷ್ಮಸತ್ತ್ವಶ್ಚತುರ್ಮುಖಃ । ಯಸ್ಮಾದ್ಯಾವದ್ವಿಮುಕ್ತಿಃ ಸ್ಯಾನ್ಮುಕ್ತಾವೇವಂ ಸುಖಕ್ರಮ ಇತಿ ಚ ॥ ೪ ॥

ಅ ॥ (೧) ರಾಜಸಸಾತ್ವಿಕರಲ್ಲಿ ಕ್ಷತ್ರಿಯರು ಸ್ವಲ್ಪರಜೋಗುಣವುಳ್ಳವರಾದುದರಿಂದ ರಾಜಸರಾಜಸ ಸಾತ್ವಿಕರು. ವೈಶ್ಯರು ಸಮಗಳಾದ ಸತ್ವಗುಣ ರಜೋಗುಣಗಳುಳ್ಳವರು. ಶೂದ್ರರು ತಮೋಗುಣವು ಕಡಿಮೆ, ರಜೋಗುಣ ಹೆಚ್ಚು ಇರುವವರಾದುದರಿಂದ ತಾಮಸ ರಾಜಸ ಸಾತ್ವಿಕರು. (೨) ಯಾವವು ಭಗವತ್ಸಂಬಂಧಿಯಾದ ವರ್ಣಗಳಿವೆಯೋ ಅವುಗಳ ಭೇದವು ಹೇಳಲ್ಪಟ್ಟಿತು. ಪುಲ್ಕಸನಾದಾಗ್ಯೂ ಭಗವದ್ಭಕ್ತನಾದರೆ ಈತನು ರಾಜಸರಲ್ಲಿಯೂ ಹೆಚ್ಚು ಸತ್ವಗುಣಗಳುಳ್ಳವನೇ. (೩) (ರಾಜಸ ಸಾತ್ವಿಕರನ್ನು ಹೇಳಿ ರಾಜಸರಾಜಸಾದಿಗಳನ್ನು ಹೇಳುತ್ತಾರೆ—) ಯಾರು ಮೂರು ವೇದಗಳಲ್ಲಿ ಹೇಳಿದ ಕರ್ಮಾದಿಗಳನ್ನು ಮಾಡುತ್ತಿರುವವರೋ, ಶ್ರೀ ವಿಷ್ಣುವು ಸರ್ವೋತ್ತಮನೆಂಬುವಲ್ಲಿ ಸಂಶಯ ಗ್ರಸ್ತರೋ, ಲಕ್ಷ್ಮೀಪತಿಯಾದ ಶ್ರೀ ಪರಮಾತ್ಮನಿಗಿಂತ ಬ್ರಹ್ಮರುದ್ರಾದಿಗಳಿಗೆ ಆಧಿಕ್ಯವನ್ನು ತಿಳಿಯುವುದಿಲ್ಲವೋ, ಅಂತಹವರು ರಾಜಸ ರಾಜಸರು. ಯಾರು ವಿಷ್ಣುವು ಸರ್ವೋತ್ತಮನೆಂದು ತಿಳಿಯುವುದಿಲ್ಲವೋ, ಶ್ರೀ ವಿಷ್ಣುವಿನಲ್ಲಿ ದ್ವೇಷವನ್ನು ಮಾಡುವುದಿಲ್ಲವೋ, ಅವರೆಲ್ಲರೂ ರಾಜಸ ತಾಮಸರು. (೪) (1) ಸಾತ್ವಿಕರು, (2) ರಾಜಸರು, (3) ತಾಮಸರು, ಎಂದು ಜೀವರು ಮೂರು ವಿಧರೆಂದು ಹೇಳಿದೆ. ಅದರಲ್ಲಿ ಸಾತ್ವಿಕ ಪ್ರಭೇದವನ್ನು ಹೇಳುತ್ತಾರೆ-) ಪಿತೃಗಂಧರ್ವ ಮೊದಲಾದವರು ಸಾತ್ವಿಕತಾಮಸರು (ಅಂದರೆ ಮನುಷ್ಯೋತ್ತಮರನ್ನಾರಭ್ಯ ಮನುಷ್ಯಗಂಧರ್ವ ಪರ್ಯಂತರಾದವರು ರಾಜಸಸಾತ್ವಿಕರು. ದೇವಗಂಧರ್ವರು ಸಾತ್ವಿಕತಾಮಸರು. ಚಿರಪಿತೃಗಳು ಸಾತ್ವಿಕತಾಮಸರಾಜಸರು. ಆಜಾನಜ ದೇವತೆಗಳು ಸಾತ್ವಿಕತಾಮಸಸಾತ್ವಿಕರು) ಚ್ಯವನ ಮೊದಲಾದ ಋಷಿಗಳೂ, (ಅವರಿಗೆ ಸಮರಾದ ಬಲಿಚಕ್ರವರ್ತಿ ಮೊದಲಾದರೂ ಪಿ ಯುವ ರಾಜಗಳೂ) ಸಾತ್ವಿಕರಾಜಸರು. ಕರ್ಮಜದೇವತೆಗಳಿಂದ ಆರಂಭಿಸಿ ತತ್ವಾಭಿಮಾನಿದೇವತೆಗಳು ಸಾತ್ವಿಕ ಸಾತ್ವಿಕರು. ಹೀಗೆ ಸಾತ್ವಿಕರು ಮೂರು ವಿಧರು. ಅವರಲ್ಲಿ ಮೇಲು ಮೇಲಿನವರು ಶ್ರೇಷ್ಠರು

(೫) (ಸಾತ್ವಿಕ ಸಾತ್ವಿಕರೆಂದು ಹೇಳಿದ ತತ್ತ್ವಾಭಿಮಾನಿ ದೇವತೆಗಳನ್ನು ವಿಭಾಗಮಾಡಿ ಹೇಳುತ್ತಾರೆ—) ಸಾತ್ವಿಕಸಾತ್ವಿಕರಲ್ಲಿ ಇಂದ್ರನಿಗಿಂದ ೧೦೦ ಗುಣ ಕಡಿಮೆಯವರಾದ ಬೃಹಸ್ಪತಿ ಮೊದಲಾದವರು ತಾಮಸರು. ಅವರಿಗಿಂತ ೧೦೦ ಗುಣ ಹೆಚ್ಚು ಇರುವ ಇಂದ್ರನು ರಾಜಸನು ಚತುರ್ಮುಖ ಬ್ರಹ್ಮನನ್ನಾರಂಭಿಸಿ ರುದ್ರಪರ್ಯಂತರಾದವರು ಸಾತ್ವಿಕರೆನ್ನಿಸುತ್ತಾರೆ. (ವಿರಿಂಚಾದಿಗಳನ್ನು ವಿಭಾಗಮಾಡಿ ಹೇಳುತ್ತಾರೆ—) ರುದ್ರನು ಸರಸ್ವತಿಯು ಚತುರ್ಮುಖನು ಮೇಲು ಮೇಲಿನವರು ಶ್ರೇಷ್ಠರು. (ಅಂದರೆ ಸಾತ್ವಿಕ ಸಾತ್ವಿಕರಲ್ಲಿ ರುದ್ರನು ತಾಮಸನು. ಸರಸ್ವತಿಯು ರಾಜಸಳು ಬ್ರಹ್ಮನು ಸಾತ್ವಿಕನು) (೬) (ಹೀಗಾದರೆ—ವಿರಿಂಚನು ಏನೆನ್ನಿಸುತ್ತಾನೆಂದರೆ—) ಹಿಂದೆ ಹೇಳಿದ ಪ್ರಕಾರ ಚತುರ್ಮುಖನು ಸತ್ತ್ವ ಸತ್ತ್ವ ಮಹಾ ಸತ್ತ್ವ ಸೂಕ್ಷ್ಮಸತ್ತ್ವಗುಣವುಳ್ಳವನು. (ಅಂತೂ ಪಿತೃಗಂಧರ್ವ ಮೊದಲಾದವರೂ ಮುನಿಗಳೂ ದೇವತೆಗಳೂ ಸಾತ್ತ್ವಿಕರೆನಿಸುತ್ತಾರೆ. ಅವರ ಮಧ್ಯದಲ್ಲಿ ಸತ್ತ್ವಗುಣವು ಹೆಚ್ಚು ಇದ್ದುದರಿಂದ ದೇವತೆಗಳೆನಿಸಿದ ಸಾತ್ತ್ವಿಕರು ಸತ್ತ್ವ ಸತ್ತ್ವರೆನಿಸುತ್ತಾರೆ. ಅವರಲ್ಲಿಯೂ ಸತ್ತ್ವಗುಣವು ಹೆಚ್ಚು ಇದ್ದುದರಿಂದ ಚತುರ್ಮುಖಾದಿಗಳು ಸತ್ತ್ವ ಸತ್ತ್ವ ಮಹಾ ಸತ್ತ್ವರೆನಿಸುತ್ತಾರೆ. ಅವರ ಮಧ್ಯದಲ್ಲಿಯೂ ಚತುರ್ಮುಖನು ಹೆಚ್ಚು ಸತ್ತ್ವಗುಣಗಳುಳ್ಳವನು. ಎಂದು ಹೇಳಿದ ಪ್ರಕಾರ ಸತ್ತ್ವ ಸತ್ತ್ವ ಮಹಾಸತ್ತ್ವ ಸೂಕ್ಷ್ಮಸತ್ತ್ವಗುಣವುಳ್ಳವನೆನಿಸುತ್ತಾನೆ.) ಆದಕಾರಣ ಗುಣನಿಮಿತ್ತಕವಾದ ಕ್ರಮವು ಮುಕ್ತಿಯಾಗುವ ಪರ್ಯಂತವಿರುವುದು. ಮೋಕ್ಷದಲ್ಲಿ ಸತ್ತ್ವಾದಿಗುಣಗಳಿಲ್ಲದಿದ್ದರೂ ಪಿತೃ ಗಂಧರ್ವ ಮೊದಲಾದವರನ್ನು ಆರಂಭಿಸಿ ಚತುರ್ಮುಖ ಪರ್ಯಂತರಾದವರಲ್ಲಿ ತಾಮಸರಿಗಿಂತ ರಾಜಸರಿಗೂ, ರಾಜಸರಿಗಿಂತ ಸಾತ್ತ್ವಿಕರಿಗೂ ಆಧಿಕ್ಯವಿದೆ, ಎಂದು ಹೇಳಿದ ಪ್ರಕಾರದಿಂದಲೇ ಮೊದಲು ತಾಮಸರೆಂದು ಹೇಳಲ್ಪಟ್ಟವರಿಗಿಂತ ರಾಜಸರೆಂದು ಹೇಳಲ್ಪಟ್ಟವರಿಗೆ ಮುಕ್ತಿಯಲ್ಲಿ ಸುಖಾತಿಶಯವಿದೆ. ಇವರಲ್ಲಿ ಅಧಮರಿಗಿಂತ ಉತ್ತಮರಿಗೆ ನೂರುನೂರು ಪಾಲು ಸುಖವು ಹೆಚ್ಚು. ಅವರಿಗಿಂತ ಸಾತ್ತ್ವಿಕರೆಂದು ಹೇಳಲ್ಪಟ್ಟವರಿಗೆ ನೂರು ಪಾಲು ಸುಖವು ಹೆಚ್ಚು. ಹೀಗೆ ಸುಖಕ್ರಮವನ್ನು ತಿಳಿಯಬೇಕು. ಇಂತಹ ಸುಖಕ್ರಮದಿಂದಲೇ ತಾರತಮ್ಯವು ಕೂಡುತ್ತದೆ. ॥೪॥

ಹೀ—ತಾಮಸರಲ್ಲಿ ನರಾಧಮರು ಸಾತ್ತ್ವಿಕರೆಂದು ಉಕ್ತವಾಗಿದೆ. ಇವರು ಎಂತವರೆಂದರೆ ನರಾಧಮಾಸ್ತಾಮಸೇಷು ಸಾತ್ವಿಕಾಃ ಎಂಬುವ ಪ್ರಮಾಣವಾಕ್ಯವನ್ನು ವಿವರಿಸುತ್ತಾರೆ—

ಟಾ ॥ (೧) ವಿಷ್ಣೌ ಕಿಂಚಿತ್ಪ್ರೀ(ದಪ್ರೀ)ತಿಯುಕ್ತಾಸ್ತಾಮಸಮಧ್ಯೇ ಸಾತ್ವಿಕಾ ನರಾಧಮಾ ಇತ್ಯರ್ಥಃ ॥ (೨) ರಾಜಸಾನಾಂ ಮಧ್ಯೇ ಸಾತ್ವಿಕಾ ಏವ ಭಾಗವತಾ ವಿಪ್ರಾದಯಃ ॥ (೩) ರಾಜಸಸ್ಥಸಾತ್ವಿಕೇಷ್ವೇವ ಶುದ್ಧಸಾತ್ವಿಕಾಃ ಕಿಂಚಿದ್ರಜೋಯುಕ್ತಸಾತ್ವಿಕಾಃ ಸಮರಜೋಯುಕ್ತಸಾತ್ವಿಕಾಃ ಸತ್ತ್ವಾತ್ಕಿಂಚಿದೂನತಮೋಯುಕ್ತಸಾತ್ವಿಕಾ ಇತಿ ವರ್ಣಭೇದಃ ॥ (೪) ಸತ್ತ್ವಪ್ರಧಾನತ್ವಾದೇ(ವ)ತಾನಾರಭ್ಯೋತ್ತರೋತ್ತರಂ ಸರ್ವೇಽಪಿ ಮೋಕ್ಷಯೋಗ್ಯಾಃ ॥ (೫) ಸತ್ತ್ವಾತ್ಸಂಜಾಯತೇ ಜ್ಞಾನಮಿತ್ಯಾದೇಃ । ಸತ್ತ್ವಾಧಿಕೋ ಮೋಕ್ಷಯೋಗ್ಯೋ ಯೋಗ್ಯೋಽಂಧತಮಸಸ್ತಥಾ । ತಮಉತ್ತರೋ ರಜೋ ಭೂಯಾತ್ಸನೋ ವಾ ಸ್ಮೃತಿಪಾತ್ರಕ ಇತಿ ॥ ೫ ॥ ॥ ೪೧ ॥

ಟೀ ॥ (೧) ತಾಮಸರ ಮಧ್ಯದಲ್ಲಿ ನರಾಧಮರು ಸಾತ್ತ್ವಿಕರು. ಅವರು ಶ್ರೀವಿಷ್ಣುವಿನಲ್ಲಿ ತಾಮಸರಿಗಿಂತ ಅಲ್ಪದ್ವೇಷವುಳ್ಳವರು (೨) (ರಾಜಸಾಸ್ತು ನರಾಸ್ತತ್ರ ವಿಪ್ರಾ ರಾಜಸ ಸಾತ್ವಿಕಾಃ ಎಂದು ಹೇಳಿದೆ. ಅದರಲ್ಲಿ ಯೇ ತು ಭಾಗವತಾ ವರಾಃ ಎಂಬುವ ಪ್ರಮಾಣಬಲದಿಂದ ರಾಜಸ ಸಾತ್ವಿಕರನ್ನು ಭಗವದ್ಭಕ್ತರೆಂದು ತಿಳಿದುಕೊಳ್ಳಬೇಕೆಂದು ಸೂಚಿಸುತ್ತಾ, ಭಗವದ್ಭಕ್ತರಾದ ಬ್ರಾಹ್ಮಣರಿಗೆ ರಾಜಸ

ಸಾತ್ತ್ವಿಕತ್ವವೇ ಎಂಬೀ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ–) ರಾಜಸರ ಮಧ್ಯದಲ್ಲಿ ಭಗವದ್ಭಕ್ತರಾದ ಬ್ರಾಹ್ಮಣಾದಿಗಳು ಸಾತ್ತ್ವಿಕರೇ (೩) (ವಿಪ್ರಾ ರಾಜಸಸಾತ್ತ್ವಿಕಾಃ, ಸಾತ್ತ್ವಿಕಾಃ ಸ್ವಲ್ಪರಜಸಃ ಇದುಮೊದಲಾದ ಎರಡು ವಾಕ್ಯಗಳಲ್ಲಿ ಹೇಳಿದ ವರ್ಣಭೇದವನ್ನು ಬುದ್ಧಿಯಲ್ಲಿ ಆರೂಢವಾಗುವುದಕ್ಕಾಗಿ ಒಟ್ಟುಮಾಡಿ ತೋರಿಸುತ್ತಾರೆ–) ರಾಜಸತ್ವ ಸಾತ್ತ್ವಿಕರಲ್ಲಿಯೇ ಶುದ್ಧಸಾತ್ತ್ವಿಕರು, ಕಿಂಚಿದ್ರಜೋಗುಣದಿಂದ ಕೂಡಿದ ಸಾತ್ತ್ವಿಕರು, ಸತ್ವಗುಣಕ್ಕೆ ಸಮವಾದ ರಜೋಗುಣದಿಂದ ಕೂಡಿದ ಸಾತ್ತ್ವಿಕರು, ಸತ್ವಗುಣಕ್ಕಿಂತ ಸ್ವಲ್ಪಕಡಿಮೆಯಾದ ತಮೋಗುಣದಿಂದಕೂಡಿದ ಸಾತ್ತ್ವಿಕರು, ಹೀಗೆ ವರ್ಣಭೇದವು. (೪) (ರಾಜಸ ಸಾತ್ತ್ವಿಕರು ಸಾಧಾರಣ ಬ್ರಾಹ್ಮಣಾದಿಗಳಲ್ಲ. ಮತ್ತೆ ಭಗವದ್ಭಕ್ತರೇ. ಎಂಬುವ ವಾಕ್ಯಾಂಶದವನ್ನನು ಸರಿಸಿ ಹೇಳಿದ ಹೇತ್ವಂಶವನು ಹೇಳುತ್ತಾರೆ) ಸತ್ವಗುಣವೇ ಪ್ರಧಾನವಾಗಿ ಉಳ್ಳವರಾದುದರಿಂದ ರಾಜಸ ಸಾತ್ತ್ವಿಕರನ್ನಾರಂಭಿಸಿ ಚತುರ್ಮುಖ ಪರ್ಯಂತರಾದವರೆಲ್ಲರೂ ಮೋಕ್ಷಯೋಗ್ಯರು. (ಬೇರೆ ಗುಣಗಳಿಗಿಂತ ಇವರಲ್ಲಿ ಸತ್ವಗುಣವು ಹೆಚ್ಚು ಇದ್ದುದರಿಂದ ಭಗವದ್ಭಕ್ತರಿಗೇನೇ ಮೋಕ್ಷಯೋಗ್ಯತೆಯು. ಆದಕಾರಣ ರಾಜಸಸಾತ್ತ್ವಿಕಾದಿಗಳೆಲ್ಲರೂ ಭಗವದ್ಭಕ್ತರೇ.) (ಸತ್ತ್ವಗುಣವು ಹೆಚ್ಚು ಇದ್ದರೂ ಮೋಕ್ಷಯೋಗ್ಯತೆಯು ಇದೆ, ಎಂಬುವುದು ಹೇಗೆ? ಎಂದರೆ–) ಸತ್ತ್ವಗುಣದಿಂದ ಜ್ಞಾನವು ಹುಟ್ಟುತ್ತದೆ, ಇತ್ಯಾದಿ ಪ್ರಮಾಣದಿಂದ (ಅಂದರೆ ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಎಂಬುವುದರಿಂದ ಹೆಚ್ಚು ಇರತಕ್ಕ ಗುಣವು ಬೇರೆ ಗುಣಗಳನ್ನು ತಿರಸ್ಕರಿಸಿ ತನ್ನ ಫಲವನ್ನು ಕೊಡುತ್ತದೆಂದು ಹೇಳಿದಿಂದ ಸತ್ತ್ವಗುಣವು ಹೆಚ್ಚು ಇದ್ದರೆ ಅದು ರಜೋಗುಣ ತಮೋಗುಣಗಳನ್ನು ತಿರಸ್ಕರಿಸುತ್ತದೆ. ಅದರಿಂದ ಮೋಕ್ಷಸಾಧನ ಜ್ಞಾನವು ಹುಟ್ಟುತ್ತದೆ. ಆದಕಾರಣ ಸತ್ತ್ವಗುಣವು ಹೆಚ್ಚು ಇದ್ದರೆ ಮೋಕ್ಷವಾಗುತ್ತದೆ.) (೫) (ಈ ವಿಷಯದಲ್ಲಿ ಸ್ಪಷ್ಟಾರ್ಥವುಳ್ಳ ವಾಕ್ಯಾಂಶವನ್ನು ಹೇಳುತ್ತಾರೆ–) ಸತ್ವಗುಣವು ಹೆಚ್ಚು ಉಳ್ಳ ರಾಜಸ ಸಾತ್ತ್ವಿಕಾದಿಗಳು ಮೋಕ್ಷಯೋಗ್ಯರು. ತಮೋಗುಣವು ಹೆಚ್ಚು ಉಳ್ಳ ನರಾಧಮಾದಿಗಳು ಅಂಧಂತಮಸ್ಸಿಗೆ ಯೋಗ್ಯರು. ರಜೋಗುಣ ಹೆಚ್ಚು ಉಳ್ಳ ತ್ರೈವಿಧ್ಯನು. ಅಥವಾ ಒಂದೇ ಪ್ರಕಾರ ಮೂರು ಗುಣಗಳುಳ್ಳವನು ಅಜ್ಞನು ಸಂಸಾರದಲ್ಲಿರುವವನು ॥ ೫ ॥ ॥ ೪೧ ॥

ಪೀ—ಬ್ರಾಹ್ಮಣರಿಗೆ ವಿಹಿತಗಳಾದ ಕರ್ಮಗಳನ್ನು ಹೇಳುತ್ತಾರೆ—

**ಗೀ ॥ ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಂ ॥ ೪೨ ॥**

ಅ ॥ ಶಮಃ = ಶ್ರೀ ಭಗವಂತನಲ್ಲಿ ಆಸಕ್ತವಾದ ಬುದ್ಧಿಯು. ದಮಃ = ಇಂದ್ರಿಯನಿಗ್ರಹವು. ತಪಃ= ಬ್ರಹ್ಮಚರ್ಯ ಮೊದಲಾದ ಕಾಯಿಕ ವಾಚಿಕ ಮಾನಸಿಕ ತಪಸ್ಸು. ಶೌಚಂ=ಬಾಹ್ಯಶುದ್ಧಿಯು, ಅಭ್ಯಂತರ ಶುದ್ಧಿಯು, ಕ್ಷಾಂತಿಃ = ಕೋಪ ಹುಟ್ಟದಿರುವದು, ಚ = ಮತ್ತು, ಆರ್ಜವಂ = ಮನಸ್ಸು ವಚನ ದೇಹ ಕರ್ಮ ಇವುಗಳಲ್ಲಿ ವ್ಯತ್ಯಾಸವಿಲ್ಲದೆ ಒಂದೇ ರೀತಿಯಾಗಿ ಇರುವಿಕೆ, ಜ್ಞಾನಂ = ಸಾಮಾನ್ಯ ಜ್ಞಾನವು. ವಿಜ್ಞಾನಂ = ವಿಶೇಷ ಜ್ಞಾನವು, ಆಸ್ತಿಕ್ಯಮೇವ ಚ = ಧರ್ಮಾದಿಗಳನ್ನು ಅನುಷ್ಠಾನ ಮಾಡಿದರೆ ಪರಮಾತ್ಮನಿಗೆ ಪ್ರೀತಿಯಾಗಿ ಪರಲೋಕದಲ್ಲಿ ಸುಖಾದಿರೂಪವಾದ ಪ್ರಯೋಜನವಿದೆ ಎಂಬೀ ಭಾವನೆಯೂ. ಇದುಮೊದಲಾದ ಕರ್ಮಸಮುದಾಯವು, ಸ್ವಭಾವಜಂ = ಸಹಜವಾದ, ಬ್ರಾಹ್ಮಂ ಕರ್ಮ = ಬ್ರಾಹ್ಮಣರ ಸಂಬಂಧಿಯಾದ ಕರ್ಮವು. ॥ ೪೨ ॥

ಪೀ—ಕ್ಷತ್ರಿಯರಿಗೆ ಸ್ವಾಭಾವಿಕ ಧರ್ಮಗಳನ್ನು ಹೇಳುತ್ತಾರೆ—

ಗೀ || ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಂ |
ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಂ || ೪೩ ||

ಅ || ಶೌರ್ಯಂ = ಶೂರತನವು ಅಂದರೆ ಹೆದರದಿರುವುದು, ತೇಜಃ = ಶರೀರದಲ್ಲಿರುವ ಕಾಂತಿ ವಿಶೇಷವು. ಧೃತಿಃ = ಧೈರ್ಯವು. ದಾಕ್ಷ್ಯಂ ಚ = ಪಟುತ್ವವೂ, ಯುದ್ಧೇ ಅಪಲಾಯನಮಪಿ = ಯುದ್ಧ ದಲ್ಲಿ ಹೆದರಿ ಓಡಿಹೋಗದಿರುವುದು, ದಾನಂ = ಗೋವು ಭೂಮಿ, ತಿಲ ಹಿರಣ್ಯ ಮೊದಲಾದವುಗಳನ್ನು ಸತ್ಪಾತ್ರದಲ್ಲಿ ದಾನಮಾಡುವುದು, ಈಶ್ವರಭಾವಶ್ಚ = ದುಷ್ಟನಿಗ್ರಹ ಶಿಷ್ಟಪರಿಪಾಲನ ಮಾಡುವ ಶಕ್ತಿಯು. (ಇದುಮೊದಲಾದ ಕರ್ಮಸಮುದಾಯವು) ಸ್ವಭಾವಜಂ = ಸಹಜವಾದ, ಕ್ಷಾತ್ರಂ ಕರ್ಮ = ಕ್ಷತ್ರಿಯಸಂಬಂಧಿಯಾದ ಕರ್ಮವು

ವಿ || (1) ಬ್ರಾಹ್ಮಣರ ಧರ್ಮಗಳಾದ ಶಮದಮಾದಿಗಳೂ ಕೂಡ ಬ್ರಾಹ್ಮಣರಿಗಿಂತ ಸ್ವಲ್ಪ ಕಡಿಮೆ ಯಾಗಿ ಕ್ಷತ್ರಿಯರಿಗೂ ಧರ್ಮಗಳೆಂದು ತಿಳಿಯಬೇಕು. (2) ಕ್ಷತ್ರಿಯರ ಧರ್ಮಗಳೂ ಕೂಡ ಬ್ರಾಹ್ಮಣಾದಿ ಗಳಲ್ಲಿ ಕ್ರಮದಿಂದ ಕಡಿಮೆಗಳಾಗಿಯೆಂದು ತಿಳಿಯಬೇಕು. || ೪೩ ||

ಪೀ — ವೈಶ್ಯ ಮತ್ತು ಶೂದ್ರರ ಸ್ವಾಭಾವಿಕ ಧರ್ಮಗಳನ್ನು ಹೇಳುತ್ತಾರೆ —

ಗೀ || ಕೃಷಿಗೋರಕ್ಷವಾಣಿಜ್ಯಂ ವೈಶ್ಯಕರ್ಮ ಸ್ವಭಾವಜಂ |
ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ || ೪೪ ||

ಅ || ಕೃಷಿಗೋರಕ್ಷವಾಣಿಜ್ಯಂ = ವ್ಯವಸಾಯವೂ. ಗೋವುಗಳನ್ನು ರಕ್ಷಿಸುವುದು, ವ್ಯಾಪಾರವೂ (ಇದು ಮೊದಲಾದ ಕರ್ಮಸಮುದಾಯವು) ಸ್ವಭಾವಜಂ = ಸ್ವಭಾವಸಿದ್ಧವಾದ, ವೈಶ್ಯಂ ಕರ್ಮ = ವೈಶ್ಯರ ಸಂಬಂಧಿಯಾದ ಕರ್ಮವು. ಅಪಿ = ಮತ್ತು, ಪರಿಚರ್ಯಾತ್ಮಕಂ ಕರ್ಮ = ಬ್ರಾಹ್ಮಣ ಕ್ಷತ್ರಿಯ ವೈಶ್ಯರ ಸೇವಾರೂಪವಾದ ಕರ್ಮವು. ಶೂದ್ರಸ್ಯ = ಶೂದ್ರರಿಗೆ, ಸ್ವಭಾವಜಂ = ಸ್ವಭಾವಸಿದ್ಧವಾದುದು. || ೪೪ ||

ಪೀ — ಬ್ರಾಹ್ಮಣಾದಿ ವರ್ಣಭೇದದಿಂದ ಕರ್ಮಭೇದಗಳನ್ನು ಹೇಳಿ ಫಲವನ್ನು ಹೇಳುತ್ತಾನೆ —

ಗೀ || ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೇ ನರಃ |
ಸ್ವಕರ್ಮನಿರತಃ ಸಿದ್ಧಿಂ ಯಥಾ ವಿಂದತಿ ತಚ್ಛೃಣು || ೪೫ ||

ಅ || ಸ್ವೇ ಸ್ವೇ ಕರ್ಮಣಿ = ತಂತಮ್ಮ ವರ್ಣಾಶ್ರಮಗಳಿಗೆ ಉಚಿತವಾದ ಕರ್ಮದಲ್ಲಿ, ಅಭಿರತಃ = ಆಸಕ್ತನಾದ (ಅಂದರೆ ತಂತಮ್ಮ ಕರ್ಮಗಳಿಂದ ಶ್ರೀಪರಮಾತ್ಮನ ಆರಾಧನೆಯನ್ನು ಮಾಡತಕ್ಕ) ನರಃ = ಮನುಷ್ಯನು (ಜ್ಞಾನವನ್ನು ಸಂಪಾದಿಸಿದದ್ವಾರಾ) ಸಂಸಿದ್ಧಿಂ = ಮೋಕ್ಷವನ್ನು, ಲಭತೇ = ಹೊಂದುತ್ತಾನೆ, ಸ್ವಕರ್ಮನಿರತಃ = ತಮ್ಮತಮ್ಮ ವರ್ಣಾಶ್ರಮಗಳಿಗೆ ವಿಹಿತಗಳಾದ ಕರ್ಮಗಳಲ್ಲಿ ಆಸಕ್ತನಾದ ಮನುಷ್ಯನು, ಸಿದ್ಧಿಂ = ಮೋಕ್ಷವನ್ನು, ಯಥಾ ವಿಂದತಿ = ಹೇಗೆ ತಿಳಿಯುತ್ತಾನೋ, ತತ್ = ಆ ಪ್ರಕಾರವನ್ನು, ಶೃಣು = ಕೇಳು. || ೪೫ ||

ಗೀ || ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ |
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ || ೪೬ ||

ಅ ॥ ಯತಃ= ಯಾವ ಭಗವಂತನಿಂದ, ಭೂತಾನಾಂ= ಸಮಸ್ತ ಪ್ರಾಣಿಗಳ, ಪ್ರವೃತ್ತಿಃ= ವ್ಯಾಪಾರವು(ನಡೆಯುತ್ತದೋ) ಯೇನ=ಯಾವ ಭಗವಂತನಿಂದ, ಇದಂ ಸರ್ವಂ=ಈ ಚೇತನಾಚೇತನಾತ್ಮಕವಾದ ಸಮಸ್ತ ಜಗತ್ತು, ತತಂ= ವ್ಯಾಪ್ತವಾಗಿಯುದೆಯೋ, ತಂ= ಅಂತಹ ಶ್ರೀ ಪರಮಾತ್ಮನನ್ನು, ಮಾನವಃ= ಬ್ರಾಹ್ಮಣ ಮೊದಲಾದವರು, ಸ್ವಕರ್ಮಣಾ= ತಮ್ಮ ತಮ್ಮ ವರ್ಣಾಶ್ರಮಗಳಿಗೆ ವಿಹಿತಗಳಾದ ಹಿಂದೆ ಹೇಳಿದ ಶಮದಮಾದಿ ಕರ್ಮಾದಿಗಳಿಂದ ಅಭ್ಯರ್ಚ್ಯ= ಭಕ್ತಿಪೂರ್ವಕವಾಗಿ ಚೆನ್ನಾಗಿ ಪೂಜಿಸಿ, ಸಿದ್ಧಿಂ= ಮೋಕ್ಷವನ್ನು, ವಿಂದತಿ= ಹೊಂದುತ್ತಾನೆ. ॥ ೪೬ ॥

ಹೀ— ಪ್ರತಿಯೊಬ್ಬರೂ ತಮ್ಮತಮ್ಮ ಧರ್ಮಗಳಲ್ಲಿ ಆಸಕ್ತರಾಗಿ ಅವಶ್ಯವಾಗಿ ತಮ್ಮ ಧರ್ಮಗಳನ್ನು ಮಾಡುತ್ತಾ ಇರಬೇಕೆಂದು ಹೇಳುತ್ತಾರೆ—

ಗೀ ॥ ಶ್ರೇಯಾನ್ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।
ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥ ೪೭ ॥

ಅ ॥ ಸ್ವಧರ್ಮಃ= ತಮ್ಮತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಧರ್ಮವು, ವಿಗುಣಃ= ಕೆಲವು ಅಂಗ ವೈಕಲ್ಯವುಳ್ಳದ್ದಾದರೂ, ಸ್ವನುಷ್ಠಿತಾತ್= ಯಾವ ವಿಧವಾದ ವೈಕಲ್ಯವೂ ಇಲ್ಲದೆ ಸಮಸ್ತ ಅಂಗಗಳಿಂದ ಕೂಡಿ ಮಾಡಲ್ಪಟ್ಟ, ಪರಧರ್ಮಾತ್= ತಮ್ಮತಮ್ಮ ವರ್ಣಾಶ್ರಮಗಳಿಗೆ ವಿಹಿತವಾಗದೆ ಇದ್ದು ಇತರರ ವರ್ಣಾಶ್ರಮಗಳಿಗೆ ವಿಹಿತವಾದ ಧರ್ಮಕ್ಕಿಂತ, ಶ್ರೇಯಾನ್= ಶ್ರೇಷ್ಠವು, ಪುರುಷಾರ್ಥ ಸಾಧನವು, ಸ್ವಭಾವನಿಯತಂ= ತಮ್ಮತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ, ಕರ್ಮ= ಕರ್ಮವನ್ನು ಕುರ್ವನ್= ಮಾಡುವವನು, ಕಿಲ್ಬಿಷಂ= ಅಂಗವೈಕಲ್ಯದಿಂದುಂಟಾಗುವ ದೋಷವನ್ನು, ನಾಪ್ನೋತಿ= ಹೊಂದುವುದಿಲ್ಲ.(ಅಂದರೆ ಕರ್ಮಗಳಿಗೆ ಅಂಗವೈಕಲ್ಯವು ಬರುತ್ತದೆಂಬ ಶಂಕೆಯಿಂದ ತಮ್ಮ ಧರ್ಮಗಳನ್ನು ಬಿಡಕೂಡದು.) ॥ ೪೭ ॥

ಹೀ— ಯಾರಿಗೂ ಯಾವುದೊಂದು ಕರ್ಮವನ್ನೂ ಅಂಗವೈಕಲ್ಯವಿಲ್ಲದೆ ಮಾಡಲು ಸಾಧ್ಯವೇ ಇಲ್ಲ. ಆದಕಾರಣ ಸಮಸ್ತ ಕರ್ಮಗಳೂ ಅಂಗವೈಕಲ್ಯರೂಪ ದೋಷವುಳ್ಳವುಗಳೇ ಆದರೂ ಅಂತಹ ದೋಷವು ಬರುತ್ತದೆ ಎಂಬುವ ಭಯದಿಂದ ತಂತಮ್ಮ ವರ್ಣಾಶ್ರಮಗಳಿಗೆ ವಿಹಿತಗಳಾದ ಕರ್ಮಗಳನ್ನು ಸರ್ವಥಾ ಬಿಡಕೂಡದೆಂದು ಹೇಳುತ್ತಾರೆ—

ಗೀ ॥ ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।
ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥ ೪೮ ॥

ಅ ॥ ಹಿ= ಯಾವ ಕಾರಣದಿಂದ, ಧೂಮೇನ ಅಗ್ನಿರಿವ= ಬೆಂಕಿಯು ಹೊಗೆಯಿಂದ ಮುಚ್ಚಲ್ಪಟ್ಟಂತೆಯೋ, ಸರ್ವಾರಂಭಾಃ= ಮಾಡುವ ಸಮಸ್ತ ಕರ್ಮಗಳೂ, ದೋಷೇಣ= ಅಂಗವೈಕಲ್ಯರೂಪವಾದ ದೋಷದಿಂದ, ಆವೃತಾಃ= ಕೂಡಿದವುಗಳೇ ಆಗಿವೆಯೋ (ಆದಕಾರಣ ವೈಗುಣ್ಯವು ಸರ್ವತ್ರ [illegible] ದರೂ) ಕೌಂತೇಯ= ಕುಂತೀಪುತ್ರನೇ, ಸದೋಷಮಪಿ= ದುಃಖಾದಿ ದೋಷಗಳಿಂದ ಕೂಡಿ[illegible] ಸಹಜಂ ಕರ್ಮ= ತಮ್ಮತಮ್ಮ ವರ್ಣಾಶ್ರಮಗಳಿಗೆ ವಿಹಿತವಾದ ಕರ್ಮವನ್ನು, ನ ತ್ಯಜೇತ್ [illegible] ಕೂಡದು. ॥ ೪೮ ॥

ಪೀ—ಯಯಾ ಧರ್ಮಮಧರ್ಮಂ ಚ ಎಂಬುವುದರಿಂದ ಧರ್ಮಾದಿವಿಷಯಕವಾದ ರಾಜಸ ಬುದ್ಧಿಯು ಅಯಥಾರ್ಥಜ್ಞಾನಕ್ಕೆ ಕಾರಣವೆಂದು ಹೇಳಲ್ಪಡುತ್ತದೆ, ಎಂಬೀ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ಭಾ ॥ ಯಥಾರ್ಥತ್ವನಿಯಮಾಭಾವೇ ರಾಜಸ್ಯಾಃ । ಅನ್ಯಥಾ ತಾಮಸ್ಯಾ ಭೇದಾಭಾವಾತ್ ॥ ೩೧—೪೮ ॥

ಅ ॥ ರಜೋಗುಣಯುಕ್ತವಾದ ಅಂತಃಕರಣಕ್ಕೆ ಯಥಾರ್ಥಜ್ಞಾನವನ್ನೇ ಹುಟ್ಟಿಸುತ್ತದೆ, ಎಂಬುವ ನಿಯಮವಿಲ್ಲವೆಂಬುವಲ್ಲಿ ತಾತ್ಪರ್ಯವು. (ಅಂದರೆ ಅಯಥಾವತ್ಪ್ರಜಾನಾತಿ (ಶ್ಲೋ. ೩೧) ಎಂದು ಹೇಳಿದ್ದಕ್ಕೆ ಯಥಾರ್ಥಜ್ಞಾನ ಜನನ ನಿಯಮವಿಲ್ಲವೆಂಬುವಲ್ಲಿ ತಾತ್ಪರ್ಯವು. ಅಲ್ಲದೆ ಧರ್ಮಾದಿವಿಷಯಕವಾದ ರಾಜಸಬುದ್ಧಿಯು ಅಯಥಾರ್ಥಜ್ಞಾನಕ್ಕೆ ಕಾರಣವಾಗುತ್ತದೆ, ಎಂದರ್ಥವಲ್ಲ.) ಹೀಗೆ ಅರ್ಥ ಮಾಡದಿದ್ದರೆ ರಜೋಗುಣಯುಕ್ತವಾದ ಬುದ್ಧಿಗೆ ತಮೋಗುಣಯುಕ್ತವಾದ ಬುದ್ಧಿಗಿಂತ ಭೇದವು ಇಲ್ಲವೆಂದಾಗಬೇಕಾಗುವುದು. ॥ ೩೧-೪೮ ॥

ಪೀ—ಬ್ರಾಹ್ಮಣಕ್ಷತ್ರಿಯವಿಶಾಂ ಎಂಬೀ ೪೧ನೇ ಶ್ಲೋಕದಲ್ಲಿ ಹೇಳಿದ್ದನ್ನು ವಿವರಿಸುತ್ತಾರೆ— ಅದರಲ್ಲಿ ಶಮದಮಾದಿಗಳು ಬ್ರಾಹ್ಮಣರದ್ದೇ ಧರ್ಮಗಳು, ಎಂಬೀ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಪ್ರಮಾಣಾಂತರದಿಂದ ವ್ಯಾಖ್ಯಾನಮಾಡುತ್ತಾರೆ—

ಪ್ರ ॥ (೧) ಶಮೋ ದಮಸ್ತಪಃ ಶೌಚಂ ಕ್ಷಾಂತಿರಾರ್ಜವಮೇವ ಚ । ಜ್ಞಾನಂ ವಿಜ್ಞಾನಮಾಸ್ತಿಕ್ಯಂ ವಿಪ್ರ(ಬ್ರಹ್ಮ)ಕರ್ಮ ಸ್ವಭಾವಜಂ । ಏತೇ ಗುಣಾಃ ಕಿಂಚಿದೂನಾ ವಿಪ್ರಾತ್ ಕ್ಷತ್ರಿಯ ಏವ ಚ ॥ (೨) ಅಧಿಕಾ ವಾ ಬ್ರಾಹ್ಮಣೇಭ್ಯಃ ಕೇಷುಚಿಚ್ಚಕ್ರವರ್ತಿಷು । ಋಷಯಸ್ತ್ವೇವ ವಿಜ್ಞೇಯಾ ಕಾರ್ತವೀರ್ಯಾದಯೋ ನೃಪಾಃ ॥ (೩) ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಂ । ದಾನಮೀಶ್ವರಭಾವಶ್ಚ ಕ್ಷತ್ರಿಯೇಭ್ಯೋ ಗುಣಾ ಅಪಿ ॥ (೪) ಕ್ಷತ್ರಿಯೋನಬ್ರಹ್ಮಗುಣೋ ವೈಶ್ಯಃ ಕೃಷ್ಯಾದಿಜೀವನಃ । ಕತ ಊನಃ ಶಮಾದ್ಯೈರ್ಯಃ ಶುಶ್ರೂಷುಃ ಶೂದ್ರ ಉಚ್ಯತೇ ॥ (೫) ಅಧಿಕಾಶ್ಚೇದ್ಗುಣಾಃ ಶೂದ್ರೇ ಬ್ರಾಹ್ಮಣಾದಿಃ ಸ ಉಚ್ಯತೇ । ಬ್ರಾಹ್ಮಣೋಽಪ್ಯಲ್ಪಗುಣಕಃ ಶೂದ್ರ ಏವೇತಿ ಕೀರ್ತಿತಃ ॥ (೬) ನರೋಽಪಿ ಯೋ ದೇವಗುಣೋ ಜ್ಞೇಯೋ ದೇವೋ ನೃತಾಂ ಗತ ಇತಿ ಚ ॥ ೧ ॥

ಅ ॥ (೧) ಶಮದಮಾದಿಗಳು ಸ್ವಾಭಾವಿಕವಾಗಿ ಬ್ರಾಹ್ಮಣರ ಧರ್ಮವು. ಈ ಎಲ್ಲಾ ಗುಣಗಳು ಕ್ಷತ್ರಿಯರಲ್ಲಿಯೂ ಬ್ರಾಹ್ಮಣರಿಗಿಂತ ಸ್ವಲ್ಪ ಕಡಿಮೆಯಾಗಿ ಇರುತ್ತವೆ (೨) (ಕಾರ್ತವೀರ್ಯ ಮೊದಲಾದ ಕ್ಷತ್ರಿಯರಲ್ಲಿ ಬ್ರಾಹ್ಮಣರಿಗಿಂತಲೂ ಶಮದಮಾದಿಗಳು ಹೆಚ್ಚು ಇದ್ದುದರಿಂದ ಬ್ರಾಹ್ಮಣರಿಗಿಂತ ಸ್ವಲ್ಪ ಕಡಿಮೆ ಎಂದು ಹೇಳಿದ್ದು ಹೇಗೆ ಕೂಡುತ್ತದೆ? ಎಂದರೆ—) ಈ ಶಮದಮಾದಿಗಳು ಕಾರ್ತವೀರ್ಯ ಮೊದಲಾದ ಕೆಲವು ಚಕ್ರವರ್ತಿಗಳಲ್ಲಿ ಬ್ರಾಹ್ಮಣರಿಗಿಂತ ಅಧಿಕವಾಗಿರುತ್ತವೆ (೩) ಕಾರ್ತವೀರ್ಯ ಮೊದಲಾದ ರಾಜರೂ ಋಷಿಗಳೆಂದೇ ತಿಳಿಯಬೇಕು (ಅಂದರೆ ಕಾರ್ತವೀರ್ಯ ಮೊದಲಾದ ಕೆಲವು ಕ್ಷತ್ರಿಯರು ಋಷಿಕಲ್ಪರಾದುದರಿಂದ ಅವರಲ್ಲಿ ಬ್ರಾಹ್ಮಣರಿಗಿಂತಲೂ ಹೆಚ್ಚು ಶಮದಮಾದಿಗಳು ಇವೆ ಎಂಬುವುದು ಮುಖ್ಯವೇ. ಅವರೂ ಅನೇಕ ಇತರರಾದ ಸಾಧಾರಣ ಕ್ಷತ್ರಿಯರಿಗಿಂತ [illegible]

ಶಮದಮಾದಿಗಳು ಕಡಿಮೆ ಎಂದು ಹೇಳಿದ್ದು. ಆದಕಾರಣ ವಿರೋಧವಿಲ್ಲ.) (೩) ಹೆದರದಿರುವುದು, ಶರೀರದಲ್ಲಿರುವ ವರ್ಚಸ್ಸು, ಧೈರ್ಯವು, ಪಟುತ್ವವು, ಯುದ್ಧದಲ್ಲಿ ಹಿಂತೆರಳದಿರುವುದು, ಸತ್ಪಾತ್ರದಲ್ಲಿ ದ್ರವ್ಯಾದಿದಾನವು, ದುಷ್ಟನಿಗ್ರಹ ಶಿಷ್ಟಪರಿಪಾಲನೆಯು, ಇನ್ನು ಇತರರ ಗುಣಗಳೂ ಕ್ಷತ್ರಿಯರಲ್ಲಿರುತ್ತವೆ. (೪) ವೈಶ್ಯರು ಕ್ಷತ್ರಿಯರಿಗಿಂತ ಕಡಿಮೆಯಾದ, ಶಮದಮ ಮೊದಲಾದ ಬ್ರಾಹ್ಮಣರ ಗುಣಗಳುಳ್ಳವರು. ಕೃಷಿ ಮೊದಲಾದವುಗಳಿಂದ ಜೀವಿಸಿಕೊಂಡಿರುವವರು ತ್ರೈವರ್ಣಿಕರ ಸೇವೆಯಿಂದ ಜೀವಿಸಿಕೊಂಡಿರುವ ಶೂದ್ರನು ವೈಶ್ಯರಲ್ಲಿರುವ ಶಮದಮಾದಿ ಗುಣಗಳಿಂದಲೂ ಕಡಿಮೆಯಾದ ಶಮದಮಾದಿ ಗುಣಗಳುಳ್ಳವನು. (೫) (ಕೆಲವು ಶೂದ್ರರಲ್ಲಿಯೂ ಶಮದಮಾದಿ ಗುಣಗಳು ಹೆಚ್ಚು ಕಂಡಿವೆ ಬ್ರಾಹ್ಮಣರಲ್ಲಿಯೂ ಶಮದಮಾದಿಗಳು ಕಡಿಮೆ ಕಂಡಿವೆ. ಆದಕಾರಣ ಈ ನಿಯಮವು ಯುಕ್ತವಲ್ಲ, ಎಂದರೆ—) ಶೂದ್ರರಲ್ಲಿಯೂ ಶಮದಮಾದಿಗುಣಗಳು ಹೆಚ್ಚು ಇದ್ದರೆ ಅಂತಹ ಶೂದ್ರನು ಬ್ರಾಹ್ಮಣರಿಗೆ ಸಮಾನನೆಂದು ತಿಳಿಯಬೇಕು. ಅಂದರೆ ಬ್ರಾಹ್ಮಣರಿಗೆ ಸಮಗಳಾದ ಶಮದಮಾದಿ ಗುಣಗಳುಳ್ಳವನು. ಬ್ರಾಹ್ಮಣನೂ ಅಲ್ಪ ಶಮಾದಿಗುಣಗಳುಳ್ಳವನಾದರೆ ಶೂದ್ರರಿಗೆ ಸಮಾನನು. (ಅಂದರೆ ಶೂದ್ರರಿಗೆ ಸಮಗಳಾದ ಗುಣಗಳುಳ್ಳವನೆಂದು ತಿಳಿಯಬೇಕು) (೬) (ಜಾತಿಯನ್ನಪೇಕ್ಷಿಸದೆ ಕೇವಲ ಗುಣಗಳಿಂದ ಬ್ರಾಹ್ಮಣತ್ವಾದಿಗಳನ್ನು ಕಲ್ಪಿಸುವುದು ಹೇಗೆಂದರೆ—) ಮನುಷ್ಯನು ಕೂಡ ಯಾವನು ದೇವತೆಗಳ ಗುಣಗಳುಳ್ಳವನೋ, ಅತನು ದೇವತೆಯೇ ಮನುಷ್ಯತ್ವವನ್ನು ಹೊಂದಿದವನೆಂದು ತಿಳಿಯಬೇಕು, ಎಂದೂ ಹೇಳಿದೆ ॥ ೧ ॥

ಪೀ— ಹೀಗೆ ಪ್ರಮಾಣಾಂತರದಿಂದ ಕ್ಷತ್ರಿಯಾದಿಗಳಲ್ಲಿಯೂ ಶಮದಮಾದಿಗುಣಗಳಿವೆಂದು ಹೇಳಿ ಬೇರೆ ವಾಕ್ಯಬಲದಿಂದಲೂ ಇದನ್ನು ಹೇಳುತ್ತಾರೆ—

ತಾ ॥ (೧) ಸ್ವಕರ್ಮಣಾ ತಮಭ್ಯರ್ಚ್ಯೇತಿ ವಚನಾಚ್ಚ ಕ್ಷತ್ರಿಯಾದಿಷ್ವಪಿ ಶಮಾದ್ಯನುವೃತ್ತಿರ್ಜ್ಞಾಯತೇ ॥ (೨) ನ ಹಿ ಶಮಾದಿಕಂ ವಿನಾ ತಸ್ಯಾಭಿಮತೋಽರ್ಚನಂ ಭವತಿ । ಸಮ್ಯಕ್ ಶಮಾದಿಭಿರರ್ಚನಂ ಹ್ಯಭ್ಯರ್ಚನಂ ॥ (೩) ನ ಚ ಶಮಾದೀನ್ವಿನಾ ಸಿದ್ಧಿಂ ವಿಂದತಿ । ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತ್ಯುಕ್ತತ್ವಾಚ್ಚ ॥ (೪) ಶಮೋ ಮನ್ನಿಷ್ಠತಾ ಬುದ್ಧೇರ್ದಮ ಇಂದ್ರಿಯನಿಗ್ರಹ ಇತಿ ಹಿ ಭಾಗವತೇ ॥ (೫) ನ ಚ ಕ್ಷತ್ರಿಯಾದಿಭಿರಪಿ ಶೌಚತಪಃಶ(ಕ್ಷ)ಮಾದಿಭಿರ್ಗುಣೈರ್ಭವಿತ(ಭಾವ್ಯ)ಮಿತಿ ತತ್ತದ್ಧರ್ಮೇಷೂಚ್ಯತೇ ॥ ೨ ॥

ಅ ॥ (೧) ಸ್ವಕರ್ಮಣಾ ತಮಭ್ಯರ್ಚ್ಯ (ಶ್ಲೋ ೪೬) ಎಂಬುವುದರಿಂದ ಕ್ಷತ್ರಿಯಾದಿಗಳಲ್ಲಿಯೂ ಶಮದಮಾದಿಗಳು ಇವೆ, ಎಂದು ತಿಳಿಯುತ್ತದೆ (೨) (ಇಲ್ಲಿ ಸರ್ವರೂ ಪರಮಾತ್ಮನನ್ನು ಪೂಜಿಸಬೇಕೆಂದೇ ಹೇಳುತ್ತದೆ ಶಮಾದಿಗಳು ಬೇಕೆಂದು ಹೇಳುವುದಿಲ್ಲ ಎಂದರೆ—) (ಶಮದಮಾದಿ ಗುಣಗಳಿಲ್ಲದೆ ಶ್ರೀ ಪರಮಾತ್ಮನ ಅಭ್ಯರ್ಚನವೇ ಆಗುವುದಿಲ್ಲ. (ಏಕೆಂದರೆ) ಚೆನ್ನಾಗಿ ಶಮದಮಾದಿಗುಣಗಳಿಂದ ಶ್ರೀ ಪರಮಾತ್ಮನನ್ನು ಪೂಜಿಸುವುದೇ ಅಭ್ಯರ್ಚನವೆನಿಸುತ್ತದೆ (ಅಂದರೆ ಶಮದಮಾದಿಗಳಿಂದ ಚೆನ್ನಾಗಿ ಪೂಜಿಸುವುದೇ ಅಭ್ಯರ್ಚನವು. ಶಮಾದಿಗಳಿಲ್ಲದೆ ಅಭ್ಯರ್ಚನವು ಕೂಡದಿರುವುದರಿಂದ ಸರ್ವರೂ ಶ್ರೀಪರಮಾತ್ಮನನ್ನು ಚೆನ್ನಾಗಿ ಪೂಜಿಸಬೇಕೆಂದು ಹೇಳಿದಾಗ ಎಲ್ಲರಲ್ಲಿಯೂ ಶಮದಮಾದಿಗಳು ಇರಬೇಕೆಂದು ಹೇಳಿದಂತೆ ಆಯಿತು) (೩) ಶಮದಮಾದಿಗಳು ಇಲ್ಲದೆ ಮೋಕ್ಷವನ್ನು ಯಾರೂ ಹೊಂದುವುದಿಲ್ಲ (ಅಂದರೆ ಶಮಾದಿಗಳಿಂದ ಅರ್ಚನವೇ ಅಭ್ಯರ್ಚನವು ಶಮಾದಿಗಳು ಇಲ್ಲದೆ ಬೇರೆ ಅರ್ಚನವಿಲ್ಲ. ಹೀಗೆ ಪೂಜಿಸಿದರೆ ಮೋಕ್ಷವಾಗುತ್ತದೆಂದು ಹೇಳಿದೆ. ಶಮಾದಿಗಳು ಇಲ್ಲದೆ ಮೋಕ್ಷವಾಗಲಾರದು) ಯಜ್ಞಾದಿಗಳನ್ನು

ಸರ್ವಥಾ ಬಿಡಕೂಡದೆಂದ ಮೊದಲು ಹೇಳಿದ್ದರಿಂದಲೂ (ಕ್ಷತ್ರಿಯಾದಿಗಳಲ್ಲಿಯೂ ಬ್ರಾಹ್ಮಣರ ಧರ್ಮಗಳಾದ ಶಮಾದಿಗಳು ಬೇರೆ ಎಂದು ತಿಳಿಯುತ್ತದೆ.) (೪) (ಶಮಾದಿಗಳು ಇಲ್ಲವಾದರೆ ಮೋಕ್ಷವು ಆಗಲಾರದೆಂಬುವುದು ಹೇಗೆ ಎಂದರೆ—) ಶ್ರೀಪರಮಾತ್ಮನಲ್ಲಿ ಆಸಕ್ತವಾದ ಬುದ್ಧ್ಯಾದಿಗಳು ಶಮವೆನ್ನಿಸುತ್ತದೆ. ಸರ್ವೇಂದ್ರಿಯಗಳನ್ನು ತನ್ನ ವಶದಲ್ಲಿ ಇಟ್ಟುಕೊಳ್ಳುವುದು ದಮವೆನಿಸುತ್ತದೆ (ಭಗವದ್ಭಕ್ತ್ಯಾದಿಗಳು ಇಲ್ಲವಾದರೆ ಮೋಕ್ಷವು ಸಿಗಲಾರದೆಂಬುವುದು ಸುಪ್ರಸಿದ್ಧವು) ಎಂದು ಭಾಗವತದಲ್ಲಿ ಹೇಳಿದೆ. (೫) ಕ್ಷತ್ರಿಯಾದಿಗಳು ಶೌಚ ತಪಸ್ಸು. ಕ್ಷಮಾ ಮೊದಲಾದ ಗುಣಹೀನರು ಆಗಬೇಕು. ಎಂದು ಕ್ಷತ್ರಿಯಾದಿಗಳ ಧರ್ಮಗಳನ್ನು ಹೇಳುವಾಗ ಹೇಳುವುದಿಲ್ಲ. (ಆದಕಾರಣ ನಿಷೇಧವಿಲ್ಲದಿರುವುದರಿಂದಲೂ ಕ್ಷತ್ರಿಯಾದಿಗಳಲ್ಲಿ ಶಮದಮಾದಿಗಳು ಇವೆ ಎಂದು ಅಂಗೀಕರಿಸಲೇಬೇಕು) ॥ ೨ ॥

ಪೀ— ಹೇತ್ವಂತರದಿಂದಲೂ ಕ್ಷತ್ರಿಯಾದಿಗಳಲ್ಲಿ ಶಮಾದಿ ಗುಣಗಳನ್ನು ಅಂಗೀಕರಿಸಲೇಬೇಕೆನ್ನುತ್ತಾರೆ—

ಟಾ ॥ (೧) ಯುಕ್ತಾ ಹ್ಯೇತೈಸ್ಸರ್ವೈರ್ಗುಣೈರ್ಜನಕತುಲಾಧಾರಾದಯಃ ॥ (೨) ಆತೋ ಯುದ್ಧೇಽಪಲಾಯನಮೈಶ್ವರ್ಯಂ ಚ ಕ್ಷತ್ರಿಯಸ್ಯ ವಿಶೇಷಗುಣಾ ॥ (೩) ತಾ ಚ ಕೃಷ್ಯಾದಯೋ ಜೀವನಾರ್ಥಂ ಶುಶ್ರೂಷಾ ಯಾಜನಂ ಜೀವನಾರ್ಥಂ ಪ್ರತಿಗ್ರಹಶ್ಚೇತ್ಯೇತ ಏವಾನ್ಯೇಷಾಂ ಪರಧರ್ಮಾಃ ॥ (೪) ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ ದಾನಂ ಚ ಕ್ಷತ್ರಿಯೇಽಧಿಕಾಃ ॥ (೫) ತದ್ವಿನಾ ಬ್ರಾಹ್ಮಣೇ ತಸ್ಮಾದ್ವೈಶ್ಯೇ ಶೂದ್ರೇ ತತೋಽಲ್ಪಕಾಃ । ಅಧ್ಯಾಪನಂ ಚ ಶುಶ್ರೂಷಾ ಜೀವನಾರ್ಥಮೃತೇ ಸತಾಂ (ಸದಾ) । ವಿಪ್ರಾದಿಷು ಕ್ರಮಾಜ್ಜ್ಞೇಯೋಃ ಶೂದ್ರಸ್ಯಾಧ್ಯಾಪನಂ ವಿನಾ । ತಸ್ಮಾಚ್ಛೂದ್ರೋಽಲ್ಪಶುಶ್ರೂಷುಃ ಸ್ವಭಾವಾಜ್ಜೀವನಂ ವಿನಾ ॥ ೩ ॥

ಅ ॥ (೧) ಜನಕರಾಜ, ತುಲಾಧಾರನೆಂಬುವ ವೈಶ್ಯ ದಂಡಧಾರ ಮೊದಲಾದ ಶೂದ್ರ ಮೊದಲಾದವರು ಶಮದಮ ಮೊದಲಾದ ಈ ಎಲ್ಲಾ ಗುಣಗಳಿಂದ ಕೂಡಿರುತ್ತಾರೆಂಬೀ ವಿಷಯವು ಭಾರತಾದಿಗಳಲ್ಲಿ ಕಥಿತವಾಗಿದೆ. (೨) (ಶಮದಮಾದಿಗಳು ಎಲ್ಲರಿಗೂ ಧರ್ಮವಾದರೆ ಇದು ಸ್ವಧರ್ಮವು. ಇದು ಪರಧರ್ಮವು ಎಂದು ವಿವೇಕವು ಹೇಗೆಂದರೆ—) ಹಿಂದೆ ಹೇಳಿದ ನ್ಯಾಯದಿಂದ ಶಮಾದಿಗಳು ಕ್ಷತ್ರಿಯಾದಿಗಳಲ್ಲಿಯೂ ಸಾಧಾರಣವಾಗಿರುವುದಾದರೂ, ಯುದ್ಧದಲ್ಲಿ ಹಿಂತಿರುಗದಿರುವುದು, ದುಷ್ಟನಿಗ್ರಹ, ಶಿಷ್ಟಪರಿಪಾಲನವೆಂಬೀ ಐಶ್ವರ್ಯವು ಇವೆರಡು ಕ್ಷತ್ರಿಯರಿಗೆ ವಿಶೇಷಗುಣಗಳು. (೩) (೧) ಕ್ಷತ್ರಿಯರಿಗೆ ವಿಶೇಷಗುಣಗಳೆಂದು ಹೇಳಲ್ಪಟ್ಟ ಅಪಲಾಯನ, ಐಶ್ವರ್ಯಾಖ್ಯ ಗುಣಗಳು ಬ್ರಾಹ್ಮಣಾದಿಗಳಿಗೆ ಪರಧರ್ಮಗಳು ವೈಶ್ಯರಿಗೆ ವಿಶೇಷಗುಣಗಳೆಂದು ಹೇಳಲ್ಪಟ್ಟ ಕೃಷಿ, ವಾಣಿಜ್ಯ, ಗೋರಕ್ಷ, ಕುಸೀದ ಎಂಬೀ ಗುಣಗಳು ಬ್ರಾಹ್ಮಣಾದಿಗಳಿಗೆ ಪರಧರ್ಮಗಳು ಜೀವನಕ್ಕಾಗಿ ಪಚ್ಚೂದ್ರನಿಗೆ ವಿಶೇಷಗುಣವೆಂದು ಹೇಳಲ್ಪಟ್ಟ ತ್ರೈವರ್ಣಿಕರ ಸೇವೆಯೂ ಬ್ರಾಹ್ಮಣಾದಿಗಳಿಗೆ ಪರಧರ್ಮಗಳು. ಜೀವನಕ್ಕಾಗಿ ಬ್ರಾಹ್ಮಣರಿಗೆ ವಿಶೇಷಗುಣಗಳೆಂದು ಹೇಳಲ್ಪಟ್ಟ ಯಾಜನ ಅಧ್ಯಾಪನ ಪ್ರತಿಗ್ರಹ ಈ ಗುಣಗಳೇ ಕ್ಷತ್ರಿಯಾದಿಗಳಿಗೆ ಪರಧರ್ಮಗಳಾಗುತ್ತವೆ (೪) (ಬ್ರಾಹ್ಮಣರ ಧರ್ಮಗಳೆಂದು ಹೇಳಲ್ಪಟ್ಟ ಶಮದಮಾದಿಗಳು ಸರ್ವಸಾಧಾರಣಗಳಾದಾಗ್ಯೂ ಕ್ಷತ್ರಿಯರಿಗೆ ಶೌರ್ಯ ಮೊದಲಾದವುಗಳಿಲ್ಲವೋ ವಿಶೇಷಧರ್ಮಗಳೆಂದು ಹೇಗೆ ಆಗಲಾರವು? ಬ್ರಾಹ್ಮಣನಿಗೆ ಅಧ್ಯಾಪನ ಮೊದಲಾದ [illegible] ಸಾಕ್ಷಾತ್ ಸ್ವಧರ್ಮವು ಎಂದ ಹೇಗೆ ಆಗಲಾರದು, ಎಂದರೆ [illegible] ಸಾಧಾರಣ ಧರ್ಮ

ಗಳೆಂದು ಪ್ರಮಾಣದಿಂದ ತೋರಿಸುತ್ತಾರೆ—) ಶೂರತನ, ಕಾಂತಿ, ಧೈರ್ಯ, ಪಟುತ್ವ, ದಾನ, ಇವು ಕ್ಷತ್ರಿಯರಲ್ಲಿ ಇತರರಿಗಿಂತ ಹೆಚ್ಚು ಇವೆ. (ಇವು ಸ್ವಾಭಾವಿಕಗಳು) (ಆ) (೧) ಈ ಶೌರ್ಯಾದಿಗುಣಗಳು ಬ್ರಾಹ್ಮಣರಲ್ಲಿ ಕ್ಷತ್ರಿಯರಿಗಿಂತ ಅಲ್ಪಗಳೂ ಅಸ್ವಾಭಾವಿಕಗಳೂ ಆಗಿವೆ. ಮತ್ತು ವೈಶ್ಯರಲ್ಲಿ ಬ್ರಾಹ್ಮಣರಿಗಿಂತ ಕಡಿಮೆ. ಶೂದ್ರರಲ್ಲಿ ವೈಶ್ಯರಿಗಿಂತ ಕಡಿಮೆ. ಜೀವನಕ್ಕಾಗಿ ಅಲ್ಲದೆ ಸಜ್ಜನರಿಗೆ (ಯಾವಾಗಲೂ) ಅಧ್ಯಯನಮಾಡಿಸುವುದು ಸೇವೆಯೂ ಕೂಡ ಬ್ರಾಹ್ಮಣಾದಿಗಳಲ್ಲಿ ಕ್ರಮವಾಗಿ ತಿಳಿದುಕೊಳ್ಳಬೇಕು. ಅಂದರೆ ಬ್ರಾಹ್ಮಣರಲ್ಲಿ ಈ ಧರ್ಮಗಳು ಎಲ್ಲರಿಗಿಂತ ಹೆಚ್ಚು. ಕ್ಷತ್ರಿಯರಲ್ಲಿ ಬ್ರಾಹ್ಮಣರಿಗಿಂತ ಕಡಿಮೆ. ವೈಶ್ಯರಲ್ಲಿ ಕ್ಷತ್ರಿಯರಿಗಿಂತ ಕಡಿಮೆ. ಶೂದ್ರರಿಗೆ ಸರ್ವಥಾ ಅಧ್ಯಾಪನ ಹೊರತು. ಅಂದರೆ ಜೀವನಕ್ಕಾಗಿ ಅಧ್ಯಯನ ಮಾಡಿಸುವುದು ಹೊರತು ಸೇವೆಯೇ ಮುಖ್ಯವಾದುದು. ಆದುದರಿಂದ ಸೇವೆಯು ಸರ್ವರ ಧರ್ಮವಾಗದಿರುವುದಾದರೂ ಶೂದ್ರರು ಜೀವನರೂಪವಾದ ಉಪಾಧಿ ಹೊರತು ಸ್ವಾಭಾವಿಕವಾಗಿಯೇ ಸಜ್ಜನರನ್ನು ಅಲ್ಪವಾಗಿ ಸೇವಿಸಿಕೊಂಡಿರುವವರು. (೨) ಶೂದ್ರನೂ ಜೀವನಕ್ಕಾಗಿ ಬಹಳ ಸೇವೆಯನ್ನು ಮಾಡಬಹುದು. ॥ ೩ ॥

ಪೀ—ಶೌರ್ಯಾದಿಗಳು ಸರ್ವಸಾಧಾರಣಗಳಾದರೆ ಕ್ಷತ್ರಿಯಾದಿಗಳಿಗೆ ವಿಶೇಷಗುಣಗಳು ಯಾವುವು? ಎಂದರೆ—

**ತಾ ॥ (೧) ಏತೇ ನೈಸರ್ಗಿಕಾ ಭಾವಾಃ ಸ್ವಾದ್ವ್ಯಾಪ್ತೋऽನ್ಯೋऽಪಿ ಕುತ್ರಚಿತ್ । ಬಲಾದ್ವಿರುದ್ಧಭಾವಸ್ತು ಹೇಯಃ ಸ್ವಾಭಾವಿಕೋऽಪಿ ಯಃ ॥ (೨) ಅನಿಸರ್ಗೋऽಪಿ ಹಿ ಶುಭೋ ವರ್ಧನೀಯಃ ಪ್ರಯತ್ನತಃ ॥ (೩) ಯಾಜನೈಶ್ವರ್ಯಪೂರ್ವಾಸ್ತು ನಾನ್ಯೈಃ ಕಾರ್ಯಾ ಶುಭಾ ಅಪಿ ॥ (೪) ಅಪಲಾಯನಂ ಚ ಶೂದ್ರಾಣಾಂ ಬ್ರಹ್ಮಕ್ಷತ್ರಾರ್ಥಮಿಷ್ಯತ ಇತಿ ಚ ॥ ೪ ॥**

ಅ ॥ (೧) ಸರ್ವಸಾಧಾರಣವಾಗಿ ಹೇಳಲ್ಪಟ್ಟ ಶೌರ್ಯಾದಿಗುಣಗಳಿಂದ ಇತರಗಳಾದ, ಯುದ್ಧದಲ್ಲಿ ಅಪಲಾಯನ, ದುಷ್ಟನಿಗ್ರಹ ಶಿಷ್ಟಪರಿಪಾಲನಗಳು ಕ್ಷತ್ರಿಯರಿಗೆ ಸ್ವಾಭಾವಿಕ ಧರ್ಮಗಳು. ಕೃಷ್ಯಾದಿಗಳು ವೈಶ್ಯರಿಗೆ ಸ್ವಾಭಾವಿಕ ಧರ್ಮಗಳು. ಜೀವನಕ್ಕಾಗಿ ಶುಶ್ರೂಷಾ ಶೂದ್ರನಿಗೆ ಸ್ವಾಭಾವಿಕ ಧರ್ಮವು. ಯಾಜನ, ಜೀವನಕ್ಕಾಗಿ ಪ್ರತಿಗ್ರಹ, ಇವುಗಳು ಬ್ರಾಹ್ಮಣರಿಗೆ ಸ್ವಾಭಾವಿಕ ಅಸಾಧಾರಣ ಧರ್ಮಗಳು (ಯುದ್ಧಾದಿ ಧರ್ಮಗಳು ಕ್ಷತ್ರಿಯಾದಿಗಳಿಗೆ ನಿಯತಗಳೇ ಆಗುತ್ತವೋ ಎಂದರೆ—) ಹಿಂದೆ ಹೇಳಿದ ಶ್ಲೋಕ ವ್ಯಾಖ್ಯಾನವಾಗಿ ಬ್ರಾಹ್ಮಣನಿಗೆ ಯುದ್ಧಾದಿಗಳೂ ಕ್ಷತ್ರಿಯನಿಗೆ ಕೃಷ್ಯಾದಿಗಳೂ ಇದು ಮೊದಲಾದ ಧರ್ಮವೂ ಕ್ವಚಿತ್ ಉಂಟಾಗುವುದು. (ಬ್ರಾಹ್ಮಣನಿಗೆ ಜೀವನಕ್ಕಾಗಿ ಯಾಜನ ಮೊದಲಾದುದು ಸ್ವಾಭಾವಿಕವಾದುದಾಗ್ಯೂ ಅದು ಕದಾಚಿತ್ ತ್ಯಾಜ್ಯವೂ ಆಗುವುದು ಪ್ರಯತ್ನದಿಂದ ಯುದ್ಧ ಮೊದಲಾದ ವಿರುದ್ಧ ಧರ್ಮವೂ ಬರುವುದು) (೨) (ಅಧ್ಯಾಪನ ಮೊದಲಾದ ಕೆಲವು ಗುಣಗಳು ಬ್ರಾಹ್ಮಣನಿಗೆ ಅಸಾಧಾರಣ ಧರ್ಮಗಳಾಗಿರುವುದರಿಂದ ಕ್ಷತ್ರಿಯನಿಗೆ ಅಕ್ರಿಯಗಳಾಗದಿದ್ದರೂ ತ್ಯಾಜ್ಯಗಳೆಂದು ತಿಳಿದುಕೊಳ್ಳಕೂಡದು. ಎನ್ನುತ್ತಾರೆ—) ಕ್ಷತ್ರಿಯನಿಗೆ ಅಧ್ಯಾಪನ ಮೊದಲಾದುದು ಸ್ವಾಭಾವಿಕವಾಗದಿದ್ದರೂ ಶುಭವಾದುದನ್ನು ಪ್ರಯತ್ನಪೂರ್ವಕವಾಗಿ ಅಭಿವರ್ಧಿಸಿಕೊಳ್ಳತಕ್ಕದ್ದು. (೩) ಯಾಜನ, ಐಶ್ವರ್ಯ, ಯುದ್ಧದಲ್ಲಿ [illegible], ಅಧ್ಯಾಪನ, ಪ್ರತಿಗ್ರಹಾದಿಗಳು ಶುಭಧರ್ಮಗಳಾದಾಗ್ಯೂ ಅವುಗಳನ್ನು ಇತರರು ಸರ್ವಥಾ ಮಾಡತಕ್ಕದ್ದಲ್ಲ. (ಅಂದರೆ ಯಾಜನವನ್ನು ಕ್ಷತ್ರಿಯನು ಮಾಡಿ

ಲಾರನು. ಬ್ರಾಹ್ಮಣನು ದುಷ್ಟನಿಗ್ರಹ ಶಿಷ್ಟಪರಿಪಾಲನ ಇತ್ಯಾದಿಗಳನ್ನು ಮಾಡಕೂಡದು, ಇತ್ಯಾದಿ ಪ್ರಕಾರ ಇಟ್ಟುಕೊಳ್ಳಬೇಕು.) (೪) ಬ್ರಾಹ್ಮಣರಿಗಾಗಿಯೂ ಕ್ಷತ್ರಿಯರಿಗಾಗಿಯೂ ಕಾರಣಾಂತರದಿಂದ ಯುದ್ಧಕ್ಕೆ ಸನ್ನದ್ಧರಾಗಿ ನಿಂತಿರುವ ಶೂದ್ರರು ಯುದ್ಧದಲ್ಲಿ ಓಡಬಾರದು. ಹೀಗೆ ಓಡದಿರುವುದು ಧರ್ಮವು. || ೪ ||

**ಕಾ || (೧) ಪ್ರಸಹ್ಯ ವಿತ್ತಾಹರಣಂ ಶಾರೀರೋ ದಂಡ ಏವ ಚ | ಅಶಿಷ್ಟಾನಾಂ ಶಾಸನಂ ಚ ತಥೈವಾರ್ಥವಿನಾಶನಂ | ಏಷ ಈಶ್ವರಭಾವಃ ಸ್ಯಾನ್ನ ಕಾರ್ಯಃ ಕ್ಷತ್ರಿಯೇತರೈಃ || (೨) ಸರ್ವೇ ವಿಧರ್ಮಿಣಃ ಶಾಸ್ಯಾಃ ಕ್ಷತ್ರಿಯೈರ್ಯತ್ನತಃ ಸದಾ | ಅಂಗಾದ್ಯಹಾನಿಕೃದ್ದಂಡಃ ಶಿಷ್ಯೇಷು ಬ್ರಾಹ್ಮಣಾದಿಭಿಃ | ಕಾರ್ಯೋ ದೇಹೇಽಪಿ ಶಿಷ್ಯಶ್ಚ ಸ್ವಾಮಿನಾ ಸ್ವೇನ ವಾಽರ್ಪಿತಃ || (೩) ಪುತ್ರಾನುಜಾದಯಃ ಸರ್ವೇ ಶಿಷ್ಯಾ ಏವ ನಿಸರ್ಗತಃ | ಗುರವಶ್ಚೈವ ಮಿತ್ರಾಣಿ ಸಖಿಸಬ್ರಹ್ಮಚಾರಿಣಃ | ಸಂಬಂಧಿನಶ್ಚ ಸರ್ವೇಽಪಿ ತತ್ತದ್ಯೋಗ್ಯಕಿಯಾಃ ಖಿಲೈಃ | ಶಿಕ್ಷಣೀಯೇಷು ಭಾವೇಷು ಶಿಕ್ಷಣೀಯಾಃ ಪ್ರಯತ್ನತಃ || (೪) ಉನ್ಮಾದೇ ಬಂಧನಾದ್ಯೈರ್ವಾ ತಾಡನಂ ನ ಗುರೋಃ ಕ್ವಚಿತ್ | ಪಾಪಂ ಚರಂತಸ್ತ್ವನ್ಯೇಽಪಿ ಸರ್ವೇ ದೃಷ್ಟಿಪಥಂ ಗತಾಃ | ಶಕ್ತಿತೋ ವಾರಣೀಯಾಃ ಸ್ಯುರ್ದೇಶಕಾಲಾನುಸಾರತಃ || (೫) ತದುಕ್ತಮವಿರೋಧಾದ್ಗುರೋಃ ಸಂತ್ಯಾಜ್ಯಾ ಗುರವೋಽಪಿ ತು | ಯಥಾಶಕ್ತ್ಯನುಶಾಸ್ಯೈವ ಕಾಲತೋಽಪಿ ನ ಚೇಚ್ಛುಭಾಃ || (೬) ವಿಷ್ಣೌ ಪರಮಭಕ್ತಸ್ತು ನ ತ್ಯಾಜ್ಯಃ ಶಾಸ್ಯ ಏವ ಚ | ಶಿಕ್ಷಯಂಶ್ಚ ಗುರೂಂಶ್ಚಿಷ್ಯೋ ಗುರುವನ್ನೈವ ಶಿಕ್ಷಯೇತ್ || (೭) ಮಹಾಂತೋ ನಾನುಶಾಸ್ಯಾಶ್ಚ ವಿರುದ್ಧಾಚರಿತಾ ಅಪಿ | ಯದಿ ಚ ಸ್ವಾಧಿಕಾ(ನ ಸ್ತೋತ್ರಮಾ)ನಾಂ ತೇ ವಿರೋಧಂ ನೈವ ಕುರ್ವತೇ ಇತ್ಯಾದಿ ಚ || ೫ ||**

ಅ || (೧) ಬಲಾತ್ಕಾರದಿಂದ ದ್ರವ್ಯವನ್ನು ಅಪಹರಿಸುವುದು, ದೇಹಕ್ಕೆ ತಾಡನ ಮೊದಲಾದುದನ್ನು ಮಾಡುವುದು, ಶಿಷ್ಟರಾಗದವರನ್ನು ಶಾಸನಮಾಡುವುದು ಹಾಗೆಯೇ ದ್ರವ್ಯವನ್ನು ವಿನಾಶಗೊಳಿಸುವುದು, ಈ ರೀತಿಯಾದ ಐಶ್ವರ್ಯವು ಕ್ಷತ್ರಿಯರಿಗೆ ಧರ್ಮವು. ಇತರರಿಗೆ ಧರ್ಮವಲ್ಲ. (೨) ಧರ್ಮಭ್ರಷ್ಟರೆಲ್ಲರನ್ನು ಕ್ಷತ್ರಿಯರು ಸದಾ ಪ್ರಯತ್ನಪೂರ್ವಕವಾಗಿ ಶಾಸನಮಾಡಲೇಬೇಕು. ಬ್ರಾಹ್ಮಣಾದಿಗಳು ಕೂಡ ಅಂಗಾದಿಗಳಿಗೆ ಹಾನಿಕರವಾಗದಿರುವ ದಂಡವನ್ನು ಶಿಷ್ಯರು, ಮಕ್ಕಳು ಇತ್ಯಾದಿಗಳಿಗೆ ದೇಹಕ್ಕೆ ಮಾಡಬೇಕು. ತಾನಾಗಿಯೇ ಬಂದವನು ಅಥವಾ ಅವನ ಸ್ವಾಮಿಯಿಂದ ಕೊಡಲ್ಪಟ್ಟವನೂ ಶಿಷ್ಯನೆನ್ನಿಸುತ್ತಾನೆ (೩) ಮಕ್ಕಳು ತಮ್ಮಂದಿಯರು ಮೊದಲಾದವರೆಲ್ಲರೂ ಸ್ವಭಾವತಃ ಶಿಷ್ಯರೇ ಆಗಿರುತ್ತಾರೆ. ಗುರುಗಳು, ಮಿತ್ರರು, ಸಖಿಗಳು, ಸತೀರ್ಥ್ಯರು, ಸಂಬಂಧಿಕರು ಎಲ್ಲರೂ ಅವರವರ ಯೋಗ್ಯತಾನುಸಾರವಾಗಿ ಎಲ್ಲರೂ ಶಿಕ್ಷಿಸಲಿಕ್ಕೆ ಯೋಗ್ಯವಾದ ಅರ್ಥವಿಷಯದಲ್ಲಿ ಪ್ರಯತ್ನಪೂರ್ವಕವಾಗಿ ಶಿಕ್ಷಿಸಲ್ಪಡಬೇಕು. (೪) ಗುರುಗಳಿಗೆ ಹುಚ್ಚು ಹಿಡಿದರೆ ಕೈಕಾಲುಗಳನ್ನು ಕಟ್ಟಿಹಾಕುವದು, ಬಿಗಿಸುವದು, ಇತ್ಯಾದಿಗಳಿಂದ ಶಾಸನ ಮಾಡಬಹುದು. ಸರ್ವಥಾ ಹೊಡೆಯಬಾರದು ಇತರರೂ ಕೂಡ ಪಾಪವನ್ನು ಮಾಡುವವರು ದೃಷ್ಟಿ ವಿಷಯರಾದರೆ ದೇಶಕಾಲಾನುಸಾರವಾಗಿ, ಶಕ್ತ್ಯನುಸಾರವಾಗಿ ಶಿಕ್ಷ್ಯರಾಗುತ್ತಾರೆ. ಗುರುಗಳೇ ಆದರೂ ಅವರು ತಮಗಿಂತ ಉತ್ತಮರಿಗೆ ವಿರೋಧರೂಪ ಮಹಾಪಾಪವನ್ನು ಮಾಡಿದರೆ ಅಂತಹವರನ್ನು ಶಕ್ತ್ಯನುಸಾರ ಅನುಶಾಸನಮಾಡಿದರೂ ಅವರು ಧರ್ಮಮಾರ್ಗಕ್ಕೆ ಬಾರದಿದ್ದರೆ (ತ್ಯಾಜ್ಯರಾಗುವರೆ)

ಅವರನ್ನು ಬಿಡಲೇಬೇಕು. (೬) ಗುರುಗಳು ಶ್ರೀವಿಷ್ಣುವಿನಲ್ಲಿ ಪರಮಭಕ್ತರಾಗಿದ್ದರೆ ಅವರು ತಮಗಿಂತ ಉತ್ತಮರಾದವರ ವಿರೋಧವನ್ನು ಮಾಡಿದರೂ ಅಂತಹವರನ್ನು ಬಿಡಕೂಡದು ಶಾಸನಮಾಡಲೇಬೇಕು. ಗುರುಗಳನ್ನು ಶಿಕ್ಷಿಸತಕ್ಕ ಶಿಷ್ಯನು ಗುರುಗಳು ಶಿಷ್ಯನನ್ನು ಶಿಕ್ಷಿಸುವಂತೆ ತಾಡನಾದಿಗಳಿಂದ ಗುರುಗಳನ್ನು ಶಿಕ್ಷಿಸಕೂಡದು. (೭) ಮಹಾನುಭಾವರು ತಮ್ಮಕ್ಕಿಂತ ಉತ್ತಮರಾದವರ ವಿರೋಧವನ್ನು ಮಾಡದೆ ಬೇರೆ ಪಾಪಗಳನ್ನು ಮಾಡಿದರೂ (ಶಾಸ್ತ್ರವಿರುದ್ಧಾಚಾರವುಳ್ಳವರಾದರೂ) ಅವರನ್ನು ಶಿಕ್ಷಿಸಕೂಡದು. ಇತ್ಯಾದಿಪ್ರಮೇಯವು ಹೇಳಲ್ಪಟ್ಟಿದೆ. ॥ ೫ ॥

ಟೀ—ಬ್ರಾಹ್ಮಣಾದಿಗಳ ಆಪದ್ಧರ್ಮಗಳನ್ನು ಸ್ಮೃತಿಪ್ರಮಾಣವನ್ನು ಹೇಳಿ ತೋರಿಸುತ್ತಾರೆ—

ತಾ ॥ (೧) ಆಪತ್ಸು ವಿಪ್ರಃ ಕ್ಷಾತ್ರಂ ತು ವಿಶಾಂ ವಾ ಧರ್ಮಮಾಚರೇತ್ । ಕ್ಷಾತ್ರಾಸಿದ್ಧೌ
ನ ಶೂದ್ರಸ್ಯ ತು ವಿಪ್ರಕ್ಷತ್ರಿಯಯೋಃ ಕ್ವಚಿತ್ ॥ (೨) ಕ್ಷತ್ರಿಯೋ ಬ್ರಾಹ್ಮಮಾಪತ್ಸು
ತದಾಪತ್ಸು ವಿಶಾಮಪಿ । ಕ್ಷತ್ರಿಯೋ ವಿಪ್ರಧರ್ಮೋಽಪಿ ನೈವ ಭೈಕ್ಷ್ಯಪ್ರತಿಗ್ರಹೀ ॥
(೩) ವೈಶ್ಯ ಆಪತ್ಸು ಶೌದ್ರಂ ತು ಧರ್ಮಮೇಕಂ ನ ಚಾಪರಂ ॥ (೪) ಶೂದ್ರ ಆಪತ್ಸು
ವಿಡ್ಧರ್ಮಾ ತದಾಪತ್ಸು ಚ ಕಾರುಕಃ । ಶೂದ್ರಸ್ತು ವೈಶ್ಯಧರ್ಮೋಽಪಿ ನೈವ ವೇದಾ-
ಕ್ಷರೋ ಭವೇತ್ । ಅತ್ಯಾಪದಿ ಕ್ಷತ್ರಿಯೋಽಪಿ ಪಾದಶುಶ್ರೂಷಣಂ ವಿನಾ । ಶೌದ್ರ-
ಧರ್ಮಂ ಚರನ್ವಿಪ್ರಕ್ಷತ್ರಿಯೇಷು ನ ದುಷ್ಯತಿ ॥ (೫) ಯೇಷು ಕರ್ಮಸು ಯಾಚ್ಯಃ
ಸ್ಯಾತ್ಸ್ವಾಮಿನಾಽಪಿ ನ ಯಾಚಿತಾ । ಶೌದ್ರಾಣ್ಯಪಿ ಸ್ವಧರ್ಮತ್ವೇ ಕ್ಷತ್ರಿಯಸ್ಯಾಪ-
ದೋ ಯದಿ । ಅತ್ಯನರ್ಥೇದ್ವಲಾಧಿಕ್ಯಂ ಸಾನುಬಂಧಾದಪಿ ಪ್ರಭೋಃ । ಧರ್ಮಾರ್ಥಂ
ಸೇವತೋಽರ್ಥಾರ್ಥಂ ವಿಪ್ರಧರ್ಮಾದಿತಾದ್ವರಃ । ಪ್ರಭುಣಾ ಯಾಚ್ಯವೃತ್ತಿಸ್ತು
ವಿಶೇಷೇಣಾಪಿ ಧರ್ಮಭಾಕ್ ॥ (೬) ಬಾಹ್ವೋರ್ಬಲಾಧಿಕೋ ಯಃ ಸ್ಯಾತ್ ಕ್ಷತ್ರಿ-
ಯೋ ವಿದ್ಯಯಾಧಿಕಃ । ವಿಪ್ರೋ ಭಾಗವತೌ ಚೈತೌ ಸೇವ್ಯಾ ಲೋಕಾಸ್ತಯೋ-
ರಿಮ ಇತ್ಯಾದಿ(ತಿ) ವ್ಯಾಸಸ್ಮೃತೌ ॥ ೬ ॥ ॥ ೯೮ ॥

ಅ ॥ (೧) ಬ್ರಾಹ್ಮಣನು ಆಪತ್ಕಾಲದಲ್ಲಿ ಕ್ಷತ್ರಿಯರ ಧರ್ಮವನ್ನು ಮಾಡಬಹುದು ಅದು ಸಿಗದಿದ್ದರೆ (ಅದರಿಂದ ಜೀವನವಾಗದಿದ್ದರೆ) ವೈಶ್ಯರ ಧರ್ಮವನ್ನು ಮಾಡಬಹುದು ಶೂದ್ರನು ಯಾವಾಗಲೂ ಎಂತಹ ಆಪತ್ತಿನಲ್ಲಿಯೂ ಬ್ರಾಹ್ಮಣ ಕ್ಷತ್ರಿಯರ ಧರ್ಮವನ್ನು ಮಾಡಬಾರದು. (೨) ಕ್ಷತ್ರಿಯನು ಆಪತ್ಕಾಲದಲ್ಲಿ ಬ್ರಾಹ್ಮಣರ ಧರ್ಮವನ್ನು ಮಾಡಬಹುದು. ಅದೂ ಸಿಗದಿದ್ದರೆ—ವೈಶ್ಯರ ಧರ್ಮವನ್ನು ಮಾಡಬಹುದು. ಕ್ಷತ್ರಿಯನು ಬ್ರಾಹ್ಮಣರ ಧರ್ಮವುಳ್ಳವನಾದಾಗ್ಯೂ ಭಿಕ್ಷಾನ್ನವನ್ನು ಬೇಡುವವನಾಗಬಾರದು (೩) ವೈಶ್ಯನು ಆಪತ್ಕಾಲದಲ್ಲಿ ಶೂದ್ರಧರ್ಮವೊಂದನ್ನೇ ಮಾಡಬೇಕು ಬ್ರಾಹ್ಮಣ ಕ್ಷತ್ರಿಯರ ಧರ್ಮವನ್ನು ಮಾಡಬಾರದು ಶೂದ್ರನು ಆಪತ್ಕಾಲದಲ್ಲಿ ವೈಶ್ಯಧರ್ಮವುಳ್ಳವನಾಗಬಹುದು ಇದರಿಂದಲೂ ಜೀವನವಾಗದಿದ್ದರೆ ಕಮ್ಮಾರ ಬಡಗಿ ಮೊದಲಾದ ಕರ್ಮವುಳ್ಳವನಾಗಬಹುದು. (೪) ಶೂದ್ರನು ವೈಶ್ಯರ ಧರ್ಮವುಳ್ಳವನಾದಾಗ್ಯೂ ವೇದಾಕ್ಷರಾದಿಗಳ ಶ್ರವಣಾದಿಗಳುಳ್ಳವನಾಗಬಾರದು ಅತ್ಯಾಪತ್ಕಾಲದಲ್ಲಿ ಕ್ಷತ್ರಿಯನಾದರೂ ಬ್ರಾಹ್ಮಣ ಕ್ಷತ್ರಿಯರ ವಿಷಯದಲ್ಲಿ ಶೂದ್ರರ ಸಹಜ ಧರ್ಮವಾದ ಸೇವೆಯನ್ನು ಮಾಡುವವನಾದರೂ ಪಾದಸೇವೆ ಹೊರತು ಬೇರೆ ಸೇವೆ ಮಾಡಿದರೆ ದುಷ್ಟನಾಗುವುದಿಲ್ಲ (೫) (ಕ್ಷತ್ರಿಯನು ಶೂದ್ರಧರ್ಮವನ್ನು ಮಾಡಿದರೆ ದುಷ್ಟನಾಗುವುದಿಲ್ಲವೆಂದೇ ಅಲ್ಲ ಮುಕ್ತಿ) ಕ್ಷತ್ರಿಯನಿಗೆ ತನ್ನ ಧರ್ಮವನು ಮಾಡಲಿಕ್ಕೆ ಅನುಕೂ

ವಾಗದಿದ್ದರೆ ಅತನಿಗೆ ಪರಿವಾರನಾದ ಪ್ರಭುವಿನಿಂದ ಬಲವು ಜಾಸ್ತಿ ಇದ್ದರೂ ಧರ್ಮವು ಲಭಿಸುವುದಕ್ಕಾಗಿ ಅತನನ್ನು ತಿರಸ್ಕರಿಸದೆ ಪ್ರಭುವಿನಿಂದಲೂ ಯಾವ ಕರ್ಮಗಳಲ್ಲಿ ಪ್ರೇರಿತನಾಗುತ್ತಾನೋ, ಆ ಕರ್ಮವು ಶೂದ್ರಕರ್ಮವಾದರೂ ಅದನ್ನು ಮಾಡಬಹುದು. ತಾನಾಗಿ ಕರ್ಮಕ್ಕಾಗಿ ಯಾಚನೆಮಾಡಬಾರದು. ಇಷ್ಟಾರ್ಥವಾಸ ಮೊದಲಾದ ಪ್ರಯೋಜನವು ಸಿಗುವುದಕ್ಕಾಗಿ ಸೇವಿಸುವ ಧೀವರಾದಿಗಳಿಗೆ ಬ್ರಾಹ್ಮಣಾದಿಗಳ ಧರ್ಮವನ್ನು ಸೇವಿಸುವುದಕ್ಕಿಂತಲೂ ಅದು ಶ್ರೇಷ್ಠವಾದ ಧರ್ಮವಾಗುತ್ತದೆ ಪ್ರಭುವಿನಿಂದ ಪ್ರಾರ್ಥ್ಯ ವಾದ ಕರ್ಮವನ್ನು ಮಾಡುವವನು ವಿಶೇಷವಾಗಿಯೂ ಧರ್ಮವನ್ನು ಮಾಡುವವನೇ ಆಗುತ್ತಾನೆ (೬) ಯಾವ ಕ್ಷತ್ರಿಯನು ಬಾಹುಗಳ ಬಲವಿಷಯದಲ್ಲಿ ಇತರರಿಂದ ಅಧಿಕನಾಗುತ್ತಾನೋ. ಯಾವ ಬ್ರಾಹ್ಮಣನು ವಿದ್ಯೆಯಿಂದ ಅಧಿಕನಾಗುತ್ತಾನೋ. ಇವರಿಬ್ಬರು ಭಗವದ್ಭಕ್ತರಾದವರ ನಿಯಾಮಕರಿಂದ ಸಹಿತವಾದ ಸಂಪೂರ್ಣ ಜಗತ್ತು ಅವರಿಬ್ಬರ ಅಧೀನಗಳು ಎಂದೇ ತಿಳಿಯಬೇಕು. ಇತ್ಯಾದಿ ಪ್ರಮೇಯವು ವ್ಯಾಸಸ್ಮೃತಿಯಲ್ಲಿದೆ. ॥ ೬ ॥ ॥ ೪೮ ॥

ಟೀ—ಪೂರ್ವದಲ್ಲಿ ತಮ್ಮತಮ್ಮ ಕರ್ಮಗಳಲ್ಲಿ ಆಸಕ್ತನಾದವನು ಮುಕ್ತನಾಗುತ್ತಾನೆಂದು ಹೇಳಿದಕ್ಕೆ ಅವಶ್ಯಕ ಬೇರೆ ಧರ್ಮಗಳನ್ನು ಹೇಳುತ್ತಾರೆ—

**ಗೀ ॥ ಅಸಕ್ತಬುದ್ಧಿಃ ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸನ್ನ್ಯಾಸೇನಾಧಿಗಚ್ಛತಿ ॥ ೪೯ ॥**

ಅ ॥ ಸರ್ವತ್ರ = ಶಬ್ದ ಮೊದಲಾದ ಎಲ್ಲಾ ವಿಷಯಗಳಲ್ಲಿ ಅಸಕ್ತಬುದ್ಧಿಃ = ಇಚ್ಛೆ ಇಲ್ಲದಬುದ್ಧಿಯುಳ್ಳ ಜಿತಾತ್ಮಾ = ಮನಸ್ಸನ್ನು ತನ ವಶಪಡಿಸಿಕೊಂಡಿರುವ, ವಿಗತಸ್ಪೃಹ = ವಿಷಯಗಳಿಂದುಂಟಾಗುವ ಐಹಿಕ ಸುಖದಲ್ಲಿಯೂ ಕ್ಷುದ್ರವಾದ ಸ್ವರ್ಗಾದಿ ಸುಖದಲ್ಲಿಯೂ ಇಚ್ಛೆ ಇಲ್ಲದ ಮನುಷ್ಯನು, ಪರಮಾಂ = ಸಂಪೂರ್ಣವಾದ. ನೈಷ್ಕರ್ಮ್ಯಸಿದ್ಧಿಂ = ಮೋಕ್ಷೋಪಯುಕ್ತ ಸಿದ್ಧಿಯನ್ನು ಅಥವಾ ಪ್ರಾರಬ್ಧಕರ್ಮದಿಂದ ಇತರವಾದ ಸರ್ವಾನಿಷ್ಟಕರ್ಮನಾಶಾಖ್ಯ ಸಿದ್ಧಿಯನ್ನು. ಸನ್ನ್ಯಾಸೇನ = ಕಾಮ್ಯಕರ್ಮಪರಿತ್ಯಾಗದಿಂದ ಅಥವಾ ಸಮಸ್ತಕರ್ಮಗಳನ್ನು ಶ್ರೀಪರಮಾತ್ಮನಲ್ಲಿ ಸಮರ್ಪಣದಿಂದ. ಅಧಿಗಚ್ಛತಿ = ಹೊಂದುತ್ತಾನೆ. ॥ ೪೯ ॥

ಟೀ—ನೈಷ್ಕರ್ಮ್ಯಸಿದ್ಧಿಂ = ಮೋಕ್ಷವನ್ನು ಎಂದು ಕೆಲವರು ಅರ್ಥವನ್ನು ಹೇಳುತ್ತಾರೆ. ಅದು ಅಯುಕ್ತವೆನ್ನುತ್ತಾರೆ —

**ಭಾ ॥ ನೈಷ್ಕರ್ಮ್ಯಸಿದ್ಧಿಂ ನೈಷ್ಕರ್ಮ್ಯಫಲಾಂ ಯೋಗಸಿದ್ಧಿಂ ॥ ೪೯ ॥**

ಅ ॥ ನೈಷ್ಕರ್ಮ್ಯಸಿದ್ಧಿಂ = ಮೋಕ್ಷವೇ ಫಲವಾಗಿ ಉಳ್ಳ, ಕರ್ಮಸಮಾಧಿರೂಪವಾದ ಯೋಗಕ್ಕೆ ಫಲಭೂತವಾದ ಅಪರೋಕ್ಷಜ್ಞಾನವನ್ನು. ಎಂದರ್ಥವು ॥ ೪೯ ॥

ಟೀ —ನೈಷ್ಕರ್ಮ್ಯಸಿದ್ಧಿಂ ಎಂಬುವ ಪದದ ಅರ್ಥವನ್ನು ಹೇಳುತ್ತಾರೆ—

**ಟಾ ॥ ನೈಷ್ಕರ್ಮ್ಯಸಿದ್ಧಿಂ ಅನಿಷ್ಟಸರ್ವಕರ್ಮನಾಶಾಖ್ಯಸಿದ್ಧಿಂ ॥ ೪೯ ॥**

ಅ ॥ ನೈಷ್ಕರ್ಮ್ಯಸಿದ್ಧಿಂ—ಅಪ್ರಾರಬ್ಧವಾದ, ಅನಿಷ್ಟವಾದ ಸರ್ವಕರ್ಮ ನಾಶಾಖ್ಯಸಿದ್ಧಿಯನ್ನು ಎಂದರ್ಥವು. ॥ ೪೯ ॥

ಪೀ—ನೈಷ್ಕರ್ಮ್ಯಸಿದ್ಧಿ ಸಾಧನವನ್ನು ವಿವರಿಸುತ್ತಾ ಆ ಮೇಲೆ ಆಗುವ ಫಲವನ್ನು ಹೇಳುತ್ತಾನೆ—

ಗೀ ॥ ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಽಽಪ್ನೋತಿ ನಿಬೋಧ ಮೇ ।
ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥ ೫೦ ॥

ಅ ॥ ಕೌಂತೇಯ=ಅರ್ಜುನನೇ, ಯಾ=ಯಾವ ನೈಷ್ಕರ್ಮ್ಯಸಿದ್ಧಿಯು, ಜ್ಞಾನಸ್ಯ=ಜ್ಞಾನದ, ಪರಾ ನಿಷ್ಠಾ=ಕೊನೆಯದಾದ ಮೋಕ್ಷಸಾಧನಾವಸ್ಥೆಯೋ, (ತಾಂ) ಸಿದ್ಧಿಂ=ಅಂತಹ ಮೋಕ್ಷೋಪಾಯ ಸಿದ್ಧಿಯನ್ನು (ಮನುಷ್ಯನು) ಯಥಾ ಪ್ರಾಪ್ತಃ=ಯಾವಪ್ರಕಾರ ಹೊಂದಿದವನಾಗಿ, ಬ್ರಹ್ಮ=ಅಪರಬ್ರಹ್ಮ ಎನಿಸಿದ ಲಕ್ಷ್ಮೀದೇವಿಯನ್ನು, ಆಪ್ನೋತಿ=ಹೊಂದುತ್ತಾನೋ, ತಥಾ=ಆ ಪ್ರಕಾರವನ್ನು, ಸಮಾಸೇನೈವ=ಸಂಕ್ಷೇಪದಿಂದಲೇ, ಮೇ=ನನ್ನಿಂದ ನಿಬೋಧ=ತಿಳಿದುಕೊಳ್ಳು. ॥ ೫೦ ॥

ಪೀ—ಪ್ರತಿಜ್ಞಾತಗಳಾದ ಧರ್ಮಾಂತರಗಳನ್ನು ಹೇಳುತ್ತಾರೆ—

ಗೀ ॥ ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾಽಽತ್ಮಾನಂ ನಿಯಮ್ಯ ಚ ।
ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ ೫೧ ॥
ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।
ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨ ॥

ಅ ॥ ವಿಶುದ್ಧಯಾ=ನಿರ್ಮಲವಾದ, ಬುದ್ಧ್ಯಾ=ಬುದ್ಧಿಯಿಂದ, (ಅಂದರೆ ವಿಷಯಗಳಲ್ಲಿ ಆಸಕ್ತಿಯಿಲ್ಲದ ಅಂತಃಕರಣದಿಂದ) ಯುಕ್ತಃ=ಕೂಡಿದ ಮನುಷ್ಯನು, ಧೃತ್ಯಾ=ಧೈರ್ಯದಿಂದ (ಸ್ತಂಭನ ಶಕ್ತಿಯಿಂದ) ಆತ್ಮಾನಂ=ಮನಸ್ಸನ್ನು, ನಿಯಮ್ಯ ಚ=ವಿಷಯಗಳ ಕಡೆಗೆ ಹೋಗದಂತೆ ಮಾಡಿ ಶಬ್ದಾದೀನ್ ವಿಷಯಾನ್=ಶಬ್ದ ಮೊದಲಾದ ವಿಷಯಗಳನ್ನು, ತ್ಯಕ್ತ್ವಾ=ಬಿಟ್ಟು, (ಅಂದರೆ ಶಬ್ದಾದಿವಿಷಯಗಳನ್ನು ಅನುಭವಿಸಬೇಕೆಂಬುವ ಇಚ್ಛೆಯನ್ನು ಬಿಟ್ಟು) ರಾಗದ್ವೇಷೌ=(ಎಲ್ಲಾ ವಸ್ತುಗಳಲ್ಲಿಯೂ ರಾಗದ್ವೇಷಗಳನ್ನು, ವ್ಯುದಸ್ಯ ಚ=ಬಿಟ್ಟು, ವಿವಿಕ್ತಸೇವೀ=ದುಷ್ಟಜನರ ಸಮ್ಪರ್ಕ ಇಲ್ಲದಿರುವ ಪ್ರದೇಶದಲ್ಲಿ ಆವಾಸಮಾಡುವವನಾಗಿ, ಲಘ್ವಾಶೀ=ನಿಯತವಾದ ಅಲ್ಪಾಹಾರವುಳ್ಳವನಾಗಿ ಯತವಾಕ್ಕಾಯಮಾನಸಃ=ವಚನ, ದೇಹ, ಮನಸ್ಸು ಇವುಗಳನ್ನು ಸದ್ವಿಷಯಗಳಲ್ಲಿಯೇ ಹೋಗುವಂತೆ ಮಾಡುವವನಾಗಿ, ನಿತ್ಯಂ ಧ್ಯಾನಯೋಗಪರಃ=ನಿತ್ಯದಲ್ಲಿಯೂ ಧ್ಯಾನರೂಪವಾದ ಉಪಾಯದಲ್ಲಿ ಆಸಕ್ತನಾಗಿ, ವೈರಾಗ್ಯಂ=ವಿರಕ್ತಿಯನ್ನು, ಸಮುಪಾಶ್ರಿತಃ=ಆಶ್ರಯಿಸಿದವನಾಗಿ (ಧ್ಯಾನದಲ್ಲಿ ಆಸಕ್ತನಾಗುತ್ತಾನೆ.) ॥ ೫೧, ೫೨ ॥

ಪೀ—ಸಿದ್ಧಿಂ ಪ್ರಾಪ್ತಃ (೫೦) ಎಂಬುವುದರಿಂದ ಯೋಗಸಿದ್ಧಿಯು ಪ್ರಾಪ್ತಿಯಾದ ಮೇಲೆ ಲಕ್ಷ್ಮೀ ಪ್ರಾಪ್ತಿಯಲ್ಲಿ ಉಪಾಯಾಂತರವನ್ನು ಹೇಳುತ್ತಾರೆ ಎಂಬೀ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ಭಾ ॥ ಯಥಾ ಯೇನೋಪಾಯೇನ ಸಿದ್ಧಿಂ ಪ್ರಾಪ್ತೋ ಬ್ರಹ್ಮಾಽಽಪ್ನೋತಿ ತಥಾ ನಿಬೋಧ।
ಯಾ ಸಿದ್ಧಿರ್ಜ್ಞಾನಸ್ಯ ಪರಾ ನಿಷ್ಠಾ ॥ ೫೦, ೫೧, ೫೨ ॥

ಅ ॥ ಯಥಾ=ಯಾವ ಉಪಾಯದಿಂದ, ಸಿದ್ಧಿಯನ್ನು ಹೊಂದಿದವನಾಗಿ, ಲಕ್ಷ್ಮೀದೇವಿಯನ್ನು ಹೊಂದುತ್ತಾನೋ, ಅಂತಹ ಅಪರೋಕ್ಷ ಜ್ಞಾನೋಪಾಯವನ್ನು ತಿಳಿದುಕೋ. ಯಾವ ಸಿದ್ಧಿಯು ಜ್ಞಾನದ ಕೊನೆಯದಾದ ಮೋಕ್ಷಸಾಧನಾವಸ್ಥೆಯೋ ॥ ೫೦, ೫೧, ೫೨ ॥

**ಗೀ ॥ ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಂ ॥**
**ವಿಮುಚ್ಯ ನಿರ್ಮಮಃ ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥ ೫೩ ॥**

ಅ ॥ ಅಹಂಕಾರಂ=ತಾನೇ ಕರ್ತನೆಂಬುವ ಅಭಿಮಾನವನ್ನು, ಬಲಂ=ತಾನೇ ಸರ್ವಸಮರ್ಥನೆಂಬುವ ಅಭಿಮಾನವನ್ನು, ದರ್ಪಂ=ಭಯಕಾರಣವನ್ನು ತೋರಿಸದಿರುವುದನ್ನು, ಕಾಮಂ=ವಿಷಯಾಭಿಲಾಷೆಯನ್ನೂ, ಕ್ರೋಧಂ=ಕೋಪವನ್ನೂ. ಪರಿಗ್ರಹಂ=ಅಯೋಗ್ಯರಿಂದ ಅನ್ನವಸ್ತ್ರಾದಿಗಳ ಸಂಗ್ರಹವನ್ನು, ವಿಮುಚ್ಯ=ಬಿಟ್ಟು, ನಿರ್ಮಮಃ=ಕರ್ಮದಲ್ಲಿ ತನ್ನದೆಂಬುವ ಮಮತೆಯಿಲ್ಲದವನಾಗಿ, ಶಾಂತಃ=ಕೋಪಕಾರಣಗಳು ಒದಗಿದರೂ ಕೋಪವಮಾಡದಿದ್ದವನಾಗಿ ಬ್ರಹ್ಮಭೂಯಾಯ=ಸರ್ವದಾ ಪರಬ್ರಹ್ಮನಲ್ಲಿ ಇರುವುದಕ್ಕಾಗಿ (ಅಂದರೆ ಸರ್ವದಾ ಪರಬ್ರಹ್ಮನಲ್ಲಿಯೇ ಮನಸ್ಸನ್ನು ಇಡುವುದಕ್ಕಾಗಿ) ಕಲ್ಪತೇ=ಸಮರ್ಥನಾಗುತ್ತಾನೆ. ॥ ೫೩ ॥

ಟೀ — ಮುಂದೆ ಆಗುವ ಫಲವನ್ನು ಹೇಳುತ್ತಾರೆ—

**ಗೀ ॥ ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।**
**ಸಮಃ ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಂ ॥ ೫೪ ॥**

ಅ ॥ ಬ್ರಹ್ಮಭೂತಃ=ಪರಬ್ರಹ್ಮನಲ್ಲಿಯೇ ಮನಸ್ಸನ್ನು ಇಡುತ್ತಾ ಲಕ್ಷ್ಮೀದೇವಿಯನ್ನು ಹೊಂದಿದವನು, ಪ್ರಸನ್ನಾತ್ಮಾ—ಸ್ವತಃ ವಿಷಯಗಳಲ್ಲಿ ಹೋಗದಿರುವ ಮನಸ್ಸುಳ್ಳವನಾಗಿ (ವಿಷಯಾಸಕ್ತಿ ಇಲ್ಲದವನಾಗಿ) ನ ಶೋಚತಿ=ವಿಷಯಾಪ್ರಾಪ್ತಿಪ್ರಯುಕ್ತ ದುಃಖಪಡುವುದಿಲ್ಲ. ನ ಕಾಂಕ್ಷತಿ=ವಿಷಯಗಳನ್ನು ಹೊಂದುವುದಿಲ್ಲ. ಸರ್ವೇಷು ಭೂತೇಷು=ಸಮಸ್ತಪ್ರಾಣಿಗಳಲ್ಲಿ, ಸಮಃ=ಸರ್ವ ನಿಯಾಮಕನಾದ ಶ್ರೀಹರಿಯು ಲಕ್ಷ್ಮೀಸಮೇತನಾಗಿ ಇದ್ದಾನೆಂದು ತಿಳಿಯುವವನು, ಪರಾಂ=ಉತ್ಕೃಷ್ಟವಾದ, ಮದ್ಭಕ್ತಿಂ=ನನ್ನಲ್ಲಿ ಭಕ್ತಿಯನ್ನು, ಲಭತೇ=ಹೊಂದುತ್ತಾನೆ. ॥ ೫೪ ॥

ಟೀ — ಮುಂದೆ ಆಗುವ ಫಲವನ್ನು ಹೇಳುತ್ತಾನೆ—

**ಗೀ ॥ ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಂ ॥ ೫೫ ॥**

ಅ ॥ ಯಾವಾನ್=ನಾನು ದೇಶ ಕಾಲ ಗುಣಗಳಿಂದ ಎಷ್ಟು ವ್ಯಾಪಿಸಿರುತ್ತೇನೋ, ಯಶ್ಚಾಸ್ಮಿ=ಯಾವ ಹೆಸರುಳ್ಳವನಾಗಿ ಯಾವ ರೂಪವುಳ್ಳವನಾಗಿ ಇರುತ್ತೇನೋ, ಮಾಂ=ಅಂತಹ ನನ್ನನ್ನು, ಭಕ್ತ್ಯಾ=ಹಿಂದೆ ಹೇಳಿದ ಪರಮಭಕ್ತಿಯಿಂದ, ತತ್ತ್ವತಃ=ಯಥಾರ್ಥವಾಗಿ, ಅಭಿ=ತನ್ನ ಯೋಗ್ಯತಾನುಸಾರವಾಗಿ, ಜಾನಾತಿ=(ಯಾವನು) ತಿಳಿದುಕೊಳ್ಳುತ್ತಾನೋ, ತತಃ=ಭಕ್ತಿಬಲದಿಂದ, ತತ್ತ್ವತಃ=ಯಥಾರ್ಥವಾಗಿ, ಮಾಂ=ನನ್ನನ್ನು, ಜ್ಞಾತ್ವಾ=ತಿಳಿದುಕೊಂಡು, ತದನಂತರಂ=ಆಮೇಲೆ, ಮಾಂ=ನನ್ನನ್ನು, ವಿಶತೇ=ಪ್ರವೇಶಮಾಡುತ್ತಾನೆ. (ಮುಕ್ತನಾಗುತ್ತಾನೆ.) ॥ ೫೫ ॥

ಟೀ — ಬ್ರಹ್ಮಭೂಯಾಯ ಎಂಬುವುದಕ್ಕೆ ಬ್ರಹ್ಮತ್ವವನ್ನು ಹೊಂದುವುದಕ್ಕಾಗಿ ಎಂಬ ವ ಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ಭಾ ॥ ಬ್ರಹ್ಮಭೂಯಾಯ ಕಲ್ಪತೇ । ಬ್ರಹ್ಮಣಿ ಭಾವೋ ಬ್ರಹ್ಮಭೂಯಂ । ಬ್ರಹ್ಮಣಿ ಸ್ಥಿತಿಃ । ಸರ್ವದಾ ತನ್ಮನಸ್ಕತೇತ್ಯರ್ಥಃ ॥ ೫೩,೫೪,೫೫ ॥

ಅ ॥ ಬ್ರಹ್ಮಭೂಯಾಯ ಕಲ್ಪತೇ ಎಂಬುವುದಕ್ಕೆ ಬ್ರಹ್ಮನಲ್ಲಿ, ಭಾವಃ=ಸರ್ವದಾ ಇರುವುದು. ಅಂದರೆ ಸರ್ವದಾ ಪರಬ್ರಹ್ಮನಲ್ಲಿಯೇ ಮನಸ್ಸನ್ನು ಇಟ್ಟಿರುವಿಕೆ, ಎಂದರ್ಥವು. ॥ ೫೩, ೫೪, ೫೫ ॥

ಟೀ—ಅಸಕ್ತಬುದ್ಧಿಃ ಇತ್ಯಾದಿಗಳಿಂದ ನೈಷ್ಕರ್ಮ್ಯಸಿದ್ಧಿ ಸಾಧನ ವಿವರಣವನ್ನು ಪ್ರತಿಜ್ಞಾ ಮಾಡುತ್ತಾ ಸಿದ್ಧಿಂ ಪ್ರಾಪ್ತಃ ಎಂಬುವುದರಿಂದ ನೈಷ್ಕರ್ಮ್ಯಸಿದ್ಧ್ಯನಂತರದಲ್ಲಿ ಆಗತಕ್ಕ ಫಲವನ್ನು ಹೇಳುತ್ತಾರೆ ಅದರಲ್ಲಿ ನೈಷ್ಕರ್ಮ್ಯಸಿದ್ಧಿಯಾದ ಮೇಲೆ ಯಾವ ಉಪಾಯದಿಂದ ಪರಬ್ರಹ್ಮನನ್ನು ಹೊಂದುತ್ತಾನೋ, ಆಂತಹಪ್ರಕಾರವನ್ನು ತಿಳಿಸು, ಎಂಬೀ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

ತಾ ॥ (೧) ವಕ್ಷ್ಯಮಾಣಪ್ರಕಾರೇಣ ವರ್ತಮಾನಸ್ತದನಂತರಂ ನೈಷ್ಕರ್ಮ್ಯಸಿದ್ಧಿಂ ಪ್ರಾಪ್ತೋ ಭೂತ್ವಾ ಬ್ರಹ್ಮಾಖ್ಯಾಯಾ ಮಹಾಲಕ್ಷ್ಮ್ಯಾಃ ಸಕಾಶಂ ಯಥಾಽಽಪ್ನೋತಿ ತಥಾ ನಿಬೋಧ ॥ (೨) ಮಮ ಯೋನಿರ್ಮಹದ್ಬ್ರಹ್ಮ । ಬ್ರಹ್ಮಣೋ ಹಿ ಪ್ರತಿಷ್ಠಾಹಮಿತ್ಯುಕ್ತತ್ವಾತ್ ॥ (೩) ಬ್ರಹ್ಮಭೂತಃ ಪ್ರಸನ್ನಾತ್ಮೇತ್ಯುಕ್ತ್ವಾ ಮದ್ಭಕ್ತಿಂ ಲಭತೇ ಪರಾಮಿತಿ ವಕ್ಷ್ಯಮಾಣತ್ವಾಚ್ಚ ॥ (೪) ಸರ್ವಪಾಪಕ್ಷಯಾದ್ದೇಹಂ ತ್ಯಕ್ತ್ವಾ ದೇವಾನ್ ಕ್ರಮಾದ್ವ್ರಜನ್ । ಪ್ರಾಪ್ಯ ಲಕ್ಷ್ಮೀಂ ತತ್ಪ್ರಸಾದಾತ್ಪುನಃ ಸ್ಥಿರಾ ಹರೌ ಯದಾ । ಭಕ್ತಿಸ್ತಯಾ ಪುನರ್ಜ್ಞಾನೇ ಸ್ಪಷ್ಟೇ ವಿಷ್ಣುಂ ಪ್ರಪದ್ಯತೇ ॥ (೫) ಅಪರೋಕ್ಷದೃಶೋ ವಿಷ್ಣೋಃ ಶರೀರೇಽಪಿ ಸತಃ ಪುರಾ । ತ್ಯಕ್ತದೇಹಾದಿಕಸ್ಯಾಪಿ ಯಾವದ್ವಿಷ್ಣುಂ ಪ್ರಪದ್ಯತೇ । ತಾವದ್ಗುಣಾ ವಿವರ್ಧಂತೇ ಸ್ಥಿತಾಃ ಸ್ಯುಃ ಪ್ರಾಪ್ಯ ಕೇಶವಮಿತಿ ಮಹಾವಾ(ವ)ರಾಹೇ ॥ (೬) ವಿಮುಚ್ಯ ನಿರ್ಮಮಶ್ಶಾಂತೋ ನೈಷ್ಕರ್ಮ್ಯಸಿದ್ಧಿಂ ಪ್ರಾಪ್ತೋ ಭೂತ್ವಾ ಬ್ರಹ್ಮಣಿ ಭೂಯಾಯ ಭವತೀತ್ಯರ್ಥಃ॥೫೫॥

ಅ ॥ (೧) ಯಾವ ಮುಂದೆ ಹೇಳುವ ಪ್ರಕಾರದಿಂದ ಇರುವವನು ನೈಷ್ಕರ್ಮ್ಯಸಿದ್ಧಿಯನ್ನು [illegible] ದವನಾಗಿ ಬ್ರಹ್ಮ ಎಂದು ಹೆಸರುಳ್ಳ ಮಹಾಲಕ್ಷ್ಮೀದೇವಿಯ ಸಮೀಪವನ್ನು ಹೊಂದುತ್ತಾನೋ, ಅಂತಹ ಪ್ರಕಾರವನ್ನು ತಿಳಿಸು (ಎಂದೇ ಹೇಳಲ್ಪಡುತ್ತದೆ ನೈಷ್ಕರ್ಮ್ಯಸಿದ್ಧಿಯಾದ ಮೇಲೆ ಪರಬ್ರಹ್ಮನ [illegible] ಸಾಧನವನ್ನು ತಿಳಿಸು, ಎಂದು ಹೇಳುತ್ತದಿಲ್ಲ.) (೨) (ಬ್ರಹ್ಮಶಬ್ದಕ್ಕೆ ಲಕ್ಷ್ಮೀದೇವಿಯೆಂದು ಅರ್ಥವು ಹೇಗೆ ಆಗುವುದೆಂದರೆ-) (1) ಮಹದ್ಬ್ರಹ್ಮ=ಲಕ್ಷ್ಮೀದೇವಿಯು, ನನ್ನ ಪತ್ನಿಯು. (2) ನಾನು ಬ್ರಹ್ಮ ಎನಿಸುವ ಲಕ್ಷ್ಮೀದೇವಿಗೆ ಆಧಾರನು. ಎಂದು ಹೇಳಿದ್ದರಿಂದ (ಈ ಬ್ರಹ್ಮಶಬ್ದಗಳಿಗೆ ಪರಬ್ರಹ್ಮವಾಚಕತ್ವವು ಸರ್ವಥಾ ಕೂಡದಿರುವುದರಿಂದ ಬ್ರಹ್ಮಶಬ್ದವು ಲಕ್ಷ್ಮೀವಾಚಕವು.) (೩) (ಮಮ ಯೋನಿಃ ಮಹದ್ಬ್ರಹ್ಮ ಇತ್ಯಾದಿಗಳಲ್ಲಿ ಬ್ರಹ್ಮಪದದಿಂದ ಲಕ್ಷ್ಮೀದೇವಿಯನ್ನೇ ತಿಗೆದುಕೊಳ್ಳಬೇಕಾದರೂ ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ಎಂಬುವಲ್ಲಿ ಬ್ರಹ್ಮಪದದಿಂದ ಪರಬ್ರಹ್ಮನನ್ನೇ ಏಕೆ ತಿಗೆದುಕೊಳ್ಳಬಾರದೆಂದರೆ) ಬ್ರಹ್ಮಭೂತಃ (ಲಕ್ಷ್ಮೀದೇವಿಯನ್ನು ಹೊಂದಿದವನು) ಪ್ರಸನ್ನಾತ್ಮಾ ಎಂದು ಹೇಳಿ ಮದ್ಭಕ್ತಿಂ ಲಭತೇ [illegible] ನನ್ನಲ್ಲಿ (ಶ್ರೀಹರಿಯಲ್ಲಿ) ಭಕ್ತಿಯನ್ನು ಹೊಂದುತ್ತಾನೆ, ಎಂದು ಮುಂದೆ ಹೇಳುವನು. (ಈ [illegible] ನಂತರದಲ್ಲಿಯೂ [illegible] ಬ್ರಹ್ಮಪದದಿಂದ ಲಕ್ಷ್ಮೀ [illegible]

ವನ್ನೇ ಇಟ್ಟುಕೊಳ್ಳಬೇಕು. ಪರಬ್ರಹ್ಮನನ್ನು ಇಟ್ಟುಕೊಳ್ಳಕೂಡದು.) (೪) ಕರ್ಮನಾಶವನ್ನು ಹೊಂದಿದವನಿಗೆ ಲಕ್ಷ್ಮೀದೇವಿಯನ್ನು ಹೊಂದಿದ ಮೇಲೆಯೂ ಭಕ್ತ್ಯಾದಿಗಳು ಹುಟ್ಟಿ ಪರಬ್ರಹ್ಮಪ್ರಾಪ್ತಿಯಾಗುತ್ತವೆ, ಎಂಬುವಲ್ಲಿ ಪ್ರಮಾಣವೇನೆಂದರೆ ಅಪ್ರಾರಬ್ಧವಾದ ಅನಿಷ್ಟವಾದ ಪುಣ್ಯ ಪಾಪರೂಪಗಳಾದ ಸಮಸ್ತಕರ್ಮಗಳ ನಾಶದಿಂದ ದೇಹವನ್ನು ಬಿಟ್ಟು ಕ್ರಮದಿಂದ ದೇವತೆಗಳನ್ನು ಹೊಂದುತ್ತಾ ಲಕ್ಷ್ಮೀದೇವಿಯನ್ನು ಹೊಂದಿ ಆ ಲಕ್ಷ್ಮೀದೇವಿಯ ಅನುಗ್ರಹದಿಂದ ಪುನಃ ಶ್ರೀಪರಮಾತ್ಮನಲ್ಲಿ ಯಾವಾಗ ಭಕ್ತಿಯು ಚೆನ್ನಾಗಿ ಅಭಿವೃದ್ಧವಾಗುತ್ತದೋ ಆ ಭಕ್ತಿಯಿಂದ ಪುನಃ ಜ್ಞಾನವು ಚೆನ್ನಾಗಿ ಅಭಿವೃದ್ಧವಾಗುತ್ತಿರಲು ಶ್ರೀವಿಷ್ಣುವನ್ನು ಹೊಂದುತ್ತಾನೆ (೫) (ಅಪರೋಕ್ಷಜ್ಞಾನಿಗೆ ನೈಷ್ಕರ್ಮ್ಯಸಿದ್ಧಿಯು ಆಗುವುದು ಆದಕಾರಣ ಆಮೇಲೆಯೂ ಜ್ಞಾನಾದಿಗಳು ಹೇಗೆ ಲಭಿಸುವವು? ಹಾಗೆ ಇದರೆ ಕರ್ಮಕ್ಷಯ ಉತ್ಕ್ರಾಂತಿ ಮಾರ್ಗರೂಪ ಮೂರುವಿಧ ಜ್ಞಾನಫಲವು ಲಭಿಸಿದಮೇಲೆ ಬ್ರಹ್ಮಪ್ರಾಪ್ತಿಯಾಗಿ ಭೋಗರೂಪ ಮುಕ್ತಿಯಲ್ಲಿಯೂ ಸಾಧನಗಳನ್ನು ಮಾಡಬೇಕಾಗುವುದು, ಎಂದರೆ-) ದೇಹತ್ಯಾಗದಿಂದ ಮೊದಲು ಶರೀರದಲ್ಲಿರುವ ಶ್ರೀವಿಷ್ಣುವನ್ನು ಅಪರೋಕ್ಷೀಕರಿಸಿರತಕ್ಕವನಿಗೂ ದೇಹಾದಿಗಳನ್ನು ಬಿಟ್ಟವನಿಗೂ ಶ್ರೀವಿಷ್ಣುವನ್ನು ಹೊಂದುವ ಪರ್ಯಂತ (ಅಂದರೆ ಶರೀರಸಂಬಂಧವಿರುವ ಪರ್ಯಂತ.) ಜ್ಞಾನಾದಿ ಗುಣಗಳು ಅಭಿವೃದ್ಧಗಳಾಗುತ್ತವೆ ಆಮೇಲೆ ಶ್ರೀಪರಮಾತ್ಮನನ್ನು ಹೊಂದಿರುತ್ತಾರೆ. ಎಂದು ಮಹಾನಾರಾಯಣಪುರಾಣದಲ್ಲಿದೆ (೬) (ಬ್ರಹ್ಮಭೂಯಾಯ ಕಲ್ಪತೇ ಎಂಬುವುದಕ್ಕೆ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ.) ಕ್ರೋಧವನ್ನು ಬಿಟ್ಟು, ತನ್ನದೆಂಬ ಸ್ನೇಹವನ್ನು ಬಿಟ್ಟವನಾಗಿ ಶಾಂತಚಿತ್ತನಾಗಿ ನೈಷ್ಕರ್ಮ್ಯಸಿದ್ಧಿಯನ್ನು ಹೊಂದಿದವನಾಗಿ ಸರ್ವದಾ ಪರಬ್ರಹ್ಮನಲ್ಲಿಯೇ ಮನಸ್ಸನ್ನು ಇಡುವುದಕ್ಕಾಗಿ ಸಮರ್ಥನಾಗುತ್ತಾನೆ. ॥ ೫೫ ॥

ಪೀ—ಸ್ವಕರ್ಮಣಾ ತಮಭ್ಯರ್ಚ್ಯ ಇತ್ಯಾದಿಗಳಿಂದ ಸಮಸ್ತ ಕರ್ಮಗಳನ್ನು ಶ್ರೀ ಪರಮಾತ್ಮನಲ್ಲಿ ಸಮರ್ಪಿಸಿ ತತ್ವಜ್ಞಾನವನ್ನು ಸಂಪಾದಿಸಿ ಅದರಿಂದ ಶ್ರೀ ಪರಮಾತ್ಮನ ಅನುಗ್ರಹವುಂಟಾಗುವುದು ಅದರಿಂದ ಮೋಕ್ಷವಾಗುತ್ತದೆಂದು ಹೇಳಲ್ಪಟ್ಟ ಸಮಸ್ತ ಗೀತಾಶಾಸ್ತ್ರರಹಸ್ಯವನ್ನು ಕೊನೆಗೊಳಿಸುತ್ತಾರೆ—

**ಗೀ ॥ ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ॥ ೫೬ ॥**

ಅ ॥ ಸರ್ವಕರ್ಮಾಣ್ಯಪಿ=ಶಾಸ್ತ್ರಗಳಲ್ಲಿ ವಿಹಿತಗಳಾದ ಸಮಸ್ತ ಕರ್ಮಗಳನ್ನು ಮದ್ವ್ಯಪಾಶ್ರಯಃ ನನ್ನನ್ನೇ ಆಶ್ರಯಿಸುತ್ತಿರುವವನಾಗಿ ನನ್ನಲ್ಲಿಯೇ ಸಮರ್ಪಿಸುತ್ತಿರುವವನಾಗಿ. ಸದಾ ಯಾವಾಗಲೂ. ಕುರ್ವಾಣಃ=ಮಾಡುವವನಾಗಿ ಮತ್ಪ್ರಸಾದಾತ್=ನನ್ನ ಅನುಗ್ರಹದಿಂದ, ಶಾಶ್ವತಂ ಅವ್ಯಯಂ=ಶಾಶ್ವತಪ್ರಕಾರವಾದ, ನಾಶವಿಲ್ಲದ (ಅಂದರೆ ನಿರ್ವಿಕಾರವಾಗಿರುವುದರಿಂದ ಅದ್ಭುತವಿಲ್ಲದ) ಪದಂ ನನ್ನ ಸ್ವರೂಪವನ್ನು (ಅಂದರೆ ಮೋಕ್ಷವನ್ನು) ಅವಾಪ್ನೋತಿ=ಹೊಂದುತ್ತಾನೆ ॥ ೫೬ ॥

ಪೀ— ಯತಃ ಪ್ರವೃತ್ತಿಃ ಎಂದು ಹೇಳಿದುದನ್ನೇ ವಿವರಿಸುತ್ತಾರೆ ಅನಂತರ ನನ್ನನ್ನೇ ಆಶ್ರಯಿಸುತ್ತಿದ್ದರೆ ಯಥೇಷ್ಟವಾಗಿ ನಿಷಿದ್ಧಗಳೂ ಅನಿಷಿದ್ಧಗಳೂ ಆದ ಸಮಸ್ತ ಕರ್ಮಗಳನ್ನು ಮಾಡುತ್ತಾ ಶಾಶ್ವತವಾದ ಸ್ಥಾನವನ್ನು ಹೊಂದುತ್ತಾನೆ ಎಂಬ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ

ತಾ ॥ (೧) ವಿಹಿತಾನಿ ಸರ್ವಕರ್ಮಾಣ್ಯಪಿ ಮದ್ವ್ಯಪಾಶ್ರಯೋ ಭೂತ್ವಾ ಸದಾ ಕುರ್ವಾಣಃ ॥ (೨) ನ ತು ಯಥೇಷ್ಟ ಚರಣೇ ತಾತ್ಪರ್ಯಮಸ್ತಿ । ತಥಾಪಿ ವಿಹಿತ ಶಾ) ಕರ-

**ಹೇsಪಿ ಸಮಶ್ನಾತ್ ॥ (೩) ಮಾಮನುಸ್ಮರ ಯುಧ್ಯ ಚ । ತತಃ ಸ್ವಧರ್ಮಂ ಕೀರ್ತಿಂ ಚೇತ್ಯಾದಿಪ್ರಸ್ತುತವಿರೋಧಃ ॥ (೪) ಅಪಿಶಬ್ದಸ್ತ್ವೇಕಮಪಿ ಕರ್ಮಾತದಾಶ್ರಯೇಣ ನ ಕಾರ್ಯಮಿತ್ಯರ್ಥೇ ॥ ೫೬ ॥**

ಅ ॥ (೧) ಶಾಸ್ತ್ರಗಳಲ್ಲಿ ವಿಹಿತಗಳಾದ ಸಮಸ್ತ ಕರ್ಮಗಳನ್ನು ನನ್ನನ್ನು ಆಶ್ರಯಿಸುತ್ತಾ ನನ್ನಲ್ಲಿಯೇ ಸಮರ್ಪಿಸುವವನಾಗಿ ಸದಾ ಮಾಡುವವನಾಗಿ ಎಂದರ್ಥವು. (೨) (ಆವಾತಶಃ ತೋರುವ ಅರ್ಥವೇಕೆ ಆಗಲಾರದು ಎಂದರೆ–) ಇಲ್ಲಿ ಯಥೇಷ್ಟವಾಗಿ ನಿಷಿದ್ಧ ಅನಿಷಿದ್ಧ ಕರ್ಮಗಳನ್ನು ಮಾಡಬೇಕೆಂಬುವಲ್ಲಿ ತಾತ್ಪರ್ಯವೆಂದು ಹೇಳಕೂಡದು. ಹಾಗಿದ್ದರೆ ನಿಷಿದ್ಧ ಕರ್ಮಗಳನ್ನು ಮಾಡಿದರೆ ನಿಷೇಧಕ ಶಾಸ್ತ್ರವನ್ನು ಅತಿಕ್ರಮಿಸಿದ್ದರಿಂದ ಪ್ರತ್ಯವಾಯವು ಬರುವುದರಂತೆ ಶಾಸ್ತ್ರಗಳಲ್ಲಿ ವಿಹಿತವಾದುದನ್ನು ಮಾಡದಿದ್ದರೂ ವಿಧಾಯಕ ಶಾಸ್ತ್ರವನ್ನು ಅತಿಕ್ರಮಿಸಿದ್ದರಿಂದ ಪ್ರತ್ಯವಾಯವು ಬರುವುದರಿಂದ ಸಮಾನವೇ ಆಗಿದೆ (೩) (ಶ್ರೀ ಪರಮಾತ್ಮನನ್ನು ಆಶ್ರಯಿಸಿದವನಿಗೆ ಶಾಸ್ತ್ರಗಳಲ್ಲಿ ವಿಹಿತವಾದುದನ್ನು ಮಾಡದಿರುವಲ್ಲಿಯೇ ತಾತ್ಪರ್ಯವು ಇರುವುದು ಎಂದರೆ–) ನನ್ನನ್ನು ಸ್ಮರಿಸು ಮತ್ತು ಯುದ್ಧ ಮಾಡು. ಯುದ್ಧ ಮಾಡದಿದ್ದರೆ ತನ್ನ ಧರ್ಮವನ್ನು ಕೀರ್ತಿಯನ್ನು ಬಿಟ್ಟು, ಇದು ಮೊದಲಾದ ಪ್ರಸ್ತುತ ವಾಕ್ಯದಿಂದ ವಿರೋಧವು. (ಅಂದರೆ–ಇಲ್ಲಿ ಶ್ರೀ ಪರಮಾತ್ಮನನ್ನು ಆಶ್ರಯಿಸಿದವನಿಗೆ ಶಾಸ್ತ್ರಗಳಲ್ಲಿ ವಿಹಿತವಾದುದನ್ನು ಮಾಡದಿರುವಲ್ಲಿಯೂ ತಾತ್ಪರ್ಯವು ಇದ್ದರೆ ಶ್ರೀ ಪರಮಾತ್ಮನನ್ನು ಆಶ್ರಯಿಸಿರುವ ಅರ್ಜುನನಿಗೇನೇ ಮಾಮನುಸ್ಮರ ಯುಧ್ಯ ಚ ಇತ್ಯಾದಿಗಳಲ್ಲಿ ವಿಹಿತವಾದ ಯುದ್ಧದ ಪರಿತ್ಯಾಗದಲ್ಲಿ ಅಥ ಚೇತ್ತ್ವಮಿಮಂ ಧರ್ಮ್ಯಂ ಇತ್ಯಾದಿಗಳಲ್ಲಿ ಮೊದಲು ಯಾವುದು ಪ್ರತ್ಯವಾಯವು ಹೇಳಲ್ಪಟ್ಟದೋ ಅದರಿಂದ ವಿರೋಧವು ಬರುವುದು.) (೪) (ಪ್ರತೀತವಾದ ಅರ್ಥವನ್ನು ಅಂಗೀಕರಿಸದಿದ್ದರೆ ಸರ್ವಕರ್ಮಾಣ್ಯಪಿ ಎಂಬುವಲ್ಲಿದ್ದ ಅಪಿಶಬ್ದವು ವ್ಯರ್ಥವೆಂದರೆ) ಒಂದನ್ನೂ ಬಿಡದೆ ಎಲ್ಲಾ ಕರ್ಮಗಳನ್ನು ನನ್ನನ್ನು ಆಶ್ರಯಿಸಿಯೇ ಮಾಡುವವನಾಗು. ಯಾವುದೊಂದು ಕರ್ಮವನ್ನು ಶ್ರೀ ಪರಮಾತ್ಮನನ್ನು ಆಶ್ರಯಿಸದೆ ಮಾಡಕೂಡದು. ಎಂಬೀ ಅರ್ಥದಲ್ಲಿ ಅಪಿಶಬ್ದವು ಇದೆ. ॥ ೫೬ ॥

ಪೀ–ಶ್ರೀ ಪರಮಾತ್ಮನನ್ನು ಆಶ್ರಯಿಸಿಕೊಂಡು ವಿಹಿತ ಕರ್ಮವನ್ನು ಮಾಡುವವನಿಗೆ ಮೋಕ್ಷವಾಗುವುದಾದರೆ ಹಿಂದೆ ಹೇಳಿದ ತ್ರೈವಿದ್ಯನಿಗೂ ಮೋಕ್ಷವಾಗಲಿ. ಎಂದರೆ ವಿಹಿತ ಕರ್ಮಿಗೂ ತ್ರೈವಿದ್ಯನಿಗೂ ವಿಹಿತ ಕರ್ಮಾಚರಣ ಭಗವದರ್ಚನಗಳು ಇದ್ದುದರಿಂದ ಇಬ್ಬರೂ ಶ್ರೀ ಪರಮಾತ್ಮನನ್ನು ಆಶ್ರಯಿಸಿರುತ್ತಾರೆ ಎಂದರೆ ವಿಹಿತ ಕರ್ಮಿಗೂ ತ್ರೈವಿದ್ಯನಿಗೂ ವೈಲಕ್ಷಣ್ಯವನ್ನು ತೋರಿಸುತ್ತಾ ಶಂಕೆಯನ್ನು ಪರಿಹರಿಸುತ್ತಾರೆ–

ಗೀ ॥ **ಚೇತಸಾ ಸರ್ವಕರ್ಮಾಣಿ ಮಯಿ ಸನ್ನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಃ ಸತತಂ ಭವ ॥ ೫೭ ॥**

ಅ ॥ ಚೇತಸಾ=ಮನಸ್ಸಿನಿಂದ, ಸರ್ವಕರ್ಮಾಣಿ=ಸಮಸ್ತಕರ್ಮಗಳನ್ನು, ಮಯಿ=ನನ್ನಲ್ಲಿ, ಸನ್ನ್ಯಸ್ಯ=ಸಮರ್ಪಿಸಿ, ಮತ್ಪರಃ=ನಾನೇ (ಶ್ರೀ ಕೃಷ್ಣನೇ) ಸರ್ವೋತ್ತಮನೆಂದು ತಿಳಿದುಕೊಂಡವನಾಗಿ, ಬುದ್ಧಿಯೋಗಂ=ಪ್ರತ್ಯಾಹಾರಾದಿರೂಪ ಧ್ಯಾನಸಾಧನವನ್ನು, ಉಪಾಶ್ರಿತ್ಯ=ಆಶ್ರಯಿಸಿಕೊಂಡು, ಮಚ್ಚಿತ್ತಃ=ನನ್ನಲ್ಲಿಯೇ ಮನೋವೃತ್ತಿಯುಳ್ಳವನಾಗಿ, ಸತತಂ=ಯಾವಾಗಲೂ, ಭವ=ಆಗು. (ತ್ರೈವಿದ್ಯನು ... ಹಿಂತಹವನಲ್ಲ. ಆದಕಾರಣ ಆತನಿಗೆ ಮುಕ್ತಿಯಿಲ್ಲ.)

ಪೀ—ಸರ್ವದಾ ಶ್ರೀಪರಮಾತ್ಮನಲ್ಲಿಯೇ ಮನಸ್ಸನ್ನು ಇಟ್ಟವನಿಗೆ ಫಲವನ್ನು ಹೇಳುತ್ತಾರೆ—

**ಗೀ ॥ ಮಚ್ಚಿತ್ತಃ ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮ ॥**

ಅ ॥ ಮಚ್ಚಿತ್ತಃ=ನನ್ನಲ್ಲಿಯೇ (ಶ್ರೀಕೃಷ್ಣನಲ್ಲಿಯೇ) ದೃಢವಾದ ಮನಸ್ಸುಳ್ಳವನಾಗಿ, ಮತ್ಪ್ರಸಾದಾತ್=ನನ್ನ ಅನುಗ್ರಹದಿಂದ, ಸರ್ವದುರ್ಗಾಣಿ=ದುಃಖದಿಂದ ದಾಟಲು ಶಕ್ಯಗಳಾದ ಸಮಸ್ತ ಕಷ್ಟಗಳನ್ನು, ತರಿಷ್ಯಸಿ=ದಾಟುವಿ (ಹೀಗೆ ವಿಹಿತಕರ್ಮಗಳಿಗೆ ಫಲವನ್ನು ಹೇಳಿ ಕರ್ಮ ಮಾಡದಿದ್ದರೆ ಅನಿಷ್ಟಫಲವನ್ನು ಹೇಳುತ್ತಾರೆ—) ತ್ವಂ=ನೀನು, ಅಥ=ಶಾಸ್ತ್ರಗಳಲ್ಲಿ ವಿಹಿತವಾದ ಯುದ್ಧವನ್ನು ಮಾಡಬೇಕೆಂಬುವ ನನ್ನ ವಚನವನ್ನು, ಅಹಂಕಾರಾತ್=ಯುದ್ಧವನ್ನು ಮಾಡಲಿಕ್ಕೂ ಬಿಡಲಿಕ್ಕೂ ನಾನೇ ಸ್ವತಂತ್ರನೆಂಬುವ ದುರಹಂಕಾರದಿಂದ, ನ ಶ್ರೋಷ್ಯಸಿ ಚೇತ್=ಕೇಳಿ ಯುದ್ಧವನ್ನು ಮಾಡದಿದ್ದರೆ, ವಿನಂಕ್ಷ್ಯಸಿ=ಪುರುಷಾರ್ಥಹೀನನಾಗುವಿ. ॥ ೫೮ ॥

ಪೀ—ಶ್ರೀಪರಮಾತ್ಮನನ್ನು ಆಶ್ರಯಿಸಿಕೊಂಡು ವಿಹಿತಕರ್ಮವನ್ನು ಮಾಡುವವನಿಗೆ ಮುಕ್ತಿ ಹೂಗುವುದಾದರೆ ತ್ರೈವಿದ್ಯನಿಗೂ ಮುಕ್ತಿಯಾಗಬೇಕಾಗುವುದು ತ್ರೈವಿದ್ಯನೂ ವಿಹಿತಕರ್ಮಗಳನ್ನು ಮಾಡಿ ಅವುಗಳನ್ನು ಶ್ರೀಪರಮಾತ್ಮನಲ್ಲಿ ಅರ್ಪಿಸುವನು. ಆದಕಾರಣ ಭಗವದಾಶ್ರಿತತ್ವವಿವೆ, ಎಂಬೀ ಆತಂಕೆಯನ್ನು ಪರಿಹರಿಸುತ್ತಾರೆ —

**ಶಾ ॥ (೧) ಭಗವತ್ಸಂಶ್ರಿತಸ್ಯ ತ್ರೈವಿದ್ಯಸ್ಯ ಚ ಮನ(ಚೇತ)ಸ್ಯೈವ ವಿಶೇಷ ಇತ್ಯಾಹ । ಚೇತಸಾ ಸರ್ವಕರ್ಮಾಣೀತಿ ॥ (೨) ಸ ಏವ ಸರ್ವಸ್ಮಾತ್ಪರಮ ಇತಿ ಭಾವೋಽಸ್ಯೇತಿ ಮ(ತ)ತ್ಪರಃ ॥ (೩) ತತ್ರ ಚಿತ್ತವೃತ್ತಿನಿರೋಧೋಽಪಿ ॥ (೪) ಬುದ್ಧಿಯೋಗಃ ಪ್ರತ್ಯಾಹಾರಾದಿಃ ॥ ೫೭,೫೮ ॥**

ಅ ॥ (೧) ಶ್ರೀಪರಮಾತ್ಮನನ್ನು ಆಶ್ರಯಿಸಿದವನಿಗೂ ತ್ರೈವಿದ್ಯನಿಗೂ ಮನಸ್ಸಿನಿಂದಲೇ ವಿಶೇಷವೆಂದು **ಚೇತಸಾ ಸರ್ವಕರ್ಮಾಣಿ** ಎಂಬುವುದರಿಂದ ಹೇಳುತ್ತಾರೆ (ಅಂದರೆ-ಭಗವದಾಶ್ರಿತ, ತ್ರೈವಿದ್ಯ ಇವರಿಗೆ ವಿಹಿತಕರ್ಮಕರಣಾದಿಗಳು ಸಮಗಳಾದರೂ ಭಗವದಾಶ್ರಿತನು ಮನಸ್ಸಿನಿಂದ ಪ್ರತಿಕ್ರಿಯೆಯಲ್ಲಿಯೂ ಶಾಸ್ತ್ರಗಳಲ್ಲಿ ವಿಹಿತಗಳಾದ ಎಲ್ಲಾ ಕರ್ಮಗಳನ್ನು ಶ್ರೀಪರಮಾತ್ಮನಲ್ಲಿ ಸಮರ್ಪಿಸುತ್ತಾನೆ. ತ್ರೈವಿದ್ಯನು ಹೀಗೆ ಮಾಡುವುದಿಲ್ಲ. ಸಾಮಾನ್ಯವಾಗಿ ಮನಸ್ಸಿನಿಂದ ಸಮರ್ಪಿಸುತ್ತಾನೆ. ಹೀಗೆ ಮನಸ್ಸಿನಿಂದಲೇ ವಿಶೇಷವಿದ್ದ ಕ್ರಿಯೆಯುಕ್ತ ಭಗವದಾಶ್ರಿತನಿಗೆ ಮೋಕ್ಷವಾಗುತ್ತದೆಂದೂ ತ್ರೈವಿದ್ಯನಿಗೆ ಮೋಕ್ಷವಾಗುವುದಿಲ್ಲವೆಂದೂ ವಿಶೇಷವು ಯುಕ್ತವು.) (೨) (ಮತ್ಪರಃ ಎಂಬುವುದರಿಂದ ತ್ರೈವಿದ್ಯನಿಗಿಂತ ಭಗವದ್ಭಕ್ತನಿಗೆ ವಿಶೇಷವು ಹೇಳಲ್ಪಡುತ್ತದೆ ಭಗವದ್ಭಕ್ತನಿಗೆ ಶ್ರೀಪರಮಾತ್ಮನಲ್ಲಿ ವಿಶೇಷತಃ ತಾತ್ಪರ್ಯವಿದೆ, ಎಂದು ಹೇಳಿದರೆ ಅದು ತ್ರೈವಿದ್ಯನಿಗೂ ಇದೆ ಭಗವದ್ಭಕ್ತನು ಶ್ರೀಕೃಷ್ಣನು ಸರ್ವೋತ್ತಮನೆಂದು ತಿಳಿದಿರುತ್ತಾನೆ, ಎಂದರೆ ತ್ರೈವಿದ್ಯನೂ ಹಾಗೆಯೇ ತಿಳಿದಿರುತ್ತಾನೆ, ಎಂದರೆ-) ಶ್ರೀಪರಮಾತ್ಮನೇ ರಮಾಬ್ರಹ್ಮಾದಿಗಳೆಂದೆಲ್ಲರಿಂದಲೂ ದೇಶತಃ ಕಾಲತಃ ಗುಣತಃ ರೂಪತಃ ಇತ್ಯಾದಿ ಸರ್ವಪ್ರಕಾರದಿಂದಲೂ ಉತ್ತಮನೆಂದು ಸರ್ವದಾ ತಿಳಿದಿರುವವನು ಭಾಗವತನು (ಇದಕ್ಕಾಗಿ ಮತ್ಪರಃ ಎಂದು ಹೇಳಿದೆ.) ಶ್ರೀಪರಮಾತ್ಮನು ಸರ್ವಪ್ರಕಾರದಿಂದಲೂ ಸರ್ವೋತ್ತಮನು ಎಂಬುವ ಜ್ಞಾನವು ತ್ರೈವಿದ್ಯನಿಗೆ ಹಾಗಿಲ್ಲ

ಅದಕಾರಣ ತ್ರೈವಿದ್ಯನಿಗಿಂತ ಭಾಗವತನಿಗೆ ವಿಶೇಷವು.) (೩) (ಹೀಗಾದರೆ ಮಚ್ಚಿತ್ತಃ ಎಂಬುವುದು ವ್ಯರ್ಥ ವೆಂದರೆ—) ಭಗವದ್ಭಕ್ತನಿಗೆ ಶ್ರೀಪರಮಾತ್ಮನಲ್ಲಿ ಮನೋವ್ಯಾಪಾರಕ್ಕೆ ನಿರೋಧವೂ ಇದೆ (ಸರ್ವಪ್ರಕಾರದಿಂದ ಸರ್ವೋತ್ತಮತ್ವಜ್ಞಾನರೂಪ ವಿಶೇಷವಮಾತ್ರವಲ್ಲ. ಮತ್ತು ಮನೋವ್ಯಾಪಾರವು ಶ್ರೀಪರಮಾತ್ಮನಲ್ಲಿ ನಿಶ್ಚಂಚಲವಾಗಿಯೂ ಇರುತ್ತದೆ. ಹೀಗೆ ತ್ರೈವಿದ್ಯನಿಗಿಂತ ಭಗವದ್ಭಕ್ತನಿಗೆ ವಿಶೇಷವು.) (೪) (ಹಾಗಾದರೆ ಬುದ್ಧಿಯೋಗಃ ಎಂಬುವುದು ಏತಕ್ಕೆಂದರೆ—) ಜ್ಞಾನಕ್ಕೆ ಕಾರಣವಾದ ಶ್ರವಣಾದಿ ಮೊದಲಾದ ಉಪಾಯವು ಬುದ್ಧಿಯೋಗಃ ಎನಿಸುತ್ತದೆ. ॥ ೫೭, ೫೮ ॥

ಟೀ—ನನ್ನ ಮಾತನ್ನು ಧಿಕ್ಕರಿಸಲಿಕ್ಕೆ ನಿನಗೆ ಸಾಧ್ಯವೇ ಇಲ್ಲ ಎನ್ನುತ್ತಾನೆ—

**ಗೀ ॥ ಯದಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ (ವ) ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯ ॥**

ಅ ॥ ಅಹಂಕಾರಂ=ಯುದ್ಧಾದಿರೂಪ ಕರ್ಮಗಳನ್ನು ಮಾಡಲಿಕ್ಕೂ ಬಿಡಲಿಕ್ಕೂ ನನಗೇನೇ ಸಾಮರ್ಥ್ಯವು ಸ್ವಾತಂತ್ರ್ಯವು. ಎಂಬುವ ದುರಹಂಕಾರವನ್ನು, ಆಶ್ರಿತ್ಯ=ಆಶ್ರಯಿಸಿ, (ಅಹಂ=ನಾನು) ನ ಯೋತ್ಸ್ಯೇ=ಯುದ್ಧವನ್ನು ಮಾಡುವುದಿಲ್ಲ. ಇತಿ ಯನ್ಮನ್ಯಸೇ=ಹೀಗೆ ಯಾವುದನ್ನು ತಿಳಿಯುತ್ತೀಯೋ, ತೇ=ನಿನ್ನ, ಏಷಃ ವ್ಯವಸಾಯಃ=ನಿಶ್ಚಯವು, ಮಿಥ್ಯೈವ=ವ್ಯರ್ಥವೇ, ಪ್ರಕೃತಿಃ=ನನ್ನ (ಶ್ರೀ ಕೃಷ್ಣನ) ಇಚ್ಛೆಯು. ತ್ವಾಂ=ನಿನ್ನನ್ನು, ನಿಯೋಕ್ಷ್ಯತಿ=ಯುದ್ಧಕ್ಕಾಗಿ ಪ್ರವರ್ತಿಸುವಂತೆ ಪ್ರೇರೇಪಿಸುತ್ತದೆ ॥ ೫೯ ॥

ಟೀ—ಈಶ್ವರೇಚ್ಛೆಯು ಜೀವರನ್ನು ನಿಯಮಿಸಲಿಕ್ಕೆ ನಿಮಿತ್ತಕಾರಣವಾಗಿದೆ. ಇತ್ಯಾದಿಗಳನ್ನು ಬಿಡಿಸಿ ತೋರಿಸುತ್ತಾರೆ—

**ಗೀ ॥ ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿ ತತ್ ॥ ೬೦ ॥**

ಅ ॥ ಕೌಂತೇಯ=ಅರ್ಜುನನೇ, ಸ್ವಭಾವಜೇನ=ಪೂರ್ವಸಂಸ್ಕಾರದಿಂದ ಹುಟ್ಟಿರುವ, ಸ್ವೇನ ಕರ್ಮಣಾ=ಸ್ವಕೀಯವಾದ ಕರ್ಮದಿಂದ, ನಿಬದ್ಧಃ=ಕಟ್ಟಲ್ಪಟ್ಟ ನೀನು. ಮೋಹಾತ್=ಬಂಧುಗಳಲ್ಲಿ ಸ್ನೇಹದಿಂದುಂಟಾಗುವ ಅಜ್ಞಾನದಿಂದ, ಯತ್=ಯಾವ ಕರ್ಮವನ್ನು, ಕರ್ತುಂ=ಮಾಡಲಿಕ್ಕೆ, ನೇಚ್ಛಸಿ=ಇಚ್ಛಿಸುವುದಿಲ್ಲವೋ, ತತ್=ಆಯುದ್ಧಾಖ್ಯ ಕರ್ಮವನ್ನು, ಅವಶೋಽಪಿ=ನಿನ್ನ ಅಧೀನನಾಗದಿದ್ದರೂ, ಕೇವಲ ಶ್ರೀ ಪರಮಾತ್ಮನ ಇಚ್ಛಾಧೀನನಾಗಿಯೇ, ಕರಿಷ್ಯಸಿ=ಮಾಡುವಿ. ॥ ೬೦ ॥

ಟೀ—೫೯ನೇ ಶ್ಲೋಕದಲ್ಲಿದ್ದ ಪ್ರಕೃತಿಪದದಿಂದ ಸ್ವಭಾವಾದಿಗಳು ಹೇಳಲ್ಪಡುತ್ತವೆ ಎಂಬ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ —

ತಾ ॥ (೧) ಪ್ರಕೃತಿರೀಶ್ವರೇಚ್ಛಾ । ಪ್ರಕೃತಿರ್ವಾಸನೇತ್ಯೇವ ತವೇಚ್ಛಾಽನಂತ ಕಥ್ಯತ ಇತಿ ವಚನಾತ್ ॥ (೨) ಏಷಾ ತು ಪ್ರಕೃತ್ಯೈವ ಚ ಕರ್ಮಣೇತ್ಯಾದಿಷ್ವಪಿ ಯುಜ್ಯತೇ ॥ (೩) ತಸ್ಯಾ ಏವ ಹಿ ಮುಖ್ಯತೋ ನಿಯೋಕ್ತೃತ್ವಂ ॥ (೪) ಸ್ವಭಾವಕರ್ಮಾದಿ- ಬಾಧ್ಯಾ ॥ (೫) ತದೇವಾಹ । ಈಶ್ವರಃ ಸರ್ವಭೂತಾನಾಮಿತಿ ॥ ೫೯, ೬೦ ॥

ಅ || (೧) ಎಲೋ ಶ್ರೀ ಪರಮಾತ್ಮನೇ ನಿನ್ನ ಇಚ್ಛೆಯು ಪ್ರಕೃತಿಃ ವಾಸನಾ ಇತ್ಯಾದಿ ಶಬ್ದಗಳಿಂದ ಹೇಳಲ್ಪಡುತ್ತದೆ, ಎಂಬೀ ಪ್ರಮಾಣದಿಂದ ಪ್ರಕೃತಿ ಪದದಿಂದ ಈಶ್ವರೇಚ್ಛೆಯನ್ನು ಇಟ್ಟುಕೊಳ್ಳಬೇಕು. (೨) ಪ್ರಕೃತಿಪದಕ್ಕೆ ಭಗವದಿಚ್ಛೆಯು ಎಂಬುವ ಅರ್ಥವೇ (1) ಪ್ರಕೃತ್ಯೈವ ಚ ಕರ್ಮಾಣಿ (2) ಪ್ರಕೃತೇಃ ಕ್ರಿಯಮಾಣಾನಿ (3) ಪ್ರಕೃತಿಂ ವಿದ್ಧಿ ಮೇ ಪರಾಂ ಇತ್ಯಾದಿಗಳಲ್ಲಿಯೂ ಹೇಳಲು ಯುಕ್ತವಾಗುತ್ತದೆ. (೩) (ಪ್ರಕೃತಿ ಪದಕ್ಕೆ ಸ್ವಭಾವಾದಿರೂಪವಾದ ಅರ್ಥವೇ, ಏಕೆ ಆಗಲಾರದೆಂದರೆ-(ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ಎಂಬುವಲ್ಲಿ ಪ್ರಕೃತಿಯು ಜೀವರಿಗೆ ಪ್ರೇರಕವೆಂದು ಹೇಳುತ್ತದೆ.) ಆ ಪ್ರೇರಕತ್ವವು ಮುಖ್ಯವಾಗಿ ಭಗವದಿಚ್ಛೆಗೇನೇ ಕೂಡುವುದರಿಂದ (ಅದನ್ನೇ ಇಟ್ಟುಕೊಳ್ಳಬೇಕು) (೪) (ಇದನ್ನು ಬಿಡಿಸಿ ಹೇಳತಕ್ಕ ಸ್ವಭಾವಜೇನ ಎಂಬೀ ಉತ್ತರ ಶ್ಲೋಕದಲ್ಲಿ ಪ್ರಕೃತಿಪದಕ್ಕೆ ಸ್ವಭಾವಾರ್ಥವನ್ನು ಹೇಳಿದ್ರಿಂದ ಸ್ವಭಾವವೆಂಬುವ ಅರ್ಥವು ಕೂಡುವುದಿಲ್ಲವೆಂಬುವುದು ಹೇಗೆಂದರೆ—)ಅಂಗಭೂತವಾದ ಸ್ವಭಾವ ಕರ್ಮ ಮೋಹಗಳಿಂದ ಜೀವರನು ಬಂಧಿಸಿ (ಎಂದು ಹೇಳಿ ಶ್ರೀ ಭಗವಂತನ ಇಚ್ಛೆಗೇನೇ ಮುಖ್ಯತಃ ಪ್ರೇರಕತ್ವವು ಹೇಳಲ್ಪಡುತ್ತದೆ.) ಏವಂಚ ಈ ಪ್ರಕೃತಿಯೇ ಮೇಲಿನ ಶ್ಲೋಕದಲ್ಲಿ ಸ್ವಭಾವ ಪದದಿಂದ ಹೇಳಲ್ಪಡುವುದಿಲ್ಲ. ಮತ್ತೆ ಜೀವರನು ಪ್ರೇರೇಪಿಸುವ ಭಗವದಿಚ್ಛೆಗೆ ಸಾಧನವಾಗಿ ಸ್ವಭಾವಾದಿಗಳನ್ನು ಉತ್ತರತ್ರ ಹೇಳುತ್ತಾರೆ.) (೫) ಶ್ರೀ ಪರಮಾತ್ಮನ ಇಚ್ಛೆಯೇ ಪ್ರೇರಕವು ಎಂಬುವುದನ್ನೇ ಈಶ್ವರಸ್ಸರ್ವಭೂತಾನಾಂ ಎಂಬುವಲ್ಲಿ ಹೇಳುತ್ತಾರೆ. (ಏವಂಚ ಇದನ್ನು ವಿವರಣ ಮಾಡತಕ್ಕ ಮೇಲಿನ ಶ್ಲೋಕದಲ್ಲಿ ಭಗವದಿಚ್ಛೆಯೇ ಸರ್ವಕ್ಕೂ ಪ್ರೇರಕವು, ಎಂದು ಹೇಳಿದ್ರಿಂದ ಪ್ರಕೃತಿಪದಕ್ಕೆ ಈಶ್ವರೇಚ್ಛೆಯೆಂದೇ ಅರ್ಥವು. || ೫೯, ೬೦ ||

ಪೀ—ಶ್ರೀ ಪರಮಾತ್ಮನ ಇಚ್ಛೆಯು ಪ್ರವರ್ತಕವೆಂದಾದರೆ—ಶ್ರೀ ಪರಮಾತ್ಮನು ಪ್ರವರ್ತಕನಲ್ಲವೆಂದಾಗುವುದು ಎಂಬೀ ಶಂಕೆಯನ್ನು ಶ್ರೀ ಪರಮಾತ್ಮನ ಸ್ವರೂಪವನ್ನು ತೋರಿಸಿಕೊಂಡು ಪರಿಹರಿಸುತ್ತಾರೆ—

**ಗೀ || ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ |**
**ಭ್ರಾಮಯನ್ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ||೬೧||**

ಅ || ಅರ್ಜುನ=ಅರ್ಜುನನೇ, ಈಶ್ವರಃ=ಸರ್ವರಿಗೂ ಪ್ರೇರೇಪಿಸುವ ಸ್ವಭಾವವುಳ್ಳ ಶ್ರೀ ಪರಮಾತ್ಮನು, ಯಂತ್ರಾರೂಢಾನಿ=ಶರೀರಗಳಲ್ಲಿರತಕ್ಕ, ಸರ್ವಭೂತಾನಿ=ಸಮಸ್ತ ಪ್ರಾಣಿಗಳನ್ನು, ಮಾಯಯಾ=ತನ್ನ ಸ್ವರೂಪಭೂತವಾದ ಇಚ್ಛೆಯಿಂದ ಭ್ರಾಮಯನ್=ನಾನಾವಿಧ ಕರ್ಮಗಳಲ್ಲಿ ಪ್ರವರ್ತಿಸುವಂತೆ ಮಾಡುವವನಾಗಿ, ಸರ್ವಭೂತಾನಾಂ=ಸಮಸ್ತಪ್ರಾಣಿಗಳ, ಹೃದ್ದೇಶೇ=ಹೃದಯಪ್ರದೇಶದಲ್ಲಿ ತಿಷ್ಠತಿ=ಇರುತ್ತಾನೆ. || ೬೧ ||

**ಭಾ || ಪುನರಂತರಂಗಸಾಧನಾನ್ಯುಕ್ತ್ವೋಪಸಂಹರತಿ | ಸರ್ವಕರ್ಮಾಣೀತ್ಯಾದಿನಾ ||**
|| ೫೯–೬೧ ||

ಅ || ಸರ್ವಕರ್ಮಾಣಿ ಇತ್ಯಾದಿಗಳಿಂದ ಪುನಃ ಅಂತರಂಗ (ಧ್ಯಾನಕ್ಕೆ ಮುಖ್ಯ) ಸಾಧನಗಳನ್ನು ಹೇಳಿ ಗೀತಾಶಾಸ್ತ್ರವನ್ನು ಕೊನೆಗೊಳಿಸುತ್ತಾರೆ - || ೫೯–೬೧ ||

**ಗೀ || ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ |**
**ತತ್ಪ್ರಸಾದಾತ್ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ || ೬೨ ||**

ಅ ॥ ಭಾರತ=ಅರ್ಜುನನೇ, ತಮೇವ=(ಯಾವ ಕಾರಣದಿಂದ ಶ್ರೀಪರಮಾತ್ಮನೇ ಸರ್ವಸ್ವತಂತ್ರನೋ, ಜೀವರು ಪರಮಾತ್ಮನ ಅಧೀನರೋ, ಆದಕಾರಣ ಅಹಂಕಾರವನ್ನು ಬಿಟ್ಟು) ಶ್ರೀಪರಮಾತ್ಮನನ್ನೇ, ಸರ್ವಭಾವೇನ=ಸರ್ವಪ್ರಕಾರದಿಂದಲೂ, ಶರಣಂ=ಮೊರೆಯನ್ನು, ಗಚ್ಛ=ಹೊಂದು, ತತ್ಪ್ರಸಾದಾತ್=ಶ್ರೀಪರಮಾತ್ಮನ ಅನುಗ್ರಹದಿಂದ, ಪರಾಂ ಶಾಂತಿಂ=ಉತ್ಕೃಷ್ಟವಾದ ಭಗವದ್ವಿಷಯಕ ಬುದ್ಧಿಯನ್ನು, ಶಾಶ್ವತಂ ಸ್ಥಾನಂ=ವೈಕುಂಠಾದಿ ಲೋಕವನ್ನು, ಪ್ರಾಪ್ಸ್ಯಸಿ=ಹೊಂದುವಿ. ॥ ೬೨ ॥

ಪೀ—ಶ್ರೀಕೃಷ್ಣನು ಅರ್ಜುನನಿಗೆ ಅತಿಗೋಪ್ಯವಾದ ತತ್ತ್ವವನ್ನುಪದೇಶಿಸಿ ಅದನ್ನು ಅನುವಾದ ಮಾಡಿಕೊಂಡು ಸುಮ್ಮನೆ ಕುಳಿತಿದ್ದ ಅರ್ಜುನನನ್ನು ಆಕ್ಷೇಪಿಸುವನು—

**ಗೀ ॥ ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ ೬೩ ॥**

ಅ ॥ ಗುಹ್ಯಾತ್=ಗೋಪ್ಯವಾದುದಕ್ಕಿಂತಲೂ, ಗುಹ್ಯತರಂ=ಅತಿಶಯವಾಗಿ ಗೋಪ್ಯವಾದ, ಇತಿ=ಹಿಂದೆ ಹೇಳಿದ ಪ್ರಕಾರ, ಜ್ಞಾನಂ=ತಿಳಿಯಲು ಯೋಗ್ಯವಾದ ತತ್ತ್ವವು, ಮಯಾ=ನನ್ನಿಂದ, ಆಖ್ಯಾತಂ=ಹೇಳಲ್ಪಟ್ಟಿತು. ಏತತ್=ಈ ತತ್ತ್ವವನ್ನು, ಅಶೇಷೇಣ=ಸಂಪೂರ್ಣವಾಗಿ, ವಿಮೃಶ್ಯ=ಮನಸ್ಸಿನಿಂದ ವಿಚಾರಮಾಡಿ, ಯಥೇಚ್ಛಸಿ=ಹೇಗೆ ಇಚ್ಛಿಸುತ್ತೀಯೋ, ತಥಾ=ಹಾಗೆ, ಕುರು=ಮಾಡು. ॥ ೬೩ ॥

ಪೀ—ಈಶ್ವರಸ್ಸರ್ವಭೂತಾನಾಂ (೬೧) ಇತ್ಯಾದಿಗಳಲ್ಲಿ ಶ್ರೀಕೃಷ್ಣನು ಈಶ್ವರನನ್ನು ಪರೋಕ್ಷವಾಗಿ ನಿರ್ದೇಶಮಾಡಿದ್ದರಿಂದ ಈ ಈಶ್ವರನು ಶ್ರೀಕೃಷ್ಣನಿಂದ ಭಿನ್ನವೆಂದು ತೋರುತ್ತದೆ. ಆ ಪ್ರತೀತಿಯನ್ನು ಹೋಗಲಾಡಿಸುತ್ತಾರೆ—

**ತಾ ॥ (೧) ನಿಶ್ಚಿತಾರ್ಥಃ ಸ ಹಿ ಜ್ಞೇಯೋ ಯತ್ರಾತ್ಮೈವ ಪರೋಕ್ಷತಃ । ಉಚ್ಯತೇ ವಿಷ್ಣುನಾ ಯದ್ವತ್ತದ್ಬ್ರಹ್ಮೇತ್ಯಾದಿ ತತ್ತ್ವತ ಇತಿ ಶಬ್ದನಿರ್ಣಯೇ ॥ (೨) ಮನ್ಮನಾ ಇತ್ಯುಪಸಂಹಾರಾಚ್ಚ ॥ (೩) ಶಾಶ್ವತಂ ಸ್ಥಾನಂ ವೈಕುಂಠಾದಿ । ಶ್ರೀರೇವ ಲೋಕರೂಪೇಣ ವಿಷ್ಣೋಃ ಸ್ಥಿತಾ ಸರ್ವದಾ । ಅತೋ ಹಿ ವೈಷ್ಣವಾ ಲೋಕಾ ನಿತ್ಯಾಸ್ತೇ ಚೇತನಾ ಅಪೀತ್ಯಾಗ್ನೇಯೇ ॥ ೬೧,೬೨,೬೩ ॥**

ಅ ॥ (೧) ಎಲ್ಲಿ ಶ್ರೀಪರಮಾತ್ಮನೇ ಪರೋಕ್ಷವಾಗಿ ಹೇಳಲ್ಪಟ್ಟಿರುತ್ತಾನೋ, ಅಲ್ಲಿ ನಿಶ್ಚಿತವಾದ ಅರ್ಥವುಳ್ಳದ್ದೆಂದು ತಿಳಿಯಬೇಕು. ಹೇಗೆ ತದ್ಧ ಹ ಪದಮ್ಮೃತಂ ಸ ಆತ್ಮಾ ಎಂಬ ಛಾಂದೋಗ್ಯದಲ್ಲಿ ಹಯಗ್ರೀವದೇವರು ತದ್ಬ್ರಹ್ಮ ಎಂದೂ ಹಾಗೆಯೇ ಐತರೇಯದಲ್ಲಿ ಮಹಿದಾಸದೇವರು ಏತದ್ಬ್ರಹ್ಮ ತಸ್ಯಾಸ್ಯ ಪ್ರಮಾದ್ಯೇತ್ಸ್ಯಾತೀಯಾತ್ಮಂ ಬ್ರಹ್ಮಗಿರಿರಿತ್ಯಾಪಹ್ನುತೇ ಎಂದೂ ಹೇಳಿದ್ದಾರೋ, ಹಾಗೆಯೇ ಶ್ರೀಕೃಷ್ಣಪರಮಾತ್ಮನು ಈಶ್ವರಃ ಎಂದು ಪರೋಕ್ಷವಾಗಿ ನಿರ್ದೇಶಮಾಡಿರುತ್ತಾನೆ, ಎಂದು ಶಬ್ದನಿರ್ಣಯದಲ್ಲಿದೆ. (೨) ತಮೇವ ಶರಣಂ ಗಚ್ಛ ಎಂದು ಈಶ್ವರನನ್ನು ಶರಣುಹೊಂದದೆ ಶ್ರೀಪರಮಾತ್ಮನನ್ನೇ ಶರಣುಹೊಂದು ಎಂದು ಉಪದೇಶಿಸಲ್ಪಟ್ಟು ಕೊನೆಗೆ ಮನ್ಮನಾ ಭವ ಇತ್ಯಾದಿಗಳಿಂದ ತನ್ನನ್ನೇ ಶರಣುಹೊಂದು ಎಂದು ಉಪದೇಶಿಸಲ್ಪಟ್ಟುದರಿಂದಲೂ ಈ ಈಶ್ವರನು ಶ್ರೀಕೃಷ್ಣನಿಂದ ಭಿನ್ನನಲ್ಲವೆಂದು ಸಿದ್ಧವಾಗುತ್ತದೆ. (೩) (ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ (ಶ್ಲೋ. ೬೨) ಎಂದು ಹೇಳಿದ

ಶಾಶ್ವತ ಸ್ಥಾನವು ಯಾವುದೆಂದರೆ-)ಶಾಶ್ವತ ಸ್ಥಾನವೆಂದರೆ ವೈಕುಂಠಮೊದಲಾದುದು. ಎಲ್ಲಾ(ಸ್ಥಾನಗಳಿಗೆ ಪ್ರಲಯದಲ್ಲಿ ವಿನಾಶವು ಬರುವುದರಿಂದ ವೈಕುಂಠಾದಿಗಳು ಶಾಶ್ವತ ಸ್ಥಾನವಾಗುವುದು ಹೇಗೆಂದರೆ-)ಲಕ್ಷ್ಮೀ ದೇವಿಯೇ ಶ್ರೀಪರಮಾತ್ಮನ ಲೋಕರೂಪದಿಂದ ಸರ್ವದಾ ಇರುತ್ತಾಳೆ. ಆದಕಾರಣ ವಿಷ್ಣು ಸಂಬಂಧಿ ಯಾದ ವೈಕುಂಠಾದಿ ಲೋಕಗಳು ನಿತ್ಯಗಳು, ಅವುಗಳು ಲಕ್ಷ್ಮ್ಯಾತ್ಮಕ ಚೇತನಸ್ವರೂಪಗಳೂ ಆಗಿವೆ, ಎಂದು ಆಗ್ನೇಯ ಪುರಾಣದಲ್ಲಿದೆ. (೪) ಯಾವ ವೈಕುಂಠಾದಿ ಲೋಕಗಳಲ್ಲಿ ರಜೋಗುಣವೂ ತಮೋ ಗುಣವೂ ಇಲ್ಲವೋ, ಅವುಗಳ ಮಿಶ್ರವಾದ ಸತ್ವಗುಣವೂ ಇಲ್ಲವೋ, ಇತ್ಯಾದಿಪ್ರಮೇಯವು ಉಕ್ತವಾಗಿದೆ. || ೬೧, ೬೨, ೬೩ ||

ಪೀ—ಇಷ್ಟರ ವರೆಗೆ ಉಪದಿಷ್ಟವಾದ ತತ್ವಸಾರವನ್ನು ಉಪಸಂಹಾರ ಮಾಡಿ ಸಾಧನಸಾರೋಪ ದೇಶವನ್ನು ಉಪಸಂಹರಿಸುವನು—

**ಗೀ || ಸರ್ವಗುಹ್ಯತಮಂ ಭೂಯಃ ಶೃಣು ಮೇ ಪರಮಂ ವಚಃ |**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಂ || ೬೪ ||**

ಅ || (ಅರ್ಜುನನೇ, ನೀನು,) ಮೇ=ನನಗೆ, ದೃಢಂ=ನಿಶ್ಚಯವಾಗಿಯೂ, ಇಷ್ಟಃ ಅಸಿ=ಗೆಳೆಯ ನಾಗಿರುತ್ತಿ. ತತಃ=ಆದಕಾರಣ, ತೇ=ನಿನಗೆ, ಹಿತಂ=ಹಿತಕರವಾದುದನ್ನು, ವಕ್ಷ್ಯಾಮಿ=ಕೊನೆಯ ದಾಗಿ ಹೇಳುವೆನು. (ಆದಕಾರಣ) ಸರ್ವಗುಹ್ಯತಮಂ=ಸರ್ವಸಾಧನಗಳಲ್ಲಿ ಅತಿಶಯವಾಗಿ ಗೋಪ್ಯ ವಾದ, ಮೇ=ನನ್ನ, ಪರಮಂ=ಉತ್ತಮವಾದ, ವಚಃ=ಮಾತನ್ನು, ಭೂಯಃ=೧೪ನೇ ಅಧ್ಯಾಯ ಮೊದ ಲಾದ ಅಧ್ಯಾಯಗಳಲ್ಲಿ ಸಾಧನಸಾರವನ್ನು ಹೇಳಿದ್ದರೂ ತಿರುಗಿ, ಶೃಣು=ಕೇಳು. || ೬೪ ||

ಪೀ—ಆ ರಹಸ್ಯವನ್ನೇ ಹೇಳುವನು—

**ಗೀ || ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು |**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ || ೬೫ ||**

ಅ || (ಅರ್ಜುನನೇ, ನೀನು) ಮೇ=ನನಗೆ, ಪ್ರಿಯಃ=ಪ್ರೀತಿಪಾತ್ರನು, ಅಸಿ=ಆಗಿರುತ್ತಿ. (ಆದ ಕಾರಣ) ಮನ್ಮನಾ ಭವ=ನನ್ನಲ್ಲಿಯೇ ಮನಸ್ಸು ಇಡುವವನಾಗು, ಮದ್ಭಕ್ತಃ=ನನ್ನಲ್ಲಿಯೇ ನಿರಂತರ ಸ್ನೇಹಪ್ರವಾಹ ಉಳ್ಳವನಾಗು. ಮದ್ಯಾಜೀ=ನನ್ನ ಪ್ರೀತಿಗಾಗಿಯೇ ಯಜ್ಞ ಮಾಡುವವನಾಗು. ಮಾಂ ನಮಸ್ಕುರು=ನನ್ನನ್ನೇ ನಮಸ್ಕರಿಸು, (ನನಗಿಂತ ನೀನು ಉತ್ಕೃಷ್ಟನು, ನಿನಗಿಂತ ನಾನು ಅಪಕೃಷ್ಟನು ಎಂಬ ಜ್ಞಾನಪೂರ್ವಕವಾಗಿ ವಂದಿಸುವವನಾಗು.) (ಮನ್ಮನಸ್ತ್ವ ಮೊದಲಾದ ಈ ನಾಲ್ಕು ಸಾಧನ ಸಾರಗಳಿಂದ) ಮಾಮೇವ=ನನ್ನನ್ನೇ, ಏಷ್ಯಸಿ=ಹೊಂದುವಿ, ಇತಿ=ಹೀಗೆ, ತೇ=ನಿನಗಾಗಿ, ಸತ್ಯ ಯಥಾರ್ಥವಾಗಿ, ಪ್ರತಿಜಾನೇ=ಅವಶ್ಯವಾಗಿ ನನ್ನ ಪ್ರಾಪ್ತಿಯಾಗುತ್ತದೆಂದು ಪ್ರತಿಜ್ಞೆಮಾಡುತ್ತೇನೆ (ಈ ವಿಷಯದಲ್ಲಿ ಸಂದೇಹಮಾಡಕೂಡದು) || ೬೫ ||

ಪೀ—ಈಶ್ವರಃ ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ | ತಮೇವ ಶರಣಂ ಗಚ್ಛ ತತ್ಪ್ರಸಾದಾತ್ ಇತ್ಯಾದಿರೂಪವಾದ ಪರೋಕ್ಷವಚನದಿಂದ ಶ್ರೀಕೃಷ್ಣನು ತನ್ನನ್ನು ಹೊಂದು ತಿಳಿಸುತ್ತ, ಈವನ್ನು ನಿರಾಕರಿಸುವುದಕ್ಕಾಗಿ ಹೇಳುತ್ತಾನೆ—

**ಭಾ ॥ ಪರೋಕ್ಷವಚನಂ ತು ದ್ರೋಣಂ ಪ್ರತಿ ಭೀಮವಚನವತ್ ॥ ೬೨–೬೩ ॥**

ಅ ॥ ದ್ರೋಣಾಚಾರ್ಯರನ್ನು ಕುರಿತು ಭೀಮಸೇನನ ವಚನದಂತೆ ಪರೋಕ್ಷವಚನವು. (ಅಂದರೆ ದ್ರೋಣೋ ಭೀಮೇನ ಪಿತೃವನ್ಮಾನಿತೋಽಹರ್ನಿಶಂ ಸದಾ । ಅದ್ಯಾರಿಂ ಮನ್ಯತೇ ದ್ರೋಣೋ ಭೀಮಂ ತದ್ವತ್ಕರಿಷ್ಯತಿ । ಇತ್ಯಾದಿ. ಭೀಮಸೇನನು ದ್ರೋಣಾಚಾರ್ಯರನ್ನು ಈಗ ಶತ್ರುವಿನಂತೆ ಮಾಡು ತ್ತಾನೆಂಬುವ ಅರ್ಥವು ನಿಶ್ಚಿತವಾಗಿರುವುದರಿಂದ ಭೀಮಃ ಎಂದು ಪರೋಕ್ಷ ವಚನವು ಅಲ್ಲದೆ ತನ್ನಿಂದ ಭಿನ್ನನಾದ ಇನ್ನೊಬ್ಬ ಭೀಮನಿದ್ದಾನೆಂಬುವುದಕ್ಕೆ ಜ್ಞಾಪಕವಲ್ಲವೆಂಬುವುದು ಹೇಗೋ, ಹಾಗೆಯೇ ಶ್ರೀಕೃಷ್ಣ ನಲ್ಲಿ ಈಶ್ವರತ್ವವು ನಿಶ್ಚಿತವಾಗಿದೆ, ಎಂಬುವ ಅಭಿಪ್ರಾಯದಿಂದ ಈಶ್ವರಃ ಇತ್ಯಾದಿ ಶ್ರೀಕೃಷ್ಣನ ಪರೋಕ್ಷ ವಚನವು ಕೊಡುವುದು ಹೊರತು ಶ್ರೀಕೃಷ್ಣನಿಗೆ ಅನೀಶ್ವರತ್ವವನ್ನು ತಿಳಿಸಿಕೊಡತಕ್ಕದ್ದಲ್ಲ. ॥ ೬೨–೬೩ ॥

ಟೀ — ಇದಂ ತು ತೇ ಗುಹ್ಯತಮಂ ಎಂದು ಪ್ರತಿಜ್ಞಾಮಾಡಿ ಜ್ಞಾನ ವಿಜ್ಞಾನಾದಿ ಪದಗಳಿಂದ ಅತಿಗೋಪ್ಯವಾದ ತತ್ತ್ವವು ಹೇಳಲ್ಪಟ್ಟಿದೆ. ಅದೇವೇ ಇಲ್ಲಿ ಸರ್ವಗುಹ್ಯತಮಂ (ಶ್ಲೋ. ೬೪) ಎಂಬು ವುದರಿಂದ ಪುನಃ ಹೇಳಲ್ಪಡುತ್ತದೆ. ಎಂಬೀ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—

**ತಾ ॥ (೧) ತತ್ತ್ವಸಾರಕಥನಂ ದ್ವಾವಿಮೌ ಪುರುಷಾವಿತ್ಯತ್ರೈವೋಪಸಂಹೃತಂ ॥ (೨) ತತ್ತ್ವಪ್ರಶಂಸಾರ್ಥಮೇವ ತದ್ಬುದ್ಧಿಪ್ರಶಂಸಾ ಕೃತಾ ॥ (೩) ಅತ್ರ ತು ಸಾಧನಸಾ-ರೋಪಸಂಹಾರಃ ಸರ್ವಗುಹ್ಯತಮಮಿತಿ ॥ (೪) ಮನ್ಮನಾ ಇತ್ಯಾದೇಃ ಪೂರ್ವ-ಮೇವೋಕ್ತತ್ವಾತ್ ॥ (೫) ಭೂಯ ಇತ್ಯರ್ಥತಸ್ತತ್ರಾಪಿ ವಿಷ್ಣ್ವಾಧಿಕ್ಯಮೇವೋಕ್ತಂ ಭವತಿ ॥ ೬೪,೬೫ ॥**

ಅ ॥ (೧) ದ್ವಾವಿಮೌ ಎಂಬುವಲ್ಲಿಯೇ ಜ್ಞೇಯವಾದ ತತ್ತ್ವವನ್ನು ಹೇಳಿ ಉಪಸಂಹಾರ ಮಾಡಿರು ವದರಿಂದ ಇದಂ ತು ತೇ ಗುಹ್ಯತಮಂ (ಅಧ್ಯಾ. ೯ ಶ್ಲೋ. ೧) ಇತ್ಯಾದಿಗಳಿಂದ ಹೇಳಲ್ಪಟ್ಟ ಅತಿಗೋಪ್ಯ ವಾದ ಜ್ಞೇಯವು ಇಲ್ಲಿ ಹೇಳಲ್ಪಡುವುದಿಲ್ಲ (ಹಾಗಾದರೆ ಇಲ್ಲಿ ಗುಹ್ಯತಮ ತತ್ತ್ವವು ಏಕೆ ಹೇಳಲ್ಪಡುವದು ಎಂದರೆ—) ಇಲ್ಲಿ ಸರ್ವಗುಹ್ಯತಮಂ ಎಂಬುವುದರಿಂದ ಸಾಧನಸಾರವನ್ನು ಉಪಸಂಹಾರ ಮಾಡಿರು ತ್ತಾರೆ. (೨) (ಹಾಗಾದರೆ ಏತದ್ಬುದ್ಧ್ವಾ ಬುದ್ಧಿಮಾನ್ ಸ್ಯಾತ್ ಎಂದು ಸಾಧನಸಾರವನ್ನು ಹೇಳಿ ಕೊನೆಗೊಳಿಸಿದಿಂದ ಇಲ್ಲಿ ಅದನ್ನು ಹೇಳಿದ್ದಾರೆಂಬುವದು ಹೇಗೆ? ಎಂದರೆ—) ಅಲ್ಲಿ ಸಾಧನಸಾರವನ್ನು ಉಪಸಂಹಾರಗೊಳಿಸದಿಂದ ಶ್ರೀ ಪರಮಾತ್ಮನು ಸರ್ವೋತ್ತಮನೆಂಬ ಜ್ಞಾನ ಪ್ರಶಂಸೆಯನ್ನು ಮಾಡಲ್ಪಟ್ಟಿ ತುತ್ತ, ಹರಿ ಸರ್ವೋತ್ತಮತ್ವಜ್ಞಾನ ಮಾತ್ರದಿಂದ ಮೋಕ್ಷವಾಗುವುದರಿಂದ ಶ್ರೀ ಪರಮಾತ್ಮನ ಮಹಿಮೆ ಯನ್ನು ಏನು ಹೇಳಬೇಕು, ಎಂದು ಶ್ರೀಪರಮಾತ್ಮನನ್ನು ಸ್ತುತಿಸುವುದಕ್ಕಾಗಿಯೇ ಹೇಳಿದ. (೩) (ಅಲ್ಲಿ ಹೇಳಿದ ಗುಹ್ಯತಮವನ್ನು ಇಲ್ಲಿ ಹೇಳದೆ ಇದ್ದರೆ ಭೂಯಃ ಎಂಬುವದು ವ್ಯರ್ಥವೆಂದರೆ—) ಮನ್ಮನಾಃ ಇತ್ಯಾದಿಗಳಿಂದ ಸಾಧನಸಾರವನ್ನು ಮೊದಲೇ ಹೇಳಿದುದರಿಂದ ಅದನ್ನು ಇಲ್ಲಿ [illegible] ಭೂಯಃ ಎಂಬುವುದು ಕೂಡುತ್ತದೆ ಹಾಗಾದರೆ ಪುನರುಕ್ತಿಯು ಬರುವದೆಂದರೆ ಸಾಧನಸಾರೋಪ ಸಂಹಾರಃ ಹಿಂದೆ ಹೇಳಿದುದನ್ನು ಉಪಸಂಹಾರ ಮಾಡಿದುದರಿಂದ ಪುನರುಕ್ತಿ ದೋಷವಿಲ್ಲ (೪) (ಹಾಗಾದರೆ ಮನ್ಮನಾ ಭವ ಇತ್ಯಾದಿಗಳಿಂದ ತನ್ನನ್ನೇ ಭಜಿಸಬೇಕೆಂದು ಮಾತ್ರ ಹೇಳಿದ್ದರಿಂದ ಭಗವಂತ ನಿಗೆ ಸರ್ವೋತ್ತಮತ್ವವನ್ನೇ ಹೇಳಿದಂತೆ ಆಗುವುದರಿಂದ ಇದು ತತ್ತ್ವಸಾರಕಥನವು ಏಕೆ ಆಗುವದಿಲ್ಲ ಎಂದರೆ—) ಇಲ್ಲಿ ವಿಷ್ಣ್ವಾಧಿಕ್ಯವನ್ನು ಹೇಳಿದೆಂಬುವುದು ಸತ್ಯವೇ, ಆದರೂ ಇತರ ದೇವತೆಗಳನ್ನು ಭಜಿಸಬಾರದು. ತನ್ನನ್ನೇ ಭಜಿಸಬೇಕೆಂದು ಉಪದೇಶ ಮಾಡಿದ್ದರಿಂದ ಸಾಧನಸಾರವೇ

ಉಕ್ತವಾಯಿತು. ಮುಖತಃ ತತ್ವಸಾರವು ಹೇಳಲ್ಪಡಲಿಲ್ಲ. ಆದಕಾರಣ ಸಾಧನಸಾರೋಪಸಂಹಾರಃ ಎಂದು ಹೇಳಿದ್ದು. ॥ ೬೪, ೬೫ ॥

ಪೀ — ರಹಸ್ಯಾರ್ಥವನ್ನೆಲ್ಲಾ ಒಂದು ಶ್ಲೋಕದಲ್ಲಿ ಹೇಳುವನು —

ಗೀ ॥ ಸರ್ವಧರ್ಮಾನ್ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।
ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥೬೬॥

ಅ ॥ (ಅರ್ಜುನನೇ, ನೀನು) ಸರ್ವಧರ್ಮಾನ್ = ಇತರ ದೇವತೆಗಳನ್ನುದ್ದೇಶಿಸಿ ಮಾಡುವ ಸಮಸ್ತ ಧರ್ಮಗಳನ್ನು, ಅಥವಾ ಸಮಸ್ತ ಧರ್ಮಫಲಗಳನ್ನು, ಅಥವಾ ಶ್ರೀ ವಿಷ್ಣುಪ್ರೀತಿಕಾರಕಗಳಾಗದ ಸಮಸ್ತ ಧರ್ಮಗಳನ್ನು, ಸ್ವರ್ಗಾದಿ ನಶ್ವರ ಫಲೋದ್ದೇಶಕಗಳಾದ ಕಾಮ್ಯಕರ್ಮಗಳನ್ನು ಪರಿತ್ಯಜ್ಯ = ಬಿಟ್ಟು, ಮಾಮೇಕಂ = ನನ್ನನ್ನೊಬ್ಬನನ್ನೇ, ಶರಣಂ = ಮೊರೆಯನ್ನು ವ್ರಜ = ಹೊಂದು (ಅನಾದಿ ಜನ್ಮಗಳಿಂದುಂಟಾದ ಪ್ರತಿಬಂಧಕವಿದ್ದುದರಿಂದ ಮಾಮೇವ ಏತ್ಯಸಿ ಎಂಬೀ ವಚನವು ಹೇಗೆ ಕೂಡುತ್ತದೆ? ಎಂದರೆ-) ಅಹಂ = ನಾನು, ತ್ವಾ = ನಿನ್ನನ್ನು, ಸರ್ವಪಾಪೇಭ್ಯಃ = ಅನಾದಿ ಜನ್ಮಗಳಿಂದ ಮಾಡಲ್ಪಟ್ಟ ಸಮಸ್ತ ಪಾಪಗಳಿಂದ, ಮೋಕ್ಷಯಿಷ್ಯಾಮಿ = ಬಿಡುಗಡೆಮಾಡಿ ಪ್ರಾರಬ್ಧ ಕರ್ಮಾವಸಾನದಲ್ಲಿ ಮುಕ್ತನನ್ನಾಗಿ ಮಾಡುವೆನು, ಮಾ ಶುಚಃ = ಜನನ ಮರಣಾದಿರೂಪವಾದ ಸಂಸಾರಭಯದಿಂದ ನರಕಾದ್ಯನರ್ಥಪ್ರಾಪ್ತಿಯಾಗುತ್ತದೆಂದು ದುಃಖಪಡಬೇಡ. ॥ ೬೬ ॥

ಪೀ — ಇತರರ ಭಜನನಿರಾಸವನ್ನು ಇಲ್ಲಿ ಮಾಡದಿರುವುದರಿಂದ ಅರ್ಥತೋऽಪಿ ವಿಷ್ಣ್ವಾಧಿಕ್ಯವನ್ನು ಹೇಳಿದ್ದಾರೆಂಬುವುದು ಹೇಗೆ? ಎಂದರೆ —)

ತಾ ॥ (೧) ಅನ್ಯಸರ್ವಧರ್ಮಾನ್ (ಧರ್ಮಾನ್ಸರ್ವಾನ್) ಪರಿತ್ಯಜ್ಯೇತ್ಯುಕ್ತಿಃ ಶಕ್ತೇರ್ನೈವ ಸರ್ವಧರ್ಮಾನಿತಿ ವಚನಂ ॥ (೨) ಮಾಮೇಕಂ ಶರಣಂ ವ್ರಜೇತ್ಯಪಿ । ಮನ್ಮನಾ ಇತ್ಯಾದ್ಯುಕ್ತನಿಗಮನಾತ್ಮನಾ ತದ್ವ್ಯಾಖ್ಯಾನಂ ॥ (೩) ಸರ್ವೋತ್ತಮತ್ವವಿಜ್ಞಾನಪೂರ್ವಂ ತತ್ರ ಮನಃ ಸದಾ । ಸರ್ವಾಧಿಕಪ್ರೇಮಯುಕ್ತಂ ಸರ್ವಸ್ಯಾತ್ರ ಸಮರ್ಪಣಂ ॥ (೪) ಅಖಂಡಾ (ಡ)ತ್ರಿವಿಧಾ ಪೂಜಾ ತದ್ಭಕ್ತ್ಯೈವ ಸ್ವಭಾವತಃ । ರಕ್ಷತೀತ್ಯೇವ ವಿಶ್ವಾಸಸ್ತದೀಯೋऽಹಮಿತಿ ಸ್ಮೃತಿಃ । ಶರಣಾಗತಿರೇಷಾ ಸ್ಯಾದಿಷ್ಟಾ ಮೋಕ್ಷಫಲಪ್ರದೇತಿ ಮಹಾವಿಷ್ಣುಪುರಾಣೇ ॥ (೫) ಅನಾದಿಜನ್ಮಕೃತಸರ್ವಪಾಪೇಭ್ಯಃ । ಅತ್ರ ಪ್ರಾಪ್ತ್ಯಭಾವಾತ್ । ಧರ್ಮಪರಿತ್ಯಾಗೇ ಪಾಪಪರಿತ್ಯಾಗಸ್ಯ ಕೈಮುತ್ಯೇನೈವ ಸಿದ್ಧತ್ವಾತ್ ॥ ೬೬ ॥

ಅ ॥ (೧) ಇತರ ಎಲ್ಲಾ ಧರ್ಮಗಳನ್ನು ಬಿಟ್ಟು ನನ್ನನ್ನೊಬ್ಬನನ್ನು ಭಜಿಸುವವನಾಗು, ಎಂಬುವ ರೀತಿಯಾಗಿ ಸರ್ವಧರ್ಮಾನ್ ಪರಿತ್ಯಜ್ಯ ಎಂಬುವ ವಚನವು ಮನ್ಮನಾ ಇತ್ಯಾದಿಗಳನ್ನು ಹೇಳಿದಕ್ಕೆ ವಿವರವಾಗಿಯೇ ಇರುತ್ತದೆ. (ಆದಕಾರಣ ಇತರರ ಭಜನವನ್ನು ವ್ಯಾವೃತ್ತಿಮಾಡುತ್ತಾ ಶ್ರೀ ವಿಷ್ಣುವಿನ ಭಜನವನ್ನು ಹೇಳಿದ್ದಾರೆ. ಆದಕಾರಣ ಸಾಧನಸಾರವಾಯಿತು.) (೨) ಮಾಮೇಕಂ ಶರಣಂ ವ್ರಜ ಎಂಬ ವಚನವೂ ಮನ್ಮನಾಃ ಇತ್ಯಾದ್ಯುಕ್ತವಾದುದನ್ನೇ ವ್ಯಾಖ್ಯಾನ ಮಾಡುವುದರಿಂದ. ಮಾಮೇಕಂ

ಶರಣಂ ವ್ರಜ ಎಂಬುವುದಕ್ಕೆ ಸಮಸ್ತ ಧರ್ಮಗಳನ್ನು ಬಿಡಬೇಕೆಂದು ಅನ್ಯಾರ್ಥವನ್ನು ಕಲ್ಪನಮಾಡಿದರೆ ಮನ್ಮನಸ್ತ್ವಾದಿಕಂ ಪರಿತ್ಯಜ್ಯ ಅನುತಿಷ್ಠಸ್ವ ಚ ಎಂದು ಯುದ್ಧಾದಿ ಧರ್ಮಗಳನ್ನು ಹೇಳಿದ್ದು ವ್ಯಾಹತವಾಗುವುದು, (ಅಂದರೆ ಮಾಮೇಕಂ ಶರಣಂ ವ್ರಜ ಎಂಬುವುದರಿಂದ ಮನ್ಮನಾ ಭವ ಇತ್ಯಾದಿಗಳಿಂದ ಹೇಳಿದ್ದ ಸಾಧನಕ್ಕೇನೇ ನಿಗಮನರೂಪವಾಗಿ ವ್ಯಾಖ್ಯಾನವು ಮಾಡಲ್ಪಡುತ್ತದೆ.) (೩) (ಭಗವನ್ಮನಸ್ತ್ವಾದಿಗಳು ಶರಣಾಗತಿರೂಪವು ಹೇಗೆ ಆಗುವುದೆಂದರೆ-) ಶ್ರೀ ಹರಿಸರ್ವೋತ್ತಮತ್ವಜ್ಞಾನಪೂರ್ವಕವಾಗಿ ಶ್ರೀ ಪರಮಾತ್ಮನಲ್ಲಿ ಸಮಸ್ತ ವಸ್ತುಗಳಿಗಿಂತಲೂ ಅತ್ಯಧಿಕ ಪ್ರೇಮದಿಂದ ಕೂಡಿ ಸದಾ ಮನಸ್ಸನ್ನು ಇಡಬೇಕು. (ಅಂದರೆ ಮಾಹಾತ್ಮ್ಯಜ್ಞಾನಪೂರ್ವಕ ಸದೃಢ ಸ್ನೇಹರೂಪ ಭಕ್ತಿಯಿಂದ ಮನಸ್ಸು ಕೂಡಿರಬೇಕು) ಸಮಸ್ತವನ್ನು ಶ್ರೀ ಪರಮಾತ್ಮನಲ್ಲಿ ಸಮರ್ಪಿಸಬೇಕು (ಅಂದರೆ ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಲಂ । ತಥಾಽಪಿ ಮತ್ಕೃತಾ ಪೂಜಾ ತತ್ಪ್ರಸಾದೇನ ನಾನ್ಯಥಾ । ಮದ್ಭಕ್ತಿಸ್ತತ್ಫಲಂ ಮಹ್ಯಂ ತತ್ಪ್ರಸಾದಃ ಪುನಃ ಪುನಃ (ಕರ್ಮನ್ಯಾಸೋ ಹರಾವೇವಂ ಎಂದು ಹೇಳಿದ ಪ್ರಕಾರ ದಯಾಸ್ವಾತಂತ್ರ್ಯ ಜ್ಞಾನಪೂರ್ವಕವಾಗಿ ನನ್ನ ಪೂಜಾರೂಪವಾಗಿ ನನ್ನಲ್ಲಿ ಭಕ್ತಿಪ್ರಸಾದರೂಪ ಫಲವನ್ನು ಬೇಡಿ ನನ್ನ ಪ್ರಸಾದದಿಂದ ಯಜ್ಞಾದಿಗಳನ್ನು ಮಾಡಿದವನು ನಾನೇ (ಶ್ರೀಕೃಷ್ಣನೇ) ಎಂಬುವ ಅಭಿಪ್ರಾಯದಿಂದ ಸಮಸ್ತ ಕರ್ಮಗಳನ್ನು ಶ್ರೀ ಹರಿಯಲ್ಲಿ ಸಮರ್ಪಿಸುವುದು. (೪) ಅವಿಚ್ಛಿನ್ನವಾಗಿ ನಿತ್ಯವಾದ ಭಗವತ್ಪೂಜೆಯು ಮನಸ್ಸು ವಚನ ಶರೀರ ಇವುಗಳಿಂದ ಹುಟ್ಟಿದ್ದು, ಎಂದು ಮೂರು ವಿಧವು. ಶ್ರೀ ಹರಿಯು ಸರ್ವರನ್ನು ರಕ್ಷಿಸುತ್ತಾನೆ. ಎಂಬುವ ವಿಶ್ವಾಸದಿಂದಲೇ ಆಗಬೇಕು. ಅದು ಸ್ವಾಭಾವಿಕವಾದುದು. ಅಂದರೆ ಫಲಾಂತರವನ್ನು ಅಪೇಕ್ಷಿಸದೆ ಮಾಡಿದ್ದು. ಶ್ರೀಪರಮಾತ್ಮನು ರಕ್ಷಿಸುತ್ತಾನೆಂಬ ವಿಶ್ವಾಸವು. ಶ್ರೀಪರಮಾತ್ಮನು ನನ್ನನ್ನು ರಕ್ಷಿಸುವವನು ನಾನು ನಿನ್ನ ದಾಸನು, ಎಂದು ಸರ್ವದಾ ಸ್ಮೃತಿಯು ಇದೇವೇ ಶ್ರೀ ವಿಷ್ಣುವಿನಲ್ಲಿ ಶರಣಾಗತಿಯು ಎನಿಸುತ್ತದೆ. ಇದು ಮೋಕ್ಷಫಲವನ್ನು ಕೊಡತಕ್ಕದು, ಎಂದು ಮಹಾವಿಷ್ಣುಪುರಾಣದಲ್ಲಿದೆ. (೫) (ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ, ಎಂಬುವಲ್ಲಿದ ಸರ್ವಪಾಪೇಭ್ಯಃ ಎಂಬುವುದಕ್ಕೆ ಯುದ್ಧನಿಮಿತ್ತಪಾಪಗಳಿಂದ ಎಂಬ ಅನ್ಯಥಾ ಪ್ರತೀತಿಯನ್ನು ಹೋಗಲಾಡಿಸುವುದಕ್ಕಾಗಿ ಹೇಳುತ್ತಾರೆ—) ಅನಾದಿಜನ್ಮಗಳಿಂದ ಮಾಡಲ್ಪಟ್ಟ ಸಮಸ್ತ ಪಾಪಗಳಿಂದ ಎಂದರ್ಥ. (ಅರ್ಜುನನ ದೇಹದಲ್ಲಿರತಕ್ಕ ಪಾಪಗಳೇ ವಿವಕ್ಷಿತಗಳೆಂದು ಏಕೆ ಆಗಲಾರವು ಎಂದರೆ—) ಅರ್ಜುನನದೇಹದಲ್ಲಿ ಪಾಪಗಳಿಗೆ ಪ್ರಾಪ್ತಿಯಿಲ್ಲ. (ಏಕೆ ಪಾಪಕ್ಕೆ ಪ್ರಾಪ್ತಿಯಿಲ್ಲ. ಮುಂದಿನ ಯುದ್ಧವೇ ಪಾಪವನ್ನು ಹೊಂದಿಸಿಕೊಡುವಂಥಾದ್ದು ಎಂದರೆ—) ಶ್ರೀಕೃಷ್ಣನು ಯಾವಾಗ ಅತಿಶುದ್ಧವಾದ ಧರ್ಮಕ್ಕಿಂತ ವಿಪರೀತವಾಗಿ ಇತರ ಧರ್ಮವನ್ನು ಬಿಡಬೇಕೆಂದು ಹೇಳುತ್ತಾನೋ, ಆಗ ಪಾಪವನ್ನು ಬಿಡಬೇಕೆಂದು ಬೋಧಿಸುತ್ತಾನೆಂದು ಸುತರಾಂ ಸಿದ್ಧವು. ಹಾಗೆಯೇ ಅರ್ಜುನನು ಯಾವಾಗ ಅನ್ಯಧರ್ಮ ಪರಿತ್ಯಾಗವನ್ನು ಮಾಡುವನೋ, ಆಗ ಪಾಪಪರಿತ್ಯಾಗವನ್ನು ಮಾಡುವನೆಂದು ಸುತರಾಂ ಸಿದ್ಧವು. (ಶ್ರೀಕೃಷ್ಣನು ಯುದ್ಧವನ್ನು ಮಾಡಬೇಕೆಂದು ಬೋಧಿಸುವುದರಿಂದಲೂ ಅರ್ಜುನನು ಯುದ್ಧವನ್ನು ಮಾಡುವುದರಿಂದಲೂ ಅಂತಹ ಪರಮ ಧರ್ಮವಾದ ಯುದ್ಧದಿಂದ ಪಾಪವು ಬರಲಿಕ್ಕೆ ಅವಕಾಶವಿಲ್ಲ.) ||೬೬||

ಟೀ—ಗೀತಾ ಶಾಸ್ತ್ರವನ್ನು ಅನಧಿಕಾರಿಗಳಿಗೆ ಉಪದೇಶ ಮಾಡಬಾರದೆಂದು ಹೇಳುತ್ತಾ ಅನಧಿಕಾರಿಗಳ ಸ್ವರೂಪವನ್ನು ಹೇಳುತ್ತಾರೆ—

ಗೀ || ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।
ನ ಚಾಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ ||೬೭||

ಅ ॥ ಇದಂ = ಈ ಗೀತಾಶಾಸ್ತ್ರವು ಅತಪಸ್ಕಾಯ = ಕಾಯಿಕ, ವಾಚಿಕ, ಮಾನಸಿಕ ತಪಸ್ಸುಗಳಿಲ್ಲದವನಿಗೆ ಅಥವಾ ತಮ್ಮತಮ್ಮ ಧರ್ಮಾಚರಣಗಳಿಲ್ಲದವನಿಗೆ. ಅಥವಾ ಬ್ರಹ್ಮಚರ್ಯಾದಿ ತಪಸ್ಸುಗಳಿಲ್ಲದವನಿಗೆ, ತೇ = ನಿನ್ನಿಂದ, ನ ವಾಚ್ಯಂ = ಉಪದೇಶಿಸಲ್ಪಡತಕ್ಕುದಲ್ಲ. ಅಭಕ್ತಾಯ = ಶ್ರೀ ಭಗವಂತನಲ್ಲಿ ಭಕ್ತಿಯಿಲ್ಲದವನಿಗೆ, ಕದಾಚನ = ಯಾವಾಗಲೂ. ನ ವಾಚ್ಯಂ = ಉಪದೇಶಿಸಲ್ಪಡತಕ್ಕುದಲ್ಲ. ಅಶುಶ್ರೂಷವೇ = ಗುರುಗಳ ಸೇವೆಯನ್ನು ಮಾಡದವನಿಗೆ, ನ ಚ ವಾಚ್ಯಂ = ಹೇಳತಕ್ಕದ್ದಲ್ಲ ಯಃ = ಯಾವಾತನು, ಮಾಂ = ನನ್ನನ್ನು, ಅಭ್ಯಸೂಯತಿ = ದ್ವೇಷಿಸುತ್ತಾನೋ, (ಅವನಿಗೂ ಹೇಳಕೂಡದು)

ವಿ ॥ (1) ತಪಸ್ಸು ಇಲ್ಲದವನಿಗೆ ಉಪದೇಶ ಮಾಡುವುದಕ್ಕಿಂತಲೂ ಗುರುಶುಶ್ರೂಷಾರಹಿತನಿಗೆ ಉಪದೇಶವು ಮಹಾ ದೋಷಕರವು. ಮತ್ತು ಅತ್ಯಲ್ಪ ತಪಸ್ಸು ಶುಶ್ರೂಷಾ ಭಕ್ತಿಯುಳ್ಳವನಿಗೆ ಕದಾಚಿತ್ ಉಪದೇಶ ಮಾಡಿದರೂ ಭಕ್ತಿಯಿಲ್ಲದವನಿಗೆ ಉಪದೇಶ ಮಾಡಿದರೆ ಮಹಾ ದೋಷವಿದೆ, ಎಂದು ಸೂಚಿಸುವುದಕ್ಕಾಗಿ ಚಶಬ್ದವು. ಮೊದಲುಮೊದಲಿನವರಿಗಿಂತ ಮೇಲುಮೇಲಿನವರು ಹೆಚ್ಚೆಚ್ಚು ಅನಧಿಕಾರಿಗಳು ತಪೋಹೀನಾದಿ ಮೂರು ಜನರಿಗೆ ಉಪದೇಶ ಮಾಡುವುದಕ್ಕಿಂತಲೂ ಶ್ರೀ ಪರಮಾತ್ಮನಲ್ಲಿ ಅಸೂಯಾ ಇದ್ದವನಿಗೆ ಉಪದೇಶಮಾಡಿದರೆ ದೋಷಾಧಿಕ್ಯವಿದೆ, ಎಂದು ತಿಳಿಸುವುದಕ್ಕಾಗಿ ಚಶಬ್ದವು. (2) ತಪಸ್ಸು, ಭಕ್ತಿ, ಶುಶ್ರೂಷಾ, ಅನಸೂಯಾ ಮೊದಲಾದ ಗುಣಗಳಿಂದ ಕೂಡಿದವನು ಅಧಿಕಾರಿಯು ಎಂದು ಸೂಚಿತವಾಯ್ತು. ॥ ೬೭ ॥

ಪೀ – ಗೀತೆಯಲ್ಲಿ ಅನಧಿಕಾರಿಯನು ನಿರಾಕರಿಸುತ್ತಾ ಅಧಿಕಾರಿಯನ್ನು ಇದಂ ತೇ ಎಂಬುವುದರಿಂದ ಹೇಳುತ್ತಾರೆ. ಅದರಲ್ಲಿ ಅತಪಸ್ಕ ಮೊದಲಾದವರು ನಾಲ್ವರು ಅನಧಿಕಾರಿಗಳೂ ಸಮಾನಿಕರೋ ತಾರತಮ್ಯವುಳ್ಳವರೊ, ಎಂದರೆ, ಗೀತಾ ಪದಗಳಿಂದಲೇ ಆ ನಾಲ್ವರಿಗೆ ತಾರತಮ್ಯವನ್ನು ತೋರಿಸುತ್ತಾರೆ–

ತಾ ॥ (೧) ಅತಪಸ್ಕಾಯೈವ ನ ವಾಚ್ಯಂ । ಅಶುಶ್ರೂಷವೇ ಪುನಶ್ಚೇತಿ ದೋಷಾಧಿಕ್ಯಮಶುಶ್ರೂಷೋರ್ದರ್ಶಯಿತುಂ ಚಶಬ್ದಃ । ಏವಮಭಕ್ತಾಯ ಕದಾಽಪಿ ನ ವಾಚ್ಯಂ ॥ (೨) ಕದಾಚಿದಲ್ಪತಪಸೋಽಲ್ಪಶುಶ್ರೂಷೋರಪಿ ಭಕ್ತ್ಯಾಧಿಕ್ಯೇ ವಾಚ್ಯಂ ಭವತೀತಿ ಕದಾಚನೇತಿ ವಿಶೇಷಃ ॥ (೩) ಅಭಕ್ತಾಚ್ಚ ನ ವಾಚ್ಯಮಸೂಯೋರಿತಿ ತತ್ರಾಪಿ ಚಶಬ್ದಃ ॥ (೪) ಸಮುಚ್ಚಯೇ ತಥಾಽಧಿಕ್ಯೇ ನ್ಯೂನತ್ವೇ ಚಃ ಪ್ರಯುಜ್ಯತ ಇತಿ ಶಬ್ದನಿರ್ಣಯೇ ॥ (೫) ಅಭಕ್ತಾದಪಿ ಪಾಪಃ ಸ್ಯಾದಸೂಯುರ್ದೋಷದೃಗ್ಯತ ಇತಿ ಚ ಪಾದ್ಮೇ ॥ ೬೭ ॥

ಅ ॥ (೧) ಬ್ರಹ್ಮಚರ್ಯ ಮೊದಲಾದ ತಪಸ್ಸು ಇಲ್ಲದವನಿಗೇನೇ ಹೇಳಕೂಡದು. ಹೀಗೆ ಇರುತ್ತಾ ಪುನಃ ಗುರುಶುಶ್ರೂಷಾ ಇಲ್ಲದವನಿಗೆ ಸುತರಾಂ ಹೇಳಕೂಡದು. ತಪೋಹೀನನಿಗಿಂತಲೂ ಗುರುಶುಶ್ರೂಷಾ ಇಲ್ಲದವನಿಗೆ ದೋಷಾಧಿಕ್ಯವಿದೆ ಎಂದು ತೋರಿಸುವುದಕ್ಕಾಗಿ ಚಶಬ್ದವು. ಹೀಗೆ ಶ್ರೀ ಪರಮಾತ್ಮನಲ್ಲಿ ಭಕ್ತಿಯಿಲ್ಲದವನಿಗೆ ಯಾವಾಗಲೂ ಸರ್ವಥಾ ಹೇಳಕೂಡದು. (೨) ಕದಾಚಿತ್ ಅಲ್ಪ ತಪಸ್ಸುಳ್ಳವನಾಗಿದ್ದು ಅಲ್ಪವಾಗಿ ಗುರುಗಳ ಸೇವೆಯನ್ನು ಮಾಡುವವನಿಗೂ ಭಕ್ತಿಯು ಅಧಿಕವಾಗಿದ್ದರೆ ಉಪದೇಶ ಮಾಡಬಹುದು ಎಂಬುವ ಅಭಿಪ್ರಾಯದಿಂದ ಕದಾಚನ ಎಂಬುವ ವಿಶೇಷ ಶಬ್ದವನ್ನು ಹೇಳಿದ್ದು. (೩) ಅಭಕ್ತನಿಗಿಂತಲೂ ಹೆಚ್ಚಾಗಿ ಶ್ರೀ ಪರಮಾತ್ಮನಲ್ಲಿ ಅಸೂಯಾ ಇದ್ದವನಿಗೆ ಸರ್ವಥಾ ಹೇಳಬಾರದು, ಎಂದು

ಅಲ್ಲಿಯೂ ಚಶಬ್ದವು. (೪) ಚಶಬ್ದವು ದೋಷಾಧಿಕ್ಯವನ್ನು ಸೂಚಿಸುತ್ತದೆ ಎಂಬುವುದು ಹೇಗೆಂದರೆ—) ಸಮುಚ್ಚಯ, ಹಾಗೆಯೇ ಅಧಿಕ್ಯ, ನ್ಯೂನತೆ ಈ ಅರ್ಥಗಳಲ್ಲಿ ಚಶಬ್ದವು ಪ್ರಯುಕ್ತವಾಗುತ್ತದೆ, ಎಂದು ಶಬ್ದನಿರ್ಣಯದಲ್ಲಿದೆ. (೫) ಯಾವ ಕಾರಣದಿಂದ ಅಸೂಯಾ ಇದ್ದವನು ದೋಷದರ್ಶಿಯೋ, ಆದಕಾರಣ ಅಸೂಯಾ ಇದ್ದವನು ಅಭಕ್ತನಿಗಿಂತಲೂ ಪಾಪಿಷ್ಠನಾಗುವನು, ಎಂದು ಪಾದ್ಮಪುರಾಣದಲ್ಲಿದೆ. ॥ ೬೭ ॥

ಟೀ—ಅಧಿಕಾರಿಗೆ ಮಾಡುವ ಗೀತಾಶಾಸ್ತ್ರೋಪದೇಶವನ್ನು ಫಲವನ್ನು ಹೇಳಿ ಪ್ರಶಂಸಾ ಮಾಡುತ್ತಾನೆ—

**ಗೀ ॥ ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥ ೬೮ ॥**

ಅ ॥ ಯಃ=ಯಾವಾತನು, ಪರಮಂ ಗುಹ್ಯಂ=ಅತಿಗೋಪ್ಯವಾದ, ಇದಂ=ಈ ಗೀತಾಶಾಸ್ತ್ರವನ್ನು, ಮದ್ಭಕ್ತೇಷು=ನನ್ನ ಭಕ್ತರಿಗಾಗಿ, ಅಭಿಧಾಸ್ಯತಿ=ಉಪದೇಶ ಮಾಡುತ್ತಾನೋ, (ಆತನು) ಮಯಿ=ನನ್ನಲ್ಲಿ, ಪರಾಂ=ಉತ್ತಮವಾದ, ಭಕ್ತಿಂ=ಭಕ್ತಿಯನ್ನು, ಕೃತ್ವಾ=ಮಾಡಿ (ಕ್ರಮವಾಗಿ) ಮಾಮೇವ=ನನ್ನನ್ನೇ, ಏಷ್ಯತ್ಯೇವ=ಹೊಂದಿಯೇ ಹೊಂದುವನು. (ಅಂದರೆ ಮುಕ್ತನಾಗುವನು) ಅಸಂಶಯಃ=ಸಂದೇಹವಿಲ್ಲ. (ಶ್ರೀಪರಮಾತ್ಮನಿಗೆ ಭಕ್ತಿಯಿದ್ದವನಲ್ಲಿ ಪ್ರೀತಿಯಿದ್ದಷ್ಟು ಯಾರಲ್ಲಿಯೂ ಇರುವುದಿಲ್ಲ. ಆತನೇ ಪರಮ ಪ್ರೀತಿಪಾತ್ರನು.) ॥ ೬೮ ॥

**ಗೀ ॥ ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯ ॥**

ಅ ॥ ತಸ್ಮಾತ್=ಗೀತಾಶಾಸ್ತ್ರವನ್ನುಪದೇಶಿಸುವವನಿಗಿಂತ, ಮೇ=ನನಗೆ, ಪ್ರಿಯಕೃತ್ತಮಃ=ವಿಶೇಷವಾಗಿ ಪ್ರೀತಿಪಾತ್ರನು, ಮನುಷ್ಯೇಷು=ಮನುಷ್ಯರ ಮಧ್ಯದಲ್ಲಿ, ಕಶ್ಚಿತ್=ಯಾವನೊಬ್ಬನೂ, ನ ಚ=ಇಲ್ಲವೇ ಇಲ್ಲ. ತಸ್ಮಾತ್=ಗೀತಾಶಾಸ್ತ್ರವನ್ನುಪದೇಶಿಸುವ ಮನುಷ್ಯನಿಗಿಂತ, ಅನ್ಯಃ=ಮತ್ತೊಬ್ಬ ಮನುಷ್ಯನು, ಮೇ=ನನಗೆ, ಪ್ರಿಯತರಃ=ಅತಿಶಯವಾಗಿ ಪ್ರಿಯನು, ಭುವಿ=ಭೂಲೋಕದಲ್ಲಿ, ನ ಭವಿತಾ=ಮುಂದೆ ಕಾಲಾಂತರದಲ್ಲಿಯೂ ಆಗಲಾರನು. (ಹಿಂದೆ ಇರಲಿಲ್ಲ. ಈಗ ಇಲ್ಲ) (ಇಲ್ಲಿ ಮನುಷ್ಯೇಷು ಎಂದು ಹೇಳಿದ್ದರಿಂದ ದೇವತೆಗಳಿಗೆ ಇನ್ನು ತಾರತಮ್ಯಕ್ರಮದಿಂದ ಫಲಾಧಿಕ್ಯವಿದೆ ಎಂದು ಸೂಚಿತವಾಯ್ತು.) ॥ ೬೯ ॥

ಟೀ—ಇನ್ನು ಗೀತಾಶಾಸ್ತ್ರವನ್ನು ಪಠನ ಮಾಡುವವನಿಗೆ ಫಲವನ್ನು ಹೇಳುತ್ತಾನೆ—

**ಗೀ ॥ ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦ ॥**

ಅ ॥ ಯಃ=ಯಾವಾತನು, ಆವಯೋಃ=ನಮ್ಮಿಬ್ಬರ, (ಶ್ರೀಕೃಷ್ಣಾರ್ಜುನರ) ಧರ್ಮ್ಯಂ=ಸರ್ವಧಾರಕನಾದುದರಿಂದ ಧರ್ಮನೆನಿಸಿದ ಶ್ರೀ ಪರಮಾತ್ಮನನ್ನು ಬೋಧಿಸುವ, ಅಥವಾ ಧರ್ಮವನ್ನು ಬೋಧಿಸುವ, ಇಮಂ ಸಂವಾದಂ=ಪರಸ್ಪರ ಸಂಭಾಷಣರೂಪವಾದ ಈ ಗೀತಾಶಾಸ್ತ್ರ

ಗ್ರಂಥವನ್ನು, ಅಧ್ಯೇಷ್ಯತೇ ಚ = ಪಠನ ಮಾಡುವನೋ, ತೇನ = ಆ ಮನುಷ್ಯನಿಂದ, ಜ್ಞಾನಯಜ್ಞೇನ = ದ್ರವ್ಯಯಜ್ಞ ಮೊದಲಾದ ಸಕಲ ಯಜ್ಞಗಳಿಂದಲೂ ಶ್ರೇಷ್ಠವಾದ ಜ್ಞಾನಾಖ್ಯ ಯಜ್ಞದಿಂದ, ಇಷ್ಟಃ ಸ್ಯಾಂ = ಪೂಜಿಸಲ್ಪಟ್ಟವನಾಗಿ ಸಂತುಷ್ಟನಾಗುವೆನು. ಇತಿ = ಹೀಗೆ, ಮೇ = ನನ್ನ, ಮತಿಃ = ಬುದ್ಧಿಯು. ॥ ೭೦ ॥

ಪೀ—ಈ ಗೀತಾಶಾಸ್ತ್ರವನ್ನು ಇತರರು ಪಾರಾಯಣಾದಿಗಳನ್ನು ಮಾಡುತ್ತಿರುವಾಗ ಕೇಳಿದವರಿಗೂ ಫಲವಿದೆ, ಎನ್ನುತ್ತಾರೆ—

## ಗೀ ॥ ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।
## ಸೋಽಪಿ ಮುಕ್ತಃ ಶುಭಾನ್ಲೋಕಾನ್ಪ್ರಾಪ್ನುಯಾತ್ಪುಣ್ಯಕರ್ಮಣಾಂ॥೭೧॥

ಅ ॥ ಶ್ರದ್ಧಾವಾನ್ = ಗೀತಾಶ್ರವಣಾದಿಗಳಿಂದ ನನಗೆ ಫಲವಿದೆ, ಎಂದು ಆಸ್ತಿಕ್ಯ ಬುದ್ಧಿಯುಳ್ಳ, ಮತ್ತು ಅನಸೂಯಶ್ಚ = ಅಸೂಯಾ ಮೊದಲಾದ ದೋಷಗಳಿಲ್ಲದ, ಯಃ ನರಃ = ಯಾವ ಮನುಷ್ಯನು, ಶೃಣುಯಾದಪಿ = (ನಮ್ಮಿಬ್ಬರ ಪರಸ್ಪರ ಗೀತಾರೂಪ ಸಂಭಾಷಣೆಯನ್ನು,) ಕೇಳುತ್ತಾನೋ, ಸೋಽಪಿ = ಅವನೂ ಕೂಡ, ಮುಕ್ತಃ = ಸಂಸಾರಸಾಗರದಿಂದ ಬಿಡುಗಡೆ ಹೊಂದಿದವನಾಗಿ, ಪುಣ್ಯಕರ್ಮಣಾಂ = ಪುಣ್ಯ ಕರ್ಮವನ್ನು ಮಾಡಿದವರ, ಶುಭಾನ್ = ಮಂಗಲಕರಗಳಾದ, ಲೋಕಾನ್ = ಲೋಕಗಳನ್ನು, ಪ್ರಾಪ್ನುಯಾತ್ = ಹೊಂದುವನು.

ವಿ ॥ (1) ಗೀತಾಶಾಸ್ತ್ರವನ್ನು ಕೇಳಿದವನಿಗೂ ಮುಕ್ತಿಯಾಗುತ್ತದೆಂದು ಹೇಳುವಾಗ ಗೀತಾಧ್ಯಯನ ಮಾಡಿದವನಿಗೆ ಮುಕ್ತಿಯಾಗುತ್ತದೆಂದು ಸುತರಾಂ ಸಿದ್ಧವು (2) ಗೀತಾಶ್ರವಣವನ್ನು ಮಾಡುವವನಿಗಿಂತ ಗೀತಾಧ್ಯಯನವನ್ನು ಮಾಡಿದವನಿಗೆ ಮುಕ್ತಿಯಲ್ಲಿ ಹೆಚ್ಚು ಸುಖವು. ಅವನಿಗಿಂತಲೂ ಪಾಠ ಹೇಳುವ ಮನುಷ್ಯನಿಗೆ ಹೆಚ್ಚು ಸುಖವು. ಅವನಿಗಿಂತ ದೇವತೆಗಳಿಗೆ ಹೆಚ್ಚು ಸುಖವು. ॥ ೭೧ ॥

ಪೀ—ಶ್ರೀಕೃಷ್ಣನು ಅರ್ಜುನನಿಗೆ ಉಪದಿಷ್ಟವಾದ ತತ್ತ್ವ ತಿಳಿಯಿತೋ ಇಲ್ಲವೋ, ಎಂದು ವಿಚಾರ ಮಾಡುತ್ತಾ ಇನ್ನು ಅರ್ಜುನನು ಸಂಶಯಗ್ರಸ್ತನಾಗಿದ್ದರೆ ಮತ್ತೊಂದು ಬಾರಿ ಬೇಕಾದರೂ ಅರ್ಜುನನೇ ತಿಳಿಸುವೆನೆಂದು ಅತಿದಯಾಪರನಾದ ಶ್ರೀಕೃಷ್ಣನು ಅರ್ಜುನನ ಮನೋಽಭಿಪ್ರಾಯವನ್ನು ಕೇಳುತ್ತಾನೆ—

## ಗೀ ॥ ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।
## ಕಚ್ಚಿದಜ್ಞಾನಸಮ್ಮೋಹಃ ಪ್ರಣಷ್ಟಸ್ತೇ ಧನಂಜಯ ॥ ೭೨ ॥

ಅ ॥ ಪಾರ್ಥ = ಅರ್ಜುನನೇ, ತ್ವಯಾ = ನಿನ್ನಿಂದ, ಏಕಾಗ್ರೇಣ ಚೇತಸಾ = ಒಂದೇಕಡೆ ಇರಿಸಲ್ಪಟ್ಟ ಮನಸ್ಸಿನಿಂದ, ಏತತ್ = ನನ್ನಿಂದ ಇಷ್ಟರವರೆಗೆ ಹೇಳಲ್ಪಟ್ಟ ಗೀತಾರೂಪಿಯಾದುದು, ಶ್ರುತಂ ಕಚ್ಚಿತ್ = ಸಾವಧಾನದಿಂದ ಕೇಳಲ್ಪಟ್ಟಿತಷ್ಟೆ, ಧನಂಜಯ = ಅರ್ಜುನನೇ, ತೇ = ನಿನ್ನ, ಅಜ್ಞಾನಸಮ್ಮೋಹಃ = ಅಜ್ಞಾನದಿಂದ ಹುಟ್ಟಿದ ಮಾನಸಿಕ ಸಂಶಯವು, ಅಥವಾ ಭ್ರಾಂತಿಯು, ಪ್ರಣಷ್ಟಃ ಕಚ್ಚಿತ್ = ನಿವೃತ್ತವಾಯಿತಷ್ಟೆ. ॥ ೭೨ ॥

ಪೀ—ಶ್ರೀಕೃಷ್ಣಪರಮಾತ್ಮನ ಪ್ರಶ್ನೆಗೆ ಅರ್ಜುನನು ತನ್ನ ಮನಸ್ಸಿನಲ್ಲಿದ್ದುದನ್ನು ವಿಜ್ಞಾಪಿಸಿಕೊಳ್ಳುತ್ತಾನೆ—

ಗೀ ॥ ॥ ಅರ್ಜುನ ಉವಾಚ ॥

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಽಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥೭೩॥**

ಅ ॥ ಅರ್ಜುನಃ = ಅರ್ಜುನನು, ಉವಾಚ = ಉತ್ತರ ಹೇಳುತ್ತಾನೆ. ಅಚ್ಯುತ = ವಿನಾಶವಿಲ್ಲದಿರುವ ಶ್ರೀಕೃಷ್ಣನೇ, ತ್ವತ್ಪ್ರಸಾದಾತ್ = ನಿನ್ನ ಅನುಗ್ರಹದಿಂದ, ಮೋಹಃ = ವಿಪರೀತ ಜ್ಞಾನರೂಪ ಮೋಹವು, ನಷ್ಟಃ = ನಾಶವಾಯಿತು. ಮಯಾ = ನನ್ನಿಂದ. ಸ್ಮೃತಿಃ = ಶ್ರೀಮನ್ನಾರಾಯಣನ ದ್ವೇಷಿಗಳ ಮತ್ತು ಅವರ ಅನುಬಂಧಿಗಳ ನಿಗ್ರಹವು ಪರಮ ಧರ್ಮವು ಅವಶ್ಯವಾಗಿ ಕಾರ್ಯವೇ, ಇತ್ಯಾದಿ ರೂಪವಾದ ಸ್ಮೃತಿಯು, ನಿನ್ನ ಅನುಗ್ರಹದಿಂದಲೇ, ಲಬ್ಧಾ = ಹೊಂದಲ್ಪಟ್ಟಿತು. ಗತಸಂದೇಹಃ = ಯುದ್ಧವನ್ನು ಮಾಡಬೇಕೋ ಬೇಡವೋ ಎಂಬುವ ಸಂದೇಹವು ನಿವೃತ್ತವಾಯ್ತು. (ಯುದ್ಧಕ್ಕಾಗಿ ಸನ್ನದ್ಧನಾಗಿ ನಿಂತಿರುವೆನು) ತವ = ನಿನ್ನ, ವಚನಂ = ಮಾತನ್ನು, ಕರಿಷ್ಯೇ = ಮಾಡುವೆನು. (ನಿನ್ನ ಮಾತನ್ನು ಶಿರಸಾ ವಹಿಸಿಕೊಂಡು ಯುದ್ಧವನ್ನು ಮಾಡುವೆನು.) ॥೭೩॥

ಪೀ—ಏಕಾಂತದಲ್ಲಿ ಶ್ರೀಕೃಷ್ಣಾರ್ಜುನರು ಸಂಭಾಷಣ ಮಾಡಿಕೊಂಡಿದ್ದದ್ದು ಸಂಜಯನಿಗೆ ಹೇಗೆ ತಿಳಿಯಿತೆಂಬುವ ಧೃತರಾಷ್ಟ್ರನ ಶಂಕೆಯನ್ನು ಮುಂದಿನ ಶ್ಲೋಕಗಳಿಂದ ಸಂಜಯನು ಪರಿಹರಿಸುತ್ತಾನೆ —

ಗೀ ॥ ॥ ಸಂಜಯ ಉವಾಚ ॥

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಂ ॥೭೪॥**

ಅ ॥ ಸಂಜಯಃ = ಸಂಜಯನು, ಉವಾಚ = ಹೇಳುತ್ತಾನೆ, ಅಹಂ = ನಾನು, ಮಹಾತ್ಮನಃ = ಉತ್ಕೃಷ್ಟಮನಸ್ಸುಳ್ಳ, ಮಹಾನುಭಾವನಾದ, ವಾಸುದೇವಸ್ಯ = ಶ್ರೀಕೃಷ್ಣನ, ಮತ್ತು ಪಾರ್ಥಸ್ಯ ಚ ಮಹಾನುಭಾವನಾದ ಅರ್ಜುನನ, ಇತಿ = ಪ್ರಥಮಾಧ್ಯಾಯಾದಿಗಳಲ್ಲಿ ಹೇಳಿದ ಪ್ರಕಾರ, ಅದ್ಭುತಂ = ಮೊದಲು ಎಲ್ಲಿಯೂ ಕೇಳಲ್ಪಡದಿರುವುದರಿಂದ ಅತ್ಯಾಶ್ಚರ್ಯಕರವಾದ, ರೋಮಹರ್ಷಣಂ = ರೋಮಾಂಚವನ್ನುಂಟುಮಾಡುವ, ಇಮಂ = ಈ, ಸಂವಾದಂ = ಪರಸ್ಪರ ಸಂಭಾಷಣೆಯನ್ನು (ವೇದವ್ಯಾಸರ ಅನುಗ್ರಹದಿಂದ) ಅಶ್ರೌಷಂ = ಕೇಳಿರುವೆನು. ॥೭೪॥

ಪೀ—ಧೃತರಾಷ್ಟ್ರನ ಬಳಿಯಲ್ಲಿ ಕುಳಿತಿದ್ದ ಸಂಜಯನಿಗೆ ಕುರುಕ್ಷೇತ್ರದಲ್ಲಿ ನಡೆದ ವೃತ್ತಾಂತವು ಹೇಗೆ ತಿಳಿಯಿತೆಂದರೆ -

ಗೀ ॥ **ವ್ಯಾಸಪ್ರಸಾದಾಚ್ಛ್ರುತವಾನೇತದ್ಗುಹ್ಯಮಹಂ ಪರಂ ।**
**ಯೋಗಂ ಯೋಗೇಶ್ವರಾತ್ಕೃಷ್ಣಾತ್ಸಾಕ್ಷಾತ್ಕಥಯತಃ ಸ್ವಯಂ ॥೭೫॥**

ಅ ॥ ಅಹಂ = ನಾನು ವ್ಯಾಸಪ್ರಸಾದಾತ್ = ವೇದವ್ಯಾಸರ ಅನುಗ್ರಹದಿಂದ (ಅಂದರೆ ವೇದವ್ಯಾಸ ದೇವರು ಸಂಜಯನಿಗೆ ಕುರುಕ್ಷೇತ್ರದಲ್ಲಿ ನಡೆದ್ದು ಪರಿಸಮಾಪ್ತಿಯಾಗುವ ಪರ್ಯಂತ ಅಲ್ಲಿ ನಡೆದ ವೃತ್ತಾಂತವೆಲ್ಲವೂ ನಿನ್ನ ಕಣ್ಣಿಗೆ ಕಾಣಲಿ, ಕಿವಿಗೆ ಕೇಳಲಿ, ಮನಸ್ಸಿಗೆ ಸರ್ವವೂ ತಿಳಿಯಲಿ ಎಂದು ವರವ [illegible]

ಪರಮಾನುಗ್ರಹದಿಂದ) ಏತತ್ = ಈ, ಗುಹ್ಯಂ = ಅತಿಗೋಪ್ಯವಾದ, ಪರಂ = ಅತ್ಯುತ್ತಮವಾದ, ಯೋಗಂ = ಪುರುಷಾರ್ಥೋಪಾಯವನ್ನು, ಯೋಗೇಶ್ವರಾತ್ = ಸಮಸ್ತ ಉಪಾಯಗಳಿಗೂ ನಿಯಾಮಕನಾದ, ಸ್ವಯಂ ಕಥಯತಃ = ತಾನಾಗಿಯೇ ಸಾಕ್ಷಾತ್ತಾಗಿ ಹೇಳುವ, ಕೃಷ್ಣಾತ್ = ಶ್ರೀಕೃಷ್ಣನಿಂದ, ಸಾಕ್ಷಾತ್ = ಮತ್ತೊಬ್ಬನ ಮೂಲಕವಲ್ಲದೇನೇ, ಶ್ರುತವಾನ್ = ಕೇಳಿದೆನು. || ೭೫ ||

ಪೀ—ಕೃಷ್ಣಾರ್ಜುನರ ಸಂಭಾಷಣವನ್ನು ಕೇಳಿದ್ದರಿಂದ ತನಗೆ (ಸಂಜಯನಿಗೆ) ಉಂಟಾದ ತಾತ್ಕಾಲಿಕ ಫಲವನ್ನು ಧೃತರಾಷ್ಟ್ರನೊಡನೆ ಸಂಜಯನು ಹೇಳುತ್ತಾನೆ—

**ಗೀ || ರಾಜನ್ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಂ |**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ೭೬**

ಅ || ರಾಜನ್ = ಧೃತರಾಷ್ಟ್ರ ಮಹಾರಾಜನೇ, ಇಮಂ = ಈ, ಅದ್ಭುತಂ = ಆಶ್ಚರ್ಯಕರವಾದ, ಪುಣ್ಯಂ = ಪುಣ್ಯಕರವಾದ, (ಪಾರತ್ರಿಕ ಸುಖಕ್ಕೆ ಕಾರಣವಾದ ಅದೃಷ್ಟವನ್ನುಂಟುಮಾಡುವ) ಕೇಶವಾರ್ಜುನಯೋಃ = ಶ್ರೀಕೃಷ್ಣಾರ್ಜುನರ, ಸಂವಾದಂ = ಸಂಭಾಷಣೆಯನ್ನು, ಸಂಸ್ಮೃತ್ಯ ಸಂಸ್ಮೃತ್ಯ = ಮತ್ತೂ ಮತ್ತೂ ಸ್ಮರಣೆ ಮಾಡಿಕೊಂಡು, ಮುಹುಃ ಮುಹುಃ = ಮತ್ತೆ ಮತ್ತೆ, ಹೃಷ್ಯಾಮಿ = ಸಂತೋಷಪಡುತ್ತೇನೆ. ||೭೬||

**ಗೀ || ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ |**
**ವಿಸ್ಮಯೋ ಮೇ ಮಹಾನ್ರಾಜನ್ ಹೃಷ್ಯಾಮಿ ಚ ಪುನಃಪುನಃ || ೭೭ ||**

ಅ || ರಾಜನ್ = ಧೃತರಾಷ್ಟ್ರ ಮಹಾರಾಜನೇ, ಹರೇಃ = ಶ್ರೀಕೃಷ್ಣಪರಮಾತ್ಮನ, ಅತ್ಯದ್ಭುತಂ = ಅತ್ಯಾಶ್ಚರ್ಯಕರವಾದ, ತತ್ ರೂಪಂ = ಆ ವಿಶ್ವರೂಪವನ್ನು, ಸಂಸ್ಮೃತ್ಯಸಂಸ್ಮೃತ್ಯ = ಮತ್ತುಮತ್ತು ಸ್ಮರಣೆಮಾಡಿಕೊಂಡು, ಮೇ = ನನಗೆ. ಮಹಾನ್ ವಿಸ್ಮಯಃ = ಅತ್ಯಾಶ್ಚರ್ಯವು, (ಆಗುತ್ತದೆ) ಪುನಃ ಪುನಃ = ಮತ್ತುಮತ್ತು, ಹೃಷ್ಯಾಮಿ ಚ = ಸಂತೋಷಪಡುವೆನು (ಅಂದರೆ ಆ ರೂಪವನ್ನು ನೆನಸಿಕೊಂಡು ಆನಂದಾತಿಶಯದಿಂದ ರೋಮಾಂಚಿತವಾಗುತ್ತಾ ಇದೆ) || ೭೭ ||

ಪೀ—ಪಾಂಡವರಿಗೆ ಜಯವೋ, ತನ್ನ ಮಕ್ಕಳಿಗೆ ಜಯವೋ ಎಂದು ಸಂಶಯಗ್ರಸ್ತನಾದ ಧೃತರಾಷ್ಟ್ರನಿಗೆ ಸಂಜಯನು ಸರ್ವೇಶ್ವರನಾದ ಶ್ರೀಕೃಷ್ಣನ ಪಕ್ಷವನ್ನು ಹೊಂದಿರುವ ಪಾಂಡವರಿಗೇನೇ ವಿಜಯಾದಿಗಳು ಬರುವುದಲ್ಲದೆ ನಿನ್ನ ಮಕ್ಕಳಿಗೆ ಜಯವು ಬರಲಾರದು ಎಂದು ತನ್ನ ಅಭಿಪ್ರಾಯವನ್ನು ತಿಳಿಸುತ್ತಾನೆ—

**ಗೀ || ಯತ್ರ ಯೋಗೇ(ಗೀ)ಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ |**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ || ೭೮ ||**

ಅ || ಯತ್ರ = ಯಾವ ಸೇನೆಯಲ್ಲಿ, ಯೋಗೀಶ್ವರಃ ಸಮಸ್ತ ಉಪಾಯವುಳ್ಳವರಿಗೆ ಸ್ವಾಮಿಯಾದ, ಕೃಷ್ಣಃ = ಶ್ರೀಕೃಷ್ಣನು. (ಇರುತ್ತಾನೋ) ಯತ್ರ = ಯಾವ ಸೇನೆಯಲ್ಲಿ, ಧನುರ್ಧರಃ = ಧನುರ್ಧಾರಿಯಾದ. ಪಾರ್ಥಃ = ಅರ್ಜುನನು. (ಇದ್ದಾನೋ) ತತ್ರ = ಆ ಸೇನೆಯಲ್ಲಿ, ಶ್ರೀಃ = ರಾಜ್ಯಲಕ್ಷ್ಮಿಯೂ, ವಿಜಯಃ = ಜಯವು, ಭೂತಿಃ = ಸಂಪತ್ತು, ನೀತಿಃ = ನ್ಯಾಯವು, (ಇವುಗಳು) ಧ್ರುವಾಃ = ಅಚಂಚಲ (ಸ್ಥಿರಗಳಾಗಿ ಇರುವವು ಎಂದು, ಮಮ ಮತಿಃ = ನನ್ನ ನಿಶ್ಚಯವು. || ||

ಗೀ ॥ ಓಂ ತತ್ಸದಿತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನಸಂವಾದೇ ಶ್ರೀಮನ್ಮಹಾಭಾರತೇ ಶತಸಹಸ್ರಸಂಹಿತಾಯಾಂ ವೈಯಾಸಿಕ್ಯಾಂ ಭೀಷ್ಮಪರ್ವಣಿ ಸರ್ವೋಪನಿಷದರ್ಥಪ್ರತಿಪಾದಕಸಕಲಶಾಸ್ತ್ರನಿರ್ಣಯಯೋಗೋ ನಾಮ (ಪುಮರ್ಥಹೇತುಜ್ಞಾನಸಾಧನಸ್ಯ ಗುಣಕಾರ್ಯಸ್ಯ ಸನ್ನ್ಯಾಸಸ್ಯ ಯೋಗಸ್ಯ ಚ ನಿರೂಪಣಂ ನಾಮ) ಅಷ್ಟಾದಶೋಽಧ್ಯಾಯಃ ॥ ೧೮ ॥

ಅ ॥ ಹೀಗೆ ಶ್ರೀಮದ್ಭಗವದ್ಗೀತೋಪನಿಷತ್ತುಗಳಲ್ಲಿ ಬ್ರಹ್ಮವಿದ್ಯೆಯಲ್ಲಿ ಯೋಗಶಾಸ್ತ್ರದಲ್ಲಿ ಶ್ರೀಕೃಷ್ಣಾರ್ಜುನರ ಸಂವಾದದಲ್ಲಿ ಸರ್ವೋಪನಿಷದರ್ಥಪ್ರತಿಪಾದಕ ಸಕಲಶಾಸ್ತ್ರನಿರ್ಣಯಕಯೋಗವೆಂಬ ಹದಿನೆಂಟನೇ ಅಧ್ಯಾಯವು ಮುಗಿಯಿತು. ॥ ೧೮ ॥

ಟೀ—ಸರ್ವಧರ್ಮಾನ್ ಪರಿತ್ಯಜ್ಯ (ಶ್ಲೋ. ೬೬) ಎಂಬುವಲ್ಲಿ ವರ್ಣಾಶ್ರಮಗಳಿಗೆ ವಿಹಿತಗಳಾದ ಸಮಸ್ತಧರ್ಮಗಳ ಪರಿತ್ಯಾಗವು ವಿಹಿತವಾಗುತ್ತದೆ, ಎಂಬೀ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ –

ಭಾ ॥ (೧) ಧರ್ಮತ್ಯಾಗಃ ಫಲತ್ಯಾಗಃ ॥ (೨) ಕಥಮನ್ಯಥಾ ಯುದ್ಧವಿಧಿಃ । ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತ ಇತಿ ಚೋಕ್ತಂ ॥ ೬೭,೬೮ ॥

ಅ ॥ (೧) ಧರ್ಮತ್ಯಾಗಃ—ಎಂದರೆ ಫಲೇಚ್ಛಾತ್ಯಾಗವು, (೨) (ಅಪಾತತಃ ತೋರುವ ಧರ್ಮಪರಿತ್ಯಾಗರೂಪ ಅರ್ಥವೇ ಏಕೆ ಆಗಲಾರದೆಂದರೆ–) ಹೀಗೆ ಅರ್ಥವಲ್ಲವಾದರೆ ಈ ಗೀತಾಶಾಸ್ತ್ರದಲ್ಲಿ ಯುದ್ಧ ಮಾಡಬೇಕೆಂದು ಕ್ಷತ್ರಿಯಧರ್ಮಕ್ಕೆ ವಿಧಾನವು ಹೇಗೆ ಕೂಡುತ್ತದೆ? ಯಾವನು ಕರ್ಮಫಲವನ್ನು ಬಿಟ್ಟವನೋ ಅತನು ತ್ಯಾಗೀ ಎನಿಸುತ್ತಾನೆ. ಎಂದು ಧರ್ಮತ್ಯಾಗವೆಂದರೆ ಧರ್ಮಫಲತ್ಯಾಗವೇ ಎಂಬೀ ಅರ್ಥದಲ್ಲಿ ಪ್ರಮಾಣವು ಉಕ್ತವಾಗಿದೆ. ॥ ೬೬-೬೮ ॥

ಟೀ—ಗೀತೆಯ ವ್ಯಾಖ್ಯಾನಾದಿಗಳನ್ನು ಮಾಡಿದ್ದಕ್ಕೆ ಫಲವನ್ನು ಹೇಳಿ ಸ್ತುತಿಸುತ್ತಾರೆ. ಯ ಇದಂ (ಶ್ಲೋ. ೬೮.) ಎಂಬುವುದರಿಂದ ಅದನ್ನು ವ್ಯಾಖ್ಯಾನಾದಿಗಳನ್ನು ಮಾಡಿದವರಿಗೆ ಹೇಳಿದ ಮೋಕ್ಷವು ಏತತ್ಪ್ರಕಾರವೋ ಎಂದರೆ ಗೀತಾ ವಾಕ್ಯಗಳಿಂದಲೇ ಮುಕ್ತರಾದ ವ್ಯಾಖ್ಯಾತ್ರಾದಿಗಳಲ್ಲಿ ತಾರತಮ್ಯವನ್ನು ಹೇಳುತ್ತಾರೆ—

ತಾ ॥ (೧) ಸೋಽಪಿ ಮುಕ್ತಃ । ನಚ ತಸ್ಮಾನ್ಮನುಷ್ಯೇಷ್ವಿತ್ಯುಕ್ತೇಶ್ಚ ಮುಕ್ತಾನಾಂ ಮಹತ್ತಾರತಮ್ಯಂ ಜ್ಞಾಯತೇ । ಮನುಷ್ಯೇಷ್ವಿತಿ ವಿಶೇಷಣಾತ್ತತ್ರಾಪಿ ದೇವಾನಾಮಾಧಿಕ್ಯಂ ಚ ॥ (೨) ಮುಕ್ತಿರ್ಜ್ಞಾನತ್ಯಾಗೋಽಪಿ ವಿಷ್ಣುಂ ವ್ಯಾಖ್ಯಾಸ್ಯಂ ಶ್ರುತ್ವಾ ತತೋಽಧಿಕಾ । ಮುಕ್ತೌ ಸುಖಂ ತತ್ಪ್ರತತಸ್ತತೋಽಪ್ಯಧಿಕಮಿಷ್ಯತೇ । ವ್ಯಾಖ್ಯಾತುಸ್ತು ಸಮಂ ಮುಕ್ತೌ ಸುಖಂ ನಾನ್ಯಸ್ಯ ಕಸ್ಯಚಿತ್ । ತತೋಽಧಿಕಂ ತು ದೇವಾನಾಂ ಮುಖ್ಯವ್ಯಾಖ್ಯಾತೃತೋ ಯತ ಇತಿ (ಚ) ॥ (೩) ಯಥೇಚ್ಛಸಿ ತಥಾ ಕುರ್ವಿತ್ಯಾಕ್ಷೇಪಪರಿಹಾರಾಯ ಕರಿಷ್ಯೇ ವಚನಂ ತವೇತ್ಯನುಸರತಿ ಭಗವಂತಂ ॥ ೬೮-೭೮ ॥

ಅ ॥ (೧) ಸೋಽಪಿ ಮುಕ್ತಃ, ನಚ ತಸ್ಮಾನ್ಮನುಷ್ಯೇಷು (೬೯) ಎಂದು ಹೇಳಿದ್ದರಿಂದ ಮುಕ್ತರಾದ ವ್ಯಾಖ್ಯಾತೃಗಳಿಗೆ ಮಹಾತಾರತಮ್ಯವಿದೆ ಎಂದು ತಿಳಿಯುತ್ತದೆ. ಮನುಷ್ಯೇಷು (೬೯) ಎಂದು ವಿಶೇಷಣವಿಟ್ಟು ಪ್ರಯುಕ್ತ ಮುಕ್ತರಲ್ಲಿಯೂ ದೇವತೆಗಳಿಗೆ ಆಧಿಕ್ಯವಿದೆ ಎಂದು ತಿಳಿಯುತ್ತದೆ. (೨) (ಇದನ್ನೇ ಪ್ರಮಾಣಾಂತರದಿಂದ ದೃಢೀಕರಿಸುತ್ತಾರೆ) ಶಾಸ್ತ್ರಶ್ರವಣಮಾಡಿ ವಿಷ್ಣು ಸರ್ವೋತ್ತಮನೆಂದು ತಿಳಿದೇ ಮುಕ್ತಿಯಾಗುವುದು. ಅದರಿಂದ ಮುಕ್ತಿಯಲ್ಲಿ ಅಧಿಕ ಸುಖಾತಿಶಯವುಂಟಾಗುವುದು. ಅದನ್ನು ಪಠನಮಾಡುವವನಿಗೆ ಅದಕ್ಕಿಂತಲೂ ಹೆಚ್ಚು ಸುಖವುಂಟಾಗುತ್ತದೆ ಪಾಠಪ್ರವಚನಮಾಡುವವರಿಗೆ ಆಗುವ ಸುಖಕ್ಕೆ ಸಮಾನವಾದ ಸುಖವು ಇತರ ಯಾರಿಗೂ ಉಂಟಾಗುವುದೇ ಇಲ್ಲ. ಅವರಿಗಿಂತಲೂ ಅಧಿಕ ಸುಖವು ದೇವತೆಗಳಿಗೆ ಆಗುವುದು. ಹೇಗೆಂದರೆ ಅವರೇ ಮುಖ್ಯವಾಗಿ ಪಾಠಪ್ರವಚನಮಾಡುವವರು (೩) (ಶ್ರೀಕೃಷ್ಣನು ಹೇಳಿದುದನ್ನು ಅರ್ಜುನನು ಈಗಲೂ ಅಂಗೀಕರಿಸಲಿಲ್ಲ, ಆದಕಾರಣ ಶ್ರೀಕೃಷ್ಣನು ಬೋಧಿಸುವುದನ್ನು ಸಮಾಪಿಸುವುದು ಹೇಗೆ ಎಂದರೆ ಯಥೇಚ್ಛಸಿ ತಥಾ ಕುರುಎಂದು ಯಥೇಷ್ಟಾಚರಣವು ಹೇಳಲ್ಪಡುತ್ತದೆ, ಎಂಬುವ ಅನ್ಯಥಾಪ್ರತೀತಿಯನ್ನು ಹೋಗಲಾಡಿಸುತ್ತಾರೆ—) ಯಥೇಚ್ಛಸಿ ತಥಾ ಕುರು (೬೩) ಎಂಬ ಆಕ್ಷೇಪವನ್ನು ಪರಿಹರಿಸುವುದಕ್ಕಾಗಿ, ಕರಿಷ್ಯೇ ವಚನಂ ತವ (೭೩) ಎಂದು ಶ್ರೀಕೃಷ್ಣನನ್ನು ಅರ್ಜುನನು ಅನುಸರಿಸುತ್ತಾನೆ. (ಅಂದರೆ ವಿನಯದಿಂದ ಪ್ರಾರ್ಥಿಸಿಕೊಳ್ಳುತ್ತಾನೆ.) ॥ ೬೮-೭೮ ॥

ಟೀ—ಈಗ ಶ್ರೀಮದಾಚಾರ್ಯರು ಭಾಷ್ಯವನ್ನು ಸಮಾಪಿಸಿ ಭಾಷ್ಯನಿರ್ಮಾಣಕ್ಕೆ ಭಗವತ್ಪ್ರೀತಿರೂಪ ಫಲವೇ ತನಗೆ ಸದಾ ಆಗಬೇಕೆಂದು ಪ್ರಾರ್ಥಿಸುತ್ತಾರೆ—

**ಭಾ ॥ ಪೂರ್ಣಾದೋಷಮಹಾವಿಷ್ಣೋರ್ಗೀತಾಮಾಶ್ರಿತ್ಯ ಲೇಶತಃ । ನಿರೂಪಣಂ ಕೃತಂ ತೇನ ಪ್ರೀಯತಾಂ ಮೇ ಸದಾ ವಿಭುಃ ॥**

ಅ ॥ ಸರ್ವಗುಣಪರಿಪೂರ್ಣನೂ ದೋಷಲೇಶರಹಿತನೂ ಸರ್ವೋತ್ತಮನೂ ಆದ ಶ್ರೀವಿಷ್ಣುವನ್ನು ಪ್ರತಿಪಾದಿಸುವ, ಮತ್ತು ಶ್ರೀವಿಷ್ಣುವಿನ ಅವತಾರಭೂತನಾದ ಶ್ರೀಕೃಷ್ಣನಿಂದ ಅರ್ಜುನನಿಗೆ ಉಪದಿಷ್ಟವಾದ ಶ್ರೀಮದ್ಭಗವದ್ಗೀತೆಯೆಂಬುವ ಗ್ರಂಥವನ್ನು ಆಶ್ರಯಿಸಿ ಈ ಗೀತಾರ್ಥವು ಲೇಶತಃ ಹೇಳಲ್ಪಟ್ಟಿತು. ಈ ಗೀತಾರ್ಥವನ್ನು ಹೇಳಿದುದರಿಂದ ಸರ್ವಸಮರ್ಥನೂ ಸರ್ವನಿಯಾಮಕನೂ ಆದ ಶ್ರೀ ಪರಮಾತ್ಮನು ಸರ್ವದಾ ಪ್ರೀತನಾಗಲಿ. ॥

**ಭಾ ॥ ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾಭಾಷ್ಯೇ ಅಷ್ಟಾದಶೋಽಧ್ಯಾಯಃ ॥ ೧೮ ॥**

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾಭಾಷ್ಯದಲ್ಲಿ ಹದಿನೆಂಟನೇ ಅಧ್ಯಾಯವು ಮುಗಿಯಿತು. ॥ ೧೮ ॥

ಕರತಲಕಲಿತಾಮಲಕಮಿವ ಪ್ರಭುಣಾ ಯೇನೇದಮವಗತಂ ವಿಶ್ವಂ ।
ಸ ಜಯತಿ ಜನಕಸುತಾಯಾಃ ಕಾಂತಃ ಶ್ರೀರಘುನಂದನೋ ದೇವಃ ॥ ೧ ॥
ನಮಾಮಿ ವ್ಯಾಸದಾಸಸ್ಯ ಪೂರ್ಣಬುದ್ಧೇಃ ಪದಾಂಬುಜೇ ।
ನತಾಮರಶಿರೋರತ್ನರಾಜಿನೀರಾಜಿತೇ ಸದಾ ॥ ೨ ॥

ಟೀ—ಶ್ರೀಮದಾಚಾರ್ಯರು ಗ್ರಂಥವನ್ನು ಸಮಾಪಿಸಿ ತಾನು ಇಷ್ಟರ ವರೆಗೆ ಹೇಳಿದ ಪ್ರಕಾರ ಶ್ರೀ ಪರಮಾತ್ಮನು ಸರ್ವಗುಣಪರಿಪೂರ್ಣನು ದೋಷಲೇಶರಹಿತನು ಸರ್ವೋತ್ತಮನು ಇದು ಮೊದಲಾದ ಧರ್ಮಗಳಿಂದ ವಿಶಿಷ್ಟನೇ ಆದ ಶ್ರೀಕೃಷ್ಣನನ್ನು ನಮಸ್ಕರಿಸುತ್ತಾರೆ—

**ತಾ.॥ (೧) ನಮಸ್ತೇ ವಾಸುದೇವಾಯ ಪ್ರೇಯಸಾಂ ಮೇ ಪ್ರಿಯೋತ್ತಮ । ಸಮಸ್ತಗುಣ ಸಂಪೂರ್ಣನಿರ್ದೋಷಾನಂದದಾಯಿನೇ ॥ (೨) ಯಸ್ಯ ತ್ರೀಣ್ಯುದಿತಾನಿ ವೇದವಚನೇ ರೂಪಾಣಿ ದಿವ್ಯಾನ್ಯಲಂ ಬಟ್ತದ್ದರ್ಶತಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ । ವಾಯೋ ರಾಮವಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುರ್ಮಧ್ವೋ ಯತ್ತು ತೃತೀಯಮೇತದಮುನಾ ಗ್ರಂಥಃ ಕೃತಃ (ಪಹಿ ಕೃತೋ ಗ್ರಂಥೋಽಮುನಾ) ಕೇಶವೇ ॥ (೩) ನಿಶ್ಶೇಷದೋಷರಹಿತಕಲ್ಯಾಣಾಶೇಷ(ಖಿಲ)ಸದ್ಗುಣ । ಭೂತಿಸ್ತ್ವಯಂಭುಶರ್ವಾದಿವಂದ್ಯಂ ತ್ವಾಂ ನೌಮಿ ಮೇ ಪ್ರಿಯಂ ॥**

ಅ ॥ (೧) ನನಗೆ ಅತ್ಯಂತ ಪ್ರಿಯರ ಮಧ್ಯದಲ್ಲಿ ಪ್ರಿಯರಾದವರು ಯಾರೋ, ಅವರಲ್ಲಿ ಉತ್ತಮನಾದ ಶ್ರೀ ಪರಮಾತ್ಮನೇ, ಸರ್ವಗುಣಪರಿಪೂರ್ಣನೂ, ದೋಷಲೇಶರಹಿತನೂ, ಆನಂದವನ್ನು ಕೊಡುವವನೂ ಆದ, ವಾಸುದೇವನೆನಿಸಿದ ನಿನಗೋಸ್ಕರ ನಮಸ್ಕಾರವು (೨) (ಹೇಗೆ ಶ್ರೀಪರಮಾತ್ಮನ ಸ್ವರೂಪಜ್ಞಾನವು ಮೋಕ್ಷಸಾಧನವೋ ಹಾಗೆಯೇ ಅಧಿಕಾರಿಗಳಲ್ಲಿ ಉತ್ತಮರಾದ ವಾಯುದೇವರ ಅವತಾರಭೂತನಾದ ತನ್ನ ಸ್ವರೂಪಜ್ಞಾನವೂ ಮೋಕ್ಷಾದಿ ಪುರುಷಾರ್ಥಕ್ಕೆ ಅವಶ್ಯಕವೆಂಬುವ ಅಭಿಪ್ರಾಯದಿಂದ ತನ್ನ ಸ್ವರೂಪವನ್ನು ಹೇಳುತ್ತಾ ತಾವು ಮಾಡಿದ ಗ್ರಂಥನಿರ್ಮಾಣರೂಪ ಸೇವೆಯನ್ನು ಶ್ರೀ ಹರಿಯಲ್ಲಿ ಸಮರ್ಪಿಸುತ್ತಾರೆ—) ಬಳಿತ್ಥಾತದ್ವಪುಷೇ ಇತ್ಯಾದಿ ವೇದವಚನಗಳಲ್ಲಿ ಯಾವ ವಾಯುದೇವರ ಕ್ರೀಡಾದಿಗುಣವಿಶಿಷ್ಟಗಳಾದ ಮೂರು ರೂಪಗಳು ಹೇಳಲ್ಪಟ್ಟಿವೆಯೋ, ಆ ವಾಯುದೇವರ ಮೂಲರೂಪವು, ಅತ್ಯಂತವಾಗಿ ಬಲಾತ್ಮಕವಾದುದು, ಜ್ಞಾನರೂಪವಾದುದು, ಜಗತ್ತನ್ನು ಪೋಷಿಸುವುದು, ಜಗತ್ತಿಗೆ ಜ್ಞಾನದಾಯಕವು, ಸರ್ವಪೂಜ್ಯವು, ಮತ್ತು ಹನುಮದ್ಭೀಮ ಮಧ್ವಾಖ್ಯ ಅವತಾರಗಳನ್ನು ಮಾಡುವುದಕ್ಕಾಗಿ ಶ್ರೀ ಪರಮಾತ್ಮನಿಂದ ಪ್ರೇರಿಸಲ್ಪಟ್ಟಿದ್ದು, ಪ್ರೇರಣಾನುಸಾರ ಅವತಾರ ಮಾಡಿರುತ್ತದೆ. ಅದರಲ್ಲಿ ಒಂದನೇ ಹನುಮದಾಖ್ಯರೂಪವು ಶ್ರೀ ರಾಮಚಂದ್ರದೇವರ ಮೂಲರಾಮಾಯಣರೂಪ ವಚನಗಳನ್ನು ಶಿಷ್ಯರಿಗೆ ಉಪದೇಶಿಸಿದ್ದು, ಅಥವಾ ಶ್ರೀ ರಾಮದೇವರ ಆಜ್ಞೆಯನ್ನು ಸೀತಾದೇವಿಯ ಸಮೀಪಕ್ಕೆ ಒಯಿದದ್ದು. ಅಥವಾ ಶ್ರೀ ರಾಮಚಂದ್ರದೇವರ ಸಮೀಪಕ್ಕೆ ಸೀತಾದೇವಿಯ ಪ್ರಾರ್ಥನೆಯನ್ನು ಒಯಿದದ್ದು. ಎರಡನೇ ಭೀಮ ರೂಪವು ಕುರುಗಳ ಸೈನ್ಯವನ್ನು ನಾಶಗೊಳಿಸಿರುವುದು. ಮೂರನೇ ಅವತಾರವು ಆನಂದರೂಪಿಯಾದ ಶ್ರೀ ಪರಮಾತ್ಮನನ್ನೇ ಪ್ರತಿಪಾದಿಸುವ ಶಾಸ್ತ್ರವನ್ನು ನಿರ್ಮಾಣಮಾಡಿರುವುದರಿಂದ ಮಧ್ವ ಎಂದು ಹೆಸರುಳ್ಳದ್ದು, ಈ ಮಧ್ವಾಚಾರ್ಯರಿಂದ ಶ್ರೀ ಪರಮಾತ್ಮನ ಪ್ರೀತಿಗಾಗಿ ಈ ಗ್ರಂಥವು ಮಾಡಲ್ಪಟ್ಟಿತು. (೩) (ಪೂರ್ವದಲ್ಲಿ ಹೇಳಿದ ಪ್ರಕಾರವೇ ಅನಂತಾನಂತ ಗುಣಪರಿಪೂರ್ಣನೂ ದೋಷವಿದೂರನೂ ಆದ ಶ್ರೀ ಪರಮಾತ್ಮನನ್ನೇ ಅದರ ವಿಶೇಷದಿಂದ ತಿರುಗಿ ಸ್ತುತಿಸುತ್ತಾರೆ—) ದೋಷಲೇಶರಹಿತನೂ ಮಂಗಲಕರಗಳಾದ ಪರಿಪೂರ್ಣಗುಣಗಳು ಸದ್ಗುಣಗಳುಳ್ಳವನೂ ಆದ ಶ್ರೀ ಪರಮಾತ್ಮನೇ, ಮಹಾಲಕ್ಷ್ಮೀದೇವಿಯೂ, ಬ್ರಹ್ಮನೂ, ರುದ್ರನೂ ಇವರೇ ಮೊದಲಾದವರಿಂದ ನಮಸ್ಕರಿಸಲ್ಪಡತಕ್ಕವನೂ, ನನಗೆ ಅತ್ಯಂತ ಪ್ರಿಯನೂ ಆದ ನಿನ್ನನ್ನು ಸದಾ ನಮಸ್ಕರಿಸುತ್ತೇನೆ.

**ಇತಿ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯವಿರಚಿತೇ ಶ್ರೀಮದ್ಭಗವದ್ಗೀತಾತಾತ್ಪರ್ಯನಿರ್ಣಯೇ ಅಷ್ಟಾದಶೋಽಧ್ಯಾಯಃ ॥ ೧೮ ॥**

ಅ ॥ ಹೀಗೆ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರಿಂದ ಮಾಡಲ್ಪಟ್ಟ ಭಗವದ್ಗೀತಾ ತಾತ್ಪರ್ಯನಿರ್ಣಯದಲ್ಲಿ ಹದಿನೆಂಟನೇ ಅಧ್ಯಾಯವು ಮುಗಿಯಿತು. ॥ ೧೮ ॥

ಶ್ರೀಮದಾನಂದತೀರ್ಥಾರ್ಯಹೃದಯಾಮಲಮಂದಿರಃ ।
ಇಂದಿರಾರಮಣಃ ಪ್ರೀತಿಂ ಯಾತು ದೀನದಯಾಪರಃ ॥ ೧ ॥

ಅಶೇಷಗುಣಪೂರ್ಣಾಯ ದೋಷದೂರಾಯ ವಿಷ್ಣವೇ ।
ನಮಃ ಶ್ರೀಪ್ರಾಣನಾಥಾಯ ಭಕ್ತಾಭೀಷ್ಟಪ್ರದಾಯಿನೇ ॥ ೨ ॥

ಶ್ರೀಕೃಷ್ಣಸ್ಯ ತಥಾ ಮಧ್ವಗುರೋಶ್ಚಾನುಗ್ರಹಾದ್ವರಾತ್ ।
ಗೀತಾಯಾ ಮಾಧ್ವಭಾಷ್ಯಸ್ಯ ವಿವೃತ್ಯರ್ಥಾನುಸಾರತಃ ॥ ೩ ॥

ಶ್ರೀಭಾವರತ್ನಕೋಶಸ್ಯ ತಾತ್ಪರ್ಯಮನುಸೃತ್ಯ ಚ ।
ಪ್ರಮೇಯದೀಪಿಕಾಖ್ಯಾತಟೀಕಾಂ ತಟ್ಟಿಪ್ಪಣೀಮಪಿ ॥ ೪ ॥

ಭಾವಪ್ರಕಾಶಿಕಾಖ್ಯಾಂ ತಾಮನುಸೃತ್ಯ ಯಥಾಮತಿ ।
ಗೀತಾತಾತ್ಪರ್ಯನಿರ್ಣೀತಿಭಾವಂ ಚ ನ್ಯಾಯದೀಪಿಕಾಂ ॥ ೫ ॥

ತಟ್ಟೀಕಾಂ ಟಿಪ್ಪಣೀಂ ನ್ಯಾಯಸುದೀಪಕಿರಣಾವಲೀಂ ।
ಅನುಸೃತ್ಯ ಸುಕರ್ಣಾಟಭಾಷಯಾಽನ್ವಯರೀತಿತಃ ॥ ೬ ॥

ವಿಶೇಷಾಂಶೇನ ಸಹಿತಾಂ ಟೀಕಾಂ ರಚಿತವಾನಹಂ ।
ತಂತ್ರಿನಾರಾಯಣೋ ವಿದ್ವಾನ್ ಶಿರೋಮಣಿರಿಹಾನಯಾ ॥ ೭ ॥

ಹರೇರ್ಗುರೋಶ್ಚ ತುಷ್ಟಿಃ ಸ್ಯಾತ್ಸತಾಂ ಚೋಪಕೃತಿರ್ಭವೇತ್ ।
ವಚೋಭಿರ್ನಿರ್ಷ್ಮವೀಯೈರ್ಮೇ ಪ್ರೀಯಂತಾಂ ಸತತಂ ಬುಧಾಃ ॥ ೮ ॥

ಪ್ರಕಾಶಕಂ ಮತ್ಕೃತೀನಾಂ ಶ್ರೀಮಾಧ್ವಮುನಿವೃಂದಕಂ ।
ಚಿರಂ ಜಯತು ಸತ್ಕೀರ್ತಿಸ್ತಂಭಸ್ಥಾಪಕಮಂಜಸಾ ॥ ೯ ॥

ಕರೋತು ಮಮ ಕಲ್ಯಾಣಂ ಹರಿರ್ಹಯಮುಖಾಭಿಧಃ ।
ಗುರುಶ್ಚ ಮಧ್ವನಾಮಾ ಮೇ ವರದೋಽಸ್ತು ನಿರಂತರಂ ॥ ೧೦ ॥

॥ ಶ್ರೀಕೃಷ್ಣಾರ್ಪಣಮಸ್ತು ॥

# ಶ್ರೀ ಮಧ್ವಮುನಿ ಸೇವಾ ಸಂಘದ ಪೋಷಕರು

1 ಶ್ರೀ ವಿಷ್ಣುಪದಂಗತ ಅದಮಾರುಮಠದ ವಿಬುಧಪ್ರಿಯತೀರ್ಥ ಶ್ರೀಪಾದಂಗಳವರು.
2 ಶ್ರೀ ಪುತ್ತಿಗಾಮಠದ ಸುಧೀಂದ್ರತೀರ್ಥ ಶ್ರೀಪಾದಂಗಳವರು.
3 ಶ್ರೀ ವಿಷ್ಣುಪದಂಗತ ಕೃಷ್ಣಾಪುರಮಠದ ವಿದ್ಯಾಪೂರ್ಣತೀರ್ಥ ಶ್ರೀಪಾದಂಗಳವರು.
4 ಶ್ರೀ ವಿಷ್ಣುಪದಂಗತ ಸೋದಾಮಠದ ವಿಶ್ವೇಂದ್ರತೀರ್ಥ ಶ್ರೀಪಾದಂಗಳವರು.
5 ಶ್ರೀ ಸೋದಾಮಠದ ವಿಶ್ವೋತ್ತಮತೀರ್ಥ ಶ್ರೀಪಾದಂಗಳವರು.
6 ಶ್ರೀ ಕಾಣೂರುಮಠದ ವಿದ್ಯಾಸಮುದ್ರತೀರ್ಥ ಶ್ರೀಪಾದಂಗಳವರು.
7 ಶ್ರೀ ವಿಷ್ಣುಪದಂಗತ ಪಲಿಮಾರುಮಠದ ರಘುಮಾನ್ಯತೀರ್ಥ ಶ್ರೀಪಾದಂಗಳವರು.
8 ಶ್ರೀ ಶೀರೂರುಮಠದ ಲಕ್ಷ್ಮೀಂದ್ರತೀರ್ಥ ಶ್ರೀಪಾದಂಗಳವರು.
9 ಶ್ರೀ ವಿಷ್ಣುಪದಂಗತ ಪೇಜಾವರಮಠದ ವಿಶ್ವಮಾನ್ಯತೀರ್ಥ ಶ್ರೀಪಾದಂಗಳವರು.
10 ಶ್ರೀ ವಿಷ್ಣುಪದಂಗತ ಉತ್ತರಾದಿಮಠದ ಸತ್ಯಧ್ಯಾನತೀರ್ಥ ಶ್ರೀಪಾದಂಗಳವರು.
11 ಶ್ರೀ ಸೋಸಲೆ ವ್ಯಾಸರಾಯಮಠದ ವಿದ್ಯಾಪ್ರಸನ್ನ ತೀರ್ಥ ಶ್ರೀಪಾದಂಗಳವರು.
12 ಶ್ರೀ ಸಂಪುಟನರಸಿಂಹಸ್ವಾಮಿಮಠದ ವಿದ್ಯಾಸಿಂಧುತೀರ್ಥ ಶ್ರೀಪಾದಂಗಳವರು.
13 ಶ್ರೀ ವಿಷ್ಣುಪದಂಗತ ಕಾಶೀಮಠದ ಸುಕೃತೀಂದ್ರತೀರ್ಥ ಶ್ರೀಪಾದಂಗಳವರು.
14 ಶ್ರೀ ಕಾಶೀಮಠದ ಸುಧೀಂದ್ರತೀರ್ಥ ಶ್ರೀಪಾದಂಗಳವರು.
15 ಶ್ರೀ ಗೋಕರ್ಣ ಪರ್ತಗಾಳಿಮಠದ ದ್ವಾರಕಾನಾಥತೀರ್ಥ ಶ್ರೀಪಾದಂಗಳವರು.

16 ಕೀರ್ತಿಶೇಷ ರಾಜಸಭಾಭೂಷಣ ಕರ್ಪೂರ ಶ್ರೀನಿವಾಸರಾಯರು ಬೆಂಗಳೂರು.
17 ಕೀರ್ತಿಶೇಷ ಡಾಕ್ಟರ್ ಉಡುಪಿ ರಾಮರಾಯರು. ಮದ್ರಾಸ್.
18 ಕೀರ್ತಿಶೇಷ ಮಣೇಲ್ ಕೃಷ್ಣನಾಯಕ್ ಮತ್ತು ಸನ್ಸ್. ಮಂಗಳೂರು.
19 ಕೀರ್ತಿಶೇಷ ಶ್ರೀ ತಾಲೂರು ಶ್ಯಾಮರಾಯರು. ಬಳ್ಳಾರಿ.
20 ಶ್ರೀಯುತ ಡಾಕ್ಟರ್ ಇಡ್ಯ ವೆಂಕಟರಾಯರು. ಉಳ್ಳಾಳ.
21 ಕೀರ್ತಿಶೇಷ ಶ್ರೀ ಹರಿವಾಣಂ ಹನುಮಂತಾಚಾರ್ಯರು. ಬಳ್ಳಾರಿ.
22 ಕೀರ್ತಿಶೇಷ ಶ್ರೀ ಕಲ್ಮಂಜೆ ವ್ಯಾಸಾಚಾರ್ಯರು. ಉಡುಪಿ.
23 ಶ್ರೀಯುತ ಡಾಕ್ಟರ್ ಉಡುಪಿ ಲಕ್ಷ್ಮೀನಾರಾಯಣರಾಯರು. ಮದ್ರಾಸ್.
24 ಶ್ರೀಯುತ ಡಾಕ್ಟರ್ ಜಮ್ಮಿ ವಿ. ಬದರಿನಾರಾಯಣ. ಮದ್ರಾಸ್.
25 ಶ್ರೀಯುತ ಕೆ. ಎಸ್. ರಂಗರಾಯರು. ಕಲ್ಕತ್ತಾ.
26 ಶ್ರೀಯುತ ಉಡುಪಿ ರಾಘವೇಂದ್ರಾಚಾರ್ಯರು. ದಿಲ್ಲಿ.
27 ಶ್ರೀಯುತ ಎ. ವಿ. ಕೃಷ್ಣಮೂರ್ತಿರಾಯರು. ಬೆಂಗಳೂರು.
28 ಶ್ರೀಯುತ ಗುಪ್ತ ಅಪ್ತರು.
29 ಶ್ರೀಯುತ ಕೆ. ಸೀತಾರಾಮರಾಯರು. ಮದ್ರಾಸ್.
30 ಶ್ರೀಯುತ ಡಿ. ಕೆ. ರಾಮರಾಯರು ನಿವೃತ್ತ ಮೈಸೂರುಹೈಕೋರ್ಟು ಜಡ್ಜರು, ಮೈಸೂ
31 ಶ್ರೀಯುತ ರಾಜಸೇವಾಸಕ್ತ ವೈ. ಕೆ. ರಾಮಚಂದ್ರರಾವ್, ಮೈಸೂರು.
32 ಶ್ರೀಯುತ ಕಲ್ಸಂಕ ವೆಂಕಟ್ರಾಯ ಪೈ ಮತ್ತು ಸನ್ಸ್, ರಥಬೀದಿ, ಉಡುಪಿ.